ವಿದ್ವಕುಲಾವತಂಸ ಶ್ರೀ ನಾರಾಯಣಾಚಾರ್ಯ ವಿರಚಿತ

# ಶ್ರೀರಾಘವೇಂದ್ರವಿಜಯ




ಅನುವಾದಕರು

ಶ್ರೀ ರಾಘವೇಂದ್ರಾನುಗ್ರಹ ಪ್ರಶಸ್ತಿ ಪುರಸ್ಕೃತರು

ಶ್ರೀ ರಾಘವೇಂದ್ರಗುರುವಂಶಭೂಷಣಂ

**ರಾಜಾ ಶ್ರೀ ಗುರುರಾಜಾಚಾರ್ಯರು**

ಶ್ರೀರಾಘವೇಂದ್ರಾನುಗ್ರಹ ಪ್ರಶಸ್ತಿ ಪುರಸ್ಕೃತರು

|| Sri Moolaramo Vijayathe || ज्ञानमेऽव समाश्रयेत् || Sri Gururajo Vijayathe ||

*To commemorate the*

***400th Pattabhisheka Mahotsavam***

***and 427th Vardhantyutsava***

*of* ***Sri Raghavendra Swamiji***

*and* ***Birth Centenary*** *of*

***Raja Sri Gururajacharya***

*the founder director of the institution*

*This book is dedicated by*

**H.H. Sri 108 Subudhendra Theerta Swamiji**

*of Sri Raghavendra Swamy Mutt*

*Jagadguru Sriman Madhvacharya*

*Moola Maha Samsthanam, Mantralaya*

*to the lotus feet of*

**Sri Raghavendra Swamiji**

ಶ್ರೀ ಸುಯಮೀರಾಘವೇಂದ್ರ
ಕೃಪಾಶ್ರಿತಂ



ಕಮಲೇಶ ಕುಸುಮ

ಸಾಹಿತ್ಯ ಸಾಮ್ರಾಜ್ಯ : 226

# ಶ್ರೀರಾಘವೇಂದ್ರವಿಜಯ

ಗ್ರಂಥಕರ್ತರು :
ವಿದ್ವತ್ಕುಲಲಲಾಮ
**ಶ್ರೀ ನಾರಾಯಣಾಚಾರ್ಯರು**

ಅನುವಾದಕರು :
"ಶ್ರೀರಾಘವೇಂದ್ರಗುರುವಂಶಭೂಷಣಂ, ವಿದ್ಯಾಧಿರಾಜ, ಸರಸ್ವತೀಕಂಠಾಭರಣಂ"
**ರಾಜಾ ಶ್ರೀ ಗುರುರಾಜಾಚಾರ್ಯ**

ಶ್ರೀರಾಘವೇಂದ್ರಾನುಗ್ರಹ ಪ್ರಶಸ್ತಿ ಪುರಸ್ಕೃತರು
**ವಿದ್ವಾನ್ ಎಸ್.ವಿ. ಭೀಮಭಟ್ಟರು**



ಪ್ರಕಾಶಕರು
**ರಾಜಾ ಜಿ. ಸುಧೀಂದ್ರಾಚಾರ್ಯ**
ಶ್ರೀ ಸುಯಮೀರಾಘವೇಂದ್ರ ಸಂಶೋಧನ ಕೇಂದ್ರ
ನಂಜನಗೂಡು–ಬೆಂಗಳೂರು

**2022**

ಗ್ರಂಥದ ಹೆಸರು : **ಶ್ರೀರಾಘವೇಂದ್ರವಿಜಯ**

ಗ್ರಂಥಕಾರರು : **ಶ್ರೀ ನಾರಾಯಣಾಚಾರ್ಯರು**

ಅನುವಾದಕರು : **ರಾಜಾ ಶ್ರೀ ಗುರುರಾಜಾಚಾರ್ಯ**
**ವಿದ್ವಾನ್ ಎಸ್.ವಿ. ಭೀಮಭಟ್ಟರು**

ಪ್ರಕಾಶಕರು : ಶ್ರೀಸುಯಮಿರಾಘವೇಂದ್ರ ಸಂಶೋಧನ ಕೇಂದ್ರ
'ಸಾಧನಾ', ನಂ. 213/ಡಿ, 2ನೇ 'ಬಿ' ಮುಖ್ಯರಸ್ತೆ
2ನೇ 'ಇ' ಅಡ್ಡರಸ್ತೆ, ಗಿರಿನಗರ ಮೊದಲನೇ ಹಂತ
ಬೆಂಗಳೂರು-560 085.
ಮೊ. : 99453 48633

1ನೇ ಮುದ್ರಣ : 2003
2ನೇ ಮುದ್ರಣ : 2022



ಬೆಲೆ : ರೂ. 50/-

**ಈ ಗ್ರಂಥವು ಜಗದ್ಗುರು ಶ್ರೀಮನ್ಮಧ್ವಾಚಾರ್ಯಮೂಲಮಹಾಸಂಸ್ಥಾನ ಶ್ರೀ ರಾಘವೇಂದ್ರಸ್ವಾಮಿಗಳವರ ಮಠದ ಸಂಪೂರ್ಣ ಸಹಕಾರ ಮತ್ತು ಪ್ರೋತ್ಸಾಹದೊಂದಿಗೆ ಪ್ರಕಾಶನಗೊಳಸಲಾಗಿದೆ.**

ಮುಖಪುಟ ವಿನ್ಯಾಸ : ಎನ್. ಗುರುರಾಜ, **9980751000**

ಮುದ್ರಣ : ಕೌಸ್ತುಭಾ ಕ್ರಿಯೇಟಿವ್ಸ್
ಬೆಂಗಳೂರು - 560 070

|| ಶ್ರೀಮನ್ಮೂಲರಾಮೋ ವಿಜಯತೇ ||  || ಶ್ರೀಗುರುರಾಜೋ ವಿಜಯತೇ||



रामचन्द्र



ಶ್ರೀಮತ್ಪರಮಹಂಸಪರಿವ್ರಾಜಕಾಚಾರ್ಯ ಪದವಾಕ್ಯಪ್ರಮಾಣಪಾರಾವಾರಪಾರಂಗತ
ಸರ್ವತಂತ್ರಸ್ವತಂತ್ರ ಶ್ರೀಮದ್ವೈಷ್ಣವಸಿದ್ಧಾಂತಪ್ರತಿಷ್ಠಾಪನಾಚಾರ್ಯ
ಶ್ರೀಮನ್ಮೂಲರಘುಪತಿವೇದವ್ಯಾಸದೇವರ ದಿವ್ಯಶ್ರೀಪಾದಪದ್ಮಾರಾಧಕ
ಜಗದ್ಗುರು ಶ್ರೀಮನ್ಮಧ್ವಾಚಾರ್ಯಮೂಲಮಹಾಸಂಸ್ಥಾನಾಧೀಶ್ವರರಾದ
ಶ್ರೀರಾಘವೇಂದ್ರಸ್ವಾಮಿಗಳವರ ಮಠದ ವೇದಾಂತಸಾಮ್ರಾಜ್ಯದಿಗ್ವಿಜಯವಿದ್ಯಾಸಿಂಹಾಸನಾಧೀಶ್ವರರಾದ
ಶ್ರೀಮತ್ಸುಶಮೀಂದ್ರತೀರ್ಥಶ್ರೀಪಾದಂಗಳವರ ಕರಕಮಲಸಂಜಾತರಾದ
ಶ್ರೀಮತ್ಸುಯತೀಂದ್ರತೀರ್ಥಶ್ರೀಪಾದಂಗಳವರ ವರಕುಮಾರಕರಾದ

# 1008 ಶ್ರೀ ಶ್ರೀಮತ್ಸುಬುಧೇಂದ್ರತೀರ್ಥಶ್ರೀಪಾದಂಗಳವರ

# ಅನುಗ್ರಹಸಂದೇಶ

**ಶ್ರೀ ಪ್ಲವನಾಮಸಂವತ್ಸರ ಮಾಘಮಾಸ ಕೃಷ್ಣಪಕ್ಷ ತೃತೀಯ ಶನಿವಾರ ದಿನಾಂಕ 19.02.2022**

ಶ್ರೀಗುರುಸಾರ್ವಭೌಮರ ನೈಜಚರಿತ್ರ ತಾತ್ವಿಕವಾದ ಮಹಿಮೆಗಳನ್ನು ತಿಳಿಯಲು ಅತ್ಯಂತ ಪ್ರಾಮಾಣಿಕವಾದ ಗ್ರಂಥವೆಂದರೆ ಶ್ರೀರಾಘವೇಂದ್ರವಿಜಯವೆಂಬ ಮಹಾಕಾವ್ಯವು. ಅದನ್ನು ಶ್ರೀ ಗುರುರಾಜರ ಪೂರ್ವಾಶ್ರಮದ ಸೋದರಳಿಯಂದಿರಾದ ನಾರಾಯಣಾಚಾರ್ಯರೆಂಬ ಕವಿಶ್ರೇಷ್ಠರು ಬರೆದಿರುತ್ತಾರೆ.ಅದನ್ನು ಬರೆದು ಶ್ರೀರಾಘವೇಂದ್ರತೀರ್ಥರಿಗೆ ತೋರಿಸಿ ಅವರ ಅಂಗೀಕಾರವನ್ನು ಪಡೆದ ಶ್ರೇಷ್ಠ ಕಾವ್ಯವಾಗಿದೆ. ಹತ್ತು ಸರ್ಗಾತ್ಮಕವಾದ ಈ ಕಾವ್ಯದಲ್ಲಿ ಶ್ರೀರಾಯರ ಪೀಠಪರಂಪರೆ, ಸಂಸ್ಥಾನಪ್ರತಿಮೆಗಳು,ಅವರ ಪೂರ್ವಾಶ್ರಮದ ವಂಶ, ಕಾವ್ಯನಾಯಕರ ಅವತಾರಪ್ರಸಂಗ, ವಿದ್ಯಾಭ್ಯಾಸ,ವಿವಾಹ,ವಿಶೇಷಾಧ್ಯಯನ, ವಾದಿನಿಗ್ರಹ, ಪೀಠಾಧಿಪತ್ಯಪ್ರಾಪ್ತಿ ,ಸಂಚಾರ,ಗ್ರಂಥರಚನೆ,ಪಾಠ ಪ್ರವಚನ,ಪೂಜಾ ವೈಭವ ಹೀಗೆ ಹತ್ತು ಹಲವು ವಿಚಾರಗಳಿಗೆ ಬೆಳಕನ್ನು ಚೆಲ್ಲುವ ವಿಷಯಗಳನ್ನು ಸ್ವಾರಸ್ಯಕರವಾಗಿ ವರ್ಣಿಸಿದ್ದಾರೆ.ಈ ಕಾವ್ಯಕ್ಕೆ ಮೂರು ಸಂಸ್ಕೃತ ವ್ಯಾಖ್ಯಾನಗಳು ಅನೇಕ ಕನ್ನಡ,ತೆಲುಗು,ಆಂಗ್ಲ ಅನುವಾದಗಳು ಇವೆ. ಪ್ರಕೃತ ಆ ರಾಘವೇಂದ್ರವಿಜಯದ ಭಾವಾನುವಾದ ಸಹಿತವಾಗಿ ಶ್ರೀಸುಯಮಿರಾಘವೇಂದ್ರಸಂಶೋಧನಾಕೇಂದ್ರದ ವತಿಯಿಂದ ಮುದ್ರಿಸಿ ಪ್ರಕಾಶಿಸುತ್ತಿರುವುದು ನಮಗೆ ಅತ್ಯಂತ ಸಂತಸವನ್ನು ಉಂಟುಮಾಡಿದೆ.ಮೊದಲನೇ ಆರು ಸರ್ಗಗಳ ಅನುವಾದವನ್ನು ಶ್ರೀರಾಯರ ಪೂರ್ವಾಶ್ರಮದ ವಂಶೀಕರು ಶ್ರೀಸುಯಮೀಂದ್ರತೀರ್ಥರ ಪೂರ್ವಾಶ್ರಮದ ಸುಪುತ್ರರು ಉಭಯಭಾಷಾಕವಿಗಳು ಸರಸ್ವತೀಕಂಠಾಭರಣ ಇತ್ಯಾದಿ ಅನೇಕ ಬಿರುದಾಂಕಿತರಾದ ಶ್ರೀ ರಾಜಾ ಎಸ್ ಗುರುರಾಜಾಚಾರ್ಯರು ಮಾಡಿದ್ದರೆ. ಉಳಿದ ನಾಲ್ಕು ಸರ್ಗಗಳ ಅನುವಾದವನ್ನು ನಮ್ಮ ಶ್ರೀಮಠದ ಆಸ್ಥಾನವಿದ್ವಾಂಸರು ಗ್ರಂಥಸಂಶೋಧನ ಸಂಪಾದನೆ ಅನುವಾದ ಪ್ರಕಾಶನಾದಿ ಕಾರ್ಯಗಳಲ್ಲಿ ದಕ್ಷರೂ, ಶ್ರೇಷ್ಠ ವಿದ್ವಾಂಸರು ಆದ ಎಸ್ .ವಿ ಭೀಮಭಟ್ಟರು ಮಾಡಿರುತ್ತಾರೆ. ಶ್ರೀಸುಯಮಿರಾಘವೇಂದ್ರ ಸಂಶೋಧನಾ ಕೇಂದ್ರದ ಮುಖ್ಯಸ್ಥರೂ, ಗ್ರಂಥ ಪ್ರಕಾಶಕರೂ ಆದ ಸುಧೀಂದ್ರಾಚಾರ್ಯರು ಅನುವಾದಕರಾದ ರಾಜಾ ಎಸ್ ಗುರುರಾಜಾಚಾರ್ಯರ ಸುಪುತ್ರರು ಆಶುಕವಿಗಳು ಆಗಿರುತ್ತಾರೆ.ಶ್ರೀಗುರುರಾಜರ ಪಟ್ಟಾಭಿಷೇಕೋತ್ಸವ, ವರ್ಧಂತಿ ಉತ್ಸವದ ಶುಭಸಂದರ್ಭದಲ್ಲಿ ಪ್ರಕಾಶಿಸುತ್ತಿರುವುದು ಶ್ರೀರಾಯರ ಪ್ರೀತಿಗೆ ಕಾರಣವಾಗಿದೆ. ಈ ಕಾವ್ಯವನ್ನು ಎಲ್ಲರೂ ಪಡೆದು ಅಧ್ಯಯನ ಮಾಡಿ ಶ್ರೀಗುರುರಾಜರ ಅನುಗ್ರಹಕ್ಕೆ ಪಾತ್ರರಾಗಲಿ ಹಾಗೂ ಪ್ರಕಾಶಕರಾದ ರಾಜಾ ಟಿ ಸುಧೀಂದ್ರಾಚಾರ್ಯರಿಂದ ಇನ್ನೂ ಹತ್ತು ಹಲವು ಸಾರಸ್ವತ ಸೇವೆಯು ನಡೆಯುವಂತಾಗಲಿ ಎಂದು ಅಸ್ಮದುಪಾಸ್ಯಮೂರ್ತಿ ಶ್ರೀಮದ್ರಾಘವೇಂದ್ರತೀರ್ಥಗುರ್ವಂತರ್ಗತ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಶ್ರೀಮನ್ಮೂಲರಘುಪತಿವೇದವ್ಯಾಸದೇವರಲ್ಲಿ ಪ್ರಾರ್ಥಿಸುತ್ತೇವೆ.

ಹೀಗೆಂದು ಮಂತ್ರಾಲಯ ಮೊಕ್ಕಾಂನಿಂದ ಬರೆಸಿದ ಅನುಗ್ರಹಸಂದೇಶ



ಇತಿ ನಾರಾಯಣ ಸ್ಮರಣೆಗಳು

॥ ಶ್ರೀ ಗುರುರಾಜೋವಿಜಯತೇ ॥

# ಕೃತಜ್ಞತಾ

**ಶ್ರೀವ್ಯಾಸನಂದತೀರ್ಥೀಯಸತ್ತತ್ತ್ವಾಮೃತವರ್ಷಕಃ ।**
**ಸುಯಮೀರಾಘವೇಂದ್ರಾರ್ಯವಿದ್ಯಾಕೇಂದ್ರೋ ವಿರಾಜತೇ ॥**

ಶ್ರೀ ರಾಯರ ಅನುಗ್ರಹದ ನೆರಳಲ್ಲಿ ಅರಳುತ್ತಿರುವ ಶ್ರೀ ಸುಯಮೀರಾಘವೇಂದ್ರ ಸಂಶೋಧನಾ ಕೇಂದ್ರ ಭಗವತ್ಸಂಕಲ್ಪ, ಶ್ರೀ ಗುರುರಾಜರ ಪ್ರೇರಣೆ, ಪರಮಾನುಗ್ರಹ ಮತ್ತು ಸಂಸ್ಥೆಯ ಸಾಮ್ರಾಟ್ ಪೋಷಕರುಗಳಾದ ಪರಮಪೂಜ್ಯ ಶ್ರೀ ಸುಯಮೀಂದ್ರ, ಶ್ರೀ ಸುಜಯೀಂದ್ರ, ಶ್ರೀಸುಶಮೀಂದ್ರ, ಶ್ರೀಸುಯತೀಂದ್ರತೀರ್ಥರು ಮತ್ತು ಅಧುನಾಪೀಠ ವಿರಾಜಮಾನರಾದ ಪರಮಪೂಜ್ಯ ಶ್ರೀ ಸುಬುಧೇಂದ್ರತೀರ್ಥ ಶ್ರೀಪಾದಂಗಳವರ ಅನುಗ್ರಹಾಶೀರ್ವಾದದ ರಕ್ಷಾಕವಚವನ್ನು ಧರಿಸಿ ಕಾರ್ಯೋನ್ಮುಖವಾಗಿರುವುದರ ಸತ್ಫಲವೇ ಸಾರಸ್ವತ ಲೋಕದಲ್ಲಿ ವೈಶಿಷ್ಟ್ಯ-ಪೂರ್ಣವಾದ ಸಾಧನೆ ! ಸಜ್ಜನರ ಅಭಿಮಾನದ ಮಹಾಪೂರ ! ಇಂತಹ ಒಂದು ಅಪೂರ್ವವಾದ ಆರೋಹಣ ಸಾಧನೆಯ ಸುಯಶಸ್ಸನ್ನು ನಮ್ಮದಾಗಿಸಿದ ಶ್ರೀಹರಿ-ವಾಯು-ರಾಘವೇಂದ್ರತೀರ್ಥ ಗುರುಸಾರ್ವಭೌಮರು ಹಾಗೂ ಪೂಜ್ಯ ಶ್ರೀಪಾದಂಗಳವರಿಗೆ ಭಕ್ತಿ-ಶ್ರದ್ಧಾಪೂರ್ವಕವಾದ ಪರಂಪರಾಗತ ಅನೇಕಕೋಟಿ ಶಿರಸಾಷ್ಟಾಂಗ ಪ್ರಣಾಮಗಳನ್ನು ಅರ್ಪಿಸುತ್ತೇನೆ.

ಶ್ರೀಗುರುರಾಜರ ಪೂರ್ವಾಶ್ರಮದ ಅಕ್ಕಂದಿರ ಮಕ್ಕಳಾದ ವಿದ್ವತ್ಕುಲಲಲಾಮ ಶ್ರೀನಾರಾಯಣಾಚಾರ್ಯರು ರಚಿಸಿರುವ ಶ್ರೀರಾಘವೇಂದ್ರವಿಜಯ ಎಂಬ ಈ ಮಹಾಕಾವ್ಯವನ್ನು ಶ್ರೀರಾಘವೇಂದ್ರಗುರುವಂಶಭೂಷಣಂ ರಾಜಾ ಶ್ರೀ ಎಸ್. ಗುರುರಾಜಾಚಾರ್ಯರು ಕನ್ನಡಕ್ಕೆ ಅನುವಾದಿಸಿರುವ 6 ಸರ್ಗಗಳು ಹಾಗೂ ವಿದ್ವಾನ್ ಎಸ್.ಪಿ. ಭೀಮಭಟ್ಟರು ಅನುವಾದಿಸಿರುವ ಉಳಿದ 4 ಸರ್ಗಗಳನ್ನೊಳಗೊಂಡಂತೆ ಈ ಗ್ರಂಥವನ್ನು ಪ್ರಕಟಿಸುತ್ತಿದ್ದೇವೆ ಎಂದು ತಿಳಿಸಲು ಸಂತೋಷಿಸುತ್ತೇವೆ.

ಈ ಮೊದಲೇ ಶ್ರೀಮಠದಿಂದ ಪ್ರಕಟಗೊಂಡ ಈ ಗ್ರಂಥದ 4 ಸರ್ಗಗಳನ್ನು ನಮ್ಮ ಸಂಸ್ಥೆಯಿಂದ ಪ್ರಕಟಿಸಲು ಅನುಮತಿಯ ಆಶೀರ್ವಾದವನ್ನು ನೀಡುವುದರೊಂದಿಗೆ ಗ್ರಂಥವನ್ನು ಶ್ರೀರಾಯರ 400ನೇ ವರ್ಷದ ಪಟ್ಟಾಭಿಷೇಕ ಮಹೋತ್ಸವ ಮತ್ತು 426ನೇ ವರ್ಧಂತ್ಯುತ್ಸವ ಗಳನ್ನೊಳಗೊಂಡ ಶ್ರೀರಾಘವೇಂದ್ರ ವೈಭವೋತ್ಸವವನ್ನು ಇದೇ ಮಾರ್ಚ್ 4 ರಿಂದ ಮಾರ್ಚ್ 9ರವರ ಪರ್ಯಂತ ಭಕ್ತಿ ಪೂರ್ವಕವಾಗಿ ಆಚರಿಸಲ್ಪಡುವ ಪರಮ ಮಂಗಳಕರ ಶುಭ

ಸಂದರ್ಭದಲ್ಲಿ ಲೋಕಾರ್ಪಣೆ ಮಾಡುತ್ತಿರುವ ಪಗಮ ಪೂಜ್ಯ 108 ಶ್ರೀ ಶ್ರೀ ಸುಬುಧೇಂದ್ರತೀರ್ಥ ಶ್ರೀಪಾದಂಗಳವರ ಪರಮ ಪಾವನ ಪದಪದುಮಗಳಿಗೆ ನಮ್ಮ ಭಕ್ತಿಪೂರ್ವಕವಾದ ಪ್ರಣಾಮಗಳನ್ನು ಸಮರ್ಪಿಸುತ್ತೇವೆ.

ಗ್ರಂಥವನ್ನು ಕನ್ನಡಕ್ಕೆ ಅನುವಾದಿಸಿ ಉಪಕರಿಸಿರುವ ವಿದ್ವನ್ಮಣಿಗಳಾದ ರಾಜಾ ಶ್ರೀಗುರುರಾಜಾಚಾರ್ಯರು ಹಾಗೂ ಶ್ರೀ ಎಸ್.ವಿ. ಭೀಮಭಟ್ಟರು ಇವರಿಗೆ ನಮ್ಮ ನಮಸ್ಕಾರಗಳನ್ನು ಅರ್ಪಿಸುತ್ತೇವೆ.

ಗ್ರಂಥಮುದ್ರಣಕ್ಕೆ ವಿಶೇಷ ರೀತಿಯಲ್ಲಿ ಸಹಾಯ ಮಾಡಿದ ಶ್ರೀಯುತ ಯು. ನಾಗರಾಜ್ ಹಾಗೂ ಅವರ ಸಹೋದರರಿಗೆ ನಮ್ಮ ಕೃತಜ್ಞತೆಯ ಧನ್ಯವಾದಗಳು.

ಈ ಗ್ರಂಥಕ್ಕೆ ಸುಂದರವಾದ ರಕ್ಷಾಪುಟವನ್ನು ರೂಪಿಸಿ, ಗ್ರಂಥವನ್ನು ಸುಂದರವಾಗಿ ಮುದ್ರಿಸಿ ಸಮಯಕ್ಕೆ ಸರಿಯಾಗಿ ಪ್ರಕಟವಾಗುವುದಕ್ಕೆ ಅನುವು ಮಾಡಿಕೊಟ್ಟ ಕೌಸ್ತುಭಾ ಕ್ರಿಯೇಟಿವ್ಸ್‌ನ ಎನ್. ಗುರುರಾಜ್‌ರವರಿಗೆ ನಮ್ಮ ಧನ್ಯವಾದಗಳು.

04–03–2022 ರಿಂದ 09–03–2022
**ಶ್ರೀರಾಘವೇಂದ್ರ ಗುರುವೈಭವೋತ್ಸವ**
ಮಂತ್ರಾಲಯ

ಪ್ರಕಾಶಕರು
**ಶ್ರೀ ಸುಯಮೀರಾಘವೇಂದ್ರ ಸಂಶೋಧನ ಕೇಂದ್ರ**
ನಂಜನಗೂಡು–ಬೆಂಗಳೂರು

# ಪರಿವಿಡಿ

॥ ಶ್ರೀ ಮನ್ಮೂಲರಾಮೋ ವಿಜಯತೇ ॥ ॥ ಶ್ರೀ ಗುರುರಾಜೋ ವಿಜಯತೇ ॥

# ಗ್ರಂಥ ಸಮರ್ಪಣೆ

ಶ್ರೀಕ್ಷೇತ್ರ ಮಂತ್ರಾಲಯದಲ್ಲಿ ಇದೇ ಫಾಲ್ಗುಣ ಶುದ್ಧ ದ್ವಿತೀಯ
ಮಾರ್ಚ್ 04-03-2022 ರಿಂದ ಫಾಲ್ಗುಣ ಶುದ್ಧ ಸಪ್ತಮಿ
09-03-2022ರ ಪರ್ಯಂತ ಭಕ್ತಿ ಪುರಸ್ಸರವಾಗಿ ಆಚರಿಸಲ್ಪಡುವ
ಶ್ರೀರಾಘವೇಂದ್ರ ಸ್ವಾಮಿಗಳವರ 400ನೇ ಪಟ್ಟಾಭಿಷೇಕ ಮಹೋತ್ಸವ
ಮತ್ತು 427ನೇ ವರ್ಧಂತ್ಯುತ್ಸವಗಳನ್ನೊಳಗೊಂಡ
ಶ್ರೀರಾಘವೇಂದ್ರ ಗುರುವೈಭವೋತ್ಸವದ ಶುಭ ಸಂದರ್ಭದಲ್ಲಿ
ಹಾಗೂ ಶ್ರೀರಾಘವೇಂದ್ರ ಗುರುವಂಶಭೂಷಣಂ,
ರಾಜಾಶ್ರೀ ಗುರುರಾಜಾಚಾರ್ಯರ ಜನ್ಮಶತಾಬ್ದಿಯ ಸಂಸ್ಮರಣಾರ್ಥವಾಗಿ
**'ಶ್ರೀರಾಘವೇಂದ್ರವಿಜಯ'** ಎಂಬ ಪರಮ ಮಂಗಳಕರವಾದ
ಗ್ರಂಥ ಪುಷ್ಪವನ್ನು ಪರಮಪೂಜ್ಯ
**ಶ್ರೀಮತ್ಸುಬುಧೇಂದ್ರತೀರ್ಥ** ಶ್ರೀಪಾದಂಗಳವರ
ಅಮೃತಹಸ್ತಗಳಿಂದ ಶ್ರೀರಾಘವೇಂದ್ರತೀರ್ಥಗುರ್ವಂತರ್ಗತ
ಶ್ರೀಭಾರತೀರಮಣ ಮುಖ್ಯ ಪ್ರಾಣಾಂತರ್ಗತ ಕುಲಸ್ವಾಮಿ
**ಪದ್ಮಾವತೀ ಸಮೇತ ಶ್ರೀ ಲಕ್ಷ್ಮೀ ವೇಂಕಟೇಶ್ವರ** ದೇವರ
ಪರಮಪಾವನ ಪದಪದುಮಗಳಿಗೆ ಸದ್ಭಕ್ತಿ, ಶ್ರದ್ಧಾದರ
ನಮನ ಪೂರ್ವಕವಾಗಿ ಸಮರ್ಪಿಸಿ ಪ್ರಕಾಶಿಸಲ್ಪಟ್ಟಿದೆ.

**04-03-2022 ರಿಂದ 09-03-2022**
ಶ್ರೀರಾಘವೇಂದ್ರ ಗುರುವೈಭವೋತ್ಸವ
**ಮಂತ್ರಾಲಯ**

**ಶ್ರೀ ಗುರುರಾಜರ ಚರಣಸೇವಕರು**
ಪ್ರಕಾಶಕರು
ಶ್ರೀಸುಯಮೀ-ರಾಘವೇಂದ್ರ ಸಂಶೋಧನ ಕೇಂದ್ರ
ನಂಜನಗೂಡು - ಬೆಂಗಳೂರು

# ಕುಲದೈವ



ಶ್ರೀಶ್ರೀನಿವಾಸದೇವರು

# ಸಾಮ್ರಾಟ್ ಪೋಷಕರು



ಶ್ರೀ ಸುಯಮೀಂದ್ರತೀರ್ಥರು



ಶ್ರೀ ಸುಜಯೀಂದ್ರತೀರ್ಥರು



ಶ್ರೀ ಸುಶಮೀಂದ್ರತೀರ್ಥರು



ಶ್ರೀ ಸುಯತೀಂದ್ರತೀರ್ಥರು

# ಸಾಮ್ರಾಟ್ ಪೋಷಕರು



ಜಗದ್ಗುರು ಶ್ರೀಮನ್ಮಧ್ವಾಚಾರ್ಯರ ಮೂಲ ಮಹಾಸಂಸ್ಥಾನ
ಶ್ರೀರಾಘವೇಂದ್ರ ಸ್ವಾಮಿಗಳವರ ಮಠದ ಆಧುನಾ ಪೀಠವಿರಾಜಮಾನರು
**ಪರಮಪೂಜ್ಯ ಶ್ರೀ ಸುಬುಧೇಂದ್ರತೀರ್ಥರು**

# ಗ್ರಂಥಕರ್ತರು



ಶ್ರೀರಾಘವೇಂದ್ರಗುರುವಂಶಭೂಷಣಂ
**ರಾಜಾ ಶ್ರೀ ಗುರುರಾಜಾಚಾರ್ಯ**

ಅನುವಾದಕರು



ವಿದ್ಯಾವಿಭೂಷಣ
**ವಿದ್ವಾನ್ ಶ್ರೀ ಎಸ್.ವಿ. ಭೀಮಭಟ್ಟರು**

ಶ್ರೀ ಗುರುರಾಜೋ ವಿಜಯತೇ

# ಕೃತಜ್ಞತಾ



ಭಗವದನುಗ್ರಹದಿಂದ ಜನಿಸಿದ ಶ್ರೀಯುತ ಯು. ಕೃಷ್ಣಮೂರ್ತಿಯವರು ದಕ್ಷಿಣ ಕನ್ನಡ ಉಡುಪಿಯ ಉದ್ಯಾವರದವರು. ಹೋಟೆಲ್ ಉದ್ಯಮಿಗಳು, ಭಗವಂತನ ಕೃಪೆಯಿಂದ ಹಂತ ಹಂತವಾಗಿ ಬೆಳೆದ ಕೀರ್ತಿಶಾಲಿಗಳು. ಶ್ರೀಹರಿವಾಯು ರಾಘವೇಂದ್ರ ಗುರುಗಳಲ್ಲಿ ಅನನ್ಯ ಸಾಧಾರಣ ಭಕ್ತಿ, ಗುರು ಹಿರಿಯರಲ್ಲಿ ಗೌರವ, ಬಂಧು ಬಾಂಧವರಲ್ಲಿ ಪ್ರೀತಿ, ಅಭಿಮಾನ, ಆದರ, ಕಷ್ಟದಲ್ಲಿದ್ದವರಿಗೆ ಸಹಾಯ ಹಸ್ತವನ್ನು ಚಾಚಿ ಅವರ ಕಷ್ಟಗಳಲ್ಲಿ ಭಾಗಿಯಾಗಿ ಅವರಿಗೆ ಬೇಕಾದ ನೆರವನ್ನು ಒದಗಿಸುವಂತಹ ಸದ್ಗುಣ ಸಂಪನ್ನತೆ ಇವರಿಗೆ ತಂದೆ ತಾಯಿಯಿಂದ ಬಂದ ಬಳುವಳಿ.

ದಕ್ಷಿಣ ಕನ್ನಡದ ಪಡುಬಿದ್ರೆಯ ಶ್ರೀಮತಿ ಸುಶೀಲಾರವರು ಇವರ ಧರ್ಮ ಪತ್ನಿ. ಪತಿಯ ಎಲ್ಲಾ ಸತ್ಕಾರ್ಯಗಳಲ್ಲಿ ನೆರವಾಗಿ ಪತಿಯ ಇಚ್ಛಾನುಸಾರವಾಗಿ ಕರ್ತವ್ಯ ನಿರ್ವಹಿಸುವ ಸದ್ಗೃಹಿಣಿ ಎಂಬ ಕೀರ್ತಿಗೆ ಪಾತ್ರರಾದವರು ಶ್ರೀಮತಿ ಸುಶೀಲಾಮೂರ್ತಿಯವರು. ಶ್ರೀ ಕೃಷ್ಣಮೂರ್ತಿಯವರು ಉದ್ಯಾವರದ ಪುರಾತನ ದೇವಾಲಯದ ಜೀರ್ಣೋದ್ಧಾರ, ಬಡ ವಿದ್ಯಾರ್ಥಿಗಳ ವ್ಯಾಸಂಗದ ಖರ್ಚು, ಉಪನಯನ, ವಿವಾಹ ಇಂತಹ ಹತ್ತು ಹಲವು ಮಂಗಳ ಕಾರ್ಯಗಳಿಗೆ ಸಹಾಯ ಸಹಕಾರಗಳನ್ನು ಒದಗಿಸಿ ಧಾರ್ಮಿಕ, ಸಾಂಸ್ಕೃತಿಕ, ಶೈಕ್ಷಣಿಕ ಮತ್ತು ಸಾಮಾಜಿಕ ಕ್ಷೇತ್ರಗಳಲ್ಲಿ ತಮ್ಮದೇ ಆದ ಛಾಪು ಮೂಡಿಸಿದ್ದಾರೆ. ಪ್ರತ್ಯಕ್ಷವಾಗಿಯೂ ಅಪ್ರತ್ಯಕ್ಷವಾಗಿಯೂ ಏಕ ರೀತಿಯ ಮಾನ್ಯತೆಗೆ ಸತ್ಪಾತ್ರರಾದ ಸರಳ ಸಜ್ಜನಿಕೆಯ ಸಾತ್ವಿಕ ಸ್ವಭಾವ ವಿಶೋಭಿತರು ಶ್ರೀಯುತ ಕೃಷ್ಣಮೂರ್ತಿ ದಂಪತಿಗಳು.

ಶ್ರೀಯುತರ ಸತ್ಪುತ್ರರಾದ ಶ್ರೀ ಯು. ನಾಗರಾಜ್, ರವಿರಾಜ್, ರಾಜಾರಾಮ್ ರವರು ತಾವು ಜನ್ಮ ಜನ್ಮಾಂತರದ ಸುಕೃತದ ಫಲವಾಗಿ ಸುಸಂಸ್ಕೃತ ಮನೆತನದಲ್ಲಿ ಜನಿಸಲು ಪ್ರೇಮಮೂರ್ತಿಗಳಾಗಿ ನಮ್ಮ ಅಸ್ತಿತ್ವಕ್ಕೆ ಕಾರಣರಾದ ಶ್ರೀ ಹರಿವಾಯು ಮಂತ್ರಾಲಯ ಪ್ರಭುಗಳಲ್ಲಿ ಅತಿಶಯ ಭಕ್ತಿ ತೋರಿ ನಮ್ಮನ್ನು ಅದೇ ಮಾರ್ಗದಲ್ಲಿ ಕರೆದೊಯ್ದು ನಮ್ಮ ಪೂಜ್ಯ ಮಾತಾಪಿತೃಗಳಾದ ಪಡುಬಿದ್ರೆ ಸುಶೀಲಮ್ಮ ಮತ್ತು ಉದ್ಯಾವರ ಕೃಷ್ಣಮೂರ್ತಿ ಅವರ ಸವಿನೆನಪಿನಲ್ಲಿ ಈ ಜ್ಞಾನಯಜ್ಞವನ್ನು ಕೈಗೊಂಡಿದ್ದೇವೆ ಎಂಬ ಅರ್ಥಗರ್ಭಿತ ಸಂಗತಿಯನ್ನು ವ್ಯಕ್ತಪಡಿಸುತ್ತ ಸಾರ್ಥಕತೆಯ ಪಾರಮಾರ್ಥಿಕತೆಯನ್ನು ಮೆರೆದಿದ್ದಾರೆ.

ಪ್ರಸ್ತುತ ಶ್ರೀರಾಘವೇಂದ್ರವಿಜಯ ಪ್ರಕಾಶನದ ಶ್ರೇಷ್ಠತಮ ಜ್ಞಾನಯಜ್ಞಕ್ಕೆ ತನು-ಮನ-ಧನಗಳ ಸಹಾಯವನ್ನು ಒದಗಿಸಿದ ಶ್ರೀಯುತ ಯು. ನಾಗರಾಜ್, ಯು. ರವಿರಾಜ್, ಯು. ರಾಜಾರಾಂ ಮತ್ತು ಅವರ ಸಕಲ ಕುಟುಂಬವರ್ಗದವರಿಗೆ ನಮ್ಮ ಹೃತ್ಪೂರ್ವಕ ಧನ್ಯವಾದಗಳನ್ನು ತಿಳಿಸುತ್ತಾ ಶ್ರೀ ಹರಿ-ವಾಯು-ರಾಘವೇಂದ್ರ ಗುರುಗಳ ಅನುಗ್ರಹದ ರಕ್ಷಾಕವಚ ಸರ್ವದಾ ಅವರೊಂದಿಗೆ ಇರಲಿ ಎಂದು ಪ್ರಾರ್ಥಿಸುತ್ತೇವೆ.

ವಿದ್ವತ್ಕುಲಾವತಂಸ,
ಮಹಾಕವಿ ಶ್ರೀಮನ್ನಾರಾಯಣಾಚಾರ್ಯೇಣ ರಚಿತಂ

# ಶ್ರೀಮದ್ರಾಘವೇಂದ್ರವಿಜಯ ಮಹಾಕಾವ್ಯಂ

## ಪ್ರಥಮ ಸರ್ಗ

ಶ್ರೀರಾಘವೇಂದ್ರವಿಜಯ ಕಾವ್ಯವು ಜಗದ್ಗುರುಗಳಾದ ಶ್ರೀರಾಘವೇಂದ್ರತೀರ್ಥ ಗುರುಸಾರ್ವಭೌಮರ ಜೀವನ ಹಾಗೂ ಸಾಧನೆಗಳನ್ನು ಪ್ರತಿಬಿಂಬಿಸುವ ಮಹಾಕಾವ್ಯವು. ಈ ಕಾವ್ಯವು ಗುರುಸಾರ್ವಭೌಮರ ಪೂರ್ವಾಶ್ರಮ ಸಹೋದರಿಯಾದ ಶ್ರೀಮತಿ ವೆಂಕಟಾಂಬಾ, ಷಡ್ದರ್ಶನಾಚಾರ್ಯರಾದ ಶ್ರೀಲಕ್ಷ್ಮೀನರಸಿಂಹಾಚಾರ್ಯದಂಪತಿಗಳ ಸುಪುತ್ರರೂ, ಮಂತ್ರಾಲಯಾಧೀಶರಾದ ಶ್ರೀರಾಘವೇಂದ್ರಸ್ವಾಮಿಗಳವರ ಪೂರ್ವಾಶ್ರಮ ಸೋದರಳಿಯಂದಿರೂ, ವಿದ್ವತ್ಕುಲಾವತಂಸರೂ, ಷಡ್ದರ್ಶನಗಳಲ್ಲಿ ಖ್ಯಾತ ಪಂಡಿತರೂ ಆದ ಶ್ರೀ ನಾರಾಯಣಾಚಾರ್ಯರಿಂದ ರಚಿಸಲ್ಪಟ್ಟಿದೆ. ಶ್ರೀನಾರಾಯಣಾಚಾರ್ಯರು ತಮ್ಮ ವಿದ್ಯಾಭ್ಯಾಸವನ್ನು ಸಾಕ್ಷಾತ್ ಗುರುಸಾರ್ವಭೌಮರಲ್ಲಿ ಮಾಡಿದ್ದರು. ಶ್ರೀರಾಯರ ಅತ್ಯಂತ ಪ್ರೀತಿಪಾತ್ರರಾಗಿದ್ದರು. ಸ್ವತಃ ಶ್ರೀರಾಘವೇಂದ್ರರ ಸಮಕಾಲೀನರಾದುದರಿಂದ ಅವರು ರಚಿಸಿರುವ ಶ್ರೀಗುರುರಾಜರ ಚರಿತಾಮೃತವು ಅತ್ಯಂತ ಪ್ರಮಾಣಬದ್ಧವೂ, ಸತ್ಯವೂ ಆಗಿರುತ್ತದೆ. ಶ್ರೀರಾಘವೇಂದ್ರವಿಜಯ ಮಹಾಕಾವ್ಯವು ಹದಿನಾರು ಸರ್ಗಗಳನ್ನೊಳಗೊಂಡು ರಚಿಸಲ್ಪಟ್ಟಾಗ ಗುರುಸಾರ್ವಭೌಮರು ಅದನ್ನು ವೀಕ್ಷಿಸಿ ಸಂತೋಷಭರಿತರಾಗಿ ನಾರಾಯಣಚಾರ್ಯರ ವಿದ್ವತ್ತನ್ನು ಪ್ರಶಂಶಿಸಿ, "ನಮ್ಮ ಕುಲಗುರುಗಳೂ, ಸ್ವರೂಪೋದ್ಧಾರಕರೂ ಆದ ಶ್ರೀಮನ್ಮಧ್ವಾಚಾರ್ಯರ ಜೀವನ ಸಾಧನೆಗಳ ಬಗ್ಗೆ ಶ್ರೀ ತ್ರಿವಿಕ್ರಮ ಪಂಡಿತಾಚಾರ್ಯರಿಂದ ರಚಿಸಲ್ಪಟ್ಟ "ಸುಮಧ್ವವಿಜಯ" ಮಹಾಕಾವ್ಯವು ಹದಿನಾರು ಸರ್ಗಗಳಿಂದೊಡಗೂಡಿದೆ" ನಮ್ಮ ಬಗ್ಗೆ ನೀವು ರಚಿಸಿರುವ ಕಾವ್ಯವೂ ಹದಿನಾರು ಸರ್ಗದಿಂದೊಡಗೂಡಿದೆ. ನಮ್ಮ ಬಗೆಗಿನ ಕಾವ್ಯ, ನಮ್ಮ ಕುಲಗುರುಗಳ ಕಾವ್ಯಕ್ಕೆ ಸಮನಾಗಿರುವುದು ಬೇಡ" ಎಂದು ಅಪ್ಪಣೆ ಕೊಡಿಸಿ ಆರು ಸರ್ಗಗಳನ್ನು ತುಂಗಭದ್ರಾ ನದಿಗೆ ಸಮರ್ಪಿಸಿದರು ಎಂಬುದಾಗಿ ಇತಿಹಾಸವಿದೆ. ಇದು ಶ್ರೀಗುರುರಾಜರ ಹರಿಗುರುಭಕ್ತಿಯನ್ನು ತೋರಿಸುತ್ತದೆ. ಇಂತಹಾ ಮಹಾಮಹಿಮೋಪೇತರಾದ, ಕಲಿಯುಗಕಲ್ಪತರುಗಳಾದ, ಆಶ್ರಿತಜನ ಸಂರಕ್ಷಕರಾದ, ದೀನ-ದಲಿತ ಜನರ ಉದ್ಧಾರಕ ಗುರುಗಳಾದ, ಮಂತ್ರಾಲಯ ಪ್ರಭುಗಳಾದ

ಶ್ರೀಗುರುಸಾರ್ವಭೌಮರ ಅಮರ ಚರಿತ್ರೆಯನ್ನು ಕನ್ನಡ ಭಾವಾನುವಾದೊಂದಿಗೆ ಶ್ರೀ ಗುರುವಂಶಿಯವರು ಸಂಗ್ರಹಿಸಿ ನೀಡಿದ್ದಾರೆ. ಅವರ ಈ ಪ್ರಯತ್ನವು ಯಶಸ್ವಿಯಾಗುವಂತೆ ಶ್ರೀಹರಿವಾಯು ಶ್ರೀಪರಿಮಳಾಚಾರ್ಯರು ಅನುಗ್ರಹಿಸಲಿ ಎಂದು ಪ್ರಾರ್ಥಿಸುತ್ತೇವೆ. – ಸಂಪಾದಕ, "ಪರಿಮಳ".

# ಪ್ರಥಮ ಸರ್ಗ

**ಶ್ರೀಮಲ್ಲಕ್ಷ್ಮೀನೃಸಿಂಹಸ್ಯ ಶ್ರಿಯಂ ದಿಶತು ಮೇ ನಖಃ ।**
**ಸ್ವಭಕ್ತಾಭೀಷ್ಟದಾನಾಯ ಸಮುಪಾತ್ತದಶಾಕೃತೇಃ ॥೧॥**

ಗ್ರಂಥಕರ್ತೃಗಳಾದ ಶ್ರೀನಾರಾಯಣಾಚಾರ್ಯರ ಮನೆ ದೇವರು ಶ್ರೀಲಕ್ಷ್ಮೀನೃಸಿಂಹಸ್ವಾಮಿ. ಶ್ರೀಲಕ್ಷ್ಮೀನೃಸಿಂಹದೇವರಿಗೆ ಮಂಗಳಾಚಾರಣೆಯನ್ನು ಮಾಡುತ್ತಿದ್ದಾರೆ.

ತನ್ನ ಪ್ರಿಯ ಭಕ್ತರುಗಳ ಮನೋಕಾಮನೆಗಳನ್ನು ಪೂರೈಸುವುದಕ್ಕೂ, ಅವರುಗಳಿಗೆ, ಧರ್ಮ, ಅರ್ಥ, ಕಾಮ, ಮೋಕ್ಷಾದಿ ಚತುರ್ವಿಧ ಪುರುಷಾರ್ಥಗಳನ್ನು ನೀಡುವುದಕ್ಕಾಗಿ ಮತ್ಸ್ಯ ಕುರ್ಮಾದಿ ದಶಾವತಾರಗಳನ್ನು ಎತ್ತಿದ ಸರ್ವೋತ್ತಮನೂ, ಸರ್ವತಂತ್ರಸ್ವತಂತ್ರನೂ ಆದ ಶ್ರೀಮನ್ನಾರಾಯಣನ ಚತುರ್ಥಾವತಾರರಾದ ಶ್ರೀಲಕ್ಷ್ಮೀನರಸಿಂಹದೇವರ ಕೋಟಿ ವಜ್ರಾಯುಧಗಳಿಗೆ ಸಮನಾದ ಉಗುರುಗಳು ನನಗೆ ಐಹಿಕ, ಆಮುಷ್ಮಿಕ ಫಲಗಳನ್ನು ಕೊಡಲಿ.

**ವಸ್ತು ಸ್ತುತಂ ಸುರಸ್ತೋಮೈಃ ಅಸ್ತು ಶಸ್ತಂ ಮಯಾ ಸ್ತುತಮ್ ।**
**ಮಸ್ತುಹಸ್ತಂ ಪ್ರಸ್ತುತಾಯ ಶ್ರುತಿಮಸ್ತಕವಿಶ್ರುತಮ್ ॥೨॥**

ಈಗ ಕವಿಗಳು ತಮ್ಮ ಪೂಜಾಮೂರ್ತಿಯಾದ ನವನೀತ (ಬೆಣ್ಣೆ) ಕೃಷ್ಣನನ್ನು ಸ್ತುತಿಸುತ್ತಿದ್ದಾರೆ.

ಸರ್ವತಂತ್ರ ಸ್ವತಂತ್ರನಾದ, ಜಗದೀಶ್ವರನಾದ, ಸಾಕ್ಷಾತ್ ಮಹಾಲಕ್ಷ್ಮೀದೇವಿಯವರಿಂದ ಸ್ತುತಿ ಮಾಡಿಸಿ ಕೊಳ್ಳುವ, ಕೈಯಲ್ಲಿ ಬೆಣ್ಣೆಯನ್ನು ಹಿಡಿದು ಅಂಬೆಗಾಲನ್ನಿಡುತ್ತಿರುವ ಪುಟ್ಟ ಬಾಲಕನಾದ ಶ್ರೀಕೃಷ್ಣನನ್ನು ಶಬ್ದಾರ್ಥ ಸಂಪತ್ತು, ಐಹಿಕ ಪಾರಮಾರ್ಥಿಕ ಸಂಪತ್ತು ಮತ್ತು ನಾನು ಪ್ರಾರಂಭಿಸಿರುವ ಕಾವ್ಯವು ನಿರ್ವಿಘ್ನವಾಗಿ ಪರಿಸಮಾಪ್ತಿಯಾಗುವಂತೆ ಅನುಗ್ರಹಿಸಲಿ ಎಂದು ಪ್ರಾರ್ಥಿಸುತ್ತೇನೆ.

**ಶ್ರೀಮದಾನಂದತೀರ್ಥೇಂದುಭಾಸನಂ ಮಮ ಮಾನಸೇ ।**
**ಆಶಾಸೇ ಸಾಧುಶಬ್ದಾರ್ಥಸರಿದೀಶಾಭಿವೃದ್ಧಯೇ ॥೩॥**

ಈಗ ಕವಿಗಳು ತಮ್ಮ ಕುಲಗುರುಗಳಾದ ಶ್ರೀಮದಾನಂದತೀರ್ಥ ಭಗವತ್ಪಾದರನ್ನು ವಂದಿಸುತ್ತಾರೆ.

ಪೂರ್ಣಚಂದ್ರನು ಉದಯಿಸಿದಾಗ ಉಕ್ಕೇರುವ ಸಮುದ್ರದಂತೆ ಪೂರ್ಣಜ್ಞಾನಾದಿಗಳಿಂದ ಸಂಪದ್ಭರಿತರಾದ ಜಗದ್ಗುರುಗಳಾದ ಶ್ರೀಮನ್ಮಧ್ವಾಚಾರ್ಯರ ಸ್ಮರಣಮಾತ್ರದಿಂದ ನಾನು ರಚಿಸಲು ಉದ್ದೇಶಿಸಿರುವ ಈ ಕಾವ್ಯವು ಸುಸಂಸ್ಕೃತವಾದ ವ್ಯಾಕರಣದಿಂದಲೂ,

ಶಬ್ಧಗಾಂಭೀರ್ಯದಿಂದಲೂ, ಅಲಂಕಾರಾದಿಗಳಿಂದಲೂ ಕೂಡಿದ್ದಾಗಿ ಎಲ್ಲ ಸುಜನರ ಮನಸ್ಸಂತೋಷಪಡಿಸಲೆಂದು ಹಾರೈಸುತ್ತೇನೆ.

**ಶ್ರೀರಾಘವೇಂದ್ರರತ್ನಾನಾಂ ರಸನಾರಂಗನರ್ತಕೀ ।**
**ಶಬ್ದಾಂಬುಧಿಶರಜ್ಜ್ಯೋತ್ಸ್ನಾ ಶರಣಂ ಮಮ ಶಾರದಾ ॥೪॥**

ಈಗ ಕವಿಗಳು ವಾಗಭಿಮಾನಿದೇವತೆಯಾದ ಭಾರತೀ (ಶಾರದಾ) ದೇವಿಯನ್ನು ವಂದಿಸುತ್ತಾರೆ.

ಶ್ರೇಷ್ಠರಾದ, ಕಾಂತಿಯುಕ್ತರಾದ, ಜಗದ್ಗುರುಗಳಾದ, ಶ್ರೀರಾಘವೇಂದ್ರಸ್ವಾಮಿಗಳವರ ನಾಲಿಗೆಯು ಶ್ರೀಶಾರದೆಯು ನಾಟ್ಯವಾಡುವ ರಂಗಸ್ಥಳವಾಗಿದೆ. ಗುರುರಾಜರು ಮಾಡುವ ಪ್ರವಚನ, ಗ್ರಂಥರಚನಾದಿಗಳ ಪ್ರಭಾವದಿಂದ ಭಾರತೀದೇವಿಯವರು ಅಲ್ಲಿ ಸುಂದರ ಶಬ್ದಸಂಪತ್ತಿನಿಂದ ವಿಹರಿಸುತ್ತಾರೆ. ಇಂತಹಾ ಮಹಾ ವಿದ್ಯಾದೇವತೆಯಾದ ಶಾರದಾ ದೇವಿಯು ನನ್ನ ಕಾವ್ಯವನ್ನು ಒಳ್ಳೆಯ ಶಬ್ದಸಂಪತ್ತಿನಿಂದ ಬರೆಯುವಂತಹ ಸ್ಫೂರ್ತಿಯನ್ನು ನೀಡಲಿ ಎಂದು ಪ್ರಾರ್ಥಿಸುತ್ತೇನೆ.

**ಕಠಿನಾಽಪಿ ಕವಿಶ್ಲಾಘ್ಯಾ ತ್ರಿವಿಕ್ರಮಸರಸ್ವತೀ ।**
**ಸುವರ್ಣಯೋಗಸಂದೃಶ್ಯಾ ವರಾ ವಜ್ರಮಣಿರ್ಯಥಾ ॥೫॥**

.ಈಗ ಕವಿಗಳು ಸುಮಧ್ವವಿಜಯಕಾರರಾದ ಶ್ರೀತ್ರಿವಿಕ್ರಮಪಂಡಿತಾಚಾರ್ಯರನ್ನು ವಂದಿಸುತ್ತಾರೆ.

ಅತ್ಯಂತ ಕಠಿಣವಾದ ವಜ್ರವು ಬಂಗಾರದ ಆಭರಣದಲ್ಲಿ ಹುದಿಗಿಸಿಟ್ಟಾಗ ತನ್ನ ನಿಜವಾದ ಕಾಂತಿಯಿಂದ ಶೋಭಿಸುವಂತೆ ಸುಮಧ್ವವಿಜಯ ಕರ್ತೃಗಳಾದ ಶ್ರೀತ್ರಿವಿಕ್ರಮಪಂಡಿತಾಚಾರ್ಯರ ಶಬ್ದ ಸಂಪತ್ತು ಅಲಂಕಾರಾದಿಗಳು ಸಾಮಾನ್ಯರ ಜ್ಞಾನಕ್ಕೆ ನಿಲುಕುವಂತಹುದಲ್ಲ. ಆದರೂ ಆ ಶಬ್ದಗಳ ಅರ್ಥ ಮತ್ತು ಗಾಂಭೀರ್ಯ, ಶಾಸ್ತ್ರಜ್ಞರಾದ ಜ್ಞಾನಿಗಳಾದ ಕವಿಗಳ ಪ್ರಶಂಸೆಗೆ ಪಾತ್ರವಾಗಿದೆ. ಇಂತು ಮಹಾಜ್ಞಾನಿವರ್ಯರಾದ ಶ್ರೀತ್ರಿವಿಕ್ರಮಪಂಡಿತಾಚಾರ್ಯರ ವಾಣಿಯು ನನ್ನ ಕಾವ್ಯರಚನೆಗೆ ಸಹಾಯಕವಾಗಲಿ ಎಂದು ಆಶಿಸುತ್ತಿದ್ದಾರೆ.

**ವಾಣೀಪಾಣಿತಲಾಸಕ್ತವೀಣಾರವವಿಡಂಬಿನೀ ।**
**ನಾನಾಪ್ರಬಂಧಚತುರಾ ಭಾತಿ ನಾರಾಯಣಾರ್ಯಗೀಃ ॥೬॥**

ಶ್ರೀಶಾರಾದಾದೇವಿಯವರ ಹಸ್ತಕಮಲದಲ್ಲಿ ವಿರಾಜಿಸುವ ವೀಣಾವಾದನದ ಮಾಧುರ್ಯವನ್ನು ಅನುಕರಿಸುವ ಅನೇಕ ವಿಧವಾದ ಕಾವ್ಯರಚನೆಯಲ್ಲಿ ಕುಶಲರಾದ ನಾರಾಯಣಪಂಡಿತಾಚಾರ್ಯರ ಮಾತುಗಳು ಪ್ರಾಕಾಶಿಸುತ್ತಿವೆ.

**ವೃಂದಾರವನಮಂದಾರಮಕರಂದಸಹೋದರೀ ।**
**ವಿಶ್ರುತಾ ವಿಜಯಂ ದದ್ಯಾದ್ ವ್ಯಾಸತೀರ್ಥಾರ್ಯಭಾರತೀ ॥೭॥**

ಈಗ ಕವಿಗಳು ಶ್ರೀವ್ಯಾಸರಾಜ ಗುರುಗಳನ್ನು ವಂದಿಸುತ್ತಾರೆ. ಸುರಲೋಕದ ಉದ್ಯಾನವನದ ಮಂದಾರವೆಂಬ ದೇವವೃಕ್ಷದ ಹೂವುಗಳ ಮಧುವಿಗೆ ಸಹೋದರಿಯಂತಿರುವ ಅಥವಾ ಅದಕ್ಕೆ ಸಮಾನವಾದ (ರಾದ) ಪ್ರಸಿದ್ಧವಾದ (ರಾದ) ವ್ಯಾಸರಾಜತೀರ್ಥರೆಂಬ ಪೂಜ್ಯರ ವಾಣಿಯು ನನಗೆ ಈ ಕಾವ್ಯ ರಚನೆಯಲ್ಲಿ ಗೆಲುವನ್ನು ನೀಡಲಿ.

**ವ್ಯಾಸಸೂತ್ರಪದಾರ್ಥೋಪನ್ಯಾಸಮಾಕರ್ಣ್ಯ ಮಾನ್ಯಪಿ ।**
**ವ್ಯಾಸರಾಜಸ್ಯ ಭಜತೇ ದಾಸತಾಂ ಕೋ ನ ಕೋವಿದಃ ॥೮॥**

ಮತ್ತೊಂದು ಶ್ಲೋಕದಿಂದ ಶ್ರೀವ್ಯಾಸರಾಜಗುರುಸಾರ್ವಭೌಮರನ್ನು ಸ್ತುತಿಸುತ್ತಾರೆ.

ಶ್ರೀವೇದವ್ಯಾಸದೇವರ ಬ್ರಹ್ಮಮೀಮಾಂಸಾಸೂತ್ರದ ಪದಗಳ ಗೂಢವಾದ, ಗಂಭೀರವಾದ ಅರ್ಥಗಳನ್ನೊಳಗೊಂಡ ಚಂದ್ರಿಕಾ ಮೊದಲಾದ ಗ್ರಂಥರೂಪಗಳ ಕೀರ್ತಿಯ ವಿಷಯವನ್ನು ಕೇಳಿದ ಯಾವ ವಿದ್ವಾಂಸನು ತಾನು ಅಹಂಕಾರಿಯಾಗಿದ್ದರೂ ಸಹಾ ಶ್ರೀವ್ಯಾಸರಾಜ ಗುರುಗಳ ದಾಸತ್ವವನ್ನೂ ಶಿಷ್ಯತ್ವನ್ನೂ ಬಯಸುವುದಿಲ್ಲ? (ಎಲ್ಲ ಪಂಡಿತರೂ ತಮ್ಮ ಅಹಂಕಾರವನ್ನು ಬಿಟ್ಟು ಶ್ರೀವ್ಯಾಸರಾಜರಲ್ಲಿ ದಾಸಭಾವವನ್ನು ಹೊಂದಿ ಶಿಷ್ಯಭಾವವನ್ನು ಹೊಂದಿಯೇ ತೀರುತ್ತಾರೆ ಎಂದು ಭಾವ).

**ಚತುಃಷಷ್ಟಿಕಲಾವಿದ್ಯಾಜುಷೇ ವಿದ್ವನ್ಮಹೋಮುಷೇ ।**
**ಜಯೀಂದ್ರಜ್ಯೋತಿಷೇ ಕುರ್ಯಾಂ ವಂದನಾನಿ ಯಶೋಜುಷೇ ॥೯॥**

ಈಗ ಕವಿಗಳು ಶ್ರೀಗುರುರಾಜರ ಪರಮಗುರುಗಳಾದ ಶ್ರೀ ವಿಜಯೀಂದ್ರತೀರ್ಥರನ್ನು ವಂದಿಸುತ್ತಾರೆ. ಚತುರಧಿಕಶತಗ್ರಂಥರತ್ನಗಳ ರಚಯಿತರಾದ, ಅರವತ್ತನಾಲ್ಕು ಕಲಾ ವಿದ್ಯೆಗಳಲ್ಲಿ ಪಾರಂಗತರಾದ ಪ್ರತಿವಾದಿ ವಿದ್ವಾಂಸರುಗಳ ತೇಜಸ್ಸನ್ನು ಅಡಗಿಸುವ ಅಥವಾ ಮಿಂಚಿನಂತಹಾ ಪ್ರಖರ ತೇಜಃಪುಂಜರಾದ ಶ್ರೀವಿಜಯೀಂದ್ರತೀರ್ಥರೆಂಬ ಜ್ಞಾನಪ್ರಕಾಶಾತ್ಮಕವಾದ ಬೆಳಕಿಗೆ ನನ್ನ ಭಕ್ತಿಪುರಸ್ಸರವಾದ ವಂದನೆಗಳನ್ನು ಮಾಡುವೆನು.

**ಸುಧೀಂದ್ರಯೋಗಿನಂ ಸೇವೇ ಸಾಧುಸತ್ಕೃತಸಂಪದಮ್ ।**
**ಸ ಗದ್ಯಪದ್ಯನಿರ್ಮಾಣವಿದ್ಯಾಯಾಃ ಪರಮಂ ಪದಮ್ ॥೧೦॥**

ಈಗ ಕವಿಗಳು ಶ್ರೀರಾಘವೇಂದ್ರ ಗುರುಸಾರ್ವಭೌಮರ ಸಾಕ್ಷಾತ್ ಗುರುಗಳೂ, ಗದ್ಯಪದ್ಯಾತ್ಮಕ ಪ್ರಬಂಧ ರಚನೆಯಲ್ಲಿ ನಿಷ್ಣಾತರೂ ಆದ ಶ್ರೀಸುಧೀಂದ್ರತೀರ್ಥ ಶ್ರೀಪಾದಂಗಳವರನ್ನು ಸ್ತುತಿಸುತ್ತಿದ್ದಾರೆ.

ಶಬ್ದಗಾಂಭೀರ್ಯದಿಂದಲೂ, ಅಲಂಕಾರಾದಿಗಳಿಂದಲೂ ಕೂಡಿದ್ದಾಗಿ ಎಲ್ಲ ಸುಜನರ ಮನಸ್ಸಂತೋಷಪಡಿಸಲೆಂದು ಹಾರೈಸುತ್ತೇನೆ.

**ಶ್ರೀರಾಘವೇಂದ್ರರತ್ನಾನಾಂ ರಸನಾರಂಗನರ್ತಕೀ ।**
**ಶಬ್ದಾಂಬುಧಿಶರಜ್ಜ್ಯೋತ್ಸ್ನಾ ಶರಣಂ ಮಮ ಶಾರದಾ ॥೪॥**

ಈಗ ಕವಿಗಳು ವಾಗಭಿಮಾನಿದೇವತೆಯಾದ ಭಾರತೀ (ಶಾರದಾ) ದೇವಿಯನ್ನು ವಂದಿಸುತ್ತಾರೆ.

ಶ್ರೇಷ್ಠರಾದ, ಕಾಂತಿಯುಕ್ತರಾದ, ಜಗದ್ಗುರುಗಳಾದ, ಶ್ರೀರಾಘವೇಂದ್ರಸ್ವಾಮಿಗಳವರ ನಾಲಿಗೆಯು ಶ್ರೀಶಾರದೆಯು ನಾಟ್ಯವಾಡುವ ರಂಗಸ್ಥಳವಾಗಿದೆ. ಗುರುರಾಜರು ಮಾಡುವ ಪ್ರವಚನ, ಗ್ರಂಥರಚನಾದಿಗಳ ಪ್ರಭಾವದಿಂದ ಭಾರತೀದೇವಿಯವರು ಅಲ್ಲಿ ಸುಂದರ ಶಬ್ದಸಂಪತ್ತಿನಿಂದ ವಿಹರಿಸುತ್ತಾರೆ. ಇಂತಹಾ ಮಹಾ ವಿದ್ಯಾದೇವತೆಯಾದ ಶಾರದಾ ದೇವಿಯು ನನ್ನ ಕಾವ್ಯವನ್ನು ಒಳ್ಳೆಯ ಶಬ್ದಸಂಪತ್ತಿನಿಂದ ಬರೆಯುವಂತಹ ಸ್ಫೂರ್ತಿಯನ್ನು ನೀಡಲಿ ಎಂದು ಪ್ರಾರ್ಥಿಸುತ್ತೇನೆ.

**ಕಠಿನಾಽಪಿ ಕವಿಶ್ಲಾಘ್ಯಾ ತ್ರಿವಿಕ್ರಮಸರಸ್ವತೀ ।**
**ಸುವರ್ಣಯೋಗಸಂದೃಶ್ಯಾ ವರಾ ವಜ್ರಮಣಿರ್ಯಥಾ ॥೫॥**

ಈಗ ಕವಿಗಳು ಸುಮಧ್ವವಿಜಯಕಾರರಾದ ಶ್ರೀತ್ರಿವಿಕ್ರಮಪಂಡಿತಾಚಾರ್ಯರನ್ನು ವಂದಿಸುತ್ತಾರೆ.

ಅತ್ಯಂತ ಕಠಿಣವಾದ ವಜ್ರವು ಬಂಗಾರದ ಆಭರಣದಲ್ಲಿ ಹುದಿಗಿಸಿಟ್ಟಾಗ ತನ್ನ ನಿಜವಾದ ಕಾಂತಿಯಿಂದ ಶೋಭಿಸುವಂತೆ ಸುಮಧ್ವವಿಜಯ ಕರ್ತೃಗಳಾದ ಶ್ರೀತ್ರಿವಿಕ್ರಮಪಂಡಿತಾಚಾರ್ಯರ ಶಬ್ದ ಸಂಪತ್ತು ಅಲಂಕಾರಾದಿಗಳು ಸಾಮಾನ್ಯರ ಜ್ಞಾನಕ್ಕೆ ನಿಲುಕುವಂತಹುದಲ್ಲ. ಆದರೂ ಆ ಶಬ್ದಗಳ ಅರ್ಥ ಮತ್ತು ಗಾಂಭೀರ್ಯ, ಶಾಸ್ತ್ರಜ್ಞರಾದ ಜ್ಞಾನಿಗಳಾದ ಕವಿಗಳ ಪ್ರಶಂಸೆಗೆ ಪಾತ್ರವಾಗಿದೆ. ಇಂತು ಮಹಾಜ್ಞಾನಿವರ್ಯರಾದ ಶ್ರೀತ್ರಿವಿಕ್ರಮಪಂಡಿತಾಚಾರ್ಯರ ವಾಣಿಯು ನನ್ನ ಕಾವ್ಯರಚನೆಗೆ ಸಹಾಯಕವಾಗಲಿ ಎಂದು ಆಶಿಸುತ್ತಿದ್ದಾರೆ.

**ವಾಣೀಪಾಣಿತಲಾಸಕ್ತವೀಣಾರವವಿಡಂಬಿನೀ ।**
**ನಾನಾಪ್ರಬಂಧಚತುರಾ ಭಾತಿ ನಾರಾಯಣಾರ್ಯಗೀಃ ॥೬॥**

ಶ್ರೀಶಾರಾದಾದೇವಿಯುವರ ಹಸ್ತಕಮಲದಲ್ಲಿ ವಿರಾಜಿಸುವ ವೀಣಾವಾದನದ ಮಾಧುರ್ಯವನ್ನು ಅನುಕರಿಸುವ ಅನೇಕ ವಿಧವಾದ ಕಾವ್ಯರಚನೆಯಲ್ಲಿ ಕುಶಲರಾದ ನಾರಾಯಣಪಂಡಿತಾಚಾರ್ಯರ ಮಾತುಗಳು ಪ್ರಕಾಶಿಸುತ್ತಿವೆ.

**ವೃಂದಾರವನಮಂದಾರಮಕರಂದಸಹೋದರೀ ।**
**ವಿಶ್ರುತಾ ವಿಜಯಂ ದದ್ಯಾದ್ ವ್ಯಾಸತೀರ್ಥಾರ್ಯಭಾರತೀ ॥೭॥**

ಈಗ ಕವಿಗಳು ಶ್ರೀವ್ಯಾಸರಾಜ ಗುರುಗಳನ್ನು ವಂದಿಸುತ್ತಾರೆ. ಸುರಲೋಕದ ಉದ್ಯಾನವನದ ಮಂದಾರವೆಂಬ ದೇವವೃಕ್ಷದ ಹೂವುಗಳ ಮಧುವಿಗೆ ಸಹೋದರಿಯಂತಿರುವ ಅಥವಾ ಅದಕ್ಕೆ ಸಮಾನವಾದ (ರಾದ) ಪ್ರಸಿದ್ಧವಾದ (ರಾದ) ವ್ಯಾಸರಾಜತೀರ್ಥರೆಂಬ ಪೂಜ್ಯರ ವಾಣಿಯು ನನಗೆ ಈ ಕಾವ್ಯ ರಚನೆಯಲ್ಲಿ ಗೆಲುವನ್ನು ನೀಡಲಿ.

**ವ್ಯಾಸಸೂತ್ರಪದಾರ್ಥೋಪನ್ಯಾಸಮಾಕರ್ಣ್ಯ ಮಾನ್ಯಪಿ ।**
**ವ್ಯಾಸರಾಜಸ್ಯ ಭಜತೇ ದಾಸತಾಂ ಕೋ ನ ಕೋವಿದಃ ॥೮॥**

ಮತ್ತೊಂದು ಶ್ಲೋಕದಿಂದ ಶ್ರೀವ್ಯಾಸರಾಜಗುರುಸಾರ್ವಭೌಮರನ್ನು ಸ್ತುತಿಸುತ್ತಾರೆ.

ಶ್ರೀವೇದವ್ಯಾಸದೇವರ ಬ್ರಹ್ಮಮೀಮಾಂಸಾಸೂತ್ರದ ಪದಗಳ ಗೂಢವಾದ, ಗಂಭೀರವಾದ ಅರ್ಥಗಳನ್ನೊಳಗೊಂಡ ಚಂದ್ರಿಕಾ ಮೊದಲಾದ ಗ್ರಂಥರೂಪಗಳ ಕೀರ್ತಿಯ ವಿಷಯವನ್ನು ಕೇಳಿದ ಯಾವ ವಿದ್ವಾಂಸನು ತಾನು ಅಹಂಕಾರಿಯಾಗಿದ್ದರೂ ಸಹಾ ಶ್ರೀವ್ಯಾಸರಾಜ ಗುರುಗಳ ದಾಸತ್ವವನ್ನೂ ಶಿಷ್ಯತ್ವವನ್ನೂ ಬಯಸುವುದಿಲ್ಲ? (ಎಲ್ಲ ಪಂಡಿತರೂ ತಮ್ಮ ಅಹಂಕಾರವನ್ನು ಬಿಟ್ಟು ಶ್ರೀವ್ಯಾಸರಾಜರಲ್ಲಿ ದಾಸಭಾವವನ್ನು ಹೊಂದಿ ಶಿಷ್ಯಭಾವವನ್ನು ಹೊಂದಿಯೇ ತೀರುತ್ತಾರೆ ಎಂದು ಭಾವ).

**ಚತುಃಷಷ್ಟಿಕಲಾವಿದ್ಯಾಜುಷೇ ವಿದ್ವನ್ಮಹೋಮುಷೇ ।**
**ಜಯೀಂದ್ರಜ್ಯೋತಿಷೇ ಕುರ್ಯಾಂ ವಂದನಾನಿ ಯಶೋಜುಷೇ ॥೯॥**

ಈಗ ಕವಿಗಳು ಶ್ರೀಗುರುರಾಜರ ಪರಮಗುರುಗಳಾದ ಶ್ರೀ ವಿಜಯೀಂದ್ರತೀರ್ಥರನ್ನು ವಂದಿಸುತ್ತಾರೆ. ಚತುರಧಿಕಶತಗ್ರಂಥರತ್ನಗಳ ರಚಯಿತರಾದ, ಅರವತ್ತನಾಲ್ಕು ಕಲಾ ವಿದ್ಯೆಗಳಲ್ಲಿ ಪಾರಂಗತರಾದ ಪ್ರತಿವಾದಿ ವಿದ್ವಾಂಸರುಗಳ ತೇಜಸ್ಸನ್ನು ಅಡಗಿಸುವ ಅಥವಾ ಮಿಂಚಿನಂತಹಾ ಪ್ರಖರ ತೇಜಃಪುಂಜರಾದ ಶ್ರೀವಿಜಯೀಂದ್ರತೀರ್ಥರೆಂಬ ಜ್ಞಾನಪ್ರಕಾಶಾತ್ಮಕವಾದ ಬೆಳಕಿಗೆ ನನ್ನ ಭಕ್ತಿಪುರಸ್ಸರವಾದ ವಂದನೆಗಳನ್ನು ಮಾಡುವೆನು.

**ಸುಧೀಂದ್ರಯೋಗಿನಂ ಸೇವೇ ಸಾಧುಸತ್ಕೃತಸಂಪದಮ್ ।**
**ಸ ಗದ್ಯಪದ್ಯನಿರ್ಮಾಣವಿದ್ಯಾಯಾಃ ಪರಮಂ ಪದಮ್ ॥೧೦॥**

ಈಗ ಕವಿಗಳು ಶ್ರೀರಾಘವೇಂದ್ರ ಗುರುಸಾರ್ವಭೌಮರ ಸಾಕ್ಷಾತ್ ಗುರುಗಳೂ, ಗದ್ಯಪದ್ಯಾತ್ಮಕ ಪ್ರಬಂಧ ರಚನೆಯಲ್ಲಿ ನಿಷ್ಣಾತರೂ ಆದ ಶ್ರೀಸುಧೀಂದ್ರತೀರ್ಥ ಶ್ರೀಪಾದಂಗಳವರನ್ನು ಸ್ತುತಿಸುತ್ತಿದ್ದಾರೆ.

ಸಜ್ಜನರ ಉಪಯೋಗಕ್ಕೆ ಅನುಕೂಲವಾಗುವಂತೆ ಮಾಡಲ್ಪಟ್ಟ ಧನಾದಿ ಸಂಪತ್ತುಳ್ಳ, ಗದ್ಯಪದ್ಯಗಳ ಗ್ರಂಥರಚನಾ ಸಾಮರ್ಥ್ಯಕ್ಕೆ ಅಥವಾ ಗದ್ಯಪದ್ಯಗಳಿಂದ ಸಹಿತವಾಗಿ ಉಳ್ಳ ಪ್ರಬಂಧರೂಪವಾದ ವಿದ್ಯೆಗೆ ಮೊದಲನೆಯ ಸ್ಥಾನರಾಗಿರುವ ಅಥವಾ ಮುಖ್ಯಉತ್ಪತ್ತಿ ಸ್ಥಾನರಾಗಿರುವ ಶ್ರೀಸುಧೀಂದ್ರತೀರ್ಥ ಯೋಗಿಗಳ ಪಾದಕಮಲಗಳ ಸೇವೆಯನ್ನು ಮಾಡುತ್ತೇನೆ.

**ಶ್ರೀಮತೋ ರಾಘವೇಂದ್ರಸ್ಯ ನಮಾಮಿ ಪದಪಂಕಜೇ ।**
**ಕಾಮಿತಾಶೇಷಕಲ್ಯಾಣಕಲನಾಕಲ್ಪಪಾದಪೌ ॥೧೧॥**

ಶ್ರೀರಾಘವೇಂದ್ರಗುರುಸಾರ್ವಭೌಮರು ಜ್ಞಾನ, ಭಕ್ತಿ, ವೈರಾಗ್ಯಾದಿ ಸಕಲಗುಣ ಸಂಪನ್ನರು. ಅರಳಿದ ತಾವರೆಯ ಹೂವಿನಂತಿರುವ ಅವರ ಶ್ರೇಷ್ಠವಾದ ಪಾದಕಮಲಗಳು ನಿಜ ಭಕ್ತರುಗಳಿಗೆ ಅವರು ಅಪೇಕ್ಷಿಸುವ ಸಂತಾನ, ಸಂಪತ್ತು, ಪರಿಶುದ್ಧಭಕ್ತಿ, ಉತ್ತಮ ಜ್ಞಾನ, ವಾಕ್ಪಟುತ್ವ, ಆಯುರಾರೋಗ್ಯ ಐಶ್ವರ್ಯಾದಿ ಸಕಲ ವಿಧ ಸನ್ಮಂಗಳಗಳನ್ನು ನೀಡುವುದರಲ್ಲಿ ಕಲ್ಪವೃಕ್ಷ ಸದೃಶವಾಗಿದೆ. ನಾನು ಅಂತಹ ಕರುಣಾಮೂರ್ತಿಗಳಾದ, ಪರಮಪೂಜ್ಯರಾದ ಗುರುಗಳ ಪಾದಕಮಲಗಳನ್ನು ಭಕ್ತಿಪೂರ್ವಕವಾಗಿ ನಮಿಸುತ್ತೇನೆ, ಆಶ್ರಯಿಸುತ್ತೇನೆ. ಅಪ್ಪಣ್ಣಾಚಾರ್ಯರು “ಭಜತಾಂ ಕಲ್ಪವೃಕ್ಷಾಯ” ಎಂದು ಹೇಳಿರುವಂತೆ ಭಕ್ತರ ಅಭೀಷ್ಟಗಳನ್ನು ಪೂರೈಸುವುದರಲ್ಲಿ ಕಲ್ಪವೃಕ್ಷ ಸದೃಶರು ಎಂಬುದು ಎಲ್ಲ ಭಕ್ತರಿಗೂ ಅನುಭವೈಕವೇದ್ಯವಾಗಿದೆ.

**ಮುಹುಃ ಸ್ಮಾರಿತವಾಲ್ಮೀಕಿಂ ಪುನಸ್ತಂ ನೌಮಿ ದೈಶಿಕಮ್ ।**
**ಯೋ ವಿಸ್ತೀರ್ಣಾಂ ರಾಮಕಥಾಂ ಸ್ರಗ್ಧರಾಭಿಃ ಸಮಗ್ರಹೀತ್ ॥೧೨॥**

ಪರಮ ಕರುಣಾಶಾಲಿಗಳಾದ ಶ್ರೀರಾಘವೇಂದ್ರಗುರುಸಾರ್ವಭೌಮರು “ಶ್ರೀರಾಮಚಾರಿತ್ರ್ಯ ಮಂಜರೀ" ಎಂಬ ಗ್ರಂಥವನ್ನು ರಚಿಸಿರುತ್ತಾರೆ. ಶ್ರೀ ವಾಲ್ಮೀಕಿ ಮಹರ್ಷಿಗಳು ಇಪ್ಪತ್ತನಾಲ್ಕು ಸಾವಿರ ಗ್ರಂಥಗಳಿಂದ (ಒಂದು ಗ್ರಂಥವೆಂದರೆ ಮೂವತ್ತೆರಡು ಅಕ್ಷರಗಳು) ರಚಿಸಿ ಸೂಚಿಸಿರುವ ಶ್ರೀರಾಮಾಯಣದ ಕಥೆಯನ್ನು ಶ್ರೀಗುರುರಾಘವೇಂದ್ರರು ತಮ್ಮ ಶ್ರೀರಾಮಚಾರಿತ್ರ್ಯ ಮಂಜರಿಯಲ್ಲಿ ಕೇವಲ ಹನ್ನೊಂದು ಸ್ರಗ್ಧರಾವೃತ್ತ ಶ್ಲೋಕಗಳಲ್ಲಿ ಸಂಗ್ರಹಿಸಿರುತ್ತಾರೆ. ಇದರಿಂದ ಭಕ್ತರುಗಳಿಗೆ ಪುನಃ ಪುನಃ ಶ್ರೀವಾಲ್ಮೀಕಿ ಮಹರ್ಷಿಗಳ ಸ್ಮರಣೆಯುಂಟಾಗುತ್ತದೆ. ಶ್ರೀವಾಲ್ಮೀಕಿಗಳು ವಿಸ್ತಾರವಾಗಿ ಹೇಳಿದ ರಾಮಾಯಣದ ಕಥೆಯನ್ನೇ ಶ್ರೀಗುರುಪಾದರು ಸಂಕ್ಷೇಪವಾಗಿ ಹೇಳಿರುತ್ತಾರೆ ಎಂದು ಸ್ಮರಿಸುತ್ತಲೇ ಭಕ್ತರು ಶ್ರೀರಾಮಚಾರಿತ್ರ್ಯ ಮಂಜರಿಯನ್ನು ಪಠಣ ಮಾಡುತ್ತಾ ಅರ್ಥಾನುಸಂಧಾನ ಮಾಡಿಕೊಳ್ಳುತ್ತಾ. ಮೂಲರಾಮಾಯಣವನ್ನು ಓದುವಾಗ ಶ್ರೀವಾಲ್ಮೀಕಿಗಳ ಸ್ಮರಣೆ ಆಗುವ ರೀತಿಯಲ್ಲಿಯೇ ರಾಮಚಾರಿತ್ರ್ಯ ಮಂಜರಿಯನ್ನು ಓದುವಾಗಲೂ ವಾಲ್ಮೀಕಿಗಳ ನೆನಪುಂಟಾಗುತ್ತದೆ. ಶ್ರೀಮಧ್ವಾಚಾರ್ಯರು ಶ್ರೀಮನ್ಮಹಾಭಾರತ ತಾತ್ಪರ್ಯನಿರ್ಣಯದಲ್ಲಿ ಹೇಳಿರುವ ಶ್ರೀರಾಮಚಂದ್ರನ ಕಥೆಯನ್ನೂ ಶ್ರೀಗುರುಸಾರ್ವಭೌಮರು ಸಂಗ್ರಹಿಸಿರುತ್ತಾರೆ. ಅಂತಹ ವಿಸ್ತಾರವಾದ ಚರಿತ್ರೆಯನ್ನು ಸಂಕ್ಷೇಪಿಸುವ ಮಹಾ ಗುಣಾಢ್ಯರಾದ ಶ್ರೀಗುರುರಾಘವೇಂದ್ರರನ್ನು ಸ್ತುತಿಸುತ್ತೇನೆ.

**ಮೂಕೋಽಪಿ ಯತ್ಪ್ರಸಾದೇನ ಮುಕುಂದಶಯನಾಯತೇ ।**
**ರಾಜರಾಜಾಯತೇ ರಿಕ್ತೋ ರಾಘವೇಂದ್ರಂ ತಮಾಶ್ರಯೇ ॥೧೩॥**

ಶ್ರೀಗುರುಸಾರ್ವಭೌಮರಾದ ರಾಘವೇಂದ್ರರ ಅನುಗ್ರಹವಾದರೆ ಹುಟ್ಟಿನಿಂದಲೇ ಮೂಗನಾದವನು, ಹುಟ್ಟಿನಿಂದಲೇ ಕಿವುಡವಾದವನೂ ಕೂಡ ಸಹಸ್ರನಾಲಿಗೆಗಳನ್ನು ಉಳ್ಳ, ಶ್ರೀಹರಿಪರಮಾತ್ಮನು ಪವಡಿಸುವ ಶೇಷದೇವರಂತೆ ಪಾಠ, ಪ್ರವಚನ ಮಾಡುವ ಸಾಮರ್ಥ್ಯವನ್ನು ಹೊಂದುತ್ತಾನೆ. ನುರಿತ ಮಾತುಗಾರನಾಗುತ್ತಾನೆ. ಹುಟ್ಟಿನಿಂದಲೇ ದರಿದ್ರನಾದವನೂ ಸಹಾ ನವನಿಧಿಗಳನ್ನು ಹೊಂದಿರುವ ಕುಬೇರನಂತೆ ಅಷ್ಟೈಶ್ವರ್ಯ ಸಂಪನ್ನ –ನಾಗುತ್ತಾನೆ. ಇಂತಹಾ ಪರಮಾನುಗ್ರಹ ಮಾಡುವ ಶಕ್ತಿಯನ್ನು ಹೊಂದಿರುವ ಶ್ರೀರಾಘವೇಂದ್ರಗುರುಗಳನ್ನು ನಾನು ಆಶ್ರಯಿಸುತ್ತೇನೆ, ನಮಸ್ಕರಿಸುತ್ತೇನೆ. ಎಂತಹವರೂ ಸಹಾ ಗುರುರಾಜರನ್ನು ಆಶ್ರಯಿಸಿ ಅವರಿಗೆ ಶರಣಾಗತ –ರಾದಲ್ಲಿ ಚತುರ್ವಿಧ ಪುರುಷಾರ್ಥವನ್ನು ಹೊಂದುವವರಾಗುತ್ತಾರೆ. ನಾನೂ ಸಹಾ ಅಂತಹಾ ಶ್ರೀರಾಘವೇಂದ್ರ ಗುರುಸಾರ್ವಭೌಮರ ಅನುಗ್ರಹದಿಂದಲೇ ಈ ಕಾವ್ಯವನ್ನು ರಚಿಸುತ್ತೇನೆ ಎಂಬುದು ಕವಿಗಳ ಭಾವ.

**ಪ್ರಸಾದ್ಯ ನರಪಂಚಾಸ್ಯಂ ಪ್ರಾಪ್ತಂ ವೈದುಷ್ಯಮದ್ಭುತಂ ।**
**ಯೇನ ಲಕ್ಷ್ಮೀನೃಸಿಂಹೇನ ತಾತಪಾದಂ ತಮಾಶ್ರಯೇ ॥೧೪॥**

ಶ್ರೀರಾಘವೇಂದ್ರವಿಜಯಮಹಾಕಾವ್ಯವನ್ನು ರಚಿಸಿದ ಶ್ರೀನಾರಾಯಣಾಚಾರ್ಯರ ತಂದೆಯವರು ಶ್ರೀಲಕ್ಷ್ಮೀನೃಸಿಂಹ ಆಚಾರ್ಯರು. ಪೂರ್ವಾಶ್ರಮದಲ್ಲಿ ಶ್ರೀಗುರುರಾಜರಿಗೆ ಭಾವಂದಿರು. ಅವರು ತಮ್ಮ ಕುಲದೈವನಾದ ಶ್ರೀಲಕ್ಷ್ಮೀನೃಸಿಂಹನನ್ನು ತಪಸ್ಸು ವ್ರತ ನಿಯಮಾದಿಗಳಿಂದ ಒಲಿಸಿಕೊಂಡು ಆಶ್ಚರ್ಯಕರವಾದ ಅಸಾಧಾರಣ ಪಾಂಡಿತ್ಯವನ್ನೂ ಜ್ಞಾನವನ್ನೂ ಗಳಿಸಿಕೊಂಡಿದ್ದರು. ಇಂತಹಾ ಪೂಜ್ಯರಾದ ನನ್ನ ತಂದೆಯವರನ್ನು ನನ್ನ ಈ ಕಾವ್ಯರಚನೆಯೆಂಬ ಇಷ್ಟಾರ್ಥವು ಸಿದ್ಧಿಸುವಂತೆ ಅನುಗ್ರಹಿಸಿ ಎಂದು ಪ್ರಾರ್ಥಿಸುತ್ತಾ ನಮಸ್ಕರಿಸುತ್ತೇನೆ.

**ಪ್ರಾಪ್ತಾನ್ಯನುತಿಪಾಪೌಘರಸನಾಂ ಪಾವಯಾಮ್ಯಹಮ್ ।**
**ಗುರ್ವಂತರ್ಯಾಮಿಭಗವತ್‌ಸ್ತುತಿಗಂಗಾಂಬುಮಜ್ಜನಾತ್ ॥೧೫॥**

ಜಗತ್ತಿನಲ್ಲಿ ಐಹಿಕಸುಖಪ್ರಾಪ್ತಿಗಾಗಿ ಮನುಜರು ಯೋಗ್ಯರಲ್ಲದವರನ್ನೂ ಹೊಗಳುವುದು ವಾಡಿಕೆಯಾಗಿದೆ. ಅದರಂತೆ ನಾನೂ ಸಹಾ ಲೋಭವಶನಾಗಿ ಸಾಮಾನ್ಯರನ್ನು ಸ್ತುತಿಸಿರಬಹುದು. ಅದರಿಂದ ನನಗೆ ಪಾಪವು ಬಂದಿರಬಹುದು, ಏಕೆಂದರೆ ನರಸ್ತುತಿಯು ಪಾಪಕರವಾದುದು. ನಾನು ಈ ರೀತಿಯಾಗಿ ಸಾಮಾನ್ಯ ಮಾನವರನ್ನು ಸ್ತುತಿಸಿದ್ದರಿಂದ ಲಬ್ಧವಾದ ಪಾಪಾದಿ ಕರ್ಮಗಳನ್ನು ಹೊತ್ತಿರುವ ನನ್ನ ನಾಲಿಗೆಯು ಪ್ರಸ್ತುತದಲ್ಲಿ ದೇವಸ್ವಭಾವರಾದ,

ಅಪರೋಕ್ಷಜ್ಞಾನಿಗಳಾದ, ಶ್ರೀಗುರುರಾಘವೇಂದ್ರರನ್ನೂ ಮತ್ತು ಅವರ ಅಂತರ್ಯಾಮಿಯಾದ ಶ್ರೀಮೂಲಾರಾಮಚಂದ್ರದೇವರನ್ನು ಸ್ತೋತ್ರ ಮಾಡಿ, ಆ ಪವಿತ್ರ ಸ್ತೋತ್ರವೆಂಬ ಪಾವನ ಗಂಗಾಜಲದಲ್ಲಿ ನನ್ನ ನಾಲಿಗೆಗೆ ಸ್ನಾನ ಮಾಡಿಸಿ ಅದನ್ನು ಪವಿತ್ರಗೊಳಿಸುತ್ತೇನೆ, ಜೊತೆಗೆ ನಾನೂ ಸಹಾ ಪಾವನನಾಗುತ್ತೇನೆ. ಗಂಗಾಸ್ನಾನದಿಂದ ಸಕಲ ದುರಿತಗಳೂ ನಾಶವಾಗುವಂತೆ ಗುರ್ವಂತರ್ಯಾಮಿ ಭಗವಂತನ ಸ್ತೋತ್ರದಿಂದ ಪಾಪಗಳೆಲ್ಲವೂ ನಾಶವಾಗುತ್ತದೆ ಎಂದು ಭಾವ.

**ಕಲಯೇ ಕವನಂ ಕಿಂಚಿತ್ ಕವೀನಾಂ ಸಹವಾಸತಃ ।**
**ಸಹಕಾರದ್ರು (ಪಾಟೀರಗಿರಿ) ಸಾನ್ನಿಧ್ಯಾನ್ನಿಂಬದ್ರುರಿವ ಸೌರಭಮ್ ॥೧೬॥**

ಒಂದು ಜಾತಿಯ ಮಾವಿನ ಮರವು ಅತ್ಯಂತ ಮಧುರವಾದ ಮತ್ತು ಸುವಾಸನೆಯಿಂದ ಕೂಡಿದ ಹಣ್ಣುಗಳನ್ನು ನೀಡುತ್ತದೆ. ಅದರ ಸಮೀಪದಲ್ಲಿಯೇ ಇರುವ ಬೇವಿನ ಮರವು ಅತ್ಯಂತ ಮಧುರವಾಗಿರುವ ಹಣ್ಣನ್ನು ನೀಡದಿದ್ದರೂ ಮಾವಿನ ಮರದ ಸಮೀಪದಲ್ಲಿರುವುದರಿಂದ ಒಂದು ರೀತಿಯ ಸುವಾಸನೆಯಿಂದ ಕೂಡಿರುತ್ತದೆ. ಮಲಯಪರ್ವತದಲ್ಲಿನ ಮಾವಿನ ಮರಗಳು ಅತ್ಯಂತ ಸುವಾಸನೆಯನ್ನು ಬೀರುತ್ತವೆ. ಅದರ ಸಮೀಪದ ಬೇವಿನ ಮರದಿಂದಲೂ ಸ್ವತಃ ತನ್ನಲ್ಲಿ ಯಾವ ಸುವಾಸನೆಯನ್ನು ಬೀರುವ ಶಕ್ತಿಯಿರದಿದ್ದರೂ ಮಾವಿನ ಮರದ ಸುವಾಸನೆಯು ಬೇವಿನ ಮರದ ಮೇಲೆಯೂ ಹಾದುಹೋಗುವುದರಿಂದ ಬೇವಿನ ಮರವೂ ಸಹಾ ಸುಗಂಧಯುಕ್ತವಾಗಿದ್ದಂತೆ ತೋರುತ್ತದೆ. ಇದೇ ರೀತಿಯಾಗಿ ಕವಿಗಳು "ನನ್ನಲ್ಲಿ ಯಾವುದೇ ಸ್ವತಂತ್ರ ಕವಿತಾರಚನ ಯೋಗ್ಯತೆ ಇಲ್ಲ. ನಾನು ಉತ್ತಮವಾದ, ಮಧುರವಾದ ಕವಿತಾರಚನೆಯನ್ನು ಮಾಡಲಾರೆ. ಆದರೂ ನಾನು ಬಹಳ ಪ್ರಾಜ್ಞಕವಿಗಳ ಒಡನಾಟದಲ್ಲಿರುವುದರಿಂದಲೂ, ಅವರ ಉತ್ತಮ, ಪ್ರೌಢ ಕವಿತೆಗಳ ಪರಿಚಯವಿರುವುದರಿಂದ ನಾನೂ ಸಹಾ ಕವಿತೆಯೊಂದನ್ನು ರಚಿಸಲು ಉದ್ಯುಕ್ತನಾಗಿದ್ದೇನೆ. ಮಹಾಪ್ರಾಜ್ಞ ಕವಿಗಳ ಒಡನಾಟದಿಂದ ಲಬ್ಧವಾದ ಕಿಂಚಿತ್ ಕವಿತಾರಚನ ಶಕ್ತಿಯಿಂದ ಕಾವ್ಯ ರಚಿಸಲು ಪ್ರಯತ್ನಿಸುತ್ತೇನೆ" ಎಂದು ಸ್ವಾಹಂಕಾರ ಖಂಡನೆಯನ್ನೂ ಮಾಡಿಕೊಂಡಿರುತ್ತಾರೆ. ಈ ಕವಿಗಳ ಕಾವ್ಯವಾದರೋ ಅತ್ಯಂತ ಶ್ರೇಷ್ಠವಾದ, ಅತ್ಯಂತ ರಮಣೀಯವಾದ ಮಹಾಕಾವ್ಯವಾಗಿರುತ್ತದೆ.

**ದೃಷ್ಟಂ ಗುರುಪ್ರಸದನಮದೃಷ್ಟಂ ಚ ಫಲಂ ಕೃತೇಃ ।**
**ಯಥಾ ಸ್ವಿಷ್ಟಕೃತೋ ಬ್ರಹ್ಮಸೂತ್ರಾದ್ಯಪ್ರಣವಸ್ಯ ಚ ॥೧೭॥**

ಎಲ್ಲ ಹೋಮಗಳನ್ನು ಮಾಡುವಾಗ, ಹೋಮಗಳು ಮುಗಿದ ಮೇಲೆ ಕೊನೆಯದಾಗಿ ಸ್ವಿಷ್ಟಕೃತ್ ಎಂಬ ಹೋಮವನ್ನು ಮಾಡುತ್ತಾರೆ. ಹೋಮವನ್ನು ಮಾಡುವಾಗ ಕರ್ತೃವು ತಾನು ಹೋಮ ಮಾಡುವಾಗ ಏನಾದರೂ ನ್ಯೂನಾತಿರೇಕಗಳನ್ನು ಮಾಡಿದ್ದರೆ ಆ ನ್ಯೂನಾತಿರೇಕಗಳನ್ನು ಪರಿಹರಿಸಿ ಹೋಮವು ಅತ್ಯಂತ ಶ್ರುತ್ಯುಕ್ತವಾಗಿ ಸಾಂಗವಾಗಿ ಹೋಮಿಸಲ್ಪಟ್ಟಂತೆ ಆಗಿ ಸಫಲವಾಗುವಂತೆ ಮಹಾಜ್ಞಾನಿಯಾದ ಅಗ್ನಿದೇವರೂ, ಅವರ

ಅಂತಾರ್ಯಾಮಿಯಾದ ಹರಿಣೀಪತಿ ಶ್ರೀಪರಶುರಾಮದೇವರು ಅನುಗ್ರಹಿಸಲಿ ಎಂಬುದು ಸ್ವಿಷ್ಟಕೃತ್ ಹೋಮಮಂತ್ರದ ಅಭಿಪ್ರಾಯ. ಈ ಮಂತ್ರದಲ್ಲಿ ಮಂತ್ರೋಚ್ಚಾರಣ, ನಂತರ ಆಜ್ಯ ಮುಂತಾದವುಗಳನ್ನು ಅಗ್ನಿದೇವರಿಗೆ ಸಮರ್ಪಿಸುವುದು ಮತ್ತು ಈ ರೀತಿಯಾಗಿ ಅರ್ಪಿಸಿದ ಆಹುತಿಯು ನನ್ನದಲ್ಲ ಎಂಬ ತ್ಯಾಗ ಮನೋಭಾವ ಎಂಬ ಮೂರು ಅಂಶಗಳಿವೆ. ಅವುಗಳಲ್ಲಿ ಮಂತ್ರೋಚ್ಚಾರಣ ಮತ್ತು ಹವಿಸ್ಸನ ಅರ್ಪಣೆ ಎಂಬ ಎರಡು ಅಂಶಗಳಿಗೆ ಪ್ರತ್ಯಕ್ಷ ಫಲ ಲಭ್ಯವಿದೆ. ಕೊನೆಯದಾದ ತ್ಯಾಗಕ್ಕೆ ಅದೃಷ್ಟವೇ ಫಲ. ಈ ರೀತಿಯಾಗಿ ಸ್ವಿಷ್ಟಕೃತ್ ಹೋಮಕ್ಕೆ ದೃಷ್ಟಾದೃಶ್ಟ ಫಲಗಳಿವೆ.

ಬ್ರಹ್ಮಸೂತ್ರದಲ್ಲಿ ಮೊದಲನೆಯ ಸೂತ್ರವು "ಓಂ ಓಂ ಅಥಾತೋ ಬ್ರಹ್ಮಜಿಜ್ಞಾಸಾ ಓಂ" ಎಂಬುದಾಗಿದೆ. ಇದರಲ್ಲಿರುವ ಮೊದಲನೆಯ ಓಂಕಾರಾರ್ಥವು ಬ್ರಹ್ಮ ಶಬ್ದದ ಜೊತೆಗೆ ಅನ್ವಯಿಸುತ್ತದೆ. ಅಂದರೆ ಬ್ರಹ್ಮ ಶಬ್ದವು ರೂಢಿಯಿಂದ ವಿಷ್ಣು ಎಂಬ ಅರ್ಥವನ್ನು ಬೋಧಿಸುತ್ತದೆ. ಓಂ ಶಬ್ದ ಗುಣಪೂರ್ಣ ಎಂಬ ಅರ್ಥವನ್ನು ಬೋಧಿಸುತ್ತದೆ. ಗುಣಪೂರ್ಣ ಎಂಬ ಓಂ ನ ಅರ್ಥಕ್ಕೆ ರೂಢಿಯಲ್ಲಿರುವ ವಿಷ್ಣುವಿನಲ್ಲಿ ಅಭೇದದಿಂದ ಅನ್ವಯವಿರುತ್ತದೆ. ಆದುದರಿಂದ ಅಭೇದದ ಅನ್ವಯಕ್ಕೆ ಸಂಬಂಧಿಯಾದ ಗುಣಪೂರ್ಣ ಎಂಬ ಅರ್ಥವನ್ನು ಸಮರ್ಪಿಸುವುದು ಎಂಬ ದೃಷ್ಟವಾದ (ಅಂದರೆ ಪ್ರತ್ಯಕ್ಷವಾದ) ಪ್ರಯೋಜನವು ಓಂ ಶಬ್ದಕ್ಕೆ ಬಂದಂತಾಯಿತು.

**"ಸ್ರವತ್ಯನೋಂಕೃತಂ ಬ್ರಹ್ಮ ಪರಸ್ತಾಚ್ಚ ವಿಶೀರ್ಯತೇ"** ಮೊದಲು ಓಂಕಾರವನ್ನು ಹೇಳದಿದ್ದರೆ ಬ್ರಹ್ಮ ಎಂದರೆ ವೇದ ಮತ್ತು ವೇದಾರ್ಥ ನಿರ್ಣಾಯಕವಾದ ಬ್ರಹ್ಮಸೂತ್ರವೂ ಸ್ರವಿಸುತ್ತದೆ. ಅದರ ಫಲವು ಸ್ರವಿಸಿಹೋಗುತ್ತದೆ. ಕೊನೆಯಲ್ಲಿ ಬ್ರಹ್ಮಸೂತ್ರವನ್ನು ಹೇಳದಿದ್ದರೆ ವಿಶರಣ ಎಂದರೆ ಫಲದ ನಾಶವುಂಟಾಗುತ್ತದೆ, ಎಂಬ ಅರ್ಥವುಳ್ಳ ಈ ನಿಂದಾರ್ಥವಾದದಿಂದಲೂ ಮೊದಲು ಓಂಕಾರವನ್ನು ಉಚ್ಚರಿಸಬೇಕು. ಹೀಗೆ ಸೂತ್ರದ ಮೊದಲು ಇರುವ ಓಂಕಾರವು ಹಿಂದೆ ಹೇಳಿರುವ ದೃಷ್ಟ ಫಲವನ್ನು, ನಿಂದಾರ್ಥ ವಾದದಿಂದ ಪ್ರಾಪ್ತವಾದ ಆದಿಯಲ್ಲಿ ಮಾಡುವ ಉಚ್ಚಾರಣದಿಂದ ಶ್ರವಣ ವಿಶರಣಾ ಭಾವಗಳು ಉಂಟಾಗಿ ಬ್ರಹ್ಮವಿದ್ಯೆಯ ತೇಜಸ್ವಿತೇ (ವೀರ್ಯವಂತಿಕೆ) ಎಂಬ ಅದೃಷ್ಟ ಫಲವನ್ನು ಉಂಟುಮಾಡುತ್ತದೆ. ಇದರಂತೆ ಪ್ರಕೃತ ಮಹಾಕಾವ್ಯಕ್ಕೆ ಶ್ರೀರಾಘವೇಂದ್ರಗುರುಸಾರ್ವಭೌಮರ ಪರಮಾನುಗ್ರಹವೆಂಬ ಪ್ರತ್ಯಕ್ಷ ಫಲವೂ, ಈ ಕಾವ್ಯದ ಅರ್ಥಾನುಸಂಧಾನದಿಂದ ಗುರುಗಳ ಅಂತರ್ಯಾಮಿಯಾದ ಭಗವಂತನ ಪ್ರಸಾದವೆಂಬ ಅದೃಷ್ಟ ಫಲವೂ ಬರುತ್ತದೆ. ಈ ರೀತಿಯಾಗಿ ದೃಷ್ಟಾದೃಷ್ಟ ಫಲಗಳಿಂದ ಕೂಡಿರುವ ಈ ಮಹಾಕಾವ್ಯವನ್ನು ಸಜ್ಜನರು ಪರಿಗ್ರಹಿಸಬೇಕು ಎಂದು ಭಾವ.

**ಶ್ರೇಯಾಂಸಿ ಶ್ರಯತೇ ಕೋ ವಾ ಪ್ರಸಾದೇನ ವಿನಾ ಗುರೋಃ ।**
**ಕೈವಲ್ಯಮಿವ ಗೋವಿಂದಕಾರುಣ್ಯೇನ ವಿನಾ ಜನಃ ॥೧೮॥**

ತಮ್ಮ ಪುತ್ರನಾದ ಸುಬ್ರಹ್ಮಣ್ಯನಿಗೆ, "ಮಗೂ ನಾನು ಭಜಿಸಿದವರಿಗೆ ಇಹಲೋಕದ ಸಕಲ

ಸಂಪತ್ತನ್ನೂ ಕೊಡಲು ಶಕ್ತನಿದ್ದೇನೆ. ಶಾಶ್ವತ ಸುಖವಾದ ಮೋಕ್ಷವನ್ನು ಕರುಣಿಸುವ ಶಕ್ತಿಯು ನನ್ನ ತಾತನಾದ ಶ್ರೀಹರಿಯು ಮಾತ್ರ ಕೊಡಬಲ್ಲ ಎಂಬ ಮಹಾರುದ್ರದೇವರ ವಾಕ್ಯದಿಂದಲೂ, "ಆರೋಗ್ಯಂ ಭಾಸ್ಕರಾದಿಚ್ಛೇತ್ ಶ್ರಿಯಮಿಚ್ಛೇತ್ ಹುತಾಶನಾತ್ । ಜ್ಞಾನಂ ಮಹೇಶ್ವರಾದಿಚ್ಛೇತ್ ಮೋಕ್ಷಮಿಚ್ಛೇಜ್ಜನಾರ್ದನಾತ್ ॥" ಎಂಬ ಉಕ್ತಿಯಂತೆ ಸೂರ್ಯನಿಂದ ಆರೋಗ್ಯವನ್ನೂ, ಅಗ್ನಿದೇವರಿಂದ ಸಂಪತ್ತನ್ನೂ, ಮಹಾರುದ್ರದೇವರಿಂದ ಜ್ಞಾನವನ್ನೂ, ಪಡೆಯಬೇಕೆಂದೂ ಶಾಶ್ವತ ಸುಖರೂಪವಾದ ಮೋಕ್ಷವನ್ನು ಜನಾರ್ದನನಿಂದ ಪಡೆಯಬೇಕೆಂಬುವಂತೆಯೂ, "ತಮೇವಂ ವಿದ್ವಾನಮೃತ ಇಹ ಭವತಿ ನಾನ್ಯಃ ಪಂಥಾ ವಿದ್ಯತೇ ಅಯನಾಯ" ಎಂಬಂತೆ ಪರಮಾತ್ಮನನ್ನು ಸಹಸ್ರಶೀರ್ಷತ್ವಾದಿ ಗುಣಯುಕ್ತನನ್ನಾಗಿ ತಿಳಿದವನೇ ಮೋಕ್ಷಭಾಜನನಾಗುತ್ತಾನೆ, ಮೋಕ್ಷಕ್ಕೆ ಇನ್ಯಾವ ದಾರಿಯೂ ಇಲ್ಲ ಎಂಬ ಉಕ್ತಿಯಂತೆಯೂ, ವೇದ, ಪುರಾಣಾದಿ ಸಕಲ ಶಾಸ್ತ್ರ ಪ್ರತಿಪಾದ್ಯನಾದ ಶ್ರೀಹರಿಯ ಕರುಣೆಯಿಲ್ಲದೇ ಮೋಕ್ಷವು ದೊರೆಯುವುದಿಲ್ಲ. ಇದೇ ರೀತಿಯಲ್ಲಿ ಗುರುಗಳ ಅನುಗ್ರಹ ಪ್ರಸಾದವಿಲ್ಲದೇ ಪುರುಷಾರ್ಥಗಳ ಪ್ರಾಪ್ತಿಯಿಲ್ಲ. ಮೋಕ್ಷವೆಂಬ ಶ್ರೇಯಃ ಪ್ರಾಪ್ತಿಯೂ ಆಗುವುದಿಲ್ಲ. "ಅಪ್ಯಚ್ಯುತೋ ಗುರುದ್ವಾರಾ ಪ್ರಸಾದಕೃದಹಂತ್ವಿತಿ" ನಾನೇ ಸ್ವತಃ ಮೋಕ್ಷವನ್ನು ಕೊಡಬಲ್ಲೆನಾದರೂ ಗುರುಗಳ ಅನುಗ್ರಹವನ್ನು ಉಂಟು ಮಾಡಿ ಅವರ ಅನುಗ್ರಹದ ಮೂಲಕವೇ ಮೋಕ್ಷವನ್ನು ಕೊಡಬೇಕೆಂಬುದು ನನ್ನ ಸಂಕಲ್ಪ ಎಂಬ ಪರಮಾತ್ಮನ ವಾಣಿಯಂತೆ ಶ್ರೇಯಸ್ಸಿನ ಪ್ರಾಪ್ತಿಗೆ ಗುರುಗಳ ಅನುಗ್ರಹವು ಅತ್ಯವಶ್ಯಕ. ಆದುದರಿಂದ ಗುರುಪ್ರಸಾದವು ಅನವಶ್ಯಕ ಎಂದು ಭಾವಿಸಬಾರದು. ಗುರುಗಳ ಪ್ರಸಾದವಿಲ್ಲದಿದ್ದರೆ ಶ್ರೇಯಸ್ಸು ಉಂಟಾಗುವುದಿಲ್ಲ, ಎಂಬ ರೀತಿಯಿಂದ ಅನ್ವಯ ವ್ಯತಿರೇಕಗಳು ಕಂಡು ಬರುವುದರಿಂದ ಗುರುಪ್ರಸಾದವು ಅತ್ಯವಶ್ಯಕ ಎಂಬ ಅಭಿಪ್ರಾಯ.

**ಕವಿತಾಫಲಮನ್ಯತ್ಕಿಂ ಗುರೂಣಾಂ ಗುಣವರ್ಣನಾತ್ ।**
**ಅಪವರ್ಗಂ ವಿನಾಽನ್ಯತ್ಕಿಂ ಬ್ರಹ್ಮಜಿಜ್ಞಾಸನೇ ಫಲಮ್ ॥೧೯॥**

ಶ್ರವಣ, ಮನನ, ನಿದಿಧ್ಯಾಸನ ರೂಪವಾದ ಬ್ರಹ್ಮವಿಚಾರವನ್ನು ಚಿಂತನೆ ಮಾಡುವುದರಿಂದ ಪರಮಾತ್ಮನ ವಿಷಯಕವಾದ ಅಪರೋಕ್ಷಜ್ಞಾನವನ್ನು ಪಡೆದು ಆ ಸರ್ವತಂತ್ರ ಸ್ವತಂತ್ರನಾದ ಪರಮಾತ್ಮನ ಅತ್ಯರ್ಥ (ಪರಮ) ಪ್ರಸಾದವನ್ನು ಗಳಿಸಿ ಶಾಶ್ವತಸುಖರೂಪವಾದ ಮೋಕ್ಷ ಭಾಜನರಾಗುವುದು ಬ್ರಹ್ಮಜಿಜ್ಞಾಸೆಗೆ ಫಲವು. ಇದೇ ರೀತಿಯಲ್ಲಿ ಸಾತ್ವಿಕರಾದ ಸಜ್ಜನರಿಗೆ ಕವಿತಾರಚನ ಸಾಮರ್ಥ್ಯವಿರುವಾಗ ಅದನ್ನು ಬಳಸಿಕೊಂಡು ಪರಮಾತ್ಮನ ಮತ್ತು ಗುರುಗಳ ಉತ್ತಮ ಗುಣಗಳನ್ನು ವರ್ಣನೆ ಮಾಡಬೇಕು. ಕವಿತಾರಚನ ಸಾಮರ್ಥ್ಯಕ್ಕೆ ಅದೇ ಪ್ರಯೋಜನ. ಸಾಧಾರಣ ಮನುಷ್ಯರನ್ನು ಅವರುಗಳು ಅಧಿಕಾರದಲ್ಲಿ ಇದ್ದರೆ, ನಮಗೆ ಅನುಕೂಲ ಮಾಡಿಕೊಡುತ್ತಾರೆ ಎಂಬುದಕ್ಕಾಗಿ ಅವರನ್ನು ಹೊಗಳಿ ಅಟ್ಟಕ್ಕೇರಿಸಿ ಅದರಿಂದ ಧನವನ್ನೂ, ಕೀರ್ತಿಯನ್ನು ಪಡೆಯುವುದು ಮೂರ್ಖತನ. ಈ ರೀತಿಯ ಕವಿತಾರಚನೆಯಿಂದ ಕವಿತಾಸಾಮರ್ಥ್ಯಕ್ಕೆ ಏನೂ ಪ್ರಯೋಜನವಿಲ್ಲ.

**ಗುರುಪಾದರಜಸ್ಸಂಗಾತ್ ವಿಮಲಂ ಕವನಂ ಮಮ ।**
**ಕಲುಷಂ ವಾರಿ ಕತಕರಜಸಾ ಕಿಂ ನ ನಿರ್ಮಲಮ್ ॥೨೦॥**

ಕೆರೆಗಳ ಬಾವಿಗಳ ಜಲವು ಬಗ್ಗಡ ಜಲವಾಗಿದ್ದರೆ (ಕೆಸರು ಕೆಸರಾಗಿದ್ದರೆ) ಅದನ್ನು ತಿಳಿಪಡಿಸಲು ಚಿಲ್ಲದ ಬೀಜದ ಪುಡಿಯನ್ನು ಹಾಕಿ ಶುದ್ಧಗೊಳಿಸುತ್ತಾರೆ. ಕವಿಗಳು ಈಗ ಹೇಳುವಂತೆ, ತನ್ನ ಕವಿತಾರಚನೆಯು ಮಾನವರುಗಳಲ್ಲಿರಬಹುದಾದ ದೋಷಗಳಿಂದ ಕೆಟ್ಟಿರಬಹುದಾದರೂ, ಜಗದ್ಗುರುಗಳೂ ಪರಮ ಪೂಜ್ಯರೂ ಆದ ನಮ್ಮ ಶ್ರೀಗುರುಸಾರ್ವಭೌಮ ರಾಘವೇಂದ್ರಗುರುಗಳ ಪಾದಪದ್ಮಗಳ ಧೂಳು ನನ್ನ ಈ ಕವಿತೆಯನ್ನು ಸೋಕಿರುವುದರಿಂದ ನನ್ನ ಕವಿತೆಯು ಶುದ್ಧವಾಗಿಯೇ ಆಗುತ್ತದೆ. ದೊಡ್ಡವರ ಸದ್ಗುಣಗಳನ್ನು ವರ್ಣಿಸುವ ಕವಿತೆಯು ದೋಷಗಳಿಂದ ತುಂಬಿದ್ದರೂ ಆ ಮಹಾನುಭಾವರ ಪ್ರಭಾವದಿಂದ ಶುದ್ಧವಾಗಿ ಸರ್ವಜನರಿಂದಲೂ ಮಾನ್ಯವಾಗಿ ಸ್ವೀಕರಿಸಲು ಯೋಗ್ಯವಾಗುತ್ತದೆ ಎಂದು ಭಾವ.

ಕವಿತೆಯು ನಿರ್ಮಲವಾಗಿರಬೇಕೆಂದು ಹೇಳಿದ್ದಾಯಿತು. ಅಯೋಗ್ಯರನ್ನು ಕುರಿತು ಬರೆದ ಕವಿತೆಯೂ ನಿರ್ಮಲವಾಗಿರಬಹುದು. ಅದರಿಂದ ಅದು ರಮಣೀಯವೆಂದು ಎಲ್ಲರೂ ಅದನ್ನು ಸ್ವೀಕರಿಸಬೇಕೆ ಎಂಬ ಪ್ರಶ್ನೆಗೆ ಇಲ್ಲಿ ಉತ್ತರಿಸುತ್ತಿದ್ದಾರೆ. "ನಾಯಕೋ ಯದಿ ವರ್ಣ್ಯೇತ ಲೋಕೋತ್ತರಗುಣೋತ್ತರಃ" ಕಾವ್ಯವು ಸಾಧಾರಣವಾಗಿದ್ದು ದೋಷಗಳಿಂದ ಕೂಡಿದ್ದರೂ ಅಲೌಕಿಕವಾದ ಉತ್ತಮ ಗುಣಗಳಿಂದ ಕೂಡಿದ ನಾಯಕನನ್ನು ವರ್ಣಿಸುವ ಕಾವ್ಯವಾದಲ್ಲಿ ಅದು ಸ್ವೀಕಾರ ಯೋಗ್ಯವಾಗಿರುತ್ತದೆ ಎಂಬ ನ್ಯಾಯಕ್ಕನುಗುಣವಾಗಿ ನಮ್ಮ ಕಥಾನಾಯಕರಾದ ಗುರುಗಳು ಲೋಕವನ್ನೆಲ್ಲಾ ಮೀರಿದ ಗುರುಸಾರ್ವಭೌಮರಾದುದರಿಂದ ಅವರನ್ನು ಕುರಿತು ಬರೆದ ಈ ಕಾವ್ಯವು ಎಲ್ಲ ಸಜ್ಜನರಿಂದಲೂ ಸ್ವೀಕರಿಸಲು ಯೋಗ್ಯವಾಗಿಯೇ ಇರುತ್ತದೆ ಎಂಬ ಅಭಿಪ್ರಾಯವನ್ನಿಟ್ಟುಕೊಂಡು, ದುಷ್ಟನಾದ ನಾಯಕನನ್ನು ಅಧಿಕರಿಸಿ ಬರೆದ ಕಾವ್ಯವು ತ್ಯಾಜ್ಯವಾಗುತ್ತದೆ ಎಂಬ ಉಪಮೆಯನ್ನು ನೀಡಿರುತ್ತಾರೆ.

**ರಮಣೀಯಾಪಿ ಕವಿತಾ ನ ಹೃದ್ಯಾ ಯದ್ಯಸತ್ಪರಾ ।**
**ನಿಸರ್ಗಮಧುರಾ ದುಷ್ಟಜಿಹ್ವಾಸಕ್ತೇವ ಶರ್ಕರಾ ॥೨೧॥**

ಸಕ್ಕರೆಯು ಸ್ವಭಾವತಃ ಸಿಹಿ. ಆದರೆ ಪಿತ್ತಾದಿ ರೋಗಗಳ ಬಾಧೆಯಿಂದ ನಾಲಿಗೆಯು ಕೆಟ್ಟಿರುವಾಗ ಸಕ್ಕರೆಯ ಸವಿಯು ನಾಲಿಗೆಗೆ ಗೊತ್ತಾಗದೆ ಸಕ್ಕರೆಯು ಕಹಿಯಾಗಿ ತೋರುತ್ತದೆ. ಅದರಂತೆ ಕಾವ್ಯರಚನೆಯು ಶಬ್ದ ಅರ್ಥ ಅಲಂಕಾರಾದಿಗಳಿಂದ ಕೂಡಿ, ವ್ಯಾಕರಣಬದ್ಧವಾಗಿ, ಶೃಂಗಾರಾದಿ ರಸಗಳಿಂದ ಕೂಡಿದ್ದರೂ ಸಹ ಯಾವುದೇ ಗುಣ ಸಜ್ಜನಿಕೆಯಿಲ್ಲದ ದುರ್ಜನರಾದವರನ್ನು ಹೊಗಳಲು ರಚಿಸಲ್ಪಟ್ಟಿದ್ದರೆ ಅಂತಹ ಕವಿತೆಯು ಎಂದಿಗೂ, ಯಾರಿಗೂ ರುಚಿಸುವುದಿಲ್ಲ. ಕವಿಗಳು ತಾವು ರಚಿಸುತ್ತಿರುವ ಕವಿತೆಯು ಅಂತಹಾ ಕವಿತೆಯಲ್ಲವೆಂದು ತಿಳಿಸುತ್ತಿದ್ದಾರೆ.

ಈ ಹಿಂದೆ ಗುರುಗಳ ಪಾದರಜಸ್ಸಂಬಂಧದಿಂದ ಕಾವ್ಯವು ನಿರ್ಮಲ ಎಂದಿಷ್ಟೇ ಹೇಳಿ ಆದುದರಿಂದ ನನ್ನ ಕಾವ್ಯ ಸ್ವೀಕಾರಾರ್ಹವೆಂದು ಸ್ಪಷ್ಟಪಡಿಸಿಲ್ಲ. ಈಗ ಅದನ್ನು ಸ್ಪಷ್ಟೀಕರಿಸುತ್ತಾ, ವಿನಯಪೂರ್ವಕವಾಗಿ ಕಾವ್ಯವು ಉತ್ತಮವಲ್ಲದಿದ್ದರೂ ಸ್ವೀಕಾರಕ್ಕೆ ಅರ್ಹ ಎಂಬುದಕ್ಕೆ ದೃಷ್ಟಾಂತವನ್ನು ನೀಡಿ ತಮ್ಮ ಕಾವ್ಯಸ್ವರೂಪವನ್ನು ನಮ್ಮ ಕಣ್ಣುಗಳ ಮುಂದೆ ಇಡುತ್ತಿದ್ದಾರೆ.

**ಅಭವ್ಯಮಪಿ ಮೇ ಕಾವ್ಯಂ ಸೇವ್ಯಂ ಗುರುಗುಣಾಶ್ರಯಮ್ ।**
**ಘನಾಘನಗತಂ ವಾರಿ ಯಥಾ ಲವಣವಾರಿಧೇಃ ॥೨೨॥**

ಸಮುದ್ರದ ನೀರು ಉಪ್ಪು. ಆದರೆ ಅದೇ ಸಮುದ್ರದ ನೀರು ಮೋಡವನ್ನು ಸೇರಿ ಕೆಳಗೆ ಸುರಿಯುವಾಗ ಉಪ್ಪಾಗಿ ಇರುವುದಿಲ್ಲ, ಸಿಹಿಯಾಗಿರುತ್ತದೆ. ಅದರಂತೆಯೇ ನನ್ನ ಈ ಕಾವ್ಯವು ಗುಣ, ಅಲಂಕಾರ, ಉಪಮಾದಿಗಳಿಂದ ಕೂಡಿಲ್ಲದಿರಬಹುದು. ನಿಪುಣತೆಯಿಂದ ಕೂಡಿಲ್ಲದಿರಬಹುದು. ಆದರೂ ಮಹಾ ಮಹಿಮೋಪೇತರಾದ ಗುರುಗಳ ಗುಣಗಳನ್ನು ವರ್ಣಿಸಲು ಉದ್ಯುಕ್ತವಾಗಿರುವುದರಿಂದ ಸುಜನರಿಗೆ ಈ ಕಾವ್ಯವು ಸೇವಿಸಲು ಯೋಗ್ಯವೇ ಆಗಿರುತ್ತದೆ ಎಂದು ಕವಿಗಳು ವಿವರಿಸುತ್ತಿದ್ದಾರೆ.

ಈಗ ಕವಿಗಳು ನನ್ನ ಕಾವ್ಯವನ್ನು ನೀವೆಲ್ಲರೂ ಸ್ವೀಕರಿಸಬೇಕೆಂದು ಜ್ಞಾನಿಗಳನ್ನು ವಿನಯಪೂರ್ವಕ ಪ್ರಾರ್ಥಿಸುತ್ತಾರೆ.

**ಅದೋಷಾಪ್ಯಗುಣೇತ್ಯುಕ್ತಿಸ್ತ್ಯಕ್ತುಂ ಯುಕ್ತಾ ನ ಮೇ ಬುಧೈಃ ।**
**ಪತಿವ್ರತಾಽಗುಣೇತ್ಯೇವ ಪತ್ಯಾ ಕಿಂ ತ್ಯಜ್ಯತೇ ಪ್ರಿಯಾ ॥೨೩॥**

ಲೋಕದಲ್ಲಿ ಒಬ್ಬನಿಗೆ ಪತಿವ್ರತೆಯಾದ ಪತ್ನಿ ಇರುತ್ತಾಳೆ. ಪತಿವ್ರತೆ ಎಂದರೆ ಪತಿಯನ್ನಲ್ಲದೇ ಬೇರೆ ಪುರುಷನ ಬಗ್ಗೆ ಚಿಂತಿಸುವುದಾಗಲೀ ಸಂಬಂಧವಾಗಲೀ ಹೊಂದದಿರುವುದು. ಇಂತಹಾ ದೋಷವಿಲ್ಲದ ಪ್ರೀತಿಪಾತ್ರಳಾದ ಪತ್ನಿಯಲ್ಲಿ ಚುರುಕುತನ, ಲಾವಣ್ಯ, ವಿಲಾಸ, ಸೌಂದರ್ಯಾದಿಗಳು ಇಲ್ಲದಿದ್ದರೂ ಪತಿಯಾದವನು ಆ ಪತಿವ್ರತೆಯನ್ನು ಎಂದಿಗೂ ತ್ಯಜಿಸುವುದಿಲ್ಲ. ಅದರಂತೆಯೇ ಸಹೃದಯರಾದ ಸುಜನರು ನನ್ನ ಕಾವ್ಯವನ್ನು ಬಿಡಬಾರದು. ಏಕೆಂದರೆ ಜಗತ್ತಿನಲ್ಲಿ ದೋಷವಿಲ್ಲದ, ಗುಣಭರಿತವಾದ ಕಾವ್ಯವೇ ಸೇವಿಸಲು ಯೋಗ್ಯವಾದದ್ದು. ನನ್ನ ಕಾವ್ಯವಾದರೋ ಗುರುರಾಘವೇಂದ್ರಸ್ವಾಮಿಗಳ ಪಾದದಧೂಳಿಯ ಸಂಪರ್ಕದಿಂದಲೂ, ಗುರುಗುಣಕಥನದಿಂದಲೂ ದೋಷವಿಲ್ಲದ್ದು. ಕಾವ್ಯಗುಣವು ರಸಾಲಂಕಾರವಿಲ್ಲದಿರುವುದರಿಂದ ಗುಣವಿಲ್ಲದ್ದೂ ಆಗಿರಬಹುದು. ಆದರೂ ಪಂಡಿತ ಮಂಡಳಿಯು ಕರುಣೆಯಿಂದ ದೋಷವಿಲ್ಲದ ಕಾವ್ಯವಾದುದರಿಂದ ಗುಣರಹಿತವಾಗಿದ್ದರೂ ನನ್ನ ಈ ಕಾವ್ಯವನ್ನು ಸ್ವೀಕರಿಸಬೇಕು ಎಂದು ಕವಿಗಳು ತಿಳಿಸಿದ್ದಾರೆ.

ಇದುವರೆಗೆ ಕವಿಗಳು ಸ್ವಾಹಂಕಾರ ಖಂಡನಪೂರ್ವಕವಾಗಿ ವಿನಯವಾಗಿ ಜ್ಞಾನಿಗಳನ್ನು

ಪ್ರಾರ್ಥಿಸಿದರು. ವಾಸ್ತವಿಕವಾಗಿ ಈ ನನ್ನ ಕಾವ್ಯವು ಅತ್ಯಂತ ಅದ್ಭುತವಾದದ್ದು, ಶ್ರೇಷ್ಠವಾದದ್ದು ಎಂದು ಹೇಳುತ್ತಿದ್ದಾರೆ.

**ಅದೋಷಂ ಗುಣವದ್ದೃಶ್ಯಂ ಸರ್ವೈಃ ಸರ್ವಾರ್ಥದಾಯಕಮ್ ।**
**ಪರಂ ಬ್ರಹ್ಮೇವ ಯತ್ಕಾವ್ಯಂ ಶ್ರುತ್ಯುಕ್ತಂ ತತ್ತು ದುರ್ಲಭಮ್ ॥೨೪॥**

ಲೋಕದಲ್ಲಿ ಚಿಂತಾ ಸಂತಾಪಾದಿ ಸಮಸ್ತ ದೋಷದೂರವಾಗಿರುವ, ಶುದ್ಧಾನಂದಾದಿ ಅನಂತಗುಣಪರಿಪೂರ್ಣವಾದ, ಮೋಕ್ಷಾದಿ ಚತುರ್ವಿಧ ಪುರುಷಾರ್ಥಪ್ರದವಾದ, ಅಪರೋಕ್ಷ ಜ್ಞಾನದ ಮೂಲಕ ಎಲ್ಲ ಯೋಗ್ಯ ಮುಮುಕ್ಷುಗಳಿಂದಲೂ ತಿಳಿಯಲು ಯೋಗ್ಯವಾದ, "ಸತ್ಯಂ ಜ್ಞಾನಮನಂತಂ ಬ್ರಹ್ಮ" ಇತ್ಯಾದಿ ವೇದಪ್ರತಿಪಾದ್ಯವಾದ ಲಕ್ಷಣಗಳಿಂದ ಕೂಡಿದ ಪರಬ್ರಹ್ಮವು ಅತಿ ದುರ್ಲಭ. ಎಲ್ಲರಿಗೂ ಅದನ್ನು ನೋಡಲು, ಹೊಂದಲು ಸಾಧ್ಯವಿಲ್ಲ. ಅದೇ ರೀತಿಯಲ್ಲಿ ಯಾವ ಕಾವ್ಯದೋಷವೂ ಇಲ್ಲದಿರುವ, ರಸ ಗುಣಾಲಂಕಾರಗಳಿಂದ ಪೂರ್ಣವೂ, ಅಸೂಯಾರಹಿತವೂ, ಪಂಡಿತರಿಂದ ಓದಿ ತಿಳಿಯಲು ಯೋಗ್ಯವೂ ಮೋಕ್ಷಾದಿ ಸಮಸ್ತ ಫಲದಾಯಕವೂ ಆದ (ವೇದಗಳಲ್ಲಿ ಹೊಗಳ್ಪಟ್ಟ) ಉತ್ತಮೋತ್ತಮವಾದ ಕಾವ್ಯವು ದೊರಕುವುದು ಅತಿ ಕಠಿಣ. ಎಲ್ಲ ಕಾವ್ಯಗಳಲ್ಲಿಯೂ ಕೆಲವು ದೋಷಗಳು, ಕೆಲವು ಗುಣಗಳು ಇರಬಹುದು. ಆದುದರಿಂದ ಕೆಲವು ದೋಷಗಳಿಂದ ಕೂಡಿದ್ದರೂ ಯಥಾಯೋಗ್ಯಗುಣಗಳಿಂದ ಸಂಪನ್ನವಾದ ನನ್ನ ಕಾವ್ಯವನ್ನು ಎಲ್ಲ ಗುಣಗ್ರಾಹಿಗಳು ಪರಿಗ್ರಹಿಸಬೇಕು. ವಾಸ್ತವವಾಗಿ ನನ್ನ ಕಾವ್ಯದ ದೋಷಗಳೂ ಹಿತವಾಗಿಯೇ ಇವೆ. ಕಾವ್ಯಗಳಲ್ಲಿರಬೇಕಾದ ಗುಣಗಳಿಂದಲೂ ಸಂಪನ್ನವಾಗಿದೆ. ಸರ್ವಪುರುಷಾರ್ಥದಾಯಕವಾಗಿ, ಸಕಲ ಜ್ಞಾನಿಗಳಿಂದ ಮಾನ್ಯವೂ ಆಗಿರುವುದರಿಂದ ಎಲ್ಲರಿಗೆ ದುರ್ಲಭವಾದರೂ ಪರಬ್ರಹ್ಮವು ಭಕ್ತಿ ಜ್ಞಾನಗಳಿಗೆ ದೊರಕುವಂತೆ, ಸಜ್ಜನರು ಶ್ರೀಹರಿ ವಾಯು ಗುರು ಕೃಪೆಯಿಂದ ರಚಿತವಾಗಿರುವ ಈ ಕಾವ್ಯವನ್ನು ಸ್ವೀಕರಿಸಬೇಕು ಎಂದು ಭಾವ.

ಈಗ ಕವಿಗಳು ನನ್ನ ಕಾವ್ಯವು ದೋಷರಹಿತವೇ ಆಗಿದ್ದರೂ ಯಾವನೋ ಒಬ್ಬ ಮತ್ಸರದಿಂದ ದೋಷಗಳನ್ನೇ ಹುಡುಕುತ್ತಾನೆ. ಆದರೆ ಅವನಿಗೆ ದೋಷಗಳು ಸಿಗುವುದಿಲ್ಲ. ಬದಲಿಗೆ ಅದು ಅವನ ಅಸೂಯೆಯನ್ನು ಪ್ರಕಟಗೊಳಿಸುತ್ತದೆ ಎಂದು ಈ ಪದ್ಯದಲ್ಲಿ ತಿಳಿಸುತ್ತಾರೆ.

**ಕಾವ್ಯೇ ಗವೇಷತೇ ಕಶ್ಚಿದ್ದೋಷಮೇವ ಗುಣಂ ಪರಃ ।**
**ಪಿಚುಮಂದಂ ಯಥಾ ಕಾಕಃ ಪಿಕಶ್ಚೂತಲತಾಂ ಯಥಾ ॥೨೫॥**

ನೀಚವಾದ ಕಾಗೆಯು ತನ್ನ ಸ್ವಭಾವಕ್ಕೆ ತಕ್ಕಂತೆ ಕಹಿಯಾಗಿರುವ ಬೇವಿನ ಚಿಗುರು ಹಣ್ಣುಗಳನ್ನು ಹುಡುಕುತ್ತಾ ಇರುತ್ತದೆ. ಹಾಗೆಯೇ ಕೆಲವು ಹೆಸರು ಹೇಳಲು ಅಯೋಗ್ಯರಾದ ನೀಚರು ಕಾವ್ಯದಲ್ಲಿನ ಗುಣಗಳನ್ನು ನೋಡದೇ ಕೇವಲ ದೋಷ ಹುಡುಕುವುದರಲ್ಲೇ ನಿರತರಾಗಿರುತ್ತಾರೆ. ಕೋಗಿಲೆಯಾದರೋ ತನ್ನ ಸ್ವಭಾವಕ್ಕೆ ಅನುಗುಣವಾಗಿ ಒಗಚಾಗಿಯೂ

ಸಿಹಿಯಾಗಿಯೂ ಇರುವ ಮಾವಿನ ಚಿಗುರನ್ನೇ ಅರಸುತ್ತಾ ಹೋಗಿ ಅದನ್ನು ಅಸ್ವಾದಿಸಿ ಸಂತೋಷಪಡುತ್ತದೆ. ಉತ್ತಮ ಹೃದಯವಂತಿಕೆಯನ್ನುಳ್ಳ ಸುಜನರು ಕಾವ್ಯದಲ್ಲಿ ಗುಣಗಳನ್ನು ಮಾತ್ರ ಸಂತೋಷದಿಂದ ಎಲ್ಲರಿಗೂ ತಿಳಿಸುತ್ತಾ ತಾವೂ ಆನಂದದಿಂದ ಕಾವ್ಯರಸಾಸ್ವಾದನೆ ಮಾಡುತ್ತಾರೆ. ದೋಷಗಳನ್ನು ಹುಡುಕುವುದು ದುರ್ಜನರ ಸ್ವಭಾವ – ಗುಣಗಳನ್ನು ಹುಡುಕುವುದು ಸಜ್ಜನರ ಸ್ವಭಾವ. ಆದುದರಿಂದ ಅವಿವೇಕಿಯಾದ, ಕುಹಕಿಯಾದ ದುರ್ಜನರು ನನ್ನ ಕಾವ್ಯದಲ್ಲಿ ದೋಷಗಳನ್ನು ಮಾತ್ರವೇ ಹೇಳಿ ತಮ್ಮ ಯೋಗ್ಯತೆಯನ್ನು ಪ್ರದರ್ಶಿಸಿದ ಮಾತ್ರದಿಂದ ದೋಷರಹಿತವಾದ ನನ್ನ ಕಾವ್ಯಕ್ಕೆ ಶ್ರೀಹರಿ ವಾಯು ಗುರುಗಳ ಅನುಗ್ರಹದಿಂದ ಯಾವ ರೀತಿಯ ಕುಂದು ಇರುವುದಿಲ್ಲ – ಉಂಟಾಗುವುದಿಲ್ಲ.

**ಅಸ್ಮದ್ಗುರೂಣಾಮಾಧಿಕ್ಯಂ ಕವಿಃ ಕೋ ವಾಽನುವರ್ಣಯೇತ್**
**ತಥಾಪಿ ತತ್ಪ್ರಸಾದೇನ ಭಕ್ತ್ಯಾ ಕಿಂಚಿದ್ವದಾಮ್ಯಹಮ್ ॥೨೬॥**

ನಮ್ಮ ಸ್ವರೂಪೋದ್ಧಾರಕರಾದ, ಗುರುಗಳಾದ ಶ್ರೀರಾಘವೇಂದ್ರಸ್ವಾಮಿಗಳವರು ಜ್ಞಾನ, ಭಕ್ತಿ, ವೈರಾಗ್ಯ, ತಪಸ್ಸು ಮುಂತಾದ ಯೋಗ್ಯವಾದ ಅನೇಕಾನೇಕ ಕಲ್ಯಾಣಗುಣಗಳಿಂದ ವಿಭೂಷಿತರಾಗಿ ಗುಣಗಳ ಗಣಿಯಾಗಿದ್ದಾರೆ. ಅವರ ಅನೇಕಾನೇಕ ಮಹಿಮೆಗಳನ್ನು, ಕಾರುಣ್ಯಾತಿಶಯಗಳನ್ನು ಸಂಪೂರ್ಣವಾಗಿ ವರ್ಣಿಸಲು ಜಗತ್ತಿನಲ್ಲಿ ಯಾವ ಕವಿಯೂ ಸಮರ್ಥನಲ್ಲ. ಆದರೂ ಸಹ ನಾನು ಅವರ ಪರಮಾನುಗ್ರಹಪೂರ್ವಕವಾದ ಆಶೀರ್ವಾದದಿಂದಲೂ, ಅವರ ಕರುಣೆಯಿಂದಲೂ, ಅವರಲ್ಲಿ ನನಗಿರುವ ಪರಮ ಗುರುಭಕ್ತಿಯಿಂದ ಬಲವನ್ನು ಪಡೆದು ಅವರ ಅಸಾಧಾರಣ ಗುಣಗಳಲ್ಲಿ ಕೆಲವನ್ನು ನನ್ನ ಶಕ್ತ್ಯಾನುಸಾರ ಸ್ವಲ್ಪಮಟ್ಟಿಗೆ ವರ್ಣಿಸುತ್ತೇನೆ ಎಂಬುದು ಕವಿಗಳ ಭಾವ.

"ಭಕ್ತ್ಯಾ ಕಿಂಚಿದ್ ವದಾಮಿ" ಎಂದು ಪ್ರತಿಜ್ಞೆ ಮಾಡಿದ ಕವಿಗಳು ಮುಂದಿನ ಹದಿನಾಲ್ಕು ಶ್ಲೋಕಗಳಿಂದ ಕುಲಕದಿಂದ (ಐದು ಮತ್ತು ಅದಕ್ಕಿಂತ ಹೆಚ್ಚಿನ ಶ್ಲೋಕಗಳಲ್ಲಿ ಒಂದೇ ವಿಷಯ (ಕ್ರಿಯಾನ್ವಯ) ಬಂದರೆ ಕುಲಕ) ವಿಚಿತ್ರವಾದ ಶೈಲಿಯಿಂದ ಕೆಲವು ಮಹಿಮಾತಿಶಯಗಳನ್ನು ಸ್ತೋತ್ರ ಮಾಡುತ್ತಾರೆ.

**ದೇವಾನಾಮಿವ ದೇವೇಂದ್ರೋ ಯೋ ದತ್ತ ಇವ ಯೋಗಿನಾಮ್ ।**
**ದುಗ್ಧಾಬ್ಧಿರಿವ ಸಿಂಧೂನಾಂ ಗುರೂಣಾಮಿವ ಪೂರ್ಣಧೀಃ ॥೨೭॥**

ದೇವತ್ವದಿಂದ ಕೂಡಿದ ಎಲ್ಲ ದೇವತೆಗಳ ಮಧ್ಯದಲ್ಲಿ ಪರಮೈಶ್ವರ್ಯಭರಿತನಾದ ದೇವತೆಗಳ ರಾಜನಾದ ದೇವೇಂದ್ರನು ಶೋಭಿಸುತ್ತಾನೆ. ಇದೇ ರೀತಿಯಲ್ಲಿ ನಮ್ಮ ಗುರುಸಾರ್ವಭೌಮರು ಗುರುತ್ವಧರ್ಮವುಳ್ಳ ಸಕಲ ಗುರುಗಳಲ್ಲಿರುವ ಐಶ್ವರ್ಯಗಳಿಗಿಂತಲೂ ಮಿಗಿಲಾದ ಅನೇಕ ವಿಧವಾದ ಲೌಕಿಕ–ವೈದಿಕ ಐಶ್ವರ್ಯಗಳಿಂದ ಕೂಡಿ ಶೋಭಿಸುತ್ತಿದ್ದಾರೆ. ಯೋಗಶಕ್ತಿಯೆಂಬ

ಧರ್ಮದಿಂದ ಒಡಗೂಡಿದ ಸಮಸ್ತ ಯೋಗಿಗಳ ಮಧ್ಯದಲ್ಲಿ ದತ್ತಾತ್ರೇಯನು ಹೇಗೆ ಅತಿಶಯವಾದ ಯಮಾದಿ ನಿದಿಧ್ಯಾಸನ ಪರ್ಯಂತವಾದ ಯೋಗಶಕ್ತಿಯಿಂದೊಡ-ಗೂಡಿದ್ದಾನೋ ಅದರಂತೆ ನಮ್ಮ ಶ್ರೀಗುರುರಾಘವೇಂದ್ರರು ಉತ್ತಮೋತ್ತಮ ಯೋಗಿವರ್ಯರಾಗಿದ್ದಾರೆ.

ಗುರುರಾಜರ ಮಹಿಮಾ ವರ್ಣನೆಯನ್ನು ಕವಿಗಳು ಮುಂದುವರೆಸುತ್ತಾರೆ.

**ತಿಗ್ಮಾಂಶುರಿವ ತೇಜಸ್ವೀ ಶೀತಾಂಶುರಿವ ಶೀತಲಃ ।**
**ಯಸ್ಸಿಂಧುರಿವ ಗಂಭೀರೋ ಧರಾಧರ ಇವ ಸ್ಥಿರಃ ॥೨೮॥**

ಶ್ರೀಗುರುರಾಘವೇಂದ್ರಗುರುಸಾರ್ವಭೌಮರು ಸೂರ್ಯನಂತೆ ಇತರ ಪ್ರಕಾಶಗಳನ್ನು ತಿರಸ್ಕರಿಸುವ ಪ್ರಖರ ತೇಜಸ್ಸಿನಿಂದ ಕೂಡಿದವರಾಗಿದ್ದಾರೆ. ಚಂದ್ರನಂತೆ ಅತಿ ಸೌಮ್ಯರೂಪದವರಾಗಿದ್ದು ತಮ್ಮನ್ನು ಆಶ್ರಯಿಸಿ ಬಂದ ಭಕ್ತರ ಕಣ್ಮನಗಳನ್ನು ತಣಿಸುವ ಶೀತಲ ಸ್ವರೂಪದವರಾಗಿದ್ದಾರೆ. ಸಮುದ್ರದಂತೆ ಅತ್ಯಂತ ಗಂಭೀರಸ್ವರೂಪದವರೂ, ಪರ್ವತದಂತೆ ಅತ್ಯಂತ ಸ್ಥಿರವಾಗಿಯೂ ಇರುವ ಶ್ರೀಗುರುರಾಜರು ಪರಮಾತ್ಮನಲ್ಲಿ ಏಕನಿಷ್ಠೆಯುಳ್ಳವರಾಗಿದ್ದಾರೆ. (ಆದುದರಿಂದ ಇಂತಹ ಮಹಾಮಹಿಮೋಪೇತರಾದ ಇವರನ್ನು ಸ್ತೋತ್ರ ಮಾಡಲು ನನ್ನ ಮನಸ್ಸು ಆಶಿಸುತ್ತದೆ.)

ಈ ಪದ್ಯದಲ್ಲಿ ಕವಿಗಳು ಶ್ರೀಗುರುಸಾರ್ವಭೌಮರು ಶ್ರೀಶಾರದಾದೇವಿಯ ಅನುಗ್ರಹ ಬಲದಿಂದಲೇ ವಿದ್ಯಾ ಸಂಪತ್ತನ್ನು ಪಡೆದು ಮಹಾಮಹಿಮರಾಗಿದ್ದಾರೆ ಎಂದು ವರ್ಣಿಸುತ್ತಾರೆ.

**ಶಾರದಾಯಾಃ ದಯಾಮೇವ ಶಾಸ್ತ್ರಾಣಾಂ ಪರಿಶೀಲನೇ ।**
**ವಿವಿಧಗ್ರಂಥಕರಣೇ ಯಃ ಸಹಾಯಂ ಸಮಾಶ್ರಿತಃ ॥೨೯॥**

ಮಂತ್ರಾಲಯ ಪ್ರಭುಗಳು ತಮ್ಮ ಬಾಲ್ಯದಿಂದಲೇ ತರ್ಕ, ವ್ಯಾಕರಣ, ವೇದಾಂತ, ಮೀಮಾಂಸಾದಿ ಸಕಲ ಶಾಸ್ತ್ರಗಳನ್ನು ಸರಿಯಾಗಿ, ಸಮರ್ಥವಾದ ರೀತಿಯಿಂದ ಅಭ್ಯಾಸ ಮಾಡಿ ಎಲ್ಲ ಶಾಸ್ತ್ರದ ತಿರುಳನ್ನೂ ಸರಿಯಾಗಿ ತಿಳಿದವರಾಗಿದ್ದಾರೆ. ಹಾಗೆಯೇ ತಮ್ಮ ಪೂರ್ವ ಗುರುಸಂತತಿಯ ಯತಿವರೇಣ್ಯರುಗಳು ರಚಿಸಿರುವ ಗ್ರಂಥಗಳಿಗೆ ಟೀಕಾ ಟಿಪ್ಪಣಿಗಳನ್ನು ರಚಿಸಿರುವುದಲ್ಲದೇ ಅನೇಕ ಸ್ವತಂತ್ರ ಗ್ರಂಥಗಳನ್ನೂ ರಚಿಸಿರುತ್ತಾರೆ. ಮಹತ್ತರವಾದ ಈ ಜ್ಞಾನಕಾರ್ಯವನ್ನು ಗುರುಗಳು ಮತ್ತಿತರ ಯಾವುದೇ ಮಾನವರ ಸಹಾಯವನ್ನು ಅಪೇಕ್ಷಿಸದೇ ಮಾಡಿರುತ್ತಾರೆ. ಈ ವಿಷಯದಲ್ಲಿ ಗುರುಪಾದರು ಕೇವಲ ವಿದ್ಯಾಲಕ್ಷ್ಮಿಯ ಮತ್ತು ಶ್ರೀಶಾರದಾದೇವಿಯ ಸಹಾಯವನ್ನು ಮಾತ್ರ ಅವಲಂಬಿಸಿರುತ್ತಾರೆ. ಇದರಿಂದಾಗಿ ಶ್ರೀಶಾರದಾದೇವಿಯು ಗುರುರಾಜರನ್ನು ಸರ್ವದಾ ಅನುಗ್ರಹಿಸುತ್ತಿರುತ್ತಾಳೆ ಎಂಬ ಮಹಾಮಹಿಮೆಯು ತಿಳಿದು ಬರುತ್ತದೆ. ಇಂತಹಾ ಮಹಾಮಹಿಮೋಪೇತರಾದ ಶ್ರೀಗುರುರಾಘವೇಂದ್ರರಲ್ಲಿ ನನ್ನ ಮನಸ್ಸು ರಮಿಸುತ್ತದೆ ಎಂದು ಭಾವ.

ಈಗ ಕವಿಗಳು "ವೇದವ್ರಜಾವನೋದ್ಯುಕ್ತಂ" ಎಂಬ ಪದ್ಯದಿಂದ ಗುರುರಾಜರು ಶಾರದೆಯ ಅನುಗ್ರಹವನ್ನು ಸಂಪಾದಿಸಿ ವಿದ್ಯಾದೇವಿಯನ್ನು ವಶಪಡಿಸಿಕೊಂಡಿದ್ದಾರೆ ಎಂದು ಬೇರೊಂದು ರೀತಿಯಿಂದ ವರ್ಣಿಸುತ್ತಾರೆ.

**ವೇದವ್ರಜಾವನೋದ್ಯುಕ್ತಂ ವಿದ್ಯಾದೇವೀ ವಿಲೋಕ್ಯ ಯಮ್ ।**
**ವ್ಯಸ್ಮರತ್ ಬಹುರೂಪೇಣ ತಪಸ್ಯಂತಂ ಸಮೀರಣಮ್ ॥೩೦॥**

ಶ್ರೀಗುರುರಾಘವೇಂದ್ರಗುರುಸಾರ್ವಭೌಮರು ತಮ್ಮ ವೇದವ್ಯಾಖ್ಯಾನ, ಉಪನಿಷದ್‌ಖಂಡಾರ್ಥಾದಿ ರಚನೆ, ಶಿಷ್ಯರಿಗೆ ಪಾಠ ಪ್ರವಚನ ಮಾಡುವುದು, ವೇದಾಭ್ಯಾಸ ಮಾಡಿಸುವುದು ಮುಂತಾದ ರೀತಿಯಿಂದ ವೇದಸಮೂಹದ ರಕ್ಷಣೆಯನ್ನು ಮಾಡುತ್ತಿದ್ದಾರೆ. ಇದನ್ನು ಕಂಡು ಶ್ರೀಭಾರತೀದೇವಿಯು ಮೂರುಕೋಟಿ ರೂಪಗಳಿಂದ ತಪಸ್ಸು ಮಾಡುತ್ತಿರುವ ತಮ್ಮ ಪತಿಯಾದ ವಾಯುದೇವರನ್ನೇ ಮರೆತುಬಿಟ್ಟಳು. ಶ್ರೀವಾಯುದೇವರು ಮಾಡುವ ವೇದರಕ್ಷಣೆಯ ಕಾರ್ಯವನ್ನು ಅವರ ಸತತ ಸನ್ನಿಧಾನ (ಆವೇಶ) ಯುಕ್ತರಾದ ಶ್ರೀಗುರುರಾಜರೇ ಮಾಡುತ್ತಿರುವುದರಿಂದ ಗುರುರಾಘವೇಂದ್ರರಿಗೆ ವಾಯುದೇವರು ಅನುಗ್ರಹಿಸುತ್ತಿರಬೇಕು ಎಂಬ ಭಾವನೆಯಿಂದ ತಾನೂ ಸಹಾ ಶ್ರೀಗುರುರಾಜರ ಸನಿಹದಲ್ಲಿ ಶ್ರೀವಾಯುದೇವರ ಜತೆಗೆ ನಿಂತು ರಾಯರಿಗೆ ಪರಮಾನುಗ್ರಹವನ್ನು ಮಾಡುತ್ತಿರುವಳು.

ಕಲಿಯುಗದಲ್ಲಿ ಸಾಧನಜೀವಿಗಳು ಜ್ಞಾನರಹಿತರಾಗಿದ್ದಾರೆ. ಇಂತಹ ಸಜ್ಜನರನ್ನು ಕರುಣಾಮಯರಾದ, ಮಂತ್ರಾಲಯಪ್ರಭುಗಳಾದ ಶ್ರೀರಾಘವೇಂದ್ರ ಗುರುಸಾರ್ವಭೌಮರು ಅವರನ್ನು ಉದ್ಧಾರ ಮಾಡುವ ಉದ್ದೇಶದಿಂದ ಶ್ರೀಮನ್ಮಧ್ವಸಿದ್ಧಾಂತದ ಅನೇಕ ಪ್ರೌಢ ಗ್ರಂಥಗಳನ್ನು ರಚಿಸಿ, ಉಪದೇಶಿಸಿ, ಜ್ಞಾನಿಗಳನ್ನಾಗಿ ಮಾಡಿದರು ಎಂದು ಕವಿಗಳು ಈ ಪದ್ಯದಲ್ಲಿ ವರ್ಣಿಸುತ್ತಿದ್ದಾರೆ.

**ಕಲಿಕಾಲಕಲಾಲೂನಮೂಲಜಾಲಕಲಾಲತಾ ।**
**ಯದ್ವಾಗಮೃತಸೇಕೇನ ಪುನಃ ಸಂಜಾತಪಲ್ಲವಾ ॥೩೧॥**

ಕಲಿಯುಗದ ಸಾಮರ್ಥ್ಯವು ಅಸಾಧಾರಣವಾದದ್ದು. ಅದರ ಸಾಮರ್ಥ್ಯದ ಲೇಶದಿಂದಲೇ ವೇದವಿದ್ಯೆ, ಸದಾಚಾರ, ಸತ್ಸಂಪ್ರದಾಯಾದಿ ಇನ್ನಿತರ ಸದ್ವಿದ್ಯೆಗಳು ಕೊಡಲಿಯ ಪೆಟ್ಟಿನಿಂದ ಚಿಗುರುವ ಬಳ್ಳಿಯ ಬೇರುಗಳು ಕತ್ತರಿಸಿ ಹೋಗುವಂತೆ ಬುಡಸಹಿತ ಕತ್ತರಿಸಿ ಹೋಗಿದ್ದವು. ಬೇರು ಕತ್ತರಿಸಲ್ಪಟ್ಟ ಬಳ್ಳಿಗಳಿಗೂ ಕೂಡಾ ಪುನಃ ಪಾತಿಮಾಡಿ ನೆಟ್ಟು ಅವುಗಳಿಗೆ ಅಮೃತಸೇಚನ ಮಾಡಿ ಮತ್ತೆ ಚಿಗುರುವಂತೆ ಶ್ರೀರಾಘವೇಂದ್ರಗುರುಸಾರ್ವಭೌಮರು ತಮ್ಮ ವೇದ ವ್ಯಾಖ್ಯಾನಾದಿ ಗ್ರಂಥಗಳ ರಚನೆಯಿಂದ ಮತ್ತು ತಮ್ಮ ಮಾತುಗಳೆಂಬ ಅಮೃತ ಸೇಚನದಿಂದಲೂ ವೇದಾದಿ ಸಕಲ ಸದ್ವಿದ್ಯೆಗಳು ಪುನಃ ಸಾಧು ಸಜ್ಜನರ, ಸದಾಚಾರಶೀಲರ ಜ್ಞಾನಾರ್ಜನೆಗೆ

ಅನುಕೂಲವಾಯಿತು. ವಿದ್ಯಾ ಸಂಜೀವನರಾದ ಶ್ರೀಗುರುರಾಜರು ಸಜ್ಜನರುಗಳಿಗೆ ಈ ರೀತಿಯಾಗಿ ಜ್ಞಾನೋಪದೇಶ ಮಾಡಿ ಅವರುಗಳನ್ನು ಉತ್ತಮ ಜ್ಞಾನಿಗಳನ್ನಾಗಿ ಮಾಡಿ ಅನುಗ್ರಹಿಸಿದರು. ಇಂತಹಾ ಜ್ಞಾನಭಂಡಾರರಾದ ಶ್ರೀರಾಘವೇಂದ್ರಗುರುಗಳಲ್ಲಿ ನನ್ನ ಮನಸ್ಸು ರಮಿಸುತ್ತದೆ.

ಈ ರೀತಿಯಾಗಿ ಶ್ರೀಗುರುಸಾರ್ವಭೌಮರ ಗ್ರಂಥರಚನಾ ಸಾಮರ್ಥ್ಯವನ್ನು ವರ್ಣಿಸಿದ ಕವಿಮಹೋದಯರು ಈಗ ಶ್ರೀರಾಘವೇಂದ್ರ ಗುರುಗಳ ವಾಖ್ಯಾರ್ಥ ಕೌಶಲವನ್ನು ಮುಂದಿನ ಪದ್ಯದಿಂದ ವರ್ಣಿಸುತ್ತಿದ್ದಾರೆ.

**ಲಲಾಟರೇಖಾದಂಭೇನ ಬಿರುದಾಕ್ಷರಶಾಲಿನಃ ।**
**ಜಯಸ್ತಂಭಾಯಿತಾ ಯಸ್ಯ ಪ್ರತಿಧೀರಾಃ ಪರಾಜಿತಾಃ (ಪಲಾಯಿತಾಃ) ॥೩೨॥**

ಶ್ರೀರಾಘವೇಂದ್ರಗುರುಸಾರ್ವಭೌಮರೊಡನೆ ವಾದಿಸಲು ಬಂದ ಪ್ರತಿವಾದಿವಿದ್ವಾಂಸರುಗಳು ಅವರ ವಾಗ್ವೈಖರಿಗೆ ಸೋತು ಶರಣಾದರು, ಪಲಾಯನಗೈದರು. ಪರಾಜಿತರಾದ ಅವರುಗಳ ಮನಸ್ಸಿನಲ್ಲಿ (ಹಣೆಯಲ್ಲಿ) "ಅಬ್ಬಾ, ಇವರ ವಾಗ್ವೈಭವದ ಎದುರು ನಾವುಗಳು ಎಷ್ಟರವರು" ಇತ್ಯಾದಿ ಆಶ್ಚರ್ಯಕರ ಭಾವನೆಗಳು ನಾನಾ ವಿಧವಾದ ರೇಖೆಗಳ ರೂಪದಲ್ಲಿ ಮೂಡಿದವು. "ಶ್ರೀಗುರುರಾಜರು ನಮ್ಮನ್ನು ಸೋಲಿಸಿದರು, ನಾವು ಅವರಿಂದ ಸೋತೆವು", ಇವರು ವಾಗ್ಮಿವರ್ಯರು, ಎಂಬ ಪರಾಜಯದ ಅಕ್ಷರಗಳು ಮತ್ತು ಶ್ರೀರಾಯರ ಜಯಪತ್ರಿಕೆಯ ಅಕ್ಷರಗಳು ಪ್ರತಿವಾದಿಗಳ ಹಣೆಯಲ್ಲಿ ಕಾಣಿಸುವಂತೆ ಇದ್ದವು. ಇಂತಹಾ ಶ್ರೀಗುರುರಾಜರ ಜಯಪತ್ರಿಕೆಯ ಅಕ್ಷರಗಳನ್ನು ಹೊತ್ತ ಪ್ರತಿವಾದಿಗಳು ಎಲ್ಲ ದಿಕ್ಕುಗಳಿಗೂ ಪಲಾಯನ ಮಾಡಿ ನಿಂತಾಗ ಆ ಎಲ್ಲ ದಿಕ್ಕುಗಳಲ್ಲಿ ಶ್ರೀರಾಘವೇಂದ್ರರ ಜಯಪತ್ರಿಕೆಗಳು ನಿಂತಂತೆ ಆಯಿತು ಎಂದು ಭಾವ.

"ಕಲಿಕಾಲಕಲಾಲೂನ" ಎಂಬ 31ನೆಯ ಪದ್ಯದಲ್ಲಿ ಶ್ರೀಗುರುಸಾರ್ವಭೌಮರ ವಾಕ್ (ಮಾತುಗಳು) ಅಮೃತಕ್ಕೆ ಸಮಾನವೆಂದು ಹೇಳಿದ್ದಾರೆ. ಅಮೃತವನ್ನು ಪಾನ ಮಾಡಿದವರು ನಿತ್ಯರಾಗುತ್ತಾರೆ. ನಮ್ಮ ಪಂಚೇಂದ್ರಿಯಗಳಲ್ಲಿ ಶ್ರವಣೇಂದ್ರಿಯವು ಮಾತ್ರ ನಿತ್ಯ, ಉಳಿದೆಲ್ಲ ಇಂದ್ರಿಯಗಳು ಅನಿತ್ಯ ಎಂಬುದಾಗಿ ನೈಯ್ಯಾಯಿಕರು ಹೇಳುತ್ತಾರೆ. ಉಳಿದ ಇಂದ್ರಿಯಗಳಿಗೆ ಇಲ್ಲದಿರುವ ಅಮೃತತ್ವವೂ ಎಂದರೆ ನಿತ್ಯತ್ವವೂ ಶ್ರೀಗುರುರಾಜರ ಮಾತಿಗೆ ಅಮೃತತ್ವವಿದ್ದರೇ ಕೂಡುತ್ತದೆ ಎಂದು ಕವಿಗಳು ಈ ಪದ್ಯದಲ್ಲಿ ಅನ್ಯಥಾನುಪಪತ್ತಿಯಿಂದ ವರ್ಣಿಸುತ್ತಾರೆ.

**ಶ್ರೋತ್ರ್ಯಾಣಾಂ ಶ್ರವಣಾನ್ಯಾಸನ್ ಯದ್ವಾಗಮೃತಸೇವಯಾ ।**
**ನಿತ್ಯಾನಿ ತದಯೋಗ್ಯತ್ವಾನ್ನ ತಥಾ ಹೀಂದ್ರಿಯಾಂತರಮ್ ॥೩೩॥**

ನೈಯಾಯಿಕ ರೀತಿಯಿಂದ ಚಕ್ಷುಸ್, ಘ್ರಾಣ, ರಸನಾ, ತ್ವಕ್, ಶ್ರವಣ (ಕಣ್ಣು, ಮೂಗು, ನಾಲಿಗೆ, ತ್ವಚೆ (ಚರ್ಮ), ಕಿವಿ) ಎಂಬ ಜ್ಞಾನಜನಕ ಪಂಚೇಂದ್ರಿಯಗಳಲ್ಲಿ ಕಣ್ಣು ಮುಂತಾದ

ಇಂದ್ರಿಯುಗಳು ತೇಜಸ್ಸು, ಪೃಥಿವಿ, ಜಲ, ವಾಯು ಎಂಬ ಭೂತಗಳಿಂದ ಉತ್ಪನ್ನವಾದವುಗಳಾದುದರಿಂದ ಅನಿತ್ಯಗಳು. ಶ್ರವಣೇಂದ್ರಿಯವು ಆಕಾಶರೂಪವಾದುದರಿಂದ ನಿತ್ಯವು. ಈ ನಿತ್ಯತ್ವವು ಸ್ವತಃ ಸಿದ್ಧವಾಗಿದ್ದರೂ ಸಹಾ ಅದು ಶ್ರೀರಾಘವೇಂದ್ರಗುರುಗಳ ಗ್ರಂಥವಾಗಮೃತ ಸೇವನೆಯಿಂದ ಉಂಟಾದುದು. ಅಮೃತ ಸೇವನೆಯಿಂದ ಜರಾಮರಣಗಳು ಉಂಟಾಗುವುದಿಲ್ಲವೆಂದು ಪ್ರಸಿದ್ಧಿ ಇದೆ ಎಂಬ ಅಭಿಪ್ರಾಯವನ್ನು ಇಲ್ಲಿ ವ್ಯಕ್ತಪಡಿಸಿದ್ದಾರೆ. ಕಣ್ಣು ಮೂಗು ಮೊದಲಾದ ಇತರ ಇಂದ್ರಿಯಗಳಿಗೆ ಶ್ರವಣ ಮಾಡುವ ಯೋಗ್ಯತೆ ಇಲ್ಲವಾದುದರಿಂದ ಅವು ಅನಿತ್ಯವಾಗಿಯೇ ಉಳಿದವು. ಶ್ರೀಗುರುರಾಜರ ಪರಿಮಳಯುಕ್ತವಾದ ವಾಕ್ ಸುಧಾಸೇವನೆಯಿಂದ ಶ್ರಾವಕರ ಶ್ರವಣಗಳು ನಿತ್ಯಗಳಾದವು. ಇಲ್ಲದಿದ್ದರೆ ಶ್ರವಣೇಂದ್ರಿಯಗಳಿಗೆ ಮಾತ್ರ ನಿತ್ಯತ್ವವು ಹೇಗೆ ಬರಲು ಸಾಧ್ಯ? ಆದುದರಿಂದ ಶ್ರವಣವು ನಿತ್ಯವಾದುದರಿಂದ ಶ್ರೀಗುರುರಾಜರ ಮಾತು ಅಮೃತವೆಂದು ಸಿದ್ಧಿಸುತ್ತದೆ ಎಂದು ಭಾವ.

ಈ ಪದ್ಯದಲ್ಲಿ ಶ್ರೀರಾಘವೇಂದ್ರರು ವಾದಿಗಳೊಡನೆ ವಾದಪ್ರಸಂಗವನ್ನು (ವಾದವನ್ನು) ಮಾಡಿ ಬಹಳ ಯಶಸ್ಸು ಗಳಿಸಿದರು ಎಂದು ತಿಳಿಸುತ್ತಾರೆ.

**ಪ್ರತೀಪವಿದ್ವತ್ಪಾಥೋಧಿಮಥನೋತ್ಸವಚುಂಚುನಾ ।**
**ವಾದಮಂದರಶೈಲೇನ ಯೇನಾವಾಪಿ ಯಶೋಽಮೃತಮ್ ॥೩೪॥**

ಶ್ರೀರಾಘವೇಂದ್ರಗುರುಸಾರ್ವಭೌಮರೊಂದಿಗೆ ವಾದ ಮಾಡಿದ ಪಂಡಿತರುಗಳು ವಿದ್ವತ್ ಸಮುದ್ರರೂಪರು. ಶ್ರೀಗುರುರಾಜರು ಅವರುಗಳೊಂದಿಗೆ ವಾದಮಾಡಿ ಸಮುದ್ರವನ್ನು ದೇವಾಸುರರು ಮಥಿಸಿದಂತೆ ತಮ್ಮ ವಾದವೆಂಬ ಮಂದರಪರ್ವತದಿಂದ ಮಥಿಸಿದರು. ಸಮುದ್ರದಿಂದ ಅಮೃತವು ಹುಟ್ಟಿದಂತೆ ಶ್ರೀಗುರುರಾಜರು ವಾದಮಥನದಿಂದ ಯಶೋಸಮುದ್ರರೂಪ ಕೀರ್ತಿಗಳಿಸಿದರು ಎಂದು ಭಾವ.

ಪುನಃ ಶ್ರೀಗುರುರಾಜರ ಕೀರ್ತಿಯನ್ನು ವರ್ಣಿಸುತ್ತಾರೆ.

**ಹಿರಣ್ಯಗರ್ಭಮೂರ್ತಿಸ್ಥಪುರುಷಸ್ಯೇವ ಯದ್ಯಶಃ ।**
**ತತೋ ಬಹಿಃ ಪ್ರಸೃಮರಂ ರಾಜತೇ ರೌಪ್ಯಸಂಪುಟಮ್ ॥೩೫॥**

ಚತುರ್ಮುಖ ಬ್ರಹ್ಮದೇವರಿಗೆ ಈ ಸಕಲ ಚರಾಚರ ಜಗತ್ತೇ ಶರೀರವು. "ಪಾತಾಲಮೇತಸ್ಯಹಿ ಪಾದಮೂಲಂ" ಎಂದು ಭಾಗವತದಲ್ಲಿ ಹೇಳಿರುವಂತೆ ವಿರಾಟ್ ರೂಪನಾದ ಶ್ರೀಹರಿಯು ಇಂತಹ ಬ್ರಹ್ಮಾಂಡದಲ್ಲಿ ವ್ಯಾಪ್ತನಾಗಿರುತ್ತಾನೆ. ಶ್ರೀಗುರುರಾಜರ ರಜತಧವಳ ಕೀರ್ತಿಯು ಈ ಬ್ರಹ್ಮಾಂಡದ ಹೊರಗೂ ಹರಡಿದ್ದು, ವಿರಾಡ್ರೂಪಿಯಾದ ಪರಮಾತ್ಮನನ್ನು ಒಳಗೊಂಡ ಒಂದು ಬೆಳ್ಳಿಯ ಸಂಪುಟದಂತೆ ಶೋಭಿಸುತ್ತದೆ. ಗುರುರಾಜರ ಕೀರ್ತಿಯು ಬ್ರಹ್ಮಾಂಡದ ಹೊರಗೂ ವ್ಯಾಪಿಸಿದೆ ಎಂದು ಭಾವ. ಅಥವಾ ಶಾಲಿಗ್ರಾಮ ಶಿಲೆಯಲ್ಲಿ ಸನ್ನಿಹಿತನಾದ ಪರಮಾತ್ಮನಿಗೆ ಆ

ಶಾಲಿಗ್ರಾಮ ಶಿಲೆಯ ಹೊರಗೆ ಅದಕ್ಕಿಂತ ದೊಡ್ಡದಾದ ಬೆಳ್ಳಿಯ ಸಂಪುಟವಿರುವಂತೆ ಬೆಳ್ಳಿಯ ವರ್ಣದ ಶ್ರೀರಾಘವೇಂದ್ರರಕೀರ್ತಿಯು ರಾರಾಜಿಸುತ್ತಿದೆ ಎಂದು ಭಾವ.

ಶ್ರೀರಾಘವೇಂದ್ರಗುರುಸಾರ್ವಭೌಮರು ಹಂಸನಾಮಕ ಪರಮಾತ್ಮ ಪ್ರಣೀತ ವೈದಿಕ ಸದ್ವೈಷ್ಣವ ದ್ವೈತಸಿದ್ಧಾಂತ ಪ್ರತಿಷ್ಠಾಪನಾಚಾರ್ಯರಾದ ಜಗದ್ಗುರು ಶ್ರೀಮನ್ಮಧ್ವಾಚಾರ್ಯರ ನಂತರದಲ್ಲಿ ಸಿದ್ಧಾಂತವನ್ನು ಪುನರುದ್ದೀಪನಗೊಳಿಸಿದ ಮಹಾನುಭಾವರು ಎಂದು ಮುಂದಿನ ಶ್ಲೋಕದಲ್ಲಿ ವರ್ಣಿಸುತ್ತಾರೆ.

**ಗುರುರಾದ್ಯಃ ಸ್ವಸಿದ್ಧಾಂತಪ್ರತಿಷ್ಠಾಪನಪಂಡಿತಮ್ ।**
**ಶ್ರುತ್ವಾ ಯಂ ವ್ಯಾಸನಿಕಟೇ ನಿಶ್ಚಿಂತ ಇವ ವರ್ತತೇ ॥೩೬॥**

ಜಗದ್ಗುರುಗಳಾದ ಶ್ರೀಮನ್ಮಧ್ವಾಚಾರ್ಯರು ತಮ್ಮ ಅವತಾರ ಕಾರ್ಯವನ್ನು ಮಾಡಿ ಅದೃಶ್ಯರಾಗಿ ಹೋಗಿ ಬದರಿಕಾಶ್ರಮದಲ್ಲಿ ತಮ್ಮ ಗುರುಗಳಾದ ಶ್ರೀವೇದವ್ಯಾಸದೇವರ ಸನ್ನಿಧಿಯಲ್ಲಿ ಈಗಲೂ ಇರುತ್ತಾರೆ. ಈ ಪ್ರಸಿದ್ಧಿಯನ್ನು ಇಟ್ಟುಕೊಂಡು ವರ್ಣಿಸುತ್ತಿದ್ದಾರೆ. "ನಮ್ಮ ಆದಿಗುರುಗಳಾದ ಶ್ರೀಮನ್ಮಧ್ವಾಚಾರ್ಯರು" ಶ್ರೀರಾಘವೇಂದ್ರಗುರುಗಳು ತಮ್ಮ ದ್ವೈತಸಿದ್ಧಾಂತವನ್ನು ಪುನರುದ್ದೀಪನಗೊಳಿಸುವ ಪಂಡಿತರಾಗಿದ್ದಾರೆ ಎಂಬುದನ್ನು ತಿಳಿದು ತಾವು ಮತ್ತೆ ಭರತ ಖಂಡಕ್ಕೆ ಹೋಗಿ ಸತ್ಸಿದ್ಧಾಂತದ ಪ್ರತಿಷ್ಠಾಪನೆಯ ಕಾರ್ಯ ಮಾಡಬೇಕಿಲ್ಲ ಎಂಬುದನ್ನು ಅರಿತು ಶ್ರೀವೇದವ್ಯಾಸದೇವರ ಸನ್ನಿಧಿಯಲ್ಲಿ ನಿಶ್ಚಿಂತರಾಗಿಯೋ ಎಂಬಂತೆ ಇದ್ದಾರೆ. (ಮನೆಯಲ್ಲಿ ಮಕ್ಕಳು ಪ್ರವೃದ್ಧಮಾನಕ್ಕೆ ಬಂದು ಸಂಸಾರದ ಜವಾಬ್ದಾರಿಯನ್ನು ನೋಡಿಕೊಳ್ಳುವಾಗ ಮನೆಯ ಹಿರಿಯರು ನಿಶ್ಚಿಂತೆಯಿಂದ ಇರುವಂತೆ ರಾಯರೇ ನಮ್ಮ ಕೆಲಸ ಮಾಡುತ್ತಿರುವುದರಿಂದ ಶ್ರೀಮದಾಚಾರ್ಯರು ನಿಶ್ಚಿಂತೆಯಿಂದ ಬದರಿಕಾಶ್ರಮದಲ್ಲಿ ಇದ್ದಾರೆ ಎಂದು ಉತ್ಪ್ರೇಕ್ಷಿಸಿದ್ದಾರೆ.)

ಸೃಷ್ಟಿ ಸ್ಥಿತಿ ಲಯಕರ್ತನಾದ ಸರ್ವೋತ್ತಮನಾದ ಶ್ರೀಹರಿಯು ತನ್ನ ಜಗತ್ಪಾಲನ ಕಾರ್ಯವನ್ನು ಶ್ರೀಗುರುರಾಜರೇ ಮಾಡುತ್ತಾರೆ ಎಂದು ನಿಶ್ಚಿಂತೆಯಿಂದ ಶೇಷಶಾಯಿಯಾಗಿ ಪವಡಿಸಿದ್ದಾನೆ ಎಂದು ಕವಿಗಳು ಉತ್ಪ್ರೇಕ್ಷಿಸುತ್ತಿದ್ದಾರೆ.

**ಗೋಪಾಯತಿ ಧೃಢಂ ಯಸ್ಮಿನ್ ಅವನೀದೇವತಾಕುಲಮ್ ।**
**ಶಯಾನಃ ಶೇಷಶಯ್ಯಾಯಾಂ ನಿದ್ರಾತೀವ ಹರಿಶ್ಚಿರಮ್ ॥೩೭॥**

ಶ್ರೀರಾಘವೇಂದ್ರಗುರುಸಾರ್ವಭೌಮರು ಜಗತ್ತಿನಲ್ಲಿ ಎಲ್ಲ ಸುಜೀವಿಗಳಾದ ಬ್ರಾಹ್ಮಣರನ್ನು ಚೆನ್ನಾಗಿ ರಕ್ಷಿಸುತ್ತಿದ್ದಾರೆ. ಆಗ ಶ್ರೀಮನ್ನಾರಾಯಣನು ತಾನು ಮಾಡುವ ಸಜ್ಜನ ಜಗದ್ರಕ್ಷಣೆಯ ಕಾರ್ಯವನ್ನು ತನ್ನ ಭಕ್ತಾಗ್ರೇಸರರಾದ ಶ್ರೀರಾಘವೇಂದ್ರತೀರ್ಥರು ಮಾಡುತ್ತಿರುವುದನ್ನು ಅರಿತು ಜಗದ್ರಕ್ಷಣೆಯ ಚಿಂತೆಯನ್ನು ಬಿಟ್ಟು ಶ್ವೇತದ್ವೀಪದಲ್ಲಿ ಶೇಷಶಯ್ಯೆಯ ಹಾಸಿಗೆಯಲ್ಲಿ ಮಲಗಿ ನಿದ್ರಿಸುತ್ತಿದ್ದಾನೋ ಎಂಬತ್ತಿದ್ದಾನೆ.

ತಮ್ಮ ಸ್ಮರಣೆ ಮಾಡುವ ಎಲ್ಲ ಭಕ್ತರಿಗೆ ಶ್ರೀಗುರುರಾಜರು ಸಕಲೈಶ್ವರ್ಯವನ್ನೂ ಕೊಡುತ್ತಾರೆ ಎಂಬ ಮಹಿಮೆಯನ್ನು ಮುಂದಿನ ಪದ್ಯದಿಂದ ಕವಿಗಳು ವರ್ಣಿಸುತ್ತಿದ್ದಾರೆ.

**ಪದೇ ಪದೇ ಪ್ರಪನ್ನಾನಾಂ ಸಂಪದಃ ಸ್ಮೃತಿಸಂಭವೇ ।**
**ಪರೀಭಾವಪ್ರದೇ ಯಸ್ಮಿನ್ ಶೈಲೇ ಶೇತೇ ನು ಶಂಕರಃ ॥೩೮॥**

ಶ್ರೀರಾಘವೇಂದ್ರಗುರುಸಾರ್ವಭೌಮರು ತಮ್ಮ ಪಾದಗಳಿಗೆ ಶರಣಾಗತರಾಗಿ ಬಂದ ಭಕ್ತರುಗಳಿಗೆ ತಮ್ಮ ಸ್ಮರಣ ಮಾತ್ರದಿಂದಲೇ ಸಂಪತ್ತನ್ನು ದಯಪಾಲಿಸುತ್ತಾರೆ. ಇಂತಹಾ ಮಹಾಮಹಿಮರಾದ ಗುರುಗಳು ಚಿರಕಾಲ ತಮ್ಮಲ್ಲಿ ಭಕ್ತಿಯಿಂದ ಪ್ರಾರ್ಥನೆ ಮಾಡುವವರಿಗೆ ಸಕಲೈಶ್ವರ್ಯಪ್ರದನಾದ ಈಶ್ವರನಿಗಿಂತಲೂ ಹೆಚ್ಚು ಸಂಪತ್ತನ್ನು ಕೊಟ್ಟು ಸಲಹುವ ಗುರುರಾಜರ ಮೇಲಿನ ಅಸಮಾಧಾನದಿಂದಲೋ ಎಂಬಂತೆ ರುದ್ರದೇವರು ಕೈಲಾಸಪರ್ವತದಲ್ಲಿ ವಿಶ್ರಮಿಸುತ್ತಿರುವರೋ ಎಂದು ಭಾಸವಾಗುತ್ತಿದೆ ಎಂದು ಕವಿಗಳು ವರ್ಣಿಸುತ್ತಾರೆ.

ಶ್ರೀರಾಘವೇಂದ್ರಸ್ವಾಮಿಗಳು ಶಾಸ್ತ್ರ ಗ್ರಂಥಗಳಿಗೆ ಮಾಡಿರುವ ವ್ಯಾಖ್ಯಾನಗಳು ಮೂರು ಲೋಕಗಳಲ್ಲಿಯೂ ಪ್ರಸಿದ್ಧವಾಗಿವೆಯೆಂದು ಕವಿಗಳು ಈ ಕೆಳಗಿನ ಪದ್ಯದಲ್ಲಿ ವರ್ಣಿಸುತ್ತಿದ್ದಾರೆ.

**ವ್ಯಾಖ್ಯಾಂ ಪ್ರಖ್ಯಾಪ್ಯ ವಿಖ್ಯಾತೌ ಸಂಖ್ಯಾವತ್ಸು ಯದೀರಿತಾಮ್ ।**
**ಸುರಲೋಕೇ ಸುರಗುರುಃ ಪತಾಲೇ ಫಣಿನಾಂ ಪತಿಃ ॥೩೯॥**

ಶ್ರೀರಾಘವೇಂದ್ರಗುರುಸಾರ್ವಭೌಮರು ಮಾಡಿರುವ ವ್ಯಾಖ್ಯಾನವನ್ನು ಅಂದರೆ ಶ್ರೀಮದಾಚಾರ್ಯರಿಗೆ ಪರಮ ಸಮ್ಮತವಾದ ಶ್ರೀಸೂತ್ರ ಭಾಷ್ಯಾದಿಗಳಲ್ಲಿ ವಿವರಿಸಿರುವ ಅಭಿಪ್ರಾಯವನ್ನು ಬೃಹಸ್ಪತ್ಯಾಚಾರ್ಯರು ದೇವಲೋಕದಲ್ಲಿಯೂ, ನಾಗಾಧಿಪತಿಯಾದ ಶೇಷದೇವರು ಪಾತಾಳ ಲೋಕದಲ್ಲಿಯೂ ಪಂಡಿತರಾದ ತಮ್ಮ ಶಿಷ್ಯರುಗಳಿಗೆ ಪಾಠ ಪ್ರವಚನಾದಿಗಳಿಂದ ಬೋಧಿಸಿ ತಾವು ದೊಡ್ಡ ಪಂಡಿತರೆಂದು ಪ್ರಸಿದ್ಧಿ ಹೊಂದಿದರು. ಈ ರೀತಿಯಾಗಿ ಶ್ರೀಗುರುರಾಜರು ಮೂರು ಲೋಕಗಳಲ್ಲಿಯೂ ಪ್ರಸಿದ್ಧವಾದ ಶ್ರೀಮನ್ಮಧ್ವಾಚಾರ್ಯರ ಗ್ರಂಥಗಳ ನಿಜವಾದ ಅಭಿಪ್ರಾಯಗಳನ್ನೊಳಗೊಂಡ ವ್ಯಾಖ್ಯಾನ ಗ್ರಂಥಗಳನ್ನು ರಚಿಸಿದ ಮಹಾನುಭಾವರು ಎಂದು ಭಾವ.

**ವಿಶೇಷಾಂಶ** : ಶ್ರೀರಾಘವೇಂದ್ರಗುರುಗಳು ಕರ್ಮಜ ದೇವತೆಯಾದ ಶ್ರೀಪ್ರಹ್ಲಾದರಾಜರ ಅಂಶಸಂಭೂತರು. ಆದುದರಿಂದ ತಾರತಮ್ಯದಲ್ಲಿ ಶೇಷ ಬೃಹಸ್ಪತಿಗಳಿಗಿಂತ ಕೆಳಗಿನವರು. ಹೀಗಿರುವಾಗ ಶ್ರೀರಾಯರ ಗ್ರಂಥಗಳನ್ನು ಅಧ್ಯಾಪನ ಮಾಡಿಸಿ ಶೇಷ ಬೃಹಸ್ಪತಿಗಳು ಪ್ರಸಿದ್ಧಿ ಪಡೆದರೆಂದು ಹೇಳುವುದು ಹೇಗೆ ಉಚಿತವಾಗುತ್ತದೆ ಎಂಬ ಅನುಮಾನವು ಬರಬಹುದು. ಆದರೆ ಕಾವ್ಯಗಳಲ್ಲಿ ಉತ್ಪ್ರೇಕ್ಷೆ ಅತಿಶಯೋಕ್ತಿಗಳ ಮೂಲಕ ವಿಷಯಗಳ ವರ್ಣನೆಯನ್ನು ಮಾಡಿ, ಅಂತಹ ವಿಷಯಗಳನ್ನು ತಿಳಿಸುವ ಪದ್ಧತಿಯಿದೆ. ಅದೇ ರೀತಿಯಲ್ಲಿಯೇ ಇಲ್ಲಿ

ಶೇಷ ಬೃಹಸ್ಪತಿಗಳು ರಾಯರ ವ್ಯಾಖ್ಯಾನ ಗ್ರಂಥಗಳನ್ನು ಅಧ್ಯಯನ ಮಾಡಿ ಅಧ್ಯಾಪನ ಮಾಡಿಸಿಯೇ ಪಂಡಿತರಾದರೋ ಏನೋ ಎಂಬಂತೆ ಇದೆ ಎಂಬ ಉತ್ಪ್ರೇಕ್ಷಾಲಂಕಾರವನ್ನು ಕೊಟ್ಟು ಶ್ರೀರಾಯರ ವ್ಯಾಖ್ಯಾನ ಗ್ರಂಥಗಳು ಅಷ್ಟೊಂದು ಪ್ರೌಢ ಮತ್ತು ಶ್ರೀಮದಾಚಾರ್ಯರಿಗೆ ಪರಮಸಮ್ಮತವಾದ ಉತ್ತಮವಿಷಯ ಗರ್ಭಿತವಾಗಿದೆ ಎಂಬ ಅಭಿಪ್ರಾಯವು ಬರುತ್ತದೆ.

ಬೇರೊಂದು ರೀತಿಯಲ್ಲಿಯೂ ಇಲ್ಲಿ ಸಮಾಧಾನವನ್ನು ಹೇಳಬಹುದು. ರಾಯರು ಪ್ರಹ್ಲಾದರ ಅವತಾರರು, ಪ್ರಹ್ಲಾದರಿಗೆ ತನಗಿಂತಲೂ ಉತ್ತಮರಾದ ನಾರದರ ಉಪದೇಶವಾಗಿದೆ, ಅನುಗ್ರಹವಾಗಿದೆ, ಮತ್ತು ಅವರಲ್ಲಿ ಅಸುರಾವೇಶವಿಲ್ಲ. ಪ್ರಹ್ಲಾದೋ ನಿತ್ಯ ಭಕ್ತಿಮಾನ್ ಎಂಬಂತೆ ನಿರಂತರವೂ ಶ್ರೀಹರಿಪರಮಾತ್ಮನಲ್ಲಿ ಭಕ್ತಿ ಉಳ್ಳವರು, ಶ್ರೀವಾಯುದೇವರ ಸತತ ಆವೇಶವುಳ್ಳವರು. ಆದುದರಿಂದ ಪ್ರಹ್ಲಾದರ ಅವತಾರರಾದ ಶ್ರೀರಾಯರು ರಚಿಸಿರುವ ಗ್ರಂಥಗಳನ್ನು ಬೃಹಸ್ಪತಿ–ಶೇಷರೂ ಅಧ್ಯಾಪನದಿಂದ ಪ್ರಸಿದ್ಧಿಗೊಳಿಸಿ ಪ್ರಖ್ಯಾತಿ ಹೊಂದಿದರು ಎಂದು ವರ್ಣಿಸಿರುವುದು ಪ್ರಮಾಣ ವಿರುದ್ಧವಾಗುವುದಿಲ್ಲವೆಂದು ತಿಳಿಯಬಹುದು. ಇದರಂತೆಯೇ ಹಿಂದೆ ಸಂಪತ್ತನ್ನು ಕೊಡುವ ವಿಷಯದಲ್ಲಿ ಮಹಾರುದ್ರರಿಗೆ ತಿರಸ್ಕಾರವುಂಟು ಮಾಡುತ್ತಿದ್ದರೂ ಎಂಬ ವಿಷಯವೂ ಕೂಡುತ್ತದೆ ಎಂದು ತಿಳಿಯಬೇಕು.

ಮುಂದಿನ ಶ್ಲೋಕದಲ್ಲಿಯೂ ಹೀಗೆಯೇ ತಿಳಿಯಬೇಕು. ಶ್ರೀಮನ್ನ್ಯಾಯಸುಧೆಯಲ್ಲಿ "ಪರಂ ಶ್ರೀಮತ್ಪೂರ್ಣ ಪ್ರಮತಿ ಗುರುಕಾರುಣ್ಯ ಸರಣಿಂ" ಎಂಬ ಶ್ರೀಜಯತೀರ್ಥರ ವಾಣಿಯ ಅಭಿಪ್ರಾಯದಂತೆ ರಾಯರು ನುಡಿದ ಮಾತು ಶೇಷ ರುದ್ರ ಬೃಹಸ್ಪತ್ಯಾದಿಗಳಿಗೂ ಪರಮ ಸಂಮತವೆಂಬ ಅಭಿಪ್ರಾಯವು ಇಲ್ಲಿ ಸೂಚಿತವಾಗಿದೆ.

**ಚಿತ್ತೇ ಚೇನ್ಮೃದುತಾ ಶಿರೀಷಸದೃಶೇ ಹೈಯ್ಯಂಗವೀನಂ ಶಿಲಾ**
**ಗಾಂಭೀರ್ಯಂ ಯದಿ ಯಸ್ಯ ಸೋಽಧುರುದಧಿಃ ಶಾಸ್ತ್ರೇಷು ಚೇತ್ಪಾಂಡಿತೀ ।**
**ಆಚಾರ್ಯೋ ವಿಬುಧೇಶಿತುಃ ಕಲಯತೇ ವಿದ್ಯಾರ್ಥಿತಾಮಾದರಾತ್**
**ಔದಾರ್ಯಂ ಯದಿ ಕಲ್ಪಪಾದಪಮುಖಾಃ ಸಂಭಾವಯಂತೇಽರ್ಥಿತಾಮ್ ॥೪೦॥**

ತುಪ್ಪವು ಅತ್ಯಂತ ಮೃದುವಾದುದು. ಆದರೆ ಶ್ರೀರಾಘವೇಂದ್ರಗುರುಗಳ ಶಿರೀಷ ಪುಷ್ಪದಂತೆ ಮೃದುವಾದ ಮನಸ್ಸಿನ ಕೋಮಲತೆಯನ್ನು ಒಂದು ಬಾರಿ ನೋಡಿದರೆ, ಹೊಸದಾದ ತುಪ್ಪವೂ ಶ್ರೀರಾಘವೇಂದ್ರರ ಕೋಮಲವಾದ ಚಿತ್ತದ ದೃಷ್ಟಿಯಿಂದ ಕಲ್ಲಿನಂತೆ ಕಾಣಿಸುವುದು. ಸಮುದ್ರವು ಅತ್ಯಂತ ಗಂಭೀರವೆಂದು ಪ್ರಸಿದ್ಧವಾಗಿದೆ. ಆದರೆ ನಮ್ಮ ಗುರುಗಳ ಗಾಂಭೀರ್ಯವನ್ನು ನೋಡಿದರೆ ಅತಿ ಗಂಭೀರವಾದ ಸಮುದ್ರವೂ ಒಂದು ಭಾವಿಯಂತೆ ತೋರುತ್ತದೆ. ಗುರುರಾಜರ ಶಾಸ್ತ್ರಪಾಂಡಿತ್ಯವನ್ನು ಮನಸ್ಸಿನಲ್ಲಿ ಆಲೋಚಿಸಿದರೆ ದೇವೇಂದ್ರನ ಗುರುಗಳಾದ ಬೃಹಸ್ಪತ್ಯಾಚಾರ್ಯರು ಅವರ ಪಾಂಡಿತ್ಯದಲ್ಲಿ ಅತಿಶಯ ಪ್ರೀತ್ಯಾದರಗಳಿಂದ, ಅವರ ಶಿಷ್ಯವೃತ್ತಿಯನ್ನು ಕೈಗೊಳ್ಳಬೇಕೆಂದು ಬಯಸುತ್ತಾರೆ. ಶ್ರೀರಾಘವೇಂದ್ರತೀರ್ಥರ ಔದಾರ್ಯವನ್ನು

ವಿಚಾರ ಮಾಡಿದಾಗ ಯಾಚಕರು ಕೇಳಿದ್ದನ್ನು ಕೊಡುವ, ಮಂದಾರ, ಪಾರಿಜಾತ, ಸಂತಾನ, ಕಲ್ಪವೃಕ್ಷ, ಹರಿಚಂದನವೆಂಬ ಐದು ವೃಕ್ಷಗಳೂ ಕಾಮಧೇನು ಚಿಂತಾಮಣಿಗಳೂ ತಾವೂ ಶ್ರೀರಾಘವೇಂದ್ರಗುರುಗಳಲ್ಲಿ ಬೇಡಿ ತಮ್ಮ ಯಾಚಕರ ಅಭೀಷ್ಟಗಳನ್ನು ಪೂರೈಸಬೇಕೆಂದು ಬಯಸುತ್ತವೆ ಎಂಬಂತೆ ತೋರುತ್ತದೆ. ಈ ರೀತಿಯಾಗಿ ಶ್ರೀರಾಘವೇಂದ್ರಗುರುಸಾರ್ವಭೌಮರು ಮಾರ್ದವದಲ್ಲಿ ಹೊಸ ತುಪ್ಪವನ್ನೂ, ಗಾಂಭೀರ್ಯದಲ್ಲಿ ಸಮುದ್ರವನ್ನೂ, ಶಾಸ್ತ್ರ–ಪಾಂಡಿತ್ಯದಲ್ಲಿ ಬೃಹಸ್ಪತ್ಯಾಚಾರ್ಯರನ್ನೂ, ಔದಾರ್ಯದಲ್ಲಿ ಕಾಮಧೇನು ಕಲ್ಪವೃಕ್ಷ ಮೊದಲಾದ ದಿವ್ಯ ವಸ್ತುಗಳನ್ನೂ ಮೀರಿಸಿದ್ದಾರೆ ಎಂದು ಭಾವ. ನಮ್ಮ ಈ ಗುರುಸಾರ್ವಭೌಮರು ಅತ್ಯಂತ ದಯಾಳುಗಳು, ಅತಿ ಗಂಭೀರರು, ಮಹತ್ತರವಾದ ಶಾಸ್ತ್ರಪಾಂಡಿತ್ಯಪೂರ್ಣರು ಮತ್ತು ಮಹದೌದಾರ್ಯ ಸಂಪನ್ನರು ಎಂಬುದಾಗಿ ಕಾವ್ಯಶೈಲಿಯಲ್ಲಿ ವರ್ಣಿಸಿದ್ದಾರೆ.

ದೇವಾನಾಮಿವ ದೇವೇಂದ್ರೋ ಎಂಬ ಶ್ಲೋಕದಿಂದ ಪ್ರಾರಂಭಿಸಿದ ಕುಲಕವನ್ನು ಮುಗಿಸುತ್ತಾ ಕವಿಗಳು ಈಗ ಉಪಸಂಹಾರ ಮಾಡುತ್ತಿದ್ದಾರೆ.

**ತಸ್ಮಾನ್ಮಹಾಮಹಿಮ್ನೇಽಸ್ಮೈ ಮನಃ ಸ್ಪೃಹಯತೇ ಮಮ ।**
**ತದ್ಗೌರವೇಣ ಮತ್ಕಾವ್ಯಮಂಗೀಕುರ್ವಂತು ಸಜ್ಜನಾಃ ॥೪೧॥**

ಹಿಂದೆ ಹೇಳಿದಂತೆ ನಮ್ಮ ಶ್ರೀರಾಘವೇಂದ್ರಗುರುಗಳು ಮಹಾಮಹಿಮೋಪೇತರು. ಆದ್ದರಿಂದ ನನ್ನ ಮನಸ್ಸು ಅವರನ್ನು ಸ್ತೋತ್ರ ಮಾಡಲು ಬಯಸುತ್ತದೆ. ವಿಷ್ಣುವಿನ ಭಕ್ತರಾದ ಸಜ್ಜನರಿಗೆ ಗುರುಭಕ್ತಿಯ ಮೂಲಕ ಹರಿಭಕ್ತಿಗೆ ಕಾರಣವಾದ ಗುರುಮಹಿಮೆಯನ್ನು ವರ್ಣಿಸುವ ಈ ಕಾವ್ಯವನ್ನು ಗುರುಗಳ ಮಹತ್ವದ ದೃಷ್ಟಿಯಿಂದಲೂ, ಗುರುಗಳ, ಗುರುಗುಣಗಳ ಮೇಲಿನ ಗೌರವದಿಂದಲೂ ಸಜ್ಜನರು ಸ್ವೀಕರಿಸಬೇಕು. ಅಧ್ಯಯನ ಅಧ್ಯಾಪನಗಳಿಂದ ಪ್ರಚಾರ ಮಾಡಬೇಕೆಂದು ಕವಿಗಳು ಬಯಸುತ್ತಿದ್ದಾರೆ.

ಕವಿಗಳು ಸರ್ಗದ ಕೊನೆಯಲ್ಲಿ ಭಿನ್ನವೃತ್ತದಿಂದ ಸಮಾಪ್ತಿ ಮಾಡಬೇಕೆಂಬ ಸಂಪ್ರದಾಯವಿರುವುದರಿಂದ ಈಗ ಬೇರೆ ವೃತ್ತದ ಪದ್ಯದಿಂದ ಸರ್ಗದ ಪರಿಸಮಾಪ್ತಿಯನ್ನು ಮಾಡುತ್ತಾರೆ.

**ಶ್ರೀಮತ್ಕಶ್ಯಪವಂಶವಾರ್ಧಿಶಶಿನಃ ಷಡ್ದರ್ಶಿನೀವಲ್ಲಭ–**
**ಶ್ರೀಲಕ್ಷ್ಮೀನರಸಿಂಹವಿತ್ತವಿದುಷಃ ಶ್ರೀವೇಂಕಟಾಂಬಾಮಣೇಃ(ಣೌ) ।**
**ಜಾತೇನಾಽರ್ಯದಯಾಸುಧಾಮಯಗಿರಾ ನಾರಾಯಣೇನೋದಿತೇ**
**ಕಾವ್ಯೇ ಚಾರುಣಿ ರಾಘವೇಂದ್ರವಿಜಯೇ ಸರ್ಗೋ ವಿಭಾತ್ಯಾದಿಮಃ ॥೪೨॥**

ಜ್ಞಾನಾದಿ ಗುಣಸಂಪನ್ನರಾದ ಕಶ್ಯಪರ ಗೋತ್ರವೆಂಬ ಸಮುದ್ರದಲ್ಲಿ ಚಂದ್ರನಂತೆ ಪ್ರಸಿದ್ಧರಾದ ಶ್ರೀಲಕ್ಷ್ಮೀನರಸಿಂಹಾಚಾರ್ಯರೆಂಬ ವಿದ್ವಾಂಸರು ಇದ್ದರು. ಆರು ದರ್ಶನಗಳಲ್ಲಿಯೂ ಪ್ರಸಿದ್ಧ

ವಿದ್ವಾಂಸರಾದ ಅವರಿಗೆ ವೆಂಕಟಾಂಬಾ ಎಂಬ ಧರ್ಮಪತ್ನಿ ಇದ್ದಳು. ಈ ದಂಪತಿಗಳಿಗೆ ಮಗನಾಗಿ ನಾರಾಯಣಾಚಾರ್ಯ ಎಂಬುವವನು ಹುಟ್ಟಿದನು. ತಂದೆಯಿಂದಲೇ ಎಲ್ಲ ವಿದ್ಯಾಭ್ಯಾಸಗಳನ್ನು ಮಾಡಿದ ನಾರಾಯಣಕವಿಯು ತಂದೆಯ ದಯೆಯಿಂದಲೇ ಅಮೃತದಂತಿರುವ ಮಾತುಗಳಿಂದ, ಮನೋಹರವಾದ ಶ್ರೀರಾಘವೇಂದ್ರವಿಜಯವೆಂಬ ಮಹಾಕಾವ್ಯವನ್ನು ರಚಿಸಿದನು. ಈ ಕಾವ್ಯದಲ್ಲಿ ಮೊದಲನೆಯ ಸರ್ಗವು ಸಮಾಪ್ತಿಯಾಗಿ ವಿದ್ವಾಂಸರ ಮತ್ತು ಸಹೃದಯ ಭಕ್ತರ ಎದುರು ಶೋಭಿಸುತ್ತಿದೆ.

**ವಿಶೇಷಾಂಶ :** ಕಶ್ಯಪಗೋತ್ರದ ಶ್ರೀಲಕ್ಷ್ಮೀನರಸಿಂಹಾಚಾರ್ಯ ಮತ್ತು ವೇಂಕಟಾಂಬಾ ದಂಪತಿಗಳೇ ಈ ಕಾವ್ಯದ ಕರ್ತೃಗಳಾದ ನಾರಾಯಣಾಚಾರ್ಯರ ತಂದೆ ತಾಯಿಯರು. ತಂದೆಯಿಂದಲೇ ವಿದ್ಯೆ ಕಲಿತು ಅವರ ಕರುಣೆಯಿಂದ ಒಳ್ಳೆಯ ವ್ಯುತ್ಪತ್ತಿಯನ್ನು ಪಡೆದ ಕವಿ ನಾರಾಯಣಾಚಾರ್ಯರು ಶ್ರೀರಾಘವೇಂದ್ರವಿಜಯ ಎಂಬ ಮಹಾಕಾವ್ಯವನ್ನು ಬರೆದಿದ್ದಾರೆ. ಈ ರೀತಿಯಾಗಿ ಕವಿಗಳು ತಮ್ಮ ವಂಶವಿಚಾರ ಹೇಳಿಕೊಳ್ಳುವುದು ಪರಂಪರೆಯಿಂದ ಬಂದಿದೆ. ಇದರಿಂದ ಕವಿಗಳ ಕೀರ್ತಿಯು ಕಾವ್ಯ ಇರುವವರೆಗೂ ಸ್ಥಾಯಿಯಾಗಿರುತ್ತದೆ.

ಇಲ್ಲಿಗೆ ಶ್ರೀರಾಘವೇಂದ್ರವಿಜಯ ಮಹಾಕಾವ್ಯದಲ್ಲಿ ಪ್ರಥಮ ಸರ್ಗವು ಸಮಾಪ್ತಿಯಾಯಿತು.

# ಪ್ರಥಮಸರ್ಗದ ಕಥಾಸಾರ

ಮೊದಲು ಶ್ರೀಲಕ್ಷ್ಮೀನರಸಿಂಹದೇವರ ನಖ(ಉಗುರು)ವನ್ನು ಪ್ರಾರ್ಥಿಸುತ್ತಾರೆ. ಶ್ರೀನರಸಿಂಹದೇವರ ಉಗುರಿಗೂ ದೇವರಿಗೂ ಭೇದವಿಲ್ಲ. ದೇವರು ಭಕ್ತರ ಅಭೀಷ್ಟಪ್ರದಾನ ಮಾಡಲು ದಶಾವತಾರಗಳನ್ನು ಸ್ವೀಕರಿಸಿದಂತೆ ಪರಮಾತ್ಮನ ಉಗುರೂ ಸಹಿತ ಹತ್ತು ರೂಪಗಳನ್ನು ಸ್ವೀಕರಿಸಿ ಹಿರಣ್ಯಕಶಿಪುವಿನ ಸಂಹಾರ, ಪ್ರಹ್ಲಾದನ ರಕ್ಷಣೆ ಮುಂತಾದ ಕಾರ್ಯಗಳನ್ನು ಮಾಡಿದೆ.

ಅನಂತರ ನವನೀತ ಕೃಷ್ಣನ ಸ್ತುತಿಯು ಬಂದಿದೆ. ''ದೇವತೆಗಳ ಸಮೂಹದಿಂದ ಸ್ತುತಿಸಲ್ಪಟ್ಟ ಬೆಣ್ಣೆಯನ್ನು ಕೈಯಲ್ಲಿ ಹಿಡಿದಿರುವ ಬಾಲಕೃಷ್ಣನು ನಮ್ಮ ಅಭೀಷ್ಟವನ್ನು ಕೊಡಲಿ'' ಎಂದು ಪ್ರಾರ್ಥಿಸಿ, ಅನಂತರ ''ಆದಿಗುರು-ಗಳಾದ ಶ್ರೀಮಧ್ವಾಚಾರ್ಯರೆಂಬ ಚಂದ್ರನು ನಮ್ಮ ಮನಸ್ಸಿನಲ್ಲಿ ಒಳ್ಳೆಯ ಶಬ್ದಾರ್ಥಗಳೆಂಬ ಸಮುದ್ರವನ್ನು ಉಕ್ಕಿಸಲಿ'' ಎಂದು ಪ್ರಾರ್ಥಿಸಿದ್ದಾರೆ.

ಅನಂತರ ಶಾರದೆಯನ್ನು ಸ್ತುತಿಸುತ್ತಾ ''ಶ್ರೀರಾಘವೇಂದ್ರಗುರುಗಳ ನಾಲಿಗೆಯೆಂಬ ರಂಗಸ್ಥಳದಲ್ಲಿ ನರ್ತನ ಮಾಡುವ, ಶಬ್ದ ಸಮುದ್ರವನ್ನು ಶರತ್ಕಾಲದ ಬೆಳದಿಂಗಳಿನಂತೆ ಬೆಳೆಸುವ ಶಾರದೆಯು ನಮಗೆ ರಕ್ಷಕಳಾಗಲಿ'' ಎಂದು ಪ್ರಾರ್ಥಿಸಿದ್ದಾರೆ. ಕವಿಗಳು ಮುಂದೆ ಹೀಗೆ ಹೇಳುತ್ತಾರೆ .

ವಜ್ರಮಣಿಯು ಕಠಿಣವಾಗಿದ್ದರೂ ಕಾಂಚನ (ಭಂಗಾರ)ದ ಯೋಗದಿಂದ ಸರ್ವಮಾನ್ಯವಾಗುವಂತೆ ತ್ರಿವಿಕ್ರಮಪಂಡಿತಾಚಾರ್ಯರ ಮಾತು ಗಹನವಾಗಿದ್ದರೂ ಅನುಪ್ರಾಸಾದಿ ಸುವರ್ಣ (ಒಳ್ಳೆಯ ವರ್ಣಗಳ) ಯೋಗದಿಂದ ಸಕಲ ಕವಿಗಳಿಗೂ ಮಾನ್ಯವಾಗಿದೆ. ನಾರಾಯಣಪಂಡಿತಾಚಾರ್ಯರ ವಾಣಿಯು ವೀಣೆಯ ರಣಿತದಂತೆ ಮನೋಹರವಾಗಿದೆ. ವೃಂದಾರಕ ವನದಲ್ಲಿ ವಿಕಸಿತವಾಗಿರುವ ಮಂದಾರಪುಷ್ಪದ ಮಕರಂದ ರಸದಂತಿರುವ ಶ್ರೀವ್ಯಾಸತೀರ್ಥರ ಮಾತು ನಮಗೆ ವಿಜಯವನ್ನು ಕೊಡಲಿ. ಶ್ರೀವೇದವ್ಯಾಸರ ಬ್ರಹ್ಮಸೂತ್ರಾರ್ಥದ ಉಪನ್ಯಾಸವನ್ನು ಶ್ರೀವ್ಯಾಸತೀರ್ಥರ ಬಾಯಿಯಿಂದ ಕೇಳಿದ ಮೇಲೆ ಎಂತಹ ಅಭಿಮಾನಿಯಾದ ವಿದ್ವಾಂಸನೂ ಕೂಡ ಶ್ರೀವ್ಯಾಸರಾಜರ ದಾಸನಾಗುತ್ತಾನೆ. 64ವಿದ್ಯೆಗಳನ್ನು ಬಲ್ಲ ಶ್ರೀವಿಜಯೀಂದ್ರರೆಂಬ ಜ್ಯೋತಿಸ್ಸಿಗೆ ನಮಸ್ಕಾರ. ಸಪ್ತಸ್ವರಲ್ಲಿ ವಿನಿಯೋಗಿಸಲ್ಪಟ್ಟ ಸಂಪತ್ತುಳ್ಳ, ಗದ್ಯಪದ್ಯಾತ್ಮಕವಾದ ಗ್ರಂಥರಚನೆಯಲ್ಲಿ ಪ್ರಥಮಸ್ಥಾನರಾದ ಶ್ರೀ ಸುಧೀಂದ್ರತೀರ್ಥರನ್ನು ಸೇವಿಸುತ್ತೇನೆ. ಬಯಸಿದ ಇಷ್ಟಾರ್ಥಗಳನ್ನು ಪ್ರದಾನಮಾಡುವ ಕಲ್ಪವೃಕ್ಷದಂತಿರುವ ಶ್ರೀರಾಘವೇಂದ್ರತೀರ್ಥರ ಪಾದಪದ್ಮಗಳಿಗೆ ನಮಸ್ಕಾರ ಮಾಡುತ್ತೇನೆ. ರಾಮಚರಿತ್ರ ಕುಸುಮಗಳನ್ನು ಕೇವಲ ಷಣ್ಣೊಂದು ಸ್ರಗ್ಧರಗಳಿಂದ ಗ್ರಥಿಸಿದ ಇಪ್ಪತ್ತುನಾಲ್ಕು ಸಹಸ್ರಶ್ಲೋಕಗಳಿಂದ ಶ್ರೀರಾಮಾಯಣವನ್ನು ರಚಿಸಿದ ವಾಲ್ಮೀಕಿ-ಯನ್ನು ನೆನಪು ಮಾಡಿಕೊಡುವ ಶ್ರೀರಾಘವೇಂದ್ರತೀರ್ಥರನ್ನು ಪುನಃ ನಮಸ್ಕರಿಸುತ್ತೇನೆ. ''ಯಾರ ಅನುಗ್ರಹದಿಂದ ಮೂಕನೂ ಶೇಷನಂತಾಗುತ್ತಾನೆಯೋ, ಕಡುಬಡವನೂ ಕುಬೇರನಂತೆ ಆಗುತ್ತಾನೋ ಅಂತಹ ಶ್ರೀರಾಘವೇಂದ್ರ-ತೀರ್ಥರನ್ನು ಶರಣು ಹೊಂದುತ್ತೇನೆ.''

ಶ್ರೀನರಸಿಂಹದೇವರನ್ನು ಆರಾಧಿಸಿ ಅದ್ಭುತವಾದ ಪಾಂಡಿತ್ಯವನ್ನು ಗಳಿಸಿದ ನಮ್ಮ ತಂದೆಗಳಾದ ಶ್ರೀಲಕ್ಷ್ಮೀ-ನರಸಿಂಹಾಚಾರ್ಯರನ್ನು ಮೊರೆ ಹೊಂದುತ್ತೇನೆ. ಇತರ ನರರ ಸ್ತುತಿಯಿಂದ ನನ್ನ ನಾಲಿಗೆಗೆ ಪಾಪ ಉಂಟಾಗಿದೆ. ಈಗ ಅವರ ಪರಿಹಾರಕ್ಕಾಗಿ ಗುರ್ವಂತರ್ಯಾಮಿಯಾದ ಭಗವಂತನ ಸ್ತುತಿಯೆಂಬ ಗಂಗೆಯಲ್ಲಿ ಮುಳುಗುತ್ತಿದ್ದೇನೆ.

ಚಂದನ (ಗಂಧದ ಮರ) ಕಾನನದ ಸಹವಾಸದಿಂದ ಬೇವಿನ ಮರವೂ ಸ್ವಲ್ಪ ಸುವಾಸನೆಯನ್ನು ಹೊಂದುವಂತೆ ಕವಿಗಳ ಸಹವಾಸದಿಂದ ಸ್ವಲ್ಪವಾದ ಕವಿತಾ ನಿರ್ಮಾಣವನ್ನು (ಅಪೂರ್ವವಾದ ಪ್ರಬಂಧವನ್ನು) ನಾನು ಮಾಡುತ್ತಿದ್ದೇನೆ.

ಈ ಕಾವ್ಯ ನಿರ್ಮಾಣಕ್ಕೆ ಪ್ರತ್ಯಕ್ಷ ಫಲವು ಗುರುಗಳ ಅನುಗ್ರಹ. ಅದೃಷ್ಟ ಫಲವು ಮೋಕ್ಷಪ್ರಾಪಕವಾದ ಹರಿ ಗುರುಗಳ ಅನುಗ್ರಹ. ಸ್ವಿಷ್ಟ ಕೃದ್ ಯಾಗಕ್ಕೆ ಮತ್ತು ಬ್ರಹ್ಮಸೂತ್ರದ ಮೊದಲನೆಯ ಸೂತ್ರದ ಓಂಕಾರಕ್ಕೆ ಎರಡು ಫಲಗಳಿದ್ದಂತೆ ಇದಕ್ಕೂ ಎರಡು ಫಲಗಳು. ಗೋವಿಂದನ ಕರುಣೆಯಿಲ್ಲದೆ ಮೋಕ್ಷವಿಲ್ಲ, ಗುರುಗಳ ಕರುಣೆಯಿಲ್ಲದೆ ಯಾವ ಶ್ರೇಯಸ್ಸೂ ಇಲ್ಲ. ಬ್ರಹ್ಮಜಿಜ್ಞಾಸೆಗೆ ಮೋಕ್ಷವು ಹೇಗೆ ಫಲವೋ ಅದರಂತೆ ಕವಿತೆಯ ಫಲವು ಗುರುಗಳ ಗುಣವರ್ಣನೆಯೇ ಸರಿ. ಚಿಲ್ಲಬೀಜದ ಪುಡಿಯಿಂದ ಕಲುಷಿತವಾದ ನೀರು ಸ್ವಚ್ಛವಾಗುವಂತೆ ಗುರುಪಾದದ ಧೂಳಿಯಿಂದ ನನ್ನ ಕವಿತೆಯೂ ಶುದ್ಧವಾಗುತ್ತದೆ. ನಾಲಿಗೆಯು ಕೆಟ್ಟಿದ್ದರೆ ಸಿಹಿಯಾದ ಸಕ್ಕರೆಯೂ ಕಹಿಯಾಗುವಂತೆ, ಕವಿತೆಯು ಸ್ವತಃ ಸುಂದರವಾಗಿದ್ದರೂ ದುರ್ಜನನನ್ನು ವರ್ಣಿಸಲು ಹೊರಟಿದ್ದರೆ ಗ್ರಾಹ್ಯವಲ್ಲ. ಸಮುದ್ರದ ಉಪ್ಪುನೀರು ಮೋಡದೊಡನೆ ಬೆರೆತರೆ ಸಿಹಿಯಾಗಿರುವಂತೆ ನನ್ನ ಕಾವ್ಯವು ಗುಣಾಲಂಕಾರಗಳಿಲ್ಲದಿರುವುದರಿಂದ ಚೆನ್ನಾಗಿಲ್ಲದಿದ್ದರೂ ಗುರುಗಳ ಗುಣವರ್ಣನದಿಂದ ಸೇವಿಸಲು ಯೋಗ್ಯವಾಗುತ್ತದೆ. ಪತಿವ್ರತೆಯಾದ ಹೆಂಡತಿಯಲ್ಲಿ ದಕ್ಷತೆ ಮುಂತಾದ ಗುಣವು ಕಡಿಮೆಯಾಗಿದ್ದರೂ ಹೇಗೆ ಅವಳು ತ್ಯಾಜ್ಯಳಲ್ಲವೋ ಅದರಂತೆ ಗುಣವಿಲ್ಲದಿದ್ದರೂ ದೋಷವಿಲ್ಲದಿರುವ ನನ್ನ ಕವಿತೆಯು ತ್ಯಾಜ್ಯವಲ್ಲ.

ದೋಷರಹಿತವಾದ ಗುಣಪೂರ್ಣವಾದ ಸರ್ವಾರ್ಥದಾಯಕವಾದ ವೇದಪ್ರತಿಪಾದ್ಯವಾದ ಪರಬ್ರಹ್ಮದಂತೆ ಇರುವ ಕಾವ್ಯವು ಅತ್ಯಂತ ದುರ್ಲಭ. ನನ್ನ ಕಾವ್ಯದಲ್ಲಿ ಅನೇಕ ನ್ಯೂನತೆಗಳಿರಬಹುದು. ಆದರೆ ಕಾಗೆಯು ಬೇವಿನ ಹಣ್ಣನ್ನೇ ಹುಡುಕುತ್ತದೆ. ಕೋಗಿಲೆಯು ಮಾವಿನ ಮರವನ್ನೇ ಹುಡುಕುತ್ತದೆ. ಅದರಂತೆಯೇ ದುರ್ಜನನು ಕಾವ್ಯದಲ್ಲಿ ದೋಷವನ್ನೇ ಹುಡುಕುತ್ತಾನೆ. ಸಜ್ಜನನು ಗುಣವನ್ನೇ ಅನ್ವೇಷಿಸುತ್ತಾನೆ.

ನಮ್ಮ ಗುರುಗಳ ಮಹಿಮೆಯನ್ನು ವರ್ಣಿಸಲು ಯಾರಿಗೂ ಸಾಧ್ಯವಿಲ್ಲ. ಆದರೂ ಅವರ ಅನುಗ್ರಹ ಬಲದಿಂದ, ಭಕ್ತಿಯಿಂದ ಸ್ವಲ್ಪಮಟ್ಟಿಗೆ ವರ್ಣಿಸುತ್ತೇನೆ. ದೇವತೆಗಳಲ್ಲಿ ದೇವೇಂದ್ರನಂತೆ, ಯೋಗಿಗಳಲ್ಲಿ ದತ್ತಾತ್ರೇಯನಂತೆ, ಸಮುದ್ರಗಳಲ್ಲಿ ಕ್ಷೀರಸಮುದ್ರದಂತೆ, ಗುರುಗಳಲ್ಲಿ ಪೂರ್ಣಪ್ರಜ್ಞರಂತೆ, ನಮ್ಮ ಗುರುಗಳಾದ ಶ್ರೀರಾಘವೇಂದ್ರರು ಇದ್ದಾರೆ. ಸೂರ್ಯನಂತೆ ತೇಜಸ್ವಿಗಳೂ, ಚಂದ್ರನಂತೆ ಶೀತಲರೂ, ಸಮುದ್ರದಂತೆ ಗಂಭೀರರೂ, ಪರ್ವತದಂತೆ ಅಚಲರೂ ಆದ ನಮ್ಮ ಗುರುಗಳು ಶಾರದೆಯ ದಯೆಯ ಸಹಾಯದಿಂದಲೇ ನಾನಾ ಶಾಸ್ತ್ರಪರಿಶೀಲನ ಮತ್ತು ನಾನಾ ಗ್ರಂಥಗಳ ರಚನೆಯನ್ನು ಮಾಡುತ್ತಾರೆ. ವೇದವ್ಯಾಖ್ಯಾನಾದಿಗಳಿಂದ ವೇದ-ಸಮೂಹವನ್ನು ಕಾಪಾಡುತ್ತಿರುವ ಶ್ರೀರಾಘವೇಂದ್ರತೀರ್ಥಗುರುಗಳನ್ನು ನೋಡಿ ವಿದ್ಯಾದೇವಿಯು ತನ್ನ ಪತಿಯಾದ ಶ್ರೀಮುಖ್ಯಪ್ರಾಣನ ವಿಶೇಷ ಸನ್ನಿಧಾನದಿಂದಲೇ ಇವರು ಅಸಾಧಾರಣವಾದ ಜ್ಞಾನಕಾರ್ಯವನ್ನು ನಡೆಸುತ್ತಿರು-ತ್ತಾರೆಂದು ಪ್ರತಿಕ್ಷಣದಲ್ಲಿಯೂ ತನ್ನ ಪತಿಯನ್ನು ವಿಶೇಷವಾಗಿ ಸ್ಮರಿಸುತ್ತಾ ಇವರಲ್ಲಿ ವಿಶೇಷಾನುಗ್ರಹವನ್ನು ಮಾಡುತ್ತಿರುತ್ತಾಳೆ. ಮುಖ್ಯಪ್ರಾಣನು ಮಾಡುವ ಕೆಲಸವನ್ನು ಆ ಮುಖ್ಯಪ್ರಾಣನ ಪ್ರೇರಣೆಯಿಂದ ಈ ಗುರುಗಳು ಮಾಡುತ್ತಿರುವುದೇ ಇದಕ್ಕೆ ಕಾರಣ.

ಕಲಿಕಾಲ ಬಲದಿಂದ ಮೂಲಸಹಿತ ಕತ್ತರಿಸಿ ಬಿದ್ದಿರುವ ವೇದ ವಿದ್ಯಾಲತೆಯು ಈ ರಾಘವೇಂದ್ರಗುರುಗಳ ಮಾತೆಂಬ ಅಮೃತದಿಂದ ಸಿಕ್ತವಾಗಿ ಉಜ್ಜೀವಿತವಾಯಿತು. ಶ್ರೀಗುರುರಾಜರೊಡನೆ ವಾದಮಾಡಲು ಬಂದ ವಿದ್ವಾಂಸರು ಅವರ ವಾಗ್ವೈಖರಿಯಿಂದ ಪರಾಜಿತರಾದರು. ಅವರ ಹಣೆಯಲ್ಲಿ ರೇಖೆಗಳು ಮೂಡಿಬಂದವು.

ಅದನ್ನು ನೋಡಿದರೆ ಈ ಗುರುವರ್ಯರು ನಮ್ಮನ್ನು ಸೋಲಿಸಿದರು, ನಾವು ಇವರಿಂದ ಸೋತೆವು, ಇವರು ವಾಗ್ಮಿವರ್ಯರು ಎಂಬ ಪರಾಜಯದ ಅಕ್ಷರಗಳನ್ನು ಹೊತ್ತ ಪ್ರತಿವಾದಿಗಳು ಅಷ್ಟದಿಕ್ಕುಗಳಿಗೂ ಓಡಿಹೋಗಿ ನಿಂತಾಗ ಅಲ್ಲೆಲ್ಲಾ ಶ್ರೀರಾಯರ ಜಯಸ್ತಂಭಗಳನ್ನು ನಿಲ್ಲಿಸಿದಂತಾಯಿತು. ಕವಿಗಳು ಆಕಾಶರೂಪವಾದುದರಿಂದ ಅವುಗಳನ್ನು ಶಾಸ್ತ್ರದಲ್ಲಿ ನಿತ್ಯವೆಂದು ಹೇಳುತ್ತಾರೆ. ಆದರೆ ಶ್ರೀಗುರುಗಳ ವಾಕ್ಕೆಂಬ ಅಮೃತದ ಸೇವನೆಯಿಂದಲೇ ಶ್ರೋತೃಗಳ ಶ್ರವಣಗಳು (ಕಿವಿಗಳು) ನಿತ್ಯವಾಗಿವೆ ಎಂದು ನಾನು ಹೇಳುತ್ತೇನೆ. ಪ್ರತಿವಾದಿವಿದ್ವಾಂಸರೆಂಬ ಸಮುದ್ರವನ್ನು ತನ್ನ ವಾದವೆಂಬ ಮಂದರಪರ್ವತದಿಂದ ಮಥಿಸಿ ನಮ್ಮ ಗುರುಗಳು ಕೀರ್ತಿಯೆಂಬ ಅಮೃತವನ್ನು ಪಡೆದರು. ಪರಮಾತ್ಮನ ವಿಶೇಷ ಸನ್ನಿಧಾನವುಳ್ಳ ಶಾಲಗ್ರಾಮದ ಬೆಳ್ಳಿ ಸಂಪುಟದಂತೆ ಬ್ರಹ್ಮಾಂಡದ ಹೊರಗೂ ಒಳಗೂ ನಮ್ಮ ಗುರುಗಳ ಕೀರ್ತಿಯು ಹರಡಿದೆ.

ನಮ್ಮ ಆದಿಗುರುಗಳಾದ ಶ್ರೀಮಧ್ವಾಚಾರ್ಯರು ತಮ್ಮ ಸಿದ್ಧಾಂತದ ಪ್ರತಿಷ್ಠಾಪನದಲ್ಲಿ ಪಂಡಿತರಾದ ಶ್ರೀರಾಘವೇಂದ್ರರು ಭೂಲೋಕದಲ್ಲಿ ವಿರಾಜಿಸುತ್ತಿರುವುದನ್ನು ನೋಡಿ ತಾನು ತಮ್ಮ ಗುರುಗಳಾದ ಶ್ರೀವೇದವ್ಯಾಸರ ಹತ್ತಿರ ನಿಶ್ಚಿಂತರಾಗಿರುವಂತಿದ್ದಾರೆ. ನಮ್ಮ ಗುರುಗಳು ಬ್ರಾಹ್ಮಣಸಮೂಹವನ್ನು ಚೆನ್ನಾಗಿ ಕಾಪಾಡುತ್ತಿರುವಾಗ ನೆಮ್ಮದಿಯಿಂದ ನಾರಾಯಣನು ಶೇಷಶಯನದಲ್ಲಿ ಸುಖವಾಗಿ ನಿದ್ರೆ ಮಾಡುತ್ತಾನೋ ಎಂಬಂತಿದ್ದಾನೆ. ತನ್ನನ್ನು ತಪಸ್ಸು ಮಾಡಿ ಸೇವಿಸುವವರಿಗೆ ಉತ್ತಮ ಸಂಪತ್ ಪ್ರದಾಯಕನಾದ ಶಂಕರನು ಸ್ಮರಣಮಾತ್ರದಿಂದಲೇ ಐಶ್ವರ್ಯಾದ್ಯಭೀಷ್ಟಗಳನ್ನೀಯುವ ನಮ್ಮ ಗುರುಗಳು ಶರಣಾಗತರಿಗೆ ಸಂಪತ್ತನ್ನು ಕೊಟ್ಟು ಕಾಪಾಡುತ್ತಿರುವುದನ್ನು ನೋಡಿ ತಾನು ನಿಶ್ಚಿಂತನಾಗಿ, (ಗಿರೀಶ ಎಂಬ ಹೆಸರನ್ನು ಹೊಂದಿ) ಕೈಲಾಸಗಿರಿ ಶಯನನಾಗಿದ್ದಾನೆ.

ನಮ್ಮ ಗುರುಗಳು ರಚಿಸಿರುವ ಶ್ರೀಬಾದರಾಯಣ ಸಮ್ಮತವಾದ ಶ್ರೀಮಧ್ವಾಚಾರ್ಯರಿಂದ ರಚಿತವಾದ ಭಾಷ್ಯಾನುಭಾಷ್ಯಾದಿಗಳ ವಿವರಣೆಯ ಅರ್ಥವನ್ನು ದೇವಲೋಕದಲ್ಲಿ ವಿದ್ವಾಂಸರಲ್ಲಿ ಪ್ರವಚನದಿಂದ ಪ್ರಖ್ಯಾತಪಡಿಸಿ ಬೃಹಸ್ಪತ್ಯಾಚಾರ್ಯರೂ, ಪಾತಾಳಲೋಕದ ವಿದ್ವಾಂಸರಲ್ಲಿ ಪ್ರಖ್ಯಾತಿಗೊಳಿಸಿ ಶೇಷನೂ ಪ್ರಸಿದ್ಧರಾಗಿದ್ದಾರೆ.

ನಮ್ಮ ಗುರುಗಳ ಮನಸ್ಸಿನ ಮೃದುತ್ವವನ್ನು ವಿಚಾರ ಮಾಡಿದಾಗ ಬೆಣ್ಣೆಯು ಕಲ್ಲಿನಂತೆ ಕಠಿಣ, ಗಾಂಭೀರ್ಯ-ವನ್ನು ವಿಚಾರ ಮಾಡಿದಾಗ ಆ ಸಮುದ್ರವು ಚಿಕ್ಕದಾದ ಭಾವಿಯು, ಶಾಸ್ತ್ರಪಾಂಡಿತ್ಯವನ್ನು ವಿಚಾರ ಮಾಡಿದಾಗ ದೇವತೆಗಳ ಗುರುಗಳಾದ ಬೃಹಸ್ಪತ್ಯಾಚಾರ್ಯರು ಗೌರವಾದರಗಳಿಂದ ಇವರಲ್ಲಿ ವಿದ್ಯಾಭ್ಯಾಸ ಮಾಡಲು ಬಯಸುತ್ತಾರೆ. ಔದಾರ್ಯವನ್ನು ವಿಚಾರ ಮಾಡಿದರೆ ಕಲ್ಪವೃಕ್ಷ ಕಾಮಧೇನು ಮುಂತಾದುವುಗಳೂ, ಇವರಲ್ಲಿ ಇಷ್ಟಾರ್ಥವನ್ನು ಬೇಡಲು ಆಲೋಚಿಸುತ್ತಿವೆ. ಅಂತಹ ಮಹಾನುಭಾವರು ನಮ್ಮ ಗುರುಗಳು. ಇಂತಹ ಮಹಾ-ಮಹಿಮರಾದ ಗುರುಗಳನ್ನು ವರ್ಣಿಸಲು ನಮ್ಮ ಮನಸ್ಸು ಆಸೆಪಡುತ್ತಿದೆ.

ಇಂತಹ ನಮ್ಮ ಗುರುಗಳು ಮೇಲಿನ ಗೌರವದಿಂದ ನಮ್ಮ ಕಾವ್ಯವನ್ನು ಸಜ್ಜನರು ಅಂಗೀಕರಿಸಬೇಕೆಂದು ನಮ್ಮ ಪ್ರಾರ್ಥನೆ. ಕಶ್ಯಪಗೋತ್ರವೆಂಬ ಸಮುದ್ರದಲ್ಲಿ ಚಂದ್ರನಂತೆ ಉದಯಿಸಿರುವ ಷಡ್‌ದರ್ಶಿನೀವಲ್ಲಭ ಎಂಬ ಬಿರುದಾಂಕಿತರಾದ ಶ್ರೀ ಲಕ್ಷ್ಮೀನರಸಿಂಹಾಚಾರ್ಯರಿಂದ ಶ್ರೀವೆಂಕಟಾಂಬಾ ಎಂಬ ಮಾತೃರತ್ನದ ಗರ್ಭದಿಂದ ಉದ್ಭೂತನಾದ, ತನ್ನ ತಂದೆಯ ದಯೆಯಿಂದಲೇ ಪ್ರಾಪ್ತವಾದ ಅಮೃತಮಯವಾದ ಮಾತುಳ್ಳ, ನಾರಾಯಣ-ನೆಂಬ ಪಂಡಿತನಿಂದ ರಚಿತವಾದ ಮನೋಹರವಾದ ಶ್ರೀರಾಘವೇಂದ್ರ ವಿಜಯವೆಂಬ ಮಹಾಕಾವ್ಯದಲ್ಲಿ ಮೊದಲನೆಯ ಸರ್ಗವೂ ಶೋಭಿಸುತ್ತದೆ.

★ ★ ★

ವಿದ್ವತ್ಕುಲಾವತಂಸ,
ಮಹಾಕವಿ ಶ್ರೀಮನ್ನಾರಾಯಣಾಚಾರ್ಯೇಣ ರಚಿತಂ

# ಶ್ರೀಮದ್ರಾಘವೇಂದ್ರವಿಜಯ ಮಹಾಕಾವ್ಯಂ

## ದ್ವಿತೀಯ ಸರ್ಗ

ಜೀವೋತ್ತಮರಾದ ಶ್ರೀವಾಯುದೇವರು ಶ್ರೀಹನುಮ, ಭೀಮ, ಮಧ್ವರೆಂಬ ಮೂರು ಅವತಾರಗಳನ್ನು ಏಕೆ ಸ್ವೀಕರಿಸಿದರು ಎಂಬುದಕ್ಕೆ ಕಾರಣವನ್ನು ಇಲ್ಲಿ ಹೇಳುತ್ತಾರೆ.

**ರಾಮಾವತಾರಸ್ಯ ಹರೇರಧತ್ತ ಸೇವಾಂ ಹನೂಮದ್ವಪುಷಾ ಸಮೀರಃ ।**
**ಭೀಮಾತ್ಮನಾ ಯಾದವಭೂಷಣಸ್ಯ ಮಧ್ವಾತ್ಮನಾ ವ್ಯಾಸಮುನಿತ್ವಭಾಜಃ ॥೧॥**

**ಅವತಾರಿಕೆ :** ಈ ಸರ್ಗದಲ್ಲಿ ಗ್ರಂಥ ಪ್ರತಿಪಾದ್ಯರಾದ ಶ್ರೀರಾಘವೇಂದ್ರ ಗುರುವರ್ಯರ ಹಿಂದಿನ ಗುರುವಂಶವನ್ನು ಹೇಳುತ್ತಾರೆ. ಅದರಲ್ಲಿ ಮೊದಲು ಮೂಲ ಗುರುಗಳಿಂದ ಆರಂಭಿಸಿ ಗುರುಪರಂಪರೆಯಲ್ಲಿ ಬಂದ ಯತಿ ಶ್ರೇಷ್ಠರ ಚರಿತ್ರೆಯನ್ನು, ಶ್ರೀಮೂಲರಾಮ ಪ್ರತಿಮೆಯು ಹೇಗೆ ಬಂದಿತೆಂಬುದನ್ನು ಈ ಸರ್ಗದಲ್ಲಿ ನಿರೂಪಿಸುತ್ತಾರೆ. ಕುಂಭಕೋಣ ಪಟ್ಟಣದ ವರ್ಣನೆಯು ವಿಸ್ತಾರವಾಗಿ ಹೇಳಲ್ಪಟ್ಟಿದೆ. ಮೊದಲು ಶ್ರೀವಾಯುದೇವರ ಮೂರು ಅವತಾರಗಳನ್ನೂ, ಶ್ರೀಮನ್ಮಧ್ವಾಚಾರ್ಯರ ಸೂತ್ರಭಾಷ್ಯಾದಿ ಗ್ರಂಥ ರಚನೆಯನ್ನೂ, ಆ ಗ್ರಂಥಗಳ ಪ್ರಸಿದ್ಧಿಗಾಗಿ ಶಿಷ್ಯ ಸಂಗ್ರಹವನ್ನೂ, ಬದರಿಕಾಶ್ರಮಕ್ಕೆ ಹೋಗಿ ಶ್ರೀವೇದವ್ಯಾಸರ ಬಳಿ ಶ್ರೀಮನ್ಮಧ್ವಾಚಾರ್ಯರು ಇದ್ದ ವಿಷಯವನ್ನು ಹೇಳುತ್ತಾರೆ.

**ತಾತ್ಪರ್ಯ :** ಸರ್ವಜೀವೋತ್ತಮರಾದ ಶ್ರೀವಾಯುದೇವರು ಹನುಮಂತರಾಗಿ ಅವತರಿಸಿ ತ್ರೇತಾಯುಗದಲ್ಲಿ ಶ್ರೀರಾಮಚಂದ್ರ ರೂಪಿಯಾದ ಶ್ರೀಹರಿಯು ಸೇವೆಯನ್ನು ಮಾಡಿದರು. ಅನಂತರ ದ್ವಾಪರಯುಗದಲ್ಲಿ ಶ್ರೀಹರಿಯು ಶ್ರೀಕೃಷ್ಣನಾಗಿ ಅವತರಿಸಿದಾಗ ತಾವು ಶ್ರೀಭೀಮಸೇನರಾಗಿ ಅವತರಿಸಿ ಸೇವಿಸಿದರು. ತದನಂತರದಲ್ಲಿ ಶ್ರೀಹರಿಯು ಶ್ರೀವೇದವ್ಯಾಸ ರೂಪದಿಂದ ಅವತಾರ ಮಾಡಿದಾಗ ಈ ಕಲಿಯುಗದಲ್ಲಿ ಶ್ರೀಮನ್ಮಧ್ವಾವತಾರವನ್ನು ಸ್ವೀಕರಿಸಿ

ಶ್ರೀಹರಿಯ ಶಿಷ್ಯತ್ವವನ್ನು ವಹಿಸಿ, ಸಜ್ಜನರಿಗೆ ತತ್ವಜ್ಞಾನೋಪದೇಶವನ್ನು ಮಾಡಿ ಶ್ರೀಹರಿಯ ಸೇವೆಯನ್ನು ಮಾಡಿದರು. ಹೀಗೆ ತಮ್ಮ ಮೂರೂ ಅವತಾರಗಳಲ್ಲಿಯೂ ಅವಿಚ್ಛಿನ್ನವಾಗಿ ಶ್ರೀಹರಿ ಸೇವೆಯನ್ನು ಮಾಡಿ ಜಗದ್ಗುರುಗಳಾದ ಪವಮಾನರು ವಿರಾಜಿಸಿದರು.

**ಅವತಾರಿಕೆ :** ಶ್ರೀಮದಾಚಾರ್ಯರಿಂದ ಆರಂಭವಾಗಿ ಬಂದಿರುವ ಸತ್ಸಂಪ್ರದಾಯ ಕ್ರಮವನ್ನು ಹೇಳುತ್ತಾರೆ. ಶ್ರೀಮಧ್ವರ ದಿವ್ಯ ಸಂದೇಶವನ್ನು ತಿಳಿಸುತ್ತಿದ್ದಾರೆ.

**ಆಭಾಷ್ಯ ಭಾಷ್ಯಂ ನಿಗಮಾಂತಸೂತ್ರವ್ಯಾಖ್ಯಾತ್ಮಕಂ ಪೂರ್ಣಮತಿರ್ಗುರುರ್ನಃ ।**
**ಸಂಪಾದಯಧ್ವಂ ಮತಸಂಪ್ರದಾಯಸಮೃದ್ಧಿಮಿತ್ಯಾದಿದಿಶೇ**
**ಯಮೀಶಾನ್ (ಯಮೀಶ್ವರಾನ್) ॥೨॥**

**ತಾತ್ಪರ್ಯ :** ಜಗದ್ಗುರುಗಳಾದ ಶ್ರೀಮನ್ಮಧ್ವಾಚಾರ್ಯರು ವೇದಾರ್ಥನಿರ್ಣಾಯಕವಾದ ಬ್ರಹ್ಮಸೂತ್ರಗಳ ವ್ಯಾಖ್ಯಾನ ರೂಪವಾದ ಬ್ರಹ್ಮಸೂತ್ರಭಾಷ್ಯವನ್ನು, ಇನ್ನಿತರ ಗ್ರಂಥಗಳನ್ನು ರಚಿಸಿದರು. ತಮ್ಮ ಅವತಾರ ಕಾರ್ಯವನ್ನು ಚೆನ್ನಾಗಿ ನಿರ್ವಹಿಸಿ, ತಾವು ಅಂತರ್ಧಾನವಾಗುವುದಕ್ಕೆ ಮೊದಲು ತಮ್ಮ ಶಿಷ್ಯರುಗಳಾದ ಶ್ರೀಪದ್ಮನಾಭತೀರ್ಥರೇ ಮೊದಲಾದ ಸನ್ಯಾಸಿಶ್ರೇಷ್ಠರನ್ನು ಕರೆದು ಎಲೈ ನಮ್ಮ ಪ್ರಿಯ ಶಿಷ್ಯರುಗಳಾದ ಯತಿಶ್ರೇಷ್ಠರೇ ನೀವುಗಳು ನಾವು ನಿಮಗೆ ಉಪದೇಶಿಸಿದ ಸಿದ್ಧಾಂತವನ್ನು ಶಿಷ್ಯ ಪ್ರಶಿಷ್ಯೋಪದೇಶ ಪರಂಪರೆಯಿಂದ ಮುಂದುವರೆಸಿ ನಮ್ಮ ಮತ ಸಮೃದ್ಧಿಯನ್ನು ಮುಂದುವರೆಸಿಕೊಂಡು ಬರಬೇಕು ಎಂದು ಆಜ್ಞಾಪಿಸಿದರು.

**ಅವತಾರಿಕೆ :** ಶ್ರೀಮದಾನಂದತೀರ್ಥ ಭಗವತ್ಪಾದರನ್ನು ಕ್ಷೀರಸಮುದ್ರ ರೂಪರೆಂದು ವರ್ಣಿಸುತ್ತಾ ಕ್ಷೀರಸಮುದ್ರದ ಸಾಮ್ಯವನ್ನು ಹೇಳುತ್ತಾರೆ.

**ಭಾಷ್ಯಮೃತೋತ್ಪಾದಕರೋಽನುಭಾಷ್ಯಶ್ರೀಮಾನ್ ಸ ಭಾಷ್ಯಾಂತರಕಲ್ಪಶಾಖೀ ।**
**ವ್ಯಾಸಂ ಗುರುಂ ಸಂಶ್ರಯತೇ ಬದರ್ಯಾಂ ಆನಂದತೀರ್ಥಾಭಿಧದುಗ್ಧಸಿಂಧುಃ ॥೩॥**

**ತಾತ್ಪರ್ಯ :** ಕ್ಷೀರ ಸಮುದ್ರವನ್ನು ದೇವಾಸುರರು ಕಡೆದಾಗ ಅದರಿಂದ ಅಮೃತವು ಹುಟ್ಟಿತು. ಲಕ್ಷ್ಮಿಯು ಪ್ರಾದುರ್ಭಾವ ಹೊಂದಿದಳು. ಕಲ್ಪವೃಕ್ಷ, ಕಾಮಧೇನು ಮುಂತಾದವುಗಳೂ ಹುಟ್ಟಿದವು. ಅದರಂತೆಯೇ ಶ್ರೀಮದಾಚಾರ್ಯರು ಸೂತ್ರಭಾಷ್ಯವೆಂಬ ಅಮೃತವನ್ನು ಉತ್ಪಾದಿಸಿ ಅನುವ್ಯಾಖ್ಯಾನ ಎಂಬ ಲಕ್ಷ್ಮಿಯನ್ನು ಪ್ರಾದುರ್ಭಾವಗೊಳಿಸಿ, ನ್ಯಾಯವಿವರಣ, ಅಣುವೇದಾಂತ, ಗೀತಾಭಾಷ್ಯ, ಉಪನಿಷದ್ಭಾಷ್ಯ, ಋಗ್ಭಾಷ್ಯ ಮುಂತಾದ ಕಲ್ಪವೃಕ್ಷಾದಿಗಳಿಗೆ ಸಮಾನವಾದ ಗ್ರಂಥ ರತ್ನಗಳನ್ನು ರಚಿಸಿ ಕ್ಷೀರಸಮುದ್ರ ಸಾಮ್ಯವನ್ನು ಹೊಂದಿದ್ದಾರೆ. ಇಂತಹಾ ಶ್ರೀಮದಾಚಾರ್ಯರು ತಮ್ಮ ಅವತಾರದ ಕಾರ್ಯವನ್ನೆಲ್ಲಾ ಮುಗಿಸಿದ ಮೇಲೆ ಮಹಾ (ಉತ್ತರ) ಬದರೀ ವಾಸಿಗಳಾದ ತಮ್ಮ ಗುರುಗಳಾದ ಶ್ರೀವೇದವ್ಯಾಸರನ್ನು ಸೇವಿಸುತ್ತಾ ಬದರಿಯಲ್ಲಿಯೇ ಇದ್ದಾರೆ.

**ಅವತಾರಿಕೆ :** "ಮತಸಂಪ್ರದಾಯ ಸಮೃದ್ಧಿಯನ್ನು ಮಾಡಿರಿ" ಎಂಬ ಗುರುಗಳ ಆದೇಶವನ್ನು ಶಿರಸಾ ಮಾನ್ಯ ಮಾಡಿ ಶ್ರೀಪದ್ಮನಾಭತೀರ್ಥರೇ ಮೊದಲಾದ ಶ್ರೀಮದಾನಂದತೀರ್ಥರ ಶಿಷ್ಯರುಗಳು ಅದೇ ರೀತಿ ಮಾಡಿದರೆಂದು ಹೇಳುತ್ತಿದ್ದಾರೆ.

**ಸಿದ್ಧಾಂತಸಂರೋಹವಿಧೌ ನಿಯುಕ್ತೇಷ್ವೇತೇಷ್ವನೇಕವ್ರತಿಷು ಪ್ರಧಾನಃ ।**
**ಪ್ರೇಮಾಸ್ಪದಂ ಸ್ವೀಯಗುರೋಃ ಸ ಪದ್ಮನಾಭಾರ್ಯವರ್ಯೋಽಕೃತ ದರ್ಶನರ್ಧಿಮ್ ॥೪॥**

**ತಾತ್ಪರ್ಯ :** ಶ್ರೀಮದಾಚಾರ್ಯರು ಶ್ರೀವೇದವ್ಯಾಸದೇವರಿಗೆ ಸಮ್ಮತವಾದ ವೇದಾಂತವನ್ನು ಲೋಕದಲ್ಲಿ ಪುನಃ ಪ್ರತಿಷ್ಠಾಪಿಸಿ ಅದರ ಅಭಿವೃದ್ಧಿಗಾಗಿ ಅನೇಕ ಮಂದಿ ಸನ್ಯಾಸಿ ಶಿಷ್ಯರನ್ನು ತಯಾರು ಮಾಡಿ ಆ ಶಿಷ್ಯರುಗಳು ತಮ್ಮ ಸಿದ್ಧಾಂತವನ್ನು ಪ್ರಚಾರ ಮಾಡುತ್ತಾ, ಪ್ರವಚನಾದಿಗಳಿಂದ ಅಭಿವೃದ್ಧಿ ಪಡಿಸಬೇಕೆಂದು ಆಜ್ಞಾಪಿಸಿದ್ದರು. ಈ ರೀತಿಯಾಗಿ ಶ್ರೀಮದಾಚಾರ್ಯರಿಂದ ಆಜ್ಞಪ್ತರಾದ ಶಿಷ್ಯರಲ್ಲಿ ಮುಖ್ಯರಾದವರು ಶ್ರೇಷ್ಠರಾದ ಶ್ರೀಪದ್ಮನಾಭತೀರ್ಥರು. ಅವರು ತಮ್ಮ ಗುರುಗಳಾದ ಶ್ರೀಮಧ್ವಾಚಾರ್ಯರಿಗೆ ಅತ್ಯಂತ ಪ್ರೀತಿಪಾತ್ರರೂ ಆಗಿದ್ದರು. ಪೂಜ್ಯರಲ್ಲಿ ಶ್ರೇಷ್ಠರಾದ ಶ್ರೀಪದ್ಮನಾಭತೀರ್ಥರು ಆಚಾರ್ಯರು ಬದರಿಕಾಶ್ರಮ ಪ್ರವೇಶ ಮಾಡಿದ ಮೇಲೆ ಅವರ ವೇದಾಂತ ಸಿದ್ಧಾಂತವನ್ನು ಅಭಿವೃದ್ಧಿ ಪಡಿಸುತ್ತಾ ಇದ್ದರು.

**ಅವತಾರಿಕೆ :** ಶ್ರೀಪದ್ಮನಾಭತೀರ್ಥರು ಗ್ರಂಥ ರಚಾನಾದಿಗಳ ಮೂಲಕ ಮಾಡಿದ ದ್ವೈತದರ್ಶನದ ಅಭಿವೃದ್ಧಿಯನ್ನು ಸ್ವಲ್ಪ ವರ್ಣಿಸುತ್ತಾರೆ.

**ಸತ್ತರ್ಕದೀಪಾ(ರತ್ನಾ)ವಲಿಮತ್ಯುದಾರಾಂ ಸನ್ನ್ಯಾಯರತ್ನಾವಲಿಮಪ್ಯನಿಂದ್ಯಾಮ್ ।**
**ಭಾಷ್ಯಾನುಭಾಷ್ಯಾಶಯಬೋಧಹೇತೂ ತತಾನ ಯಸ್ತಾರ್ಕಿಕಮೌಲಿರತ್ನಮ್ ॥೫॥**

**ತಾತ್ಪರ್ಯ :** ಶ್ರೀಪದ್ಮನಾಭತೀರ್ಥರು ಯುಕ್ತಿಸಹಿತವಾಗಿ ವೇದಾರ್ಥವನ್ನು ವಿಚಾರ (ಚಿಂತನ) ಮಾಡುವವರಲ್ಲಿ ಅತ್ಯಂತ ಶ್ರೇಷ್ಠರು. ಶ್ರೀಮದಾನಂದತೀರ್ಥ ಭಗವತ್ಪಾದರು ಬ್ರಹ್ಮಸೂತ್ರಗಳಿಗೆ ಮಾಡಿದ ಭಾಷ್ಯದ ಅರ್ಥವನ್ನು ತಿಳಿಸುವ ಸಲುವಾಗಿ ಅವರು ಸತ್ತರ್ಕದೀಪಾವಲಿ ಎಂಬ ಅತ್ಯಂತ ಶ್ರೇಷ್ಠವಾದ ವ್ಯಾಖ್ಯಾನವನ್ನು ಬರೆದರು. ಅದರಂತೆಯೇ ಶ್ರೀಮದಾಚಾರ್ಯರು ರಚಿಸಿದ ಬ್ರಹ್ಮಸೂತ್ರಗಳ ವಿವರಣಾತ್ಮಕ ವ್ಯಾಖ್ಯಾನ ರೂಪವಾದ (ವ್ಯಕ್ತಕರ್ತತಿ ರೂಪವಾದ) ಅನುವ್ಯಾಖ್ಯಾನ ಗ್ರಂಥಕ್ಕೆ ಸಕಲ ವಿದ್ವಜ್ಜನರ ಪ್ರಶಂಸೆಗೆ ಪಾತ್ರವಾದ ಸನ್ನ್ಯಾಯ ರತ್ನಾವಲಿ ಎಂಬ ಟೀಕೆಯನ್ನು ರಚಿಸಿದರು. ಈ ರೀತಿಯಾಗಿ ಮತಸಂಪ್ರದಾಯದ ಅಭಿವೃದ್ಧಿಯನ್ನು ಮಾಡಿರಿ ಎಂಬ ಶ್ರೀಮಧ್ವರ ಆಜ್ಞೆಯನ್ನು ಪಾಲಿಸುತ್ತಾ ಶ್ರೀಪದ್ಮನಾಭತೀರ್ಥರು ಸಜ್ಜನರಿಗೆ ಅನುಗ್ರಹ ಮಾಡುತ್ತಿದ್ದರು.

**ಅವತಾರಿಕೆ :** ಶ್ರೀಪದ್ಮನಾಭತೀರ್ಥರು ಮಾಡಿದ ದರ್ಶನಾಭಿವೃದ್ಧಿಯನ್ನು, ಅವರು ಶೇಷಾವತಾರರೆಂಬ ವಿಷಯವನ್ನೂ ಸ್ಪಷ್ಟಪಡಿಸುತ್ತಾರೆ.

**ವ್ಯಾಖ್ಯಾಸು ಯಃ ಪಾಣಿನಿಸೂತ್ರಭಾಷ್ಯವ್ಯಾಖ್ಯಾದಶಾಂ ವ್ಯಂಜಯತಿ ಸ್ಮ ಸಾಕ್ಷಾತ್ ।**
**ಭನ್ನೋ ಯವನ್ಯಾ ಪ್ರತಿಪಾದನೇನ ಸಹಸ್ರದಾ ಸೂತ್ರಪದಾಶಯಾನಾಮ್ ॥೬॥**

**ತಾತ್ಪರ್ಯ (ಬಾ.ಬೋಃ) :** ಶೇಷಾವತಾರಿಗಳಾದ ಪತಂಜಲಿಗಳು ತಮ್ಮ ಅವತಾರ ರಹಸ್ಯವನ್ನು ಮುಚ್ಚಿಡುವುದಕ್ಕಾಗಿ ಪರದೆಯ ಹಿಂದೆ ಕುಳಿತು ಸಾವಿರ ಮುಖದ ಶೇಷನ ರೂಪವನ್ನು ಸ್ವೀಕರಿಸಿ ಪಾಣಿನಿಯ ಸೂತ್ರಗಳಿಗೆ ಸಾವಿರ ರೀತಿಯಿಂದ ಅಭಿಪ್ರಾಯಗಳನ್ನು ಹೇಳುತ್ತಿದ್ದರು. ಶ್ರೀಪದ್ಮನಾಭತೀರ್ಥರೂ ಸಹಾ ಪರದೆಯ ಹಿಂದೆ ಕುಳಿತು ಶೇಷಾವತಾರವನ್ನು ಸ್ವೀಕರಿಸಿ ಬ್ರಹ್ಮಮೀಮಾಂಸಾ ಸೂತ್ರಗಳ ಪದಗಳಿಗೆ ಸಹಸ್ರ ರೀತಿಯಲ್ಲಿ ಅರ್ಥಗಳನ್ನು ಹೇಳುತ್ತಾ ಶಿಷ್ಯರುಗಳಿಗೆ ಉಪದೇಶ ಮಾಡುತ್ತಿದ್ದರು.

**(ಗು.ಸೇ) :** ಶ್ರೀಪದ್ಮನಾಭತೀರ್ಥರು ತಾವು ಶೇಷರೂಪದಲ್ಲಿರುವಾಗ ಪರದೆಯ ಹಿಂದೆ ಕುಳಿತು ಪಾಣಿನಿಯ ಸೂತ್ರಗಳಿಗೆ ಸಾವಿರ ರೀತಿಯಲ್ಲಿ ಅರ್ಥೈಸುತ್ತಿದ್ದರು. ಶ್ರೀಮದಾನಂದತೀರ್ಥರ ಶಿಷ್ಯರಾಗಿ ಶ್ರೀಮದಾಚಾರ್ಯರ ಬ್ರಹ್ಮಸೂತ್ರಭಾಷ್ಯವನ್ನು ಪ್ರವಚನ ಮಾಡುವಾಗ ಸೂತ್ರಗಳಿಗೆ ಶ್ರೀ ಆಚಾರ್ಯರು ಹೇಳಿದ ಸಾವಿರಾರು ಅರ್ಥಗಳನ್ನು ಹೇಳುತ್ತಿದ್ದರು. ಪಾಣಿನಿಯ ವ್ಯಾಕರಣ ಸೂತ್ರಗಳಿಗೂ ಸಾವಿರಾರು ಅರ್ಥಗಳನ್ನು ಹೇಳುತ್ತಿದ್ದರು. ಇದರಿಂದ ಅವರು ಶೇಷಾವತಾರರೆಂದು ಸೂಚಿತವಾಗುತ್ತಿತ್ತು. ನಮ್ಮ ಗುರುಗಳಾದ ಶ್ರೀಪದ್ಮನಾಭತೀರ್ಥರು ಇಂತಹ ಮಹಾಮಹಿಮೆಯುಳ್ಳವರಾಗಿದ್ದರು.

**ವಿಶೇಷಾಂಶ :** ಶ್ರೀತ್ರಿವಿಕ್ರಮಪಂಡಿತಾಚಾರ್ಯರು ಶ್ರೀಮದಾಚಾರ್ಯರ ಭಾಷ್ಯಕ್ಕೆ ಸಾವಿರಾರು ಅರ್ಥಗಳಿವೆ ಎಂದು ಹೇಳಿದ್ದಾರೆ. ಆದುದರಿಂದ ಸೂತ್ರಗಳಿಗೆ ಆಚಾರ್ಯರ ಭಾಷ್ಯಾನುಸಾರವಾಗಿ ಸಾವಿರ ಅರ್ಥಗಳನ್ನು ಹೇಳುತ್ತಿದ್ದರೆಂಬುದು ಪ್ರಮಾಣ ಸಿದ್ಧವಾಗಿಯೇ ಇದೆ. ಶ್ರೀಮದಾಚಾರ್ಯರಿಂದ ಸಾಕ್ಷಾತ್ ಉಪದೇಶ ಪಡೆದ ಶ್ರೀಪದ್ಮನಾಭತೀರ್ಥರು ಸೂತ್ರ ಮತ್ತು ಭಾಷ್ಯಗಳಿಗೆ ಸಹಸ್ರಾರು ಅರ್ಥಗಳನ್ನು ಹೇಳುವ ಸಾಮರ್ಥ್ಯ ಪಡೆದಿದ್ದರೆಂದು ವರ್ಣಿಸಿರುವುದು ಸ್ವಾಭಾವಿಕವಾಗಿಯೇ ಇದೆ ಎಂದು ತಿಳಿಯಬೇಕು.

**ಅವತಾರಿಕೆ :** ಶ್ರೀಪದ್ಮನಾಭತೀರ್ಥರ ನಂತರದ ಗುರುಪರಂಪರೆಯನ್ನು, ಶ್ರೀನರಹರಿತೀರ್ಥರ ಮೂಲಕ ಶ್ರೀಮೂಲರಾಮಪ್ರತಿಮಾ ಪ್ರಾಪ್ತಿಯ ಕ್ರಮವನ್ನೂ ಹೇಳುತ್ತಾರೆ.

**ಗುರೋರ್ನಿಯೋಗಾದಧಿಗಮ್ಯ ರಾಜ್ಯಂ ಶಿಷ್ಯಸ್ತದೀಯೋ ನೃಹರಿವ್ರತೀಂದ್ರಃ ।**
**ಗಜೇಶಕೋಶಸ್ಥಿತರಾಮಮೂರ್ತಿಂ ಪೂರ್ಣಪ್ರಬೋಧಾಯ ಸಮಾರ್ಪಯತ್ತಾಮ್ ॥೭॥**

**ತಾತ್ಪರ್ಯ :** (ವೈವಸ್ವತಮನುವಿನ ಮಗನಾದ ಇಕ್ಷ್ವಾಕು ಮಹಾರಾಜನು ತಪಸ್ಸಿನಿಂದ ಶ್ರೀಬ್ರಹ್ಮದೇವರನ್ನು ಸಂತೋಷಪಡಿಸಿ ಅವರಿಂದ ಅವರು ಪೂಜಿಸುತ್ತಿದ್ದ ಸೀತಾಸಹಿತ ಶ್ರೀರಾಮನ ಪ್ರತಿಮೆಯನ್ನು ಅನುಗ್ರಹರೂಪವಾಗಿ ಪಡೆದನು. ಆ ಪ್ರತಿಮೆಯು ಇಕ್ಷ್ವಾಕುರಾಜನ ಮಕ್ಕಳು

ಮೊಮ್ಮಕ್ಕಳುಗಳಿಂದ ಪರಂಪರೆಯಿಂದ ಪೂಜಿತಗೊಂಡು ಕೊನೆಗೆ ಕಲಿಯುಗದಲ್ಲಿ ಗಜಪತಿಯ ಕೋಶಾಗಾರವನ್ನು ಸೇರಿತು. ಕಾಲಾಂತರದಲ್ಲಿ ಗಜಪತಿ ರಾಜನಿಗೆ ಓರ್ವ ಪುತ್ರನು ಹುಟ್ಟಿದನು. ಆ ಕುಮಾರನು ಶೈಶವಾವಸ್ಥೆಯಲ್ಲಿರುವಾಗಲೇ ಗಜಪತಿರಾಜನು ಮೃತಿ ಹೊಂದಿದನು. ಶಿಶುವಾದ ರಾಜಕುಮಾರನು ರಾಜ್ಯಭಾರ ಮಾಡಲು ಅಸಮರ್ಥನೆಂದು ತಿಳಿದು ಸಚಿವರುಗಳು ಯಾರು ರಾಜ್ಯವನ್ನು ಸುವ್ಯವಸ್ಥಿತವಾಗಿ ನಡೆಸಿಕೊಂಡು ಹೋಗಬೇಕೆಂದು ಚಿಂತಿಸುತ್ತಿದ್ದರು. ಕೊನೆಗೆ ಎಲ್ಲರೂ ಸೇರಿ ಒಂದು ನಿರ್ಣಯಕ್ಕೆ ಬಂದರು. ಅದರಂತೆ ಪಟ್ಟದ ಆನೆಯ ಸೊಂಡಿಲಿನಲ್ಲಿ ಒಂದು ಹೂವಿನ ಹಾರವನ್ನು ಹಾಕಿ ಹಾಗೆಯೇ ಅದರ ಮೇಲೆ ಪೂರ್ಣಕುಂಭವೊಂದನ್ನು ಇಟ್ಟು ಕಳುಹಿಸಿದರು. ಈ ಸಮಯದಲ್ಲಿ ತಮ್ಮ ಗುರುಗಳಾದ ಶ್ರೀಮನ್ಮಧ್ವಾಚಾರ್ಯರಿಂದ ಆಜ್ಞಪ್ತರಾಗಿ ಬಂದಿದ್ದ ಶ್ರೀನರಹರಿತೀರ್ಥರು ಆ ರಾಜ್ಯದಲ್ಲಿಯೇ ವಾಸಿಸುತ್ತಿದ್ದರು. ಪ್ರಾತಃಕಾಲದಲ್ಲಿ ತಮ್ಮ ಸ್ನಾನಾಹ್ನಿಕಗಳಿಗಾಗಿ ಜಲಾಶಯವೊಂದರ ಬಳಿ ನಿಂತಿರುವಾಗ ಆನೆಯು ಅವರಿಗೆ ಪೂರ್ಣಕುಂಭಾಭಿಷೇಕ ಮಾಡಿ ಸೊಂಡಿಲಿನಲ್ಲಿದ್ದ ಪುಷ್ಪಮಾಲೆಯನ್ನು ಶ್ರೀನರಹರಿತೀರ್ಥರ ಕೊರಳಿಗೆ ಹಾಕಿತು. ನಂತರ ಶ್ರೀನರಹರಿತೀರ್ಥರನ್ನು ತನ್ನ ಮೇಲೆ ಕುಳ್ಳಿರಿಸಿಕೊಂಡು ರಾಜಭವನಕ್ಕೆ ಕರೆದೊಯ್ದಿತು. ಅನಂತರ ಸಚಿವರುಗಳೆಲ್ಲರೂ ತಾವು ನಿರ್ಧರಿಸಿದಂತೆಯೇ ನಡೆದುದರಿಂದ ಶ್ರೀನರಹರಿತೀರ್ಥರನ್ನೇ ರಾಜ್ಯಪಾಲಕರೆಂದು ಒಪ್ಪಿಕೊಂಡರು. ಶ್ರೀನರಹರಿತೀರ್ಥರು ಹನ್ನೆರಡು ವರ್ಷಗಳ ಕಾಲ ಅಲ್ಲಿ ರಾಜ್ಯಭಾರ ಮಾಡಿ ರಾಜಕುಮಾರನು ರಾಜ್ಯವನ್ನು ಪಾಲನೆ ಮಾಡಲು ಸಮರ್ಥನಾದಾಗ ಅವನಿಗೆ ರಾಜ್ಯವನ್ನು ಒಪ್ಪಿಸಿ ಹೊರಟರು. ಹೊರಡುವ ಮುಂಚೆ ರಾಜಕುಮಾರನು ಹಿಂದಿನ ದಿನ ಸ್ವಪ್ನಸೂಚನೆಯಾಗಿದ್ದಂತೆ ರಾಜ್ಯದ ಕೋಶಾಗಾರದಲ್ಲಿದ್ದ ಶ್ರೀಮೂಲರಾಮನ ಪ್ರತಿಮೆಯನ್ನು ಶ್ರೀನರಹರಿತೀರ್ಥರಿಗೆ ಒಪ್ಪಿಸಿದನು. ಈ ರೀತಿಯಾಗಿ ಪರಂಪರಾಪ್ರಾಪ್ತವಾದ ಐತಿಹ್ಯವಿದೆ ಅದನ್ನು ಕವಿಗಳು ವರ್ಣಿಸುತ್ತಿದ್ದಾರೆ.)

ಶ್ರೀಮದಾಚಾರ್ಯರಿಂದ ಸನ್ಯಾಸ ಸ್ವೀಕರಿಸಿ, ಶ್ರೀಪದ್ಮನಾಭತೀರ್ಥರ ಶಿಷ್ಯರಾದ ಶ್ರೀನರಹರಿತೀರ್ಥರು ತಮ್ಮ ಮೂಲ ಗುರುಗಳಾದ ಶ್ರೀಮದಾನಂದತೀರ್ಥರ ಆಜ್ಞೆಯಂತೆ ಗಜಪತಿಯ ರಾಜ್ಯಪರಿಪಾಲನೆ ಮಾಡುತ್ತಾ ಅಲ್ಲಿಂದ ಹೊರಡುವಾಗ ಗಜಪತಿಯ ಭಂಡಾರದಲ್ಲಿದ್ದ ಶ್ರೀಬ್ರಹ್ಮ ಕರಾರ್ಚಿತವಾದ ಶ್ರೀರಾಮದೇವರ ಪ್ರತಿಮೆಯನ್ನು ತಂದು ಶ್ರೀಮದಾಚಾರ್ಯರಿಗೆ ಒಪ್ಪಿಸಿದರು.

**ಅವತಾರಿಕೆ :** ಈಗ ಶ್ರೀಮೂಲರಾಮ ಪ್ರತಿಮೆಯ ಅಸಾಧಾರಣ ಮಹಾತ್ಮೆಯನ್ನು ವಿವರಿಸುತ್ತಿದ್ದಾರೆ.

**ಸಾ ಯತ್ರ ರಾಮಪ್ರತಿಮಾಸ್ತಿ ತತ್ರ ಚತುಃಪುಮರ್ಥೀ ಸತತಂ ಚಕಾಸ್ತಿ ।**
**ಆದಿಶ್ಯ ಚೈವಂ ಗುರುಣೈವ ದತ್ತಾಮಥಾರ್ಚಯತ್ತಾ (ಯಂಸ್ತಾ)**
**ಮನಿಶಂ ಯಮೀಂದ್ರಃ (ದ್ರಾಃ) ॥೮॥**

**ತಾತ್ಪರ್ಯ : (ಬಾ ಬೋ)** ಶ್ರೀಮೂಲರಾಮ ಪ್ರತಿಮೆಯು ಎಲ್ಲಿ ಪೂಜೆಗೊಳ್ಳುತ್ತದೆಯೋ ಅಲ್ಲಿ ಧರ್ಮ, ಅರ್ಥ, ಕಾಮ-ಮೋಕ್ಷಗಳೆಂಬ ನಾಲ್ಕು ಪುರುಷಾರ್ಥಗಳು ಯಾವಾಗಲೂ ಶೋಭಿಸುತ್ತಾ ಇರುತ್ತವೆ ಎಂದು ಶ್ರೀಮದಾನಂದತೀರ್ಥರು ಆದೇಶಿಸಿ ಆ ಪ್ರತಿಮೆಯನ್ನು ಶಿಷ್ಯರಿಗೆ ನೀಡಿದರು. ತದನಂತರ ಶ್ರೀಮದಾಚಾರ್ಯರ ಶಿಷ್ಯ ಪ್ರಶಿಷ್ಯ ಸನ್ಯಾಸಿಗಳು ಕ್ರಮವಾಗಿ ಅವಿಚ್ಛಿನ್ನವಾಗಿ ಶ್ರೀಮೂಲರಾಮನ ಪ್ರತಿಮೆಯನ್ನು ಪೂಜಿಸುತ್ತಿದ್ದರು.

**(ಗು ಸೇ)** ಶ್ರೀಮೂಲರಾಮಚಂದ್ರನ ಪ್ರತಿಮೆಯು ಪೂಜಿಸಲ್ಪಡುವ ಸ್ಥಳದಲ್ಲಿ ಧರ್ಮ, ಅರ್ಥ, ಕಾಮ-ಮೋಕ್ಷಗಳೆಂಬ ನಾಲ್ಕೂ ಪುರುಷಾರ್ಥಗಳು ಯಾವಾಗಲೂ ನೆಲಸಿರುತ್ತವೆ, ಎಂದು ಆದೇಶಿಸಿ ಗುರುಗಳಾದ ಶ್ರೀಪದ್ಮನಾಭತೀರ್ಥರು ಶ್ರೀಮೂಲರಾಮನ ಪ್ರತಿಮೆಯನ್ನು ಶ್ರೀನರಹರಿತೀರ್ಥರಿಗೆ ನೀಡಿದರು. ಶ್ರೀನರಹರಿತೀರ್ಥರು ತದನಂತರದಲ್ಲಿ ಶ್ರೀಮೂಲರಾಮನ ಪ್ರತಿಮೆಯನ್ನು ನಿರಂತರವಾಗಿ ಪೂಜಿಸುತ್ತಿದ್ದರು.

**ಅವತಾರಿಕೆ :** ಕವಿಗಳು ಶ್ರೀಮನ್ಮಾಧವತೀರ್ಥರು ಮಾಡಿದ ಸಂಪ್ರದಾಯದ ಅಭಿವೃದ್ಧಿಯನ್ನು ವಿಶದೀಕರಿಸುತ್ತಾರೆ.

**ಅಂತೇವಸಂಸ್ತಸ್ಯ ಗುರೋರನೇನ (ನಾ) ಸಭಾಜಯಂಸ್ತಾಂ**
**(ಯತ್ತಾಂ) ಪ್ರತಿಮಾಂ ವಿತೀರ್ಣಾಮ್।**
**ಸಂವರ್ಧಯನ್ನಾದಿಮಸಂಪ್ರದಾಯಮನ್ಯೋಽಭವನ್ಮಾಧವಸಂಯಮೀಂದ್ರಃ ॥೯॥**

**ತಾತ್ಪರ್ಯ : (ಬಾ ಬೋ)** ಶ್ರೀನರಹರಿತೀರ್ಥರ ಶಿಷ್ಯರು ಶ್ರೀಮಾಧವತೀರ್ಥರು. ಅವರು ಶ್ರೀನರಹರಿತೀರ್ಥರು ಪ್ರಸಾದಿಸಿದ ಶ್ರೀಮೂಲರಾಮನ ಪ್ರತಿಮೆಯನ್ನು ಪೂಜಿಸುತ್ತಾ ಆದಿಗುರುಗಳಾದ ಶ್ರೀಮನ್ಮಧ್ವಾಚಾರ್ಯರು ಹೇಳಿದ ಶಿಷ್ಯ ಪರಂಪರೆಯಿಂದ ಬಂದ ಸಿದ್ಧಾಂತವನ್ನು ಗ್ರಂಥ ರಚನಾದಿಗಳಿಂದ ಅಭಿವೃದ್ಧಿಗೊಳಿಸಿತ್ತಾ ಇದ್ದರು.

**(ಗು ಸೇ)** ಶ್ರೀನರಹರಿತೀರ್ಥರಿಗೆ ಶ್ರೀಮಾಧವತೀರ್ಥರೆಂಬ ಶ್ರೇಷ್ಠರು ಶಿಷ್ಯರಾಗಿದ್ದರು. ಅವರು ಆದಿಗುರುಗಳಾದ ಶ್ರೀಮದಾನಂದತೀರ್ಥರ ಸಿದ್ಧಾಂತವನ್ನು ಅಭಿವೃದ್ಧಿಗೊಳಿಸುತ್ತಾ ಶ್ರೀನರಹರಿತೀರ್ಥರು ದಯಪಾಲಿಸಿದ ಶ್ರೀಮೂಲರಾಮನನ್ನು ಪೂಜಿಸುತ್ತಿದ್ದರು.

**ಅವತಾರಿಕೆ :** ಶ್ರೀಮನ್ಮಾಧವತೀರ್ಥರ ಶಿಷ್ಯರಾದ ಶ್ರೀಮದಕ್ಷೋಭ್ಯತೀರ್ಥರ ವಿಚಾರವನ್ನು ಕವಿಗಳು ಈಗ ತಿಳಿಸುತ್ತಾರೆ.

**ಮುನೇರಮುಷ್ಮಾದನವದ್ಯಬೋಧಾತ್ ಕೃತೋಪದೇಶಃ ಪ್ರತಿಮಾಂ ಚ ಗೃಹ್ಣನ್ ।**
**ಕ್ಷೋಭಂ ವಿಧಾತುಂ ಪ್ರತಿವಾದಿವಾಚಾಮಕ್ಷೋಭ್ಯನಾಮಾ ಮುನಿರಾವಿರಾಸೀತ್ ॥೧೦॥**

**ತಾತ್ಪರ್ಯ :** (ಬಾ ಬೋ) ಶ್ರೀಮಾಧವತೀರ್ಥರ ನಂತರದಲ್ಲಿ ಶ್ರೀಅಕ್ಷೋಭ್ಯತೀರ್ಥರು ಶ್ರೀಮದಾಚಾರ್ಯರ ವೇದಾಂತಸಾಮ್ರಾಜ್ಯ ಪೀಠವನ್ನಲಂಕರಿಸಿದರು. ಶ್ರೀಅಕ್ಷೋಭ್ಯತೀರ್ಥರೂ

ಸಹ ಶ್ರೀಮದಾಚಾರ್ಯರಿಂದಲೇ ಸನ್ಯಸ್ತರಾಗಿ ಉಪದೇಶವನ್ನು ಪಡೆದಿದ್ದರು. ಶ್ರೀಅಕ್ಷೋಭ್ಯತೀರ್ಥರು ಶ್ರೀಮಾಧವತೀರ್ಥರಿಂದ ಶ್ರೀಮೂಲರಾಮನ ಪ್ರತಿಮೆಯನ್ನು ಪಡೆದರು. ಪ್ರತಿವಾದಿಗಳ ಮಾತುಗಳನ್ನು ಖಂಡಿಸುವುದರಿಂದಲೂ, ಸ್ವತಃ ಅಖಂಡನೀಯವಾದ ಮಾತುಗಳನ್ನು ಉಳ್ಳವರಾದುದರಿಂದಲೂ ಸಾರ್ಥಕವಾದ ಅಕ್ಷೋಭ್ಯತೀರ್ಥ ಎಂಬ ಹೆಸರುಳ್ಳವರಾಗಿದ್ದರು. ಇಂತಹಾ ಯತಿವರ್ಯರು ವೇದಾಂತಸಾಮ್ರಾಜ್ಯಪೀಠದಲ್ಲಿ ವಿರಾಜಮಾನರಾದರು.

(ಗುರುಪಾದಸೇವಾ) ಶ್ರೀಮಾಧವತೀರ್ಥರು ನಿರ್ದೋಷವಾದ ಜ್ಞಾನವುಳ್ಳವರು. ಅವರು ಶ್ರೀಅಕ್ಷೋಭ್ಯತೀರ್ಥರಿಗೆ ಪ್ರಣವ ಮಂತ್ರೋಪದೇಶವನ್ನೂ ವೇದಾಂತೋಪದೇಶವನ್ನೂ ಮಾಡಿದರು. ಶ್ರೀಮದಕ್ಷೋಭ್ಯತೀರ್ಥರು ಶ್ರೀಮನ್ಮಾಧವತೀರ್ಥರಿಂದ ಶ್ರೀಮೂಲರಾಮ ಪ್ರತಿಮೆಯನ್ನು ಪಡೆದರು. ಪ್ರತಿವಾದಿಗಳ ಉಪನ್ಯಾಸ ಮಾಡುವ ಶಾಸ್ತ್ರವಚನಗಳನ್ನು ಖಂಡಿಸುವ ಸಲುವಾಗಿಯೇ ಶ್ರೀಮದಕ್ಷೋಭ್ಯತೀರ್ಥರು ಆವಿರ್ಭವಿಸಿದರು.

**ವಿಶೇಷ ವಿಚಾರ :** ಶ್ರೀಮದಾನಂದತೀರ್ಥ ಭಗವತ್ಪಾದರು ಶ್ರೀಪದ್ಮನಾಭತೀರ್ಥರಿಗೆ ಆಶ್ರಮವನ್ನು ಕೊಟ್ಟು ಪ್ರಣವಾದಿ ಮಂತ್ರೋಪದೇಶವನ್ನೂ, ವೇದಾಂತೋಪದೇಶವನ್ನೂ ಮಾಡಿ ಅವರಿಂದ ಶ್ರೀನರಹರಿತೀರ್ಥರಿಗೆ ಉಪದೇಶ ಕೊಡಿಸಿದರು. ನರಹರಿತೀರ್ಥರು ಮಾಧವತೀರ್ಥರಿಗೂ, ಮಾಧವತೀರ್ಥರು ಅಕ್ಷೋಭ್ಯತೀರ್ಥರಿಗೂ ಉಪದೇಶ ನೀಡಿದರು. ಇದರ ನಂತರ ಶ್ರೀಮದಾಚಾರ್ಯರು ತಾವೇ ಸ್ವತಃ ಈ ಮೂವರಿಗೂ ಉಪದೇಶ ನೀಡಿದರು. ಈ ರೀತಿಯಾಗಿ ಪರಂಪರೆಯು ವಿಚ್ಛಿತ್ತಿಯಾಗದಂತೆಯೂ ಮಾಡಿ ತಾವೇ ಸ್ವತಃ ನಾಲ್ವರಿಗೂ ಉಪದೇಶ ನೀಡಿ ಅನುಗ್ರಹಿಸಿದರು. ಆದುದರಿಂದ "ನಾಲ್ವರು ಯತಿಗಳಿಗೂ ಶ್ರೀಮದಾಚಾರ್ಯರಿಂದಲೇ ಸನ್ಯಾಸ ಮತ್ತು ಉಪದೇಶ" ಎಂಬ ಬಾಲಬೋಧಿನಿ ವ್ಯಾಖ್ಯಾನಕಾರರ ಮಾತಿಗೂ ವಿರೋಧವಿಲ್ಲ.

ಈಗ ಕವಿಗಳು ಶ್ರೀಮದಕ್ಷೋಭ್ಯತೀರ್ಥರ ಅಸಾಧಾರಣ ಪಾಂಡಿತ್ಯವನ್ನು ವರ್ಣಿಸುತ್ತಾರೆ.

**ದೃಢಾಸಿನಾ ತತ್ವಮಸೀತಿವಾಚಾ ಸಾಮರ್ಥ್ಯಭಾಜಾ ಪರಜೀವಭೇದೇ ।**
**ಅವೈದಿಕಾಗ್ರ್ಯಂ ಮುನಿರೇಷ ವಿದ್ಯಾರಣ್ಯಂ ಶರಣ್ಯಂ ಕುದೃಶಾಂ ಬಿಭೇದ ॥೧೧॥**

ಶತ್ರುವಿನ ಪ್ರಾಣಾಪಹಾರ ಮಾಡುವುದಕ್ಕೆ ಸಮರ್ಥವಾದ ಬಲವಾದ ಖಡ್ಗದಿಂದ ಯೋಧನು ಕೆಟ್ಟ ಜಂತುಗಳಿಗೆ ಆಶ್ರಯವಾದ ಅರಣ್ಯವನ್ನು ಕತ್ತರಿಸುತ್ತಾನೆ. ಅದೇ ರೀತಿಯಲ್ಲಿ ಶ್ರೀಮದಕ್ಷೋಭ್ಯತೀರ್ಥ ಶ್ರೀಪಾದಂಗಳವರು ಜೀವ-ಪರಮಾತ್ಮನ ಭೇದವನ್ನು ತಿಳಿಸುವುದಕ್ಕೆ ಸಮರ್ಥವಾದ "ತತ್ವಮಸಿ" ಎಂಬ ಶ್ರುತಿ ವಾಕ್ಯದಿಂದ ವೇದ ವಿರುದ್ಧವಾದ ಮಾತುಗಳನ್ನು ಆಡುವುದರಲ್ಲಿ ಶ್ರೇಷ್ಠರೂ, ವೇದೋಕ್ತವಾದ ಅರ್ಥವನ್ನು ದೂಷಿಸುವವರೂ, ಹಾಗೂ ಮಿಥ್ಯಾಜ್ಞಾನಿಗಳಾದ ಜೀವೇಶ್ವರಾಭೇದವಾದಿಗಳಿಗೆ ರಕ್ಷಕರೂ ಆದ ವಿದ್ಯಾರಣ್ಯ ಮುನಿಗಳನ್ನು ವಾಕ್ಯಾರ್ಥದಲ್ಲಿ ಸೋಲಿಸಿ ವಿಜಯವನ್ನು ಪಡೆದರು.

**ವಿಶೇಷಾಂಶ :** ಶ್ರೀಮದಕ್ಷೋಭ್ಯತೀರ್ಥರಿಗೂ ಅದ್ವೈತ ವೇದಾಂತದಲ್ಲಿ ಪ್ರಕಾಂಡ ಪಂಡಿತರೆಂದು ಪ್ರಖ್ಯಾತರಾದ ಶ್ರೀವಿದ್ಯಾರಣ್ಯತೀರ್ಥರೆಂಬುವವರಿಗೂ "ತತ್ವಮಸಿ" ಶ್ರುತ್ಯರ್ಥ ವಿಚಾರದಲ್ಲಿ ವಾಕ್ಯಾರ್ಥ ನಡೆಯಿತು. ಶ್ರೀವೇದಾಂತದೇಶಿಕರೆಂಬ ವಿಶಿಷ್ಟಾದ್ವೈತಸಿದ್ಧಾಂತದ ಪ್ರಕಾಂಡ ಪಂಡಿತರು ಮಧ್ಯಸ್ಥರೂ ತೀರ್ಪುಗಾರರೂ ಆಗಿದ್ದರು. ಈ ವಾಕ್ಯಾರ್ಥದಲ್ಲಿ ಶ್ರೀಅಕ್ಷೋಭ್ಯತೀರ್ಥರೇ ಜಯಶಾಲಿಗಳಾದರೆಂದು ಶ್ರೀವೇದಾಂತ ದೇಶಿಕರು ಘೋಷಿಸಿದರು. ಜಯಘೋಷದ ಶ್ಲೋಕವು ಹೀಗಿದೆ "ಅಸಿನಾ ತತ್ವಮಸಿನಾ ಪರಜೀವ ಪ್ರಭೇದಿನಾ । ವಿದ್ಯಾರಣ್ಯ ಮಹಾರಣ್ಯಮಕ್ಷೋಭ್ಯಮುನಿರಚ್ಛಿನತ್ ॥" ಶತ್ರು ಜೀವರ ಪ್ರಾಣಾಪಹಾರಕವಾದ ಖಡ್ಗದಿಂದ ಯೋಧನು ಕಾಡನ್ನು ಕಡಿಯುವಂತೆ ಪರಮಾತ್ಮನಿಗೂ ಜೀವಾತ್ಮರಿಗೂ ಪಾರಮಾರ್ಥಿಕ ಭೇದವನ್ನೇ ಹೇಳುವ "ತತ್ವಮಸಿ" ಎಂಬ ಖಡ್ಗದಿಂದ ಶ್ರೀಅಕ್ಷೋಭ್ಯಮುನಿಗಳು ವಿದ್ಯಾರಣ್ಯವೆಂಬ ಮಹಾವನವನ್ನು ಕತ್ತರಿಸಿದರು, ಅವರನ್ನು ಪರಾಭವಗೊಳಿಸಿದರು ಎಂದು ಶ್ಲೋಕದ ಅಭಿಪ್ರಾಯ. ಶ್ರೀಅಕ್ಷೋಭ್ಯಮುನಿಗಳಿಗೂ ಶ್ರೀವಿದ್ಯಾರಣ್ಯರಿಗೂ ವಾದ ನಡೆದ ಸ್ಥಳದಲ್ಲಿ ಜಯಸೂಚಕವಾದ ಮತ್ತು ಮೇಲಿನ ಅಕ್ಷರಗಳನ್ನು ಕೆತ್ತಿರುವ ಒಂದು ಶಿಲಾ ಜಯಸ್ತಂಭವಿದೆ. ಅದು ಕರ್ನಾಟಕದ ಕೋಲಾರ ಜಿಲ್ಲೆಯಲ್ಲಿರುವ ಮುಳಬಾಗಿಲಿನ ಪೂರ್ವ ದಿಕ್ಕಿಗೆ ಶ್ರೀಮನ್ನೃಸಿಂಹತೀರ್ಥದ ಹತ್ತಿರದಲ್ಲಿರುವ ಶ್ರೀಪಾದರಾಜರ ಬೃಂದಾವನದ ಹತ್ತಿರವೇ ಇರುವ ಒಂದು ಎತ್ತರವಾದ ದಿಬ್ಬದ ಮೇಲಿನ ಕಲ್ಲಿನ ಮೇಲಿದೆ. (ಇತ್ತೀಚೆಗೆ ಧಾರವಾಡದ ಶ್ರೀ ಸಿ.ಆರ್. ಪಾಟೀಲ್ ಎಂಬ ವಿದ್ವಾಂಸರು ಶ್ರೀವಿದ್ಯಾರಣ್ಯರಿಗೂ ಶ್ರೀ ಅಕ್ಷೋಭ್ಯತೀರ್ಥರಿಗೂ ಕಾಲವು ಕೂಡುವುದಿಲ್ಲ ವಾದುದರಿಂದ ಈ ವಾಕ್ಯಾರ್ಥವು ನಡೆದಿರುವ ಬಗ್ಗೆ ಶಂಕೆ ವ್ಯಕ್ತ ಪಡಿಸಿರುತ್ತಾರೆ. ಈ ಬಗ್ಗೆ ಮಾಧ್ವ ಸಂಶೋಧನಾ ವಿದ್ವನ್ಮಣಿಗಳಿಂದ ಹೆಚ್ಚಿನ ಸಂಶೋಧನೆ ಆಗಬೇಕಿದೆ.)

ಈಗ ಕವಿಗಳು ಶ್ರೀಅಕ್ಷೋಭ್ಯತೀರ್ಥರ ಶಿಷ್ಯರಾದ ಶ್ರೀಟೀಕಾಚಾರ್ಯರೆಂದು ಪ್ರಸಿದ್ಧರಾದ ಶ್ರೀಜಯತೀರ್ಥರ ಮಹಿಮೆಯನ್ನು ಹೇಳುತ್ತಾರೆ.

**ತಲ್ಲಬ್ಧಬೋಧೋ ವಿಮತೈಕಬಾಧೋ ಜಯ್ಯೈಕಭೂಮಿರ್ಜತೀರ್ಥನಾಮಾ ।**
**ವ್ಯಾಚಷ್ಟ ಪೂರ್ಣಪ್ರಮತಿಪ್ರಣೀತಂ ಸರ್ವಂ ಪ್ರಬಂಧಂ ಸರಸೈರ್ವಚೋಭಿಃ ॥೧೨॥**

ಶ್ರೀಮದಕ್ಷೋಭ್ಯತೀರ್ಥರ ಶಿಷ್ಯರು ಶ್ರೀಜಯತೀರ್ಥರು. ಅವರು ತಮ್ಮ ಗುರುಗಳಿಂದಲೇ ಸಮಸ್ತ ವೇದಾಂತಶಾಸ್ತ್ರವನ್ನು ಅಭ್ಯಾಸ ಮಾಡಿದರು. ಪ್ರತಿವಾದಿ ವಿದ್ವಾಂಸರಿಗೆ ಮತ್ತು ವಿಶೇಷತಃ ಮಾಯಾವಾದಿ ವಿದ್ವಾಂಸರ ಮಾತುಗಳನ್ನು ಖಂಡಿಸುತ್ತಿದುದರಿಂದ ಶ್ರೀಜಯತೀರ್ಥರು ಅಂತಹ ವಿದ್ವಾಂಸರುಗಳಿಗೆ ಪ್ರಬಲರಾದ ಬಾಧಕರಾಗಿದ್ದರು ಮತ್ತು ದುಃಖವನ್ನುಂಟು ಮಾಡುತ್ತಿದ್ದರು. ಶ್ರೀಜಯತೀರ್ಥರ ಕಾಲದಲ್ಲಿ ಯಾವ ವಿಮತೀಯ ವಿದ್ವಾಂಸನೂ ತಮ್ಮ ಸಿದ್ಧಾಂತವನ್ನು ಮಂಡಿಸಲು ಸಾಧ್ಯವಾಗುತ್ತಿರಲಿಲ್ಲ. ಜಯರೂಪನಾದ ಪರಮಾತ್ಮನನ್ನು ಯಾವಾಗಲೂ ಒಳಗೊಂಡಿರುವ ಬುದ್ಧಿಯುಳ್ಳವರಾದುದರಿಂದಲೂ ಜಯಪ್ರದವಾದ ಶಾಸ್ತ್ರವನ್ನು ನಿರ್ಮಾಣ ಮಾಡಿದವರಾದುದರಿಂದಲೂ ಅವರ "ಜಯತೀರ್ಥ" ಎಂಬ ಹೆಸರು ಸಾರ್ಥಕವಾಗಿ ಇತ್ತು.

ಇಂತಹಾ ಮಹಾನುಭಾವರಾದ ಶ್ರೀಜಯತೀರ್ಥರು ಶ್ರೀಮದಾಚಾರ್ಯರು ರಚಿಸಿದ ಮೂಲ ಗ್ರಂಥಗಳಲ್ಲಿ ಅನೇಕ ಗ್ರಂಥಗಳನ್ನು ರಸಭರಿತವಾದ ತಮ್ಮ ವಾಕ್ಕುಗಳಿಂದ ವ್ಯಾಖ್ಯಾನಿಸಿದರು.

**ವಿಶೇಷಾಂಶ :** (1) **"ಆನಂದ ರೂಪಸ್ಯ ಪರಸ್ಯ ಪಾತ್ರಧೀರಾನಂದ ಸಂದಾಯಿಸುಶಾಸ್ತ್ರಕೃತ್ ಸ ಯತ್ । ಆನಂದತೀರ್ಥೇತಿ ಪದಂ ಗುರೂದಿತಂ ಬಭೂವ ತಸ್ಮಾತ್ಯನುರೂಪ ರೂಪಕಂ ॥"** ಎಂದು ಶ್ರೀಮತ್ ಸುಮಧ್ವವಿಜಯದಲ್ಲಿ ಗುರುಗಳು ಕೊಟ್ಟಿರುವ "ಆನಂದತೀರ್ಥ" ಎಂಬ ಶ್ರೀಮದಾಚಾರ್ಯರ ಹೆಸರು ಆನಂದರೂಪನಾದ ಪರಮಾತ್ಮನನ್ನು ಒಳಗೊಂಡ ಬುದ್ಧಿಯನ್ನು ಉಳ್ಳವರಾದುದರಿಂದಲೂ, ಆನಂದಪ್ರದವಾದ ಶಾಸ್ತ್ರವನ್ನು ಮಾಡಿದುದರಿಂದಲೂ, ಸಾರ್ಥಕವಾಯಿತು ಎಂದು ಹೇಳಿರುವಂತೆಯೇ ಇಲ್ಲಿಯೂ ಜಯರೂಪನಾದ ಪರಮಾತ್ಮನನ್ನು ಒಳಗೊಂಡ ಬುದ್ಧಿಯುಳ್ಳವರಾದುದರಿಂದಲೂ, ಜಯಪ್ರದವಾದ ಶಾಸ್ತ್ರವನ್ನು ಮಾಡಿದವರಾದುದರಿಂದಲೂ, ಶ್ರೀಜಯತೀರ್ಥರ ಹೆಸರು ಸಾರ್ಥಕವಾಗಿತ್ತು ಎಂದು ವರ್ಣಿಸಿದ್ದಾರೆ. (2) **"ಚಿತ್ರೈಃ ಪದೈಶ್ಚ ಗಂಭೀರೈಃ ವಾಕ್ಯೈರ್ಮಾನೈರಖಂಡಿತೈಃ । ಗುರುಭಾವಂ ವ್ಯಂಜಯಂತಿ ಭಾತಿ ಶ್ರೀಜಯತೀರ್ಥವಾಕ್ ॥"** ಎಂದು ಶ್ರೀವ್ಯಾಸರಾಜ ಗುರುಸಾರ್ವಭೌಮರು ಶ್ರೀಮನ್ನ್ಯಾಯಾಮೃತದಲ್ಲಿ ಅಪ್ಪಣೆ ಕೊಡಿಸಿರುವಂತೆ ಶ್ರೀಜಯತೀರ್ಥರ ಮಾತು, ಚಿತ್ರ, ಗಂಭೀರ, ಪ್ರಮಾಣ, ಅಖಂಡ್ಯ ಮತ್ತು ಗುರುಗಳ ಭಾವ ಮತ್ತು ಭಾವ ಚಿತ್ರದ ವ್ಯಂಜಕವಾದುದರಿಂದ ಸರಸ ಅಂದರೆ ಆನಂದಪ್ರದವಾಗಿದೆ ಮತ್ತು ರಸಭರಿತವಾಗಿದೆ. (3) ಶ್ರೀಜಯತೀರ್ಥರು ಶ್ರೀಮದಾಚಾರ್ಯರ ಎಲ್ಲ ಗ್ರಂಥಗಳಿಗೂ ವ್ಯಾಖ್ಯಾನ ಮಾಡಿಲ್ಲ. ಶ್ರೀಮದಾಚಾರ್ಯರ ಮೂಲ ಗ್ರಂಥಗಳಲ್ಲಿ ಸುಮಾರು 18 ಗ್ರಂಥಗಳನ್ನು ವ್ಯಾಖ್ಯಾನಿಸಿದ್ದಾರೆ. ಆದರೆ ಆ ಗ್ರಂಥಗಳಲ್ಲಿಯೇ ಶ್ರೀಮದಾಚಾರ್ಯರ ಉಳಿದ ಗ್ರಂಥಗಳ ವಿಷಯಗಳೂ, ಆ ಗ್ರಂಥಗಳನ್ನು ವ್ಯಾಖ್ಯಾನಿಸಿ ತಿಳಿಯತಕ್ಕಂತಹ ಮಾರ್ಗದರ್ಶನವೂ ಸೂಚ್ಯವಾಗಿ ಬಂದಿರುವುದರಿಂದ ಅವರು ಶ್ರೀಮದಾಚಾರ್ಯರ ಎಲ್ಲ ಗ್ರಂಥಗಳನ್ನೂ ವ್ಯಾಖ್ಯಾನಿಸಿದವರು ಎಂದು ಕವಿಗಳು ಹೇಳಿದ್ದಾರೆ ಎಂದು ತಿಳಿಯಬೇಕು. ಆದುದರಿಂದಲೇ ಅವರಿಗೆ ಮಾತ್ರವೇ "ಟೀಕಾಚಾರ್ಯರು" ಎಂಬ ಅಸಾಧಾರಣವಾದ ಹೆಸರು ತತ್ವಶಾಸ್ತ್ರ ಪ್ರಪಂಚದಲ್ಲಿ ಪ್ರಸಿದ್ಧವಾಗಿದೆ.

ಕವಿಗಳು ಈಗ ಶ್ರೀಜಯತೀರ್ಥರ ಸನ್ಯಾಸ ಸ್ವೀಕಾರಕ್ಕಿಂತ ಹಿಂದಿನ ಗೃಹಸ್ಥಾಶ್ರಮದ ವೃತ್ತಾಂತವನ್ನು ವರ್ಣಿಸುತ್ತಾರೆ.

**ಅಸೌ ಕದಾಚಿತ್ ಗೃಹಿಭಾವಕಾಲೇ ವಿಧಾಯ ಧಾಟೀಂ ತುರಗಾಧಿರೂಢಃ ।**
**ಅಕ್ಷೋಭ್ಯತೀರ್ಥಾಶ್ರಿತತೀರಸೀಮಾಮ್ ಅಕ್ಷೋಭ್ಯತೀರ್ಥಾಂ ತಟಿನೀಮಯಾಸೀತ್ ॥೧೩॥**

ಈ ಯಾವ ಶ್ರೀಜಯತೀರ್ಥರು ಗೃಹಸ್ಥಾಶ್ರಮದಲ್ಲಿದ್ದಾಗ, ಓರ್ವ ಸಾಮಂತ ರಾಜನ ಪುತ್ರರಾಗಿದ್ದರು. ಅವರು ಒಂದು ದಿನ ಕುದುರೆಯನ್ನು ಹತ್ತಿ ಕೆಲವು ಮಂದಿ ಕುದುರೆ ಸವಾರರ ಜೊತೆಗೆ ವಿಹಾರಕ್ಕಾಗಿ ಹೊರಟರು. ಆಗ ಅವರು ಕುದುರೆಯನ್ನು ವೇಗವಾಗಿ ಓಡಿಸುತ್ತಾ

ಕುದುರೆಯ ನಾನಾ ವಿಧ ನಡಿಗೆಯನ್ನು ಪ್ರದರ್ಶಿಸುತ್ತಾ, ಶ್ರೀಮದಕ್ಷೋಭ್ಯತೀರ್ಥರು ಕುಳಿತಿದ್ದ ನದಿಯ ದಡಕ್ಕೆ ಬಂದರು. ಅಲ್ಲಿ ಆಳವಾಗಿ ನೀರು ಹರಿಯುತ್ತಿತ್ತು.

**ಅನುದ್ಧೃತಂ ವಾರಿ ಸಮುದ್ಧತಶ್ರೀಃ ಪೀತ್ವಾ ಮುಖೇನೈವ ತೃಷಾಕುಲೇನ ।**
**ಮುನಿಂ ಸಮೀಪೇ ಮನನೈಕತಾನಮ್ ಅಸಾವನಂಸೀದವಲೋಕ್ಯ ಮೂರ್ಧ್ನಾ ॥೧೪॥**

ಶ್ರೀಜಯತೀರ್ಥರಿಗೆ ಪೂರ್ವಾಶ್ರಮದಲ್ಲಿ ಧೋಂಡೋರಾಯರೆಂದು ಹೆಸರು. ಅವರು ಅನೇಕ ಕುದುರೆ ಸವಾರರಿಗೆ ಯಜಮಾನರಾದ ರಘುನಾಥರಾಯರೆಂಬುವರ ಮಕ್ಕಳು. ಒಬ್ಬ ಸೇನಾಪತಿಯ ಮಕ್ಕಳು, ಅದಕ್ಕೆ ತಕ್ಕಂತೆ ಗತ್ತು, ಠೀವಿ, ಕಾಂತಿ, ಸಂಪತ್ತು ಎಲ್ಲವೂ ಅವರಲ್ಲಿತ್ತು. ಈ ಧೋಂಡೋರಾಯರು ಶ್ರೀಮದಕ್ಷೋಭ್ಯತೀರ್ಥರು ಕುಳಿತಿದ್ದ ನದೀ ತೀರದ ಸಮೀಪದಲ್ಲಿಯೇ ಕುದುರೆ ಸಹಿತವಾಗಿ ಆಳವಾದ ನದಿ ನೀರಿಗೆ ಪ್ರವೇಶಿಸಿ ನದೀ ನೀರಿಗೆ ಬಾಯನ್ನು ಇಟ್ಟು ನೀರನ್ನು ಕುಡಿದರು. ಬಾಯಾರಿಕೆಯಿಂದ ಬಾಯಿ ಒಣಗಿ ಹೋದುದರಿಂದ ಅವರು ಅತ್ತ ಇತ್ತ ನೋಡಲೂ ಇಲ್ಲ. ಕೈ ಅಥವಾ ಪಾತ್ರೆಯಿಂದ ತೆಗೆದು ಕುಡಿಯಲೂ ಇಲ್ಲ. ಅಲ್ಲಿಯೇ ಶ್ರೀಮದಕ್ಷೋಭ್ಯತೀರ್ಥರು ಶಾಸ್ತ್ರಾರ್ಥಮನನ ಮಾಡುತ್ತಾ ಭಗವಂತನ ಚಿಂತನ ಮಾಡುತ್ತಾ ಕುಳಿತಿದ್ದರು. ಧೋಂಡೋರಾಯರು ತಮ್ಮ ಬಾಯಾರಿಕೆ ಹಿಂಗಿದ ಮೇಲೆ ಅಲ್ಲಿಯೇ ಕುಳಿತಿದ್ದ ಅಕ್ಷೋಭ್ಯತೀರ್ಥರನ್ನು ನೋಡಿದರು. ಕೂಡಲೇ ಇವರು ಪೂಜ್ಯರಾದ ಯತಿಗಳೆಂದು ತಿಳಿದು ಅವರ ಬಳಿಗೆ ಹೋಗಿ ಶಿರಬಾಗಿ ವಂದಿಸಿದರು.

ಮುಂದಿನ ಕಥೆಯನ್ನು ಹೇಳುತ್ತಾರೆ.

**ಅಭ್ಯರ್ಥಿತಸ್ತೇನ ಮುನಿಃ ಸ ಭಕ್ತ್ಯಾ ಸನ್ನ್ಯಾಸಮನ್ಯಾದೃಶವಾರಿಪಾನಾತ್ ।**
**ಅಮಂಸ್ತ ತಂ ಪೂರ್ಣಮತಿಪ್ರದಿಷ್ಟಂ ವ್ಯಾಖ್ಯಾತೃಭಾವೇ ವೃಷಮನ್ಯಭಾವೇ ॥೧೫॥**

ಶ್ರೀಮದಾನಂದತೀರ್ಥ ಭಗವತ್ಪಾದರು ತಮ್ಮ ಅನೇಕ ಶಿಷ್ಯರುಗಳಿಗೆ ಪಾಠ ಹೇಳುತ್ತಿದ್ದಾಗ ಶ್ರೀಮದಕ್ಷೋಭ್ಯತೀರ್ಥರೇ ಮೊದಲಾದ ಶಿಷ್ಯರುಗಳು ಶ್ರೀಮದಾನಂದತೀರ್ಥರನ್ನು ಕುರಿತು "ಸ್ವಾಮಿ, ತಮ್ಮ ಗ್ರಂಥಗಳಿಗೆ ವ್ಯಾಖ್ಯಾನ ಮಾಡುವ ಸೌಭಾಗ್ಯ ಯಾರಿಗೆ ದೊರಕಲಿದೆ?" ಎಂದು ಪ್ರಶ್ನಿಸಿದರು. ಶ್ರೀಮದಾನಂದತೀರ್ಥ ಭಗವತ್ಪಾದರು ನಸುನಗುತ್ತಾ, "ನಮ್ಮ ಗ್ರಂಥಭಾರವನ್ನು ಹೊರುತ್ತಾ, ಪ್ರತಿನಿತ್ಯ ತಾವು ಪಾಠ ಮಾಡುವಾಗ ಸ್ವಲ್ಪ ದೂರದಲ್ಲಿ ಕುಳಿತು ಮೆಲಕು ಹಾಕುತ್ತಾ, ಪಾಠವನ್ನು ಶ್ರವಣ ಮಾಡುತ್ತಿದ್ದ ವೃಷಭವನ್ನು (ಎತ್ತನ್ನು) ತೋರಿಸಿ ಈ ವೃಷಭರಾಜನು ನಮ್ಮ ಗ್ರಂಥಗಳಿಗೆ ವ್ಯಾಖ್ಯಾನ ಮಾಡುವನು" ಎಂದು ತಿಳಿಸಿದರು. ಮನುಷ್ಯ ಜನ್ಮದಲ್ಲಿ ನದಿಯ ನೀರನ್ನು ಯಾವನು ಪಶುವಿನಂತೆ ಕುಡಿಯುವನೋ ಅವನೇ ನನ್ನ ಗ್ರಂಥಕ್ಕೆ ವ್ಯಾಖ್ಯಾನ ಮಾಡುವನು ಎಂದೂ ಅಪ್ಪಣೆ ಕೊಡಿಸಿದರು.

ಶ್ರೀಮದಕ್ಷೋಭ್ಯತೀರ್ಥರಿಗೆ ಈಗ ತಮ್ಮ ಮುಂದೆ ಪಶುವಿನಂತೆ ನದಿಯ ನೀರನ್ನು

ಬಾಯಿಯಿಂದಲೇ ಕುಡಿಯುತ್ತಿದ್ದ ಧೋಂಡೋರಾಯರನ್ನು ನೋಡಿದಾಗ ಹಿಂದಿನದೆಲ್ಲವೂ ಸ್ಮರಣೆಗೆ ಬಂತು. ಶ್ರೀಅಕ್ಷೋಭ್ಯರು ಧೋಂಡೋರಾಯರನ್ನು ಕುರಿತು "ಕಿಂ ಪಶುಃ ಪೂರ್ವದೇಹೇ" ಎಂದು ಪ್ರಶ್ನಿಸಿದರು. ಆಗ ಶ್ರೀಧೋಂಡೋರಾಯರಿಗೂ ಗತವೆಲ್ಲವೂ ಸ್ಮರಣೆಗೆ ಬಂದು ಶ್ರೀಮದಕ್ಷೋಭ್ಯತೀರ್ಥರಿಗೆ ಸಾಷ್ಟಾಂಗ ಪ್ರಣಾಮ ಮಾಡಿ ತಮಗೆ ಸನ್ಯಾಸ ನೀಡುವಂತೆ ಪ್ರಾರ್ಥಿಸಿದರು.

ನಂತರ ಏನಾಯಿತೆಂದು ಕವಿಗಳು ವಿವರಿಸುತ್ತಾರೆ.

**ವಿಧಾಯಂ ತಂ ಸಂಯಮಿನಂ ಪ್ರಹೃಷ್ಟೇ ಗುರೌ ತದೀಯಾಃ ರುಷಿತಾಃ ಪುನಸ್ತಮ್ ।**
**ನಿನ್ಯುಃ ಪುರಿಂ ತತ್ರ ಭಯೇನ ಭಾರ್ಯಾಜನೇನ ದೃಷ್ಟಃ ಸ ತು ಶೇಷವೇಷಃ ॥೧೬॥**

ಸನ್ಯಾಸ ಕೊಡಿರಿ ಎಂದು ಪ್ರಾರ್ಥಿಸಿದ ಗೃಹಸ್ಥನಾಗಿದ್ದ ಧೋಂಡೋರಾಯನಿಗೆ ಶ್ರೀಮದಕ್ಷೋಭ್ಯತೀರ್ಥರು ಸನ್ಯಾಸ ನೀಡಿದರು. ತದನಂತರದಲ್ಲಿ ಪ್ರಣವೋಪದೇಶ ಮಾಡಲು ಉದ್ಯುಕ್ತರಾದರು. ಆ ವೇಳೆಗೆ ಸನ್ಯಾಸಿಯಾದ ಧೋಂಡೋರಾಯನ ಸಂಬಂಧಿಗಳಾದ ರಘುನಾಥರಾಯರೇ ಮೊದಲಾದವರು ಧೋಂಡೋರಾಯನ ಸನ್ಯಾಸ ಸ್ವೀಕಾರ ವಿಚಾರವನ್ನು ತಿಳಿದು ಸಿಟ್ಟಾಗಿ ಅಲ್ಲಿಗೆ ಬಂದು ಶ್ರೀಅಕ್ಷೋಭ್ಯತೀರ್ಥರಲ್ಲಿ ನಾನಾ ರೀತಿಯಲ್ಲಿ ಆಕ್ರೋಶ ಮಾಡುತ್ತಾ ಸನ್ಯಾಸಿಯಾಗಿದ್ದ ಧೋಂಡೋರಾಯರನ್ನು ಬಲವಂತನಾಗಿ ಊರಿನೊಳಗೆ ಕರೆದೊಯ್ದರು. ಅಲ್ಲಿ ಮನೆಯಲ್ಲಿ ರಾತ್ರಿಯಲ್ಲಿ ಪತಿದರ್ಶನಕ್ಕೆಂದು ಬಂದ ಪತ್ನಿಗೂ ಅವಳ ಜೊತೆಯಲ್ಲಿ ಬಂದ ಇತರರಿಗೂ ಸನ್ಯಾಸಿಯಾದ ಧೋಂಡೋರಾಯನು ಶೇಷರೂಪದಿಂದ ಕಾಣಿಸಿದನು. ಎಲ್ಲರೂ ಆ ದೃಶ್ಯವನ್ನು ನೋಡಿ ಭಯಭೀತರಾದರು.

ಕವಿಗಳು ಈಗ ತದನಂತರದ ವಿಚಾರವನ್ನು ತಿಳಿಸುತ್ತಾರೆ.

**ತತೋಽತಿವಿಶ್ವಾಸಯುಜಾ ನಗರ್ಯಾಃ ಪಿತ್ರಾದಿನಾ ಬಂಧುಜನೇನ ತೂರ್ಣಮ್ ।**
**ಆನೀಯ ತಸ್ಮೈ ಮುನಯೇ ಸ ದತ್ತಃ ಶಾಸ್ತ್ರಾಣ್ಯಮುಷ್ಮಾದಖಿಲಾನಿ ಲೇಭೇ ॥೧೭॥**

ಹೆಂಡತಿಯೇ ಮೊದಲಾದವರಿಗೆ ಧೋಂಡೋರಾಯರ ಸರ್ಪಸ್ವರೂಪದ ದರ್ಶನಾನಂತರದಲ್ಲಿ ಭಯವುಂಟಾಯಿತು. ಗುರುಗಳಾದ ಶ್ರೀಮದಕ್ಷೋಭ್ಯರು ತಮಗೆ ಸರಿಯಾದ ಶಿಷ್ಯರಿಗೇ ಸನ್ಯಾಸವನ್ನು ನೀಡಿದ್ದಾರೆ ಎಂಬ ನಂಬಿಕೆಯುಂಟಾಯಿತು. ಗುರುಗಳಾದ ಶ್ರೀಮದಕ್ಷೋಭ್ಯತೀರ್ಥರಲ್ಲಿ ವಿಶೇಷವಾದ ಭಕ್ತಿಯೂ ಉಂಟಾಯಿತು. ಆಗ ರಘುನಾಥರಾಯರೇ ಮೊದಲಾದ ಬಾಂಧವರು ಇವನು ನಮ್ಮ ಬಳಿಯಲ್ಲಿ ಇರಲು ಯೋಗ್ಯನಲ್ಲ ಎಂದು ನಿಶ್ಚಯಿಸಿ ಬಹಳ ಬೇಗನೇ ಊರಿನಿಂದ ಧೋಂಡೋರಾಯರನ್ನು ಕರೆದುಕೊಂಡು ಬಂದು ಶ್ರೀಮದಕ್ಷೋಭ್ಯರಿಗೆ ಒಪ್ಪಿಸಿದರು. ಗುರುಗಳೇ ಈ ಧೋಂಡೋರಾಯನು ನಿಮ್ಮ ಕುಮಾರನು, ನಮ್ಮ ಕುಮಾರನಲ್ಲ, ಎಂದು ಹೇಳುತ್ತಾ, ಈ ಹಿಂದೆ ಅವರನ್ನು ಆಕ್ಷೇಪ ಮಾಡಿದ್ದಕ್ಕೆ ಕ್ಷಮೆಯನ್ನು

ಬೇಡಿದರು. ಮತ್ತು ಶ್ರೀಮದಕ್ಷೋಭ್ಯರಲ್ಲಿ ವಿಶೇಷವಾದ ಭಕ್ತಿಯನ್ನು ತಾಳಿ ಶಿರಸಾ ನಮಿಸಿ ಹಿಂತಿರುಗಿ ಹೋದರು. ತದನಂತರದಲ್ಲಿ ಶ್ರೀಮದಕ್ಷೋಭ್ಯತೀರ್ಥರು ತಾವು ಸನ್ಯಾಸಪ್ರದಾನ ಮಾಡಿದ್ದ ಧೋಂಡೋರಾಯನಿಗೆ ಪ್ರಣವ ಮಂತ್ರೋಪದೇಶವನ್ನು ಮಾಡಿ ಸನ್ಯಾಸದೀಕ್ಷಾ ವಿಧಿಯನ್ನು ಸಾಂಗವಾಗಿ ನೆರವೇರಿಸಿ ಧೋಂಡೋರಾಯರಿಗೆ "ಶ್ರೀಜಯತೀರ್ಥ" ಎಂಬ ಸನ್ನ್ಯಾಸ ನಾಮವನ್ನು ಪ್ರದಾನ ಮಾಡಿದರು. ತದನಂತರದಲ್ಲಿ ಶ್ರೀಮದಕ್ಷೋಭ್ಯರು ಶ್ರೀಜಯತೀರ್ಥರಿಗೆ ಶ್ರೀಮದಾನಂದತೀರ್ಥರ ಎಲ್ಲ ಶಾಸ್ತ್ರಗಳನ್ನೂ ಉಪದೇಶಿಸಿದರು.

ಇಂತಹಾ ಮಹಾಮಹಿಮೋಪೇತರಾದ ಶ್ರೀಜಯತೀರ್ಥ ಮುನಿಗಳಿಂದ ಚತುರ್ಯುಗಮೂರ್ತಿಯಾದ ಶ್ರೀಮೂಲರಾಮನ ಪ್ರತಿಮೆಯು ಪೂಜಿತವಾಗಿ ಪರಂಪರಾಪ್ರಾಪ್ತವಾಗಿ ಮುಂದಿನ ಯತಿಗಳಿಗೆ ಬಂದಿತೆಂದೂ, ಶ್ರೀಹಂಸನಾಮಕ ಪರಮಾತ್ಮನ ಸತ್ಪರಂಪರೆಯು ಅವಿಚ್ಛಿನ್ನವಾಗಿ ಮುಂದುವರೆಯಿತೆಂದೂ ಕವಿಗಳು ವಿವರಿಸುತ್ತಾರೆ.

**ತಸ್ಮಾದುಪೇತಾ ಪ್ರತಿಮಾ ಹರೇಸ್ಸಾ ಕ್ರಮೇಣ ಸಿದ್ಧಾಂತಸಮೃದ್ಧಿಹೇತುಃ ।**
**ವಿದ್ಯಾಧಿರಾಜವ್ರತಿನಂ ಕವೀಂದ್ರಂ ವಾಗೀಶಮಸ್ಮಾದಪಿ ರಾಮಚಂದ್ರಮ್ ॥೧೮॥**

ಶ್ರೀಮತ್ ಜಯತೀರ್ಥರು ತಮ್ಮ ಶಿಷ್ಯರುಗಳಿಗೆ ಸಿದ್ಧಾಂತ ತತ್ವೋಪದೇಶದಿಂದಲೂ ಮತ್ತು ಟೀಕಾಗ್ರಂಥಗಳ ರಚನೆಯಿಂದ ಶ್ರೀಮನ್ಮಧ್ವಾಚಾರ್ಯರ ಸತ್ಸಿದ್ಧಾಂತದ ಅಭಿವೃದ್ಧಿ, ಪ್ರಸಿದ್ಧಿ ಮತ್ತು ಪ್ರಚಾರಗಳಿಗೆ ಕಾರಣರಾಗಿದ್ದರು. ಶ್ರೀಮನ್ಮೂಲರಾಮಚಂದ್ರನ ಪ್ರತಿಮೆಯೂ ಶ್ರೀಜಯತೀರ್ಥರಿಗೆ ಗುರುಗಳಾದ ಶ್ರೀಮದಕ್ಷೋಭ್ಯತೀರ್ಥರಿಂದ ಪ್ರಾಪ್ತವಾಗಿತ್ತು. ಜ್ಞಾನಪ್ರದಾನ ಮಾಡಿ ಶ್ರೀಮೂಲರಾಮಚಂದ್ರನು, ಆಚಾರ್ಯರ ಶಿಷ್ಯ ಪರಂಪರೆಯ ಮೂಲಕ ಸತ್ಸಿದ್ಧಾಂತವನ್ನು ಪ್ರಸಿದ್ಧವಾಗಿರುವಂತೆ ಅನುಗ್ರಹ ಮಾಡುತ್ತಿದ್ದನು. ಇಂತಹ ಅತ್ಯುತ್ತಮವಾದ ಪ್ರತಿಮೆಯು ಶ್ರೀಜಯತೀರ್ಥ ಮುನಿಗಳ ನಂತರದಲ್ಲಿ ಅವರ ಶಿಷ್ಯರಾದ ಶ್ರೀವಿದ್ಯಾಧಿರಾಜರು, ಅವರ ನಂತರ ಕ್ರಮವಾಗಿ ಶ್ರೀಕವೀಂದ್ರತೀರ್ಥರು, ಶ್ರೀವಾಗೀಶತೀರ್ಥರು, ಶ್ರೀರಾಮಚಂದ್ರತೀರ್ಥರುಗಳಿಗೆ ಕ್ರಮವಾಗಿ ಪ್ರಾಪ್ತವಾಯಿತು.

**ಈಗ ಕವಿಗಳು ಶ್ರೀವಿಬುಧೇಂದ್ರತೀರ್ಥ ಶ್ರೀಪಾದಂಗಳವರ ಮಹಿಮೆಯನ್ನು ವರ್ಣಿಸುತ್ತಾರೆ.**

**ಅಂತೇವಸಂಸ್ತಸ್ಯ ನೃಸಿಂಹದೇವೋಪಾಂತೇ ವಸಂಸ್ತತ್ಕೃಪಯಾ ಪ್ರತೀತಃ ।**
**ವಿಜಿತ್ಯ ಸರ್ವಾನ್ ವಿಬುಧೇಂದ್ರಯೋಗೀ ಬಭೌ ಹರೇರರ್ಪಿತಜೈತ್ರಪತ್ರಃ ॥೧೯॥**

ಈ ರೀತಿಯಾಗಿ ಹಂಸನಾಮಕ ಪರಮಾತ್ಮನ ವೈದಿಕ ಸದ್ವೈಷ್ಣವ ಸತ್ಪರಂಪರೆಯ ದ್ವೈತಸಿದ್ಧಾಂತದ ಮೂಲಮಹಾಸಂಸ್ಥಾನದ ವಿದ್ಯಾಸಿಂಹಾಸನದ (ಪೀಠಾಧಿಪತಿ) ಯತಿಗಳಾದ ಶ್ರೀರಾಮಚಂದ್ರತೀರ್ಥರ ಶಿಷ್ಯರು ಶ್ರೀವಿಭುದೇಂದ್ರತೀರ್ಥರು. ಶ್ರೀವಿಬುಧೇಂದ್ರತೀರ್ಥರು ಅಹೋಬಲ ಶ್ರೀನೃಸಿಂಹದೇವರ ಸಾನ್ನಿಧ್ಯದಲ್ಲಿ ಬಹುಕಾಲ ತಪಸ್ಸು ಮಾಡಿ, ಶ್ರೀನೃಸಿಂಹದೇವರನ್ನು

ತಮ್ಮ ಉಪಾಸನೆಯಿಂದ ಪ್ರಸನ್ನೀಕರಿಸಿಕೊಂಡು ಪ್ರಸಿದ್ಧ ಮಹಾ ವಿದ್ವಾಂಸರೆಂದು ಜಗನ್ಮಾನ್ಯರಾದರು. ದಿವ್ಯ ಜ್ಞಾನವನ್ನೂ ಶ್ರೀಹರಿಪರಮಾತ್ಮನ ಅಪರೋಕ್ಷವನ್ನೂ ಪಡೆದರು. ಅನಂತರ ಸಂಚಾರ ಕ್ರಮದಲ್ಲಿ ಅನೇಕ ಪ್ರತಿವಾದಿ ಭಯಂಕರರಾದ ವಿದ್ವಾಂಸರುಗಳನ್ನು ಜಯಿಸಿದರು. ಈ ಸಂದರ್ಭದಲ್ಲಿ ಪರಾಜಿತರಾದ ಪ್ರತಿವಾದಿ ವಿದ್ವಾಂಸರುಗಳು ಶ್ರೀವಿಬುಧೇಂದ್ರರನ್ನು ಶ್ಲಾಘಿಸಿ, ಶ್ಲೋಕಗಳನ್ನು ಬರೆದು ಜಯಸೂಚಕವಾದ ಸುವರ್ಣ ಜಯಪತ್ರಿಕೆಯನ್ನು ಶ್ರೀವಿಭುದೇಂದ್ರರಿಗೆ ನೀಡಿದರು. ಅಂತಹಾ ಒಂದು ನೂರು ಎಂಟು ಸುವರ್ಣ ಜಯಪತ್ರಿಕೆಗಳನ್ನು ಶ್ರೀವಿಬುಧೇಂದ್ರತೀರ್ಥರು ತಿರುಪತಿಯ ಶ್ರೀವೆಂಕಟೇಶ್ವರಸ್ವಾಮಿಗೂ, ಶ್ರೀರಂಗದ ಶ್ರೀರಂಗನಾಥಸ್ವಾಮಿಗೂ, ಅಹೋಬಲದ ಶ್ರೀನೃಸಿಂಹದೇವರಿಗೂ ಸಮರ್ಪಿಸಿದರು. (ತಿರುಪತಿಯ ಶ್ರೀವೇಂಕಟೇಶ್ವರಸ್ವಾಮಿಯ ಸನ್ನಿಧಿಯಲ್ಲಿ ಬಾಲಬೋಧಿನಿ ವ್ಯಾಖ್ಯಾನಕಾರರು ಈ ಸುವರ್ಣ ಜಯಪತ್ರಿಕೆಗಳನ್ನು ನೋಡಿರುವುದಾಗಿ ಬರೆದಿರುತ್ತಾರೆ). ಇಂತು ತಮ್ಮ ಅಗಾಧ ಪಾಂಡಿತ್ಯ, ಸಿದ್ಧಾಂತಜ್ಞಾನ, ಪರಂಪರಾವಿದ್ಯೆಯಿಂದ ಶ್ರೀವಿಬುಧೇಂದ್ರತೀರ್ಥರು ಜಗನ್ಮಾನ್ಯರಾಗಿ ವಿರಾಜಿಸಿದರು.

ಈಗ ಕವಿಗಳು ಶ್ರೀಮದಾನಂದತೀರ್ಥರ ಮೂಲಮಹಾಸಂಸ್ಥಾನದ (ವಿಬುಧೇಂದ್ರತೀರ್ಥರ) ಸತ್ಪರಂಪರೆಯನ್ನು ವಿವರಿಸುತ್ತಾರೆ.

**ಜಿತಾರಿರಸ್ಮಾದ್ರಘುನಂದನೋಽತಃ ತತಃ ಸುರೇಂದ್ರವ್ರತಿನೋ ಬಭೂವುಃ ।**
**ಪವಿತ್ರಿತಾಽಭೂದಖಿಲಾ ಧರಿತ್ರೀ ಚಿರಂ ಗೃಹೀತಾನಶನವ್ರತೈಸ್ತೈಃ ॥೨೦॥**

ಹಿಂದೆ ವರ್ಣಿಸಲ್ಪಟ್ಟ ಮಹಾಮಹಿಮೋಪೇತರಾದ ಶ್ರೀವಿಭುದೇಂದ್ರತೀರ್ಥ ಶ್ರೀಪಾದಂಗಳವರ ಶಿಷ್ಯರು ಶ್ರೀಜಿತಾಮಿತ್ರ ತೀರ್ಥರು. ಅವರ ಶಿಷ್ಯರು ಶ್ರೀರಘುನಂದನತೀರ್ಥರು. ಶ್ರೀರಘುನಂದನತೀರ್ಥರ ಸಾಕ್ಷಾತ್ ಶಿಷ್ಯರೇ ಶ್ರೀಸುರೇಂದ್ರ ತೀರ್ಥರು. ಶ್ರೀಸುರೇಂದ್ರತೀರ್ಥರು ನಿತ್ಯೋಪವಾಸ ವ್ರತವನ್ನು ಸ್ವೀಕರಿಸಿ ಮೂರು ಬಾರಿ ಭೂಮಂಡಲವನ್ನು ಸಂಚಾರ ಮಾಡಿ ಇಡೀ ಭೂಮಂಡಲವನ್ನು ಪವಿತ್ರವನ್ನಾಗಿ ಮಾಡಿದರು.

**ವಿಶೇಷಾಂಶ** : "ಯಶ್ಚಕಾರೋಪವಾಸೇನ ತ್ರಿವಾರಂ ಭೂಪ್ರದಕ್ಷಿಣಂ" ಎಂಬ ಪ್ರಮಾಣಾನುಸಾರವಾಗಿ ಶ್ರೀಸುರೇಂದ್ರತೀರ್ಥ ಶ್ರೀಪಾದಂಗಳವರು ಪ್ರತಿನಿತ್ಯದಲ್ಲಿಯೂ ಉಪವಾಸದಲ್ಲಿಯೇ ಇದ್ದು ಮೂರು ಬಾರಿ ಅಖಂಡ ಭಾರತಾವನಿಯ ಎಲ್ಲ ತೀರ್ಥ ಕ್ಷೇತ್ರಗಳ ನದಿ, ದೇವತಾ ಮೂರ್ತಿಗಳನ್ನು ಸಂದರ್ಶಿಸಿದರು ಎಂದು ಪ್ರಸಿದ್ಧಿಯಿದೆ. ಆ ವಿಚಾರ ಪ್ರಕಾರವಾಗಿ ಈ ರೀತಿಯಾಗಿ ವರ್ಣಿಸಿರುತ್ತಾರೆ.

ಈಗ ಕವಿಗಳು ಚತುಷಷ್ಟಿಕಲಾ ನಿಪುಣರೂ, ಚತುರಧಿಕಶತ ಗ್ರಂಥ ರಚಯಿತರೂ ಆದ ಶ್ರೀವಿಜಯೀಂದ್ರತೀರ್ಥ ಶ್ರೀಪಾದಂಗಳವರ ಮಹಿಮೆಗಳನ್ನು ವರ್ಣಿಸುತ್ತಾರೆ.

**ವಿದ್ವದ್ವರೋಽಸ್ಮಾದ್ವಿಜಯೀಂದ್ರಯೋಗೀ ವಿದ್ಯಾಸು ಹೃದ್ಯಾಸ್ವತುಲಪ್ರಭಾವಃ**
**ರತ್ನಾಭಿಷೇಕಂ ಕಿಲ ರಾಮರಾಜಾತ್ ಪ್ರಾಪ್ಯಾಗ್ರ್ಯಲಕ್ಷ್ಮೀನ(ರ) ಕೃತಾಗ್ರಹಾರಾನ್ ॥೨೧॥**

(ಬಾಲಬೋಧಿನಿ) ಶ್ರೀಸುರೇಂದ್ರತೀರ್ಥ ಶ್ರೀಪಾದಂಗಳವರು ಶ್ರೀವಿಜಯೀಂದ್ರತೀರ್ಥ ಶ್ರೀಪಾದಂಗಳವರಿಗೆ ಪ್ರಣವೋಪದೇಶಗಳನ್ನು ಮಾಡಿ ತಮ್ಮ ವೇದಾಂತ ದಿಗ್ವಿಜಯ ವಿದ್ಯಾಸಿಂಹಾಸನದಲ್ಲಿ ಪಟ್ಟಾಭಿಷೇಕ ಮಾಡಿದರು. ಶ್ರೀವಿಜಯೀಂದ್ರತೀರ್ಥರು ವಿದ್ವಾಂಸರಲ್ಲಿ ಶ್ರೇಷ್ಠರು. ಮನೋಹರವಾದ ಅರವತ್ತನಾಲ್ಕು ಕಲೆಗಳಲ್ಲಿಯೂ ಪ್ರಾವೀಣ್ಯ ಉಳ್ಳವರು. ಅಳಿಯ ರಾಮರಾಜನೆಂಬ ವಿಜಯನಗರದ ರಾಜನು ಶ್ರೀವಿಜಯೀಂದ್ರತೀರ್ಥರಿಗೆ ರತ್ನಾಭಿಷೇಕವನ್ನು ಮಾಡಿ, ವಿಶೇಷವಾದ ಧನ ಕನಕಾದಿಗಳನ್ನು ನೀಡಿದನು. ಶ್ರೀವಿಜಯೀಂದ್ರತೀರ್ಥರು ಆ ಸಂಪತ್ತಿನಿಂದ ಉತ್ತಮವಾದ ಬ್ರಾಹ್ಮಣಾಗ್ರಹಾರಗಳನ್ನು ನಿರ್ಮಿಸಿ ಶ್ರೇಷ್ಠ ಬ್ರಾಹ್ಮಣರುಗಳಿಗೆ ದಾನವಾಗಿ ನೀಡಿದರು

(ಗು.ಸೇ.) ಶ್ರೀವಿಜಯೀಂದ್ರತೀರ್ಥರು ಮೊದಲೇ ವಿದ್ವದ್ವರೇಣ್ಯರಾಗಿದ್ದರು. ಶ್ರೀಸುರೇಂದ್ರತೀರ್ಥರಿಂದ ಮನೋಹರವಾದ, ಅತ್ಯಂತ ಅಪೂರ್ವವಾದ ಎಲ್ಲಾ ವಿದ್ಯೆಗಳಲ್ಲಿಯೂ ಅಸಾಧಾರಣವಾದ ಕೌಶಲ್ಯವನ್ನು ಪಡೆದರು. ಅಳಿಯ ರಾಮರಾಯನಿಂದ ರತ್ನಾಭಿಷೇಕ ಭಾಜನರಾಗಿ ಸಂಪದ್ಭರಿತವಾದ ಅನೇಕ ಅಗ್ರಹಾರಗಳನ್ನು ನಿರ್ಮಿಸಿದರು. ಅವುಗಳನ್ನು ಶ್ರೇಷ್ಠ ಬ್ರಾಹ್ಮಣರಿಗೆ ದಾನಮಾಡಿದರು.

ಶ್ರೀವಿಜಯೀಂದ್ರತೀರ್ಥರ ವಿಶೇಷವಾದ, ಇತರರಲ್ಲಿಲ್ಲದ ಪ್ರಭಾವಗಳನ್ನು ಕವಿಗಳು ವರ್ಣಿಸುತ್ತಾರೆ.

**ವಾಕ್ಯೇ ಪದೇ ಪಾದವಿಲೋಚನೋಕ್ತೌ ವ್ಯಾಸೀಯಶಾಸ್ತ್ರೇ ಚ ಕೃತಾನ್‌ಪ್ರಬಂಧಾನ್ ।**
**ಆಸ್ತಾಂ ಬುಧಃ ಶ್ರೋತುಮಶೇಷಮೇಷಾಮಾಖ್ಯಾಃ (ಮಾಖ್ಯಾಂ)**
**ಸಮಾಖ್ಯಾದ್ಯದಿ ಪಂಡಿತೋಽಸೌ ॥೨೨॥**

ಶ್ರೀವಿಜಯೀಂದ್ರತೀರ್ಥ ಶ್ರೀಪಾದಂಗಳವರು ಪೂರ್ವಮೀಮಾಂಸಾ, ವ್ಯಾಕರಣ, ನ್ಯಾಯ, ವೇದಾಂತ ಶಾಸ್ತ್ರಗಳೆಂಬ ಚತುಃಶಾಸ್ತ್ರಗಳಲ್ಲಿ (ತಂತ್ರಚತುಷ್ಟಯದಲ್ಲಿ) ಅನೇಕ ಗ್ರಂಥಗಳನ್ನು ರಚಿಸಿರುತ್ತಾರೆ. ಅತಿ ಬಹುಲವಾದ ಈ ಗ್ರಂಥಗಳನ್ನು ನೂರು ವರ್ಷ ಆಯುಸ್ಸುಳ್ಳ ಮನುಷ್ಯನು ಒಬ್ಬ ಗುರುವಿನಿಂದ ಅಧ್ಯಯನ ಮಾಡಿ, ಅರ್ಥ ಮಾಡಿಕೊಂಡು, ಪ್ರವಚನ ಮಾಡುವುದು ಅತ್ಯಂತ ಕಠಿಣವಾದ ಕಾರ್ಯ. ಅಷ್ಟೇ ಏಕೆ, ಶ್ರೀವಿಜಯೀಂದ್ರತೀರ್ಥರು ರಚಿಸಿರುವ ಎಲ್ಲ ಗ್ರಂಥಗಳ ಹೆಸರುಗಳನ್ನು ಸಂಪೂರ್ಣವಾಗಿ ಒಬ್ಬನು ಹೇಳಲು ಶಕ್ಯವಾದರೆ ಅವನನ್ನು ಖಂಡಿತವಾಗಿಯೂ ಪಂಡಿತನೆಂದು ಹೆಸರಿಸಬಹುದು. ಶ್ರೀವಿಜಯೀಂದ್ರರ ಎಲ್ಲ ಗ್ರಂಥಗಳ ಹೆಸರುಗಳನ್ನು ನೆನಪಿನಲ್ಲಿಟ್ಟುಕೊಂಡು ಹೇಳುವುದು ಬಹಳ ಕಷ್ಟ ಎಂದು ಭಾವ.

**ವಿಶೇಷಾಂಶ :**

೧) ಶ್ರೀವಿಜಯೀಂದ್ರತೀರ್ಥರು ೧೦೪ ಗ್ರಂಥಗಳನ್ನು ರಚಿಸಿರುವರೆಂದು ಐತಿಹಾಸಿಕ ಪ್ರಸಿದ್ಧಿಯಿದೆ.

೨) ಆಖ್ಯಾಂ ಎಂಬ ಬಾಲಬೋಧಿನಿ ವ್ಯಾಖ್ಯಾನದ ಏಕವಚನ ಪಾಠದಲ್ಲಿ ಜಾತ್ಯೇಕವಚನ ಎಂದಿಟ್ಟುಕೊಳ್ಳಬೇಕು.

೩) ವ್ಯಾಕರಣ, ಪೂರ್ವಮೀಮಾಂಸ, ತರ್ಕ, ಇವುಗಳನ್ನು ಕ್ರಮವಾಗಿ ಪದ ವಾಕ್ಯ ಪ್ರಮಾಣಗಳೆಂದು ಹೇಳುತ್ತಾರೆ. ವೇದಾಂತಶಾಸ್ತ್ರವನ್ನೂ ಸೇರಿಸಿ ಈ ನಾಲ್ಕು ಶಾಸ್ತ್ರಗಳನ್ನು ಚತುಃಶಾಸ್ತ್ರವೆಂದೂ ತಂತ್ರಚತುಷ್ಟಯವೆಂದೂ ಹೇಳುತ್ತಾರೆ.

೪) ತರ್ಕಶಾಸ್ತ್ರ ಪ್ರವರ್ತಕರಾದ ಗೌತಮರು ಒಂದು ಬಾರಿ ಮೇಲೆ ನೋಡುತ್ತಾ ಏನೋ ಆಲೋಚಿಸುತ್ತಾ ಹೋಗುತ್ತಿರುವಾಗ, ಒಂದು ಹಾಳು ಭಾವಿಯಲ್ಲಿ ಬಿದ್ದರೆಂದೂ, ಆಗ ದೇವತೆಗಳು ಅವರನ್ನು ಭಾವಿಯಿಂದ ಮೇಲಕ್ಕೆತ್ತಿ ಅವರ ಕಾಲುಗಳಲ್ಲಿ ಎರಡು ಕಣ್ಣುಗಳನ್ನು ಕೊಟ್ಟರೆಂದೂ ಕಥೆಯಿದೆ. ಆದುದರಿಂದ ಗೌತಮರಿಗೆ ಪಾದವಿಲೋಚನರೆಂದೂ, ಅಕ್ಷಪಾದರೆಂದೂ ಹೆಸರು ಬಂದಿದೆ.

**ಅವತಾರಿಕೆ :** ಈಗ ಕವಿಗಳು ಶ್ರೀವಿಜಯೀಂದ್ರತೀರ್ಥ ಶ್ರೀಪಾದಂಗಳವರ ಶಿಷ್ಯರಾದ ಶ್ರೀಸುಧೀಂದ್ರತೀರ್ಥ ಶ್ರೀಪಾದಂಗಳವರ ಮಹಿಮೆಯನ್ನು ವರ್ಣಿಸುತ್ತಾರೆ.

**ಸಾ ರಾಮಚಂದ್ರಪ್ರತಿಮಾ ಜಯೀಂದ್ರಾತ್ ಸುಧೀಂದ್ರಯೋಗೀಂದ್ರಮಗಾತ್ ಕ್ರಮೇಣ ।**
**ವಿಸ್ತೀರ್ಣಕೀರ್ತಿರ್ವಿಬಭಾವವನ್ಯಾಂ ವಿಖ್ಯಾತವಿದ್ವಜ್ಜನವಂದ್ಯಪಾದಃ ॥೨೩॥**

**ತಾತ್ಪರ್ಯ :** ಯತಿಪರಂಪರಾ ಪ್ರಾಪ್ತವಾದ ಶ್ರೀಮೂಲರಾಮಚಂದ್ರ ಪ್ರತಿಮೆಯು ಶ್ರೀವಿಜಯೀಂದ್ರತೀರ್ಥ-ರಿಂದ ಅವರ ಶಿಷ್ಯರಾದ ಶ್ರೀಸುಧೀಂದ್ರತೀರ್ಥರಿಗೆ ಪ್ರಾಪ್ತವಾಯಿತು. ಶ್ರೀಸುಧೀಂದ್ರತೀರ್ಥ ಶ್ರೀಪಾದಂಗಳವರು ಪ್ರಖ್ಯಾತರಾದ ವಿದ್ವಾಂಸರುಗಳಿಂದಲೂ ನಮಸ್ಕಾರ ಹೊಂದಲು ಯೋಗ್ಯವಾದ ಪಾದಕಮಲಗಳನ್ನುಳ್ಳವರೂ, ಭೂಮಂಡಲದಲ್ಲಿ ವಿಸ್ತಾರವಾಗಿ ಹರಡಿರುವ ಕೀರ್ತಿಯುಳ್ಳವರೂ ಆಗಿದ್ದರು.

**ಅವತಾರಿಕೆ :** ಮುಂದಿನ ಎರಡು ಶ್ಲೋಕಗಳಿಂದ ಶ್ರೀಸುಧೀಂದ್ರತೀರ್ಥ ಶ್ರೀಪಾದಂಗಳವರ ಇನ್ನಿತರ ಮಹಿಮೆಗಳನ್ನು ವರ್ಣಿಸುತ್ತಾರೆ.

**ಪವಿತ್ರಿತಾಮೇಷ ಧರಾಂ ವಿತನ್ವನ್ ಸಂಚಾರತೋ ದಿಗ್ವಿಜಯಾಪದೇಶಾತ್ ।**
**ಶ್ರೀವೇಂಕಟಕ್ಷ್ಮಾಪರಿಣೇಸಮಕ್ಷೇ ವಾದೇನ ವಿದ್ವೇಷಿಬುಧಾನ್ ವಿಜಿಗ್ಯೇ ॥೨೪॥**

**ತಾತ್ಪರ್ಯ :** ಶ್ರೀಸುಧೀಂದ್ರತೀರ್ಥ ಶ್ರೀಪಾದಂಗಳವರು ದಿಗ್ವಿಜಯದ ನೆಪದಿಂದ

ತೀರ್ಥಕ್ಷೇತ್ರಗಳನ್ನು ಸಂದರ್ಶಿಸುತ್ತಾ ಭೂಮಂಡಲವನ್ನು ಪವಿತ್ರಗೊಳಿಸುತ್ತಿದ್ದರು. ಈ ರೀತಿಯಾಗಿ ಸಂಚಾರ ಮಾಡುತ್ತಾ ಒಂದು ಬಾರಿ ಶ್ರೀಪಾದರು ವೆಂಕಟ ಭೂಪಾಲ ರಾಜನ ಆಸ್ಥಾನಕ್ಕೆ ಬಂದರು. ಅಲ್ಲಿ ಶಾಸ್ತ್ರ ವಿಚಾರ ವಾಖ್ಯಾರ್ಥ ಪ್ರಾರಂಭಿಸಿ ತಮ್ಮ ಪ್ರತಿವಾದಿಗಳನ್ನು ಪರಾಜಿತರನ್ನಾಗಿ ಮಾಡಿದರು. ಈ ರೀತಿಯಾಗಿ ಅನೇಕ ವಿದ್ವಾಂಸರುಗಳ ಮೇಲೆ ದಿಗ್ವಿಜಯ ಸಾಧಿಸಿದರು.

ಈಗ ಕವಿಗಳು ಶ್ರೀಸುಧೀಂದ್ರತೀರ್ಥರು ಪ್ರತಿವಾದಿಗಳ ಮೇಲೆ ವಿಜಯ ಸಾಧಿಸಿ ಜಯಸೂಚಕವಾದ ಬಿರುದು ಬಾವಲಿಗಳನ್ನು ಸಂಪಾದಿಸಿದ್ದನ್ನು ವರ್ಣಿಸುತ್ತಾರೆ.

**ಸಮೇತ್ಯ ಶಂಖಾದಿಮಜೈತ್ರಚಿಹ್ನಂ ನೃಪಾದಮುಷ್ಮಾದಪಿ ಸಹ್ಯಜಾಯಾಃ ।**
**ತಟಸ್ಥಿತಾಂ ತಾಪಸಸೇವಿತಾಂ ತಾಂ ಪುರಿಂ ಪ್ರಪೇದೇ ಪುನರುಕ್ತನಾಕಾಮ್ ॥೨೫॥**

**ತಾತ್ಪರ್ಯ :** ಶ್ರೀಸುಧೀಂದ್ರತೀರ್ಥ ಶ್ರೀಪಾದಂಗಳವರು ವೆಂಕಟಭೂಪಾಲನಿಂದ ವಿಜಯಶಾಲಿಗಳಿಗೆ ಸಲ್ಲಬೇಕಾದ ಶಂಖ ಮುಂತಾದ ಬಿರುದಿನ ಚಿಹ್ನೆಗಳನ್ನು ಸಂಪಾದಿಸಿದರು. ಅಲ್ಲಿಂದ ಸಹ್ಯಪರ್ವತದಿಂದ ಹುಟ್ಟಿದ ಕಾವೇರಿನದೀ ತೀರದ ಪಟ್ಟಣವಾದ ಕುಂಭಕೋಣಕ್ಕೆ ಬಂದರು. ತಾಪಸರುಗಳಿಂದ ಸೇವಿತವಾದ, ಸ್ವರ್ಗವನ್ನು ಮೀರುವ ಸೌಂದರ್ಯವನ್ನು ಹೊಂದಿರುವ ಈ ಪುರಿಯು ದರ್ಶನ ಮಾತ್ರದಿಂದ ಸ್ವರ್ಗವು ವ್ಯರ್ಥ, ಈ ಪಟ್ಟಣವೇ ಸಾಕು ಎಂಬ ಭಾವನೆಯನ್ನು ಉಂಟು ಮಾಡುತ್ತಿತ್ತು.

**ವಿಶೇಷಾಂಶ :** ಶಂಖಾದಿ ಸಕಲ ವಿಜಯ ಚಿಹ್ನೆಗಳು ಶ್ರೀಸುಧೀಂದ್ರೀತೀರ್ಥರ ಸಂಸ್ಥಾನದಲ್ಲಿ ಮೊದಲಿನಿಂದಲೂ ಇತ್ತು. ಈಗ ವೆಂಕಟಭೂಪಾಲನು ಪುನಃ ಬೇರೆ ವಿಜಯಸೂಚಕವಾದ ಶಂಖಾದಿ ಬಿರುದು ಬಾವಲಿಗಳನ್ನು ನೀಡಿದನು, ಇದು "ನೃಪಾದಮುಷ್ಮಾದಪಿ" ಎಂಬ ಅಪಿ ಶಬ್ದದಿಂದ ಸೂಚಿತವಾಗುತ್ತದೆ. ಈ ಶ್ಲೋಕದಲ್ಲಿರುವ ತಾಂ ಎಂಬುದಕ್ಕೆ ಮುಂದಿನ ಶ್ಲೋಕದ ಯಾ, ಯಾಂ ಇತ್ಯಾದಿಗಳ ಜತೆಗೆ ಅನ್ವಯ.

**ಅವತಾರಿಕೆ :** ನಗರದ ಹೆಸರನ್ನು ಹೇಳುತ್ತಾ, ಹಿಂದಿನ ಶ್ಲೋಕಾರ್ಥವನ್ನು ವಿವರಿಸುತ್ತಾ, ಆ ನಗರವನ್ನು ವರ್ಣಿಸುತ್ತಾರೆ.

**ಸದಾ ಪರೀತಾ ಪರಿಣಾಹವಾಹಿಪ್ರವಾಹರೀತ್ಯಾ ಭುವಿ ಸಹ್ಯಪುತ್ರ್ಯಾ ।**
**ಪರಾಜಿತಾಖಂಡಲಪತ್ತನಶ್ರೀರ್ಯಾ ಕುಂಭಕೋಣಾಭಿಧಯಾ ಸಮಿಂಧೇ ॥೨೬॥**

**ತಾತ್ಪರ್ಯ :** ಯಾವ ಪಟ್ಟಣದ ಎರಡು ಪಾರ್ಶ್ವಗಳಲ್ಲಿಯೂ ಕಾವೇರಿ ನದಿಯ ಪ್ರವಾಹವು ಬೆಟ್ಟದಿಂದ ಹರಿಯುವ ನಿರ್ಝರದಂತೆ ಹರಿಯುತ್ತಿದೆಯೋ, ತನ್ನ ಸಮೃದ್ಧತೆ ಮತ್ತು ಶೋಭೆಯಿಂದ ಇಂದ್ರನ ಅಮರಾವತಿಯ ಶೋಭೆಯನ್ನು ತಿರಸ್ಕರಿಸುತ್ತಿದೆಯೋ, ಅದೇ ಈ ಕುಂಭಕೋಣವೆಂಬ ನಗರಿಯು. ಶ್ರೀಸುಧೀಂದ್ರತೀರ್ಥರು ಅಂತಹಾ ಈ ನಗರವನ್ನು ತಲುಪಿದರು.

**ಅವತಾರಿಕೆ :** "ನಗರಾರ್ಣವ ಶೈಲರ್ತು" ಎಂಬುದಾಗಿ ಮಹಾಕಾವ್ಯಗಳಲ್ಲಿ ನಗರ, ಸಮುದ್ರ

ಇತ್ಯಾದಿ ಹದಿನೆಂಟು ವಿಷಯುಗಳನ್ನು ವರ್ಣಿಸಬೇಕೆಂದು ಹೇಳಿರುವುದರಿಂದ ಶ್ರೀರಾಘವೇಂದ್ರವಿಜಯ ಮಹಾಕಾವ್ಯದ ಎರಡನೆಯ ಸರ್ಗದ 27ನೇ ಶ್ಲೋಕದಿಂದ ಒಟ್ಟು 25 ಶ್ಲೋಕಗಳಲ್ಲಿ ಕುಲಕದಿಂದ ಕುಂಭಕೋಣ ನಗರಿಯನ್ನು ವರ್ಣಿಸುತ್ತಾರೆ.

**ಪಾತಾಲಪರ್ಯಂತನಿವಿಷ್ಟಮೂಲಾಂ ವೈರಿಂಚಗೇಹವ್ಯತಿಲಂಘಿಮೌಲಿಮ್ ।**
**ಪೀತಾಂಬರಾಂ ಹಾಟಕಹಾರಿಶೋಭಾಂ ಮನ್ಯೇ ಸಲಕ್ಷ್ಮೀಂ**
**ಪರದೇವತಾಂ ಯಾಮ್ ॥೨೭॥**

**ತಾತ್ಪರ್ಯ :** ಸರ್ವೋತ್ತಮನಾದ ಶ್ರೀಮನ್ನಾರಾಯಣನು ವಿರಾಡ್ರೂಪಿಯಾಗಿ ಇಡೀ ಜಗತ್ತನ್ನು ವ್ಯಾಪಿಸಿರುತ್ತಾನೆ. ಈ ಕುಂಭಕೋಣ ನಗರಿಯೂ ಸಹಾ ವಿರಾಡ್ರೂಪಿಯಾದ ಶ್ರೀಮನ್ನಾರಾಯಣನಂತೆ ಇದೆ. 'ಪಾತಾಲಮೇತಸ್ಯಹಿ ಪಾದಮೂಲಂ' ಎಂದು ಶ್ರೀಮದ್ಭಾಗವತದಲ್ಲಿ ವರ್ಣಿಸಿದ ರೀತಿಯಿಂದ ಶ್ರೀಮನ್ನಾರಾಯಣನು ಪಾತಾಲದವರೆಗೆ ವ್ಯಾಪಿಸಿರುವ ಪಾದವುಳ್ಳವನಾಗಿದ್ದಾನೆ. ಸತ್ಯಲೋಕಕ್ಕಿಂತಲೂ ಮೇಲಿರುವ ಶಿರಸ್ಸನ್ನು ಉಳ್ಳವನಾಗಿದ್ದಾನೆ. ಪೀತಾಂಬರಧಾರಿಯೂ, ಸುವರ್ಣಾಭರಣಗಳಿಂದ ಮನೋಹರವಾದ ಶೋಭೆಯುಳ್ಳವನೂ, ಲಕ್ಷ್ಮೀ ಸಹಿತನಾದ ಶ್ರೀಮನ್ನಾರಾಯಣನಂತೆ ಈ ನಗರಿಯು ಇದೆ. ಈ ಕುಂಭಕೋಣ ನಗರಿಯು ಗೃಹ ನಿರ್ಮಾಣಕ್ಕೋಸ್ಕರ ಆಳವಾದ ವಾಸ್ತು (ಅಸ್ತಿಭಾರವನ್ನು) ಹಾಕಿರುವುದರಿಂದ ಪಾತಾಳದವರೆಗೆ ಪ್ರವೇಶಿಸಿದೆ. ಬಹಳ ಎತ್ತರವಾಗಿರುವುದರಿಂದ ಸತ್ಯಲೋಕಕ್ಕಿಂತಲೂ ಎತ್ತರವಾದ ಅಗ್ರಭಾಗವನ್ನು ಉಳ್ಳದ್ದಾಗಿದೆ. ಗಗನಚುಂಬಿಯಾಗಿರುವುದರಿಂದ (ಪೀತ=ಚುಂಬಿಸಲ್ಪಟ್ಟ, ಅಂಬರಾಂ=ಆಕಾಶವುಳ್ಳದ್ದು). ಅಲ್ಲಿಯ ಜನರೆಲ್ಲರೂ ಪೀತಾಂಬರಧಾರಿಗಳಾಗಿರುವುದರಿಂದಲೂ ಈ ಪಟ್ಟಣವು (ಪೀತಾ=ಹಳದಿಯಾದ, ಅಂಬರಾಂ=ವಸ್ತ್ರವುಳ್ಳ) ಪೀತಾಂಬರಾ ಎನ್ನಿಸಿಕೊಂಡಿದೆ. ಈ ನಗರವು ಸುವರ್ಣ ಸಮೃದ್ಧಿಯಿಂದಲೂ, ಜನರಲ್ಲಿರುವ ಸುವರ್ಣಾಭರಣ ಸಮೃದ್ಧಿಯಿಂದಲೂ ಶೋಭಿಸುತ್ತಿದೆ. ಲಕ್ಷ್ಮಿಯಿಂದ (ಕಾಂತಿಯಿಂದ ಮತ್ತು ಸಂಪತ್ತಿನಿಂದ) ಕೂಡಿರುವ ಈ ಕುಂಭಕೋಣ ನಗರಿಯು ಹೀಗೆ ಹೇಳಿದ ರೀತಿಯಿಂದ ಪರದೇವತೆಯಾದ ಶ್ರೀಮನ್ನಾರಾಯಣನೆಂದು ನಾನು ತಿಳಿಯುತ್ತೇನೆ ಎಂದು ಕವಿಗಳು ವರ್ಣಿಸಿರುತ್ತಾರೆ.

**ಅವತಾರಿಕೆ :** ಶ್ವೇತದ್ವೀಪಾತ್ಮಕಳಾದ ಶ್ರೀಲಕ್ಷ್ಮೀದೇವಿಯ ಸಾರೂಪ್ಯವನ್ನು ಈ ಕುಂಭಕೋಣ ನಗರಿಗೆ ಕವಿಗಳು ಹೇಳುತ್ತಿದ್ದಾರೆ.

**ಅಧ್ಯಾಸಿತಾ ರಾಜತಸಾಲಮಧ್ಯೇ ಅಸಾರಸೌಧಚ್ಛಲಮಾಧವೇನ ।**
**ಖೇಯಾಂ (ಯೇಂ) ಬುಧೌ ಕ್ಷೀರಮಯೇ**
**ನಿವಿಷ್ಟಾ ಶ್ವೇತಾದಿಮದ್ವೀಪಮಯೀ ರಮಾ ಯಾ ॥೨೮॥**

**ತಾತ್ಪರ್ಯ :** ಕುಂಭಕೋಣ ನಗರಿಯ ಸುತ್ತಲೂ ಆಳವಾದ ಒಂದು ನೀರಿನ ಕಂದಕವಿದೆ.

ನಗರದ ಸುತ್ತಲೂ ಬೆಳ್ಳಿಯ ಕೋಟೆಯ ಗೋಡೆಯಿದೆ. ನಗರದ ಮಧ್ಯದಲ್ಲಿ ಎತ್ತರವಾದ ಸಾಲಾದ ಮಹಡಿಯ ಮನೆಗಳಿವೆ. ಹೀಗೆ ಇಲ್ಲಿರುವ ಆಳವಾದ ಕಂದಕವು ಹಾಲಿನಿಂದ ತುಂಬಿದ ಕ್ಷೀರಸಮುದ್ರದಂತಿದೆ. ಅದರ ಮಧ್ಯದಲ್ಲಿರುವ ಬೆಳ್ಳಿಯ ಪ್ರಾಕಾರದಿಂದ ಸುತ್ತುವರೆಯಲ್ಪಟ್ಟ ನಗರವು ಲಕ್ಷ್ಮೀಸ್ವರೂಪವಾದ ಶ್ವೇತದ್ವೀಪದಂತಿದೆ. ಈ ನಗರದ ಮಧ್ಯದಲ್ಲಿರುವ ಸಾಲಾಗಿರುವ ಎತ್ತರವಾದ ಮಹಡಿಯ ಮನೆಗಳು ಶ್ವೇತದ್ವೀಪದಲ್ಲಿ ಮಲಗಿರುವ ಶ್ರೀಮನ್ನಾರಾಯಣನಂತೆ ಕಾಣಿಸುತ್ತಿವೆ. ಆದುದರಿಂದ ಈ ನಗರಿಯು ಮಧ್ಯದಲ್ಲಿ ಮಲಗಿರುವ ಶ್ರೀಮನ್ನಾರಾಯಣನನ್ನುಳ್ಳ ಸುತ್ತಲೂ ಕ್ಷೀರಸಮುದ್ರದಿಂದ ಕೂಡಿರುವ ಶ್ವೇತದ್ವೀಪ ಸ್ವರೂಪಳಾದ ಶ್ರೀಮಹಾಲಕ್ಷ್ಮಿಯಂತೆ ವಿರಾಜಿಸುತ್ತಿದೆ ಎಂದು ಭಾವ.

**ಅವತಾರಿಕೆ :** ಈ ನಗರಿಯು ಅಷ್ಟೊಂದು ವಿಶಾಲವಾಗಿರುವುದಕ್ಕೆ ಕಾರಣವನ್ನು ಕವಿಗಳು ಉತ್ಪ್ರೇಕ್ಷಾಲಂಕಾರದಿಂದ ವರ್ಣಿಸುತ್ತಾರೆ.

**ಸ್ವಯಂಭುವಾ ಯಾ ಸಸೃಜೇ ಪುರಸ್ತಾತ್ ಬ್ರಹ್ಮಾಂಡಸೃಷ್ಟೇಃ ಪರಿಶೀಲನಾಯ ।**
**ನೋ ಚೇದಮುಷ್ಯಾಃ ಕಥಮೀದೃಶೀ ಸ್ಯಾತ್‌ವಿಶಾಲತಾ ವಿಶ್ವನಿವಾಸಯೋಗ್ಯಾ ॥೨೯॥**

**ತಾತ್ಪರ್ಯ :** ಚತುರ್ಮುಖ ಬ್ರಹ್ಮದೇವರು ಈ ವಿಶಾಲವಾದ ಬ್ರಹ್ಮಾಂಡವನ್ನು ನಿರ್ಮಿಸುವುದಕ್ಕೆ (ಸೃಷ್ಟಿಸುವುದಕ್ಕೆ) ಮೊದಲು ಅಭ್ಯಾಸಕ್ಕೋಸ್ಕರ ಮಾಡಿಕೊಂಡಿರುವ ಮಾದರಿಯಾದ (ಕಐಂಒ) ಬ್ರಹ್ಮಾಂಡದಂತೆ ಈ ಕುಂಭಕೋಣ ನಗರಿಯು ಇದೆ. ಹೀಗೆ ಇದು ಚತುರ್ಮುಖ ಬ್ರಹ್ಮದೇವರು ಮೊದಲು ಮಾಡಿದ ಅಭ್ಯಾಸದ ಒಂದು ಮಾದರಿ ಶಿಲ್ಪವಲ್ಲದಿದ್ದರೆ ಸಮಸ್ತ ಪ್ರಪಂಚವೂ ವಾಸಮಾಡಲು ಸಾಕಾಗುವಷ್ಟು ವಿಶಾಲತೆಯು ಈ ನಗರಕ್ಕೆ ಬರಲು ಹೇಗೆ ಸಾಧ್ಯ? (ಶಿಲ್ಪಿಗಳು ದೊಡ್ಡ ಶಿಲ್ಪವನ್ನು ಮಾಡುವುದಕ್ಕೆ ಮೊದಲು ಎಂದು ಪುಟ್ಟದಾದ ಮಾದರಿಯನ್ನು ಮೊದಲು ಚೆನ್ನಾಗಿ ನಿರ್ಮಿಸುತ್ತಾರೆ. ನಂತರ ಅದರಂತೆಯೇ ಉತ್ತಮವಾದ ಶಿಲ್ಪವನ್ನು ತಯಾರಿಸುತ್ತಾರೆ. ಬ್ರಹ್ಮದೇವರು ಬ್ರಹ್ಮಾಂಡ ಸೃಷ್ಟಿಯನ್ನು ಮಾಡುವುದಕ್ಕೆ ಮೊದಲು ಹೀಗೆಯೇ ಬ್ರಹ್ಮಾಂಡದ ಚಿಕ್ಕ ಪ್ರತಿಕೃತಿಯಂತೆ ಇರುವ ಈ ನಗರಿಯನ್ನು ನಿರ್ಮಿಸಿರಬೇಕು. ಇಲ್ಲವಾದಲ್ಲಿ ಈ ನಗರದಲ್ಲಿ ಅಷ್ಟೊಂದು ವೈಶಾಲ್ಯತೆ ಬರಲು ಹೇಗೆ ಸಾಧ್ಯ ಎಂಬುದಾಗಿ ಕುಂಭಕೋಣ ನಗರಿಯ ವಿಸ್ತಾರವನ್ನು ನೋಡಿ ಕವಿಗಳು ಉತ್ಪ್ರೇಕ್ಷಿಸುತ್ತಿದ್ದಾರೆ.)

**ಅವತಾರಿಕೆ :** ಈಗ ಕವಿಗಳು ಕುಂಭಕೋಣ ನಗರದಲ್ಲಿರುವ ಕಂದಕವನ್ನು ವರ್ಣಿಸುತ್ತಾರೆ.

**ಯತ್‌ಖೇಯಖೇಲದ್‌ದ್ವಿಪದಾನವಾರಿಗಂಧೇ ತದಂಭೋರುಹಸೌರಭೇ ಚ ।**
**ಲೋಭಾತ್ ಭ್ರಮನ್ ಕಾಂಚನ ನಾಪ ಭೃಂಗೋ ನೈವಾತಿವಾಂಛಸ್ಯ ನಿಜೇಷ್ಟಲಾಭಃ ॥೩೦॥**

**ತಾತ್ಪರ್ಯ :** ಈ ಕುಂಭಕೋಣ ನಗರದ ಸುತ್ತಲೂ ಆಳವಾದ ನೀರಿನ ಕಂದಕವಿದೆ. ಅಲ್ಲಿ ತುಂಬಾ ಹೂಗಳು ಬೆಳೆದು ಅರಳಿ ಸುವಾಸನೆಯನ್ನು ಬೀರುತ್ತಾ ಇರುತ್ತವೆ. ಇದೇ

ನೀರಿನ ಕಂದಕದಲ್ಲಿ ಮದ್ದಾನೆಗಳು ವಿಹಾರ ಮಾಡುತ್ತಾ ಇರುತ್ತವೆ. ಅವುಗಳ ಗಂಡಸ್ಥಳದಿಂದ ಸುರಿಯುವ ಮದೋದಕದ ಸುವಾಸನೆಯು ಎಲ್ಲ ದಿಕ್ಕಿಗೂ ಹರಡುತ್ತಾ ಇರುತ್ತದೆ. ಒಂದು ದುಂಬಿಯು ಒಂದು ಬಾರಿ ತಾವರೆಯ ಹೂವಿನ ವಾಸನೆಯಿಂದ ಆಕರ್ಷಿಸಲ್ಪಟ್ಟು ಅಲ್ಲಿಗೆ ಬರುತ್ತದೆ. ಅಷ್ಟರಲ್ಲಿ ಆನೆಗಳ ಮದೋದಕದ ಸುವಾಸನೆಯಿಂದ ಆಕರ್ಷಣೆಗೊಂಡು ಈ ಕಡೆಗೆ ಹೋಗುತ್ತದೆ. ಮತ್ತೆ ತಾವರೆ ಹೂವಿನ ವಾಸನೆಗೆ ಆಕರ್ಷಿತವಾಗಿ ಆ ಕಡೆಗೆ ಹೋಗುತ್ತದೆ. ಪುನಃ ಮದೋದಕದ ವಾಸನೆಗೆ ಇತ್ತ ಕಡೆ ಹೋಗುತ್ತದೆ. ಹೀಗೆ ಅತ್ತ ಇತ್ತ ಅಲೆಯುತ್ತಾ ಆ ದುಂಬಿಯು ಯಾವ ಒಂದರ ಸುವಾಸನೆಯನ್ನೂ ಪೂರ್ತಿಯಾಗಿ ಅನುಭವಿಸುವುದಿಲ್ಲ. ರಸಾನುಭವವನ್ನೂ ಮಾಡುವುದಿಲ್ಲ. ಅತಿಯಾಗಿ ಆಸೆ ಪಡುವವನಿಗೆ ಯಾವ ವಸ್ತುವೂ ಸಿಗುವುದಿಲ್ಲ. 'ಅತಿಯಾಸೆ ಗತಿಕೇಡು' 'ಇದಂಚ ನಾಸ್ತಿ ಪರಂಚ ಲಭ್ಯತೇ' ಇದೂ ಇಲ್ಲ ಅದೂ ಇಲ್ಲ ಎಂಬ ಗಾದೆಯಂತೆ ದುಂಬಿಯ ಅವಸ್ಥೆಯಾಗುತ್ತದೆ. (ಕುಂಭಕೋಣ ನಗರದ ಸುತ್ತಲೂ ಇಂತಹಾ ಅದ್ಭುತ ವೈಭವದ ಸುಂದರ ದೃಶ್ಯಗಳಿವೆ ಎಂದು ಭಾವ.)

**ಅವತಾರಿಕೆ :** ಈಗ ಕುಂಭಕೋಣ ನಗರದ ಎತ್ತರವನ್ನೂ ಮತ್ತು ಅಲ್ಲಿ ವಾಸಿಸುವ ಎಲ್ಲರೂ ಪಂಡಿತರೆಂಬುದನ್ನೂ ಕವಿಗಳು ವರ್ಣಿಸುತ್ತಾರೆ.

**ನ ಕೇವಲಂ ಯದ್ವಲಭೀವಿಹಂಗಾಃ ಪ್ರಾಂಶುಸ್ಥಿತಾ (ತೌ) ನಂದನನೀಡಭಾಜಃ ।**
**ಗೀರ್ವಾಣವಾಣ್ಯಾ ವಿಹಗಾನ್ವಿವಾವಿವಾದ್ಯೈಃ ವಿಜಿಗ್ಯಿರೇ ಹಂತ ವಿಚಿತ್ರವಾಗ್ಭಿಃ ॥೩೧॥**

**ತಾತ್ಪರ್ಯ :** ಕುಂಭಕೋಣ ನಗರಿಯ ಮನೆಗಳ ಸೂರಿಗೆ ಆಧಾರವಾದ ಮರದ ಪಟ್ಟಿಗಳಲ್ಲಿ ಅನೇಕ ಪಕ್ಷಿಗಳು ವಾಸ ಮಾಡುತ್ತ ಇದ್ದವು. ಅವು ಬಹಳ ಎತ್ತರವಾದ ಮನೆಗಳಲ್ಲಿ ವಾಸ ಮಾಡುತ್ತಿದ್ದುದರಿಂದ ನಂದನವನದಲ್ಲಿ ವಾಸ ಮಾಡುವ ಪಕ್ಷಿಗಳನ್ನು ಮೀರಿಸುತ್ತಿದ್ದವು. ಅಷ್ಟೇ ಅಲ್ಲ, ತಮ್ಮ ಜಾತಿಯ ಭಾಷೆಯಿಂದ ಮಾತ್ರವಲ್ಲ, ಸಂಸ್ಕೃತಭಾಷೆಯಲ್ಲಿ ಪ್ರಾಸಗರ್ಭಿತವಾದ ಆಶ್ಚರ್ಯಕರವಾದ ಮಾತುಗಳನ್ನು ಆಡಿ ತಮ್ಮ ವಾದ ಚಾತುರ್ಯ, ವ್ಯವಹಾರ ನಿಪುಣತೆಗಳಿಂದ ನಂದನವನದ ಪಕ್ಷಿಗಳನ್ನು ಜಯಿಸುತ್ತಿದ್ದವು. (ಕುಂಭಕೋಣ ನಗರದ ಎತ್ತರವು ನಂದನವನವನ್ನು ಮೀರಿಸುತ್ತಿತ್ತು. ಚತುಃಶಾಸ್ತ್ರಗಳಲ್ಲಿ ಪಾಂಡಿತ್ಯವುಳ್ಳ ಪಂಡಿತರ ನಿರಂತರ ಸಹವಾಸದಿಂದ ಅಲ್ಲಿಯ ಪಕ್ಷಿಗಳಿಗೂ ಅದ್ಭುತವಾದ ಪಾಂಡಿತ್ಯ ಉಂಟಾಗಿತ್ತು. ಅವುಗಳು ದೇವತೆಗಳ ಸಹವಾಸವುಳ್ಳ ನಂದನವನದ ಪಕ್ಷಿಗಳಿಗಿಂತಲೂ ಹೆಚ್ಚಿನ ಪಾಂಡಿತ್ಯವನ್ನು ಪಡೆದು ಆ ಪಕ್ಷಿಗಳನ್ನು ಜಯಿಸುತ್ತಿದ್ದವು. ಕುಂಭಕೋಣ ನಗರದಲ್ಲಿ ಸರ್ವದಾ ಶಾಸ್ತ್ರಾಭ್ಯಾಸ ಮಾಡುತ್ತಿರುವ ಅದ್ಭುತ ಪಾಂಡಿತ್ಯ ಸಂಪನ್ನರಾದ ಅನೇಕಾನೇಕ ಪಂಡಿತರುಗಳಿದ್ದರು ಎಂದು ತಾತ್ಪರ್ಯ).

**ಅವತಾರಿಕೆ :** ಬ್ರಹ್ಮದೇವರಿಗೆ ಬ್ರಹ್ಮಾಂಡರೂಪವಾದ ಶರೀರಪ್ರಾಪ್ತಿ ಇದೆ. "ನಾದತ್ತಮುಪತಿಷ್ಠತೇ" ತಾನು ಕೊಡದಿದ್ದರೆ ತನಗೆ ಸಿಗುವುದಿಲ್ಲ ಎಂಬ ನ್ಯಾಯದಿಂದ ಬ್ರಹ್ಮದೇವರು ಬ್ರಹ್ಮಾಂಡ ದಾನ ಮಾಡದಿದ್ದರೆ ಅವರಿಗೆ ಬ್ರಹ್ಮಾಂಡಶರೀರ ಪ್ರಾಪ್ತಿಯಾಗುತ್ತಿರಲಿಲ್ಲ.

ಆದುದರಿಂದ ಬ್ರಹ್ಮದೇವರು ಈ ನಗರದ ರೂಪದಲ್ಲಿರುವ ಬ್ರಹ್ಮಾಂಡವನ್ನು ದಾನ ಮಾಡಿರಬೇಕು ಎಂದು ಕವಿಗಳು ಉತ್ಪ್ರೇಕ್ಷೆ ಮಾಡುತ್ತಿದ್ದಾರೆ.

**ದತ್ತೋ ಮಹಾದಾನಕೃತಾ ವಿಧಾತ್ರಾ ಸರೋಜಸದ್ಮಾಂಡಕಟಾಹ ಏವ ।**
**ಯಾ ಸ್ವರ್ಗಸತ್ಯಾಂಚಿತಲೋಕಯುಕ್ತಾ ನೋ ಚೇತ್ ಸ ತದ್ವಾನ್ ವಿಧಿರಸ್ತು ಕೇನ ॥೩೨॥**

**ತಾತ್ಪರ್ಯ :** ಭೂದಾನ ಮಾಡಿದವನಿಗೆ ಭೂಮಿ ಸಿಗುತ್ತದೆ. ಕನ್ಯಾದಾನ ಮಾಡಿದವನಿಗೆ ಜನ್ಮಾಂತರದಲ್ಲಿ ಉತ್ತಮಳಾದ ಪತ್ನಿಯು ಸಿಗುತ್ತಾಳೆ. ಹಣವನ್ನು ಕೊಟ್ಟವರಿಗೆ ಹಣ ಸಿಗುತ್ತದೆ. ಈ ರೀತಿಯಾಗಿ ಯಾರು ಏನನ್ನು ದಾನ ಮಾಡುತ್ತಾರೋ ಜನ್ಮಾಂತರದಲ್ಲಿ ಅವರಿಗೆ ಅಂತಹಾ ವಸ್ತುಗಳು ಸಿಗುತ್ತದೆ ಎಂದು ಶಾಸ್ತ್ರದಲ್ಲಿ ಹೇಳಿರುತ್ತಾರೆ. ಪ್ರಕೃತದಲ್ಲಿ ಚತುರ್ದಶ ಭುವನಗಳಿಂದ ಕೂಡಿ ಬ್ರಹ್ಮಾಂಡದಂತಿರುವ ಈ ಕುಂಭಕೋಣ ನಗರಿಯನ್ನು ದಾನವಾಗಿ ಕೊಟ್ಟಿರಬೇಕು. ಇಲ್ಲವಾದಲ್ಲಿ ಶ್ರೀಚತುರ್ಮುಖರಿಗೆ ಬ್ರಹ್ಮಾಂಡವೇ ಶರೀರವಾಗಿ ಇರಲು ಹೇಗೆ ಸಾಧ್ಯ?

**ವಿಶೇಷ : "ತತಃ ಕೂಟಸ್ಥಂ ಸೃಜದ್ ವಿಧಿಂ ಬ್ರಹ್ಮಾಂಡ ವಿಗ್ರಹಂ"** ಎಂದು ಮಣಿ ಮಂಜರಿಯಲ್ಲಿ ಹೇಳಿರುವಂತೆ ಬ್ರಹ್ಮದೇವರಿಗೆ ಬ್ರಹ್ಮಾಂಡವೇ ಶರೀರವು. ಈ ರೀತಿಯ ಶರೀರವು ಶ್ರೀಬ್ರಹ್ಮದೇವರಿಗೆ ಬರಬೇಕಾದರೆ ಅವರು ಬ್ರಹ್ಮಾಂಡದಂತಿರುವ ವಸ್ತುವನ್ನು ದಾನಮಾಡಿರಬೇಕು. ಕುಂಭಕೋಣ ನಗರಿಯು ಸ್ವರ್ಗ, ಸತ್ಯಲೋಕ, ಪಾತಾಳಾದಿ ಲೋಕಗಳಿಂದ ಕೂಡಿದ ಬ್ರಹ್ಮಾಂಡದಂತೆ ಇರುವುದರಿಂದ ಶ್ರೀಬ್ರಹ್ಮದೇವರು ಮೊದಲು ಈ ನಗರಿಯನ್ನು ದಾನಮಾಡಿ ಅದರ ಫಲವಾಗಿ ಬ್ರಹ್ಮಾಂಡವೆಂಬ ಶರೀರವನ್ನು ಪಡೆದರು ಎಂದು ಕವಿಗಳು ವರ್ಣಿಸುತ್ತಿದ್ದಾರೆ. ಈ ನಗರಿಯ ಬ್ರಹ್ಮಾಂಡದಷ್ಟು ವಿಶಾಲವಾಗಿದೆ ಎಂಬುದು ಕವಿಗಳ ಭಾವ, ತಾತ್ಪರ್ಯ.

**ಅವತಾರಿಕೆ :** ಈ ನಗರದಲ್ಲಿರುವ ಭವನಗಳು ದಿನ ದಿನದಲ್ಲಿ ಎತ್ತರವಾಗುತ್ತಾ ಇರುವುದರಿಂದ ಇವುಗಳಿಂದ ಬ್ರಹ್ಮಾಂಡ ಕಟಾಹವು ಸೀಳಿ ಗಂಗೆಯು ಬ್ರಹ್ಮಾಂಡದೊಳಗೆ ಬಂದಳೆಂದು ಕವಿಗಳು ಉತ್ಪ್ರೇಕ್ಷಿಸುತ್ತಿದ್ದಾರೆ.

**ವರ್ಧಿಷ್ಣುಸೌಧಾಗ್ರವಿಭಿನ್ನಪದ್ಮಜನ್ಮಾಂಡನಿರ್ಯದ್ಬಹಿರಂಬುಪೂರಮ್ ।**
**ವದಂತಿ ಗಂಗಾಂ ಪರಥಾ ಕಥಂ ವಾ ಸ್ಯಾತ್**
**ವಾಮನಾಂಘ್ರೇರ್ದ್ರುಹಿಣಾಂಡಭೇದಃ ॥೩೩॥**

**ತಾತ್ಪರ್ಯ :** ಶ್ರೀಮನ್ನಾರಾಯಣನು ವಾಮನಾವತಾರವನ್ನು ಮಾಡಿ ಬಲಿ ಚಕ್ರವರ್ತಿಯಲ್ಲಿ ಮೂರಡಿ ಭೂಮಿಯನ್ನು ದಾನವನ್ನಾಗಿ ಬೇಡಿ, ಮೇಲಿನ ಲೋಕಗಳನ್ನು ಅಳೆಯುವಾಗ, ತನ್ನ ಕಾಲಿನ ಉಗುರುಗಳಿಂದ ಬ್ರಹ್ಮಾಂಡದ ಮೇಲಿನ ಪದರವನ್ನು ಭೇದಿಸಿದನು. ಆಗ ಬ್ರಹ್ಮಾಂಡದ ಹೊರಭಾಗದಲ್ಲಿದ್ದ ಜಲವು ಬ್ರಹ್ಮಾಂಡದೊಳಗೆ ಬಂದು ಹರಿಯಲಾರಂಭಿಸಿತು. ಅದನ್ನೇ ಗಂಗೆಯೆಂದು ಕರೆಯುತ್ತಾರೆ ಎಂಬ ಪೌರಾಣಿಕ ಪ್ರಸಿದ್ಧವಾದ ಕಥೆಯಿದೆ. ಆದರೆ ಆ

ಕಥೆಯು ಸರಿಯಲ್ಲ. ಕುಳ್ಳನಾಗಿರುವ ವಾಮನನ ಕಾಲಿನ ಉಗುರಿನಿಂದ ಅತ್ಯಂತ ಎತ್ತರವಾದ ಬ್ರಹ್ಮಾಂಡ ಕಟಾಹದ ಭೇದನವು ಹೇಗೆ ಆಗಿರಲು ಸಾಧ್ಯ? ನಮ್ಮ ಕುಂಭಕೋಣ ನಗರದ ಜನರು ಅತ್ಯಂತ ಐಶ್ವರ್ಯವಂತರು. ಅವರು ದಿನ ದಿನವೂ ಮಹಡಿಯ ಮೇಲೆ ಮಹಡಿಗಳನ್ನು ಕಟ್ಟುತ್ತಾ ತಮ್ಮ ಮನೆಗಳನ್ನು ಎತ್ತರಿಸುತ್ತಿದ್ದಾರೆ. ಇಂತಹ ಮಹಡಿಯ ಮನೆಗಳ ತುದಿಯು ತಗುಲಿ ಎತ್ತರದಲ್ಲಿರುವ ಬ್ರಹ್ಮಾಂಡ ಕಟಾಹವು ಸೀಳಿಹೋಯಿತು. ಅದರಿಂದ ಬ್ರಹ್ಮಾಂಡ ಕಟಾಹದ ಹೊರಗಿದ್ದ ನೀರು ಒಳಗೆ ಬಂದು ಗಂಗೆಯಾಗಿ ಹರಿದಿದೆಯೇ ಹೊರತು ಕುಳ್ಳನಾದ ವಾಮನನ ಕುಳ್ಳ ಕಾಲಿನ ಬೆರಳಿನಿಂದಲ್ಲ. ಈ ರೀತಿಯಾಗಿ ಕವಿಗಳು ಕುಂಭಕೋಣ ನಗರದ ಮಹಡಿ ಮನೆಗಳ ಎತ್ತರವನ್ನು ಅತಿಶಯೋಕ್ತಿಯಿಂದ ವರ್ಣಿಸಿದ್ದಾರೆ.

**ಅವತಾರಿಕೆ** : ಈಗ ಮತ್ತೊಂದು ರೀತಿಯಿಂದ ಕುಂಭಕೋಣ ನಗರದ ಎತ್ತರವನ್ನು ವರ್ಣಿಸುತ್ತಾರೆ.

**ಮಾಧ್ಯಂದಿನೇ (ಮಧ್ಯಂದಿನೇ) ಯೌವತನರ್ಮಕೀರ್ಣಕಸ್ತೂರಿಕಾಪಂಕಿಲಸೌಧಶೃಂಗೇ ।**
**ರಥಂ ನು ಮಗ್ನಂ ಪರಿಕೃಷ್ಯ ಯಸ್ಯಾಂ ಶ್ರಾಂತೋऽರ್ಕವಾಜೀ ಸಮಯಾ ಕರೋತಿ ॥೩೪॥**

**ತಾತ್ಪರ್ಯ** : ಎತ್ತರವಾದ ಕುಂಭಕೋಣ ನಗರದ ಮಹಡಿ ಮನೆಯ ಮೇಲ್ಭಾಗದಲ್ಲಿ ಯುವತಿಯರ ಸಮೂಹವು ತಮ್ಮ ವಿಲಾಸವನ್ನು ತೋರುತ್ತಾ, ಕಸ್ತೂರಿಯನ್ನು ಚೆಲ್ಲುತ್ತಾ ವಿಹರಿಸುತ್ತಿತ್ತು. ಆ ಕಸ್ತೂರಿಯು ನೀರು, ತೈಲ ಮುಂತಾದ ದ್ರವ ಪದಾರ್ಥ ಸೇರಿ ಕೆಸರಾಗಿತ್ತು. ಮಧ್ಯಾಹ್ನದ ಸಮಯದಲ್ಲಿ ಸೂರ್ಯನ ಕುದುರೆಯು ಈ ದಾರಿಯಲ್ಲಿ ರಥವನ್ನು ಎಳೆಯುತ್ತಾ ಬರುತ್ತಿದ್ದಾಗ ರಥವು ಕೆಸರಿನಲ್ಲಿ ಹೂತುಹೋಯಿತು. ಸೂರ್ಯನ ಕುದುರೆಯ ರಥವನ್ನು ಎಳೆದು ಬಳಲಿ ಮಧ್ಯಾಹ್ನ ಸಮಯದಲ್ಲಿ ಈ ರೀತಿಯಾಗಿ ಮಂದವಾಗಿ ಹೋಗುತ್ತಿದ್ದುದರಿಂದ ಬೇಸಿಗೆ ಕಾಲದಲ್ಲಿ ಹಗಲು ದೀರ್ಘವಾಯಿತು. ಸೂರ್ಯನ ರಥವು ಮಧ್ಯಾಹ್ನದ ಸಮಯದಲ್ಲಿ ಈ ನಗರದ ಜನರಿಗೆ ಅತ್ಯಂತ ಸಮೀಪದಲ್ಲಿಯೂ ಇರುತ್ತಿತ್ತು. ಹೀಗೆ ಈ ನಗರದ ಮಹಡಿಯ ಮನೆಗಳ ಅತ್ಯಂತ ಎತ್ತರವಾಗಿದ್ದವು. ಇಲ್ಲಿನ ಯುವತಿಯರು ಅತ್ಯಂತ ಸುಂದರಿಯರು, ವಿಲಾಸಿನಿಯರು ಎಂದು ಕವಿಗಳು ವರ್ಣಿಸಿದ್ದಾರೆ.

**ಅವತಾರಿಕೆ** : ಮತ್ತೊಂದು ರೀತಿಯಿಂದ ಕುಂಭಕೋಣ ನಗರವನ್ನು ವರ್ಣಿಸುತ್ತಿದ್ದಾರೆ.

**ಅಗಾಧಪಾಥಃ ಪರಿಖಾಂ ಯದೀಯಾಮ್ ಅಂಭೋನಿಧಿಃ ಸ್ವೇನ ಸಮೀಚಕಾರ ।**
**ಗಾಂಭೀರ್ಯಗರ್ವೇಣ ಜಡಾಶ್ರಯತ್ವಾದೇನಂ ರುಷಾऽಗಸ್ತ್ಯಮುನಿಃ ಪಪೌ ಕಿಮ್ ॥೩೫॥**

**ತಾತ್ಪರ್ಯ** : ಸಮುದ್ರ ಜಲಾಶ್ರಯವಾದುದು ಮತ್ತು ಜಡರಿಗೂ ಆಶ್ರಯವಾದುದರಿಂದ ಮಂದ ಬುದ್ಧಿಯುಳ್ಳದ್ದು. ಆದುದರಿಂದಲೂ ತಾನು ಬಹಳ ಆಳವಾಗಿರುವವನು, ಗಂಭೀರನು ಎಂಬ ಅಹಂಕಾರದಿಂದ ಸಮುದ್ರಕ್ಕಿಂತಲೂ ಹೆಚ್ಚು ಜನಭರಿತವಾಗಿ ಆಳವಾಗಿರುವ ಕುಂಭಕೋಣ

ನಗರಿಯ ತನಗಿಂತಲೂ ಅಧಿಕವಾದ ಕಂದಕವು ನನಗೆ ಸಮಾನವೆಂದು ಪರಿಗಣಿಸಿ ಪ್ರಚಾರಮಾಡಿತು. ಇದರಿಂದ ಅಗಸ್ತ್ಯ ಋಷಿಗಳಿಗೆ ಸಿಟ್ಟು ಬಂದು ಸಮುದ್ರವನ್ನು ಏಕಾಪೋಷನದಿಂದ ಕುಡಿದು ಬಿಟ್ಟರು ಎಂದು ಕವಿಗಳು ಅಗಸ್ತ್ಯರು ಸಮುದ್ರದ ನೀರನ್ನೆಲ್ಲಾ ಪಾನ ಮಾಡಿದ ಕಾರಣವನ್ನು ಉತ್ಪ್ರೇಕ್ಷಿಸಿ ವರ್ಣಿಸುತ್ತಿದ್ದಾರೆ.

**ಅವತಾರಿಕೆ :** ಚತುರ್ಮುಖ ಬ್ರಹ್ಮದೇವರಲ್ಲಿರುವ ಧರ್ಮವು ಕುಂಭಕೋಣ ನಗರಿಯಲ್ಲಿಯೂ ಇರುವುದರಿಂದ ಕುಂಭಕೋಣ ನಗರವು ಬ್ರಹ್ಮಸ್ವರೂಪವೆಂದು ಪುನಃ ಪ್ರಕಾರಾಂತರದಿಂದ ಕವಿಗಳು ವರ್ಣಿಸುತ್ತಿದ್ದಾರೆ.

**ಪದ್ಮಾऽತ್ಮಭೂಬ್ರಹ್ಮಹಿರಣ್ಯಗರ್ಭಸ್ರಷ್ಟೃತ್ವಹಂಸಾಶ್ರಯವಾಕ್‌ಪ್ರಿಯತ್ವೈಃ ।**
**ಚತುರ್ಮುಖತ್ವೇನ ಚ ಧಾತೃಭಾವಾಚ್ಚಕಾಸ್ತಿ ಯಸ್ಯಾಶ್ಚತುರಾನನತ್ವಮ್ ॥೩೬॥**

**ತಾತ್ಪರ್ಯ :** ಬ್ರಹ್ಮದೇವರು ಪದ್ಮದಲ್ಲಿ ಹುಟ್ಟಿದ್ದರಿಂದ ಪದ್ಮಭೂ ಆಗಿದ್ದಾರೆ. ಈ ಕುಂಭಕೋಣ ನಗರಿಯೂ ಪದ್ಮವೆಂಬ ನಿಧಿಗೂ ಪದ್ಮಗಳಿಗೂ ಆಶ್ರಯವಾಗಿರುವುದರಿಂದ ಇದೂ ಕೂಡಾ "ಪದ್ಮಭೂ" ಆಗಿದೆ. ಆ ರೀತಿಯಾಗಿ ಪದ್ಮಭೂತ್ವವು ಬ್ರಹ್ಮದೇವರಿಗೂ ಕುಂಭಕೋಣನಗರಿಗೂ ಸಮಾನವಾಗಿದೆ. ಈ ಬ್ರಹ್ಮದೇವರು ಆತ್ಮ ಎಂಬ ಹೆಸರುಳ್ಳ ನಾರಾಯಣನಿಂದ ಹುಟ್ಟಿದ್ದರಿಂದ ಆತ್ಮಭೂ ಆಗಿದ್ದಾರೆ. ಕುಂಭಕೋಣ ನಗರಿಯು ಆತ್ಮನೆಂಬ ಹೆಸರುಳ್ಳ ನಾರಾಯಣನಿಗೆ ಆಶ್ರಯವಾಗಿದೆ (ಇಲ್ಲಿ ನಾರಾಯಣ ದೇವರ ಆಲಯಗಳಿವೆ.) ಈ ರೀತಿಯಾಗಿ ಆತ್ಮಭೂತ್ವವು ಕುಂಭಕೋಣ ನಗರ ಮತ್ತು ಬ್ರಹ್ಮದೇವರಿಗೆ ಸಮಾನವಾಗಿದೆ. ಬ್ರಹ್ಮದೇವರು ಯಥಾಯೋಗ್ಯವಾಗಿ ಗುಣಪೂರ್ಣರಾಗಿದ್ದಾರೆ. ಕುಂಭಕೋಣನಗರವೂ ಸಂಪದ್ಭರಿತವಾಗಿದೆ. ಆದುದರಿಂದ ಬ್ರಹ್ಮದೇವರು ಮತ್ತು ಕುಂಭಕೋಣ ನಗರಿಗಳಿಗೆ ಬ್ರಹ್ಮತ್ವ ಅಂದರೆ ತುಂಬಿರುವಿಕೆ ಎಂಬ ಸಮಾನ ಧರ್ಮವಿದೆ. ಬ್ರಹ್ಮದೇವರು ಹಿರಣ್ಯಾತ್ಮಕವಾದ ಬ್ರಹ್ಮಾಂಡದಲ್ಲಿ ಹುಟ್ಟಿ ಅಲ್ಲಿ ಇರುವುದರಿಂದ ಹಿರಣ್ಯಗರ್ಭ ಎನಿಸಿಕೊಂಡಿದ್ದಾರೆ. ಕುಂಭಕೋಣ ನಗರವು ಹಿರಣ್ಯವನ್ನು ತನ್ನ ಗರ್ಭದಲ್ಲಿ ತುಂಬಿಕೊಂಡು ಇರುವುದರಿಂದ ಹಿರಣ್ಯಗರ್ಭವಾಗಿದೆ. ಈ ರೀತಿಯಾಗಿ ಬ್ರಹ್ಮದೇವರು ಮತ್ತು ಕುಂಭಕೋಣ ನಗರಿಗಳಿಗೆ ಎರಡಕ್ಕೂ ಹಿರಣ್ಯಗರ್ಭತ್ವವಿದೆ. ಬ್ರಹ್ಮದೇವರು ಜಗತ್ ಸೃಷ್ಟಿಕರ್ತಾ ಆಗಿದ್ದಾರೆ. ಕುಂಭಕೋಣ ನಗರಿಯೂ ಪ್ರಜಾಸೃಷ್ಟಿಯನ್ನು ಮಾಡುತ್ತದೆ. ಆ ನಗರದಲ್ಲಿ ಪ್ರತಿದಿನವೂ ಅನೇಕ ಮಂದಿ ಮಕ್ಕಳು ಹುಟ್ಟುತ್ತಿದ್ದಾರೆ. ಹೀಗೆ ಬ್ರಹ್ಮದೇವರು ಮತ್ತು ಕುಂಭಕೋಣ ನಗರಿಗಳಲ್ಲಿ ಸ್ರಷ್ಟೃತ್ವ – ಸೃಷ್ಟಿ ಮಾಡುವಿಕೆ ಎಂಬ ಧರ್ಮವಿದೆ. ಬ್ರಹ್ಮದೇವರು ಹಂಸವೆಂಬ ವಾಹನವನ್ನು ಆಶ್ರಯಿಸಿರುತ್ತಾರೆ. ಕುಂಭಕೋಣ ನಗರವು ಪರಮಹಂಸರಿಗೆ ಆಶ್ರಯವಾಗಿದೆ. ಈ ರೀತಿಯಾಗಿ ಬ್ರಹ್ಮದೇವರು ಮತ್ತು ಕುಂಭಕೋಣ ನಗರ ಇವೆರಡರಲ್ಲಿಯೂ "ಹಂಸಾಶ್ರಯತ್ವ" ಎಂಬ ಧರ್ಮವಿದೆ. ಬ್ರಹ್ಮದೇವರು ಸರಸ್ವತೀ ಪ್ರಿಯರಾಗಿದ್ದಾರೆ. ಈ ಕುಂಭಕೋಣ ನಗರಿಯ ನಾಮೋಚ್ಚಾರಣೆಯಿಂದ ಪಾಪ ಪರಿಹಾರ ಮಾಡುವುದರಿಂದ ಮಾತಿಗೆ ಅತ್ಯಂತ ಪ್ರಿಯವಾಗಿದೆ. ಜನರು ಈ ನಗರದ ನಾಮೋಚ್ಚಾರಣೆ

ಮಾಡಿ ಸಂತೋಷ ಪಡುತ್ತಾರೆ. ಹೀಗೆ ಈ ನಗರ ಹಾಗೂ ಬ್ರಹ್ಮದೇವರು ಇಬ್ಬರಲ್ಲಿಯೂ ವಾಕ್ ಪ್ರಿಯತ್ವವಿದೆ. ಬ್ರಹ್ಮದೇವರಿಗೆ ನಾಲ್ಕು ಮುಖಗಳಿರುವುದರಿಂದ ಅವರು ಚತುರ್ಮುಖರೆಂದು ಖ್ಯಾತರಾಗಿದ್ದಾರೆ. ಕುಂಭಕೋಣ ನಗರಕ್ಕೆ ನಾಲ್ಕು ದಿಕ್ಕಿನಲ್ಲೂ ವಿಶಾಲವಾದ ಹೆಬ್ಬಾಗಿಲುಗಳಿವೆ. ಆದುದರಿಂದ ಈ ನಗರವೂ ಚತುರ್ಮುಖ ಉಳ್ಳದ್ದಾಗಿದೆ. ಈ ರೀತಿಯಾಗಿ ಇಬ್ಬರಲ್ಲಿಯೂ ಚತುರ್ಮುಖತ್ವ ಎಂಬ ಧರ್ಮವಿದೆ. ಬ್ರಹ್ಮದೇವರು ಜಗತ್ತನ್ನು ಧರಿಸಿ ಪೋಷಿಸುವುದರಿಂದ "ಧಾತಾ" ಎನಿಸಿಕೊಂಡಿದ್ದಾರೆ. ಈ ಕುಂಭಕೋಣ ನಗರವು ಜನರನ್ನು ಧರಿಸಿ ಪೋಷಿಸುವುದರಿಂದ "ಧಾತ್ರಿ" ಆಗಿದೆ. ಈ ರೀತಿಯಾಗಿ "ಧಾತೃಭಾವ" ಎಂದರೆ ಧರಿಸಿ ಪೋಷಿಸುವಿಕೆಯು ಬ್ರಹ್ಮದೇವರು ಮತ್ತು ನಗರಗಳಿಗೆ ಸಮಾನವಾಗಿದೆ. ಈ ರೀತಿಯಾಗಿ ಶ್ರೀಬ್ರಹ್ಮದೇವರ ಎಲ್ಲ ಧರ್ಮಗಳೂ ಈ ಕುಂಭಕೋಣ ನಗರಿಯಲ್ಲಿರುವುದರಿಂದ ಈ ನಗರಿಗೆ "ಚತುರಾನನತ್ವ" ಎಂದರೆ ಚತುರ್ಮುಖತ್ವವು ಶೋಭಿಸುತ್ತದೆ ಎಂಬುದಾಗಿ ತಾತ್ಪರ್ಯ. ಈ ಶ್ಲೋಕದಲ್ಲಿ "ಶ್ಲೇಷ"ದಿಂದ ಕವಿಗಳು ಚಮತ್ಕಾರವಾಗಿ ಕುಂಭಕೋಣ ನಗರಕ್ಕೆ ಚತುರಾನನತ್ವವನ್ನು ಉತ್ಪ್ರೇಕ್ಷಿಸಿದ್ದಾರೆ.

ಗುರುಪಾದಸೇವಾ ವ್ಯಾಖ್ಯಾನ ರೀತಿಯಿಂದ – ಚತುರ್ಮುಖ ಬ್ರಹ್ಮದೇವರು ಪದ್ಮದಲ್ಲಿ ಹುಟ್ಟಿದ್ದರಿಂದ ಪದ್ಮದಲ್ಲಿ ಕುಳಿತಿರುವುದರಿಂದ ಪದ್ಮಭೂ ಎನಿಸಿಕೊಂಡಿದ್ದಾನೆ. ಪರಮಾತ್ಮನಿಂದ ಹುಟ್ಟಿದ್ದರಿಂದ ಆತ್ಮಭೂ ಎನಿಸಿಕೊಂಡಿದ್ದಾನೆ. ಹೀಗೆ ಬ್ರಹ್ಮನಲ್ಲಿ ಪದ್ಮಾತ್ಮ ಭೂತ್ವ ಎಂಬ ಧರ್ಮವಿದೆ. ಕುಂಭಕೋಣ ನಗರಿಯಲ್ಲಿಯೂ ಪದ್ಮಾ ಎಂದರೆ ಲಕ್ಷ್ಮೀದೇವಿ, ಆತ್ಮಾ ಎಂದರೆ ಬ್ರಹ್ಮದೇವರು ಅಥವಾ ನಾರಾಯಣ ಇವರಿಗೆ ಆಶ್ರಯವಾಗಿರುವಿಕೆ ಎಂಬ ಧರ್ಮವಿರುವುದರಿಂದ ಪದ್ಮಾತ್ಮ ಭೂತ್ವ ಎಂಬ ಧರ್ಮವಿದೆ. ಕುಂಭಕೋಣದಲ್ಲಿ ಲಕ್ಷ್ಮೀಯೂ ಬಹಳವಾದ ಸಂಪತ್ತು ಬ್ರಹ್ಮ ಮತ್ತು ವಿಷ್ಣುವಿನ ಆಲಯವೂ ಇದೆ ಎಂದು ಅರ್ಥ. ಬ್ರಹ್ಮದೇವರಲ್ಲಿ ಬ್ರಹ್ಮತ್ವ, ಹಿರಣ್ಯಗರ್ಭತ್ವ, ಸ್ರಷ್ಟೃತ್ವಗಳಿವೆ. ಕುಂಭಕೋಣದಲ್ಲೂ ಬ್ರಹ್ಮ ಎಂದರೆ ಬ್ರಾಹ್ಮಣ ಜಾತಿ, ಹಿರಣ್ಯಗರ್ಭ ಎಂದರೆ ಚಿನ್ನದಿಂದ ತುಂಬಿದ ನಿಧಿ ಇವುಗಳನ್ನು ಉತ್ಪತ್ತಿ ಮಾಡುವಿಕೆ ಎಂಬ ಧರ್ಮವಿರುವುದರಿಂದಲೂ ಕುಂಭಕೋಣಕ್ಕೆ ಬ್ರಹ್ಮ ಹಿರಣ್ಯಗರ್ಭ, ಸ್ರಷ್ಟೃತ್ವಗಳಿವೆ.

ಬ್ರಹ್ಮದೇವರಿಗೆ ಹಂಸಪಕ್ಷಿಯೆ ವಾಹನವಾಗಿ ಆಶ್ರಯವಾಗಿರುವುದರಿಂದ ಹಂಸಾಶ್ರಯತ್ವವಿದೆ. ಕುಂಭಕೋಣದಲ್ಲಿ ಹಂಸ ಎಂದರೆ ಯತಿಗಳು ಮತ್ತು ಉದಾರವಾದ (ಲೋಭವಿಲ್ಲದ) ರಾಜರಿಗೆ ಆಶ್ರಯವಾಗಿರುವಿಕೆ ಎಂಬ ಧರ್ಮವಿರುವುದರಿಂದ ಹಂಸಾಶ್ರಯತ್ವವಿದೆ. ಬ್ರಹ್ಮದೇವರು ವಾಕ್ ಎಂದರೆ ಸರಸ್ವತಿ ದೇವಿಗೆ ಪ್ರಿಯರಾಗಿರುವುದರಿಂದ ಅವರಲ್ಲಿ ವಾಕ್ ಪ್ರಿಯತ್ವವಿದೆ. ಕುಂಭಕೋಣದಲ್ಲಿ ವಾಕ್ ಉಳ್ಳ ವಿದ್ವಾಂಸರಿಗೆ ಪ್ರಿಯವಾಗಿರುವಿಕೆ ಎಂಬ ಧರ್ಮವಿರುವುದರಿಂದ ವಾಕ್ ಪ್ರಿಯತ್ವವಿದೆ. ಕುಂಭಕೋಣದಲ್ಲಿ ಬಹಳ ಮಂದಿ ವಿದ್ವಾಂಸರು ವಾಸಿಸುತ್ತಾರೆ ಎಂದು ಅಭಿಪ್ರಾಯ. ಬ್ರಹ್ಮದೇವರಿಗೆ ನಾಲ್ಕು ಮುಖಗಳಿರುವುದರಿಂದ ಚತುರ್ಮುಖತ್ವವಿದೆ. ಕುಂಭಕೋಣಕ್ಕೆ ನಾಲ್ಕು ದಿಕ್ಕಿನಲ್ಲೂ ಬಾಗಿಲುಗಳಿರುವುದರಿಂದ ಚತುರ್ಮುಖತ್ವವಿದೆ. ಬ್ರಹ್ಮದೇವರಿಗೆ ಧಾತಾ ಎಂಬ ಹೆಸರಿರುವುದರಿಂದ ಧಾತೃಭಾವ, ಧಾತೃತ್ವವಿದೆ. ಕುಂಭಕೋಣ ನಗರಕ್ಕೆ ಎಲ್ಲರನ್ನೂ

ಧರಿಸುವ ಸ್ವಾಭಾವವಿರುವುದರಿಂದ ಧಾತೃಭಾವ ಎಲ್ಲರನ್ನೂ ಧರಿಸುವಿಕೆ ಇದೆ. ಎಲ್ಲ ಧರ್ಮಗಳಿಂದ ಕುಂಭಕೋಣ ನಗರಿಗೆ "ಚತುರಾನನತ್ವ" ಎಂಬ ಚತುರ್ಮುಖ ಬ್ರಹ್ಮದೇವರ ಸ್ವರೂಪವು ಶೋಭಿಸುತ್ತಿದೆ ಎಂದು ಕವಿಗಳ ಅಭಿಪ್ರಾಯ (ಭಾವ).

**ಅವತಾರಿಕೆ :** ಈಗ ಕುಂಭಕೋಣ ನಗರವನ್ನು ಪ್ರಕಾರಾಂತರದಿಂದ ವರ್ಣಿಸುತ್ತಾರೆ.

**ದಂಭೋಲಿಪಾಣಿರ್ಧರಣೀಧರೇಂದ್ರದಂಭಾದಯಾ (ಲಾ) ಸೀದಧಿಭೂಮಿ ಯಸ್ಯಾಮ್।**
**ಅಂಭೋಮುಚಸ್ತಸ್ಯ ವಿಯೋಗಭೀತಾಃ ಸ್ತಂಭೇರಮೇಂದ್ರಾಃ ಪರಿತಶ್ಚರಂತಿ ॥೩೭॥**

**ತಾತ್ಪರ್ಯ :** ಕುಂಭಕೋಣ ನಗರದಲ್ಲಿ ದೊಡ್ಡ ಆನೆಗಳ ಸಂಚಾರವನ್ನು ಉತ್ಪ್ರೇಕ್ಷಿಸುತ್ತಿದ್ದಾರೆ. ಇಂದ್ರನು ರಾಜನ ರೂಪವನ್ನು ಧರಿಸಿ ಕುಂಭಕೋಣದಲ್ಲಿ ವಾಸಿಸುತ್ತಿದ್ದನು. ಆಗ ಮೇಘವಾಹನನೂ ಮೇಘಾಧಿಪತಿಯೂ ಆದ ಇಂದ್ರನ ವಿರಹವನ್ನು ಸಹಿಸಲಾರದೇ ಮೇಘಗಳು ದೊಡ್ಡ ದೊಡ್ಡ ಆನೆಗಳ ರೂಪವನ್ನು ಧರಿಸಿ ಕುಂಭಕೋಣದಲ್ಲಿ ಸಂಚರಿಸುತ್ತಿದ್ದವೋ ಎಂಬಂತೆ ಕಾಣುತ್ತಿತ್ತು. ನಾಯಕನಾದ ಇಂದ್ರನು ಸ್ವರ್ಗಲೋಕದಲ್ಲಿ ಇಲ್ಲವಾದುದರಿಂದ ಯಜಮಾನನಿಲ್ಲದ ನಮಗೆ ತೊಂದರೆಯುಂಟಾಗಬಹುದು ಎಂಬ ಭಯದಿಂದ ಮೋಡಗಳು ಆನೆಗಳ ರೂಪವನ್ನು ತಾಳಿ ರಾಜನ ರೂಪದಲ್ಲಿದ್ದ ಇಂದ್ರನನ್ನು ಸೇವಿಸುತ್ತಿದ್ದವು ಎಂದು ಅಭಿಪ್ರಾಯ. ಮೋಡ ಮತ್ತು ಆನೆಗಳು ಕಪ್ಪಾಗಿಯೂ ದೊಡ್ಡದಾಗಿಯೂ ಇರುವುದರಿಂದ ಕುಂಭಕೋಣದ ರಾಜನು ಇಂದ್ರನಂತೆ ಸಂಪದ್ಭರಿತನಾಗಿ ಪ್ರಜಾಪಾಲನೆ ಮಾಡುತ್ತಿರುವುದರಿಂದಲೂ ಕವಿಗಳು ಈ ರೀತಿಯಾಗಿ ಉತ್ಪ್ರೇಕ್ಷಿಸುತ್ತಿದ್ದಾರೆ ಎಂದು ಭಾವಿಸಬೇಕು.

**ಅವತಾರಿಕೆ :** ಇಂತಹ ಕುಂಭಕೋಣ ನಗರವನ್ನು ಬೇರೊಂದು ರೀತಿಯಿಂದ ಈಗ ಕವಿಗಳು ವರ್ಣಿಸುತ್ತಿದ್ದಾರೆ.

**೧) ಖೇಯಂ ಯದೀಯಂ ಕಲಶಾಂಬುರಾಶಿಂ ವೈಶಾಖಶೈಲಂ ಮಣಿಜಾಲಸಾಲಮ್ ।**
**೧) ಉದಾರಧೇನುರ್ದ್ಯುಮಣಿಂದಿರಾಭಿರ್ಯುಕ್ತಾऽಧುನಾ ತದ್ಬಹುತೇತಿಮನ್ಯೇ ॥**
**೨) ಖೇಯೇ ಯದೀಯೇ ಕಲಶಾಂಬುರಾಶೌ ವೈಶಾಖಶೈಲಾನ್ಮಣಿಜಾಲಸಾಲೈಃ ।**
**೧) ಉದಾರಧೇನುದ್ಯುಮಣೀಂದಿರಾಭಿರ್ಯೋಗಾದಪಾಂ ತದ್ಬಹುದೇತಿ ಮನ್ಯೇ ॥೩೮॥**

**ತಾತ್ಪರ್ಯ :** (1) ಕವಿಗಳು ಈ ರೀತಿಯಾಗಿ ಹೇಳುತ್ತಾರೆ. – ಈ ಕುಂಭಕೋಣ ನಗರದ ಸುತ್ತಲೂ ಇರುವ ಕಂದಕವನ್ನು ನಾನು ಬಹಳ ಆಳವಾಗಿರುವುದರಿಂದಲೂ ಮುಂದೆ ಹೇಳುವ ರತ್ನಗಳ ಉತ್ಪತ್ತಿಗೆ ಕಾರಣವಾಗಿರುವುದರಿಂದಲೂ ಕ್ಷೀರಸಮುದ್ರ ಎಂದು ತಿಳಿಯುತ್ತೇನೆ. ಈ ನಗರದ ಮಾಣಿಕ್ಯಾದಿ ರತ್ನಖಚಿತವಾದ ಎತ್ತರವಾದ ಪ್ರಾಕಾರವು ಕ್ಷೀರಸಮುದ್ರವನ್ನು ಕಡೆಯುವ ಕಡಗೋಲಿನಂತಿರುವ ಮಂದರವೆಂದು ನನ್ನ ಊಹೆ. ಹೀಗೆ ಮಂದರ ಪರ್ವತವೆಂಬ ಕಡಗೋಲಿನ ಜೊತೆಗೆ ನಗರದ ಜಲಪೂರ್ಣವಾದ ಕಂದಕಕ್ಕೆ ಸಂಬಂಧ ಉಂಟಾದಾಗ

ಸಂಪತ್ತನ್ನು ಕೊಡುವ ಕಾಮಧೇನು, ಚಿಂತಾಮಣಿ, ಮಹಾಲಕ್ಷ್ಮಿಯರು ಈ ನಗರದಲ್ಲಿ ಹುಟ್ಟಿದರು. ಅವರ ಸನ್ನಿಧಾನದಿಂದ ಕುಂಭಕೋಣ ನಗರವು ಬಹಳವಾದ ಸಂಪತ್ತಿನಿಂದ ಕೂಡಿರುವುದು ಯುಕ್ತವೇ ಆಗಿದೆ ಎಂದು ನಾನು ಈಗ ತಿಳಿಯುತ್ತಿದ್ದೇನೆ ಎಂದು ಕವಿಗಳು ಬಣ್ಣಿಸುತ್ತಿದ್ದಾರೆ. ಕ್ಷೀರಸಮುದ್ರವನ್ನು ಮಂದರ ಪರ್ವತದಿಂದ ಕಡೆದಾಗ ಚಿಂತಾಮಣಿ, ಕಾಮಧೇನು ಮಹಾಲಕ್ಷ್ಮಿಯರು ಹುಟ್ಟಿದಂತೆ ನಗರದ ಪ್ರಾಕಾರವೆಂಬ ಮಂದರಪರ್ವತ ರೂಪವಾದ ಕಡಗೋಲಿನಿಂದ ನಗರದ ಕಂದಕವೆಂಬ ಕ್ಷೀರಸಾಗರವನ್ನು ಕಡೆದಾಗ ಹುಟ್ಟಿದ ಕಾಮಧೇನುವಿನಂತೆ ಇಲ್ಲಿಯ ಹಸುಗಳು ಇವೆ. ಚಿಂತಾಮಣಿಯಂತೆ ರತ್ನಗಳಿವೆ. ಅಲ್ಲಿ ಹುಟ್ಟಿದ ಮಹಾಲಕ್ಷ್ಮಿಯಂತೆ ಲಕ್ಷ್ಮೀದೇವಿಯ ಸನ್ನಿಧಾನವು ಈ ನಗರಿಯಲ್ಲಿದೆ. ಇದರಿಂದಾಗಿ ಈ ನಗರವು ಸಂಪದ್ಭರಿತವಾಗಿದೆ ಎಂದು ತಾತ್ಪರ್ಯ.

**ತಾತ್ಪರ್ಯ** : (2) ಈ ನಗರದಲ್ಲಿ ಕಂದಕ ರೂಪದಲ್ಲಿ ಕ್ಷೀರಸಮುದ್ರವೇ ಇದೆ. ಮಂದರ ಪರ್ವತವೆಂಬ ಕಡಗೋಲಿನಿಂದ ಅದನ್ನು ಕಡೆದಾಗ ಕ್ಷೀರಸಮುದ್ರದಿಂದ ಕೌಸ್ತುಭಾದಿ ಮಣಿಗಳ ಸಮೂಹವೂ, ಮಂದರಾದಿ ವೃಕ್ಷಗಳೂ ಹುಟ್ಟಿದಂತೆ ಅನೇಕ ಅನರ್ಘ್ಯ ರತ್ನಗಳು, ವೃಕ್ಷಗಳು ಹುಟ್ಟಿದವು ಎಂದು ಭಾಸವಾಗುತ್ತದೆ. ಹಾಗೆಯೇ ಶ್ರೇಷ್ಠವಾದ ಕಾಮಧೇನು, ಚಿಂತಾಮಣಿ, ಲಕ್ಷ್ಮಿಯರು ಹುಟ್ಟಿದಂತೆ ಈ ನಗರದಲ್ಲಿಯೂ ಅವೆಲ್ಲವೂ ಹುಟ್ಟಿವೆ. ಅವುಗಳ ಸಂಬಂಧದಿಂದಾಗಿ ಈ ನಗರದ ಕಂದಕದಲ್ಲಿ ನಿರಂತರ ಪೂರ್ಣತೆಯೂ ನಗರದ ಸಂಪತ್ತಿನ ಹೆಚ್ಚಳವೂ ಕಂಡುಬರುತ್ತದೆ. (ಅಲ್ಲಿಯೇ ಸಮೀಪದಲ್ಲಿ ವಿಶಾಖಾ ಎಂಬ ಕೋಶ ಪುರಾಣಾದಿಗಳಲ್ಲಿ ಪ್ರಸಿದ್ಧವಾದ, ಬ್ರಹ್ಮಣ್ಯನ ಆವಾಸಸ್ಥಾನವಾದ ವೈಶಾಖ ಪರ್ವತವಿದೆ. ಅದೇ ಮಂದರ ಪರ್ವತದಂತಿರುವ ಮಂಥನ ದಂಡವು. ಮಂದರ ಪರ್ವತದಿಂದ ಕಡೆದಾಗ ಕಾಮಧೇನು ಮುಂತಾದ ಅನೇಕ ಪದಾರ್ಥಗಳು ಹುಟ್ಟಿದಂತೆ ಈ ಪರ್ವತದಿಂದ ಕಂದಕವೆಂಬ ಕ್ಷೀರಸಮುದ್ರವನ್ನು ಕಡೆದಾಗ ಕಾಮಧೇನು ಮುಂತಾದ ಅನೇಕ ಪದಾರ್ಥಗಳು ಹುಟ್ಟಿದವು. ಮತ್ತು ಆ ಪದಾರ್ಥದಗಳ ಸನ್ನಿಧಾನದಿಂದ ಕುಂಭಕೋಣ ನಗರದಲ್ಲಿಯೂ, ನಗರದ ಕಂದಕದಲ್ಲಿಯೂ ಎಲ್ಲಾ ಪದಾರ್ಥಗಳಿಗೂ, ಜಲಕ್ಕೂ ಅಭಿವೃದ್ಧಿ ಉಂಟಾಯಿತು ಎಂದು ಭಾವ.

**ಅವತಾರಿಕೆ** : ಈಗ ಕವಿಗಳು ಕುಂಭಕೋಣ ನಗರದ ಎತ್ತರವನ್ನು ಮತ್ತೊಮ್ಮೆ ಉತ್ಪ್ರೇಕ್ಷಿಸುತ್ತಿದ್ದಾರೆ.

**ಭುಂಜಾನಕಂಜಾನನಸೌಧಸದ್ಮಮಧ್ಯಂ ಸಮಾಗಾದಿತಿ ಸೂರಸೂತಃ ।**
**ಯದೀಯದೌವಾರಿಕದಾರಿತೋರುಸ್ತೇನಾಸೃಜಾಽದ್ಯಾಪ್ಯರುಣೋ ಹ್ಯನೂರುಃ ॥೩೯॥**

**ತಾತ್ಪರ್ಯ** : ಕುಂಭಕೋಣ ನಗರಿಯ ಮಹಡಿ ಮನೆಗಳ ಮಧ್ಯದಲ್ಲಿ ರಾಜಸ್ತ್ರೀಯರು ನಾನಾ ವಿಧವಾದ ಆಮೋದ ಪ್ರಮೋದಗಳಲ್ಲಿ ತಲ್ಲೀನರಾಗಿದ್ದು ವಿಹರಿಸುತ್ತಿದ್ದಾಗ ಮತ್ತು

ಕೆಲವು ವೇಳೆ ಭೋಜನ ಮಾಡುತ್ತಿದ್ದಾಗ ತಾನು ಬರುವ ಮಾಮೂಲಾದ ದಾರಿಯೆಂದು ಅರುಣನು ನಿರ್ಭಯನಾಗಿ ಅಲ್ಲಿಗೆ ಬಂದನು. ಆಗ ಅಂತಃಪುರ ಸ್ತ್ರೀಯರಿದ್ದಲ್ಲಿಗೆ ಅರುಣನು ಬಂದುದನ್ನು ನೋಡಿ ದ್ವಾರಪಾಲಕರಿಗೆ ಕೋಪ ಉಂಟಾಯಿತು. ಅವರು ಸೂರ್ಯಸಾರಥಿಯ ತೊಡೆಯನ್ನು ಬಡಿಗೆಯಿಂದ ಬಡಿದು ಮುರಿದುಹಾಕಿದರು. ಸಾರಥಿಯ ಮೈಯೆಲ್ಲವೂ ರಕ್ತದಿಂದ ತೋಯ್ದುಹೋಯಿತು. ಆ ರಕ್ತದಿಂದ ಈಗಲೂ ಸೂರ್ಯಸಾರಥಿಯು ಕೆಂಪಾಗಿರುತ್ತಾನೆ. ಆದುದರಿಂದ ಅರುಣ ಎಂಬ ಹೆಸರನ್ನು ಪಡೆದಿದ್ದಾನೆ. ಮತ್ತು ಈಗಲೂ ಅನೂರು (ತೊಡೆಯಿಲ್ಲದವನು) ಎಂಬ ಹೆಸರನ್ನು ಹೊಂದಿದ್ದಾನೆ. ಈ ನಗರವು ಬಹಳ ಎತ್ತರವಾಗಿದ್ದುದರಿಂದ ಸೂರ್ಯಸಾರಥಿಯು ಮಹಡಿಗಳ ಮೂಲಕವೇ ಆ ಕಡೆಗೆ ಹೋಗಬೇಕಾಗುತ್ತದೆ ಎಂದು ತಾತ್ಪರ್ಯ. ಸೂರ್ಯನ ಸಾರಥಿಗೆ ಅರುಣ ಮತ್ತು ಅನೂರು ಎಂಬ ಹೆಸರು ಬರಲು ಕಾರಣವನ್ನು ಉತ್ಪ್ರೇಕ್ಷಿಸುತ್ತಾ ಕುಂಭಕೋಣ ನಗರದ ಮಹಡಿಗಳು ಸೂರ್ಯ ಮಂಡಲದಷ್ಟು ಎತ್ತರವಾಗಿವೆ ಎಂದು ಕವಿಗಳು ವರ್ಣಿಸುತ್ತಿದ್ದಾರೆ.

**ಅವತಾರಿಕೆ :** ಪುನಃ ನಗರವನ್ನು ವರ್ಣಿಸುತ್ತಾರೆ.

**ಸ್ವೀಯಾವನೈಶ್ವರ್ಯಕಲಾ (ಭರಾ) ನ್ಯಶಿಕ್ಷಾಕೃತೇ ರಮೇಶಾಂಶನೃಪೇಣ ಯಸ್ಯಾಮ್ ।**
**ಮುಕ್ತಾರುಣೇಂದ್ರೋಪಲಸೌಧದಂಭಾತ್ ಗುಣತ್ರಯಂ ಕಿಂ ಕ್ರಮಶೋ ಗೃಹೀತಮ್ ॥೪೦॥**

**ತಾತ್ಪರ್ಯ – 1 : "ನಾವಿಷ್ಣುಃ ಪೃಥಿವೀ ಪತಿಃ"** ವಿಷ್ಣುವಿನ ಅಂಶವಿಲ್ಲದವನು ರಾಜನಾಗಲು ಸಾಧ್ಯವಿಲ್ಲ ಎಂಬ ವಚನದಂತೆ ಕುಂಭಕೋಣ ನಗರದಲ್ಲಿ ವಿಷ್ಣುವಿನ ಅಂಶದಿಂದ ಕೂಡಿದ ರಾಜನು ರಾಜ್ಯಭಾರ ಮಾಡುತ್ತಿದ್ದನು. ಅವನು ತನ್ನವರಾದ ಯೋಗ್ಯ ಜನರ ರಕ್ಷಣೆ, ಮಧ್ಯಮರಾದ ಸಾಧಾರಣ ಜನರಿಗೆ ಐಶ್ವರ್ಯಾತಿಶಯವನ್ನು ಉಂಟುಮಾಡುವುದು ಕೆಟ್ಟ ಜನರನ್ನು ಶಿಕ್ಷಿಸುವುದು ಎಂಬ ಮೂರು ವಿಧವಾದ ಕಾರ್ಯವನ್ನು ಮಾಡಬೇಕಿತ್ತು. ಈ ಕಾರ್ಯಗಳಿಗಾಗಿ ರಾಜನು ಸತ್ವ, ರಜಸ್ಸು, ತಮಸ್ಸು ಎಂಬ ಮೂರು ಗುಣಗಳನ್ನು ಸ್ವೀಕರಿಸಬೇಕಾಗಿತ್ತು. ಕುಂಭಕೋಣ ನಗರದಲ್ಲಿರುವ ಮುತ್ತಿನಿಂದ ನಿರ್ಮಿತವಾದ ಬಿಳಿಯ ಮಹಡಿ ಮನೆಗಳು, ಪದ್ಮರಾಗವೆಂಬ ಕೆಂಪು ಮಣಿಯಿಂದ ನಿರ್ಮಿತವಾದ ಕೆಂಪಾದ ಮಹಡಿ ಮನೆಗಳು, ಇಂದ್ರನೀಲ ಎಂಬ ಮಣಿಯಿಂದ ನಿರ್ಮಿತವಾದ ಕಪ್ಪಾದ ಮಹಡಿಯ ಮನೆಗಳನ್ನು ನೋಡಿದರೆ, ಕ್ರಮವಾಗಿ ಈ ಮೂರು ಬಣ್ಣವುಳ್ಳ ಸತ್ವ, ರಜಸ್ಸು, ತಮಸ್ಸುಗಳ ಬಣ್ಣವನ್ನು ಜ್ಞಾಪಿಸಿಕೊಡುವ ಮಹಡಿಯ ಮನೆಗಳ ನೆಪದಿಂದ ರಾಜನು ಆ ಮೂರು ಗುಣಗಳನ್ನು ಸ್ವೀಕರಿಸಿ ರಕ್ಷಣೆ, ಐಶ್ವರ್ಯವನ್ನು ಕೊಡುವುದು, ದುರ್ಜನರನ್ನು ಶಿಕ್ಷಿಸುವುದು ಎಂಬ ಕಾರ್ಯಗಳನ್ನು ಮಾಡುತ್ತಿದ್ದಾನೋ ಎಂಬಂತೆ ತೋರುತ್ತಿದೆ ಎಂದು ಕವಿಗಳು ಉತ್ಪ್ರೇಕ್ಷಿಸುತ್ತಿದ್ದಾರೆ.

**ತಾತ್ಪರ್ಯ– 2 :** ರಕ್ಷಿಸುವುದು ಸತ್ವಗುಣದ ಕಾರ್ಯ, ಪ್ರಭುತ್ವವನ್ನು ತೋರುವುದು, ಮೂಲಧನವನ್ನು ವ್ಯಾಪಾರಾದಿಗಳಿಂದ ಅಭಿವೃದ್ಧಿ ಮಾಡುವುದು ರಜೋಗುಣದ ಕಾರ್ಯ,

ದುರ್ಜನರನ್ನು ಶಿಕ್ಷಿಸುವುದು ತಮೋಗುಣದ ಕಾರ್ಯ. ಯಾವ ರೀತಿಯಲ್ಲಿ ಶ್ರೀಮನ್ನಾರಾಯಣನು ಬಿಳಿಯ ಬಣ್ಣದ ಸತ್ವಾದಿ ಗುಣಗಳಿಂದ ಕ್ರಮವಾಗಿ ರಕ್ಷಣ, ಪೋಷಣ, ದುಷ್ಟ ಶಿಕ್ಷಣಗಳನ್ನು ಮಾಡುತ್ತಾನೋ ಅದೇ ರೀತಿಯಲ್ಲಿ ಶ್ರೀಮನ್ನಾರಾಯಣನ ಅಂಶದಿಂದ ಜನಿಸಿರುವ ರಾಜನು ಈ ಮೂರೂ ಕಾರ್ಯಗಳನ್ನು ಮಾಡುವುದರಿಂದ, ರಾಜನಿಗೂ ಈ ಮೂರು ಕಾರ್ಯಗಳಿಗೆ ಕಾರಣವಾದ ಮೂರು ಗುಣಗಳಿರಬೇಕು. ಆದುದರಿಂದ ಮುತ್ತುಗಳಿಂದ ನಿರ್ಮಿತವಾದ ಬಿಳಿಯಾದ, ಪದ್ಮರಾಗದಿಂದ ನಿರ್ಮಿತವಾದ ಕೆಂಪಾದ, ಇಂದ್ರನೀಲ ಮಣಿಯಿಂದ ನಿರ್ಮಿತವಾದ ಕಪ್ಪಾದ ರಾಜಪ್ರಾಸಾದಗಳಲ್ಲಿ ರಾಜನು ವಾಸಮಾಡುತ್ತ ಇದ್ದುದರಿಂದ ಈ ಬಣ್ಣಗಳ ಮಹಡಿಯ ಮನೆಗಳ ನೆಪದಿಂದ ರಾಜನು ಮೂರೂ ಗುಣಗಳನ್ನು ಸ್ವೀಕರಿಸಿ ರಕ್ಷಣಾದಿ ಮೂರು ಕಾರ್ಯಗಳನ್ನು ಮಾಡುತ್ತಿರುವನೋ ಎಂಬಂತಿದೆ ಎಂದು ಕವಿಗಳಾದ ಶ್ರೀನಾರಾಯಣಾಚಾರ್ಯರು ಅಪಹ್ನುದ ಅಲಂಕಾರ ಗರ್ಭಿತವಾದ ಉತ್ಪ್ರೇಕ್ಷಾಲಂಕಾರದಿಂದ ನಗರದ ರಾಜನ ವೈಭವವನ್ನೂ, ರಾಜನ ಧರ್ಮಪರಾಯಣತೆಯನ್ನೂ ವರ್ಣಿಸಿದ್ದಾರೆ.

**ಅವತಾರಿಕೆ :** ಕುಂಭಕೋಣ ನಗರದ ಔನ್ನತ್ಯವನ್ನೇ ಮತ್ತೊಮ್ಮೆ ವರ್ಣಿಸುತ್ತಾರೆ.

**(ಬಾಲಬೋಧಿನಿ)**

**ರತ್ನಪ್ರಭಾಬಂಧುರಜಾಲಜಾಲಶೃಂಗೈರನೇಕೈರನುಯಾತಿ ಸೌಧಃ ।**
**ಲೀಲಾಕೃತಿಸ್ವಾತ್ಮನಿ ಲಕ್ಷ್ಯಲೋಕಃ ಶ್ರೀಮಾನ್ ಯದೀಯಃ ಪುರುಷಸ್ಯ ರೂಪಮ್॥೪೧॥**

**(ಗುರುಪಾದಸೇವಾ)**

**ರತ್ನಪ್ರಭಾಬಂಧುರಜಾಲಜಾಲಃ ಶೃಂಗೈರನೇಕೈರನುಯಾತಿ ಸೌಧಃ ।**
**ನೀಲಾಕೃತಿಸ್ವಾತ್ಮನಿ ಲಕ್ಷ್ಯಲೋಕಃ ಶ್ರೀಮಾನ್ ಯದೀಯಃ ಪುರುಷಸ್ಯರೂಪಮ್ ॥೪೧॥**

**ತಾತ್ಪರ್ಯ-1 :** ಕುಂಭಕೋಣ ನಗರದಲ್ಲಿರುವ ಮಹಡಿಯ ಮನೆಗಳಿಗೆ ಅನೇಕ ಶಿಖರಗಳಿವೆ. ಆ ಗೋಪುರಾಕಾರದ ಶಿಖರಗಳಲ್ಲಿ ರತ್ನ ಪ್ರಭೆಗಳಿಂದ ಮನೋಹರವಾದ ಗವಾಕ್ಷಿಗಳ ಸಮೂಹವೇ ಕಂಗೊಳಿಸುತ್ತಿವೆ. ವಿಲಾಸೀ ಜನರ ವಿಹಾರಕ್ಕೆ ಸಾಧನವಾದ ಬಹಳ ಎತ್ತರವಾದ ಈ ಸ್ವಚ್ಛವಾದ ಪ್ರಾಸಾದಗಳಲ್ಲಿ ಅಲ್ಲಿ ಓಡಾಡುವ ಜನರು ಪ್ರತಿಬಿಂಬಿತರಾಗಿ ಕಾಣುತ್ತಾರೆ. ಸಂಪದ್ಭರಿತವಾದ ಇಂತಹ ಸೌಧವು ವಿರಾಡ್ರೂಪಿಯಾದ ಶ್ರೀಹರಿಯ ರೂಪವನ್ನು ಅನುಕರಿಸುತ್ತದೆ. ಅಲ್ಲಿಯ ಪ್ರಾಸಾದವು (ರಾಜಭವನವು) ಅಷ್ಟೊಂದು ಎತ್ತರವಾಗಿದೆ ಎಂದು ಭಾವ.

**ತಾತ್ಪರ್ಯ-2 :** ಕುಂಭಕೋಣ ನಗರದ ರಾಜಪ್ರಾಸಾದವು ಬಹಳ ಮನೋಹರವಾಗಿಯೂ ಕಾಂತಿಪೂರ್ಣವಾಗಿಯೂ ಇದೆ. ಆ ರಾಜಭವನದಲ್ಲಿ ಇಂದ್ರ ನೀಲಮಣಿಗಳ ಕಾಂತಿಯಿಂದ ಪ್ರಕಾಶಮಾನವಾದ ಗವಾಕ್ಷಗಳ (ಕಿಟಕಿಗಳ) ಸಮೂಹಗಳು ಇದೆ. ನೀಲವಾದ ಈ ಸೌಧದಲ್ಲಿ ಅಲ್ಲಿ ಓಡಾಡುವ ಜನರೂ, ಹೊರಗೆ ಓಡಾಡುವ ನಗರದ ಜನರೂ ಪ್ರತಿಬಿಂಬಿತರಾಗುತ್ತಾರೆ.

ಈ ಸೌಧಗಳಿಗೆ ಅನೇಕ ಶಿಖರಗಳೂ ಇದೆ. ಇಂತಹ ರಾಜಭವನವು ಇಂದ್ರನೀಲಮಣಿ ಶ್ಯಾಮನಾದ ತನ್ನ ದೇಹದಲ್ಲಿರುವ ಚತುರ್ದಶ ಲೋಕಗಳನ್ನು ಪ್ರತಿಬಿಂಬಸುತ್ತಿರುವ ವಿರಾಡ್ರೂಪಿಯಾದ ಶ್ರೀಹರಿಯನ್ನು ಹೋಲುತ್ತದೆ.

**ಅವತಾರಿಕೆ :** ಈಗ ಕವಿಗಳು ಕುಂಭಕೋಣ ನಗರದ ನಾಲ್ಕು ಗೋಪುರ ದ್ವಾರಗಳನ್ನು ನಾಲ್ಕು ವೇದಗಳಿಗೆ ಸಮನ್ವಯ ಮಾಡುತ್ತಿದ್ದಾರೆ.

**ಕಾನೀನಜಾತಾಃ ಶ್ರುತಯಶ್ಚತಸ್ರೋ ವಿಭಿದ್ಯ ಸಾಲಂ ವ್ಯತಿಲಂಘಿತಾಭ್ರಮ್ ।**
**ದ್ವಾರೈರವಾಪುರ್ವಿದುಷೋ ಯದೀಯಾನ್ ಅದ್ಯಾಪಿ**
**ಯಾನದ್ಯಾಪಿ ತಾನ್ಯೇವ ತು ಗೋಪುರಾಣಿ ॥೪೨॥**

**ತಾತ್ಪರ್ಯ :** ಶ್ರೀವೇದವ್ಯಾಸರು ಕನ್ಯಾವಸ್ಥೆಯಲ್ಲಿರುವ ಸತ್ಯವತಿಯಿಂದ ಆವಿರ್ಭೂತರಾದರು. ಅವರಿಂದ ನಾಲ್ಕು ಶ್ರುತಿಗಳು (ಕುಮಾರಿಯರು) ಆವಿರ್ಭವಿಸಿದರು. ಆ ಶ್ರುತಿಕನ್ಯೆಯರು ಸ್ವಯಂ ಕನ್ಯಾಜಾತರಾದ ಶ್ರೀವೇದವ್ಯಾಸರು ನಮಗೂ ವಿವಾಹ ಮಾಡದೇ ಕನ್ಯಾವಸ್ಥೆಯಲ್ಲೇ ಇಡಬಹುದು ಎಂದು ಹೆದರಿ ಈ ಕುಂಭಕೋಣ ನಗರಿಯ ಕಡೆಗೆ ಓಡಿಬಂದರು. ಮೋಡಗಳನ್ನು ಆಕಾಶವನ್ನು ಮೀರಿಸಿ ಎತ್ತರವಾಗಿರುವ ಕುಂಭಕೋಣ ನಗರದ ಪ್ರಾಕಾರವನ್ನು ಸೀಳಿ ನಾಲ್ಕು ಕಡೆಯಿಂದ ಒಳಗೆ ಬಂದು ಈ ನಗರದಲ್ಲಿರುವ ವೇದ ವಿದ್ವಾಂಸ ಕುಮಾರರನ್ನು ಪತಿಗಳನ್ನಾಗಿ ಹೊಂದಿದರು. ಈ ಶ್ರುತಿಕುಮಾರಿಯರು ಬಂದಿರುವ ನಾಲ್ಕು ಬಾಗಿಲುಗಳೇ ನಾಲ್ಕು ಗೋಪುರಗಳಾಗಿ ಈಗಲೂ ಕಾಣಿಸುತ್ತವೆ. (ಈ ನಾಲ್ಕು ಶ್ರುತಿಗಳೇ ಈಗಲೂ ಗೋಪುರಗಳಾಗಿ ಕಾಣಿಸುತ್ತವೆ.) ಕುಂಭಕೋಣ ನಗರದ ನಾಲ್ಕು ದಿಕ್ಕುಗಳಲ್ಲಿರುವ ನಾಲ್ಕು ಬಾಗಿಲುಗಳು ನಾಲ್ಕು ಶ್ರುತಿಗಳಂತೆ ಈ ನಗರಕ್ಕೆ ಬಂದಿರುವ ಬಾಗಿಲುಗಳಂತೆ ಇವೆ. ಕುಂಭಕೋಣ ನಗರದ ಪ್ರಾಕಾರವು ಅತ್ಯಂತ ಉನ್ನತವಾಗಿ ಇವೆಯೆಂದೂ ನಗರದಲ್ಲಿ ಇರುವ ವಿದ್ವಾಂಸರು ಚತುರ್ವೇದ ಪಾರಂಗತರೆಂದು ಪರಮ ತಾತ್ಪರ್ಯ.

**ಅವತಾರಿಕೆ :** ಈಗ ಕವಿಗಳು ಯಾವಾಗಲೂ ಆಶ್ರಿತರಿಗೆ ಸಕಲ ಸಂಪತ್ಕರವಾದ ಮಂತ್ರಶಾಸ್ತ್ರೋಕ್ತವಾದ ಸಂಪದಭಿಮಾನಿ ದೇವತೆಯು ಯಂತ್ರಾಕಾರದಲ್ಲಿ ಈ ನಗರದಲ್ಲಿದೆಯೆಂದು ವರ್ಣಿಸುತ್ತಾರೆ.

**ವೃತ್ತಂ ಯದಿಯಂ ಚರಣೈಶ್ಚತುರ್ಭಿರ್ದ್ವಾರೈರುಪೇತಂ ಚತುರಸ್ರಸಾಲಮ್ ।**
**ಶ್ರೀಚಕ್ರಬಿಂಧುಂ ಸತತಂ ಶ್ರಿತಸ್ಯ ಮಹೀಗೃಹಂ ಮಂತ್ರವಿದೋ ವದಂತಿ ॥೪೩॥**

**ತಾತ್ಪರ್ಯ – 1 :** ಶ್ರೀಚಕ್ರ ಮಂತ್ರದ ನಾಲ್ಕು ಚರಣಗಳನ್ನು ಶ್ರೀಚಕ್ರದಲ್ಲಿ ಬರೆಯುತ್ತಾರೆ. ಅದರ ಹೊರಗೆ ಚತುಷ್ಕೋಣಾಕಾರವಾದ ರೇಖೆಯನ್ನು ಬರೆಯುತ್ತಾರೆ. ಮಧ್ಯದಲ್ಲಿ ಶ್ರೀಕಾರದಿಂದ ಕೂಡಿದ ಷಟ್‌ಕೋಣ ಚಕ್ರವನ್ನು ಬರೆದು "ಶ್ರೀಂ" ಎಂಬ ಲಕ್ಷ್ಮೀ ಬೀಜಾಕ್ಷರವನ್ನು ಬರೆದಿರುತ್ತಾರೆ.

ಕುಂಭಕೋಣ ನಗರದ ನಾಲ್ಕು ಬಾಗಿಲುಗಳು ಮಂತ್ರದ ನಾಲ್ಕು ಚರಣಗಳಂತಿವೆ. ಅದರ ಹೊರಗಡೆ ಇರುವ ಚತುಷ್ಕೋಣಾಕಾರವಾದ ಪ್ರಾಕಾರವು ಶ್ರೀಚಕ್ರ ಯಂತ್ರದ ಹೊರಗೆ ಇರುವ ಚತುಷ್ಕೋಣ ರೇಖೆಯಂತಿದೆ. ಶ್ರೀಚಕ್ರ ಯಂತ್ರದ ಮಧ್ಯದಲ್ಲಿ "ಶ್ರೀಂ" ಎಂಬ ಬಿಂದುವಿನಿಂದ ಕೂಡಿದ ಲಕ್ಷ್ಮೀ ಬೀಜಾಕ್ಷರ ಮಂತ್ರದಿಂದ ಸಹಿತವಾದ ಷಟ್‌ಕೋಣ ಚಕ್ರವು. (ಆರು ಮೂಲೆಗಳುಳ್ಳ ಚಕ್ರವೂ) ಇದೆ. ಈ ನಗರಿಯು ಅಲ್ಲಲ್ಲಿ ಅನುಸ್ವಾರಾಕಾರದಲ್ಲಿ ಇರುವ ಬಿಂದುವಿನ ನಿಧಿ ಸಮೂಹದ (ಶ್ರೀ) ಸೂಚಕವಾದ ಚಿನ್ಹೆಯಿಂದ ಕೂಡಿದೆ. ಹೀಗೆ ಆಶ್ರಯಿಸಿದ ಜನರಿಗೆ ನಿಧಿಯಿಂದ ನಿಧಿಯನ್ನು ಕೊಡುವ ಮಹೀಗೃಹವೆಂಬ ಪ್ರದೇಶದಂತೆ ಶ್ರೀಚಕ್ರಾಕಾರದಲ್ಲಿ ಈ ಕುಂಭಕೋಣ ನಗರಿಯು ಇದೆಯೆಂದು ಮಂತ್ರ ಶಾಸ್ತ್ರಜ್ಞರು ಹೇಳುತ್ತಾರೆ.

**ತಾತ್ಪರ್ಯ – 2 :** ಈ ಕುಂಭಕೋಣ ನಗರವು ಶ್ರೀಚಕ್ರಾಕಾರದಲ್ಲಿ ಇದೆ. ಹೇಗೆಂದರೆ ಈ ನಗರದ ನಾಲ್ಕು ಬಾಗಿಲುಗಳೇ "ಶ್ರೀ" ಚಕ್ರದ ಮಧ್ಯದಲ್ಲಿ ಬರೆಯಬೇಕಾದ ಮಂತ್ರದ ನಾಲ್ಕು ಚರಣಗಳು. ಸುತ್ತಲೂ ಇರುವ ಚತುಷ್ಕೋಣಾಕಾರವಾದ ಪ್ರಕಾರವು ಶ್ರೀಚಕ್ರದ ಸುತ್ತಲೂ ಇರುವ ಚಚ್ಚೌಕಾರವಾದ ರೇಖೆಯಂತೆ ಇದೆ. ನಗರದ ಈ ಸನ್ನಿವೇಶವನ್ನು ಮಂತ್ರ ಶಾಸ್ತ್ರಜ್ಞರು ಯಾವಾಗಲೂ ಈ ರೀತಿಯಾಗಿ ಹೇಳುತ್ತಾರೆ. – "ಇದು (ಈ ಕುಂಭಕೋಣ ನಗರವು) ಚಕ್ರಾಕಾರವಾದ ವರ್ತುಲ ಬಿಂದುವಿನಿಂದ ಕೂಡಿದ ಯಂತ್ರದ ಹೊರಗಿನ ಚತುಷ್ಕೋಣಾಕಾರವಾದ ರೇಖೆಯಂತೆ (ಭೂಪುರದಂತೆ) ಈ ನಗರವು ಶೋಭಿಸುತ್ತಿದೆ. ಶ್ರೀಚಕ್ರಾಕಾರದಲ್ಲಿ ಈ ನಗರದ ಸನ್ನಿವೇಶವಿದೆ ಎಂದು ಭಾವ."

**ಅವತಾರಿಕೆ :** ಇನ್ನು ಮುಂದಿನ ಎರಡು ಶ್ಲೋಕಗಳಿಂದ ನಗರದ ಚೌಕವನ್ನು ನಾಲ್ಕು ಮುಖಗಳಿಂದ ಕೂಡಿದ ಸಮುದ್ರವೆಂದೂ ಹಂಸಪಾದ(1)ವೆಂದೂ ವರ್ಣಿಸುತ್ತಾರೆ.

**ಗಜೈರ್ಗಿರೀಂದ್ರೈರ್ಜವತೋ ವಿಹಂಗೈಸ್ತುಂಗೈಸ್ತುರಂಗೈರ್ಮಿಲಿತಂ ತರಂಗೈಃ ।**
**ಚತುಃಪ್ರತೋಲೀಚತುರಾಸ್ಯಸಿಂಧುಂ ಚತುಷ್ಪಥಂ ಸಂಜಗದುರ್ಯದೀಯಮ್ ॥೪೪॥**

**ತಾತ್ಪರ್ಯ :** ಈ ಕುಂಭಕೋಣ ನಗರದ ನಾಲ್ಕು ಬೀದಿಗಳು ಸೇರುವ ಚೌಕಗಳಲ್ಲಿ ಬೆಟ್ಟದಂತಿರುವ ಆನೆಗಳು ಓಡಾಡುತ್ತಾ ಇದ್ದವು. ವೇಗ ವಿಷಯದಲ್ಲಿ ಪಕ್ಷಿಗಳಂತೆ ಇರುವ ಸಮುದ್ರ ಅಲೆಗಳಂತೆ ಇರುವ ಎತ್ತರವಾದ ಕುದುರೆಗಳೂ ಅಲ್ಲಿ ಓಡಾಡುತ್ತಿದ್ದವು. ಸಮುದ್ರದಲ್ಲಿ ಆನೆಗಳಂತಿರುವ ಬೆಟ್ಟಗಳಿರುತ್ತವೆ. ಕುದುರೆಗಳಂತೆ ಚಂಚಲವಾದ ಪಕ್ಷಿಗಳಂತೆ ವೇಗವಾಗಿ ಓಡಾಡುವ ತರಂಗಗಳಿರುತ್ತದೆ. ಈ ಬೆಟ್ಟ ಮತ್ತು ತರಂಗಗಳಂತಿರುವ ಆನೆ ಕುದುರೆಗಳಿಂದ ಈ ಪಟ್ಟಣವು ನಾಲ್ಕು ಮುಖಗಳಿಂದ ಕೂಡಿದ ಸಮುದ್ರದಂತೆ ಕಾಣಿಸುತ್ತಿತ್ತು.

**ವಿಚಿತ್ರಯತ್ವಣ್ಯಗೃಹಾಣಿ ಕರ್ತ್ರಾ ವಿಸ್ಮೃತ್ಯ ಧಾತ್ರಾ ನು ಕೃತಂ ಜನಾನಾಮ್ ।**
**ಸ್ವಸದ್ಮ ಯತ್ ಸದ್ಮನಿಬೋಧನಾರ್ಥಂ* ಶೃಂಗಾಟಕಂ ಜ್ಞಾಪಕಹಂಸಪಾದಮ್ ॥೪೫॥**
*** (ಪಾಠಾಂತರ : ಸಮಾರ್ಪಯತ್ ಪದ್ಮನಿಬೋಧನಾರ್ಥಂ)**

**ತಾತ್ಪರ್ಯ–1 :** ಶೃಂಗಾಟಕವೆಂದರೆ ನಗರದ ಚೌಕ. ಇದನ್ನು ಹಂಸಪಾದವೆಂದು ಇಲ್ಲಿ ಉತ್ಪ್ರೇಕ್ಷಿಸುತ್ತಿದ್ದಾರೆ. ಚೌಕದ ಒಂದೊಂದು ಮೂಲೆಯೂ ಹಂಸಪಾದದಂತೆ ಇರುತ್ತದೆ. "ಈ ಕುಂಭಕೋಣ ನಗರಿಯನ್ನು ಬ್ರಹ್ಮದೇವರು ನಿರ್ಮಿಸಿದರು. ಆದರೆ ಈ ನಗರದಲ್ಲಿ ಅಂಗಡಿ – ಭವನಗಳನ್ನು ನಿರ್ಮಿಸಲು ಮರೆತು ಈ ನಗರದಲ್ಲಿ ಸತ್ಯಲೋಕದಲ್ಲಿ ಇರುವ ಅಂಗಡಿಯ ಸಾಲುಗಳಂತಹ ಸಾಲುಗಳು ಇರಬೇಕು ಎಂದು ತಿಳಿಸಲು ತಮ್ಮ ವಾಹನವಾದ ಹಂಸದ ಪಾದ ಚಿಹ್ನೆಯಂತಿರುವ ಚೌಕವನ್ನು ನಿರ್ಮಿಸಿದರು. ಈ ರೀತಿಯಾಗಿ ನಗರವನ್ನು ನಿರ್ಮಿಸಿ ಅಂಗಡಿಗಳನ್ನು ನಿರ್ಮಿಸಲು ಮರೆತು ಸತ್ಯಲೋಕದಲ್ಲಿ ಶ್ರೀಬ್ರಹ್ಮದೇವರು ವಾಸ ಮಾಡುತ್ತಿದ್ದಾರೆ. ಎಲ್ಲಿ ಅಂಗಡಿಗಳನ್ನು ನಿರ್ಮಿಸಬೇಕಾಗಿದೆಯೋ ಆ ಸ್ಥಳದಲ್ಲಿ ಹಂಸರೂಪವಾದ ಚೌಕವನ್ನು ನಿರ್ಮಿಸಿದ್ದಾರೆ. ಈ ನಗರವು "ವೈರಿಂಚಿಗೇಹ ವ್ಯತಿಲಂಘಿ ಮೌಲಿಂ" ಬ್ರಹ್ಮಲೋಕವನ್ನು ಮೀರಿಸುವ ಶಿಖರವುಳ್ಳದ್ದು ಎಂದು ಹೇಳಿದ್ದರಿಂದ ಸತ್ಯಲೋಕವು ಈ ಕುಂಭಕೋಣ ನಗರಿಯ ಏಕದೇಶ. ಅಲ್ಲಿ ಇಲ್ಲಿ ನಿರ್ಮಿಸಬೇಕಾಗಿದ್ದ ಅಂಗಡಿಗಳಿವೆ ಎಂಬ ಸೂಚನೆಯನ್ನೂ ಹಂಸಪಾದ ರೂಪವಾದ ಚೌಕಗಳಿಂದ ಸೂಚಿಸುತ್ತಿದ್ದಾರೆ ಎಂಬುದಾಗಿ ಕುಂಭಕೋಣ ನಗರದ ವಿಸ್ತಾರ – ವೈಭವಗಳನ್ನು ವರ್ಣಿಸುತ್ತಿದ್ದಾರೆ.

**ತಾತ್ಪರ್ಯ–2 :** ಕುಂಭಕೋಣ ನಗರದಲ್ಲಿ ವಿಚಿತ್ರವಾದ ಅಂಗಡಿ. ಭವನಗಳನ್ನು ಮಾಡಬೇಕೆಂದು ನಿರ್ಧರಿಸಿದ ನಗರದ ನಿರ್ಮಾತೃವಾದ ಬ್ರಹ್ಮದೇವರು ಮರೆತು ಮೊದಲು ಜನರು ವಾಸಿಸುವ ಮನೆಗಳನ್ನೇ ಮಾಡಿದರು. ಇಲ್ಲಿ ಅಂಗಡಿಯ ಭವನಗಳನ್ನು ಮಾಡಬೇಕಾಗಿತ್ತು ಎಂಬ ಜ್ಞಾನಕ್ಕೋಸ್ಕರ ಸ್ಮರಣ ಚಿಹ್ನೆಯಾದ ಹಂಸಪಾದವನ್ನೋ ಎಂಬಂತೆ ನಗರದ ಚೌಕಗಳನ್ನು ಬ್ರಹ್ಮದೇವರು ನಿರ್ಮಿಸಿದರು. (ಲೇಖನವನ್ನು ಬರೆಯುವವರು ತಾವು ಬರೆಯಬೇಕಾದದ್ದನ್ನು ಮರೆತಾಗ ಅದರ ನೆನಪಿಗಾಗಿ ಹಂಸಪಾದವೆಂಬ ರೇಖೆಯನ್ನು ಬರೆಯುತ್ತಾರೆ. ಅದೇ ರೀತಿಯಲ್ಲಿ ಬ್ರಹ್ಮದೇವರು ಬೇರೇ ಇನ್ನಾವುದೋ ಕೆಲಸದಲ್ಲಿ ತಲ್ಲಿನರಾಗಿ ಅಂಗಡಿ ಮುಂಗಟ್ಟುಗಳನ್ನು ನಿರ್ಮಿಸುವುದನ್ನು ಮರೆತುದರಿಂದ ಅದರ ಜ್ಞಾಪಕಕ್ಕಾಗಿ ನಾಲ್ಕು ರೇಖೆಗಳನ್ನು ಸೇರಿಸಿದಂತೆ ಕಾಣುವ (ಹಂಸಪಾದಾಕಾರವಾದ) ಚೌಕಗಳನ್ನು ನಿರ್ಮಿಸಿದರು ಎಂಬುದಾಗಿ ಕವಿಗಳು ಉತ್ಪ್ರೇಕ್ಷಿಸುತ್ತಿದ್ದಾರೆ.

**ಅವತಾರಿಕೆ :** ಈಗ ಮತ್ತೊಂದು ವಿಧವಾಗಿ ಕುಂಭಕೋಣ ನಗರವನ್ನು ವರ್ಣಿಸುತ್ತಾರೆ.

**ಪಾಕಾಹಿತೇ ಯನ್ನೃಪವೈಭವೇನ ಪರಾಜಿತೇ ಹಂಸ ವಿಸೃಜ್ಯ ಸಿಂಧುಮ್ ।**
**ಬೃಹತ್ಕುಚಾಃ ಯತ್ಪ್ರಮದಾಜನಾನಾಂ ಚರಂತಿ ಯಸ್ಯಾಂ ಗಿರಯೋ ನಿಕಾಮಮ್ ॥೪೬॥**

**ತಾತ್ಪರ್ಯ :** ಪಾಕ ಎಂಬ ರಾಕ್ಷಸನಿಗೆ ಶತೃವಾದ ಇಂದ್ರನು ಕುಂಭಕೋಣ ನಗರದ ರಾಜನ ಸಂಪತ್ತಿನಿಂದ ಪರಾಜಿತನಾದನು. ಇಂದ್ರನ ವಜ್ರಾಯುಧ ಪ್ರಹಾರದಿಂದ ಹೆದರಿದ್ದ ಪರ್ವತಗಳು ಹಿಂದೆ ಸಮುದ್ರದಲ್ಲಿ ಅಡಗಿದ್ದವು. ಈಗ ಆ ಪರ್ವತಗಳು ತಮ್ಮ ಶತೃವಾದ

ಇಂದ್ರನು ಕುಂಭಕೋಣ ನಗರದ ರಾಜನಿಂದ ಪರಾಜಿತನಾದಾಗ ಯಾವ ಹೆದರಿಕೆಯೂ ಇಲ್ಲದೇ ಕುಂಭಕೋಣ ನಗರದ ಸುಂದರ ಸ್ತ್ರೀಯರ ಸ್ಥೂಲವಾದ ಸ್ತನಗಳ ರೂಪವನ್ನು ತಾಳಿ ಓಡಾಡುತ್ತಿವೆ ಎಂದು ಅತಿಶಯೋಕ್ತಿಯಿಂದ ಕುಂಭಕೋಣ ನಗರದ ರಾಜನು ಇಂದ್ರನಿಗಿಂತಲೂ ಹೆಚ್ಚು ಐಶ್ವರ್ಯವಂತನೆಂದೂ ನಗರದ ಸ್ತ್ರೀಯರು ಅತ್ಯಂತ ಸುಂದರಿಯರೆಂದೂ ವರ್ಣಿಸುತ್ತಿದ್ದಾರೆ.

**ಅವತಾರಿಕೆ** : ಮುಂದಿನ ಐದು ಶ್ಲೋಕಗಳಿಂದ (ಕುಲಕದಿಂದ) ಕುಂಭಕೋಣ ನಗರವು ಬಹು ಸುಂದರಿಯರಾದ ಸ್ತ್ರೀಯರಿಂದ ತುಂಬಿದೆ ಎಂದು ವರ್ಣಿಸುತ್ತಿದ್ದಾರೆ.

**ವಿಭಾಕರೇಽಸ್ತೇಽಪಿ ವಿಕಾಸಭಾಜಾಂ ನಿರಂತರಂ ಸಂಶ್ರಿತಹಂಸಕಾನಾಮ್ ।**
**ಘನಾಗಮೇಷ್ವಭ್ಯುದಯಂ ಗತಾನಾಂ ಪಂಕೇರುಹಾಂ ಯತ್ ಪ್ರಮದಾಪದಾನಾಮ್ ॥೪೭॥**
**(ಪಾಠಾಂತರ–ಪಂಕೇರುಹೈರ್ಯತ್ ಹೈಯಟ್ ಪ್ರಮದಾಪದಾನಾಮ್)**

**ತಾತ್ಪರ್ಯ–1** : ಸೂರ್ಯನು ಮುಳುಗಿ ಪಶ್ಚಿಮ ಪರ್ವತದ ಆ ಕಡೆ ಹೋದಾಗ ಕಮಲಗಳು ಮುಚ್ಚಿಕೊಳ್ಳು –ತ್ತವೆ. ಪದ್ಮಗಳನ್ನು ಆಶ್ರಯಿಸಿದ್ದ ಹಂಸಗಳು ಮಳೆಗಾಲದಲ್ಲಿ ಮಾನಸ ಸರೋವರಕ್ಕೆ ಹೋಗುತ್ತವೆ. ಮಳೆಗಾಲದಲ್ಲಿ ಕಮಲಗಳು ನೀರಿನಲ್ಲಿ ಮುಳುಗಿಹೋಗಿ ಪ್ರಕಟವಾಗಿ ಕಾಣುವುದಿಲ್ಲ. ಅವುಗಳಿಗೆ ಕಾಂತಿಯೂ ಇರುವುದಿಲ್ಲ. ಕುಂಭಕೋಣ ನಗರದ ಸುಂದರ ಸ್ತ್ರೀಯರ ಪಾದಪದ್ಮಗಳು ಸೂರ್ಯನು ಮುಳುಗಿದ ಮೇಲೆ ಸಂಕುಚಿತವಾಗದೇ ಅರಳಿಕೊಂಡು ಕಾಂತಿಪೂರ್ಣವಾಗಿಯೇ ಇರುತ್ತವೆ. ಮಳೆಗಾಲದಲ್ಲಿಯೂ ಆ ಸ್ತ್ರೀಯರ ಪಾದಪದ್ಮಗಳು ಹಂಸಕವೆಂಬ ಕಾಲ್ಗೆಜ್ಜೆಗಳಿಂದ ಕೂಡಿಕೊಂಡೇ ಇರುತ್ತದೆ. ಮಳೆಗಾಲದಲ್ಲಿಯೂ ನೀರಿನಲ್ಲಿ ಮುಳುಗದೇ ಪ್ರಕಾಶಿಸುತ್ತಾ ಇರುತ್ತವೆ. ಇಂತಹ ಸುಂದರ ಸ್ತ್ರೀಯರ ಪಾದಪದ್ಮಗಳು ಕುಂಭಕೋಣ ನಗರದಲ್ಲಿ ನಿಬಿಡವಾಗಿ ಇವೆ. ಈ ನಗರಿಯಲ್ಲಿ ಸುಂದರ ಪಾದಪದ್ಮಗಳುಳ್ಳ ಸ್ತ್ರೀಯರು ಬಹಳ ಮಂದಿ ಇದ್ದಾರೆ ಎಂದು ಭಾವ. (ಅಥವಾ) ಹಿಂದೆ ಹೇಳಿದೆ ರೀತಿಯಿಂದ ರಾತ್ರಿಯೂ ಅರಳಿದ್ದು ನಿರಂತರ ಹಂಸಕಗಳಿಂದ (ಗೆಜ್ಜೆಗಳಿಂದ) ಕೂಡಿದ, ಮಳೆಗಾಲದಲ್ಲಿಯೂ ಪ್ರಕಾಶವಾಗಿ ಕಾಣಿಸುತ್ತಿರುವ ಕುಂಭಕೋಣದ ಸ್ತ್ರೀಯರ ಪಾದಕಮಲಗಳಿಗೆ ಈ ಗುಣಗಳಿಲ್ಲದ ಕಮಲಗಳ ಸಾಮ್ಯವನ್ನು ಕವಿವರ್ಯರು ಹೇಗೆ ಹೇಳುತ್ತಾರೆ? ಹೇಳಬಾರದಿತ್ತು ಎಂದು ಭಾವ.

**ತಾತ್ಪರ್ಯ–2** : ಸೂರ್ಯನು ಮುಳುಗುವ ವರೆಗೂ ಅರಳಿದ್ದು ಕಾಂತಿಯನ್ನು ಬೀರುತ್ತಾ, ನಿರಂತರವೂ ಹಂಸಕಗಳಿಗೆ (ಕಾಲ್ಗೆಜ್ಜೆಗಳೆಂಬ ಹಂಸಕಗಳಿಗೆ) ಆಶ್ರಯವಾಗಿರುವ, ಮಳೆಗಾಲದಲ್ಲೂ ಉತ್ಕರ್ಷವನ್ನು ಹೊಂದಿರುವ, ಈ ನಗರದ ಸುಂದರಿಯರ ಪಾದಪದ್ಮಗಳಿಗೆ ಕವಿವರ್ಯರು ಕಮಲದ ಸಾಮ್ಯವನ್ನು ಹೇಗೆ ಹೇಳುತ್ತಾರೆ? ಸೂರ್ಯನು ಮುಳುಗಿದಾಗ ಕಮಲಗಳು ಸಂಕೋಚವನ್ನು ಹೊಂದುತ್ತವೆ. ಪ್ರಮುದೆಯರ ಪಾದಗಳು ಆಗಲೂ ವಿಕಾಸಗೊಂಡಿರುತ್ತದೆ. ಹೇಮಂತ ಋತುವಿನಲ್ಲಿ ಕಮಲಗಳು ಹಂಸಗಳಿಗೆ ಆಶ್ರಯವಾಗಿರುವುದಿಲ್ಲ. ಪ್ರಮುದೆಯರ

ಪಾದಗಳಾದರೋ, ಯಾವಾಗಲೂ ಹಂಸ(ಕ)ಗಳಿಗೆ (ಕಾಲ್ಗೆಜ್ಜೆಗಳಿಗೆ) ಆಶ್ರಯವಾಗಿರುತ್ತದೆ. ಈ ರೀತಿಯಲ್ಲಿ ಕಮಲ ಮತ್ತು ಕುಂಭಕೋಣ ನಗರದ ಸ್ತ್ರೀಯರ ಪಾದಗಳಿಗೆ ಪರಸ್ಪರ ವಿರುದ್ಧವಾದ ಧರ್ಮಾಶ್ರಯತ್ವ ಇರುವುದರಿಂದ ಕವಿಗಳು ಪಾದಗಳಿಗೆ ಕಮಲಸಾದೃಶ್ಯವನ್ನು ಹೇಗೆ ಹೇಳುತ್ತಾರೆ? ಉಪಮಾನಕ್ಕಿಂತ ಭಿನ್ನವಾಗಿದ್ದು ಉಪಮಾನದಲ್ಲಿರುವ ಹೆಚ್ಚಿನ ಧರ್ಮವನ್ನು ಹೊಂದಿರುವುದೇ ಸಾದೃಶ್ಯವು. ಅದು ಇಲ್ಲಿ ಇಲ್ಲದಿರುವುದರಿಂದ ಕಮಲದ ಸಾದೃಶ್ಯವನ್ನು ಸುಂದರ ಸ್ತ್ರೀಯರ ಪಾದಗಳಿಗೆ ಕೊಡಬಾರದಿತ್ತು ಎಂದು ಕವಿಗಳು ಕುಂಭಕೋಣ ನಗರದ ಸ್ತ್ರೀಯರ ಸೌಂದರ್ಯವನ್ನು ವರ್ಣಿಸಿದ್ದಾರೆ.

**ಅವತಾರಿಕೆ :** ಪುನಃ ಅವಾಂತರ ಕುಲಕದಿಂದ ಕುಂಭಕೋಣ ನಗರವನ್ನು ವರ್ಣಿಸುತ್ತಾರೆ.

**ನ ಚಂದ್ರರೇಖಾ ನಖರೇಣ ಕ್ಲೃಪ್ತಾ ನ ಮೋಹನಂ ಕೇವಲದರ್ಶನೇನ ।**
**ನ ಶ್ಲಕ್ಷ್ಣತಾ ನೈವ ರುಚಿರ್ನ ಹಾರಾಃ ತೈರದ್ರಿಭಿರ್ಯದ್ರಮಣೀಕುಚಾನಾಮ್ ॥೪೮॥**

**ತಾತ್ಪರ್ಯ–1–2 :** ಸ್ತನಗಳಲ್ಲಿ ನಖದಿಂದ ಮಾಡಲ್ಪಟ್ಟ ಅರ್ಧಚಂದ್ರಾಕಾರದ ರೇಖೆಗಳು ಇರುತ್ತವೆ. ಪರ್ವತಗಳಲ್ಲಿ ಅವು ಇರುವುದಿಲ್ಲ. ಸ್ತನಗಳು ಕೇವಲ ನೋಟದಿಂದ ಮೋಹಕವಾಗಿರುತ್ತವೆ. ಪರ್ವತಗಳಲ್ಲಿ ನೋಟದಿಂದಲೇ ಮೋಹ ಉಂಟಾಗುವುದಿಲ್ಲ. ಪರ್ವತಗಳು ಒರಟಾಗಿರುತ್ತವೆ. ಸ್ತನಗಳು ನುಣುಪಾಗಿರುತ್ತವೆ ಪರ್ವತಗಳಲ್ಲಿ ಕಾಂತಿ ಇರುವುದಿಲ್ಲ. ಸ್ತನಗಳಲ್ಲಿ ಕಾಂತಿಯಿದೆ. ಪರ್ವತಗಳಿಗೆ ಹಾರಗಳಿರುವುದಿಲ್ಲ. ಸ್ತನಗಳಿಗೆ ಸುಂದರವಾದ ಹಾರಗಳಿರುತ್ತವೆ. ಹೀಗೆ ವಿರುದ್ಧ ಧರ್ಮಗಳನ್ನು ಪರ್ವತಗಳಿಗೆ ಹೋಲಿಸುವುದುಂಟು. ಆದರೆ ವಿರುದ್ಧ ಧರ್ಮಗಳಿದ್ದಲ್ಲಿ ಹೋಲಿಕೆಯು ಕೂಡುವುದಿಲ್ಲ. ಆದರೂ ಕವಿಗಳು ಇವುಗಳನ್ನು ಹೋಲಿಸಿರುವುದು ಆಶ್ಚರ್ಯ ಎಂದು ಹೇಳುತ್ತಾ ಕವಿಗಳು ಕುಂಭಕೋಣ ನಗರದ ಸುಂದರ ಸ್ತ್ರೀಯರ ಸ್ತನಗಳನ್ನು ವರ್ಣಿಸುತ್ತಿದ್ದಾರೆ.

**ಅವತಾರಿಕೆ :** ಸ್ತ್ರೀಯರ ಕಣ್ಣುಗಳಿಗೆ ಮತ್ಸ್ಯ, ನೀಲೋತ್ಪಲ, ಕಮಲ, ಮನ್ಮಥಬಾಣಗಳಿಂದ ಸಾದೃಶ್ಯವು ಬೇರೆ ಕಡೆ ಕಂಡು ಬಂದರೂ ಕುಂಭಕೋಣ ನಗರದ ಅಂಗನೆಯರಿಗೆ ಅದಿಲ್ಲವೆಂದು ವರ್ಣಿಸುತ್ತಾರೆ.

**ನ ಬಂಧಕತ್ವಂ ಶಕುಲೇಷು ದೃಷ್ಟಂ ನ ಚೋತ್ಪಲೇ ಚಂಚಲತಾಂಬುಜೇಷು ।**
**ಸ್ವತೋऽತನೋರ್ಬಾಧಕತಾ ನ ಬಾಣೇ ಯದಂಗನಾನಾಂ ನಯನೈರಮೀಷಾಮ್ ॥49॥**

**ತಾತ್ಪರ್ಯ :** ಮೀನುಗಳು ಯಾರನ್ನೂ ಬಂಧಿಸುವುದಿಲ್ಲ. ಸ್ವಯಂ ಬಂಧನಕ್ಕೆ ಒಳಗಾಗಿ ವಧ್ಯವಾಗುತ್ತವೆ. ಸ್ತ್ರೀಯರ ಕಣ್ಣುಗಳಾದರೋ ಯುವಕರನ್ನು ಮೋಹಪರವಶರನ್ನಾಗಿ ಮಾಡಿ ಬಂಧಿಸುತ್ತವೆ. ನೈದಿಲೆ ಹೂವುಗಳು ಮತ್ತು ಕಮಲಗಳಲ್ಲಿ ಗಾಳಿ ಮಂತಾದುದರಿಂದ ಯಾವಾಗಲೋ ಒಂದು ಬಾರಿ ಚಾಂಚಲ್ಯವು ಬಂದರೂ ಸ್ವತಃ ಯುವಕರ ಮನೋಮೋಹಕ್ಕೆ

ಕಾರಣವಾಗುವ ಚಾಂಚಲ್ಯವಿಲ್ಲ. ಸುಂದರಿಯರ ನಯನಗಳಲ್ಲಿಯಾದರೋ ಸ್ವಭಾವದಿಂದಲೇ ಯುವಕರನ್ನು ಪರವಶರನ್ನಾಗಿ ಮಾಡುವ ಚಾಂಚಲ್ಯವಿದೆ. ಅನಂಗನಾದ ಮನ್ಮಥನ ಬಾಣದಲ್ಲಿಯೂ ಸ್ತ್ರೀಯರು ಚಂದ್ರ, ಮಲಯಮಾರುತ ಮುಂತಾದ ಸಹಾಯಕರ ಅಪೇಕ್ಷೆ ಇಲ್ಲದೇ ಸ್ವತಃ ವಿರಹಪೀಡೆಯನ್ನುಂಟು ಮಾಡುವ ಸಾಮರ್ಥ್ಯವಿಲ್ಲ. ಕಾಮಿನಿಯರ ಕಮನೀಯವಾದ ಕಣ್ಣುಗಳು ಕ್ಷಣ ಮಾತ್ರದಲ್ಲಿಯೇ ನೋಟವನ್ನು ಬೀರಿ ತರುಣರನ್ನು ವಿರಹ ಕಾತುರರನ್ನಾಗಿ ಮಾಡುತ್ತದೆ. ಹೀಗೆ ಮೀನು, ಕನ್ನೈದಿಲೆ. ಕಮಲ, ಕಾಮ ಬಾಣಗಳಿಗೆ ಕಮನೀಯವಾದ ಕಣ್ಣುಗಳಿಗೂ ಅನೇಕ ವಿರುದ್ಧ ಧರ್ಮಗಳಿದ್ದರೂ ಈ ವಸ್ತುಗಳಿಗಿಂತ ನಾರಿಯ ನಯನಗಳಲ್ಲಿ ಬಹಳ ಹೆಚ್ಚು ಗುಣಗಳಿದ್ದರೂ ಕವಿವರ್ಯರು ಮೀನು, ಮದನ, ನೈದಿಲೆ ನಲಿನಗಳನ್ನು ಕಣ್ಣುಗಳಿಗೆ ಉಪಮಾನವಾಗಿ ಕೊಟ್ಟು ವರ್ಣಿಸುತ್ತಿರುವುದು ಪರಮಾಶ್ಚರ್ಯಕರವಾಗಿದೆ.

**ಅವತಾರಿಕೆ :** ಈ ಕುಂಭಕೋಣ ನಗರದಲ್ಲಿರುವ ಅಂಗನೆಯರ ಸೌಂದರ್ಯವನ್ನು ವಿಷಯಾಂತರವನ್ನಿಟ್ಟುಕೊಂಡು ಪುನಃ ವರ್ಣಿಸುತ್ತಾರೆ.

**ನ ವಕ್ರಿಮಾ ಬರ್ಹಿಣಬರ್ಹಿಬರ್ಹೇ (ಪಾ. ಬರ್ಹಿಣ ಬರ್ಹ ಬರ್ಹೇ)**
**ನ ತೇಜಸ್ಯೈಕಾಸಿಕತಾಽಂಧಕಾರೇ ।**
**ನ ಮೇಘವೃಂದೇ ಚಿರಕಾಲನೈಲ್ಯಂ ಯದಂಗನಾಕೇಶಭರೈರತಸ್ತೈಃ ॥೫೦॥**

**ತಾತ್ಪರ್ಯ :** ಸುಂದರವಾದ ಗರಿಗಳಿಂದ ಕೂಡಿದ್ದರೂ ನವಿಲಿನ ಯಾವ ಒಂದು ಸುಂದರವಾದ ಗರಿಯೂ ಕೂದಲುಗಳಂತೆ ಮನೋಹರವಾದ ವಕ್ರತೆಯನ್ನು ಹೊಂದಿಲ್ಲ. ಗುಂಗುರು ಗುಂಗುರಾಗಿಲ್ಲ. ಬಾಚಿ ಸುಂದರವಾಗಿ ಹೆಣೆದ ಜಡೆಯಲ್ಲಿರುವ ಕೂದಲುಗಳು ಬಿಗಿಯಾಗಿದ್ದರೂ ಬೀಗಿ ಗುಂಗುರಾಗಿ ಕುಣಿಯುತ್ತಿರುತ್ತವೆ. ಈ ಸೌಂದರ್ಯವು ನವಿಲುಗರಿಯಲ್ಲಿ ಇಲ್ಲ. ಕತ್ತಲೆಯ ಪ್ರಕಾಶದ ಜೊತೆಗಿರುವುದಿಲ್ಲ. ಆದರೆ ಕಪ್ಪಾದ ತಲೆಗೂದಲು ಪ್ರಕಾಶದಿಂದ ಕೂಡಿಯೇ ಇರುತ್ತದೆ. ಮುಖಚಂದ್ರನ ಕಾಂತಿಯ ಜೊತೆಗೆ ಸೇರಿಯೇ ಕಪ್ಪಾದ ತಲೆಗೂದಲು ರಾರಾಜಿಸುತ್ತದೆ. ಮೋಡಗಳು ಮಳೆಗಾಲದಲ್ಲಿ ಮಾತ್ರ ಸ್ವಲ್ಪ ಸಮಯ ಕಪ್ಪಾಗಿರುತ್ತವೆ. ಕೇಶರಾಶಿಯಾದರೋ ಬಹುಕಾಲ ಕಪ್ಪಾಗಿಯೇ ಇರುತ್ತದೆ. ಈ ರೀತಿಯಾಗಿ ಬಹಳ ವ್ಯತ್ಯಾಸವಿರುವುದರಿಂದಲೂ, ಉತ್ಕೃಷ್ಟವಾದ ಧರ್ಮಗಳಿಲ್ಲದಿರುವುದರಿಂದಲೂ ನವಿಲುಗರಿ, ಕತ್ತಲೆ, ಮೇಘರಾಶಿಯಂತೆ ಸುಂದರ ಸ್ತ್ರೀಯರ ಕೇಶರಾಶಿಯಿದೆ ಎಂದು ವರ್ಣಿಸುವುದು ಹೇಗೆ ಉಚಿತವಾಗುವುದು. ಅಥವಾ ಕಪ್ಪಾದ ಕೇಶ ಪಾಶಗಳನ್ನೇ ಉಪಮಾನವಾಗಿಟ್ಟುಕೊಂಡು ನವಿಲುಗರಿ, ಅಂಧಕಾರ, ಮೇಘರಾಶಿಗಳನ್ನೇ ಉಪಮೇಯವಾಗಿಟ್ಟು ವರ್ಣಿಸುವುದೂ ಕೂಡಾ ಹೇಗೆ ಯುಕ್ತವಾದೀತು? ಕುಟಿಲತೆ, ಪ್ರಕಾಶದ ಒಟ್ಟಿಗೆ ಇರುವಿಕೆ, ಸರ್ವದಾ ನೀಲವಾಗಿರುವಿಕೆ ಎಂಬ ಗುಣಗಳಿಂದ ಕೂಡಿದ ಅಂಗನೆಯರ ಕೇಶ ಸಮೂಹಗಳೊಡನೆ ಈ ಗುಣಗಳಿಲ್ಲದ

ನವಿಲುಗರಿ, ಅಂಧಕಾರ (ಕತ್ತಲೆ), ಮೋಡಗಳ ರಾಶಿಯನ್ನು ಉಪಮಾನವಾಗಿಯಾಗಲೀ, ಉಪಮೇಯವಾಗಿಯಾಗಲೀ ಇಟ್ಟುಕೊಂಡು ಹೋಲಿಸುವುದು ಸರ್ವಥಾ ಯುಕ್ತವಾಗಿಲ್ಲ.

**ಅವತಾರಿಕೆ :** ಈಗ ಕುಂಭಕೋಣ ನಗರದ ಲಾವಣ್ಯವತಿಯರಾದ ಅಂಗನೆಯರ ಮುಖವನ್ನು ಕವಿಗಳು ವರ್ಣಿಸುತ್ತಿದ್ದಾರೆ.

**ನ ಭ್ರೂವಿಲಾಸಾಃ ನ ತಮಾಂ ಸ್ಥಿರಶ್ರೀಃ ನಾನಾರಸೋಕ್ತಿರ್ನ ತಮಾಂ ಚ ಯಸ್ಯ ।**
**ತೇನೇಂದುನಾ ಯತ್ಪ್ರಮಪ್ರಮದಾಮುಖಾನಾಂ ಕಥಂ**
**ಕವೀಂದ್ರಾಃ ಕಥಯಂತಿ ಸಾಮ್ಯಮ್ ॥೫೧॥**

**ತಾತ್ಪರ್ಯ :** ಚಂದ್ರನಲ್ಲಿ ಹಾವಭಾವ ಭರಿತವಾದ ಹುಬ್ಬಿನ ವಿಲಾಸಗಳಿಲ್ಲ. ಸ್ತ್ರೀಯರ ಮುಖದಲ್ಲಿ ಅನೇಕ ಹಾವಭಾವಗಳಿವೆ. ಚಂದ್ರನಲ್ಲಿ ಶುಕ್ಲ-ಕೃಷ್ಣ ಪಕ್ಷಗಳ ವ್ಯತ್ಯಾಸದಿಂದ ಸ್ಥಿರವಾದ ಒಂದೇ ರೀತಿಯ ಕಾಂತಿಯಿರುವುದಿಲ್ಲ. ಸ್ತ್ರೀಯರ ಮುಖದಲ್ಲಿ ಒಂದೇ ರೀತಿಯ ಕಾಂತಿ ಇರುತ್ತದೆ. ಚಂದ್ರನಲ್ಲಿ ಮುಗುಳುನಗೆಯ ಶೋಭೆಯಿಲ್ಲ. ಅಂಗನೆಯರ ಮುಖದಲ್ಲಿ ಯಾವಾಗಲೂ ಮೋಹಕವಾದ ಮಂದಹಾಸವು ತುಳುಕುತ್ತಾ ಇರುತ್ತದೆ. ಚಂದ್ರನು ಶೃಂಗಾರಾದಿ ನಾನಾ ರಸಭರಿತವಾದ ಮಾತು ಕಥೆಗಳನ್ನೂ ಆಡುವುದಿಲ್ಲ. ಕುಂಭಕೋಣ ನಗರದ ಸ್ತ್ರೀಯರ ಮುಖಗಳು ಶೃಂಗಾರ ರಸಭರಿತವಾದ ಚಮತ್ಕಾರವಾದ ಮಾತುಗಳಿಂದ ಆನಂದವನ್ನು ಉಕ್ಕೇರಿಸುತ್ತದೆ. ಹೀಗೆ ಸ್ತ್ರೀಯರ ಮುಖಗಳಲ್ಲಿರುವ ಯಾವ ಗುಣವೂ ಇಲ್ಲದಿರುವ ಚಂದ್ರನೊಡನೆ ಕುಂಭಕೋಣ ನಗರದ ಸುಂದರಿಯರಾದ ಪ್ರಮುದೆಯರ ಮುಖಗಳನ್ನು ಹೋಲಿಸಿ ಕವಿಗಳು ಹೇಗೆ ವರ್ಣಿಸುತ್ತಾರೆ? ಸಮಾನವಾದ ಧರ್ಮವುಳ್ಳ ವಸ್ತುಗಳಿಗೆ ಮಾತ್ರ ಸಾದೃಶ್ಯವನ್ನು ಹೇಳಬೇಕು. ವಿರುದ್ಧವಾದ ಧರ್ಮಗಳುಳ್ಳ ವಸ್ತುಗಳಿಗೆ ಸಾದೃಶ್ಯವನ್ನು ಹೇಳಬಾರದು. ಆದರೂ ಕವಿಗಳು ರೀತಿಯಾಗಿ ಹೋಲಿಸುತ್ತಿದ್ದಾರೆ. ಇದರ ಅತ್ಯಂತ ಅಸಂಗತ ಎಂದು ಭಾವ.

**ಅವತಾರಿಕೆ :** ಈ ರೀತಿಯಾಗಿ ಕುಂಭಕೋಣ ನಗರವನ್ನು ವರ್ಣಿಸುತ್ತಾ ಕವಿಗಳು ಮಹಾಕುಲಕವನ್ನು ಮುಗಿಸುತ್ತಿದ್ದಾರೆ.

**ತಸ್ಯಾಂ ನಗರ್ಯಾಂ ಸುಕೃತೇ ಬದರ್ಯಾಂ**
**ಭವಾಬ್ಧಿತರ್ಯಾಂ ಬುಧಸಿಂಹದರ್ಯಾಮ್ ।**
**ವಿಚಿತ್ರನಾರ್ಯಾಂ ವಿಜಿತೇಂದ್ರಪುರ್ಯಾಂ ಚಿರಂ**
**ನ್ಯವಾತ್ಸೀತ್ ಸಿತಸೌಧಗೌರ್ಯಾಮ್ ॥೫೨॥**

**ತಾತ್ಪರ್ಯ :** ಈ ಕುಂಭಕೋಣ ನಗರವು ಪುಣ್ಯವನ್ನುಂಟು ಮಾಡುವ ವಿಷಯದಲ್ಲಿ ಬದರೀ ಕ್ಷೇತ್ರಕ್ಕೆ ಸಮಾನವಾಗಿತ್ತು. ಸಂಸಾರವೆಂಬ ಸಾಗರವನ್ನು ದಾಟಿಸುವ ವಿಷಯದಲ್ಲಿ, ಹಡಗಿಗೆ ಸಮಾನವಾಗಿತ್ತು. ಅದು ಪಂಡಿತರೆಂಬ ಸಿಂಹಗಳಿಗೆ ವಾಸ ಮಾಡುವ ಗುಹೆಯಂತಿತ್ತು.

ದೇವತಾ ಸ್ತ್ರೀಯರಂತೆ ಇರುವ ಸುಂದರ ಸ್ತ್ರೀಯರು ಈ ನಗರದಲ್ಲಿ ವಾಸಿಸುತ್ತಿದ್ದರು. ವೈಭವದಲ್ಲಿ, ನಾನಾ ವಿಧಭೋಗಗಳಲ್ಲಿ, ಈ ಕುಂಭಕೋಣ ನಗರವು ಇಂದ್ರನ ನಗರಿಯಾದ ಅಮರಾವತಿಯನ್ನು ಮೀರಿಸುತ್ತಿತ್ತು. ಧವಳವಾದ ಎತ್ತರವಾದ ಮಹಡಿಯ ಮನೆಗಳಿಂದ ಈ ನಗರವು ಬೆಳ್ಳಗೆ ಕಾಣಿಸುತ್ತಿತ್ತು. ಹಿಂದೆ ಹೇಳಿರುವ ಅನೇಕ ಗುಣಗಳಿಂದ ಕೂಡಿರುವ ಈ ಕುಂಭಕೋಣ ನಗರದಲ್ಲಿ ಪ್ರಕೃತ ಕಾವ್ಯನಾಯಕರಾದ ಶ್ರೀರಾಘವೇಂದ್ರ ಗುರುಸಾರ್ವಭೌಮರ ಗುರುಗಳಾದ ಶ್ರೀಸುಧೀಂದ್ರತೀರ್ಥ ಶ್ರೀಪಾದಂಗಳವರು ಬಹುಕಾಲ ವಾಸಿಸುತ್ತಿದ್ದರು.

**ಅವತಾರಿಕೆ :** ಈಗ ಕವಿಗಳು ಜಗದ್ಗುರುಗಳಾದ ಶ್ರೀರಾಘವೇಂದ್ರ ಗುರುಸಾರ್ವಭೌಮರ ಗುರುಗಳಾದ ಮಹಾವಿದ್ವನ್ಮಣಿಗಳಾದ ಪರಮಪೂಜ್ಯ ಶ್ರೀ ಶ್ರೀಸುಧೀಂದ್ರತೀರ್ಥ ಶ್ರೀಪಾದಂಗಳವರ ವೈಭವಗಳನ್ನು ವಿಶೇಷವಾಗಿ ಹೊಗಳುತ್ತಾ ಉಪಸಂಹಾರ ಮಾಡುತ್ತಿದ್ದಾರೆ.

**ಅತುಲವಿವಿಧವಿದ್ವನ್ಮಂಡಲೀಲಾಲ್ಯಮಾನಃ**
**(ಮಂಡಿತೇನ)ಪ್ರಭುಮಣಿರಘುನಾಥಪ್ರೌಢಭೂಪಾಲಕೇನ ।**
**ನಿಹಿತನಿಖಿಲವಿದ್ವನ್ಮೌಲಿಪಾದಃ ಸುಧೀಂದ್ರಃ**
**ಪರಜನದುರವಾಪಂ ಪ್ರಾಪ ಹೇಮಾಭಿಷೇಕಮ್ ॥೫೩॥**

**ತಾತ್ಪರ್ಯ :** ಅಸಾಧಾರಣವಾದ ಅನೇಕಾನೇಕ ಪಂಡಿತರು ಶ್ರೀ ಶ್ರೀ ಸುಧೀಂದ್ರತೀರ್ಥ ಶ್ರೀಪಾದಂಗಳವರ ಪಾಂಡಿತ್ಯ ಮತ್ತು ಮಹಿಮೆಗಳನ್ನು ಹೊಗಳುತ್ತಿದ್ದರು. ಶ್ರೀಸುಧೀಂದ್ರತೀರ್ಥರು ಎಲ್ಲ ಪ್ರತಿವಾದಿ ವಿದ್ವಾಂಸರನ್ನು ಪರಾಜಿತರನ್ನಾಗಿ ಮಾಡಿದ್ದರು. ಆ ಪಂಡಿತರುಗಳು ತಮ್ಮ ಶಿರಸ್ಸಿನಿಂದ ಶ್ರೀಸುಧೀಂದ್ರತೀರ್ಥರ ಪಾದಗಳನ್ನು ಸ್ಪರ್ಶಿಸಿ ಗೌರವಿಸುತ್ತಿದ್ದರು. ಸ್ವತಃ ವಿದ್ವಾಂಸನಾದ, ಅನೇಕ ವಿದ್ವಜ್ಜನರಿಗೆ ಆಶ್ರಯದಾತನಾದ ಹಾಗೂ ಆ ವಿದ್ವನ್ಮಣಿಗಳಿಂದ ಅಲಂಕೃತನಾದ, ತಂಜಾಪೂರಿನ ರಘುನಾಥ ಭೂಪಾಲಕನು ಮೇಲೆ ಹೇಳಿದ ಶ್ರೀಸುಧೀಂದ್ರತೀರ್ಥ ಶ್ರೀಪಾದಂಗಳವರ ಅಸಾಧಾಣ ವಿದ್ವತ್ತೆಯನ್ನು ಕಂಡು ಪುಲಕಿತನಾಗಿ ಭಕ್ತಿ ಗೌರವಾತಿಶಯಗಳಿಂದ ಶ್ರೀಸುಧೀಂದ್ರತೀರ್ಥ ಶ್ರೀಪಾದಂಗಳವರಿಗೆ ಸುವರ್ಣಾಭಿಷೇಕವನ್ನು ಮಾಡಿದನು. ಇಂತಹಾ ಸುವರ್ಣಾಭಿಷೇಕವು ಇತರರಿಗೆ ಯಾರಿಗೂ ಲಭ್ಯವಾಗಿರಲಿಲ್ಲ.

**ಶ್ರೀಮತ್ಕಶ್ಯಪವಂಶವಾರ್ಧಿಶಶಿನಃ ಷಡ್ದರ್ಶನೀವಲ್ಲಭ–**
**ಶ್ರೀಲಕ್ಷ್ಮೀನರಸಿಂಹವಿತ್ತವಿದುಷಃ ಶ್ರೀವೇಂಕಟಾಂಬಾಮಣೌ ।**
**ಜಾತೇನಾರ್ಯದಯಾಸುಧಾಮಯಗಿರಾ ನಾರಾಯಣೇನೋದಿತೇ**
**ಕಾವ್ಯೇ ಚಾರುಣಿ ರಾಘವೇಂದ್ರವಿಜಯೇ ಸರ್ಗೋ ದ್ವಿತೀಯೋಽಭವತ್ ॥೫೪॥**

**ತಾತ್ಪರ್ಯ :** ಈ ಶ್ಲೋಕದ ವ್ಯಾಖ್ಯಾನವು ಮೊದಲ ಸರ್ಗದ ಕೊನೆಯಲ್ಲಿ ಬಂದಿದೆ. ಎರಡನೇ ಸರ್ಗವು ಮುಗಿಯಿತು.

ಇತಿ ಕವಿಕುಲತಿಲಕೇನ ನಾರಾಯಣಾಚಾರ್ಯೇಣ ಕೃತೇ
ಶ್ರೀರಾಘವೇಂದ್ರವಿಜಯೇ ದ್ವಿತೀಯಃ ಸರ್ಗಃ

ಈ ರೀತಿಯಾಗಿ ಕವಿಕುಲತಿಲಕರಾದ ನಾರಾಯಣಾಚಾರ್ಯರಿಂದ ರಚಿತವಾದ ಶ್ರೀರಾಘವೇಂದ್ರವಿಜಯ ಮಹಾಕಾವ್ಯದಲ್ಲಿ ಎರಡನೇ ಸರ್ಗವು ಮುಗಿಯಿತು (ಸಮಾಪ್ತವಾಯಿತು).

# ದ್ವಿತೀಯ ಸರ್ಗದ ಕಥಾಸಾರ

ಈ ಸರ್ಗದಲ್ಲಿ ಸಂಪ್ರದಾಯ ಪರಂಪರೆಯನ್ನು ಹೇಳಿದ್ದಾರೆ. ಶ್ರೀಮನ್ನಾರಾಯಣನು ಶ್ರೀರಾಮಚಂದ್ರನಾಗಿ ಅವತಾರ ಮಾಡಿದಾಗ ಮುಖ್ಯಪ್ರಾಣದೇವರು ಹನುಮಂತನಾಗಿ ಅವತರಿಸಿ ಪರಮಾತ್ಮನ ಸೇವೆಯನ್ನು ಮಾಡಿದರು. ಪರಮಾತ್ಮನು ಶ್ರೀಕೃಷ್ಣನಾಗಿ ಅವತರಿಸಿದಾಗ ವಾಯುದೇವರು ಭೀಮಸೇನರೂಪದಿಂದ ಸೇವಿಸಿದರು. ಆ ವಾಯುದೇವರೇ ಕಲಿಯುಗದಲ್ಲಿ ಮಧ್ವ ಎಂಬ ಹೆಸರಿನಿಂದ ಅವತರಿಸಿ ಶ್ರೀವೇದವ್ಯಾಸದೇವರ ಸೇವೆಯನ್ನು ಮಾಡಿದರು. ಶ್ರೀವೇದವ್ಯಾಸರು ರಚಿಸಿದ ಬ್ರಹ್ಮಸೂತ್ರಗಳಿಗೆ ಇತರರು ಮಾಡಿದ ಅಪವ್ಯಾಖ್ಯಾನಗಳನ್ನು ನಿರಾಕರಿಸಿ ಶ್ರೀವೇದವ್ಯಾಸರಿಗೆ ಸಮ್ಮತವಾದ ಭಾಷ್ಯವನ್ನು ರಚಿಸಿ ಮೂರು ಲೋಕಗಳಲ್ಲಿಯೂ ಸತ್ ಸಿದ್ಧಾಂತವನ್ನು ಪುನಃ ಪ್ರತಿಷ್ಠಾಪಿಸಿದರು. ಅನೇಕ ಸಂನ್ಯಾಸಿಶಿಷ್ಯರನ್ನು ಮಾಡಿಕೊಂಡು ನೀವು ಈ ಉತ್ತಮ ಸಿದ್ಧಾಂತಪ್ರಚಾರವನ್ನು ಮಾಡುತ್ತಿರಬೇಕೆಂದು ಆಜ್ಞಾಪಿಸಿದರು. ಬ್ರಹ್ಮಸೂತ್ರಭಾಷ್ಯವೆಂಬ ಅಮೃತವನ್ನು , ಅನುವ್ಯಾಖ್ಯಾನ ಎಂಬ ಇಂದಿರೆಯನ್ನು , ಉಪನಿಷದ್‌ಭಾಷ್ಯ ಮುಂತಾದ ಗ್ರಂಥಗಳೆಂಬ ಕಲ್ಪವೃಕ್ಷಗಳನ್ನು ಅನುಗ್ರಹಿಸಿದ ಕ್ಷೀರಸಮುದ್ರದಂತಿರುವ ಶ್ರೀಮಧ್ವಾಚಾರ್ಯರು ಈಗಲೂ ಕೂಡ ಬದರಿಯಲ್ಲಿರುವ ತಮ್ಮ ಗುರುಗಳಾದ ಶ್ರೀಬಾದರಾಯಣರನ್ನು ಸೇವಿಸುತ್ತಾ ಬದರಿಯಲ್ಲಿಯೇ ಇದ್ದಾರೆ.

ಸಿದ್ಧಾಂತವನ್ನು ಅಭಿವೃದ್ಧಿ ಪಡಿಸುವುದಕ್ಕಾಗಿ ಶ್ರೀಮಧ್ವಾಚಾರ್ಯರು ಅಪ್ಪಣೆ ಮಾಡಿದ ಶಿಷ್ಯರಲ್ಲಿ ಪ್ರಧಾನರು ಶ್ರೀಪದ್ಮನಾಭತೀರ್ಥರು. ಅವರು ಆಚಾರ್ಯರಿಗೆ ಹೆಚ್ಚು ಪ್ರೀತ್ಯಾಸ್ಪದರೂ ಆಗಿದ್ದರು. ತಾರ್ಕಿಕ ಶ್ರೇಷ್ಠರಾದ ಅವರು ಆಚಾರ್ಯರು ರಚಿಸಿರುವ ಶ್ರೀಮದ್‌ಬ್ರಹ್ಮಸೂತ್ರಭಾಷ್ಯಕ್ಕೆ 'ಸತ್ತರ್ಕದೀಪಾವಲಿ' ಎಂಬ ವ್ಯಾಖ್ಯಾನವನ್ನು ರಚಿಸಿರುವರು. ಆಚಾರ್ಯರ ಅನುವ್ಯಾಖ್ಯಾನ ಗ್ರಂಥಕ್ಕೆ ಶ್ರೀಪದ್ಮನಾಭತೀರ್ಥರು 'ಸನ್ನ್ಯಾಯರತ್ನಾವಲಿ' ಎಂಬ ವ್ಯಾಖ್ಯಾನವನ್ನು ರಚಿಸಿರುವರು. ಶ್ರೇಷ್ಠವಾದ ಈ ಎರಡು ವ್ಯಾಖ್ಯಾನಗಳು ಪ್ರತಿವಾದಿಗಳಿಂದ ದೂಷಿಸಲು ಅಶಕ್ಯವಾಗಿವೆ. ಶ್ರೀಪದ್ಮನಾಭತೀರ್ಥರು ಗ್ರಂಥಕರ್ತರಷ್ಟೇ ಅಲ್ಲ , ನಿರಂತರದಲ್ಲಿಯೂ ಪಾಠಪ್ರವಚನಾದಿಗಳಿಂದ ಸಿದ್ಧಾಂತವನ್ನು ಬೆಳೆಸಿದರು. ವ್ಯಾಕರಣ ಮಹಾಭಾಷ್ಯಕರ್ತರಾದ ಪತಂಜಲಿಗಳಂತೆ ಶ್ರೀಪದ್ಮನಾಭತೀರ್ಥರೂ ಶೇಷಾವತಾರರು. ಸಾವಿರ ಹೆಡೆಗಳುಳ್ಳ ಮೂಲ ರೂಪದಿಂದ ತಾನು ವ್ಯಾಕರಣ ಭಾಷ್ಯವನ್ನು ಉಪದೇಶಿದರೆ ತನ್ನ ರೂಪವನ್ನು ನೋಡಿ ಶಿಷ್ಯರು ಹೆದರಿಯಾರು ಎಂದು ಆಲೋಚಿಸಿ ಶೇಷದೇವರು ಪರದೆಯ ಹಿಂದೆ ಕುಳಿತು ತನ್ನ ರೂಪವನ್ನು ಮರೆಮಾಡಿ ಶಿಷ್ಯರಿಗೆ ಪಾಠ ಹೇಳುತ್ತಿದ್ದರು. ಪತಂಜಲಿಯ ಅವತಾರದಲ್ಲಿ ಪಾಣಿನಿಸೂತ್ರಗಳಿಗೆ ಸಾವಿರಾರು ಅರ್ಥವನ್ನು ಹೇಳಲು ಪಾಠಕಾಲದಲ್ಲಿ ಸಾವಿರ ವದನಗಳನ್ನು ಸ್ವೀಕರಿಸಿದರು. ಆಗಲೂ ಶಿಷ್ಯರು ಹೆದರಿಯಾರೆಂದು ತನ್ನ ಶೇಷಾವತಾರವನ್ನು ಮರೆಮಾಚುವುದಕ್ಕೋಸ್ಕರ ಪರದೆಯಿಂದ ತನ್ನ ಶರೀರವನ್ನು ಮರೆಮಾಚಿಕೊಂಡರು. ಅದೇ ಶೇಷದೇವರು ಪದ್ಮನಾಭತೀರ್ಥರಾಗಿ ಹುಟ್ಟಿದಾಗಲೂ ಶ್ರೀಮಧ್ವಾಚಾರ್ಯರ ಮಾತುಗಳಿಗೂ ಸಾವಿರಾರು ರೀತಿಯಿಂದ ಅರ್ಥವನ್ನು ಹೇಳಲು ಸಾವಿರ ಮುಖಗಳಿಂದ ಪಾಠ ಹೇಳುತ್ತಾ ಪರದೆ ಹಿಂದೆ ಕುಳಿತೇ ಪಾಠ ಹೇಳಿದರು. ಹೀಗೆ ಶೇಷಾವತಾರರಾದ ಶ್ರೀಪದ್ಮನಾಭತೀರ್ಥರು ಶ್ರೀಮಧ್ವಾಚಾರ್ಯರ ಶಿಷ್ಯರಲ್ಲಿ ಅಗ್ರಗಣ್ಯರಾಗಿದ್ದರು.

ಶ್ರೀನಾರಾಯಣದೇವರ ನಾಭಿಕಮಲದಿಂದ ಹುಟ್ಟಿದ ಬ್ರಹ್ಮದೇವರು ಒಂದಾನೊಂದು ಸಮಯದಲ್ಲಿ ಶ್ರೀರಾಮದೇವರ ಒಂದು ಪ್ರತಿಮೆಯನ್ನು ತಾನೇ ನಿರ್ಮಿಸಿ ಭಕ್ತಿಯಿಂದ ಪ್ರತಿದಿವಸವೂ ಪೂಜಿಸಿದರು. ಬ್ರಹ್ಮದೇವರ ಮಕ್ಕಳಾದ ಮರೀಚಿಗಳ ಪುತ್ರರು ಕಶ್ಯಪರು. ಅವರ ಮಗನೇ ಸೂರ್ಯನು. ಸೂರ್ಯನ ಮಗನು ವೈವಸ್ವತ ಮನುವು. ಈ ವೈವಸ್ವತ ಮನುವಿನ ಮಗನಾದ ಇಕ್ಷ್ವಾಕುವು ತಪಸ್ಸು ಮಾಡಿ ಬ್ರಹ್ಮದೇವರನ್ನು ಸಂತೋಷ

ಪಡಿಸಿದರು. ಆಗ ಬ್ರಹ್ಮದೇವರು ತನ್ನ ಆರಾಧ್ಯಮೂರ್ತಿಯಾದ ರಾಮದೇವರ ಪ್ರತಿಮೆಯನ್ನು ಇಕ್ಷ್ವಾಕುವಿಗೆ ಕೊಟ್ಟರು. ಆ ಇಕ್ಷ್ವಾಕುವೂ ಅವನ ವಂಶದವರೂ ಆ ಪ್ರತಿಮೆಯನ್ನು ಭಕ್ತಿಯಿಂದ ಆರಾಧಿಸುತ್ತಿದ್ದರು. ಆ ವಂಶ–ದಲ್ಲಿಯೇ ಹುಟ್ಟಿದ ದಶರಥನು ಈ ಪ್ರತಿಮಾಂತರ್ಗತನಾದ ಶ್ರೀರಾಮನ ಪೂಜೆಯನ್ನು ಮಾಡಿ ಅದರ ಫಲವಾಗಿ ಶ್ರೀರಾಮಚಂದ್ರನನ್ನು ಮಗನನ್ನಾಗಿ ಪಡೆದನು. ಹೀಗೆ ಶ್ರೀರಾಮನ ಅವತಾರಕ್ಕೆ ಕಾರಣವಾದ್ದರಿಂದ ಈ ಪ್ರತಿಮೆಗೆ "ಮೂಲರಾಮಪ್ರತಿಮಾ" ಎಂಬ ಪ್ರಖ್ಯಾತಿಯುಂಟಾಯಿತು. ಅನಂತರ ರಾಮದೇವರ ವಂಶದ ರಾಜರಿಂದ ಪೂಜಿತವಾದ ಆ ಪ್ರತಿಮೆಯು ಕಲಿಕಾಲ ಬಲದಿಂದ ಆ ವಂಶವು ಕ್ಷೀಣವಾದಾಗ, ವೈವಸ್ವತಮನ್ವಂತರದ 28ನೆಯ ಕಲಿಯುಗದಲ್ಲಿ 4300 ವರ್ಷಗಳು ಕಳೆಯುತ್ತಿರುವಾಗ "ಒರಿಸ್ಸಾ ದೇಶದ ಕೂರ್ಮ" ನಗರದಲ್ಲಿದ್ದ ಆ ದೇಶದ ಅಧಿಪತಿಯಾದ ಗಜಪತಿರಾಜನ ಬೊಕ್ಕಸವನ್ನು ಸೇರಿತು. ಆ ಸಮಯದಲ್ಲಿ ದಕ್ಷಿಣ ಭಾರತ ಭೂಮಿಯ ಪರಶು–ರಾಮಕ್ಷೇತ್ರವಾದ ಪಾಜಕಕ್ಷೇತ್ರವೆಂಬಲ್ಲಿ ಅವತರಿಸಿದ ಮುಖ್ಯಪ್ರಾಣಾವತಾರರಾದ ಶ್ರೀಮಧ್ವಾಚಾರ್ಯರು ಗಜಪತಿರಾಜನ ಬೊಕ್ಕಸದಲ್ಲಿದ್ದ ಶ್ರೀಮೂಲರಾಮದೇವರ ಪ್ರತಿಮೆಯನ್ನು ತರುವುದಕ್ಕೆ ಕಾಲ ನಿರೀಕ್ಷಣ ಮಾಡುತ್ತಾ ಇದ್ದರು. ಅದೇ ಸಮಯದಲ್ಲಿ ಅಲ್ಲಿಯ ರಾಜನಾದ ಗಜಪತಿಯು ಮೃತನಾದನು. ಗಜಪತಿರಾಜನ ಮಗನು ಇನ್ನೂ ಚಿಕ್ಕ ಬಾಲಕನಾದುದರಿಂದ ರಾಜ್ಯಭಾರವನ್ನು ನಿರ್ವಹಿಸಲು ಅಸಮರ್ಥನೆಂದು ತಿಳಿದ ಮಂತ್ರಿಗಳು ರಾಜ್ಯಭಾರ ಮಾಡಲು ಸಮರ್ಥನಾದ ಯಾರಾದರೊಬ್ಬರನ್ನು ಹುಡುಕಬೇಕೆಂದು ನಿರ್ಧರಿಸಿದರು. ಅದಕ್ಕಾಗಿ ತೀರ್ಥಜಲ–ಪೂರ್ಣವಾದ ಕಲಶವನ್ನೂ ಮಾಲೆಯನ್ನೂ ಕೊಟ್ಟು ಅರಮನೆಯ ಆನೆಯನ್ನು ಕಳುಹಿಸಿದರು. ಆ ಆನೆಯು ಯಾರ ಕಂಠದಲ್ಲಿ ಮಾಲೆಯನ್ನು ಹಾಕಿ ತೀರ್ಥಜಲಾಭಿಷೇಕವನ್ನು ಮಾಡುತ್ತದೆಯೋ ಅವನೇ ದೇವದತ್ತನಾದ ರಾಜನಾಗಲು ಅರ್ಹನು ಎಂದು ಮಂತ್ರಿಗಳೆಲ್ಲರೂ ನಿರ್ಧರಿಸಿ ಹಾಗೆಯೇ ಮಾಡಿದರು.

ಕಲಶವನ್ನೂ ಮಾಲೆಯನ್ನೂ ಹೊತ್ತು ಅಲ್ಲಲ್ಲಿ ತಿರುಗುತ್ತಿದ್ದ ಆನೆಯು ಪ್ರಾತಃಸ್ನಾನಕ್ಕಾಗಿ ಜಲಾಶಯದ ಬಳಿ ನಿಂತಿದ್ದ ಶ್ರೀನರಹರಿತೀರ್ಥರನ್ನು ನೋಡಿ ಅವರಿಗೆ ಕುಂಭೋದಕದಿಂದ ಅಭಿಷೇಕ ಮಾಡಿ ಕಂಠದಲ್ಲಿ ಮಾಲೆಯನ್ನು ಅರ್ಪಿಸಿತು. ಅನಂತರ ಅವರನ್ನು ತನ್ನ ಹೆಗಲಮೇಲೇರಿಸಿ ರಾಜಗೃಹದ ಕಡೆಗೆ ಕರೆದು ಒಯ್ಯಿತು. ಅಲ್ಲಿ ಮಂತ್ರಿಗಳೆಲ್ಲರ ಸಮ್ಮತಿಯಂತೆ ಶ್ರೀನರಹರಿತೀರ್ಥರು ಹನ್ನೆರಡು ವರ್ಷಗಳ ವರೆಗೆ ರಾಜ್ಯಪಾಲನೆಯನ್ನು ಮಾಡಿ ರಾಜಪುತ್ರನು ರಾಜ್ಯಭಾರ ಮಾಡಲು ಸಮರ್ಥನಾದುದನ್ನು ತಿಳಿದು ಅವನಿಗೆ ರಾಜ್ಯಭಾರವನ್ನು ಒಪ್ಪಿಸಿ ತಾವು ಗುರುಗಳ ಬಳಿಗೆ ಹೊರಟರು.

ರಾಜಕುಮಾರನು ತನಗೆ ಹಿಂದಿನ ದಿನ ಸ್ವಪ್ನದಲ್ಲಿ ಸೂಚನೆಯಾದಂತೆ ತನ್ನ ಕೋಶದಲ್ಲಿದ್ದ ಶ್ರೀಮೂಲರಾಮ–ಪ್ರತಿಮೆಯನ್ನು ತಂದು ತಮ್ಮ ಗುರುಗಳಾದ ಮಧ್ವಮುನಿಗಳಿಗೆ ಅರ್ಪಿಸಿದರು. ಆಚಾರ್ಯರು ಬಹುಕಾಲ ಶ್ರೀಮೂಲರಾಮದೇವರನ್ನು ಪೂಜಿಸಿ ತಾವು ಬದರಿಕಾಶ್ರಮಕ್ಕೆ ಹೋಗುವ ಮೊದಲು ಈ ಮೂಲರಾಮಪ್ರತಿಮಾ ಇದ್ದಲ್ಲಿ ಧರ್ಮಾರ್ಥಕಾಮಮೋಕ್ಷಗಳು ಅಂದರೆ ಚತುರ್ವಿಧ ಪುರುಷಾರ್ಥಗಳು ಸಿದ್ಧಿಸುತ್ತವೆ ಎಂದು ಅನುಗ್ರಹಿಸಿ ತನ್ನ ಶಿಷ್ಯಪ್ರವರರಾದ ಶ್ರೀಪದ್ಮನಾಭತೀರ್ಥರಿಗೆ ಈ ಪ್ರತಿಮೆಯನ್ನು ಕೊಟ್ಟು ತಾವು ಅದೃಶ್ಯರಾಗಿ ಬದರಿಕಾಶ್ರಮಕ್ಕೆ ಪ್ರಯಾಣ ಮಾಡಿದರು. ಆ ಪ್ರತಿಮೆಯನ್ನು ಆಚಾರ್ಯರ ವಂಶದ ಯತಿಶ್ರೇಷ್ಠರು ಪೂಜಿಸುತ್ತಾ ಬಂದರು. ಈಗಲೂ ಪೂಜಿಸುತ್ತಿದ್ದಾರೆ. ಇದು ಶ್ರೀನರಹರಿತೀರ್ಥರ ಮಹಿಮೆಯು.

ಆ ಮೂಲರಾಮಪ್ರತಿಮೆಯು ಶ್ರೀಪದ್ಮನಾಭತೀರ್ಥರಿಂದ ಶ್ರೀನರಹರಿತೀರ್ಥರ ಕೈಗೂ, ಅವರಿಂದ ಶ್ರೀಮಾಧವತೀರ್ಥರ ಕೈಗೂ ಸೇರಿತು. ಶ್ರೀಮಾಧವತೀರ್ಥರು ಸಿದ್ಧಾಂತ ಸಂಪ್ರದಾಯಗಳ ಪಾಲನೆ ಮಾಡುತ್ತಾ ಶ್ರೀಮೂಲರಾಮದೇವರ ಪೂಜೆ ಮಾಡುತ್ತಾ ಅನಂತರ ಶ್ರೀಅಕ್ಷೋಭ್ಯತೀರ್ಥಮುನಿಗಳಿಗೆ ಆ ಪ್ರತಿಮೆಯನ್ನು ಕೊಟ್ಟರು.

ಹೀಗೆ ಆಚಾರ್ಯರಿಂದಲೇ ಸಂನ್ಯಾಸದೀಕ್ಷೆಯನ್ನು ಸ್ವೀಕರಿಸಿ ಮಂತ್ರೋಪದೇಶವನ್ನು ಪಡೆದು ಆಚಾರ್ಯರ ಶಿಷ್ಯರಾಗಿದ್ದ ಶ್ರೀಪದ್ಮನಾಭ-ನರಹರಿ-ಮಾಧವ-ಅಕ್ಷೋಭ್ಯಮುನಿಗಳು ಕ್ರಮವಾಗಿ ಶ್ರೀಮೂಲರಾಮದೇವರ ಪೂಜೆಯನ್ನು ಮಾಡಿದರು. ಶ್ರೀಅಕ್ಷೋಭ್ಯತೀರ್ಥರು ನಿಜವಾಗಿಯೂ ಅವರ ನಾಮಧೇಯಕ್ಕೆ ತಕ್ಕಂತೆ ಯಾರಿಂದಲೂ ಕ್ಷೋಭೆಗೊಳಿಸಲು ಅಶಕ್ಯರಾಗಿದ್ದರು. ತಾವು ಸ್ವತಃ ಪ್ರತಿವಾದಿಗಳ ಮಾತನ್ನು ನಿರಾಕರಿಸಿ ಅವರನ್ನು ಕ್ಷೋಭೆಗೊಳಿಸುತ್ತಿದ್ದರು. ವಿದ್ಯಾರಣ್ಯರೆಂಬ ಮಾಯಾವಾದಿ ಯತಿಗಳೊಡನೆ ಅವರು 'ತತ್ತ್ವಮಸಿ' ಎಂಬ ಶ್ರುತಿವಾಕ್ಯವಿಚಾರದಲ್ಲಿ ಬಹು ದಿವಸಗಳವರೆಗೆ ವಾಕ್ಯಾರ್ಥವನ್ನು ನಡೆಸಿ ಅವರನ್ನು ವಾದದಲ್ಲಿ ಗೆದ್ದರು.

ಅಸಿನಾ ತತ್ತ್ವಮಸಿನಾ ಪರಜೀವಪ್ರಭೇದಿನಾ ।
ವಿದ್ಯಾರಣ್ಯಮಹಾರಣ್ಯಮಕ್ಷೋಭ್ಯಮುನಿರಚ್ಛಿನತ್ ॥

"ಪರಮಾತ್ಮ ಮತ್ತು ಜೀವರಿಗೆ ಭೇದವನ್ನು ಬೋಧಿಸುವ 'ತತ್ತ್ವಮಸಿ' ಎಂಬ ಖಡ್ಗದಿಂದ (ಜೀವ-ಪರಮಾತ್ಮರಿಗೆ ಅಭೇದವನ್ನು ಹೇಳುವ) ವಿದ್ಯಾರಣ್ಯರೆಂಬ ದೊಡ್ಡಅರಣ್ಯವನ್ನು ಅಕ್ಷೋಭ್ಯಮುನಿಗಳು ಕತ್ತರಿಸಿದರು" ಎಂದು ಮಧ್ಯಸ್ಥರಾಗಿದ್ದ 'ವೇದಾಂತ ದೇಶಿಕರು' ಈ ವಾದದಲ್ಲಿ ಅಕ್ಷೋಭ್ಯತೀರ್ಥರೇ ಜಯಶಾಲಿಗಳಾದರೆಂದು ಘೋಷಿಸಿದರು. ಆ ಪ್ರಸಂಗವು ಇಂದಿಗೂ ಶಿಲಾಶಾಸನವಾಗಿ ಐತಿಹ್ಯವನ್ನು ಸಾರುತ್ತಿದೆ.

ಶ್ರೀಮದ್ ಅಕ್ಷೋಭ್ಯತೀರ್ಥರಿಂದ ಸಂನ್ಯಾಸವನ್ನು ಪಡೆದ ಶ್ರೀಜಯತೀರ್ಥರು ಗುರುಗಳಾದ ಶ್ರೀಅಕ್ಷೋಭ್ಯತೀರ್ಥರಿಂದಲೇ ಸರ್ವ ಶಾಸ್ತ್ರಗಳನ್ನು ಅಧ್ಯಯನ ಮಾಡಿದರು. ಪ್ರತಿವಾದಿಗಳನ್ನು ಜಯಿಸಿ ಅವರ ಹೃದಯದಲ್ಲಿ ತಮ್ಮ ಮಾತೆಂಬ ಶಲ್ಯ(ಮುಳ್ಳು)ವನ್ನು ಚುಚ್ಚಿದರು. ಯಾವಾಗಲೂ ಅವರು ಸರಸವಾದ ಮಾತುಗಳಿಂದ ಶ್ರೀಪೂರ್ಣಪ್ರಜ್ಞಾಚಾರ್ಯರ ಗ್ರಂಥಗಳಿಗೆ ಟೀಕೆಗಳನ್ನು ಬರೆದರು. ಅವರ ಪೂರ್ವಚರಿತವು ಅದ್ಭುತ ಮತ್ತು ಮನೋಹರವಾಗಿದೆ.

ಶ್ರೀಮಧ್ವಾಚಾರ್ಯರು ಅವತಾರ ಮಾಡಿ ಭಾರತ ಭೂಮಿಯಲ್ಲಿ ಸಂಚರಿಸುತ್ತಿದ್ದಾಗ ದೇವೇಂದ್ರನು ಭೂಲೋಕದಲ್ಲಿ ಎತ್ತಿನ ರೂಪವನ್ನು ತಾಳಿ ಆಚಾರ್ಯರ ಗ್ರಂಥಗಳನ್ನು ಹೊತ್ತು ಅವರ ಸೇವೆಯನ್ನು ಮಾಡುತ್ತಿದ್ದನು. ಆಚಾರ್ಯರು ಪ್ರವಚನ ಮಾಡುತ್ತಿದ್ದಾಗ ಅಲ್ಲಿಯೇ ಸ್ವಲ್ಪ ದೂರದಲ್ಲಿ ಮಲಗಿದ್ದ ವೃಷಭ ರೂಪಿಯಾದ ಇಂದ್ರನು ಆಚಾರ್ಯರು ಉಪದೇಶಿಸಿದ ಎಲ್ಲಾ ಗ್ರಂಥಗಳ ಅರ್ಥವನ್ನು ಮನಸ್ಸಿನಲ್ಲಿ ನಿರೂಢವಾಗಿ ಮನನ ಮಾಡಿಕೊಳ್ಳುತ್ತಿದ್ದನು. ಒಂದಾನೊಂದು ದಿನ ಪ್ರವಚನ ಕಾಲದಲ್ಲಿ ಆಚಾರ್ಯರ ಶಿಷ್ಯರು ಗುರುವರ್ಯರೇ ಅತ್ಯಂತ ಗಂಭೀರವಾದ ನಿಮ್ಮ ಗ್ರಂಥಗಳ ವ್ಯಾಖ್ಯಾನವನ್ನು ಯಾರು ಮಾಡುತ್ತಾರೇ ? ಎಂದು ಕೇಳಿದಾಗ ಶ್ರೀಮನ್ಮಧ್ವಾಚಾರ್ಯರು ಆ ಎತ್ತನ್ನು ತೋರಿಸಿ 'ಈ ಶ್ರೇಷ್ಠವಾದ ಎತ್ತು ನಮ್ಮ ಗ್ರಂಥಗಳ ವ್ಯಾಖ್ಯಾನವನ್ನು ಮಾಡುತ್ತದೆ' ಎಂದು ಹೇಳಿ "ಮನುಷ್ಯಜನ್ಮದಲ್ಲಿ ಪಶುವಿನಂತೆ ಯಾವನು ನೀರು ಕುಡಿಯುತ್ತಾನೋ ಅವನೇ ನಮ್ಮ ಗ್ರಂಥಗಳ ವ್ಯಾಖ್ಯಾನಕರ್ತನಾಗುತ್ತಾನೆ' ಎಂದು ಹೇಳಿದರು. ಇದನ್ನು ಕೇಳಿ ಅಸೂಯಾಪರರಾದ ಕೆಲವರು ಆ ಎತ್ತಿಗೆ ವಿಷವನ್ನು ಹಾಕಿದರು. ಆಚಾರ್ಯರಿಗೆ ಈ ವಿಷಯ ತಿಳಿದಾಗ ಅವರು ದ್ವಾದಶ ಸ್ತೋತ್ರದಿಂದ ಅಭಿಮಂತ್ರಿತವಾದ ಜಲವನ್ನು ಪ್ರೋಕ್ಷಿಸಿ ಕುಡಿಸಿ ಆ ಎತ್ತನ್ನು ರಕ್ಷಿಸಿದರು.

ಆ ಎತ್ತು ಮತ್ತೊಂದು ಜನ್ಮದಲ್ಲಿ ರಘುನಾಥ ರಾಯನೆಂಬ ಶ್ರೇಷ್ಠ ಬ್ರಾಹ್ಮಣನ ಮಗನಾಗಿ ಹುಟ್ಟಿ 'ಧೋಂಡೂರಾಯ' ಎಂಬುದಾಗಿ ಪ್ರಸಿದ್ಧವಾಯಿತು. ತಮ್ಮ ಪರಂಪರೆಯಿಂದ ಬಂದ ಸೇನಾಧಿಪತಿಯ ಪದವಿಗೆ ಬೇಕಾದ ಶಸ್ತ್ರ ವಿದ್ಯಾಭ್ಯಾಸ, ಗರಡಿ, ಸಾಮು, ಕುಸ್ತಿಕಲೆಗಳಲ್ಲಿ ಪಳಗಿದ ಧೋಂಡೂರಾಯನು ಕ್ರಮೇಣ ತಾನೂ ಒಬ್ಬ ಸೇನಾಧಿಪತಿಯೇ ಆಗಬೇಕೆಂದು ನಿರ್ಧರಿಸಿ, ಆ ದಾರಿಯಲ್ಲೇ ಮುಂದುವರಿಯುತ್ತಿದ್ದನು. ಕ್ರಮೇಣ ಗೃಹಸ್ಥಾಶ್ರಮವನ್ನು ಸ್ವೀಕರಿಸಿದನು. ಧೋಂಡೂರಾಯನು ಒಂದಾನೊಂದು ದಿನ ಮಧ್ಯಾಹ್ನ ಬೇಟೆ ಮತ್ತು ವಿಹಾರಕ್ಕಾಗಿ ಸಂಚರಿಸುತ್ತಾ

ಬಾಯಾರಿಕೆಯಾದಾಗ ಅಲ್ಲಿಯೇ ಇದ್ದ ನದಿಯನ್ನು ಕುದುರೆಯ ಮೇಲೆ ಕುಳಿತಿದ್ದ ಹಾಗೆಯೇ ಪ್ರವೇಶಿಸಿ ಹಾಗೆಯೇ ಬಗ್ಗಿ ಬಾಯಿಯಿಂದ ನೀರು ಕುಡಿದನು. ಅಲ್ಲಿಯೇ ನದೀತೀರದಲ್ಲಿ ಬಂದು ಕುಳಿತು ತಪಸ್ಸು ಮಾಡುತ್ತಾ ಇದ್ದ ಶ್ರೀಅಕ್ಷೋಭ್ಯತೀರ್ಥರು ಈ ಕುದುರೆ ಸವಾರನ ಚರ್ಯೆಯನ್ನು ನೋಡಿ ಪುನಃ ಹರಿಧ್ಯಾನತತ್ಪರರಾದರು. ಧೋಂಡೂರಾಯನು ಪಾತ್ರೆಯಿಂದ ಎತ್ತಿ ಕುಡಿಯದೆ ಬೊಗಸೆಯಿಂದಲೂ ಕುಡಿಯದೆ ಬಗ್ಗಿ ಪಶುಗಳಂತೆ ನೀರನ್ನು ಕುಡಿದು ಅಲ್ಲಿಯೇ ಇದ್ದ ತಪಸ್ವಿಗಳನ್ನು ನೋಡಿ ಹತ್ತಿರ ಬಂದು ಸಾಷ್ಟಾಂಗವಾಗಿ ನಮಸ್ಕರಿಸಿದನು.

ಶ್ರೀಅಕ್ಷೋಭ್ಯತೀರ್ಥರಿಗೆ ಈ ಪುರುಷನ ಹಿಂದಿನ ಜನ್ಮದ ವೃತ್ತಾಂತವು ನೆನಪಾಗಿ ಏನಯ್ಯಾ ನೀನು ಬಾಯಿಯಿಂದಲೇ ನೀರು ಕುಡಿಯುತ್ತಿರುವೆ. ಹಿಂದಿನ ಜನ್ಮದಲ್ಲಿ ಪಶುವಾಗಿದ್ದೆಯಾ ? ಎಂದು ಕೇಳಿದರು. ಈ ಮಾತನ್ನು ಕೇಳಿದ ಕೂಡಲೇ ಹಿಂದಿನ ಜನ್ಮದ ಸ್ಮರಣೆಯುಂಟಾಗಿ ಧೋಂಡೂರಾಯನು ಶ್ರೀಅಕ್ಷೋಭ್ಯಮುನಿಗಳ ಪಾದಗಳ ಮೇಲೆ ಬಿದ್ದು ತನಗೆ ಸಂನ್ಯಾಸ ಕೊಡಬೇಕೆಂದು ಪ್ರಾರ್ಥಿಸಿದನು. ಅವರು ಶ್ರೀಮಧ್ವಾಚಾರ್ಯರ ವಚನವನ್ನು ನೆನೆದು ಹರಿ ಗುರು ಸಂಕಲ್ಪದಂತೆ ಧೋಂಡೂರಾಯನಿಗೆ ಸಂನ್ಯಾಸವನ್ನಿತ್ತು ಪರಮಾನಂದದಿಂದ ಪ್ರಣವೋಪದೇಶ ಕೊಡಲು ಸನ್ನಾಹ ಮಾಡಿದರು.

ಈ ಸಮಾಚಾರವನ್ನು ಕೇಳಿ ಧೋಂಡೂರಾಯನ ತಂದೆ ಮುಂತಾದವರು ತುಂಬಾ ಸಿಟ್ಟಾಗಿ ಅಲ್ಲಿಗೆ ಬಂದು ಅಕ್ಷೋಭ್ಯತೀರ್ಥರನ್ನು ಅವರ ಅನುಯಾಯಿಗಳನ್ನು ಬೈದು ಧೋಂಡೂರಾಯನನ್ನು ಬಲಾತ್ಕಾರದಿಂದ ತಮ್ಮ ಮನೆಗೆ ಕರೆದೊಯ್ದರು. ಅದೇ ದಿನ ರಾತ್ರಿ ಶಯನ ಗೃಹದಲ್ಲಿಯೂ ಬಲಾತ್ಕಾರವಾಗಿ ಪ್ರವೇಶ ಮಾಡಿಸಿ ಅಲ್ಲಿಗೆ ಪತ್ನಿಯನ್ನು ಕಳುಹಿಸಿದಾಗ ಅವಳು ಹಾಸಿಗೆಯ ಮೇಲೆ ಸಾವಿರ ಹೆಡೆಗಳನ್ನು ಮೇಲಕ್ಕೆತ್ತಿ ಬುಸುಗುಟ್ಟುತ್ತಿರುವ ಶೇಷನನ್ನು ಕಂಡಳು. ಅವಳು ಹೆದರಿ ಕಿರುಚಿ ಹೊರಗೆ ಓಡಿಬಂದಾಗ ಬಂಧುಗಳು ಬಂದು ನೋಡಿ ಈ ಮಹಾಪುರುಷನು ಗೃಹಸ್ಥಾಶ್ರಮದಲ್ಲಿರಲು ಅರ್ಹನಲ್ಲ, ಸಂನ್ಯಾಸಿಸಾಶ್ರಮದಲ್ಲಿಯೇ ಇರಲು ಯೋಗ್ಯನು ಎಂದು ನಿರ್ಧರಿಸಿ ಶ್ರೀಅಕ್ಷೋಭ್ಯತೀರ್ಥರ ಬಳಿಗೆ ಕರೆತಂದು ಬಿಟ್ಟರು. ಅನಂತರ ಶ್ರೀಅಕ್ಷೋಭ್ಯತೀರ್ಥರು ಸೇನಾಧಿಪತಿಯಾಗಬೇಕಿದ್ದ ಧೋಂಡೂರಾಯನಿಗೆ ಪ್ರಣವೋಪದೇಶವನ್ನು ಮಾಡಿ 'ಜಯತೀರ್ಥ'ರೆಂದು ನಾಮಕರಣ ಮಾಡಿದರು. ಶ್ರೀಜಯತೀರ್ಥರು ಅಕ್ಷೋಭ್ಯತೀರ್ಥರಿಂದಲೇ ಸಕಲ ಶಾಸ್ತ್ರಗಳನ್ನು ಅಭ್ಯಾಸ ಮಾಡಿದರು. ಶ್ರೀಅಕ್ಷೋಭ್ಯತೀರ್ಥರು ಅನುಗ್ರಹಿಸಿ ಕೊಟ್ಟ ಶ್ರೀಮೂಲರಾಮಪ್ರತಿಮೆಯನ್ನು ಶ್ರೀಜಯತೀರ್ಥರು ಬಹುಕಾಲ ಪೂಜಿಸಿದರು.

**ಶ್ರೀಜಯತೀರ್ಥರ ಪರಂಪರೆ —** ಶ್ರೀಮನ್ಮಧ್ವಸಿದ್ಧಾಂತಾಭಿವೃದ್ಧಿಗೆ ಕಾರಣವಾದ ಆ ಮೂಲರಾಮ-ಪ್ರತಿಮೆಯು ಶ್ರೀಜಯತೀರ್ಥರ ಅನಂತರ ಅವರ ಶಿಷ್ಯರಾದ ಶ್ರೀವಿದ್ಯಾಧಿರಾಜತೀರ್ಥರಿಂದ ಪೂಜಿತವಾಯಿತು. ಅನಂತರ ಕ್ರಮವಾಗಿ ಶ್ರೀಕವೀಂದ್ರತೀರ್ಥರು, ಶ್ರೀವಾಗೀಶತೀರ್ಥರುಗಳ ಕರಕಮಲಗಳಿಂದ ಪೂಜಿತವಾಯಿತು.

ಶ್ರೀರಾಮಚಂದ್ರತೀರ್ಥರ ಶಿಷ್ಯರಾದ ಶ್ರೀವಿಬುಧೇಂದ್ರತೀರ್ಥರು ಅಹೋಬಲಕ್ಷೇತ್ರದಲ್ಲಿ ನರಸಿಂಹದೇವರ ಸನ್ನಿಧಿಯಲ್ಲಿ ತಪಸ್ಸನ್ನು ಮಾಡಿ ಭಗವಂತನ ಸಾಕ್ಷಾತ್ಕಾರ ಪಡೆದು ತಮ್ಮ ವೈದುಷ್ಯದಿಂದ ಸರ್ವತ್ರ ಪ್ರಸಿದ್ಧರಾಗಿ ಎಲ್ಲಾ ಪ್ರತಿವಾದಿಗಳನ್ನೂ ಜಯಿಸಿ ಅವರಿಂದ ಜಯಸೂಚಕವಾದ ಶ್ಲೋಕಗಳಿಂದಲೂ ಕೂಡಿದ ಚಿನ್ನದ ಜಯ ಪತ್ರಿಕೆಗಳನ್ನು ಪಡೆದರು. ಅಂತಹ ''ನೂರ ಎಂಟು'' ಪತ್ರಿಕೆಗಳಿಂದ ಪ್ರತ್ಯೇಕವಾಗಿ ತಿರುಪತಿಯ ಶ್ರೀವೇಂಕಟೇಶನನ್ನು ಶ್ರೀರಂಗದ ಶ್ರೀರಂಗನಾಥಸ್ವಾಮಿಯನ್ನೂ ಅಹೋಬಲ ಕ್ಷೇತ್ರದ ಶ್ರೀನರಸಿಂಹದೇವರನ್ನು ಪೂಜಿಸಿದರು. ಹೀಗೆ ಅದ್ಭುತ-ವಾದ ಪಾಂಡಿತ್ಯ ಪ್ರಭಾವದಿಂದ ಶ್ರೀವಿಬುಧೇಂದ್ರತೀರ್ಥರು ಶೋಭಿಸಿದರು. ಶ್ರೀವಿಬುಧೇಂದ್ರತೀರ್ಥರ ಶಿಷ್ಯರು ಶ್ರೀಜಿತಾಮಿತ್ರತೀರ್ಥರು. ಅವರ ಶಿಷ್ಯರು ಶ್ರೀರಘುನಂದನತೀರ್ಥರು. ಶ್ರೀರಘುನಂದನತೀರ್ಥರ ಶಿಷ್ಯರಾದ ಶ್ರೀಸುರೇಂದ್ರತೀರ್ಥರು ಉಪವಾಸವಿದ್ದು ಮೂರು ಬಾರಿ ಭಾರತಭೂಮಿಯ ಪ್ರದಕ್ಷಿಣೆ ಮಾಡಿ ತಮ್ಮ ಪಾದಸ್ಪರ್ಶ-ದಿಂದ ಭಾರತವನ್ನು ಪವಿತ್ರವನ್ನಾಗಿ ಮಾಡಿದರು.

ಶ್ರೀಸುರೇಂದ್ರತೀರ್ಥರ ಶಿಷ್ಯರು ಶ್ರೀವಿಜಯೀಂದ್ರತೀರ್ಥರು. ಇವರು ಸಮಸ್ತವಿದ್ಯೆಗಳಲ್ಲಿಯೂ ಅಸಾಧಾರಣ ಪಂಡಿತರು. ಪಂಡಿತರಾಜ ಶಿರೋಮಣಿ ಎಂದು ಪ್ರಖ್ಯಾತರು. ರಾಮರಾಯನೆಂಬ ವಿಜಯನಗರದ ರಾಜನು ಇವರಿಗೆ ರತ್ನಾಭಿಷೇಕವನ್ನು ಮಾಡಿದನು. ಇವರು ಅಪಾರವಾದ ಸಂಪತ್ತನ್ನು ಗಳಿಸಿ ಲೆಕ್ಕವಿಲ್ಲದಷ್ಟು ಬ್ರಾಹ್ಮಣಾಗ್ರಹಾರಗಳನ್ನು ಏರ್ಪಡಿಸಿದರು. ಮೀಮಾಂಸಾ ವ್ಯಾಕರಣ ನ್ಯಾಯ ವೇದಾಂತ ಶಾಸ್ತ್ರಗಳಲ್ಲಿ ಇವರು ರಚಿಸಿದ ಎಲ್ಲಾ ಗ್ರಂಥಗಳನ್ನು ಅಧ್ಯಯನ ಮಾಡುವುದು, ಅಧ್ಯಾಪನ ಮಾಡಿಸುವುದಿರಲಿ, ಒಂದು ಬಾರಿ ಓದುವುದಕ್ಕೂ ಪುರುಷಾಯುಸ್ಸು ಸಾಲದು. ಅದಿರಲಿ ಆ ಗ್ರಂಥಗಳ ಹೆಸರನ್ನಾದರೂ ಸಂಪೂರ್ಣವಾಗಿ ಹೇಳಿದರೆ ಅವನು ಪಂಡಿತನೆಂದು ಹೇಳಬಹುದು. ಇಂತಹ ಮಹಾಮಹಿಮಸಂಪನ್ನರಾದ ಶ್ರೀವಿಜಯೀಂದ್ರತೀರ್ಥರು ಶ್ರೀಮೂಲರಾಮ ಪ್ರತಿಮೆಯನ್ನು ತಮ್ಮ ಶಿಷ್ಯರಾದ ಶ್ರೀಸುಧೀಂದ್ರತೀರ್ಥರಿಗೆ ಕೊಟ್ಟರು.

ಶ್ರೀಸುಧೀಂದ್ರತೀರ್ಥರೂ ವಿದ್ವಜ್ಜನವಂದ್ಯರೂ ಮಹಾಕೀರ್ತಿಶಾಲಿಗಳೂ ಆಗಿದ್ದರು. ಅವರು ದಿಗ್ವಿಜಯ ಯಾತ್ರೆಯ ನೆಪದಿಂದ ಭಾರತ ಭೂಮಿಯನ್ನು ಪಾದಸ್ಪರ್ಶದಿಂದ ಪವಿತ್ರವನ್ನಾಗಿ ಮಾಡುತ್ತಾ ಸಂಚರಿಸಿದರು. ವೆಂಕಟಭೂಪಾಲನೆಂಬ ರಾಜನ ಆಸ್ಥಾನದಲ್ಲಿ ವಾದ ಮಾಡಿ ಪ್ರತಿವಾದಿ ಪಂಡಿತರನ್ನು ಜಯಿಸಿದರು. ತನ್ನ ಜಯಸೂಚಕವಾದ ಶಂಖ, ವಾದ್ಯ ಮುಂತಾದ ಅನೇಕ ಬಿರುದುಗಳನ್ನು ವೆಂಕಟರಾಜನಿಂದ ಪಡೆದರು. ಹಿಂದೆಯೇ ಆ ಬಿರುದು-ಬಾವಲಿಗಳು ಇದ್ದುವು. ವೆಂಕಟ ಮಹೀಪಾಲನ ಮೇಲಿನ ಕೃಪೆಯಿಂದ ಅವುಗಳನ್ನು ಅವರು ಪುನಃ ಸ್ವೀಕರಿಸಿದರು. ಶ್ರೀಸುಧೀಂದ್ರತೀರ್ಥರು ಹಾಗೆಯೇ ಸಂಚರಿಸುತ್ತಾ ಕಾವೇರೀ ತೀರದಲ್ಲಿರುವ ಕುಂಭಘೋಣ ನಗರಿಯನ್ನು ಪ್ರವೇಶಿಸಿ ಅಲ್ಲಿಯೇ ಬಹುಕಾಲ ವಾಸ ಮಾಡಿದರು.

ಕುಂಭಘೋಣನಗರಿಯು ತಪಸ್ವಿಗಳಿಂದ ಸೇವಿಸಲ್ಪಟ್ಟಿತ್ತು. ಆ ನಗರದ ಸುತ್ತಲೂ ಕಾವೇರಿಯು ಕಂದಕದಂತೆ ಹರಿಯುತ್ತಿದ್ದಳು. ಅಲ್ಲಿದ್ದ ಆನೆಗಳ ಮದಜಲದ ಮತ್ತು ಅರಳಿದ ಕಮಲಗಳ ಸುವಾಸನೆಯಿಂದ ಆ ನಗರಿಯು ಎಲ್ಲಾ ರಸಿಕರ ಮನಸ್ಸನ್ನು ಸೂರೆಗೊಳ್ಳುತ್ತಿತ್ತು. ಸಕಲ ಶಾಸ್ತ್ರಪಾರಂಗತರಾದ ಅನೇಕ ಮಂದಿ ವಿದ್ವಾಂಸರು ಅಲ್ಲಿದ್ದರು. ಯಾವಾಗಲೂ ವಿದ್ವಾಂಸರ ಮಾತನ್ನು ಕೇಳಿ ಎಲ್ಲಾ ಶಾಸ್ತ್ರಗಳಲ್ಲಿ ವಾದಿಸುವ ಸಾಮರ್ಥ್ಯ ಪಡೆದಿರುವ ಕುಂಭಘೋಣನಗರದ ಎತ್ತರವಾದ ಪ್ರಾಸಾದದಲ್ಲಿದ್ದ ಪಂಜರದ ಗಿಳಿಗಳು ಸಂಸ್ಕೃತ ಭಾಷೆಯಲ್ಲಿಯೇ ವಾದ ಮಾಡಿ ನಂದನವನದ ಗಿಳಿಗಳನ್ನು ಜಯಿಸಿ ಗಟ್ಟಿಯಾಗಿ ತಮ್ಮ ಜಯಘೋಷ ಮಾಡುತ್ತಾ ಕೂಗುತ್ತಿದ್ದವು. ಸ್ವರ್ಗಸಮಾನವಾದ ಆ ಪಟ್ಟಣದಲ್ಲಿ ಬಹಳ ಎತ್ತರವಾದ ಪ್ರಾಸಾದಗಳಿದ್ದವು. ವಿಸ್ತಾರದಲ್ಲಿ ಬ್ರಹ್ಮಾಂಡದಂತಿದ್ದ ಆ ಪಟ್ಟಣದ ಕೋಟೆಯ ಗೋಡೆಯು ಬೆಳ್ಳಿಯದು. ಅದರ ಸುತ್ತಲಿರುವ ಕಮಲಪುಷ್ಪಗಳಿಂದ ತುಂಬಿದ ಕಂದಕದ ನೀರಿನಲ್ಲಿ ಮದಗಜಗಳು ಯಾವಾಗಲೂ ವಿಹರಿಸುತ್ತಿದ್ದವು. ಸ್ವರ್ಗಾಧಿಪತಿಯಾದ ಇಂದ್ರನಿಗೆ ಸಮಾನರಾದ ರಾಜರು ಆ ಪಟ್ಟಣವನ್ನು ಪಾಲಿಸುತ್ತಿದ್ದರು. ರತ್ನಪ್ರಭೆಯಿಂದ ಕಂಗೊಳಿಸುವ ಅನೇಕ ಶಿಖರಗಳು ಅಲ್ಲಿ ಶೋಭಿಸುತ್ತಿದ್ದವು. ಆ ಪಟ್ಟಣದ ನಾಲ್ಕು ದಿಕ್ಕುಗಳಲ್ಲಿ ನಾಲ್ಕು ಗೋಪುರಗಳಿದ್ದವು. ಕೋಟೆಯು ಚಚ್ಚೌಕವಾಗಿ ಬಹಳ ಸುಂದರವಾಗಿತ್ತು. ಅಲ್ಲಿ ಒಳಗೆ ಅನೇಕ ನಿಧಿಗಳನ್ನು ಸ್ಥಾಪಿಸಿದ್ದರು. ಆನೆ ಕುದುರೆ ಮುಂತಾದವುಗಳ ಸಂಚಾರದಿಂದ ನಗರದ ಬೀದಿಗಳು ಯಾವಾಗಲೂ ನಿಬಿಡವಾಗಿರುತ್ತಿದ್ದವು. ಅಲ್ಲಿ ಬಹಳ ಸುಂದರಿಯರಾದ ಸ್ತ್ರೀಯರು ಓಡಾಡುತ್ತಿದ್ದರು. ಸಂಸಾರಸಾಗರವನ್ನು ದಾಟುವ ನೌಕೆಯಂತೆ ಅದು ಜ್ಞಾನಪ್ರದರಾದ ವಿದ್ವಾಂಸರಿಂದ ಭೂಷಿತವಾಗಿತ್ತು. ಪುಣ್ಯವನ್ನು ಕೊಡುವುದರಲ್ಲಿ ಬದರಿಗೆ ಸಮಾನವಾದ ಪಂಡಿತಸಿಂಹರ ನಿವಾಸದ ಗುಹೆಯಂತಿರುವ ಕುಂಭಘೋಣವು ಅತ್ಯದ್ಭುತವಾದ ನಗರಿಯಾಗಿತ್ತು.

ಶ್ರೀಸುಧೀಂದ್ರತೀರ್ಥರು ಅಲ್ಲಿರುವ ಮಹಾಪಂಡಿತರಿಂದ ಪೂಜಿತರಾದರು. ಸಕಲ ಪ್ರತಿವಾದಿಗಳನ್ನು ಜಯಿಸಿ ಸ್ವತಃ ವಿದ್ವಾಂಸನಾಗಿದ್ದು ವಿದ್ವನ್ಮಂಡಲೀಮಧ್ಯದಲ್ಲಿ ವಿರಾಜಮಾನನಾದ ರಘುನಾಥ ಭೂಪಾಲನೆಂಬ ರಾಜನಿಂದ ಸುವರ್ಣಾಭಿಷೇಕದಿಂದ ಪೂಜಿತರಾಗಿ ಅಲ್ಲಿಯೇ ವಾಸಿಸುತ್ತಿದ್ದರು.

★ ★ ★

ವಿದ್ವತ್ಕುಲಾವತಂಸ,
ಮಹಾಕವಿ ಶ್ರೀಮನ್ನಾರಾಯಣಾಚಾರ್ಯೇಣ ರಚಿತಂ

# ಶ್ರೀಮದ್ರಾಘವೇಂದ್ರವಿಜಯ ಮಹಾಕಾವ್ಯಂ

## ತೃತೀಯ ಸರ್ಗ

**ವಿಶೇಷ ಪಾಠ ಶ್ಲೋಕ**

**ಶ್ರೀಕುಂಭಕೋಣಾಖ್ಯಪುರೀವಿಭೂಷಶ್ರೀತಾತವರ್ಯಾಖ್ಯಸುಹೃತ್ತಮಸ್ಯ ।**
**ಸಮಸ್ತವಿದ್ವನ್ಮುಕುಟಸ್ಯ ಸೇಯಂ ನಾರಾಯಣಾಖ್ಯಸ್ಯ ಕೃತಿಃ ಸಮಿಂಧೇ ॥**

**ಅವತರಣಿಕಾ :** ಈ ಶ್ಲೋಕವು ಕಾವ್ಯದ ನಿರ್ಮಾಣಾನಂತರದಲ್ಲಿ ಬರೆದು ಈ ಸರ್ಗದ ಆರಂಭದಲ್ಲಿ ಕವಿಗಳು ಸೇರಿಸಿರಬೇಕು ಎಂದು ಬಾಲಬೋಧಿನೀ ವ್ಯಾಖ್ಯಾನದಿಂದ ತಿಳಿದು ಬರುತ್ತದೆ. ಬಾಲಬೋಧಿನೀ ವ್ಯಾಖ್ಯಾನಕಾರರು ಈ ಶ್ಲೋಕಕ್ಕೆ ವ್ಯಾಖ್ಯಾನ ಮಾಡಿರುತ್ತಾರೆ. ಆದುದರಿಂದ ಗಂಗಾನದಿಯಲ್ಲಿ ಸೇರುವ ಇತರ ನದಿಗಳಂತೆ ಇದೂ ಕಾವ್ಯದ ಭಾಗವೇ ಎಂದು ತಿಳಿಯಬಹುದು. ಗುರುಪಾದ ಸೇವಾ ವ್ಯಾಖ್ಯಾನದಲ್ಲಿ ಗುರುಚರಿತ್ರೆಯನ್ನು ಪ್ರತಿಪಾದಿಸಿಲ್ಲವಾದುದರಿಂದ ಈ ಶ್ಲೋಕಕ್ಕೆ ವ್ಯಾಖ್ಯಾನಿಸಿಲ್ಲವೆಂದು ತಿಳಿಯಬಹುದು.

ಕವಿಗಳು ಈಗ ರಾಜಗುರುಗಳಾದ, ಕೋಟಿ ಕನ್ಯಾದಾನ ತಾತಾಚಾರ್ಯ–ರೆಂದು ಖ್ಯಾತರಾದ, ಸ್ನೇಹಿತರಿಂದ "ನಮ್ಮಿಬ್ಬರ ಸ್ನೇಹವನ್ನು ಈ ಕಾವ್ಯದಲ್ಲಿ ಎಲ್ಲಿಯಾದರೂ ಸೂಚಿಸಬೇಕು" ಎಂದು ಪ್ರಾರ್ಥಿತರಾಗಿ ಈ ಶ್ಲೋಕವನ್ನು ರಚಿಸಿರುತ್ತಾರೆ. ಶ್ರೀಕುಂಭಕೋಣವೆಂಬ ನಗರಿಗೆ ಅಲಂಕಾರ ಪ್ರಾಯರಾಗಿರುವ ಶ್ರೀತಾತಾಚಾರ್ಯರೆಂಬುವವರಿಗೆ ಅತ್ಯಂತ ಪ್ರೀತಪಾತ್ರ ಸ್ನೇಹಿತರಾದ, ಎಲ್ಲ ವಿದ್ವನ್ಮಣಿಗಳಿಗೆ ಮುಕುಟಪ್ರಾಯರಾದ ಶ್ರೀನಾರಾಯಣಾಚಾರ್ಯರೆಂಬ ಕವಿಗಳು ರಚಿಸಿದ ಈ ಕೃತಿಯು ಪ್ರಕಾಶಮಾನವಾಗಿದೆ ಎಂದು ತಾತ್ಪರ್ಯ.

**ಪೀಠಿಕಾ :** ಈಗ ಕಾವ್ಯ ನಾಯಕರ ಚರಿತ್ರೆಯ ಪ್ರತಿಪಾದಕವಾದ ಶ್ಲೋಕವು ಪ್ರಾರಂಭವಾಗುತ್ತದೆ. ಈ ಸರ್ಗದಲ್ಲಿ ಕಾವ್ಯನಾಯಕರಾದ ಶ್ರೀರಾಘವೇಂದ್ರ ಗುರುಗಳ ಉತ್ಪತ್ತಿಯನ್ನು

(ಜನನವನ್ನು) ಹೇಳುತ್ತಾರೆ. ಮೊದಲು ಶ್ರೀರಾಘವೇಂದ್ರ ಗುರುಸಾರ್ವಭೌಮರ ಪೂರ್ವಾಶ್ರಮ ಸತ್ವರಂಪರೆಯನ್ನು ತಿಳಿಸುತ್ತಾರೆ. ಗುರುಗಳ ಪೂರ್ವಾಶ್ರಮ ಸದ್ವಂಶವಾದ ಅರವತ್ತೋಕ್ಕಲು ಮನೆತನದವರ ಗೋತ್ರ ಪ್ರವರ್ತಕರಾದ ಶ್ರೀಗೌತಮಋಷಿಗಳ ಪ್ರಭಾವವನ್ನು ಹೇಳುತ್ತಾರೆ.

**ಅವನಂ ಸವನಾದಿಸತ್ಕ್ರಿಯಾಣಾಂ ಅವನೀದಾನವವೈರಿಣಾಂ ನಿದಾನಮ್ ।**
**ಭವತಿ ಸ್ಮ ಮುನೀಶಿತಾ ಗುಣಾನಾಂ ಅವಲಂಬೋ ಭುವಿ ಗೌತಮಾಭಿಧಾನಃ ॥೧॥**

**ತಾತ್ಪರ್ಯ :** ಈ ಭೂಲೋಕದಲ್ಲಿ ಹಿಂದೆ ಗೌತಮರೆಂಬ ಮುನಿಶ್ರೇಷ್ಠರಿದ್ದರು. ಅವರು ವೇದಾಧ್ಯಯನ, ಜಪ, ತಪ, ಯಜ್ಞ, ಅನುಷ್ಠಾನ ಮೊದಲಾದ ಸತ್ಕರ್ಮಾನುಷ್ಠಾನಗಳ ರಕ್ಷಕರೂ, ಅವುಗಳಲ್ಲಿ ಅತ್ಯಂತ ಪ್ರೀತಿಯುಳ್ಳವರೂ, ಸ್ವತಃ ಅನುಷ್ಠಾತೃಗಳೂ ಆಗಿದ್ದರು. ಬ್ರಾಹ್ಮಣ ವಂಶಕ್ಕೆ ಮೂಲಪುರುಷರಾದ ಅವರು ದಯಾಪರರೂ, ಇತರರಿಗೆ ಉಪಕಾರ ಮಾಡುವವರೂ ಆಗಿದ್ದರು.

**ಅವತರಣಿಕಾ :** ಈಗ ಕವಿಗಳು ಗೌತಮಋಷಿಗಳ ಮಹಿಮೆಯನ್ನು ವಿಶೇಷವಾಗಿ ಹೇಳುತ್ತಾರೆ.

**ಪ್ರಕೃತಿಃ ಪರದೇವತಾಪ್ರಪತ್ತಿಪ್ರಭೃತೀನಾಂ ಕರಣೇನ ಸದ್ಗುಣಾನಾಮ್ ।**
**ಪ್ರಥಿತವ್ರತತಾಪಸವ್ರಜಾನಾಂ ವಿಕೃತೀನಾಂ ಸಗುಣೇವ ನಿರ್ಗುಣೇಷ್ಟ್ಯಾಃ ॥೨॥**

**ತಾತ್ಪರ್ಯ–1 :** (ಭಾ.ಬೋ.) ವೇದದಲ್ಲಿ ಹೇಳಿರುವ ಯಾಗಗಳು ಎರಡು ವಿಧವಾಗಿದೆ. ಪ್ರಕೃತಿಯಾಗ ಮತ್ತು ವಿಕೃತಿಯಾಗ ಎಂಬುದೇ ಆ ಎರಡು ಭೇದಗಳು. ಎಲ್ಲಿ ಎಲ್ಲಾ ಯಾಗಾಂಗಗಳ ಉಪದೇಶವಿರುತ್ತದೆಯೋ ಅದು ಪ್ರಕೃತಿಯಾಗವೆಂದು ಕರೆಸಿಕೊಳ್ಳುತ್ತದೆ. ದರ್ಶಪೂರ್ಣಮಾಸವು ಇಂತಹದು. ಎಲ್ಲಿ ಸಮಗ್ರ ಅಂಗಗಳ ಉಪದೇಶವು ಇರುವುದಿಲ್ಲವೋ, ಪ್ರಕೃತಿಯಾಗಗಳಿಂದ ಅಂಗಗಳನ್ನು ಅನ್ವಯಿಸಿಕೊಳ್ಳಬೇಕಾಗುತ್ತದೆಯೋ ಅದನ್ನು ವಿಕೃತಿಯಾಗವೆಂದು ಕರೆಯಲಾಗಿದೆ. ಈ ಪ್ರಕೃತಿ – ವಿಕೃತಿ ಯಾಗಗಳಲ್ಲಿ ಪ್ರಕೃತಿಯಾಗವು ಹೇಗೆ ಪ್ರಧಾನವೋ ಅದರಂತೆ, ಸರ್ವೋತ್ತಮನಾದ ಶ್ರೀ ನಾರಾಯಣನಲ್ಲಿ ವಿಶೇಷವಾದ ಭಕ್ತಿ ಮುಂತಾದ ಉತ್ತಮವಾದ ಎಲ್ಲಾ ಗುಣಗಳಿಂದ ಆಶ್ರಯರಾದ, ಇಂತಹಾ ಗುಣಗಳು ಕಡಿಮೆಯಾಗಿರುವ, ಉತ್ತಮವಾದ ಉಪವಾಸಾದಿ ನಿಯಮವುಳ್ಳ ಇತರ ಋಷಿ ಸಮೂಹಗಳಿಗೆ ಪ್ರಧಾನರಾದ ಗೌತಮರೆಂಬ ಶ್ರೇಷ್ಠರಾದ ಋಷಿಗಳಿದ್ದರು.

**ತಾತ್ಪರ್ಯ–2 :** (ಗು.ಸೇ.) ವೇದಗಳಲ್ಲಿ ಹೇಳಿರುವ ದಶಪೂರ್ಣಮಾಸ ಎಂಬ ಪ್ರಧಾನವಾದ ಯಾಗಗಳ ವಿಕೃತಿಗಳೇ ಜ್ಯೋತಿಷ್ಠೋಮಾದಿ ಯಾಗಗಳು. ಈ ರೀತಿಯಾದ ಪ್ರಧಾನ ಮತ್ತು ವಿಕೃತಿ ಯಾಗಗಳನ್ನು ಪ್ರಾರಂಭಿಸುವುದಕ್ಕೆ ಮೊದಲು ಸರಿಯಾದ ಅಭ್ಯಾಸವಾಗುವುದಕ್ಕಾಗಿ ನಿರ್ಗುಣೇಷ್ಟಿಯನ್ನು ಮಾಡುತ್ತಾರೆ. ಈ ನಿರ್ಗುಣೇಷ್ಟಿಯನ್ನು ಶುಷ್ಕೇಷ್ಟೀ ಎಂದೂ ಕರೆಯುತ್ತಾರೆ. ಸಗುಣೇಷ್ಟಿಯೆಂದರೆ ಯಾಗದ ದ್ರವ್ಯದೇವತೆ, ಮಂತ್ರ, ಯಜ್ಞಶಾಲೆ, ಸ್ಥಾಲಿ, ಸ್ರುಕ್, ಸ್ರುವ, ಋತ್ವಿಜರು, ಯಜಮಾನ, ಪಶು ಮುಂತಾದವುಗಳನ್ನು ಉಪಯೋಗಿಸಿಕೊಂಡು ಮಾಡುವ

ಸರಿಯಾದ ಯಾಗ. ನಿರ್ಗುಣೇಷ್ಟಿ ಅಥವಾ ಶುಷ್ಕೇಷ್ಟಿ ಎಂದರೆ ಅಭ್ಯಾಸಕ್ಕಾಗಿ ಯಾಗದ ದ್ರವ್ಯದೇವತೆ ಮುಂತಾದ ಪದಾರ್ಥಗಳ ಸ್ಥಾನದಲ್ಲಿ ಮಣ್ಣಿನಹೆಂಟೆ, ಕಲ್ಲು, ಕಡ್ಡಿ, ಮುಂತಾದವುಗಳನ್ನು ಇಟ್ಟು ಮಂತ್ರೋಚ್ಚಾರ ಮಾಡುತ್ತಾ, ಅಭ್ಯಾಸ ಮಾಡುವ ಯಾಗ. ಸರ್ವೋತ್ತಮನಾದ ಶ್ರೀಮನ್ನಾರಾಯಣನಲ್ಲಿ ವಿಶೇಷವಾದ ಭಕ್ತಿ, ಶ್ರವಣ ಮನನಾದಿ ಉತ್ತಮ ಗುಣಗಳಿಗೆ ಆಶ್ರಯದಾತರಾದ ಗೌತಮ ಋಷಿಗಳು ವ್ರತೋಪವಾಸಾದಿ ನಿಯಮವುಳ್ಳ ಇತರ ಎಲ್ಲ ತಾಪಸರುಗಳಿಗೂ ಮುಖ್ಯರಾಗಿದ್ದರು. ಆದುದರಿಂದ ಅವರು ದಶಪೂರ್ಣಮಾಸ, ಜ್ಯೋತಿಷ್ಟೋಮ ಮುಂತಾದ ಪ್ರಕೃತಿ – ವಿಕೃತಿ ಯಾಗಗಳ ಸಗುಣೇಷ್ಟಿಯಂತೆ ಇದ್ದು. ಇತರ ಎಲ್ಲ ಋಷಿಗಳು ನಿರ್ಗುಣೇಷ್ಟಿಯಂತೆ (ಶುಷ್ಕೇಷ್ಟಿಯಂತೆ) ಇದ್ದರು. ಎಲ್ಲ ಋಷಿಗಳೂ ಗೌತಮ ಋಷಿಗಳ ಆಚಾರ, ವಿಚಾರ, ನಡತೆ, ಧ್ಯಾನ, ಉಪಾಸನಾ ಪ್ರಾಕಾರಗಳನ್ನು ಅನುಸರಿಸುತ್ತಿದ್ದರು. ಅಂತಹಾ ಗೌತಮ ಋಷಿಗಳು ಇತರ ಎಲ್ಲ ಋಷಿಗಳಿಗೂ ಮಾದರಿಯಾದ ಆದರ್ಶ ಮಹರ್ಷಿಗಳಾಗಿದ್ದರು ಎಂದು ತಾತ್ಪರ್ಯ

**ಅವತಾರಿಕಾ :** ಕವಿಗಳು ಈಗ ಗೌತಮ ಋಷಿಗಳ ಮತ್ತೊಂದು ಮಹಿಮೆಯನ್ನು ವಿವರಿಸುತ್ತಾರೆ.

**ಅಕೃತಾಸುರಸಾರ್ಥಮೋಹನಾರ್ಥಂ ನಯಶಾಸ್ತ್ರಂ ಸ ತು ಪಂಚಲಕ್ಷಣಾತ್ಮ ।**
**ಮುಹುರಾಗಮಭೇದಕೃನ್ಮನೀಂದೋರವತಾರಸ್ಯ ನಿಮಿತ್ತತಾಮಯಾಸೀತ್ ॥೩॥**

**ತಾತ್ಪರ್ಯ :** ಲೋಕದಲ್ಲಿ ಜೀವರು ಮುಕ್ತಿಯೋಗ್ಯರು ಮತ್ತು ಅಯೋಗ್ಯರು ಎಂಬುದಾಗಿ ಎರಡು ವಿಧವಾಗಿರು –ತ್ತಾರೆ. ಅವರಲ್ಲಿ ಮುಕ್ತಿಗೆ ಅಯೋಗ್ಯರಾದ ಅಸುರರೇ ಮೊದಲಾದ ಜೀವರನ್ನು ವಂಚಿಸಿ, ಅವರುಗಳಿಗೆ ಅಜ್ಞಾನವನ್ನು ಉಂಟು ಮಾಡುವುದಕ್ಕಾಗಿಯೇ ಶ್ರೀಹರಿಪರಮಾತ್ಮನ ಪ್ರೇರಣೆಯಿಂದ ಈ ಗೌತಮ ಮಹರ್ಷಿಗಳು ಐದು ಅಧ್ಯಾಯವನ್ನು ಒಳಗೊಂಡಿರುವ ನ್ಯಾಯಸೂತ್ರ ಗ್ರಂಥವನ್ನು ನಿರ್ಮಾಣ ಮಾಡಿದರು. (ರಚಿಸಿದರು.) ಈ ತರ್ಕಶಾಸ್ತ್ರದ ಮೂಲಕ ಸಜ್ಜನವರಿಗೂ ಉಂಟಾದ ಅಜ್ಞಾನ – ಸಂಶಯಾದಿಗಳನ್ನು ಹೋಗಲಾಡಿಸಲು ಶ್ರೀಮನ್ನಾರಾಯಣನು ಅನೇಕ ಬಾರಿ ಶ್ರೀವೇದವ್ಯಾಸರಾಗಿ ಅವತಾರ ಮಾಡಿದನು. ಅನಂತರ ಮೂಲ ವೇದದಲ್ಲಿ ಋಕ್, ಯಜುಸ್, ಸಾಮ, ಅಥರ್ವ ಎಂಬ ನಾಲ್ಕು ಭೇದಗಳನ್ನೂ, ಪುನಃ ಈ ಪ್ರತಿಯೊಂದು ವೇದಗಳಲ್ಲಿಯೂ 24, 101, 1000, 12 ಎಂಬುದಾಗಿ ಶಾಖಾ ಭೇದಗಳನ್ನು ಶ್ರೀವೇದವ್ಯಾಸರು ಮಾಡಿ ಸಜ್ಜನರುಗಳಿಗೆ ಅವುಗಳನ್ನು ಉಪದೇಶಿಸಿ, ಅರ್ಥಜ್ಞಾನವನ್ನೂ ಮಾಡಿಕೊಟ್ಟರು. ಈ ರೀತಿಯಾಗಿ ಶ್ರೀವೇದವ್ಯಾಸರು ಅವತರಿಸಿ ವೇದವಿಭಾಗ ಮಾಡಿ ಸಜ್ಜನರಿಗೆ ವೇದಾರ್ಥಗಳನ್ನು ತಿಳಿಸುವುದಕ್ಕೆ ಗೌತಮರು ದುಷ್ಟವಾದ ತರ್ಕಶಾಸ್ತ್ರವನ್ನು ರಚಿಸಿದ್ದೂ ಒಂದು ಕಾರಣವಾದುದರಿಂದ ಶ್ರೀವೇದವ್ಯಾಸರ ಅವತಾರಕ್ಕೆ ಗೌತಮರೂ ಕಾರಣರಾದರು ಎಂದು ಭಾವ.

**ವಿಶೇಷಾಂಶ :** ಈಗ 28ನೇ ಕಲಿಯುಗವು ನಡೆಯುತ್ತಿದೆ. ದ್ವಾಪರಯುಗದಲ್ಲಿ ಶ್ರೀವೇದವ್ಯಾಸರ ಅವತಾರವಾಯಿತು. ಹಿಂದಿನ ಮೂರನೆಯ, ಏಳನೆಯ, ಹದಿನಾರನೆಯ, ಇಪ್ಪತ್ತೈದನೆಯ ಮತ್ತು ಈಗಿನ ಇಪ್ಪತ್ತೆಂಟನೆಯ ದ್ವಾಪರ ಯುಗಗಳಲ್ಲಿ ಶ್ರೀಹರಿಪರಮಾತ್ಮನು ಶ್ರೀವೇದವ್ಯಾಸರಾಗಿ ಅವತರಿಸಿರುತ್ತಾನೆ. (ಉಳಿದ ದ್ವಾಪರ ಯುಗಗಳಲ್ಲಿ ಶ್ರೀಹರಿಪರಮಾತ್ಮನ ಅಪ್ಪಣೆಯಿಂದ ಬೇರೆ ಋಷಿಗಳು ವ್ಯಾಸನಾಮರಾಗಿ ವೇದ ವಿಭಾಗ ಕಾರ್ಯವನ್ನು ಮಾಡಿರುತ್ತಾರೆ. ಮುಂದಿನ ದ್ವಾಪರ ಯುಗದಲ್ಲಿ ದ್ರೋಣಾಚಾರ್ಯರ ಪುತ್ರರಾದ ಅಶ್ವತ್ಥಾಮಾಚಾರ್ಯರು ವ್ಯಾಸರಾಗುವರು.) ತೃತೀಯೇ ಸಪ್ತಮೇಚೈವ ಷೋಡಶೇ ಪಂಚವಿಂಶಕೇ । ಅಷ್ಟಾವಿಂಶೇಯುಗೇ ಕೃಷ್ಣಃ ಸತ್ಯವತ್ಯಾಮಜಾಯತ । ತೃತೀಯಂ ಯುಗಮಾರಭ್ಯ ವಾಸೋ ಬಹುಷು ಜಜ್ಞಿವಾನ್ । (ಕೂರ್ಮಪುರಾಣ), ಮುಂತಾದ ಪ್ರಮಾಣಗಳಿಂದ ಅನೇಕ ಬಾರಿ ಶ್ರೀವೇದವ್ಯಾಸರ ಅವತಾರವಾಗಿತ್ತೆಂದು ತಿಳಿದು ಬರುತ್ತದೆ.

**ಅವತಾರಿಕಾ :** ಇಂತಹಾ ಗುಣಭರಿತರಾದ, ಗೋತ್ರಪ್ರವರ್ತಕರಾದ, ಗೌತಮಋಷಿಗಳ ಮಹಾವಂಶದಲ್ಲಿ ಬಹಳ ಮಂದಿ ಬ್ರಾಹ್ಮಣರು ಕಾಲಾನುಕ್ರಮದಲ್ಲಿ ಹುಟ್ಟಿದರೆಂದು ವಿವರಿಸುತ್ತಿದ್ದಾರೆ.

**ಆಧರೀಕೃತಲೇಖಪಾಲಲೋಕೇ ಬಹುಮುಕ್ತಾಫಲಭಾಜಿ ಸಾಧುವೃತ್ತೇ ।**
**ಅಭವನ್ನವಿಭಾವಿತಾಗ್ರಭಾಗೇ ಮುನಿವಂಶೇ ವಸುಧಾಸುಧಾಶನೇಶಾಃ ॥೪॥**

**ತಾತ್ಪರ್ಯ :** ಕೆಲವು ಜಾತಿಯ ಅಂಶ ಅಂದರೆ ಬಿದರುಗಳು ಸ್ವರ್ಗಕ್ಕಿಂತಲೂ ಉನ್ನತವಾಗಿರುತ್ತವೆ, ಅಂದರೆ ಬಹಳ ಎತ್ತರವಾಗಿ ಇರುತ್ತವೆ. ಗೌತಮ ಋಷಿಗಳ ವಂಶವೂ ಕೂಡಾ ಭೋಗ ವಿಷಯದಲ್ಲಿ ದೇವೇಂದ್ರನ ಸ್ವರ್ಗಲೋಕವನ್ನು ತಿರಸ್ಕರಿಸುತ್ತಿತ್ತು. ವಂಶದಲ್ಲಿ (ಬಿದಿರಿನಲ್ಲಿ) ಅನೇಕ ಮುತ್ತುಗಳು ಹುಟ್ಟುವುವು. ಈ ವಂಶದಲ್ಲಿ ಜನಿಸಿದವರು ಮುತ್ತಿನ ಹಾರದಿಂದ ಅಲಂಕೃತರಾಗಿರುವರು. ಈ ವಂಶದಲ್ಲಿ ಹುಟ್ಟಿದ ಅನೇಕರು ಮುಕ್ತರಾಗಿ ಈ ವಂಶದ ಉತ್ತಮವಾದ ಫಲದಂತೆ ಶೋಭಿಸುತ್ತಾರೆ. ವಂಶವು (ಬಿದಿರು) ಚೆನ್ನಾಗಿ ದುಂಡಗೆ ಬೆಳೆಯುತ್ತದೆ. ಗೌತಮರ ವಂಶವೂ ಒಳ್ಳೆಯ ನಡತೆಯುಳ್ಳ ಸಜ್ಜನರಿಂದ ಕೂಡಿದೆ. ಚೆನ್ನಾಗಿ ಬೆಳೆದಿರುವ ವಂಶದ (ಬಿದಿರಿನ) ತುದಿಯೇ ಕಾಣಿಸುವುದಿಲ್ಲ. ಗೌತಮ ವಂಶದ ಅಗ್ರಭಾಗ ಅಂದರೆ ಕೊನೆಯು ಎಂದಿಗೂ ಆಗಲಿಲ್ಲ. ವಿಚ್ಛೇದವಿಲ್ಲದೇ ಗೌತಮರ ವಂಶವು ಬೆಳೆಯುತ್ತಿದೆ, ಮುಂದುವರೆಯುತ್ತಿದೆ. ಈ ಪ್ರಕಾರವಾಗಿ ಗೌತಮ ಋಷಿಗಳ ವಂಶವು ವಂಶದಂತೆ (ಬಿದಿರಿನಂತೆ) ಇದೆ. ಈ ವಂಶದಲ್ಲಿ ಅನೇಕ ಮಂದಿ ಸದ್ಬ್ರಾಹ್ಮಣರು ಜನಿಸಿದರು.

**ಅವತಾರಿಕೆ :** ಗೌತಮ ವಂಶದ ಬೇರುಗಳು ಬಹಳವಾಗಿದ್ದವು. ಅವುಗಳಲ್ಲಿ ಒಂದರಲ್ಲಿ ಶ್ರೀ ಕೃಷ್ಣಾಚಾರ್ಯರೆಂಬ ಶ್ರೀರಾಘವೇಂದ್ರಸ್ವಾಮಿಗಳವರ ಪೂರ್ವಾಶ್ರಮ ಪ್ರಪಿತಾಮಹರು ಜನಿಸಿದರು ಎಂದು ಹೇಳುತ್ತಾರೆ.

**ಜನಕೋಪಮಕನ್ಯಕೇಽನ್ವಯೇಽಸ್ಮಿನ್ ನಿಜತಾತಾಧಿಕನಂದನೋ ಗುಣೌಘೈಃ ।**

**ಅನುಜಾತಸಮಾನಪೂರ್ವಜಾತೇಽಭವದೇಕೋ ಭುವಿ ಕೃಷ್ಣನಾಮಧಾಮ ॥೫॥**

**ತಾತ್ಪರ್ಯ–1 :** (ಬಾ.ಬೋ) ಈ ವಂಶದಲ್ಲಿ ಹೆಣ್ಣು ಮಕ್ಕಳು ತಂದೆಯನ್ನು ಹೋಲುತ್ತಿದ್ದರು. ತಮ್ಮಂದಿರಲ್ಲಿ ಅಣ್ಣಂದಿರು ಪ್ರೀತಿಯಿಂದ ನಡೆದುಕೊಳ್ಳುತ್ತಿದ್ದರು. ಅಂತಹಾ ಈ ವಂಶದಲ್ಲಿ ತಂದೆಗಿಂತಲೂ ಹೆಚ್ಚು ಗುಣಶಾಲಿಯಾದ ಅತ್ಯಂತ ಪ್ರೀತ್ಯಾಸ್ಪದನಾದ ಕೃಷ್ಣ ಎಂಬ ಹೆಸರಿನ ಒಬ್ಬರು ಜನಿಸಿದರು.

**ತಾತ್ಪರ್ಯ–2 :** (ಗು.ಸೇ) ಈ ಗೌತಮ ವಂಶದಲ್ಲಿ ಹೆಣ್ಣು ಮಕ್ಕಳು ತಂದೆಯನ್ನು ಮುಖಭಾಗದಲ್ಲಿ ಹೋಲುತ್ತಿದ್ದರು. "ಧನ್ಯಾ ಪಿತೃಮುಖೀ ಕನ್ಯಾ" ಎಂಬ ವಾಕ್ಯದಂತೆ ಹೆಣ್ಣು ಮಕ್ಕಳು ತಂದೆಯಂತೆ ಇರುವುದು ಬಹಳ ಸೌಭಾಗ್ಯ ಸೂಚಕವಾಗಿದೆ. ಮತ್ತು ಈ ವಂಶದಲ್ಲಿ ಹುಟ್ಟಿದ ಹೆಣ್ಣು ಮಕ್ಕಳೆಲ್ಲರೂ ಪತಿವ್ರತೆಯರಾಗಿದ್ದು ತಮ್ಮ ಪತಿಯ ಹೊರತು ಇತರ ಪುರುಷರನ್ನು ತಂದೆಯಂತೆ ಭಾವಿಸುತ್ತಿದ್ದರು. ಸೌಜನ್ಯ ವಿನಯಾದಿ ಗುಣ ಸಮೂಹಗಳಿಂದ ಗಂಡು ಮಕ್ಕಳು ತಮ್ಮ ತಂದೆಗೆ ಹೆಚ್ಚು ಆನಂದವನ್ನು ಉಂಟು ಮಾಡುತ್ತಿದ್ದರು. ಕಿರಿಯ ಸಹೋದರನಲ್ಲಿ ಹಿರಿಯವನು ತುಂಬ ಪ್ರೀತಿ ವಾತ್ಸಲ್ಯಗಳನ್ನು ತೋರುತ್ತಿದ್ದನು. ಇಂತಹಾ ಉತ್ತಮ ವಂಶದಲ್ಲಿ "ಕೃಷ್ಣ" ಎಂಬ ಮಹಾನುಭಾವರು ಜನ್ಮ ತಾಳಿದರು.

**ಅವತಾರಿಕೆ :** ಈಗ ಕವಿಗಳು ಕೃಷ್ಣಭಟ್ಟರ ವಿದ್ಯಾತಿಶಯಗಳನ್ನು ವರ್ಣಿಸುತ್ತಾರೆ.

**ಸ ದಧಾರ ಧರೋದರೇ ಪ್ರಸಿದ್ಧಾಃ ನಿರವದ್ಯಾ ವಿವಿಧಾ ದ್ವಿಜಾತಿವಿದ್ಯಾಃ ।**
**ಸ ಬಭೂವ ಚ ವೈಣಿಕೋ ಯಥಾರ್ಥಂ (ಯಥಾರ್ಥಾಂ)**
**ನಿಜವಿದ್ಯಾಧರತಾಂ ವಿಧಾತುಕಾಮಃ ॥೬॥**

**ತಾತ್ಪರ್ಯ :** ಆ ಕೃಷ್ಣಾಚಾರ್ಯರು ಭೂಮಂಡಲದಲ್ಲಿ ಪ್ರಸಿದ್ಧವಾದ ನಿರ್ದೋಷವಾದ ಬ್ರಾಹ್ಮಣರಿಗೆ ಯೋಗ್ಯವಾದ ಎಲ್ಲಾ ವಿದ್ಯೆಗಳನ್ನೂ ಅಭ್ಯಾಸ ಮಾಡಿದರು. ತಮ್ಮ ಹಿರಿಯರು ಅಭ್ಯಾಸ ಮಾಡಿದ ವೀಣಾವಾದನ ಕಲೆಯನ್ನೂ ಅಭ್ಯಾಸ ಮಾಡಿದರು. ತನ್ನ "ವಿದ್ಯಾಧರ" ವಿದ್ಯೆಗಳನ್ನು ಧರಿಸಿದವನು ಎಂಬ ಯೌಗಿಕವಾದ ಹೆಸರನ್ನು, "ವಿದ್ಯಾಧರ" ಗಂಧರ್ವ ವಿದ್ಯೆಯಾದ ಸಂಗೀತವನ್ನು ಧರಿಸಿದವನು ಎಂಬುದಾಗಿ ರೂಢವನ್ನಾಗಿ ಮಾಡಲೂ, ತನ್ನ ವೀಣಾವಿದ್ಯೆಯನ್ನು ವ್ಯವಹಾರೋಪಯೋಗಿಯಾಗಿ ಮಾಡಲೂ, ಸರಸ್ವತಿಯ ಅನುಗ್ರಹವನ್ನು ಸಂಪಾದಿಸಿದರು. "ಸಂಗೀತ" ವಿದ್ಯೆಯನ್ನು ಕಲಿತು ವಾಣಿಯ (ಸರಸ್ವತಿ) ಅನುಗ್ರಹದಿಂದ ವೈಣಿಕ ಶಿರೋಮಣಿಗಳೆನಿಸಿದರು.

**ವಿಶೇಷಾಂಶ :** ವೈಣಿಕಃ ಎಂಬ ಪದಕ್ಕೆ ಗುರುಪಾದಸೇವಾ ವ್ಯಾಖ್ಯಾನಕಾರರು ವಾಣ್ಯಾಃ ಅಯಂ ವೈಣಿಕಃ ಎಂಬ ವ್ಯುತ್ಪತ್ತಿಯನ್ನು ಇಟ್ಟುಕೊಂಡು ಸರಸ್ವತಿಯ ಅನುಗ್ರಹವುಳ್ಳವರು ಎಂದೂ ಅರ್ಥ ಹೇಳಿದ್ದಾರೆ. ಆದರೆ ವಾಣ್ಯಾಃ ಅಯಂ ಎಂಬ ವ್ಯುತ್ಪತ್ತಿ ಮಾಡಿದಾಗ ವಾಣೇಯಃ

ಎಂದು ಆಗಬೇಕಾಗುತ್ತದೆ. ಆದರೆ ವರ್ಣಾಗಮೋ ವರ್ಣವಿಕಾರನಾಶೌ ಎಂಬುದಾಗಿ ಹೇಳಿದ ರೀತಿಯಿಂದ ನಿರುಕ್ತ ರೀತಿಯಿಂದ ವ್ಯೆಣಿಕ ಎಂಬ ಪದವೂ ಸಾಧುವಾಗುತ್ತದೆ ಎಂದು ಹೇಳುತ್ತಾರೆ.

**ಅವತಾರಿಕೆ :** ಈಗ ಕವಿಗಳು ಶ್ರೀಕೃಷ್ಣಾಚಾರ್ಯರ ಮತ್ತೊಂದು ಮಹಿಮೆಯನ್ನು ಹೇಳುತ್ತಾರೆ.

**ಉಪದಿಶ್ಯ ಸ ಕೃಷ್ಣಭೂಬಲಾರೇರ್ನಿಜಗಾಂಧರ್ವಕಲಾಂ ಕಲಾಮಗೃಹ್ಣಾತ್ ।**
**ಘನಮೌಕ್ತಿಕಗುಚ್ಛಹಾರಪೂರ್ವಾಂ ಬಿರುದಾಲೀಂ (ಲಿಂ) ಗುರುದಕ್ಷಿಣಾಽಪದೇಶಾತ್॥೭॥**

**ತಾತ್ಪರ್ಯ :** ವಿಜಯನಗರ ಸಾಮ್ರಾಜ್ಯದ ಪ್ರಸಿದ್ಧ ರಾಜನಾಗಿದ್ದ ಕೃಷ್ಣದೇವರಾಯನಿಗೆ ಈ ಶ್ರೀಕೃಷ್ಣಾಚಾರ್ಯರು ತಮ್ಮ ಗಾಂಧರ್ವ ಕಲೆಯಾದ ವೀಣಾವಾದನದ ಅಲ್ಪಭಾಗವನ್ನಷ್ಟೇ ಉಪದೇಶ ಮಾಡಿದರು. ಶ್ರೀಕೃಷ್ಣದೇವರಾಯ ರಾಜನಾದರೋ ಗುರುದಕ್ಷಿಣೆ ಕೊಡುವ ನೆಪದಲ್ಲಿ ಮುತ್ತಿನ ತುರಾಯಿ, ಮುತ್ತಿನ ಸರ, ರತ್ನಕಂಕಣ ಮೊದಲಾದ ಬಿರುದುಗಳ ರಾಶಿಯನ್ನೇ ಕೊಟ್ಟನು. ಶ್ರೀಕೃಷ್ಣಾಚಾರ್ಯರು ಅದೆಲ್ಲವನ್ನೂ ಸ್ವೀಕರಿಸಿದರು.

**ಅವತಾರಿಕಾ :** ಕೃಷ್ಣಾಚಾರ್ಯರಿಗೆ ಆಶ್ಚರ್ಯಕರವಾದ ಮಗುವು ಜನಿಸಿತೆಂದು ಕವಿಗಳು ಹೇಳುತ್ತಾರೆ.

**ಗುಣವಾರಿಧಿರಾವಿರಾಸ ವಿದ್ಯಾಚಣಕೃಷ್ಣಾರ್ಯಮಹೀಸುರಾಧೀನೇತುಃ ।**
**ಕನಕಾಚಲನಾಮಪುಣ್ಯನಾಮಾ ಕನಕೋರ್ವೀಭೃದಿವಾಪರೋಽತಿಧೀರಃ ॥೮॥**

**ತಾತ್ಪರ್ಯ :** ಈ ರೀತಿಯಾಗಿ ಸಕಲ ವಿದ್ಯೆಯಲ್ಲಿ ಪಾರಂಗತರೂ, ಪ್ರಸಿದ್ಧರೂ, ಬ್ರಾಹ್ಮಣ ಶ್ರೇಷ್ಠರೂ ಆದ ಕೃಷ್ಣಾಚಾರ್ಯರಿಗೆ "ಕನಕಾಚಲ" ಎಂಬ ಪ್ರಸಿದ್ಧವಾದ ಹಾಗೂ ಪವಿತ್ರವಾದ ಹೆಸರುಳ್ಳ ಓರ್ವ ಪುತ್ರನು ಜನಿಸಿದನು. ಈ ಕನಕಾಚಲರು ಸಕಲ ಗುಣಸಾಗರರೂ, ಅತ್ಯಂತ ಧೈರ್ಯವಂತರೂ ಆಗಿದ್ದು ಮತ್ತೊಂದು ಸುವರ್ಣಮಯ ಮೇರುಪರ್ವತದಂತೆ ಶೋಭಿಸುತ್ತಿದ್ದರು. (ಇವರೇ ಗ್ರಂಥನಾಯಕರಾದ ಶ್ರೀಗುರುಸಾರ್ವಭೌಮರ ಪಿತಾಮಹರು.)

**ಅವತಾರಿಕಾ :** ಈ ಕನಕಾಚಲರೆಂಬ ಜ್ಞಾನಿವರ್ಯರಿಗೆ ಸಕಲ ಶಾಸ್ತ್ರಾಭಿಜ್ಞರಾದ, ಕೇವಲ ಆಧ್ಯಾತ್ಮ ವಿದ್ಯೆಯಲ್ಲಿ ನಿಷ್ಠರಾದ ತಿಮ್ಮಣಾರ್ಯ ಎಂಬ ಸತ್ಪುತ್ರನು ಜನಿಸಿದನೆಂದು ಕವಿಗಳು ಹೇಳುತ್ತಾರೆ.

**ಉದಭೂದಧಿಭೂತಲಂದ್ವಿಜೇಂದ್ರಾದಧಿಭೂರಾಗಮಮೌಲಿತಂತ್ರಭಾಜಾಮ್ ।**
**ಅವದನ್ ಕಿಲ ತಿಮ್ಮಣಾರ್ಯಮಾರ್ಯಾಸ್ಸುಹೃದೊ**
**ವೇಂಕಟಶೈಲನಾಥನಾಥಃ (ನಾಥಮ್) ॥೯॥**

**ತಾತ್ಪರ್ಯ :** ಬ್ರಾಹ್ಮಣರ ಶ್ರೇಷ್ಠರೂ ಜ್ಞಾನಿಗಳೂ ಆದ ಕನಕಾಚಲಭಟ್ಟರಿಗೆ ತಿಮ್ಮಣ್ಣಭಟ್ಟನೆಂಬ ಓರ್ವ ಸುಪುತ್ರರು ಜನಿಸಿದರು. ಈ ತಿಮ್ಮಣ್ಣಭಟ್ಟರು ವೇದಾಂತ ಶಾಸ್ತ್ರವನ್ನು ಬಲ್ಲವರಲ್ಲಿ

ಶ್ರೇಷ್ಠರೆಂದೂ ಶ್ರೀ ಶ್ರೀನಿವಾಸದೇವರ ಪರಮ ಭಕ್ತರೆಂದೂ ಜ್ಞಾನಿಗಳು ಮತ್ತು ಸ್ನೇಹಿತರು ಪ್ರಶಂಸಿಸುತ್ತಿದ್ದರು.

**ಅವತರಣಿಕಾ :** ಕವಿಗಳು ಈಗ ಆ ತಿಮ್ಮಣ್ಣ ಭಟ್ಟರ ಮಹಿಮೆಯನ್ನು ವರ್ಣಿಸುತ್ತಾರೆ.

**ಅಧಿಕೃತ್ಯ ಸಬಾಲ್ಯ ಏವ ಶಾಸ್ತ್ರಾಣ್ಯಧಿಕಂ ವೈಣಿಕವರ್ಣ್ಯಗಾನವಿದ್ಯಾಃ ।**
**ನಗರಂ ವಿಜಯಾಖ್ಯಮಧ್ಯತಿಷ್ಠಜ್ಜನನೀತಾತಸುಹೃಜ್ಜನಾಧಿವಾಸಮ್ ॥೧೦॥**

**ತಾತ್ಪರ್ಯ :** ಇಂತಹ ತಿಮ್ಮಣ್ಣ ಭಟ್ಟರು ಬಾಲ್ಯದಲ್ಲಿಯೇ ವ್ಯಾಕರಣಾದಿ ಸಕಲ ವಿದ್ಯೆಗಳನ್ನು ಅಭ್ಯಸಿಸಿದರು. ಅನಂತರ ವೀಣಾವಾದನ ಕಲೆಯಲ್ಲಿ ನುರಿತ ಪಂಡಿತರು ಹೊಗಳುವ ವೀಣಾ ವಾದನದ ಎಲ್ಲ ಪ್ರಾಕಾರಗಳನ್ನೂ, ಇತರ ಸಂಗೀತ ವಿದ್ಯೆಗಳನ್ನೂ ಚೆನ್ನಾಗಿ ಅಭ್ಯಾಸ ಮಾಡಿದರು. ಇವರ ತಂದೆ-ತಾಯಿ ಮತ್ತು ಬಂಧುಗಳು ವಾಸಿಸುತ್ತಿದ್ದ ವಿಜಯನಗರದಲ್ಲಿಯೇ ವಾಸಿಸುತ್ತಿದ್ದರು.

**ಅವತರಣಿಕಾ :** ಕವಿಗಳು ಈಗ ತಿಮ್ಮಣ್ಣ ಭಟ್ಟರಿಗೆ ಅನುರೂಪಳಾದ ಹೆಂಡತಿಯು ಇದ್ದಳೆಂದು ದೃಷ್ಟಾಂತಪೂರ್ವಕವಾಗಿ ವರ್ಣಿಸುತ್ತಾರೆ.

**ಸ್ಮೃತಿವನ್ನಿಗಮಸ್ಯ ಪದ್ಮಿನೀವದ್ದಿನನಾಥಸ್ಯ ಮುನೇರರುಂಧತೀವ (ವತ್) ।**
**ರಜನೀಸುಹೃದಃ ಕುಮುದ್ವತೀವನ್ಮಹಿಲಾ ತಸ್ಯ ಲಲಾಸ ಗೋಪಿಕಾಂಬಾ ॥೧೧॥**

**ತಾತ್ಪರ್ಯ :** ಸ್ಮೃತಿಗಳು ವೇದವನ್ನು ಅನುಸರಿಸುವಂತೆ ಪತಿಯನ್ನು ಅನುಸರಿಸುವವಳೂ, ಕಮಲದ ಬಳ್ಳಿಯು ಸೂರ್ಯನು ಉದಯಿಸಿದಾಗ ಅರಳಿ ಸಂತೋಷಗೊಳ್ಳುವಂತೆ ಪತಿಯ ಮುಖಾರವಿಂದ ದರ್ಶನದಿಂದ ನಿರಂತರ ಸಂತೋಷ ಪಡುವವಳೂ, ವಸಿಷ್ಠರ ಪತ್ನಿಯಾದ ಅರುಂಧತಿಯಂತೆ ಪತಿಯನ್ನು ಅನುಸರಿಸುವ ಪತಿವ್ರತೆಯಾದ, ಚಂದ್ರನನ್ನು ಅನುಸರಿಸುವ ಬಿಳೀ ನೈದಿಲೆಗಳ ಬಳ್ಳಿಯಂತೆಯೂ ಇರುವ ಗೋಪಿಕಾಂಬಾ ಎಂಬುವಳು ಆ ತಿಮ್ಮಣ್ಣ ಭಟ್ಟರ ಪತ್ನಿ (ಹೆಂಡತಿ) ಯಾಗಿದ್ದಳು. (ಮಾಲೋಪಮಾಲಂಕಾರ)

**ಅವತರಣಿಕಾ :** ಈ ತಿಮ್ಮಣ್ಣ ಭಟ್ಟರು ವಿಜಯನಗರದ ರಾಜಸಭೆಯಲ್ಲಿ ಸಕಲ ವಿದ್ಯೆಗಳಲ್ಲಿಯೂ ತಮ್ಮ ಪಾಂಡಿತ್ಯವನ್ನು ಪ್ರದರ್ಶಿಸಿ, ವಾದದಲ್ಲಿ ವಾದಿಗಳನ್ನೂ ಜಯಿಸಿ, ರಾಜನಿಂದ ಅಸಾಧಾರಣವಾದ ಬಿರುದುಗಳನ್ನು ಹೊಂದಿದರು ಎಂದು ಹೇಳುತ್ತಾರೆ.

**ಅಭಜನ್ನೃಪತೇರ್ದಿನಪ್ರದೀಪಂ ಸ ತು ವಿಷ್ವಕ್ಪ್ರಬಲಪ್ರತಾಪರಶ್ಮಿಮ್ ।**
**ದಿನಮಣ್ಯನಿ(ನು)ವರ್ತಿತಸ್ಯ ಶಾಂತ್ಯೈ ಸ್ವಸಮಾನೇತರವಾಕ್ತಮಿಸ್ರರಾಶೇಃ ॥೧೨॥**

**ತಾತ್ಪರ್ಯ :** ತಿಮ್ಮಣ್ಣ ಭಟ್ಟರು ವಾಸಿಸುತ್ತಿದ್ದ ವಿಜಯನಗರದ ರಾಜನ ಆಸ್ಥಾನಕ್ಕೆ ಅನೇಕ ಜನ ವಿದ್ವಾಂಸರು ಬರುತ್ತಿದ್ದರು. ಅವರಲ್ಲಿ ಅನೇಕರು ತಿಮ್ಮಣ್ಣ ಭಟ್ಟರಿಗೆ ಸಮಾನರು ಮತ್ತು

ಕೆಲವು ಪಂಡಿತರು ಇದ್ದರು. ತಿಮ್ಮಣ್ಣ ಭಟ್ಟರು ಅವರುಗಳನ್ನೆಲ್ಲಾ ವಾದ ಪ್ರಸಂಗದಲ್ಲಿ ಸೋಲಿಸಿ ರಾಜನಿಂದ ಹಗಲು ದೀವಿಟಿಗೆಯ ಮರ್ಯಾದೆಯನ್ನು ಪಡೆದರು. ಸೂರ್ಯನೂ ನಾಶ ಮಾಡಲಾಗದ ಹಗಲು ಮತ್ತು ಮಣಿಗಳ ಪ್ರಕಾಶವಿದ್ದಲ್ಲಿಯೂ ಇರುವ ಪ್ರತಿವಾದಿ ವಿದ್ವಾಂಸರ ಮಾತುಗಳೆಂಬ ಕತ್ತಲೆಯ ರಾಶಿಯನ್ನು ನಾಶ ಮಾಡುವ ಸಲುವಾಗಿ ಅವರು ಹಗಲು ದೀವಿಟಿಗೆಯನ್ನು ಹಿಡಿಸಿಕೊಂಡರೋ ಎಂಬಂತೆ ಈ ತಿಮ್ಮಣ್ಣ ಭಟ್ಟರ ವಾದವೈಖರಿ ಎಂಬ ಹಗಲು ದೀವಿಟಿಗೆಯ ಪ್ರಕಾಶದಿಂದ ಪ್ರತಿವಾದಿ ಪಂಡಿತರ ಕತ್ತಲೆಯಂತಿದ್ದ ಮಾತುಗಳೆಲ್ಲವೂ ಮಾಯವಾದವು (ನಾಶವಾದವು) ಎಂದು ತಾತ್ಪರ್ಯ.

**ಅವತಾರಿಕೆ :** ಹಗಲು ದೀವಿಟಿಗೆಯನ್ನು ಸ್ವೀಕರಿಸುವುದಕ್ಕೆ ಇನ್ನೊಂದು ಕಾರಣವೂ ಇದೆಯೆಂದು ತಿಳಿಸುತ್ತಾರೆ.

**ಧ್ರುವಮೇಷ ದಿನಪ್ರದೀಪಮಾಗಾದಹಿತಾಕೀರ್ತಿತಮೋಗುಣಪ್ರಮಾಯ್ಯೈ ।**
**ಗುಣಿನಃ ಸಕಲಸ್ಯ ಬಾಹ್ಯತೇಜೋಽಯುತಚಕ್ಷುರ್ವಿಷಯತ್ವಮಾದಧಾನಃ ॥೧೩॥**

**ತಾತ್ಪರ್ಯ :** ರೂಪವುಳ್ಳ ದ್ರವ್ಯವನ್ನು ತಿಳಿಯಬೇಕಾದರೆ ಹೊರಗಿನ ಸೂರ್ಯ, ಚಂದ್ರ, ಅಗ್ನಿ, ಇತರ ದೀಪಾದಿಗಳ ಪ್ರಕಾಶದ ಸಹಾಯ ಬೇಕೆಂದು ಎಲ್ಲರಿಗೂ ತಿಳಿದಿದೆ. ಬರೆ ಕಣ್ಣಿನಿಂದ ಕತ್ತಲೆಯಲ್ಲಿ ನಾವು ವಸ್ತುಗಳನ್ನು ನೋಡಿ ತಿಳಿಯುವುದು ಸಾಧ್ಯವಾಗದು. ಪ್ರಕೃತ ಈ ತಿಮ್ಮಣ್ಣಭಟ್ಟರ ಪ್ರತಿವಾದಿಗಳೆಲ್ಲರೂ ಸೋತು ಅವರ ಅಪಕೀರ್ತಿಯೆಂಬ ಅಂಧಕಾರವು ಎಲ್ಲಿದೆ ಎಂಬುದನ್ನು ತಿಳಿಯಲು ತಿಮ್ಮಣ್ಣಭಟ್ಟರು ಹಗಲು ದೀವಿಟಿಗೆಯನ್ನು ಹಿಡಿದುಕೊಂಡು ಈ ಅಪಕೀರ್ತಿಯ ಅಂಧಕಾರವನ್ನು ನೋಡುತ್ತಿದ್ದರು. ಪ್ರತಿವಾದಿಗಳನ್ನು ಜಯಿಸಿ ಆ ವಿಜಯದ ಚಿಹ್ನೆಯಾಗಿ ಹಗಲು ದೀವಿಟಿಗೆಯನ್ನು ಪಡೆದಾಗ ಪ್ರತಿವಾದಿಗಳಿಗೆ ಅಪಕೀರ್ತಿಯು ಉಂಟಾಯಿತು ಎಂದು ಭಾವ. ಇಲ್ಲಿ ಉತ್ಪ್ರೇಕ್ಷಾಲಂಕಾರವಿದೆ. "ಸಂಭಾವನಾ ಸ್ಯಾದುತ್ಪ್ರೇಕ್ಷಾ ವಸ್ತುಹೇತು ಫಲಾತ್ಮನಾ" ಎಂಬುದು ಅದರ ಲಕ್ಷಣ. (ತಾರ್ಕಿಕರು ಭೂಮಿ, ನೀರು, ತೇಜಸ್ಸು, ವಾಯು, ಆಕಾಶ, ಕಾಲ, ದಿಕ್ಕು, ಆತ್ಮ, ಮನಸ್ಸು ಎಂಬುದಾಗಿ ಒಂಬತ್ತೇ ದ್ರವ್ಯಗಳೆಂದು ಹೇಳುತ್ತಾರೆ. ವೇದಾಂತಿಗಳು ಮತ್ತೆ ಕೆಲ ದಾರ್ಶನಿಕರು ಕತ್ತಲೆಯನ್ನು ಹತ್ತನೆಯ ದ್ರವ್ಯವೆಂದು ಹೇಳುತ್ತಾರೆ. ಈ ಕತ್ತಲೆಯೆಂಬ ದ್ರವ್ಯದಲ್ಲಿ ಕಪ್ಪು ಬಣ್ಣವೆಂಬ ಗುಣವಿದೆ. ರೂಪವುಳ್ಳ ದ್ರವ್ಯವನ್ನು ಗ್ರಹಿಸಬೇಕಾದರೆ ಹೊರಗಿನ ಪ್ರಕಾಶದ ಸಹಾಯವುಳ್ಳ ಕಣ್ಣು ಬೇಕು. ಪ್ರತಿವಾದಿಗಳ ಅಪಕೀರ್ತಿಯನ್ನು ಕತ್ತಲೆ ಎಂದು ಕವಿಗಳು ವರ್ಣಿಸುವ ಸಂಪ್ರದಾಯವಿದೆ. ಪ್ರಸ್ತುತ ತಿಮ್ಮಣ್ಣಭಟ್ಟರು ಪ್ರತಿವಾದಿಗಳ ಅಪಕೀರ್ತಿಯೆಂಬ ಕತ್ತಲೆಯನ್ನು ತಿಳಿಯುವುದಕ್ಕಾಗಿ ಹಗಲು ದೀವಿಟಿಗೆಯನ್ನು ಹಿಡಿದುಕೊಂಡರು ಎಂಬ ಪರಮತಾತ್ಪರ್ಯ.)

**ಅವತಾರಿಕೆ :** ತಿಮ್ಮಣ್ಣಭಟ್ಟರು ವಿಜಯನಗರದಲ್ಲಿ ಯಾವ ರೀತಿ ವಾಸಮಾಡುತ್ತಿದ್ದರು ಎಂಬುದನ್ನು ಹೇಳುತ್ತಾರೆ.

**ಯಜನಾದಿಮನ್ಯೈಜಕರ್ಮ ಕುರ್ವನ್ ದ್ವಿಜವರ್ಯೋ ನಗರೇ ಚಿರಂ ನ್ಯವಾತ್ಸೀತ್ ।**
**ರಮಣೀಮಣಿಗೋಪಿಕಾಂಬಯಾऽಸೌ ಸಹಿತಶ್ಚಂದ್ರಿಕಯಾ ಸಹೇವ ಚಂದ್ರಃ ॥೧೪॥**

**ತಾತ್ಪರ್ಯ :** ಬ್ರಾಹ್ಮಣರಿಗೆ ಯಜನ (ಯಾಗ ಮಾಡುವುದು) ಯಾಜನ (ಯಾಗ ಮಾಡಿಸುವುದು) ಅಧ್ಯಯನ (ಸ್ವತಃ ವ್ಯಾಸಂಗ ಮಾಡುವುದು) ಅಧ್ಯಾಪನ (ಪ್ರವಚನ ಮಾಡುವುದು) ದಾನ (ಕೊಡುವುದು) ಪ್ರತಿಗ್ರಹ (ಸ್ವೀಕರಿಸುವುದು) ಎಂಬ ಆಶ್ರಮೋಚಿತವಾದ ಆರು ಕರ್ಮಗಳಿಗೆವೆ. ಬ್ರಾಹ್ಮಣ ಶ್ರೇಷ್ಠರಾದ ತಿಮ್ಮಣ್ಣಭಟ್ಟರು ವಿಜಯನಗರದಲ್ಲಿ ಈ ಆರು ಬ್ರಾಹ್ಮಣೋಚಿತ ಕರ್ತವ್ಯಗಳನ್ನು ಮಾಡುತ್ತಿದ್ದರು. ಚಂದ್ರನಿಗೆ ಬೆಳದಿಂಗಳು ಇರುವಂತೆ ತಮಗೆ ಅನುರೂಪಳಾದ, ಸುಂದರಿಯರಲ್ಲಿ ಶ್ರೇಷ್ಠಳಾದ ಗೋಪಿಕಾಂಬೆಯೊಡನೆ ತಿಮ್ಮಣ್ಣಭಟ್ಟರು ವಿಜಯನಗರದಲ್ಲಿ ಬಹುಕಾಲ ವಾಸಿಸಿದರು.

**ಅವತಾರಿಕೆ :** ತಿಮ್ಮಣ್ಣಭಟ್ಟರು ಶ್ರೀವೇಂಕಟೇಶ್ವರನ ದರ್ಶನಕ್ಕಾಗಿ ವಿಜಯನಗರದಿಂದ ತಿರುಪತಿಗೆ ಹೊರಟರು ಎಂದು ಕವಿಗಳು ಹೇಳುತ್ತಾರೆ.

**ನಗರಾನ್ನಿರಗಾನ್ನರೇಂದ್ರಯೋಗ್ಯಾತ್ ಸಹಜಾಯಃ ಸಸುಹೃಜ್ಜನಃ**
**ಸುಖೀ ಸಃ (ಸಸುಹೃಜ್ಜನೋऽಸುತೀ ಸಃ) ।**
**ಅಖಿಲಾರ್ಥಿತದಾನದಕ್ಷಶೇಷಾಚಲಭೂಷಾಮಣಿದೇವತಾಂ ದಿದೃಕ್ಷುಃ ॥೧೫॥**

**ತಾತ್ಪರ್ಯ :** ಶ್ರೀತಿಮ್ಮಣ್ಣಾಚಾರ್ಯರಿಗೆ ಮಿಕ್ಕೆಲ್ಲ ಸಂಪತ್ತಗಳೂ ಯಥೇಚ್ಛವಾಗಿ ಲಭ್ಯವಾಗಿದ್ದರಿಂದ ಅವರು ಸುಖವಾಗಿದ್ದರು. ಆದರೂ ಮಕ್ಕಳಿಲ್ಲವೆಂಬ ಕೊರಗು ಅವರನ್ನು ಬಾಧಿಸುತ್ತಿತ್ತು. ಕಲಿಯುಗದಲ್ಲಿ ವೇಂಕಟಾಚಲ ಪರ್ವತದಲ್ಲಿ, ಶಿರೋರತ್ನದಂತೆ ಕಂಗೊಳಿಸುತ್ತಿರುವ ಶ್ರೀ ಶ್ರೀನಿವಾಸದೇವರು ಸಕಲ ಪುರುಷಾರ್ಥಗಳನ್ನೂ ಕೊಡುವ ಪ್ರಭುವಾಗಿದ್ದಾರೆ. ಶ್ರೀತಿಮ್ಮಣ್ಣಭಟ್ಟರಿಗೆ ಶ್ರೀ ಶ್ರೀನಿವಾಸದೇವರು ಕುಲದೇವತೆಯೂ ಆದುದರಿಂದ ಅವರು ತಮ್ಮ ಹೆಂಡತಿ, ಸ್ನೇಹಿತರು ಮುಂತಾದವರಿಂದ ಕೂಡಿಕೊಂಡು ಜನನಿಬಿಡವಾದ ವಿಜಯನಗರ ರಾಜಧಾನಿಯಿಂದ ವೇಂಕಟಾಚಲ ಯಾತ್ರೆಗಾಗಿ ಹೊರಟರು.

**ಅವತಾರಿಕೆ :** ಶ್ರೀ ತಿಮ್ಮಣ್ಣಭಟ್ಟ ದಂಪತಿಗಳು ಶ್ರೀವೇಂಕಟೇಶನನ್ನು ನೋಡಿ ಪುತ್ರಪ್ರಾಪ್ತಿಗಾಗಿ ಸೇವೆ ಮಾಡಿದರು ಎಂದು ಕವಿಗಳು ವರ್ಣಿಸುತ್ತಾರೆ.

**ತನುಜಾನತುಲಾನವಾಪ್ತುಕಾಮೌ ತಪಸಾ ತೋಷಯತಃ ಸ್ಮ ದಂಪತೀ ತೌ ।**
**ನಿಜವಂಶಜವಂದನೀಯದೇವಂ ಪರಥಾऽಪತ್ಯಸುಖಂ ಕಥಂ ಜನಾನಾಮ್ ॥೧೬॥**

**ತಾತ್ಪರ್ಯ :** ತಮಗೆ ಉತ್ತಮರಾದ ಪುತ್ರರು ಲಭಿಸಬೇಕೆಂದು ಗೋಪಿಕಾಂಬಾ ತಿಮ್ಮಣ್ಣಾರ್ಯರು ತಮ್ಮ ವಂಶದವರಿಗೆಲ್ಲಾ ಮನೆ ದೇವರಾದ ಶ್ರೀವೇಂಕಟೇಶನನ್ನು

ವ್ರತನಿಯಮಾದಿಗಳಿಂದ ಸಂತೋಷಪಡಿಸಿದರು. ದೇವರ ಅನುಗ್ರಹವಿಲ್ಲದೇ ಒಳ್ಳೆಯ ಮಕ್ಕಳ ಪ್ರಾಪ್ತಿಯಾಗಿ ಅವರಿಗೆ ಸುಖ ಸಿಗಲು ಹೇಗೆ ಸಾಧ್ಯ? (ಅರ್ಥಾಂತರನ್ಯಾಸಾಲಂಕಾರ)

**ಅವತಾರಿಕೆ :** ಶ್ರೀವೇಂಕಟೇಶ್ವರನ ಅನುಗ್ರಹ ಪಡೆದ ಬಳಿಕ ಆ ದಂಪತಿಗಳು ಅಲ್ಲಿಂದ ಹೊರಟು ತುಂಡಿರಮಂಡಲಕ್ಕೆ ಬಂದು ವಾಸ ಮಾಡಿದರು ಎಂದು ತಿಳಿಸುತ್ತಾರೆ.

**ಅಥ ತುಂಡಿರಮಂಡಲೇಽಗ್ರಹಾರೇ ವಸತಿಂ (ಲಸತೇ) ಪಟ್ಟಣನಾಮ್ನಿವಾಸಯೋಗ್ಯೇ ।**
**ಕಮಲಾರಮಣಂ ಪ್ರಸಾದ್ಯ ಕಾಂತಾಮಿಲಿತಃ ಕಾನಪಿ ವತ್ಸರಾನನೈಷೀತ್ ॥೧೭॥**

**ತಾತ್ಪರ್ಯ :** ಗೋಪಿಕಾಂಬಾ ಸಹಿತರಾದ ತಿಮ್ಮಣಾರ್ಯರು, ಶ್ರೀವೇಂಕಟೇಶನನ್ನು ಸೇವಿಸಿ, ಅವನ ಅಪ್ಪಣೆಯನ್ನು ಪಡೆದು ದಕ್ಷಿಣ ದೇಶದ ತುಂಡಿರಮಂಡಲ ಎಂಬ ಹೆಸರುಳ್ಳ ಕಾಂಚೀನಗರದ ಹತ್ತಿರ ಕಾವೇರಿಪಟ್ಟಣವೆಂಬ ವಾಸಿಸಲು ಯೋಗ್ಯವಾದ ಶೋಭಾಯಮಾನವಾದ ಅಗ್ರಹಾರಕ್ಕೆ ಬಂದರು. ಅಲ್ಲಿರುವ ಲಕ್ಷ್ಮೀಪತಿಯಾದ ಶ್ರೀಹರಿಯನ್ನು ಸೇವಿಸಿ, ಅಲ್ಲಿಯೇ ಕೆಲ ವರ್ಷಗಳವರೆಗೆ ವಾಸಮಾಡಿದರು.

**ಅವತಾರಿಕೆ :** (ತಿಮ್ಮಣಾರ್ಯರಿಗೆ ಪುತ್ರೋತ್ಸವ) ಕುಲದೇವತೆಯಾದ ಶ್ರೀವೇಂಕಟೇಶ್ವರನ ಸೇವೆಯಿಂದ ಬೇಗನೆ ಅನುಗ್ರಹ ರೂಪವಾದ ಫಲಪ್ರಾಪ್ತಿಯಾಯಿತೆಂದು ವರ್ಣಿಸುತ್ತಾರೆ.

**ಸುಷುವೇ ಸುಗುಣಾಂ ಸುತಾಂ ಸುವೇಷಾಂ ಗುಣಸಿಂಧುಂ ತನಯಂ ಚ ಗೋಪಿಕಾಂಬಾ।**
**ಅಚಿರೇಣಜನಿಷ್ಯಮಾಣಸೂನೋರತುಲಾಂ ಕೀರ್ತಿಮಿವ ಕ್ರಮಾತ್ ಪ್ರತಾಪಮ್ ॥೧೮॥**

**ತಾತ್ಪರ್ಯ :** ಗೋಪಿಕಾಂಬೆಯು ಸುಂದರಿಯೂ, ಸುಗುಣೆಯೂ ಆದ ಪುತ್ರಿಯನ್ನೂ ನಂತರ ಗುಣಶಾಲಿಯಾದ ಮಗನನ್ನು ಪ್ರಸವಿಸಿದಳು. ಇಬ್ಬರೂ ಮುಂದೆ ಜನಿಸಲಿರುವ ಮಗನ ಅಸಾಧಾರಣವಾದ ಕೀರ್ತಿ ಮತ್ತು ಪ್ರತಾಪಗಳಂತೆ ಇದ್ದರು. (ಉಪಮಾಲಂಕಾರ)

**ಅವತಾರಿಕೆ :** ಕವಿಗಳು ಈಗ ಬಹಳ ಸಂಪತ್ತುವುಳ್ಳ ತಿಮ್ಮಣಾರ್ಯರು ತಮ್ಮ ಇಬ್ಬರು ಮಕ್ಕಳಿಗೆ ನಾಮಕರಣ ಶಾಸ್ತ್ರ ಮಾಡಿ ಹೆಸರಿಟ್ಟರು ಎಂದು ವರ್ಣಿಸುತ್ತಾರೆ.

**ಕುಲದೈವತದೈಶಿಕಪ್ರಸಾದಾತ್ ಪ್ರಭವಾಪತ್ಯಪುರಸ್ಸರಾ (ರೋಽ) ತುಲಶ್ರೀಃ ।**
**ಸ ಚಕಾರ ಚ ವೇಂಕಟಾಂಬಿಕಾಖ್ಯಾಂ ಸ್ವಸುತಾಯಾ ಗುರುರಾಜನಾಮ ಸೂನೋಃ ॥೧೯॥**

**ತಾತ್ಪರ್ಯ :** ತಮ್ಮ ಕುಲದೇವರಾದ ಶ್ರೀಲಕ್ಷ್ಮೀವೇಂಕಟೇಶದೇವರು ಮತ್ತು ಜ್ಞಾನೋಪದೇಶಕರಾದ ಗುರುಗಳು ಇವರ ಅನುಗ್ರಹದಿಂದ ಶ್ರೀ ತಿಮ್ಮಣಾರ್ಯರು ಪುತ್ರ ಸಂಪತ್ತನ್ನೂ ಮತ್ತಿತರ ಸಂಪತ್ತನ್ನೂ ಪಡೆದರು. ಅವರಿಗೆ ಮೊದಲು ಒಂದು ಹೆಣ್ಣು ಮಗುವಾಯಿತು. ಮಗುವಿಗೆ ವೆಂಕಟಾಂಬಾ ಎಂದು ನಾಮಕರಣ ಮಾಡಿದರು. ಅನಂತರ ಹುಟ್ಟಿದ ಗಂಡು ಮಗುವಿಗೆ ಗುರುರಾಜ ಎಂದು ನಾಮಕರಣ ಮಾಡಿದರು.

**ಅವತಾರಿಕೆ :** ಕವಿಗಳು ಈಗ ತಿಮ್ಮಣಾರ್ಯ ಗೋಪಿಕಾಂಬ ದಂಪತಿಗಳಿಗೆ ಒಬ್ಬನೆ ಗಂಡು ಮಗನಿದ್ದುದರಿಂದ ದಂಪತಿಗಳಿಗೆ ಮತ್ತೊಬ್ಬ ಗಂಡು ಮಗನು ಬೇಕೆಂಬ ಅಭಿಲಾಷೆ ಉಂಟಾಯಿತೆಂದು ಹೇಳುತ್ತಾರೆ.

**ಮಿಲಿತೌ ಖಲು ದರ್ಶಪೂರ್ಣಮಾಸೌ ಫಲದೌ ತದ್ವದಸೌ ಸುತೋಽಸಹಾಯಃ ।**
**ನ ಸುಖಾಯ ಭವೇದಿತೀವ ಸೋಽಯಂ**
**ಪ್ರಭುಮನ್ಯಂ ಸುತಮರ್ಥಯಾಂಬಭೂವೇ ॥೨೦॥**

**ತಾತ್ಪರ್ಯ :** ದರ್ಶ ಮತ್ತು ಪೂರ್ಣಮಾಸ ಎಂಬ ಎರಡು ಯಾಗಗಳನ್ನು ಪಕ್ಷದ ಕೊನೆಯಲ್ಲಿ ಮಾಡುತ್ತಾರೆ. ಇವೆರಡನ್ನು ಅನುಷ್ಠಾನ ಮಾಡಿದರೆ ಪರಸ್ಪರ ಸಹಕಾರದಿಂದ ಅಪೂರ್ವವೆಂಬ ಪದಾರ್ಥ (ಪುಣ್ಯದಂತಹ ವಸ್ತು) ಉತ್ಪತ್ತಿಯಾಗಿ ಸ್ವರ್ಗ ಪ್ರಾಪ್ತಿಯಾಗುತ್ತದೆ ಎಂದು ಮೀಮಾಂಸಕರು ಹೇಳುತ್ತಾರೆ. ಒಂದನ್ನೇ ಅನುಷ್ಠಾನ ಮಾಡಿದರೆ ಫಲ ಉಂಟಾಗುವುದಿಲ್ಲ. ಆದರೂ ಸಹಾಯಕನಾದ ಮತ್ತೊಬ್ಬ ಸಹೋದರನಿಲ್ಲದಿರುವ ಈ ಗುರುರಾಜನೆಂಬ ಒಬ್ಬ ಮಗನು ನಮಗೆ ಇಹಪರದಲ್ಲಿ ಸುಖಪ್ರದನಾಗಲಾರನು ಎಂದು ತಿಮ್ಮಣಾರ್ಯರು ತಮಗೆ ಅತ್ಯಂತ ಸಮರ್ಥನಾದ ಮತ್ತೊಬ್ಬ ಪುತ್ರನನ್ನು ಕರುಣಿಸಬೇಕೆಂದು ಕುಲದೇವತೆಯಾದ ಶ್ರೀನಿವಾಸನನ್ನು ಪ್ರಾರ್ಥಿಸಿದರು.

**ಅವತಾರಿಕೆ :** ಕವಿಗಳು ಈಗ ತಿಮ್ಮಣಾರ್ಯ ದಂಪತಿಗಳ ಪ್ರಾರ್ಥನೆಯು ಸಫಲವಾಯಿತೆಂದು ಹೇಳುತ್ತಾರೆ.

**ಮಹಿದಾಸಮಿವೇತರಾ ಮಹಾಂತಂ ಹರಿದಿಂದುಂ ಚ ಯಥೈವ ಪೌರುಹೂತೀ ।**
**ಉರುಶೇವಧಿಮುರ್ವರೇವ ತಸ್ಮಾದುದರೇಽಧತ್ತ ಕುಮಾರಮುತ್ಪಲಾಕ್ಷೀ ॥೨೧॥**

**ತಾತ್ಪರ್ಯ :** ಇತರಾ ದೇವಿಯು ಮಹಿದಾಸನೆಂಬ ಹೆಸರಿನ ಪರಮಾತ್ಮನನ್ನು ಗರ್ಭದಲ್ಲಿ ಧರಿಸಿದ್ದಳು. ಪೂರ್ವದಿಕ್ಕು ಪೂರ್ಣಚಂದ್ರನನ್ನು ತನ್ನ ಗರ್ಭದಲ್ಲಿ ಧರಿಸಿ ಪ್ರಕಟಗೊಳಿಸುತ್ತದೆ. ಅದರಂತೆಯೂ. ಉತ್ಕೃಷ್ಟವಾದ ಭೂಮಿಯು ಉತ್ತಮವಾದ ನಿಧಿಯನ್ನು ಗರ್ಭದಲ್ಲಿ ಧರಿಸಿರುವಂತೆಯೂ, ಗೋಪಿಕಾಂಬಾ ದೇವಿಯು ಸುಕುಮಾರನಾದ ಕುಮಾರನನ್ನು ಗರ್ಭದಲ್ಲಿ ಧರಿಸಿದರು. (ಉಪಮಾಲಂಕಾರ)

**ಅವತಾರಿಕೆ :** ಗೋಪಿಕಾಂಬೆಯ ಗರ್ಭಿಣೀ ಚಿಹ್ನೆಯನ್ನು ನೋಡಿ ಜನರು ಹೀಗೆ ಉತ್ಪ್ರೇಕ್ಷಿಸಿದರು ಎಂದು ಕವಿಗಳು ವರ್ಣಿಸುತ್ತಾರೆ.

**ಶಶನಾಥಕಲಾ ಕಿಮಬ್ಧಿವೇಲಾ ನಿಜಭರ್ತುಃ ಫಲಿತಾ ನು ಪುಣ್ಯರೇಖಾ ।**
**ಕಿಮು ಸಾಕೃತಿರಾಗತಾಽಸ್ಯ ಕೀರ್ತಿರ್ಧೃತಮೂರ್ತಿಃ ಕಿಮು ಕೌಮುದೀ ಕಿಮೇಷಾ ॥೨೨॥**

**ತಾತ್ಪರ್ಯ :** ಈ ಸುಂದರಿಯು ಯಾರು? ಚಂದ್ರನ ಮನೋಹರವಾದ ಕಲಾ ಪುಂಜವೇ ಇವಳೇ? ಬಿಳಿಯ ಮರಳು ರಾಶಿಯಿಂದ ಕೂಡಿದ ಸಮುದ್ರದ ದಡವೇನು? ತಿಮ್ಮಣಾರ್ಯರ ಪರಿಪಕ್ವವಾದ ಪುಣ್ಯರಾಶಿಯೇ ಈ ರೂಪದಿಂದ ಬಂದಿದೆಯೇನು? ಅಥವಾ ಇವಳ ಪತಿಯಾದ ತಿಮ್ಮಣಾರ್ಯರ ಕೀರ್ತಿಯ ಸಾಕಾರವಾಗಿ ಈ ರೀತಿ ಬಂದಿದೆಯೇನು? (ಅಥವಾ ಗರ್ಭದಲ್ಲಿರುವ ಶಿಶುವಿನ ಕೀರ್ತಿಯೇ ಸಾಕಾರವಾಗಿ ಹೀಗೆ ಕಾಣಿಸುತ್ತಿದೆಯೇನು?) ಬೆಳದಿಂಗಳು ರೂಪವನ್ನು ಧರಿಸಿ ಈ ರೀತಿಯಾಗಿ ಕಾಣಿಸುತ್ತಿದೆಯೇನು? ಇವಳು ಯಾರು ಎಂಬುದಾಗಿ ಜನರು ಗರ್ಭಿಣಿಯಾದ ಗೋಪಿಕಾಂಬೆಯನ್ನು ನೋಡಿ ಉತ್ಪ್ರೇಕ್ಷಿಸುತ್ತಿದ್ದರು. (ಗರ್ಭಿಣಿಯಾದ ಗೋಪಿಕಾಂಬೆಯು ಪಾಂಡುವರ್ಣದಿಂದ ಕೂಡಿದ್ದರಿಂದ ಈ ರೀತಿಯಾಗಿ ಉತ್ಪ್ರೇಕ್ಷಿಸಿದ್ದಾರೆ.)

**ಅವತಾರಿಕೆ :** ಕವಿಗಳು ಗರ್ಭಿಣಿಯಾದ ಗೋಪಿಕಾಂಬಾ ದೇವಿಯ ಪಾಂಡುವರ್ಣವನ್ನು ಮತ್ತೆ ವರ್ಣಿಸುತ್ತಾರೆ.

**ಉದರಸ್ಥಸುತೇಂದುಚಂದ್ರಿಕಾಯಾಂ ವಿತತಾಯಾಮಖಿಲಾಂಗಪಾಂಡುತಾಯಾಮ್ ।**
**ಸಹಿತೌ ಸುತನೋರುರೋಜಚಕ್ರಾವಿತಿಚಿತ್ರಂ ನ ತಪೋನಿಧಿರ್ಯದಂತಃ ॥೨೩॥**

**ತಾತ್ಪರ್ಯ :** ಎಲ್ಲಾ ರೀತಿಯಿಂದಲೂ ಎಲ್ಲಾ ಭಾಗಗಳಿಂದಲೂ ಪಾಂಡುವರ್ಣ ಸ್ವರೂಪವೇ ಆಗಿರುವ, ಎಲ್ಲಾ ಭಾಗಗಳಲ್ಲಿಯೂ ಬೆಳ್ಳಗಿರುವ, ಉದರದಲ್ಲಿರುವ ಮಗನೆಂಬ ಚಂದ್ರನ ಬೆಳದಿಂಗಳು ಗೋಪಿಕಾಂಬಾ ದೇವಿಯರ ಸರ್ವಾಂಗದಲ್ಲಿಯೂ ವ್ಯಾಪಿಸಿತ್ತು. ಬೆಳದಿಂಗಳಿನಲ್ಲಿ ರಾತ್ರಿ ಚಕ್ರವಾಕ ದಂಪತಿಗಳಿಗೆ ವಿಯೋಗವುಂಟಾಗುತ್ತದೆ. ಅವುಗಳು ಒಂದರಿಂದ ಒಂದು ದೂರದಲ್ಲಿದ್ದು ವಿರಹ ವೇದನೆಯಿಂದ ಕೂಗುತ್ತಿರುತ್ತವೆ. ಆದರೆ ಗರ್ಭಿಣಿಯಾದ ಗೋಪಿಕಾಂಬಾ ದೇವಿಯ ಸ್ತನಗಳೆಂಬ ಎರಡು ಚಕ್ರವಾಕ ಪಕ್ಷಿಗಳು ಬೆಳದಿಂಗಳಿನಲ್ಲಿಯೂ ಪರಸ್ಪರ ಒಟ್ಟಿಗೇ ಸೇರಿಯೇ ಇರಲಾರಂಭಿಸಿದವು. ಇದೊಂದು ಆಶ್ಚರ್ಯವಲ್ಲವೇ ಎಂಬ ಸಂದೇಹ ಬರಬಹುದು. ಆದರೆ ಹಾಗಲ್ಲ. ಗರ್ಭದಲ್ಲಿ ಮಹಾ ತಪಸ್ವಿಯು ಸನ್ನಿಹಿತನಾಗಿದ್ದಾನೆ. ತಪಸ್ವಿಗಳ ಆಶ್ರಮದಲ್ಲಿ ಬದ್ಧ ದ್ವೇಷವಿರುವ ಹಸು ಹುಲಿ ಮುಂತಾದ ಪ್ರಾಣಿಗಳೂ ತಪಸ್ವಿಗಳ ಸನ್ನಿಧಾನದ ಪ್ರಭಾವದಿಂದ ತಮ್ಮ ವೈರತ್ವವನ್ನು ಬಿಟ್ಟು ಒಟ್ಟಿಗೆ ಇರುತ್ತವೆ. ಹಾಗಿರುವಾಗ ಪ್ರಕೃತದಲ್ಲಿ ಗರ್ಭದಲ್ಲಿರುವ ತಪಸ್ವಿಯ ಪ್ರಭಾವದಿಂದ ಚಕ್ರವಾಕ ಪಕ್ಷಿಗಳು ಪರಸ್ಪರ ಸೇರಿ ಇರುವುದು ಆಶ್ಚರ್ಯವೇನಲ್ಲ. ಸೂರ್ಯನ ಪ್ರಕಾಶದಲ್ಲಿ ಹಗಲಿನಲ್ಲಿ ಚಕ್ರವಾಕ ಪಕ್ಷಿಗಳು ಒಟ್ಟಿಗೆ ಸರಿಯೇ ಇರುತ್ತವೆಯಲ್ಲವೇ! ಈಗಲೂ ಕೂಡಾ ತಪೋನಿಧಿಯಾದ ಗರ್ಭದಲ್ಲಿರುವ ಶಿಶುವೆಂಬ ಸೂರ್ಯಪ್ರಕಾಶದಿಂದ ಹಗಲೇ ಆಗಿರುವುದರಿಂದ ಸ್ತನಚಕ್ರವಾಕ ಪಕ್ಷಿಗಳು ಒಟ್ಟಿಗೆ ಸೇರಿ ಇರುವುದು ಆಶ್ಚರ್ಯಕರವಲ್ಲ ಎಂದು ಭಾವ.

**ಅವತಾರಿಕೆ :** ಕವಿಗಳು ಈಗ ಗರ್ಭಿಣಿಯ ಬಯಕೆಗಳನ್ನು ವರ್ಣಿಸುತ್ತಾರೆ.

**ತನುಶಾಯಿಶಿಶೋರ್ವಿರಾಗತಾ ಕಿಂ ವಿತತಾಽಂಗೇಷು ವಿಶಾಲಲೋಚನಾಯಾಃ ।**
**ಪರಥಾ ಸತತಂ ಹಿತೇ ತರುಣ್ಯಾಃ ರುಚಿತೇ (ಉಚಿತೇ)**
**ವಸ್ತುನಿ ಕಿಂತರಾಂ ವಿರಾಗಃ ॥೨೪॥**

**ತಾತ್ಪರ್ಯ :** ಗರ್ಭಿಣಿಯಾದ ಗೋಪಿಕಾಂಬಾ ದೇವಿಗೆ ಹಿಂದೆ ಪ್ರೀತಿಕರವಾಗಿದ್ದ ಹಾಗೂ ಹಿತಕರವೂ ಆಗಿದ್ದ ತಿಂಡಿ ತಿನಿಸುಗಳಲ್ಲಿ ಮತ್ತು ಸ್ನಾನ ಅಲಂಕಾರ ಮುಂತಾದವುಗಳಲ್ಲಿಯೂ ಈಗ ವೈರಾಗ್ಯ ಉಂಟಾಗಿತ್ತು. ಇದು ತರುಣಿಯಾದ ಅವಳಲ್ಲಿ ಹೇಗೆ ಉಂಟಾಯಿತು? ಗರ್ಭದಲ್ಲಿರುವ ವೈರಾಗ್ಯನಿಧಿಯಾದ ಪುತ್ರನ ವೈರಾಗ್ಯವು ವಿಶಾಲಲೋಚನೆಯಾದ ಗೋಪಿಕಾಂಬೆಯ ದೇಹದಲ್ಲೆಲ್ಲಾ ವ್ಯಾಪಿಸಿದ್ದರಿಂದ ಅವಳೂ ಈ ರೀತಿಯಾಗಿ ವೈರಾಗ್ಯ ತೋರಿಸಿರಬೇಕು, ಎಂಬುದಾಗಿ ಕವಿಗಳು ಗರ್ಭಿಣಿಯಾದ ಗೋಪಿಕಾಂಬಾ ದೇವಿಯ ವೈರಾಗ್ಯದ ಕಾರಣವನ್ನು ಸಮರ್ಥಿಸುತ್ತಾರೆ. (ಇಲ್ಲಿಯೂ ಸಮರ್ಥನೆ ಮಾಡಬೇಕಾದ ವಿಷಯವನ್ನು ಸಮರ್ಥಿಸಿದ್ದರಿಂದ ಕಾವ್ಯಲಿಂಗಾಲಂಕಾರವು).

**ಅವತಾರಿಕೆ :** ಈಗ ಕವಿಗಳು ಗೋಪಿಕಾಂಬಾ ದೇವಿಯ ಗರ್ಭಚಿಹ್ನೆಗಳನ್ನು ತಿಳಿಸುತ್ತಿದ್ದಾರೆ.

**ನ ಪರಂ ಸದೃಶಂ ಪ್ರಸನ್ನತಾದ್ಯೈರ್ಧವಲಿಮ್ನಾಽಪಿ ತದಾನನಾತ್ ಸುಧಾಂಶೋಃ**
**(ತದಾನನಂ ಸುಧಾಂಶೋಃ) ।**
**ಅಕಲಂಕತಯಾಽವನೌ ಪ್ರಸಿದ್ಧಂ ಸಕಲಂಕೇನ ಕಥಂ ಸಮತ್ವಮೇತಿ ॥೨೫॥**

**ತಾತ್ಪರ್ಯ – (ಬಾ.ಬೋ.) :** ನಿರ್ಮಲತ್ವ ಶುಭ್ರತೆ ಮೊದಲಾದ ಗುಣಗಳಿಂದ ಚಂದ್ರನಿಗೆ ಹೋಲಿಸಬೇಕಾದರೆ ಈ ಗೋಪಿಕಾಂಬೆಯ ಮುಖ ಹೊರತು ಬೇರೆ ಯಾವ ವಸ್ತುವೂ ಪ್ರಪಂಚದಲ್ಲಿ ಇಲ್ಲ. ಚಂದ್ರನು ಹೇಗಿದ್ದಾನೆ ಎಂದರೆ ಗೋಪಿಕಾಂಬೆಯ ಮುಖದಂತೆ ಇದ್ದಾನೆ ಎಂದು ಹೇಳಬಹುದು. ಹಾಗಾದರೆ ಗೋಪಿಕಾಂಬೆಯ ಮುಖವೂ ಚಂದ್ರನಂತೆ ಇದೆಯೆಂದು ಹೇಳಬಹುದೇ ಎಂದರೆ ಹಾಗೆ ಹೇಳಲು ಸಾಧ್ಯವಾಗುವುದಿಲ್ಲ. ಏಕೆಂದರೆ ಭೂಮಂಡಲದಲ್ಲಿ ಕಳಂಕರಹಿತ ಎಂದು ಪ್ರಸಿದ್ಧವಾದ (ಪತಿವ್ರತೆಯಾದ) ಗೋಪಿಕಾಂಬೆಯ ಮುಖವು ಕಳಂಕದಿಂದ ಕೂಡಿದ ಚಂದ್ರನ ಸಾಮ್ಯದಿಂದ ವರ್ಣಿಸಲು ಯೋಗ್ಯವಲ್ಲ. ಅದು ಚಂದ್ರನಿಗಿಂತಲೂ ಉತ್ತಮವಾದುದು. (ಇಲ್ಲಿ ಗೋಪಿಕಾಂಬೆಯ ಮುಖವು ಚಂದ್ರಮಂಡಲಕ್ಕಿಂತಲೂ ಹೆಚ್ಚು ಗುಣವುಳ್ಳದ್ದು ಎಂದು ತಿಳಿದು ಬರುತ್ತದೆ, ಆದುದರಿಂದ ವ್ಯತಿಲೇಖಾಲಂಕಾರ ಧ್ವನಿ. ಪೂರ್ವಾರ್ಧದಲ್ಲಿ ಚಂದ್ರನು ಗೋಪಿಕಾಂಬೆಯ ಮುಖದಂತಿದ್ದಾನೆ ಎಂದು ತಿಳಿದು ಬರುವುದರಿಂದ ಪ್ರತೀಪಾಲಂಕಾರ ಧ್ವನಿ.)

**ತಾತ್ಪರ್ಯ–(ಗು.ಸೇ) :** ನೈರ್ಮಲ್ಯ ಮತ್ತು ಧಾವಲ್ಯ ಮುಂತಾದ ಉತ್ತಮ ಗುಣಗಳಿಂದ ಕೂಡಿದ ಗೋಪಿಕಾಂಬೆಯ ಮುಖವು ಚಂದ್ರನಿಗೆ ಸ್ವಲ್ಪವೂ ಸದೃಶವಲ್ಲ. ಚಂದ್ರನಿಗಿಂತಲೂ

ಅದು ಉತ್ತಮವಾಗಿದೆ. ಆದುದರಿಂದ ಚಂದ್ರನಿಗೆ ಅದನ್ನು ಹೋಲಿಸಲು ಹೋಗಬಾರದು. ಲೋಕದಲ್ಲಿ ಕಳಂಕ ರಹಿತವೆಂದು ಪ್ರಸಿದ್ಧವಾದ ವಸ್ತುವು ಕಳಂಕವುಳ್ಳ ವಸ್ತುವಿನೊಂದಿಗೆ ಸಾಮ್ಯವನ್ನು ಹೇಗೆ ತಾನೆ ಹೊಂದಲು ಸಾಧ್ಯ? ಗೋಪಿಕಾಂಬೆಯ ಮುಖವು ಕಳಂಕವಿಲ್ಲದ್ದು ಚಂದ್ರನು ಕಳಂಕವುಳ್ಳವನು. ಆದುದರಿಂದ ಇವೆರಡನ್ನು ಹೋಲಿಸಲು ಪ್ರಯತ್ನಿಸಬಾರದು ಎಂದು ಭಾವ. ಇಲ್ಲಿ ವಿಶೇಷದಿಂದ ಸಾಮಾನ್ಯ ಸಮರ್ಥನರೂಪವಾದ ಅರ್ಥಾಂತರನ್ಯಾಸಾಲಂಕಾರ. ಉಕ್ತಿರರ್ಥಾಂತರ ನ್ಯಾಸ ಸ್ಯಾತ್ ಸಾಮಾನ್ಯ ವಿಶೇಷಯೋಃ ಎಂಬುದು ಅದರ ಲಕ್ಷಣ.

**ಕೃಶತಾಽಜನಿ ಯಾಽವಲಗ್ನದೇಶೇ ವವೃಧೇಽಂಗೇ ಕತಿಚಿದ್ದಿನಾನ್ಯಶೇಷೇ ।**
**ವಶತಾಂ ನ ಹಿ ಯಾತಿ ಮಧ್ಯಸಂಸ್ಥಾಪ್ಯುಪಚಾರೇಣ ವಿನಾ ಘನಾಶ್ರಿತಾಽಲ್ಪಾ ॥೨೬॥**

**ತಾತ್ಪರ್ಯ :** ಗರ್ಭಿಣಿಯಾದ ಗೋಪಿಕಾಂಬೆಯ ಕಟಿ ಪ್ರದೇಶದಲ್ಲಿ ಮಾತ್ರ ಮೊದಲು ಕೃಶತೆಯಿತ್ತು. (ಅಂದರೆ ಕಟಿ ಪ್ರದೇಶವು ಸೂಕ್ಷ್ಮವಾಗಿತ್ತು) ಕ್ರಮೇಣ ಆ ಕೃಶತೆಯು ಗರ್ಭಿಣಿಯ ಶರೀರದ ಎಲ್ಲಾ ಅಂಗಗಳನ್ನು ವ್ಯಾಪಿಸಿತು. ಗರ್ಭಿಣಿಯು ಕೃಶಳಾದಳು. ಈ ಕೃಶತೆಯು ಮಧ್ಯದಲ್ಲಿ ಅಂದರೆ ಸೊಂಟದಲ್ಲಿಯೇ ಇತ್ತು. ಘನವಾದ ನಿತಂಬವು ಕೃಶತೆಗೆ ಆಶ್ರಯವಾಗಿತ್ತು. ಆದರೆ ಅದಕ್ಕೆ (ಕೃಶತೆಗೆ) ಅನ್ನಪಾನಾದಿ ಉಪಚಾರ ಮಾಡುತ್ತಿದ್ದುದರಿಂದ ಅದು ದೇಹದ ಎಲ್ಲಾ ಅಂಗಗಳಿಗೂ ತನ್ನ "ಕೃಶತಾ" ಸ್ವರೂಪವನ್ನೇ ಉಂಟುಮಾಡಿ. ಮಧ್ಯಸ್ಥ ಅಂದರೆ ಉದಾಸೀನರಾದರೂ ನೀಚರಾದ ಪ್ರಜಾ ಜನರು ದೊಡ್ಡವರನ್ನೇ ಆಶ್ರಯಿಸಿಕೊಂಡಿದ್ದರೂ ಹಣ ಬಟ್ಟೆ ಮುಂತಾದ ಲಂಚದ ಉಪಚಾರ ಮಾಡದಿದ್ದರೆ ತೊಂದರೆ ಕೊಟ್ಟೇ ಕೊಡುತ್ತಾರೆ. ಅವರನ್ನು ಉಪಚಾರದಿಂದ (ಲಂಚದಿಂದ) ಸ್ವಾಧೀನ ಪಡಿಸಿಕೊಳ್ಳುವಂತೆ ಈ ಕೃಶತೆಯನ್ನೂ ಸ್ವಾಧೀನ ಪಡಿಸಿಕೊಳ್ಳಬೇಕಾಗಿತ್ತು. ಆದರೆ ಗರ್ಭಿಣಿಯು ಅನ್ನಪಾನಾದಿ ಉಪಚಾರಗಳನ್ನು ಮಾಡಿಕೊಳ್ಳದ್ದರಿಂದ ಕೋಪಗೊಂಡ ಕೃಶತೆಯು ಸರ್ವಾಂಗಗಳಲ್ಲಿಯೂ ಅಭಿವೃದ್ಧಿ ಹೊಂದಿ ತನ್ನ ಸಾಮ್ರಾಜ್ಯವನ್ನು ಸ್ಥಾಪಿಸಿತು. ಗೋಪಿಕಾಂಬೆಯು ಗರ್ಭಿಣಿಸ್ತ್ರೀಯರ ಸ್ವಭಾವಕ್ಕನುಸಾರವಾಗಿ ಮೊದಲು ಕೃಶಳಾಗಿ ಕಾಣಿಸಿದಳು ಎಂದು ಅಭಿಪ್ರಾಯ.

**ಅವತಾರಿಕೆ :** ಈಗ ಗೋಪಿಕಾಂಬೆಯ ಸ್ತನಗಳ ಅಗ್ರಭಾಗದ ಕಪ್ಪು ಬಣ್ಣವನ್ನು ಉತ್ಪ್ರೇಕ್ಷಿಸುತ್ತಿದ್ದಾರೆ.

**ಕಮಿತುಃ ಕಿಮು ಮೋಹನಾಯ ಕಾಮಂ ಕೃತಕಾಮೌ ಕಠಿಣೌ ಕುಚೌ ತದೀಯೌ ।***
**ನಿಜಚೂಚುಕನೀಲಿಮಾಪದೇಶಾತ್ ಅಚಿರೋಪಾತ್ತತಮೋಗುಣಾವಭೂತಾಮ್ ॥೨೭॥**

*(ಕಿಮಿತುಃ ಕಿಮುಮೋಹನಾಯಕಾಮೋಽಕೃತ ಕಾಮಂ ಕಠಿನೌ ಕುಚೌ ತದೀಯೌ ।) (ಗು.ಸೇ ವ್ಯಾಖ್ಯಾ ಸಂಮತವಾದ ಪೂರ್ವಾರ್ಧ ಭಾಗ)

**ತಾತ್ಪರ್ಯ (ಬಾ.ಬೋ) :** ಗರ್ಭಿಣಿಯಾದ ಗೋಪಿಕಾಂಬೆಯ ಸ್ತನಗಳು ಕಠಿಣವಾಗಿ

ಸುಂದರವಾಗಿ ಇದ್ದವು. ಗರ್ಭಿಣಿ ಸ್ತ್ರೀಯರ ಸ್ವಭಾವಕ್ಕನುಗುಣವಾಗಿ ಅವಳ ಸ್ತನಗಳ ತುದಿಭಾಗವು ಕಪ್ಪಾಗಿ ಕಾಣಿಸುತ್ತಿತ್ತು. ಪತಿಗೆ ಮೋಹವನ್ನುಂಟು ಮಾಡುವುದಕ್ಕಾಗಿ ಆ ಸ್ತನಗಳೆರಡೂ ತಮೋಗುಣವನ್ನು ಸ್ವೀಕರಿಸಿದಂತೆ ಕಾಣಿಸುತ್ತಿತ್ತು. (ತಮೋಗುಣವು ಮೋಹಕವೆಂದು ಶಾಸ್ತ್ರದಲ್ಲಿ ಹೇಳುತ್ತಾರೆ. ಅದರ ಪ್ರಕಾರ ಕವಿಗಳು ಈ ರೀತಿಯಾಗಿ ವರ್ಣಿಸಿದ್ದಾರೆ).

**ತಾತ್ಪರ್ಯ (ಗು.ಸೇ.) :** ಮನ್ಮಥನು ಗೋಪಿಕಾಂಬಾದೇವಿಯ ಪತಿಯಾದ ತಿಮ್ಮಣಾರ್ಯರಿಗೆ ಮೋಹವನ್ನು ಉಂಟು ಮಾಡಲು ಗೋಪಿಕಾಂಬೆಯ ಎರಡೂ ಸ್ತನಗಳನ್ನು ಅತ್ಯಂತ ಕಠಿಣವಾಗಿ ಮಾಡಿದನೇನು? ಗೋಪಿಕಾಂಬೆಯ ಸ್ತನಗಳೆರಡೂ ತಮ್ಮ ತುದಿಗಳಲ್ಲಿ ಕಪ್ಪು ಬಣ್ಣವನ್ನು ಸ್ವೀಕರಿಸಿದ್ದರಿಂದ, ಮೋಹಕ್ಕೆ ಕಾರಣವಾದ ತಮೋಗುಣವನ್ನು ಈ ಗರ್ಭಿಣಿಯ ಅವಸ್ಥೆಯಲ್ಲಿ ಸ್ವೀಕರಿಸಿವೆಯೋ ಎಂಬಂತೆ ಕಾಣಿಸುತ್ತಿತ್ತು. (ಗರ್ಭಿಣಿಯ ಸ್ತನಗಳು ಕಠಿಣವಾಗಿರುತ್ತವೆ ಮತ್ತು ಅವುಗಳ ಅಗ್ರಭಾಗವು ಕಪ್ಪಾಗಿರುತ್ತವೆ. ಅದನ್ನು ಸಾಮ್ಯವಾಗಿ ಇಟ್ಟುಕೊಂಡು ಕವಿಗಳು ಈ ರೀತಿಯಾಗಿ ವರ್ಣಿಸಿರುತ್ತಾರೆ.) ಇಲ್ಲಿ ಎರಡು ಉತ್ಪ್ರೇಕ್ಷೆಗಳು (ಬಾಲಬೋಧಿನೀ ವ್ಯಾಖ್ಯಾನದಂತೆ ಒಂದು ಉತ್ಪ್ರೇಕ್ಷೆಯು). ತಮೋಗುಣದಂತೆ ಗೋಪಿಕಾಂಬೆಯ ಸ್ತನಗಳೆರಡೂ ಪತಿಗೆ ಮೋಹಕವಾಗಿದ್ದವು ಎಂದು ಭಾವ.

**ಅವತಾರಿಕೆ :** ಈಗ ಕವಿಗಳು ಗೋಪಿಕಾಂಬೆಯ ರೋಮಗಳ ಸಾಲು ಅತ್ಯಂತ ಸ್ಪಷ್ಟವಾಗಿತ್ತು ಎಂಬ ವಿಷಯವನ್ನು ಉತ್ಪ್ರೇಕ್ಷಿಸುತ್ತಾರೆ.

**ಸಭಯೋ ವಿಧುರೇಷ ಸೈಂಹಿಕೇಯಾತ್ ಸ್ವಮಪಹ್ನುತ್ಯ ನಿಗೂಹಿತುಂ ಪ್ರವೃತ್ತಃ ।**
**ನಿಜಲಕ್ಷ್ಮ ನಿರಸ್ಯ ರೋಮರಾಜಿಂ ನಿಭೃತೋ ಗರ್ಭಮುಪೇಯಿವಾನಮುಷ್ಯಾಃ ॥೨೮॥**

**ತಾತ್ಪರ್ಯ :** "ರಾಹುವಿನಿಂದ ಹೆದರಿ ಚಂದ್ರನು ತಾನು ಎಲ್ಲಿಯಾದರೂ ಮರೆಯಾಗಿ ಇರಬೇಕೆಂದು ಆಲೋಚಿಸಿದನು. ಗೋಪಿಕಾಂಬೆಯ ಉದರದಲ್ಲಿದ್ದ ರೋಮಗಳ ಸಾಲಿನ ನೆಪದಿಂದ ತನ್ನ ಕಳಂಕವನ್ನು ಹೊರಗೆ ಇಟ್ಟು ತಾನು ಗೋಪಿಕಾಂಬೆಯ ಉದರವನ್ನು ಪ್ರವೇಶಿಸಿ ಮರೆಯಾಗಿದ್ದಾನೆ." 'ಚಂದ್ರನು ಮರೆಯಾಗಿ ಗರ್ಭವನ್ನು ಪ್ರವೇಶಿಸಿದ್ದಾನೆ. ರಾಹುವಿನಿಂದ ಹೆದರಿಕೆ ಆಗಿರುವುದೇ ಅದಕ್ಕೆ ಕಾರಣ. ಕಳ್ಳರಿಂದ ಅಥವಾ ಶತ್ರುಗಳಿಂದ ಹೆದರಿದವರು ತಮ್ಮ ಗುರುತನ್ನು ಬದಲಾಯಿಸಿ ಮರೆಯಾಗಿ ಇರುವಂತೆ ಚಂದ್ರನೂ ಕಳಂಕವನ್ನು ಹೊರಗೆ ಇಟ್ಟು ತಾನು ಗರ್ಭರೂಪದಿಂದ ಒಳಗೆ ಪ್ರವೇಶಿಸಿದ್ದಾನೆ ಎಂದು ಉತ್ಪ್ರೇಕ್ಷೆ ಮಾಡಿದ್ದಾರೆ. ಗರ್ಭದಲ್ಲಿರುವ ಶಿಶುವು ಕಳಂಕವಿಲ್ಲದೆ ಚಂದ್ರನಂತೆ ಎಲ್ಲರಿಗೂ ಆಹ್ಲಾದವನ್ನು ಉಂಟು ಮಾಡುವಂತಹದು ಎಂದು ಅಭಿಪ್ರಾಯ.'

**ಅವತಾರಿಕೆ :** ಕವಿಗಳು ಈಗ ರೋಮಗಳ ಸಾಲನ್ನು ತಾಳೆಯ ಮರವೆಂದು ವರ್ಣಿಸುತ್ತಾರೆ.

**ತತನಾಭಿನಿಭಾಲವಾಲಮಧ್ಯಾದುದಯದ್ರೋಮಲತಾಖ್ಯತಾಲಶಾಖೀ(ಕಲ್ಪಶಾಖೀ) ।**
**ಫಲಿತೋಽಜನಿ ಕಿಂ ಪಯೋಧರಾಭ್ಯಾಮುದಯಚ್ಚೂಚುಕನೈಲ್ಯಭೃಂಗಭಾಗ್ಭ್ಯಾಮ್ ॥೨೯॥**

**ತಾತ್ಪರ್ಯ :** ತಾಳವೃಕ್ಷವನ್ನು ನೆಟ್ಟು ವಿಸ್ತಾರವಾದ ಪಾತಿಯನ್ನು ಮಾಡಿ ನೀರು ಹೊಯ್ದು ಬೆಳೆಸಿದಾಗ ಅದು ಕಪ್ಪಾದ ಫಲವನ್ನು ಬಿಡುತ್ತದೆ. ಆ ಫಲವು ಪಕ್ವವಾದಾಗ ಕಪ್ಪಾದ ದುಂಬಿಗಳು ಬಂದು ಅದರ ತುದಿಯಲ್ಲಿ ಕುಳಿತುಕೊಳ್ಳುತ್ತವೆ. ಈ ಸಾಮ್ಯವನ್ನು ಇಟ್ಟುಕೊಂಡು ಗರ್ಭಿಣಿಯಾದ ಗೋಪಿಕಾಂಬೆಯ ನಾಭಿಯ ಮೇಲಿನ ಕಪ್ಪಾದ ರೋಮದ ಸಾಲನ್ನು ತಾಳವೃಕ್ಷವೆಂದೂ, ಅದರ ಮೇಲ್ಭಾಗದಲ್ಲಿರುವ ಎರಡು ಸ್ತನಗಳು ತಾಲವೃಕ್ಷದ ಫಲಗಳೆಂದೂ, ಆ ಸ್ತನದ ಕಪ್ಪಾದ ತುದಿಯನ್ನು ಪಕ್ವವಾದ ತಾಳಫಲದ ತುದಿಯಲ್ಲಿ ಕುಳಿತುಕೊಳ್ಳುವ ದುಂಬಿಗಳ ಸಮೂಹವೆಂದೂ ವರ್ಣಿಸುತ್ತಾರೆ. ಆ ಗೋಪಿಕಾಂಬೆಯ ವಿಸ್ತಾರವಾದ ನಾಭಿಯೆಂಬ ನೆಪವುಳ್ಳ ಪಾತಿಯ ಮಧ್ಯದಿಂದ ರೋಮಲತೆಯೆಂಬ ಕಪ್ಪಾದ ತಾಳವೃಕ್ಷವು (ಅಥವಾ ಕಲ್ಪವೃಕ್ಷವು) ಹುಟ್ಟಿತು. ಸ್ತನಗಳ ಕಪ್ಪಾದ ಅಗ್ರಭಾಗದ ನೀಲಿ ಬಣ್ಣವೆಂಬ ದುಂಬಿಗಳಿಂದ ಕೂಡಿದ ಆ ಎರಡು ಸ್ತನಗಳಿಂದ ಈ ರೋಮರಾಜಿಯೆಂಬ ತಾಳವೃಕ್ಷವು (ಅಥವಾ ಕಲ್ಪವೃಕ್ಷವು) ಫಲಿಸಿದಂತೆ ಕಾಣಿಸುತ್ತಿತ್ತು. ರೋಮರಾಜಿಯೆಂಬ ವೃಕ್ಷಕ್ಕೆ ಸ್ತನಗಳು ಫಲದಂತೆ ಇದ್ದುವು. ಹಣ್ಣು ಕಚ್ಚಾ ಅಗಿದ್ದಾಗ (ಅಪಕ್ವವಾಗಿದ್ದಾಗ) ದುಂಬಿಗಳು ಬರುವುದಿಲ್ಲ. ಪಕ್ವವಾದಾಗಲೇ ಬರುತ್ತವೆ. ಅದರಂತೆ ಇಲ್ಲಿಯೂ ಫಲವು ಪಕ್ವವಾಗಿವೆ ಎಂದು ದುಂಬಿಗಳು ಬಂದು ಕುಳಿತಿರುವುದರಿಂದ ಗೊತ್ತಾಗುತ್ತದೆ ಎಂದು ಭಾವ.

**ಅವತಾರಿಕೆ :** ಗರ್ಭಿಣಿಯ ಅವಸ್ಥೆಯಲ್ಲಿ ಗೋಪಿಕಾಂಬೆಯ ಸ್ತನಗಳು ಸ್ಥೂಲವಾಗಿದ್ದವು ಎಂದು ಕವಿಗಳು ತಿಳಿಸುತ್ತಾರೆ.

**ಕುಚಯೋರ್ಯುಗಲಂ ಕುಲಾದ್ರಿಸಾರಂ ಕಥಮೇಷಾ ತು ಬಭಾರ ಗರ್ಭಕಾಲೇ ।**
**ಇತಿ ವಿಸ್ಮಯಿತಾ ಕುತಃ ಕವೀನಾಂ ಫಲಿನೀಂ ಚಿಂತಯತಾಂ ಸುರದ್ರುಶಾಖಾಮ್॥೩೦॥**

**ತಾತ್ಪರ್ಯ :** ಗರ್ಭಿಣಿಯು ಸ್ವಾಭಾವಿಕವಾಗಿ ದುರ್ಬಲವಾಗಿರುತ್ತಾಳೆ. ಗೋಪಿಕಾಂಬೆಯು ಗರ್ಭಿಣಿಯಾಗಿರುವಾಗ ಕುಲಪರ್ವತದಂತೆ ಭಾರವಾಗಿರುವ ಮತ್ತು ಸಾರವತ್ತಾದ ಎರಡು ಕುಚಗಳನ್ನು ಹೇಗೆ ಧರಿಸಿದಳು ಎಂದು ಆಶ್ಚರ್ಯಪಡಬೇಕಾಗಿಲ್ಲ ಏಕೆಂದರೆ ಕಲ್ಪವೃಕ್ಷದ ಕೊಂಬೆ ಚಿಕ್ಕದು, ಆದರೆ ಅದು ಮಹತ್ತಾದ ಫಲವನ್ನು ಧರಿಸುತ್ತದೆ. ಹೀಗೆ ಕಲ್ಪವೃಕ್ಷದ ಕೊಂಬೆಯನ್ನು ಮನಸ್ಸಿಗೆ ತಂದುಕೊಳ್ಳುವ ಕವಿಗಳಾಗಲೀ ಜ್ಞಾನಿಗಳಾಗಲೀ ಈ ವಿಷಯವು ಆಶ್ಚರ್ಯಕರವೆಂದು ಭಾವಿಸುವುದಿಲ್ಲ. ಗೋಪಿಕಾಂಬೆಯ ಗರ್ಭದಲ್ಲಿರುವ ಶಿಶುವು ಲೋಕೋಪಕಾರಿಯೂ, ಲೋಕಕ್ಕೆ ಅತ್ಯಂತ ಉಪಯುಕ್ತನು. ಕಲ್ಪವೃಕ್ಷದ ಫಲದಂತೆ ಸರ್ವಾಭೀಷ್ಟಗಳನ್ನು ಕೊಡುವವನು. ಅಂತಹಾ ಪುತ್ರ ಫಲವನ್ನು ಕೊಡುವ ಈ ಗೋಪಿಕಾಂಬೆಯು ಕಲ್ಪವೃಕ್ಷಕ್ಕೆ ಸಮಾನಳು ಎಂದು ಇದರಿಂದ ತಿಳಿದು ಬರುತ್ತದೆ. ಆದುದರಿಂದ ಗೋಪಿಕಾಂಬೆಯು ಸ್ಥೂಲವಾದ ಸ್ತನಗಳನ್ನು ಧರಿಸಿರುವುದು ಆಶ್ಚರ್ಯವೇನಲ್ಲ ಎಂದು ಭಾವ.

**ಅವತಾರಿಕೆ :** ಗೋಪಿಕಾಂಬೆಯ ಗರ್ಭವು ದಿನೇ ದಿನೇ ಅಭಿವೃದ್ಧಿ ಹೊಂದಿದ್ದರಿಂದ ಅವಳ ತ್ರಿವಳಿಯು ಮಾಯವಾಯಿತೆಂದು ಹೇಳುತ್ತಾರೆ.

**ತನಯಾಭ್ಯುದಯಾದೃಣತ್ರಯಸ್ಯಾಪ್ಯಪನೋದಂ ಕಮಿತುರ್ವಿಧಾತುಕಾಮಃ (ವಿಧಾತುಮಸ್ಯಾಃ)।**
**ಪುರತೋऽಕೃತ ತಸ್ಯ ಲಕ್ಷ್ಮರೇಖಾಸ್ತ್ರಿವಲೀರಬ್ಜಭವೋ ನಿರಸ್ತರೂಪಾಃ ॥೩೧॥**

**ತಾತ್ಪರ್ಯ :** ನಾಭಿಯಿಂದ ಕೆಳಗೆ ತ್ರಿವಳೀ ಎಂಬ ಮೂರು ರೇಖೆಗಳಿರುತ್ತವೆ. ಗರ್ಭಿಣಿಯರ ಉದರದಲ್ಲಿ ಈ ರೇಖೆಗಳು ಮಾಯವಾಗುತ್ತವೆ. ಈ ವಿಚಾರವನ್ನು ಮನಸ್ಸಿಲ್ಲಿಟ್ಟುಕೊಂಡು ಕವಿಗಳು ವರ್ಣಿಸುತ್ತಾರೆ. ಬ್ರಾಹ್ಮಣನು ಹುಟ್ಟಿದಾಗಲೇ ಅವನಿಗೆ ಋಷಿ ಋಣ, ದೇವ ಋಣ ಮತ್ತು ಪಿತೃ ಋಣ ಎಂಬ ಮೂರು ಋಣಗಳಲ್ಲಿ ಋಷಿ ಋಣವನ್ನು ಬ್ರಹ್ಮಚರ್ಯಾಶ್ರಮದಲ್ಲಿ ಗುರುಗಳಲ್ಲಿ ವೇದಾಧ್ಯಯನ ಮಾಡಿ ತೀರಿಸಬೇಕು. ತಿಮ್ಮಣ್ಣಭಟ್ಟರು ಈ ಋಣವನ್ನು ತೀರಿಸಿದ್ದಾರೆ. ಯಜ್ಞದಿಂದ ದೇವಋಣವನ್ನು ಪರಿಹಾರ ಮಾಡಬೇಕು. ಮದುವೆಯಾಗಿ ಯಜ್ಞಮಾಡಿ ಆ ಋಣವನ್ನು ತೀರಿಸಿದ್ದಾಗಿದೆ. ಈಗ ಮಗನನ್ನು ಪಡೆದು ಪಿತೃಋಣವನ್ನು ಪರಿಹರಿಸಿಕೊಂಡರೆ ಮೂರು ಋಣವನ್ನು ತೀರಿಸಿದಂತೆ ಆಗುತ್ತದೆ. ಈ ರೀತಿಯಾಗಿ ಋಣತ್ರಯದ ಪರಿಹಾರವನ್ನು ಅವರು ಮಾಡಿಕೊಳ್ಳುತ್ತಿದ್ದಾರೆ ಎಂಬ ಸೂಚನೆಗೋಸ್ಕರವಾಗಿ ಆ ಮೂರು ಋಣಗಳ ಜ್ಞಾಪಕ ಚಿಹ್ನೆಯಂತಿರುವ ತ್ರಿವಳಿಯನ್ನು ಬ್ರಹ್ಮದೇವರು ಅಳಿಸಿ ಹಾಕಿದರೇನೋ ಎಂಬಂತಿತ್ತು. ಗೋಪಿಕಾಂಬೆಯು ಗರ್ಭಿಣಿಯಾಗಿ ಸತ್ಪುತ್ರನನ್ನು ಪ್ರಸವಿಸಿ ಪಿತೃಋಣವನ್ನು ಪರಿಹರಿಸುವಳೆಂದು ನಿಶ್ಚಿತವಾಗಿದೆ. ಉಳಿದೆರಡು ಋಣಗಳು ಹಿಂದೆಯೇ ಪರಿಹಾರ ಹೊಂದಿದೆ. ಆದುದರಿಂದ ಈ ಮೂರು ಋಣಗಳ ಜ್ಞಾಪಕ ಚಿಹ್ನೆಯು ಇನ್ನೇಕೆ ಎಂದು ಬ್ರಹ್ಮದೇವರು ಈ ಚಿನ್ಹೆಗಳನ್ನು ಅಳಿಸಿಹಾಕಿದರೇನೋ ಎಂಬಂತೆ ತ್ರಿವಳೀ ರಹಿತವಾದ ಅವಳ ಉದರವು ಶೋಭಿಸುತ್ತಿತ್ತು ಎಂದು ಉತ್ಪ್ರೇಕ್ಷಿಸುತ್ತಿದ್ದಾರೆ. ಸಾಲ ತೀರಿದ ಮೇಲೆ ಸಾಲದ ಪತ್ರವನ್ನು ಹರಿದು ಹಾಕುತ್ತಾರೆ ಅಥವಾ ಕಾಟು ಹೊಡೆದು ರದ್ದುಗೊಳಿಸುತ್ತಾರೆ, ಅದರಂತೆಯೇ ಇದು ಎಂಬ ಭಾವ.

**ತಾತ್ಪರ್ಯ (ಗು.ಸೇ.) :** "ಪುತ್ರೋತ್ಪತ್ತಿಗಿಂತ ಮೊದಲೇ ಬ್ರಹ್ಮದೇವರು ತ್ರಿವಳಿಯನ್ನು ಅಳಿಸಿ ಬಿಟ್ಟರು". ಆ ತ್ರಿವಳಿಯನ್ನು ಬ್ರಹ್ಮದೇವರು 'ಈ ತಿಮ್ಮಣ್ಣಭಟ್ಟರು ಮೂರು ಸಾಲಗಳನ್ನು ತೀರಿಸಬೇಕಾಗಿದೆ' ಎಂಬುದರ ಜ್ಞಾಪಕಾರ್ಥವಾದ ಸಂಕೇತ ರೇಖೆಯಂತೆ ಇತ್ತು. (ಉಳಿದ ಅಂಶ ಹಿಂದಿನಂತೆಯೇ).

**ಅವತಾರಿಕೆ :** "ಗೋಪಿಕಾಂಬೆಯ ಕಟಿ ಪ್ರದೇಶವು ವಿಶಾಲವಾಯಿತು" ಎಂಬುದನ್ನು ಅನುಮಾನ ಪ್ರಮಾಣದ ಪ್ರಯೋಗದಿಂದ ಚಮತ್ಕಾರವಾಗಿ ನಿರೂಪಿಸುತ್ತಾರೆ.

**ವಿಮತಂ ನಿಖಿಲಂ ಚ ದೃಶ್ಯಭಾವಾದ್ ಭವಿತಾ ಸತ್ಯಮಿತಿದೃಶಾನುಮಾನೇ ।**
**ಅಧಿಮಧ್ಯಮುಪಾಸ್ಯ ಹೇತ್ವಸಿದ್ಧಿಂ ಪ್ರಥಿಮಾ ಕೋऽಪಿ ಶನೈಶ್ಶನೈರ್ಜಜೃಂಭೇ ॥೩೨॥**

**ತಾತ್ಪರ್ಯ :** ಈ ಪ್ರಪಂಚವು ಸತ್ಯವೆಂದು ಮಿಥ್ಯವೆಂದೂ ವಾದಿಗಳು ಪರಸ್ಪರ ವಿವಾದ ಮಾಡುತ್ತಾರೆ. ಹೀಗೆ ವಿವಾದಕ್ಕೆ ಆಸ್ಪದವಾಗಿರುವ ಈ ಸಮಸ್ತ ಪ್ರಪಂಚವೂ ಸತ್ಯವೇ ಆಗಿರಬೇಕು. ಏಕೆಂದರೆ ಇದು ಕಾಣಿಸುತ್ತಿದೆ, ಜ್ಞಾನಕ್ಕೆ ವಿಷಯವಾಗಿದೆ. ಇದಕ್ಕೆ ದೃಷ್ಟಾಂತ ಘಟ–ಮಡಿಕೆ ಮುಂತಾದ ವಸ್ತು. ಈ ರೀತಿ ಸಾಧನಕ್ರಮಕ್ಕೆ ಶಾಸ್ತ್ರದಲ್ಲಿ ಅನುಮಾನ ಪ್ರಯೋಗ ಎಂದು ಹೆಸರು. "ವಿಮತಂ ಮಿಥ್ಯಾ ದೃಶ್ಯತ್ವಾತ್" ಎಂದು ಸಾಮಾನ್ಯವಾಗಿ ಈ ಅನುಮಾನ ಪ್ರಯೋಗದ ಆಕಾರವು. ಆದರೆ ಸ್ತ್ರೀಯರ ಕಟಿ (ಸೊಂಟದ) ಪ್ರದೇಶವು ಸೂಕ್ಷ್ಮವಾದುದರಿಂದ ಅದೃಶ್ಯವೆಂದು ಕವಿಗಳು ವರ್ಣಿಸುತ್ತಾರೆ. ಕವಿ ಸಮಯ ಪ್ರಸಿದ್ಧಿಯಿಂದ ಕಟಿ ಪ್ರದೇಶವು (ಮಧ್ಯಭಾಗವು) ಅದೃಶ್ಯವಾದುದರಿಂದ ಸಮಸ್ತ ಪ್ರಪಂಚವನ್ನು ಸತ್ಯವೆಂದು ಸಾಧಿಸುವಾಗ, ಆ ಸಮಸ್ತ ಪ್ರಪಂಚದಲ್ಲಿಯೇ ಸೇರಿದ ಕಟಿ ಪ್ರದೇಶವೆಂಬ ಒಂದು ವಸ್ತುವಿನಲ್ಲಿ 'ದೃಶ್ಯತ್ವ' ಕಾಣಿಸುವಿಕೆ ಎಂಬ ಹೇತುವು ಬರಲಿಲ್ಲವಾದುದರಿಂದ ಹೇತುವಿಗೆ ಪ್ರಪಂಚವೆಂಬ ಪಕ್ಷದ ಒಂದು ಭಾಗದಲ್ಲಿ ಅಸಿದ್ಧಿಯು ಬಂದಿತು. ಅಸಿದ್ಧಿ ಎಂದರೆ ಎಲ್ಲಿ ನಾವು ಏನನ್ನಾದರೂ ಸಾಧಿಸಬೇಕಾಗಿದೆಯೋ ಅದರಲ್ಲಿಯೇ ಸಾಧಕವಾದ ವಿಷಯವು ಇಲ್ಲದಿರುವುದು. ಇಲ್ಲಿ ನಾವು ಪ್ರಪಂಚದಲ್ಲಿ ಸತ್ಯತ್ವವನ್ನು ಸಾಧಿಸಬೇಕಾಗಿದೆ. ಅದಕ್ಕೆ ಸಾಧಕವು ದೃಶ್ಯಭಾಗ ಕಾಣಿಸುವಿಕೆ; ಅದು ಪ್ರಪಂಚದ ಏಕದೇಶದಿಂದ ಸೊಂಟದಲ್ಲಿ ಇಲ್ಲವಾದುದರಿಂದ ಹೇತುವಿಗೆ ಪಕ್ಷವಾದ ಪ್ರಪಂಚದ ಏಕದೇಶದಲ್ಲಿ ಒಂದು ಭಾಗದಲ್ಲಿ ಅಸಿದ್ಧಿಯು ಒಂದು ಭಾಗಾಸಿದ್ಧಿ ಎಂಬ ಅನುಮಾನ ದೋಷವು ಬಂದಿತ್ತು. ಆದರೆ ಗರ್ಭಿಣಿಯಾದ ಗೋಪಿಕಾಂಬೆಯ ಸೊಂಟವು ಗರ್ಭಿಣಿಯರ ಸ್ವಭಾವಕ್ಕೆ ಅನುಸಾರವಾಗಿ ವಿಶಾಲವಾಗುತ್ತಾ ಸ್ಥೂಲವಾಗುತ್ತಾ ಬಂದುದರಿಂದ ಹಿಂದೆ ಅದೃಶ್ಯವಾದ ಅದಕ್ಕೆ 'ದೃಶ್ಯಭಾವ' ಬಂದು 'ದೃಶ್ಯತ್ವ' ಹೇತುವು ಅಲ್ಲಿಲ್ಲ ಎಂಬ ಭಾಗಾಸಿದ್ಧಿ ಶಂಕೆಯು ಪರಿಹಾರವಾಯಿತು. ಈ ರೀತಿಯಾಗಿ ಕವಿ ಸಮಯ ಸಿದ್ಧವಾದ ವಿಷಯವನ್ನು ಆಧರಿಸಿ ಶಾಸ್ತ್ರಶೈಲಿಯಿಂದ ಗರ್ಭಿಣಿಯ ದೇಹದಲ್ಲಿ ಉಂಟಾಗುವ ವ್ಯತ್ಯಾಸವನ್ನು ವರ್ಣಿಸಿದ್ದಾರೆ.

**ಅವತಾರಿಕೆ :** ಪೂರ್ವತಂತ್ರ (ಮೀಮಾಂಸಾ) ನ್ಯಾಯದಿಂದ ಕಟಿ (ಸೊಂಟ) ಪ್ರದೇಶದಲ್ಲಿದ್ದ ಅದೃಶ್ಯವು ತ್ರಿವಳಿಯನ್ನು ಸೇರಿಕೊಂಡಿತು ಎಂದು ತಿಳಿಸುತ್ತಾರೆ.

**ಉದರೇ ಸುತನೋರಚಾಕ್ಷುಷತ್ವಂ ಶುಭರೂಪೇ ಮಹತಿ ಪ್ರವೇಶಹೀನಮ್ ।**
**ವಿಹಿತಂ ತ್ರಿವಲಾವಿವೈತದಂಗೇ ಪಶುಯೂಪೇ ಯದರತ್ನಿ ಸಾಪ್ತದಶ್ಯಮ್ ॥೩೩॥**

**ತಾತ್ಪರ್ಯ :** ವಾಜಪೇಯವೆಂಬ ಒಂದು ಯಾಗವಿದೆ. ಆ ಯಾಗಕ್ಕೆ ಹದಿನೇಳು ಅರತ್ನಿ ಪ್ರಮಾಣದ (ಕಿರು ಬೆರಳು ಮಾತ್ರ ಬಿಡಿಸಿರುವ ಮೊಳ) ಪ್ರಮಾಣದ ಯೂಪಸ್ತಂಭ ಬೇಕೆಂದು ಹೇಳಿದ್ದಾರೆ (ಸಪ್ತದಶಾರತ್ನಿ ವಾಜಪೇಯಸ್ಯಯೂಪೋ ಭವತಿ) ಆದರೆ ವಾಜಪೇಯ ಯಾಗದಲ್ಲಿ ಯೂಪವೇ ಇಲ್ಲದ್ದರಿಂದ ಆ ವಾಕ್ಯದಲ್ಲಿ ಹೇಳಿದ ವಿಷಯವು ಸರಿಹೋಗುವುದಿಲ್ಲ. ವೇದ ವಾಕ್ಯಕ್ಕೆ ಅಪ್ರಾಮಾಣ್ಯವನ್ನು ಹೇಳಬಾರದು. ಯಾವ ರೀತಿಯಿಂದಲಾದರೂ ಪ್ರಾಮಾಣ್ಯವನ್ನು ಹೇಳಲೇಬೇಕು. ಅದಕ್ಕಾಗಿ 'ವಾಜಪೇಯದ ಯೂಪ' ಎಂದರೆ ವಾಜಪೇಯ ಯಾಗದ

ಅಂಗವಾದ ಪಶುಯಾಗದ ಯೂಪ ಎಂದು ಅರ್ಥ. ಅಥವಾ ಎತ್ತರವಾದ ಯೂಪದಂತಿರುವ ಒಂದು ಜಾತಿಯ ಮರವನ್ನು (ಕಟ್ಟಿಗೆಯನ್ನು) ವಾಜಪೇಯ ಯಾಗದಲ್ಲಿ ಸಂಪಾದಿಸಬೇಕು, ಎಂದಾಗಲೀ ಅರ್ಥ ಮಾಡಿಕೊಂಡು "ವಾಜಪೇಯ ಯಾಗದ ಯೂಪಸ್ತಂಭವು ಹದಿನೇಳು ಅರತ್ನಿ ಪ್ರಮಾಣವಿರಬೇಕು" ಎಂಬ ಅರ್ಥವುಳ್ಳ "ಸಪ್ತದಶಾರತ್ನಿಃ ವಾಜಪೇಯಸ್ಯಯೂಪೋಭವತಿ" ಎಂಬ ವಾಕ್ಯಕ್ಕೆ ಪ್ರಾಮಾಣ್ಯವನ್ನು ಹೇಳುತ್ತಾರೆ. ಮೀಮಾಂಸಾ ಶಾಸ್ತ್ರದಲ್ಲಿ ಇದನ್ನು ಅಂಗಾವತಾರನ್ಯಾಯ ಎನ್ನುತ್ತಾರೆ. ಪ್ರಕೃತದಲ್ಲಿ ಹೀಗೆ ಇದನ್ನು ಅನ್ವಯಿಸಿಕೊಳ್ಳಬೇಕು. ಗೋಪಿಕಾಂಬೆಯ ಕಟಿ ಪ್ರದೇಶವು ಮೊದಲು ಅತ್ಯಂತ ಕೃಶವಾಗಿದ್ದು, ಅದೃಶ್ಯವಾಗಿತ್ತು. ಕಣ್ಣಿಗೆ ಕಾಣದಷ್ಟು ಸೂಕ್ಷ್ಮವಾಗಿತ್ತು. ಗರ್ಭಿಣಿಯಾದಾಗ ಅಲ್ಲಿ ವಿಶಾಲತೆಯೂ, ಮಹತ್ತ್ವವೂ ಬಂದು ಅದು ದೃಶ್ಯವಾಯಿತು. ಸ್ತ್ರೀಯರ ಕಟಿಪ್ರದೇಶವು ಆಕಾಶದಂತೆ ಅದೃಶ್ಯವಾಗಿರುತ್ತದೆ, ಅಷ್ಟೊಂದು ಕೃಶವಾಗಿರುತ್ತದೆ ಎಂಬ ಕವಿಸಮಯ ಪ್ರಸಿದ್ಧಿಯನ್ನು ಯಾವ ರೀತಿ ಕೂಡಿಸಬೇಕು ಎಂಬ ವಿಚಾರ ಬಂದಾಗ ಕವಿಗಳು ಹೀಗೆ ಹೇಳುತ್ತಾರೆ. ವಾಜಪೇಯ ಯಾಗಕ್ಕೆ ಯೂಪವಿಲ್ಲದಿದ್ದರಿಂದ ಆ ಯಾಗಕ್ಕೆ ಹೇಳುವ ಯೂಪವು ಅದರ ಅಂಗವಾದ ಪಶುಯಾಗಕ್ಕೆ ಸೇರುವಂತೆ ಕಟಿ ಪ್ರದೇಶಕ್ಕೆ ಹೇಳಿದ ಸೂಕ್ಷ್ಮತ್ವವು ಅದಕ್ಕೆ ಕೂಡದೇ ಇರುವುದರಿಂದ, ಉದರದಲ್ಲಿದ್ದ ತ್ರಿವಳಿಯನ್ನು ಸೇರಿತು ಅಂದರೆ ಗರ್ಭಿಣಿಯರ ಉದರವು ವಿಶಾಲವಾದಾಗ ಆ ಮೂರು ರೇಖೆಗಳು ಮಾಯವಾಗುತ್ತವೆ, ಇಲ್ಲಿಯೂ ಹಾಗೆಯೇ ಆಯಿತು. ಅದೃಶ್ಯತ್ವವು ಸೊಂಟದಿಂದ ತ್ರಿವಳಿಯನ್ನು ಸೇರಿಕೊಂಡಿತು, ಎಂದು ಕವಿಗಳು ಮೀಮಾಂಸಾ ನ್ಯಾಯವನ್ನಿಟ್ಟುಕೊಂಡು ವರ್ಣಿಸಿದ್ದಾರೆ. ಮಹತ್ವ ಮತ್ತು ರೂಪಗಳಿದ್ದರೆ ವಸ್ತುವು ದೃಶ್ಯವಾಗುತ್ತವೆ. ಹಾಗೆಯೇ ಮಹತ್ವ ಮತ್ತು ಉತ್ತಮ ರೂಪದಿಂದ ಕೂಡಿದ ಗರ್ಭಿಣಿಯ ಉದರವು ಕಣ್ಣಿಗೆ ಗೋಚರವಾಯಿತು. ಕವಿ ಸಂಪ್ರದಾಯ ಸಿದ್ಧವಾದ "ಕಣ್ಣಿಗೆ ಕಾಣದಿರುವಿಕೆಯ" ಉದರದ ಅಂಗವಾದ ತ್ರಿವಳಿಯನ್ನು ಸೇರಿತು, ಅದು ಅದೃಶ್ಯವಾಯಿತು ಎಂದು ಚಮತ್ಕಾರವಾಗಿ ಕವಿಗಳು ಗರ್ಭಿಣಿಯರ ಸ್ವಭಾವವನ್ನು ವರ್ಣಿಸಿದ್ದಾರೆ.

**ಅವತಾರಿಕೆ :** ಗರ್ಭಿಣಿಯಾದ ಗೋಪಿಕಾಂಬೆಯು ಗರ್ಭಿಣಿಯರ ಸ್ವಭಾವಕ್ಕೆ ಅನುಗುಣವಾಗಿ ಮಣ್ಣನ್ನು ತಿಂದಳು. ಅದನ್ನು ಕವಿಗಳು ವಿವರಿಸುತ್ತಾರೆ.

**ಉದರಸ್ಥಶಿಶೋರುದೇಷ್ಯತಃ ಸ್ಯಾದ್ವಸನೇ ಲೋಹಿತಮೃತ್ತಿಕಾಽನುರಾಗಃ ।**
**ಇತಿ ತದ್ಘಟನಾಯ ಕಿಂನು ಶೋಣಾಂ ಮೃದಮಾಸೇವತ ಸಾದರಂ ಮೃಗಾಕ್ಷೀ ॥೩೪॥**

**ತಾತ್ಪರ್ಯ :** ಗೋಪಿಕಾಂಬೆಯ ಉದರದಲ್ಲಿ ಬೆಳೆಯುತ್ತಿರುವ ಶಿಶುವು ಹುಟ್ಟಿ ಬೆಳೆದ ನಂತರ ನಿಶ್ಚಯವಾಗಿಯೂ ಸನ್ಯಾಸವನ್ನು ಸ್ವೀಕರಿಸಿ ಕೆಂಪಾದ ಮಣ್ಣಿನ ಬಣ್ಣದ ಕಾವಿ ಬಟ್ಟೆಯನ್ನು ಉಡುತ್ತದೆ. ಈಗ ಕೆಂಪಾದ ಮಣ್ಣನ್ನು ತಿಂದರೆ ಅದರಿಂದಾಗಿ ಮುಂದೆ ಕೆಂಪು ಬಣ್ಣವು ಬಟ್ಟೆಯಲ್ಲಿ ಸೇರಿಕೊಳ್ಳಬಹುದು ಎಂಬ ಆಸೆಯಿಂದ, ಗರ್ಭಿಣಿಯಾದ ಗೋಪಿಕಾಂಬೆಯು ಬಹಳ ಪ್ರೀತಿಯಿಂದ ಮಣ್ಣನ್ನು ಸೇವಿಸಿದಳೇನು ಎಂದು ಉತ್ಪ್ರೇಕ್ಷಿಸಿದ್ದಾರೆ. ಗರ್ಭಿಣಿಯರು

ಬಯಕೆಯಿಂದ ಮಣ್ಣನ್ನು ತಿನ್ನುವುದನ್ನು ಈ ರೀತಿಯಾಗಿ ಕವಿಗಳು ವರ್ಣಿಸಿದ್ದಾರೆ. ಇಲ್ಲಿ ಉತ್ಪ್ರೇಕ್ಷಾಲಂಕಾರವು ಇದೆ.

**ಅವತಾರಿಕೆ :** ತ್ರಿವಳಿಯು ಮಾಯವಾದರೂ ರೋಮಾವಲಿಯು ಸ್ಪಷ್ಟವಾಗಿ ಕಾಣಿಸುತ್ತಿತ್ತು ಎಂದು ವರ್ಣಿಸುತ್ತಾರೆ.

**ದ್ಯುನದೀಂ ಯಮುನಾ ವಿಜೇತುಕಾಮಾ ಕುರಲಾಲಿಚ್ಛಲತೋ ನು ಕೋಮಲಾಂಗ್ಯಾಃ ।**
**ಕುಚಮೇರುಯುಗಾನ್ನಿಪಾತ್ಯ ರೋಮಾವಲಿದಂಭಾದಗಮಚ್ಚ ಮಧ್ಯದೇಶಮ್ ॥೩೫॥**

**ತಾತ್ಪರ್ಯ :** ಗಂಗೆಯು ಮೇರು ಪರ್ವತದಿಂದ ಕೆಳಕ್ಕೆ ಹರಿದು (ಜಂಬೂದ್ವೀಪದ) ಮಧ್ಯದೇಶವಾದ ಭರತಖಂಡಕ್ಕೆ ಬಂದಳು. ಹಾಗೆಯೇ ಗಂಗೆಯನ್ನು ಜಯಿಸುವ ಅಪೇಕ್ಷೆಯಿಂದ ಯಮುನೆಯೂ ಕೂಡಾ ಕೋಮಲಾಂಗಿಯಾದ ಗೋಪಿಕಾಂಬೆಯ ಗುಂಗುರು ಕೂದಲುಗಳ ನೆಪದಿಂದ ಕೆಳಕ್ಕೆ (ಸ್ವರ್ಗದಿಂದ ಬಂದಂತೆ) ಬಂದು ಸ್ತನ ಯುಗಳಗಳೆಂಬ ಎರಡು ಮೇರು ಪರ್ವತಗಳಿಂದ ಕೆಳಕ್ಕೆ ಭೂಮಿಗಿಳಿದು ರೋಮಗಳ ಸಾಲುಗಳೆಂಬ ನೆಪದಿಂದ ಹರಿಯುತ್ತಾ ಗಂಗೆಯು ಜಂಬೂದ್ವೀಪದ ಮಧ್ಯದಲ್ಲಿ ಹರಿಯುವಂತೆ ತಾನೂ ಉದರ ಮಧ್ಯಪ್ರದೇಶದಲ್ಲಿ ಹರಿದು ನಾಭಿಯೆಂಬ ಸ್ಥಳವನ್ನು ಸೇರಿತೋ ಎಂಬಂತೆ ಕಾಣಿಸುತ್ತಿತ್ತು. (ಗಂಗೆಯು ಒಂದು ಮೇರು ಪರ್ವತದಿಂದ ಕೆಳಕ್ಕೆ ಹರಿದರೆ ಈ ಯಮುನೆಯು ಸ್ತನಯುಗಳವೆಂಬ ಎರಡು ಮೇರು ಪರ್ವತದಿಂದ ಕೆಳಕ್ಕೆ ಹರಿದಿದ್ದಾಳೆ ಎಂಬ ಅತಿಶಯವೂ ಇಲ್ಲಿ ಸೂಚಿತವಾಗುತ್ತಿದೆ.) ಇಲ್ಲಿಯೂ ಉತ್ಪ್ರೇಕ್ಷಾಲಂಕಾರವಿದೆ.

**ಅವತಾರಿಕೆ :** ಚೊಚ್ಚಲು ಗರ್ಭಿಣಿಯರಿಗೆ ಆಗುವಂತೆ ಈಗಲೂ ಗೋಪಿಕಾಂಬೆಗೆ ಅನೇಕ ಬಯಕೆಗಳು ಉಂಟಾಯಿತೆಂದು ಹೇಳುತ್ತಾರೆ.

**ವಸುಧಾಸುರವಾಸವಸ್ಯ ಗರ್ಭೇ ಕೃತವಾಸಸ್ಯ ನತಭ್ರುವೋಽರ್ಭಕಸ್ಯ ।**
**ಅಜನಿಷ್ಟ ಮನೋರಥೋಽನುರೂಪಃ ಕ್ರಮಶಃ ಪ್ರಾಪ್ತವತಿ ದ್ವಿತೀಯಮಾಸೇ ॥೩೬॥**

**ತಾತ್ಪರ್ಯ :** (ಬಾಲಬೋಧಿನಿ) ಗೋಪಿಕಾಂಬೆಯ ಗರ್ಭದಲ್ಲಿ ಮಹಾಪುರುಷನಾದ ಬ್ರಾಹ್ಮಣಶ್ರೇಷ್ಠನು ಶಿಶುರೂಪದಿಂದ ವಾಸ ಮಾಡಲಾರಂಭಿಸಿದನು. ಆ ಮಗುವಿಗೆ ಕ್ರಮವಾಗಿ ಎರಡನೆಯ ತಿಂಗಳು ಪ್ರಾಪ್ತವಾದಾಗ ಸುಂದರಾಂಗಿಯಾದ ಗೋಪಿಕಾಂಬೆಗೆ ತತ್ಕಾಲಕ್ಕೆ ಯೋಗ್ಯವಾದ ಬಯಕೆಗಳು ಉಂಟಾದವು.

**ತಾತ್ಪರ್ಯ :** (ಗುರುಸೇವಾ) ಗರ್ಭದಲ್ಲಿರುವ ಶಿಶುವಿಗೆ ಎರಡನೆಯ ತಿಂಗಳು ಪ್ರಾಪ್ತವಾಯಿತು. ಈಗ ಬ್ರಾಹ್ಮಣ ಶ್ರೇಷ್ಠರಾದ ತಿಮ್ಮಣ್ಣಾಚಾರ್ಯರಿಗೆ ನನಗೆ ಗಂಡು ಮಗನು ಹುಟ್ಟಬೇಕು ಎಂಬ ಅಭಿಲಾಷೆಯು ಅಂಕುರಿಸಿತು. ಎರಡನೆಯ ತಿಂಗಳಿನಲ್ಲಿ ಗರ್ಭವು

ನಿಶ್ಚಯವಾಗುವುದರಿಂದ ತಿಮ್ಮಣ್ಣಾಚಾರ್ಯರ ಈ ಅಭಿಲಾಷೆಯೂ ಯುಕ್ತವೇ ಆಗಿದೆ ಮತ್ತು ಅದು ದೈವಾನುಗ್ರಹದಿಂದ ಸಫಲವೂ ಆಯಿತು. ತಿಮ್ಮಣ್ಣಾಚಾರ್ಯರ ಪತ್ನಿಯಾದ ಗೋಪಿಕಾಂಬೆಗೆ ಬೇರೆ ಬೇರೆ ಪದಾರ್ಥಗಳಲ್ಲಿ ಗರ್ಭಿಣಿಯರಿಗೆ ತಕ್ಕಂತೆ ಆಸೆಗಳು ಉಂಟಾದವು. ಗರ್ಭದಲ್ಲಿರುವ ಶಿಶುವಿಗೆ ಶುಕ್ಲ ಶೋಣಿತಗಳ ಮೇಲನದಿಂದ ಉಂಟಾಗುವ ದೇಹವೆಂಬ ರಥವು ಉಂಟಾಯಿತು. ಈ ರೀತಿಯಾಗಿ ಮೂವರಿಗೂ ಅವರವರಿಗೆ ಅನುಕೂಲವಾದ ಮನೋರಥ ಮನಸ್ಸು ಮತ್ತು ರಥ ಎಲ್ಲವೂ ಉಂಟಾದವು. (ಈ ವ್ಯಾಖ್ಯಾನ ಪಕ್ಷದಲ್ಲಿ ಮನೋರಥ ಎಂದು ಒಂದೇ ಪದ, ಮನಸ್ಸು ರಥ ಎಂದು ಎರಡು ಪದಗಳನ್ನು ಇಟ್ಟುಕೊಳ್ಳಬೇಕು.)

**ಅವತಾರಿಕೆ :** ಗರ್ಭಿಣೀ ಸ್ತ್ರೀಯರ ಶೃಂಗಾರ ರಸಾತ್ಮಕವಾದ ಇಚ್ಛೆಗಳನ್ನು ವರ್ಣಿಸುತ್ತಾರೆ.

**ಭವನೇ ಭುವನಂ ಕೃಶಾನುತಪ್ತಂ ಪರಿಕ್ಲೃಪ್ತಂ ನವಶಾತಕುಂಭಕುಂಭೈಃ ।**
**ಅಪಹಾಯ ನದೀಪಯೋ ಹಿಮಾನೀಧವಲಂ ಕೇವಲಮೈಚ್ಛದಚ್ಛಬುದ್ಧಿಃ ॥೩೭॥**

**ತಾತ್ಪರ್ಯ :** ನಿರ್ಮಲವಾದ ಮನಸ್ಸುಳ್ಳ ಗೋಪಿಕಾಂಬೆಯು ಮನೆಯಲ್ಲಿ ಹೊಸ ಚಿನ್ನದ ಕೊಡದಲ್ಲಿ ತುಂಬಿಟ್ಟ ಚೆನ್ನಾಗಿ ಕಾಯಿಸಿದ ಹದವಾದ ಬಿಸಿನೀರನ್ನು ಕುಡಿಯಲು ಬಯಸಲಿಲ್ಲ. ಮಂಜುಗಡ್ಡೆ ಕರಗಿ ಬಂದಿರುವ ಮಂಜುಗಡ್ಡೆಯಂತೆ ಬೆಳ್ಳಗಿರುವ ನದಿಯ ತಂಪಾದ ನೀರನ್ನೇ ಕುಡಿಯಲು ಬಯಸಿದಳು. ಗರ್ಭಿಣಿಯರ ಬಯಕೆಯ ಸ್ವಭಾವದಂತೆ ಅವಳಿಗೆ ತಂಪಾದ ನದಿಯ ನೀರನ್ನು ಕುಡಿಯಬೇಕೆಂಬ ಬಯಕೆಯೇ ಉಂಟಾಯಿತು ಎಂದು ಭಾವ.

**ಅವತಾರಿಕೆ :** ಗರ್ಭಿಣಿಗೆ ಉಂಟಾಗುವ ಅಪರೂಪವಾದ ಬೇರೊಂದು ಬಯಕೆಯನ್ನು ವರ್ಣಿಸುತ್ತಾರೆ.

**ರಸನಾನಯನಾಂತರಂಗಗಮ್ಯಂ (ರಮ್ಯಂ)**
**ಸದನೇ (ಭವನೇ) ಭೋಜನಸಾಧನಂ ವಿಸೃಜ್ಯ ।**
**ಪರಕೀಯಗೃಹಾದುಪಾಹೃತಂ ತದ್‌ರುಚಿರಂ ವಾಽರುಚಿ ವಾಽಪ್ಯಭುಂಕ್ತ ಸೈಷಾ ॥೩೮॥**

**ತಾತ್ಪರ್ಯ :** ಗರ್ಭಿಣಿಯಾದ ಗೋಪಿಕಾಂಬೆಯು ವಿಚಿತ್ರವಾದ ಬಯಕೆಯನ್ನು ಪ್ರಕಟಪಡಿಸುತ್ತಿದ್ದಳು. ನಾಲಿಗೆಗೆ ರುಚಿಯಾದ, ಕಣ್ಣಿಗೆ ಮನೋಹರವಾದ ಮನಸ್ಸಿಗೆ ಒಗ್ಗುವ ಒಳ್ಳೆಯ ಭೋಜನ ಸಾಧನವಾದ ತರಕಾರಿ ಪಲ್ಯ ಮುಂತಾದ್ದನ್ನು ಮನೆಯಲ್ಲಿ ಮಾಡಿದ್ದರೂ ಅವಳು ಅವುಗಳನ್ನು ಊಟಮಾಡಲು ಇಷ್ಟಪಡುತ್ತಿರಲಿಲ್ಲ. ಇನ್ನೊಬ್ಬರ ಮನೆಯಿಂದ ತಂದ ತರಕಾರಿ ಹುಳಿ ಪಲ್ಯ ಮುಂತಾದವು ರುಚಿಯಾಗಿರಲಿ ಇಲ್ಲದಿರಲಿ ಅವುಗಳನ್ನೇ ಹಿತವಾಗಿರುವಂತೆ ಚೆನ್ನಾಗಿರುವಂತೆ ಊಟಮಾಡುತ್ತಿದ್ದಳು. (ಸನ್ನ್ಯಾಸಿಗಳಿಗೆ ಇನ್ನೊಬ್ಬರ ಮನೆಯಿಂದ ತಂದ ಭಿಕ್ಷಾನ್ನವೇ ವಿಹಿತವಾಗಿದೆ. ಉದರದಲ್ಲಿರುವ ಶಿಶುವು ಮುಂದೆ ಸನ್ನ್ಯಾಸಿಯಾಗಲಿರುವನು

ಎಂಬ ಸೂಚನೆಯೋ ಎಂಬಂತೆ ಗರ್ಭಿಣಿಯಾದ ಗೋಪಿಕಾಂಬೆಯೂ ಇನ್ನೊಬ್ಬರ ಮನೆಯಿಂದ ತಂದ ಆಹಾರ ವಸ್ತುಗಳಲ್ಲಿ ಆಸೆಯುಳ್ಳವಳಾಗಿದ್ದಳು ಎಂಬ ಅಭಿಪ್ರಾಯವು ತಿಳಿದು ಬರುತ್ತದೆ.)

**ಅವತಾರಿಕೆ** : ಗರ್ಭಿಣಿಯಾದ ಗೋಪಿಕಾಂಬೆಯು ತನ್ನ ಆಲಸ್ಯ ಪರಿಹಾರಕ್ಕಾಗಿ ಏರ್ಪಡಿಸಿಕೊಂಡ ಕಾಲಕ್ಷೇಪದ ಕ್ರಮವನ್ನು ತಿಳಿಸುತ್ತಾರೆ.

**ವಿದುಷೀ ವಿವಿಧಾಃ ಕಥಾ ವಿತೇನೇ ವಿಹಗಾಧೀಶ್ವರವಾಹನಾಹ್ವಯಾಂಕಾಃ ।**
**ವದತಿ ಸ್ಮ ವದಾವದಾಽಬಲಾನಾಂ ವಸತಿ ಸ್ಮಾಸನ ಏವ ಸಂತತಂ ಸಾ ॥೩೯॥**

**ತಾತ್ಪರ್ಯ** : ಗೋಪಿಕಾಂಬೆಯು ಬಾಲ್ಯದಲ್ಲಿಯೇ ಅಕ್ಷರಾಭ್ಯಾಸ ಮಾಡಿ ಕಾವ್ಯಾದಿಗಳನ್ನು ಅಭ್ಯಾಸ ಮಾಡಿ ಪಂಡಿತಳಾಗಿದ್ದಳು. ಗರ್ಭಿಣಿಯಾದ ಅವಳು ಸೋಮಾರಿತನ ಮಾಡದೇ ಒಳ್ಳೆಯ ರೀತಿಯಲ್ಲಿ ಕಾಲ ಕಳೆಯುತ್ತಿದ್ದಳು. ಗರುಡವಾಹನ (ವಿಠಲ) ಎಂಬ ಅಂಕಿತದಲ್ಲಿ ಒಳ್ಳೊಳ್ಳೆಯ ಪದ ಪದ್ಯ ಗೀತ ಪರಮಾತ್ಮನ ಕಥೆಗಳನ್ನು ತಾನೇ ರಚಿಸಿ ಸುಸ್ವರದಿಂದ ಹಾಡುತ್ತಿದ್ದಳು. ಬಹಳ ಚೆನ್ನಾಗಿ ಮಾತನಾಡಬಲ್ಲ ಅವಳು ತಾನು ರಚಿಸಿದ ಕಥೆಗಳನ್ನು ತನ್ನ ಗೆಳತಿಯರಿಗೆ ಹೇಳುತ್ತಿದ್ದಳು. ಗರ್ಭಭಾರದ ಆಲಸತನದಿಂದ ಹೆಚ್ಚು ತಿರುಗಾಡಲಾರದೇ ಬಟ್ಟೆ ಚಾಪೆಗಳ ಆಸನದಲ್ಲಿ ಹೆಚ್ಚಾಗಿ ಕುಳಿತುಕೊಂಡೆ ಇದ್ದು ಪರಮಾತ್ಮನ ನಾಮ ಸಂಕೀರ್ತನ ರೂಪವಾದ ಕಥೆಗಳನ್ನೆ ಹೆಂಗಸರಿಗೆ ಹೇಳುತ್ತಿದ್ದಳು.

**ಅವತಾರಿಕೆ** : ಗೋಪಿಕಾಂಬೆಯ ಮತ್ತೊಂದು ಬಯಕೆಯನ್ನು ಹೇಳುತ್ತಾರೆ.

**ಪದಮೇಕಮಲಕ್ತಕೇನ ಹೀನಂ (ಗು.ಸೇ. ಪಾಠ ಪದಮೇಕಮಲಕ್ತಕೈರ್ನಹೀನಂ)**
**ಪದಮೇಷಾ ವಿದಧಾತಿ ನಾಂಗಣೇಷು ।**
**ವಿವಿಧಾನಿ ವಿಸೃಜ್ಯ ಪೂರ್ವಸಂಧ್ಯಾಸಮರಾಗಾಣಿ ಸದಾಂಬರಾಣಿ ವಷ್ಟಿ ॥೪೦॥**

**ತಾತ್ಪರ್ಯ** : ಗೋಪಿಕಾಂಬೆಯು ಅರಗಿನ ರಸ ಹಚ್ಚಿಕೊಳ್ಳದೇ ಒಂದು ಹೆಜ್ಜೆಯನ್ನು ಅಂಗಳದಲ್ಲಿ ಇಡುತ್ತಿರಲಿಲ್ಲ. (ಗು.ಸೇ. ಅರಗಿನ ರಸ ಹಚ್ಚಿಕೊಂಡಿದ್ದರೂ ಅಂಗಳದಲ್ಲಿ ಒಂದು ಹೆಜ್ಜೆ ಇಡುವಷ್ಟು ಸ್ಥಳದಲ್ಲಿಯೂ ಸುಮ್ಮನೆ ಓಡಾಡುತ್ತಿರಲಿಲ್ಲ. ಕುಳಿತು ಕೊಂಡೇ ಇರುತ್ತಿದ್ದಳು). ಕಪ್ಪು, ನೀಲಿ, ಹಳದಿ, ಬಿಳಿ ಮುಂತಾದ ಬೇರೆ ಬಣ್ಣದ ಹಿಂದೆ ಉಟ್ಟುಕೊಳ್ಳುತ್ತಿದ್ದ ಸೀರೆಗಳನ್ನು ಬಿಟ್ಟು ಉದಯರಾಗದ ಬಣ್ಣದ ಪ್ರಾತಃಕಾಲದ ನಸುಗೆಂಪು ಬಣ್ಣದ ಅರುಣೋದಯ ಸೀರೆಗಳನ್ನೇ ಬಯಸುತ್ತಿದ್ದಳು. (ಕಾಷಾಯ ವಸ್ತ್ರ ಧರಿಸುವ ಮಹಾಪುರುಷನೇ ಮುಂದೆ ಹುಟ್ಟುತ್ತಾನೆ ಎಂಬುದಕ್ಕೆ ಸೂಚಕವಾಗಿ ಗೋಪಿಕಾಂಬೆಯು ಕಾವಿಯ ಬಣ್ಣದಂತಿರುವ ಅರಗಿನ ರಸವನ್ನು ಹಚ್ಚಿಕೊಂಡು ಅಂಗಳದಲ್ಲಿ ಸ್ವಲ್ಪ ಓಡಾಡುತ್ತಿದ್ದಳು. (ಗು.ಸೇ. ಅಥವಾ ಅರಗಿನ ರಸವನ್ನು ಹಚ್ಚಿಕೊಂಡರೂ ಗರ್ಭಭಾರದಿಂದ ಓಡಾಡದೇ ಕುಳಿತಲ್ಲಿಯೇ ಇರುತ್ತಿದ್ದಳು. ಇದರಿಂದಲೂ ಮುಂದೆ ಅರಗಿನ ಬಣ್ಣದ ಕಾಷಾಯ ವಸ್ತ್ರವನ್ನುಟ್ಟು ದೃಢಾಸನದಲ್ಲಿ ಕುಳಿತುಕೊಳ್ಳುವ

ಮಹಾಪುರುಷನು ಜನಿಸುವನು ಎಂದು ಸೂಚಿಸುತ್ತಿದ್ದಳು.) ಹಿಂದೆ ನೀಲಿ ಕಪ್ಪು ಹಳದಿ ಬಿಳಿ ಮುಂತಾದ ನಾನಾ ಬಣ್ಣದ ಬಟ್ಟೆಗಳನ್ನು ಉಡುತ್ತಿದ್ದಳು. ಈಗ ಅವುಗಳನ್ನೆಲ್ಲಾ ಬಿಟ್ಟು ಪೂರ್ವಸಂಧ್ಯೆಯ ಅರುಣೋದಯಕಾಲದ ಬಣ್ಣದ ಸೀರೆಯನ್ನು ಉಡಲು ಬಯಸುತ್ತಿದ್ದಳು. ಇದರಿಂದಲೂ ಮುಂದೆ ಹುಟ್ಟಲಿರುವ ಬಾಲಕನು ಕಾಷಾಯ ವಸ್ತ್ರಧಾರಿಯಾದ ಸನ್ನ್ಯಾಸಿಯಾಗುವನು ಎಂಬುದು ಸೂಚಿತವಾಗುತ್ತಿತ್ತು.

**ಅವತಾರಿಕೆ :** ತಿಮ್ಮಣ್ಣಾಚಾರ್ಯರು ಷೋಡಷ (16) ಸಂಸ್ಕಾರಗಳಲ್ಲಿ ಸೇರಿದ ಪುಂಸವನ ಎಂಬ ಸಂಸ್ಕಾರವನ್ನು ಮಾಡಿಕೊಂಡರೆಂದು ವರ್ಣಿಸುತ್ತಾರೆ.

**ಸ ಕದಾಚನ ಶೋಭನೇऽಹ್ನಿ ಸೂನೋಃ ವಿದಧೇ ಪುಂಸವನಚ್ಛಲೇನ ಭುಕ್ತಿಮ್ ।**
**ಪಟಪಕ್ವಫಲೇನ ಗರ್ಭಭಾಜೋऽಜನಿ ಶಿಷ್ಟೋऽಸ್ಯ ಭವೇದಿತೀವ ಧರ್ಮಃ ॥೪೧॥**

**ತಾತ್ಪರ್ಯ :** ತಿಮ್ಮಣ್ಣಾಚಾರ್ಯರು ಒಂದು ಶುಭ ದಿನದಲ್ಲಿ, ಶುಭ ಲಗ್ನದಲ್ಲಿ ಪುಂಸವನ ಸಂಸ್ಕಾರವನ್ನು ಮಾಡಿಕೊಂಡರು. ಆ ಸಂಸ್ಕಾರದಲ್ಲಿ ಅಶ್ವಗಂಧಿಯ ಫಲವನ್ನು ಬಟ್ಟೆಯಲ್ಲಿ ಕಟ್ಟಿ ಅದರ ರಸವನ್ನು ಗರ್ಭಿಣಿಯ ಮೂಗಿನ ರಂಧ್ರದಲ್ಲಿ ಸುರಿಯುವ ಶಾಸ್ತ್ರೋಕ್ತವಾದ ಕಾರ್ಯವನ್ನು ಮಾಡಿದರು. ಈ ನೆಪದಿಂದ ಗರ್ಭದಲ್ಲಿರುವ ಮಗುವಿಗೆ, ಒಳ್ಳೆಯ ಊಟ ಅದರಿಂದ ತೃಪ್ತಿ ಮತ್ತು ಸುಖವು ಉಂಟಾಯಿತು. ಈ ಮಗುವಿಗೆ ಪುಂಸವನ ಎಂಬ ಕಾರ್ಯವನ್ನು ಮಾಡಿದರೆ ಮಾತ್ರವೇ ಮುಂದೆ ಅನುಸರಿಸಬೇಕಾದ ಧರ್ಮವನ್ನು ಸೂಚಿಸಿದಂತೆ ಆಗುತ್ತದೆ. ಏಕೆಂದರೆ ವೇದ ಶಾಸ್ತ್ರಗಳಲ್ಲಿ ಸನ್ನ್ಯಾಸಿಗಳಿಗೆ ಹೇಳಿದ ಧರ್ಮದ ಉಪದೇಶ ರೂಪವಾದ ಆಚಾರಕ್ಕೆ ಈ ಸಂಸ್ಕಾರವು ಸೂಚಕವಾಗಿದೆ. ಬಟ್ಟೆಯ ಜೋಳಿಗೆಯಲ್ಲಿ ಭಿಕ್ಷಾಟನ ಮಾಡಿ ತಂದಿರುವ ಅನ್ನದಿಂದ ಸನ್ನ್ಯಾಸಾನಂತರದಲ್ಲಿ ಇವನು ತೃಪ್ತಿ ಪಡಬೇಕಾಗಿದೆ ಎಂಬ ಧರ್ಮವನ್ನು ಈ ಶಾಸ್ತ್ರ ವಿಧಾನದಿಂದ ಸೂಚಿಸಿದಂತೆ ಆಯಿತು ಎಂದು ಅಭಿಪ್ರಾಯ.

**ಅವತಾರಿಕೆ :** ಸದೃಷ್ಟಾಂತವಾಗಿ ಕುಮಾರನ ಜನನ (ಉತ್ಪತ್ತಿಯನ್ನು) ವನ್ನು ವರ್ಣಿಸುತ್ತಾರೆ.

**ಅಸವಿಷ್ಟ ಸುತಂ ದ್ವಿಜೇಂದ್ರಪತ್ನೀ ಶುಭಲಗ್ನೇ ಪರಿಪೂರ್ವದೃಷ್ಟಿಭಾಜಿ ।**
**ಅಖಿಲದ್ವಿಜರಾಜವಂದನೀಯಂ ದ್ವಿಜರಾಜಂ ದಿಗಿವಾಮರಾಧಿಪಸ್ಯ ॥೪೨॥**

**ತಾತ್ಪರ್ಯ :** ಶುಭ ಗ್ರಹ (ಅಥವಾ ಪೂರ್ಣಚಂದ್ರ ಮತ್ತು ಗುರುಗ್ರಹಗಳ) ಸಂಪೂರ್ಣ ದೃಷ್ಟಿಯಿಂದ ಮಂಗಳಕರವಾದ ಒಂದು ಲಗ್ನದಲ್ಲಿ ಈ ಗೋಪಿಕಾಂಬಾದೇವಿಯು ಎಲ್ಲ ಬ್ರಾಹ್ಮಣ ಶ್ರೇಷ್ಠರ ನಮಸ್ಕಾರ ಮತ್ತು ಸ್ತೋತ್ರಕ್ಕೆ ಅರ್ಹನಾದ ಒಬ್ಬ ಶ್ರೇಷ್ಠನಾದ ಪುತ್ರನನ್ನು, ಪೂರ್ವದಿಕ್ಕು ಚಂದ್ರನನ್ನು ಪ್ರಸವಿಸುವಂತೆ, ಪ್ರಸವಿಸಿದಳು (ಹಡೆದಳು.)

**ಅವತಾರಿಕೆ :** ಪುತ್ರೋತ್ಪತ್ತಿಯ ವಾರ್ತೆಯನ್ನು ಕೇಳಿ ತಿಮ್ಮಣ್ಣಾಚಾರ್ಯರು ಅತ್ಯಂತ ಸಂತೋಷಭರಿತರಾದರೆಂದು ಹೇಳುತ್ತಾರೆ.

**ಸಹಿತಾತ್ಮಜಜನ್ಮವಾಕ್‌ಸುಧಾಬ್ಧೇಸ್ಸರಿತೋಽಸೌ ಸಲಿಲೇ ಮಮಜ್ಜ ವಿಪ್ರಃ ।**
**ದ್ವಿಜವಂದ್ಯಮಹೋದಯೇ ಪಿತೄಣಾಂ ಋಣಪಂಕಾಂಬುನಿಧೇಸ್ತದೋನ್ಮಮಜ್ಜ ॥೪೩॥**

**ತಾತ್ಪರ್ಯ :** ಜನರು ಮಹೋದಯಾದಿ ಪರ್ವಪುಣ್ಯಕಾಲದಲ್ಲಿ ನದೀಸಾಗರ ಸಂಗಮ ಸ್ಥಳದಲ್ಲಿ ಸ್ನಾನ ಮಾಡುತ್ತಾರೆ. ಅದೇ ರೀತಿಯಾಗಿ "ತಿಮ್ಮಣ್ಣಾಚಾರ್ಯರೇ, ನಿಮಗೆ ಪುತ್ರೋತ್ಸವವಾಯಿತು" ಎಂಬ ವಚನವೇ ಆನಂದಕರವಾದ ಅಮೃತ ಸಮುದ್ರದಂತಿತ್ತು. ಆ ಅಮೃತ ಸಮುದ್ರದಿಂದ ಕೂಡಿದ ನದೀ ಜಲದಲ್ಲಿ, ನಮಗೆ ದ್ವಿಜವಂದಿತ ಪಾದಕಮಲನಾದ ಪುತ್ರನು ಹುಟ್ಟಿದನೆಂದು ಕೇಳಿದ ಕೂಡಲೇ ತಿಮ್ಮಣ್ಣಾರ್ಯರು ಮಂಗಳ ಸ್ನಾನ ಮಾಡಿದರು. ಆನಂದ ಸಮುದ್ರದಲ್ಲಿಯೂ ಮಗ್ನರಾದರು. ಪಿತೃದೇವತೆಗಳ ಋಣವೆಂಬ ಕೆಸರಿನ ಸಮುದ್ರದಿಂದ ಮೇಲಕ್ಕೂ ಬಂದರು. ಪಿತೃಋಣವೆಂಬ ಪಾಪವನ್ನೂ ಕಳೆದುಕೊಂಡರು (ಪ್ರಜಯಾ ಪಿತೃಭ್ಯಃ ಎಂಬ ಶ್ರುತಿಯಂತೆ ತಿಮ್ಮಣ್ಣಾಚಾರ್ಯರ ಪಿತೃಋಣವು ಪರಿಹಾರವಾಯಿತು ಎಂದು ಭಾವ.)

**ಅವತಾರಿಕೆ :** ತಂದೆಯಾದ ತಿಮ್ಮಣ್ಣಾಚಾರ್ಯರು ಹೋಮಾದಿ ಪುರಸ್ಸರವಾಗಿ ಆ ನವಜಾತ ಶಿಶುವಿಗೆ ಜಾತಕರ್ಮ ಮಾಡಿದರು ಎಂದು ಕವಿಗಳು ವರ್ಣಿಸುತ್ತಾರೆ.

**ಭುವನೇಽಸ್ಯ ಸಮೋಽರ್ಭಕಸ್ಯ ದೃಷ್ಟೋ ನ ಮಯೇತೀವ ವದನ್ ಸ್ವಹೇತಿಹಸ್ತಾತ್ ।**
**ಪರಿತೋ ವಲತಸ್ತುರೀಯಧರ್ಮೇ ಹವಿರಾದಾಜ್ಜನಕಾರ್ಪಿತಂ ಹುತಾಶಃ ॥೪೪॥**

**ತಾತ್ಪರ್ಯ :** ಶಿಶುವಿನ ತಂದೆಯಾದ ತಿಮ್ಮಣ್ಣಾಚಾರ್ಯರು ಹೋಮಾದಿ ಸಹಿತವಾಗಿ ನವಜಾತ ಶಿಶುವಿಗೆ ಜಾತಕರ್ಮವನ್ನು ಮಾಡಿದರು. ಅವರು ಕೊಟ್ಟ ಆಹುತಿಯನ್ನು ಇತ್ತ ಅತ್ತ ಚಲಿಸುತ್ತಿರುವ ತನ್ನ ಜ್ವಾಲೆಯ ರೂಪವಾದ ಕೈಗಳಿಂದ ಸ್ವೀಕರಿಸಿದ ಅಗ್ನಿದೇವನು "ಸನ್ಯಾಸ ಧರ್ಮಾಚರಣೆಯಲ್ಲಿ ಈ ಮಗುವಿಗೆ ಸಮಾನನಾದವನು ಲೋಕದಲ್ಲಿ ನನ್ನಿಂದ ನೋಡಲ್ಪಟ್ಟಿಲ್ಲ" ಎಂದು ಜ್ವಾಲೆಯ ಚಲನೆಯಿಂದ ಸೂಚಿಸುತ್ತಿರುವನೋ ಎಂಬಂತೆ ಕಾಣಿಸುತ್ತಿತ್ತು. (ಜ್ವಾಲೆಯು ಅತ್ತ ಇತ್ತ ಚಲಿಸಿದಾಗ ಕೈಗಳ ಸಂಜ್ಞೆಯಿಂದ ಶಿಶುವಿಗೆ ಸಮಾನರಾದವರು ಇಲ್ಲ ಎಂದು ಸೂಚಿಸಿದಂತೆ ಭಾಸವಾಗುತ್ತಿತ್ತು.)

**ಅವತಾರಿಕೆ :** ಆಗ ತಂದೆಯಾದ ತಿಮ್ಮಣ್ಣಾಚಾರ್ಯರು ಬೀಜ (ಅಕ್ಕಿ ಮುಂತಾದ ಧಾನ್ಯ) ದಾನವನ್ನು ಮಾಡಿದರು ಎಂದು ಹೇಳುತ್ತಾರೆ.

**(ಬಾ.ಬೋ.ಪಾಠ)**

**ಪ್ರದದೌ ಬಹುಕರ್ಮಧಾ ರಯೇಣ ಸ್ವಬಹುವ್ರೀಹಿಮುಪಾದದೇಽಕ್ಷತಾಗ್ರ್ಯಾನ್ ।**
**ಸತು ತತ್ಪುರುಷೈಃ ಪುನರ್ವಿತೀರ್ಣಾನ್ ರಚಿತದ್ವಂದ್ವಫಲಾನ್ ಧೃತಾವ್ಯಯತ್ವಾನ್ ॥೪೫॥**

**(ಗು.ಸೇ. ಪಾಠ)**

**ಪ್ರದದೌ ಬಹುಕರ್ಮಧಾರಯೇಣ ಸ್ವ ಬಹುವ್ರೀಹಿಮುಪಾದದೇ ಹ್ಯಯಾಗ್ರ್ಯಾನ್ ।**
**ಸ ತು ತತ್ಪುರುಷೈಃ ಪುನರ್ವಿತೀರ್ಣಾನ್**
**ರಚಿತದ್ವಂದ್ವಫಲಾನ್ ಧೃತಾವ್ಯಯತ್ವಾತ್ ॥೪೫॥**

**ತಾತ್ಪರ್ಯ (ಬಾ.ಬೋ)** : ತಂದೆಯಾದ ತಿಮ್ಮಣ್ಣಾಚಾರ್ಯರು ಜಾತ ಕರ್ಮಾದಿ ಸಂಸ್ಕಾರವನ್ನು ಮಾಡಲು ನಿಶ್ಚಯಿಸಿ ಮೊಟ್ಟಮೊದಲು ಯೋಗ್ಯರಾದ ಬ್ರಾಹ್ಮಣರಿಗೆ ನಾನಾ ವಿಧ ಬೀಜದಾನವನ್ನು ಮಾಡಿದರು. "ಮಾತಾ ಪಿತೃಗಳಿಗೆ ದೀರ್ಘಾಯುಸ್ಸು ಉಂಟಾಗಲೀ" ಎಂದು ಹರಿಸಿ ಆಶೀರ್ವದಿಸಿ ಅವರು ಕೊಟ್ಟ ಮಂತ್ರಾಕ್ಷತೆಯನ್ನು ತಿಮ್ಮಣ್ಣಾಚಾರ್ಯರು ಸ್ವೀಕಾರ ಮಾಡಿದರು.

**ತಾತ್ಪರ್ಯ (ಗು.ಸೇ.)** : ಜಾತಕರ್ಮಾದಿ ಅನೇಕ ಸಂಸ್ಕಾರಗಳನ್ನು ಮಾಡಲಿರುವ ತಿಮ್ಮಣ್ಣಾಚಾರ್ಯರು ಮೊಟ್ಟಮೊದಲು ಶೀಘ್ರವಾಗಿ ಒಳ್ಳೆಯ ಭತ್ತವನ್ನು ಬ್ರಾಹ್ಮಣರಿಗೆ ದಾನಮಾಡಿದರು. ಆ ಬ್ರಾಹ್ಮಣರು ನಿತ್ಯವಾಗಿ ಐಹಿಕಾಮುಷ್ಮಿಕ ಫಲಗಳನ್ನು ಕೊಡತಕ್ಕ ಶ್ರೇಷ್ಠವಾದ ಆಶೀರ್ವಾದವನ್ನು ಮಾಡಿ ನೀಡಿದ ಮಂತ್ರಾಕ್ಷತೆಯನ್ನು ತಿಮ್ಮಣ್ಣಾಚಾರ್ಯರು ಸ್ವೀಕರಿಸಿದರು. (ಇಲ್ಲಿ ಕವಿಗಳು ಚಮತ್ಕಾರದಿಂದ ಕರ್ಮಧಾರಯ, ಬಹುವ್ರೀಹಿ, ತತ್ಪುರುಷ, ಅವ್ಯಯೀಭಾವ, ಎಂಬ ನಾಲ್ಕು ಸಮಾಸಗಳ ಹೆಸರುಗಳನ್ನು ಸೇರಿಸಿದ್ದಾರೆ.)

**ಅವತಾರಿಕೆ** : ನವಜಾತ ಶಿಶುವಿಗೆ ಆ ಸಮಯದಲ್ಲಿ ಮೊದಲ ಬಾರಿಗೆ ಅಭ್ಯಂಜನವಾಯಿತೆಂದು ವರ್ಣಿಸುತ್ತಾರೆ.

**ಅಚಿರಾತ್ ಕೃತಮಜ್ಜನೋಽತಿಶುಭ್ರಃ ಸಹಸಾಽಽಪಾಸ್ತರಜಸ್ತಮೋಗುಣೋಽಯಮ್ ।**
**ಕಥಮಿಂದುಸಮೋಽನ್ಯಥೇತಿ ಕಾಂತಾನಿಕರೋ ವರ್ಣಯತಿ ಸ್ಮ ಸೂತಿಕಾಂತಃ ॥೪೬॥**

**ತಾತ್ಪರ್ಯ (ಬಾ.ಬೋ)** : ಶಿಶುವಿಗೆ ಮಂಗಳಾಭ್ಯಂಜನ ಸ್ನಾನ ಮಾಡಿಸಿದರು. ಆಗ ಕೂಡಲೇ ರಜಸ್ಸು ಮತ್ತು ತಮಸ್ಸುಗಳ ಲೇಪವಿಲ್ಲದ (ಧೂಳು ಮತ್ತು ಕತ್ತಲೆಯ ಸಂಪರ್ಕವಿಲ್ಲದ) ಆ ಮಗುವು ಚಂದ್ರನ ಹಾಗೆ ಪ್ರಕಾಶಿಸಲಾರಂಭಿಸಿತು. ಬಾಣಂತಿಯ ಮನೆಯಲ್ಲಿದ್ದ ಹೆಂಗಸರೆಲ್ಲರೂ ಈ ಮಗುವು ರಜಸ್ತಮೋ ಲೇಪವಿಲ್ಲದ ಶುಭ್ರವಾದ ಚಂದ್ರನಿಗೆ ಸಮಾನ ಎಂದು ವರ್ಣಿಸಿದರು.

**ತಾತ್ಪರ್ಯ (ಗು.ಸೇ.)** : ತಿಮ್ಮಣ್ಣಾಚಾರ್ಯರೂ ಕೂಡಲೇ ಸ್ನಾನ ಮಾಡಿದರು. ಆಗ ಅವರು ರಜಸ್ತಮೋ ದೂರರಾಗಿ ಅತಿಶುಭ್ರರಾಗಿ ಪ್ರಕಾಶಿಸಿದರು. ಸ್ವತಃ ಶುಭ್ರರಾದುದರಿಂದಲೇ ಅವರು ಚಂದ್ರನಂತೆ ಪ್ರಕಾಶಿಸುತ್ತಿದ್ದರೆಂದು, ಜಾತಾಶೌಚದ ಸಮಯದಲ್ಲಿಯೂ ರಾತ್ರಿಯಲ್ಲಿಯೂ ಚಂದ್ರನಂತಿದ್ದಾರೆಂದು ಸ್ತ್ರೀಯರು ಮನಸ್ಸಿನಲ್ಲಿಯೇ ಹಾಡಿ ಹೊಗಳಿದುದು ಯುಕ್ತವಾಗಿಯೇ

ಇದೆ. (ಗುರುಸೇವಾ ವ್ಯಾಖ್ಯಾನದ ಪ್ರಕಾರ ಈ ಶ್ಲೋಕವು ತಿಮ್ಮಣ್ಣಾಚಾರ್ಯರ ಪರವಾಗಿದೆ. ಬಾಲಬೋಧಿನೀಕಾರರು ಪ್ರಕರಣಕ್ಕೆ (ಸಂದರ್ಭಕ್ಕೆ) ಅನುಗುಣವಾಗಿ ಶಿಶುವಿನ ವರ್ಣನೆ ಪರವಾಗಿಯೇ ವ್ಯಾಖ್ಯಾನಿಸಿರುತ್ತಾರೆ.)

**ಅವತಾರಿಕೆ :** ಮಕ್ಕಳ ಸ್ವಭಾವಕ್ಕೆ ಅನುಗುಣವಾಗಿ ಕಾಲಿನ ಹೆಬ್ಬೆಟ್ಟನ್ನು ಬಾಯಿಯಲ್ಲಿ ಇಟ್ಟುಕೊಂಡು ಮಗುವು ಚೀಪುವುದನ್ನು ಕವಿಗಳು ಉತ್ಪ್ರೇಕ್ಷಾಲಂಕಾರದಿಂದ ವರ್ಣಿಸುತ್ತಾರೆ.

**ಸಹಜೋ ಹೀ ಗುಣೋ ಮದೀಯಮಂಜುದ್ವಿಜಸಂಸೇವನಮಸ್ಯ ಮೇ ಪದಸ್ಯ ।**
**ಇತಿ ದರ್ಶಯತಾ ಪದಂ ನಿಜಾಸ್ಯೇ ಮಣಿಡೋಲಾಮಧಿಶಾಯಿನಾ ಕೃತಂ ಕಿಮ್ ॥೪೭॥**

**ತಾತ್ಪರ್ಯ :** "ಕರಾರವಿಂದೇನ ಪದಾರವಿಂದಂ ಮುಖಾರವಿಂದೇ ವಿನಿವೇಶಯಂತಂ – ವಟಸ್ಯ ಪತ್ರಸ್ಯ ಪುಟೇ ಶಯಾನಂ ಬಾಲಂ ಮುಕುಂದಂ ಮನಸಾ ಸ್ಮರಾಮಿ" ಹಸ್ತಕಮಲದಿಂದ ಪಾದಕಮಲವನ್ನು ಮುಖ ಕಮಲದಲ್ಲಿ ಇಟ್ಟಕೊಂಡು ಚೀಪುತ್ತಿರುವ, ಆಲದ ಎಲೆಯ ಮೇಲೆ ಮಲಗಿರುವ ಬಾಲ ಮುಕುಂದನನ್ನು ಮನಸಾ ಸ್ಮರಿಸುತ್ತೇನೆ ಎಂದು ಕವಿಯೋರ್ವನು ವರ್ಣಿಸಿರುವಂತೆ, ಕಾಲಿನ ಬೆಟ್ಟನ್ನು ಬಾಯಿಲ್ಲಿ ಇಟ್ಟುಕೊಳ್ಳುವುದು ಮಕ್ಕಳ ಸ್ವಭಾವವಾಗಿದೆ. ಅದನ್ನು ಅನುಸರಿಸಿ ವರ್ಣಿಸುತ್ತಾರೆ. 'ನನ್ನವರಾದ ವೈಷ್ಣವರೆಂಬ ಮನೋಹರರಾದ ದ್ವಿಜರು ನನ್ನನ್ನು ಯಾವಾಗಲೂ ಸೇವಿಸುತ್ತಾ ಇರುತ್ತಾರೆ. ಅವರಿಂದ (ದ್ವಿಜರಿಂದ) ಸೇವಿಸಲ್ಪಡುವುದು ನನಗೆ ಸ್ವಾಭಾವಿಕವಾದ ಗುಣವೂ ಈಗಲೂ ಇದೆ. ಹೊಸದಾಗಿ ಬರತಕ್ಕದ್ದಲ್ಲ, ಎಂದು ತನ್ನವರಿಗೆ ತಿಳಿಸುತ್ತಾನೋ ಎಂಬಂತೆ ಶಿಶುವು ಕಾಲಿನ ಬೆಟ್ಟನ್ನು ಬಾಯಿಯಲ್ಲಿ ಇಟ್ಟುಕೊಂಡು ಚೀಪುತ್ತಿತ್ತು. (ದ್ವಿಜರಿಂದ ಸೇವಿಸಲ್ಪಡುವಿಕೆ, ಎಂದರೆ ಬ್ರಾಹ್ಮಣರಿಂದ ಸೇವಿಸಲ್ಪಡುವಿಕೆ ಎಂದು ಭಾವ.) ದ್ವಿಜ ಎಂದರೆ ಹಲ್ಲು, ಹಲ್ಲುಗಳಿಂದ ಸೇವಿಸಲ್ಪಡುವಿಕೆ, ಅದೂ ಪಾದದ ಧರ್ಮ, ಹೀಗೆ ದ್ವಿಜ ಶಬ್ದದ ಶ್ಲೇಷ ಮೂಲಕವಾಗಿ ಈ ಉತ್ಪ್ರೇಕ್ಷೆಯನ್ನು ಮಾಡಿದ್ದಾರೆ. ಇಲ್ಲಿ ಉತ್ಪ್ರೇಕ್ಷಾಲಂಕಾರ. ಸಂಭಾವನಸ್ಯಾದುತ್ಪ್ರೇಕ್ಷಾ ಎಂದು ಅದರ ಲಕ್ಷಣ. ಬಾಯಿಯಲ್ಲಿ ಪಾದವನ್ನು ಇಟ್ಟುಕೊಳ್ಳುವುದು 'ದ್ವಿಜರಿಂದ ಸೇವಿಸಲ್ಪಡುವಿಕೆ' ಎಂಬುದು ಸ್ವಾಭಾವಿಕ ಗುಣವೆಂದು ತೋರಿಸುವುದಕ್ಕೆ ಬಾಯಿಯಲ್ಲಿ ಬೆಟ್ಟನ್ನು ಇಟ್ಟಕೊಳ್ಳುವುದು ಅಲ್ಲದಿದ್ದರೂ, ಅದನ್ನು ತೋರಿಸುವುದಕ್ಕೋಸ್ಕರ ಎಂದು ವರ್ಣಿಸಿರುವುದರಿಂದ ಹೇತೂತ್ಪ್ರೇಕ್ಷಾಲಂಕಾರ.

**ಅವತಾರಿಕೆ :** ತಂದೆಯು ಮಗುವಿಗೆ ನಾಮಕರಣ ಮಾಡಿದರೆಂದು ಹೇಳುತ್ತಾರೆ.

**ಉದಯಾಸ್ತಪಟೀರಹೇಮಪೃಥ್ವಿಧರಪರ್ಯಂತಧರಾಚರೈರ್ಜನೌಘೈಃ ।**
**ಅಭಿವಂದ್ಯ ಇತೀವ ಬಾಲಕಸ್ಯ ವ್ಯತನೋದ್ ವೆಂಕಟನಾಥನಾಮ ತಾತಃ ॥೪೮॥**

**ತಾತ್ಪರ್ಯ :** ಆಯಾ ಗ್ರಾಮದ ದೇವಾಲಯಗಳಲ್ಲಿರುವ ಭಗವಂತನ ಪ್ರತಿಮೆಯನ್ನು ಹೆಚ್ಚಾಗಿ ಆಯಾ ಗ್ರಾಮಸ್ಥರೇ ನಮಸ್ಕರಿಸಿ ಸೇವಿಸುತ್ತಾರೆ. ಶ್ರೀವೇಂಕಟೇಶ್ವರನಾದರೋ ಮಲಯ

ಪರ್ವತದಿಂದ ಮೇರು ಪರ್ವತದವರೆಗೆ ಉದಯ ಪರ್ವತದಿಂದ ಅಸ್ತ ಪರ್ವತದವರೆಗೆ ಇರುವ ಸಮಸ್ತ ಭೂಮಂಡಲದ ಎಲ್ಲ ಭಕ್ತಜನರಿಂದ ವಂದ್ಯನಾಗಿ ಸ್ತೋತ್ರಾರ್ಹನಾಗಿದ್ದಾನೆ. ಅದರಂತೆ ಈ ಬಾಲಕನೂ ಕೂಡಾ ಸರ್ವಜನವಂದ್ಯನಾಗುತ್ತಾನೆ ಎಂಬ ಕಾರಣದಿಂದಲೋ ಎಂಬಂತೆ ಮಗುವಿಗೆ ತಂದೆಯು ವೆಂಕಟನಾಥ ಎಂದು ಹೆಸರಿಟ್ಟರು. ಹೇಗೆ ವೆಂಕಟಗಿರಿನಾಥನಾದ ಶ್ರೀ ಶ್ರೀನಿವಾಸನು ಸಮಸ್ತ ಜನವಂದ್ಯನಾಗಿದ್ದಾನೋ, ಹಾಗೆಯೇ ಅವನ ಹೆಸರನ್ನು ಹೊತ್ತಿರುವ ಈ ಮಗುವೂ ಸರ್ವಜನರಿಂದ ವಂದ್ಯವಾಗುತ್ತದೆ ಎಂದು ಅಭಿಪ್ರಾಯ. ಇಲ್ಲಿ ಉತ್ಪ್ರೇಕ್ಷಾಲಂಕಾರವಿದೆ.

**ಅವತಾರಿಕೆ :** ಮತ್ತೊಂದು ರೀತಿಯಿಂದಲೂ ಮಗುವಿಗೆ 'ವೆಂಕಟನಾಥ' ಎಂಬ ಹೆಸರು ಯುಕ್ತವಾಗಿದೆ ಎಂದು ಹೇಳುತ್ತಾರೆ.

**ಘಟತೇ ತನಯೇಽಭಿಧಾ ತದಂಶೇ ಗುಣವಿಧ್ಯರ್ಥಮನುಕ್ತಿಸಿದ್ಧಯೇ ಚ ।**
**ಗು.ಸೇ.ವಾ – (ಗುಣವೃದ್ಧ್ಯರ್ಥ ಮನುಕ್ತಿಸಿದ್ಧಯೇ ಚ) ।**
**ಅತಿದೇಶಕೃತೇ ಹರೇರ್ಗುಣಾನಾಂ ವಿವದಂತೇ ಖಲು ಜೈಮಿನೀಯಶೌಂಡಾ: ॥೪೯॥**

**ತಾತ್ಪರ್ಯ :** ಜೈಮಿನೀಯ ಶಾಸ್ತ್ರದಲ್ಲಿ ಪಾರಂಗತರಾದ ಸಮರ್ಥರು, ಕೆಲವು ಯಾಗಗಳಿಗೆ ಆಯಾ ಹೆಸರುಗಳೆಂಬ (ಜ್ಯೋತಿಷ್ಟೋಮ, ವಾಜಪೇಯ ಇತ್ಯಾದಿ) ಗುಣಗಳನ್ನು ವಿಧಿಸುವಂತೆ ಈ ಶಿಶುವಿಗೆ ವೆಂಕಟನಾಥ ಎಂಬ ನಾಮಧೇಯ ರೂಪವಾದ ಗುಣವನ್ನು ವಿಧಿಸಿದ್ದರಿಂದ ಈ ಹೆಸರು ಯುಕ್ತವಾಗಿದೆ ಎಂದು ಹೇಳುತ್ತಾರೆ. ಇನ್ನೂ ಕೆಲವು ಮೀಮಾಂಸಕ ಮೂರ್ಧನ್ಯರು ಈ ಶಿಶುವಿನಲ್ಲಿ ಇಂತಹಾ ಗುಣಗಳಿವೆ ಎಂದು ಹೇಳದಿದ್ದರೂ ಈ ಹೆಸರನ್ನು ಇಟ್ಟಿದ್ದರಿಂದ ಅದಕ್ಕೆ ಅಂತಹ ಗುಣಗಳಿವೆಯೆಂದು ಸ್ವತಃ ಸಿದ್ಧಿಸುವುದರಿಂದ ಈ ಹೆಸರಿಟ್ಟರು ಎಂದು ಹೇಳುತ್ತಾರೆ. "ಪರಮಾತ್ಮನ ಗುಣಗಳಂತಹ ಗುಣಗಳು ಈ ಶಿಶುವಿನಲ್ಲಿವೆ" ಇವನು ಪರಮಾತ್ಮನಂತೆ ಎಂಬ ಅತಿದೇಶಕ್ಕೋಸ್ಕರ ಈ ಹೆಸರು. ಅವನಂತೆ ಇವನು ಎಂದು ದೃಷ್ಟಾಂತ ಕೊಟ್ಟು ಹೋಲಿಸುವುದೇ ಅತಿದೇಶ. "ನಹಿ ದೃಷ್ಟಾಂತೇ ಸರ್ವಂಸಾಮ್ಯಂ" ಎಂಬ ನ್ಯಾಯದಿಂದ ಈ ಶಿಶುವು ತನಗೆ ಯೋಗ್ಯವಾದ ಗುಣಗಳಿಂದ ಪೂರ್ಣನಾಗಿದ್ದಾನೆ. ಆದ್ದರಿಂದ ಇವನೂ ವೇಂಕಟೇಶನಂತೆ ಎಂಬ ಅಭಿಪ್ರಾಯದಿಂದ ಈ ಮಗುವಿಗೆ ವೇಂಕಟನಾಥ ಎಂಬ ಹೆಸರಿಟ್ಟರೆಂದು ಕೆಲವು ಮೀಮಾಂಸಕರು ಹೇಳುತ್ತಾರೆ. ಹೀಗೆ ಮೀಮಾಂಸಕರಲ್ಲಿ ವಿವಾದವಿದೆ. ಆದರೂ "ಮಮೈವಾಂಶೋ ಜೀವಲೋಕೇ" ಎಂದು ಭಗವದ್ಗೀತೆಯಲ್ಲಿ ಪರಮಾತ್ಮನ ಏಕದೇಶ ಸಾಮ್ಯ ಸಾಮರ್ಥ್ಯವನ್ನು ಹೊಂದಿದ ಜೀವನನ್ನು ಪರಮಾತ್ಮನ (ಭಿನ್ನಾಂಶ) ಅಂಶವೆಂದು ಹೇಳಿರುವುದರಿಂದ, ಪರಮಾತ್ಮನ ಅಂಶವೇ ಈ ಶಿಶುವು ಮತ್ತು ಪರಮಾತ್ಮನ ಪೂರ್ಣ ಸನ್ನಿಧಾನ ಪಾತ್ರವಾದುದರಿಂದಲೂ ಈ ಶಿಶುವು ಪರಮಾತ್ಮನ ಅಂಶವು. ಇಂತಹಾ ತಿಮ್ಮಣ್ಣಾರ್ಯರ

ಪುತ್ರರಿಗೆ ವೇಂಕಟನಾಥ ಎಂಬ ಹೆಸರು ಯಾವ ಒಂದು ರೀತಿಯಿಂದಲಾದರೂ ಕೂಡುತ್ತದೆ (ಪರಸ್ಪರ ವಿವಾದ ಮಾಡುವ) ಮೀಮಾಂಸಕರೂ ಒಪ್ಪುತ್ತಾರೆ.

**ತಾತ್ಪರ್ಯ (ಗು.ಸೇ) :** "ಅಂಗಾದಂಗಾತ್ ಸಂಭವಸಿ" (ತಂದೆಯ ಅಂಗಾಂಗಗಳಿಂದ ಹುಟ್ಟಿದ್ದೀಯ), ಆತ್ಮಾವೈ ಪುತ್ರನಾಮಾಸಿ (ತಂದೆಯೇ ಮಗನಾಗಿ ಬಂದಿದ್ದೀ) ಇತ್ಯಾದಿ ಶ್ರುತಿಗಳಿಂದ ಪುತ್ರನು ತಂದೆಯ ಅಂಶವೆಂಬುದಾಗಿ ಪ್ರಸಿದ್ಧಿಯಿದೆ. ಇಂತಹಾ ಪುತ್ರನಿಗೆ ತಂದೆಯು ಮಾಡಿದ ವೇಂಕಟನಾಥ ಎಂಬ ನಾಮಕರಣ ಯುಕ್ತವಾಗಿದೆ. (1) ಉಪನಯನವಾದ ಮೇಲೆ ಅಭಿವಾದನ ಮಾಡಲು, ಲೌಕಿಕ ವ್ಯವಹಾರಗಳಲ್ಲಿ ತನ್ನ ಹೆಸರನ್ನು ಹೇಳಿಕೊಳ್ಳಲು ಒಂದು ಹೆಸರು ಬೇಕಾಗಿದೆ. (2) ಇತರರು ತನ್ನನ್ನು ಕರೆಯಲು ಒಂದು ಹೆಸರು ಬೇಕಾಗಿದೆ. (3) ಏಕಾದಶೇಽಹನಿ ಪಿತಾ ನಾಮಕುರ್ಯಾತ್, ಹನ್ನೊಂದನೆಯ ದಿನ ತಂದೆಯು ಮಗನಿಗೆ ನಾಮಕರಣ ಮಾಡಬೇಕು ಎಂದು ಪರಮಾತ್ಮನ ಅಪ್ಪಣೆ ಇರುವುದರಿಂದ ಆ ಅಪ್ಪಣೆಯನ್ನು ಪಾಲಿಸಲು ತಂದೆಯು ನಾಮಕರಣ ಮಾಡಬೇಕಾಗಿದೆ. ಈ ರೀತಿಯಾಗಿ ಮೇಲೆ ಹೇಳಿದ ಮೂರು ಕಾರಣಗಳಿಂದ ತಂದೆಯು ಮಗನಿಗೆ ನಾಮಕರಣ ಮಾಡಿದುದು ಯುಕ್ತವೇ ಆಗಿದೆ. ಕರ್ಮಮೀಮಾಂಸಾಶಾಸ್ತ್ರ ನಿಪುಣರು ಹಿಂದೆ ಹೇಳಿದ, (1) ಗುಣವೃದ್ಧಿ – ಅಭಿವಾದನಾದಿಗಳ ನಿರ್ವಹಣೆ, (2) ವ್ಯವಹಾರಸಿದ್ಧಿ, (3) ಪರಮಾತ್ಮನ (ತಂದೆ ನಾಮಕರಣ ಮಾಡಬೇಕು) ಆಜ್ಞಾ ನಿರ್ವಾಹ ಇತ್ಯಾದಿ ಗುಣಗಳ ವಿಷಯದಲ್ಲಿ ಮಗನು ತಂದೆಯ ಅಂಶ ಹೇಗೆ ಎಂಬ ವಿಷಯದಲ್ಲಿ ವಿವಾದ ಮಾಡುತ್ತಾರೆ. ಹಾಗೆ ವಿವಾದ ಮಾಡಿದರೂ ಹೆಸರಿಡುವುದುರ ಔಚಿತ್ಯವನ್ನು ಒಂದಲ್ಲ ಒಂದು ರೀತಿಯಿಂದ ಎಲ್ಲರೂ ಒಪ್ಪುತ್ತಾರೆ.

**ಅವತಾರಿಕೆ :** ಕವಿಗಳು ಈಗ ಶಿಶುವಿನ ಅಂಬೆಗಾಲಿನ ನಡಿಗೆಯನ್ನು (ರಿಂಖಣ) ವರ್ಣಿಸುತ್ತಾರೆ.

**ಅಧಿಸದ್ಮತಲಂ ಸುತಸ್ಯ ಮೂರ್ತ್ಯಾ ಸ್ಫುಟಮಂಗೀಕೃತಜಾನುಚಂಕ್ರಮಸ್ಯ ।**
**ಚತುರಂಘ್ರಿವೃಷಾಕೃತೇಃ ಕದಾಚಿತ್ ಸುರಭೇರಾಕೃತಿರೇಕದಾಽನ್ವಕಾರಿ ॥೫೦॥**

**ತಾತ್ಪರ್ಯ :** ಹಿಂದೆ ಒಂದಾನೊಂದು ಕಾಲದಲ್ಲಿ ನಾಲ್ಕು ಪಾದಗಳುಳ್ಳ ಧರ್ಮವು ಕಾಮಧೇನುವಿನ ಆಕಾರವನ್ನು ಸ್ವೀಕರಿಸಿತ್ತು. ತಿಮ್ಮಣ್ಣಾಚಾರ್ಯರ ಪುತ್ರನಾದ ಈ ವೇಂಕಟನಾಥನೆಂಬ ಶಿಶುವು ಮಕ್ಕಳ ಸ್ವಭಾವವನ್ನು ಅನುಸರಿಸಿ ಅಂಬೆಗಾಲಿಕ್ಕಿ ಮನೆಯಲ್ಲೆಲ್ಲಾ ಓಡಾಡಲು ಆರಂಭಿಸಿದಾಗ, ನಾಲ್ಕು ಕಾಲುಗಳಿಂದ ಕೂಡಿದಂತಿರುವ ಮಗುವಿನ ಶರೀರವು ನಾಲ್ಕು ಪಾದವುಳ್ಳ ಧರ್ಮದ ಆಕಾರವನ್ನು ಸ್ವೀಕರಿಸಿದ ಗೋವಿನ (ಕಾಮಧೇನುವಿನ) ಆಕಾರದಂತೆ ಕಾಣಿಸುತ್ತಿತ್ತು. (ಇದರಿಂದ ಶ್ರೀರಾಘವೇಂದ್ರ ಗುರುವರ್ಯರು ಪೂರ್ಣ ಧರ್ಮಾಕೃತಿಯುಳ್ಳವರೆಂದೂ, ಭಕ್ತರುಗಳ ಅಭೀಷ್ಟಗಳನ್ನು ಪೂರೈಸುವ ಕಾಮಧೇನು ಸದೃಶರೆಂದೂ

ಸೂಚಿತವಾಗುತ್ತದೆ. – "ನಮತಾಂ ಕಾಮಧೇನವೇ" ಎಂದು ಅವರ ಸ್ತೋತ್ರದಲ್ಲಿ ಹೇಳುವ ವಿಶೇಷಣವು ಸಾರ್ಥಕವಾದುದೆಂದೂ ತಿಳಿದು ಬರುತ್ತದೆ.)

**ಅವತಾರಿಕೆ :** ಮಗುವು ಬಾಲಲೀಲೆಯಿಂದ ಕೈಯ ಹೆಬ್ಬೆಟ್ಟನ್ನು ಬಾಯಿಯಲ್ಲಿಟ್ಟು ಚೀಪುತ್ತಿತ್ತು ಎಂಬ ವಿಷಯವನ್ನು ಕವಿಗಳು ಉತ್ಪ್ರೇಕ್ಷಿಸುತ್ತಾರೆ.

**ತನಯಸ್ಯ ನವಪ್ರವಾಲವಲ್ಲೀಲಸದಂಗುಷ್ಠವಿರಾಜಿತಾನನಾಬ್ಜಮ್ ।**
**ಹೃದಯಾಂಬುಜಮಂತರಾತ್ಮಗರ್ಭಂ ಪ್ರಕಟಂ ದರ್ಶಯತೀವ ಸಜ್ಜನಾನಾಮ್ ॥೫೧॥**

**ತಾತ್ಪರ್ಯ :** "ದೇಹಾಂಗುಷ್ಠಮಿತೋ ದೇಹೇ ಜೀವಾಂಗುಷ್ಠಮಿತೋ ಹೃದಿ" ಜೀವರ ದೇಹದ ಹೃದಯ ಕಮಲದಲ್ಲಿ ಅವರ ದೇಹದ ಹೆಬ್ಬೆಟ್ಟಿನ ಪರಿಮಾಣದಿಂದಲೂ, ಜೀವರ ಸ್ವರೂಪ ದೇಹದಲ್ಲಿ ಅದರ ಅಂಗುಷ್ಠ ಪರಿಣಾಮದಿಂದಲೂ ಪರಮಾತ್ಮನು ನೆಲೆಸಿರುತ್ತಾನೆ ಎಂದು ಶಾಸ್ತ್ರದಲ್ಲಿ ಹೇಳುತ್ತಾರೆ. ಮಗುವು ಹೊಸದಾದ ಹವಳದ ಬಳ್ಳಿಯಂತೆ ಕೆಂಪಾಗಿ ಶೋಭಿಸುತ್ತಿರುವ ತನ್ನ ಹೆಬ್ಬೆಟ್ಟನ್ನು ಬಾಯಿಯಲ್ಲಿಟ್ಟು ಚೀಪುವುದನ್ನು ನೋಡಿದಾಗ ಜೀವನ ಹೃದಯಾಂತರ್ಗತನಾದ ಪರಮಾತ್ಮನು ಜೀವನ ಹೃದಯದಲ್ಲಿ ಜೀವನ ಅಂಗುಷ್ಠ ಪರಿಮಿತನಾಗಿ ಇರುತ್ತಾನೆ ಎಂದು ಸಜ್ಜನರಿಗೆ ಸೂಚನೆ ಕೊಡುವಂತೆ ಕಾಣಿಸುತ್ತಿತ್ತು. ಈ ಮುಖ ಕಮಲವು ಹೇಗೆ ಅಂಗುಷ್ಠದಿಂದ ಕೂಡಿದೆಯೋ ಅದರಂತೆ ಜೀವನ ಹೃದಯ ಕಮಲವೂ ಕೂಡಾ ಅಂಗುಷ್ಠ ಪರಿಮಿತನಾದ ಅಂತರಾತ್ಮನಿಂದ ಕೂಡಿದೆ ಎಂಬ ಸೂಚನೆಯು ಜ್ಞಾನಿಗಳಿಗೆ ಇದರಿಂದ ಬರುತ್ತಿದೆ ಎಂದು ತಾತ್ಪರ್ಯ. ಇಲ್ಲಿ ಉತ್ಪ್ರೇಕ್ಷಾಲಂಕಾರವಿದೆ.

**ಅವತಾರಿಕೆ :** ಮಕ್ಕಳ ಸ್ವಭಾವವನ್ನು ಅನುಸರಿಸಿ ಈ ಶಿಶುವು ಬಾಲ್ಯದಲ್ಲಿ ಏಳುವುದು ಬೀಳುವುದು ಇವುಗಳನ್ನು ಮಾಡುತ್ತಿತ್ತು ಎಂಬುದಾಗಿ ಕವಿಗಳು ಅವುಗಳನ್ನು ಉತ್ಪ್ರೇಕ್ಷಿಸುತ್ತಾರೆ.

**ವಿಹರನ್ನವನೌ (ಗು.ಸೇ.– ವಿದಧನ್ನವನೌ) ನಿಸರ್ಗರಕ್ತಂ**
**ಪ್ರತಿಲೀಲಂ ಮುಹುರುತ್ಪತನ್ ಪತನ್ ಸಃ ।**
**ಲಸತಿ ಸ್ಮ ಕರಿಷ್ಯಮಾಣಲಕ್ಷ್ಮೀಪತಿಪಾದಾನತಿಶೀಲನಾಯ ವೈಷಃ ॥೫೨॥**

**ತಾತ್ಪರ್ಯ (ಬಾ.ಬೋ) :** ಮಕ್ಕಳಿಗೆ ಸ್ವಭಾವತಃ ಆಟದಲ್ಲಿ ಬಹಳ ಪ್ರೀತಿ ಮತ್ತು ಆಸಕ್ತಿ ಇರುತ್ತದೆ. ಇದೇ ಸ್ವಭಾವವನ್ನು ಅನುಸರಿಸಿ ಈ ಬಾಲಕನೂ ನೆಲದ ಮೇಲೆ ಅಲ್ಲಲ್ಲಿ ಆಟವಾಡುತ್ತಿದ್ದನು. ಆ ರೀತಿಯಾಗಿ ಆಡುವಾಗ ಪ್ರತಿಯೊಂದು ಆಟದಲ್ಲಿಯೂ ಮಕ್ಕಳ ಸ್ವಭಾವಕ್ಕೆ ಅನುಗುಣವಾಗಿ ಬೀಳುವುದು, ಏಳುವುದು ಇತ್ಯಾದಿಗಳು ಆಗಾಗ್ಗೆ ನಡೆಯುತ್ತಿದ್ದವು. ಇದೆಲ್ಲವೂ ಮುಂದೆ ತಾನು ಮಾಡಬೇಕಾದ ಸಾಷ್ಟಾಂಗ ನಮಸ್ಕಾರದ ಅಭ್ಯಾಸವೋ ಎಂಬಂತೆ ಕಾಣುತ್ತಿತ್ತು. ಈ ರೀತಿಯಾಗಿ ಮಗುವು ಬಾಲ್ಯದಲ್ಲಿ ಶೋಭಿಸುತ್ತಿತ್ತು. (ಸಾಷ್ಟಾಂಗ ನಮಸ್ಕಾರದಲ್ಲಿಯೂ ನೆಲದಲ್ಲಿ ಬೋರಲಾಗಿ ಬೀಳುವುದು. ಏಳುವುದು ಇವುಗಳಿರುತ್ತವೆ.

ಮಗುವು ಆಟವಾಡುತ್ತಾ ಬಿದ್ದು ಏಳುತ್ತಿತ್ತು. ಅದನ್ನು ನೋಡಿ ಕವಿಗಳು ಈ ರೀತಿಯಾಗಿ ಉತ್ಪ್ರೇಕ್ಷಿಸಿರುತ್ತಾರೆ.)

**ತಾತ್ಪರ್ಯ (ಗು.ಸೇ.) :** ಈ ಸುಂದರ ಬಾಲಕನು ಸ್ವಭಾವದಿಂದ ಕೆಂಪಾದ ತನ್ನ ಕಾಲನ್ನು ನೆಲದ ಮೇಲಿಟ್ಟು, ಓಡಾಡುತ್ತಾ ಆಟವಾಡುತ್ತಿದ್ದನು. ಪ್ರತಿಯೊಂದು ಆಟದಲ್ಲಿಯೂ ಎಡವಿ ಬೀಳುತ್ತಾ, ಏಳುತ್ತಾ, ತಾನು ಮುಂದೆ ಮಾಡಬೇಕಾಗಿರುವ ಪರಮಾತ್ಮನ ಸಾಷ್ಟಾಂಗ ನಮಸ್ಕಾರದ ಅಭ್ಯಾಸವನ್ನು ಮಾಡುತ್ತಾನೋ ಎಂಬಂತೆ ಬಾಲಕನು ಶೋಭಿಸುತ್ತಿದ್ದನು.

**ಅವತಾರಿಕೆ :** ಬೀದಿಯಲ್ಲಿ ಎದ್ದು ಬಿದ್ದು ಆಟವಾಡುತ್ತಿದ್ದ ಬಾಲಕನ ಮೈ ಧೂಳಿನಿಂದ ವ್ಯಾಪ್ತವಾಗಿತ್ತು ಎಂದು ದೃಷ್ಟಾಂತದಿಂದ ಕವಿಗಳು ವರ್ಣಿಸುತ್ತಿದ್ದಾರೆ.

**ಬಹಿರಂಗಣಸೀಮ್ನಿ ಕೇಲಿಭಾಜಃ ತನುಲಗ್ನಾ ರಜಸಾಂ ರರಾಜ ರಾಜಿಃ ।**
**ಜಗದಾತ್ಮವಿಕಾರಸೂಕ್ಷ್ಮರೂಪಾ ಪ್ರಕೃತಿರ್ವಿಷ್ಣುಗತೇವ ದೃಷ್ಟಿಯೋಗ್ಯಾ ॥೫೩॥**
**(ಗು.ಸೇ.ಪಾ. – ಜಗದಾತ್ಮವಿಕಾರಸೂಕ್ಷ್ಮರೂಪಾಪ್ರಕೃತಿಃ)**

**ತಾತ್ಪರ್ಯ :** ಪರಮಾತ್ಮನನ್ನು ಆಶ್ರಯಿಸಿರುವ ಸೂಕ್ಷ್ಮರೂಪವುಳ್ಳ ಜಡಪ್ರಕೃತಿಯು ಪರಮಾತ್ಮನ ಪ್ರಭಾವದಿಂದ ಪ್ರಪಂಚದ ಆಕಾರದಿಂದ ಪರಿಣಾಮ ಹೊಂದುತ್ತದೆ. ಅತ್ಯಂತ ಸೂಕ್ಷ್ಮರೂಪದ ಈ ಜಡ ಪ್ರಕೃತಿಯು ಎಂದೂ ಪ್ರತ್ಯಕ್ಷವಾಗುವುದಿಲ್ಲ. ಈ ಮಗುವು ಮನೆಯಿಂದ ಹೊರಗೆ ಬಂದು ಧೂಳಿನಲ್ಲಿ ಆಟವಾಡಿ ಮೈಯಲ್ಲಿ ಧೂಳಿಯನ್ನು, ಲೇಪಿಸಿಕೊಂಡಿರುವುದರಿಂದ ಪರಮಾತ್ಮನನ್ನು ಆಶ್ರಯಿಸಿರುವ ಜಗತ್ತಿನ ರೂಪದಲ್ಲಿ ಪರಿಣಾಮ ಹೊಂದಿರುವ ಮೂಲ ಪ್ರಕೃತಿಯು ಪ್ರತ್ಯಕ್ಷವಾದಂತೆ ತೋರುತ್ತಿತ್ತು. ಈ ರೀತಿಯಾಗಿ ಮಗುವಿನ ಮೈಯಲ್ಲಿರುವ ಧೂಳಿ ಕಣವನ್ನು ಪ್ರತ್ಯಕ್ಷವಾದ ಮೂಲಪ್ರಕೃತಿಯೆಂದು ವರ್ಣಿಸಿ ಇರುವುದರಿಂದ ಇದು ಅಭೂತೋಪಮಾ ಎಂಬುದಾಗಿ ಕರೆಯಲ್ಪಡುತ್ತದೆ.

**ಅವತಾರಿಕೆ :** ತಂದೆಯು ಮಗುವಿಗೆ ಅನ್ನಪ್ರಾಶನ ಚೌಲಸಂಸ್ಕಾರ ಮಾಡಿದುದನ್ನು ವರ್ಣಿಸುತ್ತಾರೆ.

**ಮಹನೀಯಗುಣಸ್ಯ ಮಾಸಿ ಷಷ್ಠೇ ಸುತಮನ್ನಾಶನನಾಮಧರ್ಮವಂತಮ್ ।**
**ಅತನಿಷ್ಟ ತತಸ್ತೃತೀಯವರ್ಷೇ ಚತುರಸ್ಯಾಸ್ಯ ಚಕಾರ ಚೌಲಕರ್ಮ ॥೫೪॥**

**ತಾತ್ಪರ್ಯ :** ತಿಮ್ಮಣ್ಣಾಚಾರ್ಯರ ಆ ಸುಪುತ್ರನು ಒಳ್ಳೆಯ ಗುಣಶಾಲಿಯಾಗುವುನೆಂದು ಬಾಲ್ಯದಲ್ಲಿಯೇ ಕಾಣಿಸುತ್ತಿತ್ತು. ಗುಣಶಾಲಿಗಳಾದ ತಿಮ್ಮಣ್ಣಾಚಾರ್ಯರು ತಮ್ಮ ಸುಪುತ್ರನಿಗೆ ಆತನ ಆರನೆಯ ತಿಂಗಳಿನಲ್ಲಿ ಅನ್ನಪ್ರಾಶನ ಕರ್ಮವನ್ನು ಮಾಡಿದರು. ತದನಂತರದಲ್ಲಿ ತಮ್ಮ ಸುಪುತ್ರನ ಮೂರನೆಯ ವರ್ಷದಲ್ಲಿ ಆತನಿಗೆ ಚೌಲಕರ್ಮವನ್ನು ಮಾಡಿದರು.

**ಅವತಾರಿಕೆ :** ಕವಿಗಳು ಈಗ ತಿಮ್ಮಣ್ಣಾಚಾರ್ಯರು ತಮ್ಮ ಸುಪುತ್ರನಿಗೆ ಅಕ್ಷರಾಭ್ಯಾಸವನ್ನು ಮಾಡಿಸಿದರೆಂದು ವರ್ಣಿಸುತ್ತಾರೆ.

**ವಿಲಿಖ್ಯ ಭೂಮೌ ಪ್ರಥಮಂ ಕುಮಾರಂ ರೇಖಾಮಿಮಾಮೋಮಿತಿ ಸಂಪಠೇತಿ ।**
**ಪಿತ್ರಾ ನಿಯುಕ್ತಃ ಪುನರಬ್ರವೀತ್ತಂ ಅಲ್ಪೇ ಕಥಂ ವಾ (ಸಾ) ಗುಣಪೂರ್ಣಸಂಜ್ಞಾ ॥೫೫॥**

**ತಾತ್ಪರ್ಯ :** ತಿಮ್ಮಣ್ಣಾಚಾರ್ಯರು ಮಗನಿಗೆ ಅಕ್ಷರಾಭ್ಯಾಸ ಮಾಡಿಸಲು ಉದ್ಯುಕ್ತರಾಗಿ ಮೊದಲು ನೆಲದ ಮೇಲೆ "ಓಂ" ಎಂಬ ಅಕ್ಷರದ ರೇಖಾ ವಿನ್ಯಾಸವನ್ನು ಮಾಡಿ "ಮಗೂ! ಈ ಅಕ್ಷರವನ್ನು "ಓಂ" ಎಂದು ಸರಿಯಾಗಿ ಉಚ್ಚರಿಸು" ಎಂದು ಹೇಳಿದರು. ಆಗ ಆ ಕುಮಾರನು "ಅಪ್ಪಾ! ಈ ನಿನ್ನ ರೇಖೆಯು ಸ್ವಲ್ಪವೇ ಜಾಗವನ್ನು ಆಕ್ರಮಿಸಿದೆ. ಆದರೆ ಇದರ ಅರ್ಥ ಸೌಂದರ್ಯ ಮುಂತಾದ ಅನಂತಾನಂತ ಗುಣ ವಿಶಿಷ್ಟನಾದ ಎಲ್ಲಾ ಕಡೆ ವ್ಯಾಪ್ತನಾದ ಪರಮಾತ್ಮ ಎಂದಲ್ಲವೇ ಅಂತಹ ಪರಮಾತ್ಮನನ್ನು ಈ ಚಿಕ್ಕ ಅಕ್ಷರ ಹೇಗೆ ಹೇಳುತ್ತದೆ?" ಎಂದು ಕೇಳಿದನು (ಪ್ರಶ್ನಿಸಿದನು) (ಶಿಶುವಿಗೆ ತನ್ನ ಅತಿ ಬಾಲ್ಯದಲ್ಲಿಯೇ ಪರಬ್ರಹ್ಮನ ಸ್ವರೂಪ ಜ್ಞಾನವು ಚೆನ್ನಾಗಿ ಇತ್ತು ಎಂದು ಅಭಿಪ್ರಾಯ.)

**ಅವತಾರಿಕೆ :** ಅಕ್ಷರಾಭ್ಯಾಸದ ಆರಂಭೋತ್ಸವವನ್ನು ನೋಡಲು ಬಂದಿದ್ದ ಬಂಧು ಜನರು ಈ ಶಿಶುವಿನ ಪ್ರತಿಭೆಯನ್ನು ನೋಡಿ ತುಂಬಾ ಸೋಜಿಗ ಮತ್ತು ಆಶ್ಚರ್ಯವನ್ನು ಹೊಂದಿದರು ಎಂದು ಕವಿಗಳು ವರ್ಣಿಸುತ್ತಾರೆ.

**ಇತಿ ವದಂತಮವೇಕ್ಷ್ಯ ಸುಹೃಜ್ಜನಾಃ ಶ್ರುತಿಶಿರೋದೃಢವಾಸನಮಾನಸಮ್ ।**
**ಕಥಮಯಂ ಶಿಶುರೀದೃಶವಾಕ್ ಪಿತಾ ಸುಕೃತವಾನಿತಿ ವಿಸ್ಮಯಿನೋಽಭವನ್ ॥೫೬॥**

**ತಾತ್ಪರ್ಯ :** ಮಗುವು ಹಿಂದೆ ಹೇಳಿದಂತೆ ಹೇಳುತ್ತಿರುವಾಗ ಅಕ್ಷರಾಭ್ಯಾಸ ಮಹೋತ್ಸವಕ್ಕೆ ಬಂದಿದ್ದ ಬಂಧುಗಳು ಶಿಶುವಿನ ಮಾತನ್ನು ಕೇಳಿ ಹಿಂದಿನ ಜನ್ಮದಲ್ಲಿಯೇ ಉಪನಿಷತ್ತುಗಳ ಸಾರತಮವಾದ ಅರ್ಥಗಳ ಸಂಸ್ಕಾರಗಳು ಬಲವಾಗಿ ಈ ಮಗುವಿನ ಮನಸ್ಸಿನಲ್ಲಿ ನೆಲಸಿರಬೇಕು, ಎಂದು ಮನಸ್ಸಿನಲ್ಲಿ ಭಾವಿಸುತ್ತಾ, "ಈ ಮಗುವು ಸಕಲ ಶಾಸ್ತ್ರಾರ್ಥಗಳ ಸಾರಾರ್ಥವನ್ನು ಹೇಗೆ ಹೇಳುತ್ತಿದೆ? ಈ ಮಗುವಿನ ತಂದೆಯು ಅದೆಷ್ಟು ಪುಣ್ಯವಂತನು?" ಎಂಬುದಾಗಿ ಆಶ್ಚರ್ಯಚಕಿತರಾದರು.

**ಅವತಾರಿಕೆ :** ಅನಂತರ ತಿಮ್ಮಣ್ಣಾಚಾರ್ಯರು "ವಿವಾಹ ಯೋಗ್ಯಳಾದ ನನ್ನ ಮಗಳನ್ನು ಯಾರಿಗೆ ಮದುವೆ ಮಾಡಿ ಕೊಡಲಿ ಎಂದು ಚಿಂತಿಸಿದರು" ಎಂಬುದಾಗಿ ಕವಿಗಳು ವರ್ಣಿಸುತ್ತಾರೆ.

**ತನೂಜಾಮಷ್ಟಾಬ್ದಾಂ ಸಸಹಜಯುಗಾಂ ಕಾವ್ಯಕುಶಲಾಂ**
**ಸುಭದ್ರಾಂ ಭದ್ರಾಂಗೀಮಿವ ಮುಸಲಿಕಂಸಾರಿಸಹಿತಾಮ್ ।**

**ಸ ದದ್ಯಾಂ ಕಸ್ಮೈಚಿದ್ವಿದಿತಕುಲಸಂಜಾತವಿದುಷೇ**
**ಚಕಾರೇತ್ಥಂ ಬುದ್ಧಿಂ ತನಯವದನಾಲೋಕಮುದಿತಃ ॥೫೭॥**

**ತಾತ್ಪರ್ಯ** : ವೇಂಕಟನಾಥರ ಮುಖವನ್ನು ನೋಡಿ ತಿಮ್ಮಣ್ಣಾಚಾರ್ಯರಿಗೆ ಬಹಳ ಸಂತೋಷವಾಗಿತ್ತು. ಹಿರಿಯ ಮಗಳಾದ ವೆಂಕಟಾಂಬೆಗೆ ಎಂಟು ವರ್ಷಗಳಾಗಿದ್ದವು. ಅವಳಿಗೆ ಇಬ್ಬರು ತಮ್ಮಂದಿರು, ಗುರುರಾಜಾಚಾರ್ಯರು ಮತ್ತು ವೆಂಕಟನಾಥಾಚಾರ್ಯರು. ವೆಂಕಟಾಂಬೆಯು ಕಾವ್ಯವನ್ನು ಓದಿ ಪಂಡಿತೆಯಾಗಿದ್ದಳು. ಸುಂದರವಾದ ಅಂಗಾಂಗಗಳನ್ನುಳ್ಳ ಗೋಪಿಕಾಂಬೆಯು ಬಲರಾಮ ಕೃಷ್ಣರಿಂದ ಸಹಿತಳಾದ ಸುಭದ್ರೆಯಂತಿದ್ದಳು. ಇಂತಹ ಸುಗುಣಶೀಲೆಯಾದ ಮಗಳನ್ನು ಪ್ರಸಿದ್ಧವಾದ ವಂಶದಲ್ಲಿ ಹುಟ್ಟಿದ ವಿದ್ವಾಂಸನಾದ ಯಾವನಾದರೊಬ್ಬ ಶ್ರೇಷ್ಠ ವರನಿಗೆ ವಿವಾಹ ಮಾಡಿ ಕೊಡಬೇಕು. ಅಂತಹಾ ವರನು ಎಲ್ಲಿ ಸಿಗುತ್ತಾನೆ ಎಂದು ತಿಮ್ಮಣ್ಣಾಚಾರ್ಯರು ಚಿಂತಿಸಲಾರಂಭಿಸಿದರು.

**ಶ್ರೀಮತ್ಕಶ್ಯಪವಂಶವಾರ್ಧಿಶಶಿನಃ ಷಡ್ದರ್ಶಿನೀವಲ್ಲಭ –**
**ಶ್ರೀಲಕ್ಷ್ಮೀನರಸಿಂಹವಿತ್ತವಿದುಷಃ ಶ್ರೀವೇಂಕಟಾಂಬಾಮಣೌ ।**
**ಜಾತೇನಾರ್ಯದಯಾಸುಧಾಮಯಗಿರಾ ನಾರಾಯಣೇನೋದಿತೇ**
**ಕಾವ್ಯೇ ಚಾರುಣಿ ರಾಘವೇಂದ್ರವಿಜಯೇ ಸರ್ಗಸ್ತೃತೀಯೋಭವತ್ ॥೫೮॥**

ಪ್ರತಿಸರ್ಗದ ಕೊನೆಯಲ್ಲಿ ಬರುವ ಈ ಶ್ಲೋಕದ ಅರ್ಥವನ್ನು ಪ್ರಥಮ ಸರ್ಗದ ಅನುವಾದದ ಕೊನೆಯಲ್ಲಿ ಕೊಟ್ಟಿದೆ ಅಲ್ಲಿಯೇ ನೋಡಿ ತಿಳಿಯಬಹುದು.

**ಇತಿ ಶ್ರೀ ಕವಿಕುಲತಿಲಕೇನ ಶ್ರೀನಾರಾಯಣಾಚಾರ್ಯೇಣ ವಿರಚಿತೇ ।**
**ಶ್ರೀರಾಘವೇಂದ್ರವಿಜಯೇ ತೃತೀಯಸರ್ಗಃ ಸಮಾಪ್ತಃ**

ಈ ರೀತಿಯಾಗಿ ಶ್ರೀಕವಿಕುಲತಿಲಕರಾದ ಶ್ರೀನಾರಾಯಣಾಚಾರ್ಯರಿಂದ ವಿರಚಿತವಾದ ಶ್ರೀರಾಘವೇಂದ್ರವಿಜಯ ಮಹಾಕಾವ್ಯದಲ್ಲಿ ಮೂರನೇ ಸರ್ಗವು ಪರಿಸಮಾಪ್ತಿಯಾಯಿತು.

# ತೃತೀಯ ಸರ್ಗದ ಕಥಾಸಾರ

## ಶ್ರೀರಾಘವೇಂದ್ರಗುರುಗಳ ಪೂರ್ವಾಶ್ರಮವಂಶಾವಲಿ ಮತ್ತು ಗೌತಮಮುನಿಗಳ ಗುಣವರ್ಣನೆ

ಹಿಂದೆ ಗೌತಮರೆಂಬ ಮಹಾಮುನಿಗಳಿದ್ದರು. ಅವರು ವೇದಾಧ್ಯಯನ, ಜಪ, ಯಜ್ಞಾನುಷ್ಠಾನ, ಧ್ಯಾನ-ಗಳಲ್ಲಿಯೇ ತಮ್ಮ ಸಮಯವನ್ನು ಕಳೆಯುತ್ತಿದ್ದರು. ಅನೇಕ ಮಂದಿ ಶಿಷ್ಯರನ್ನೂ, ಋಷಿಗಳನ್ನೂ ತಾವೇ ಪಾಲಿಸುತ್ತಾ ಅವರಿಂದಲೂ ಇದೇ ರೀತಿ ವೇದಾಧ್ಯಯನಾದಿಗಳನ್ನು ಮಾಡಿಸುತ್ತಿದ್ದರು. ಒಂದು ರೀತಿಯಲ್ಲಿ ಪ್ರಾಚೀನ ಯುಗದಲ್ಲಿ ಬ್ರಾಹ್ಮಣರ ರಕ್ಷಣೆಗೆ ಈ ಗೌತಮರು ಮೂಲಕಾರಣರಾಗಿದ್ದರು. ದೀನರಲ್ಲಿ ಅನುಕಂಪೆ, ಭಗವಂತನ ಭಕ್ತರಲ್ಲಿ ಸ್ನೇಹ ಮುಂತಾದ ಅಗಣಿತ ಗುಣಗಳಿಗೆ ಅವರು ಆಶ್ರಯರಾಗಿದ್ದರು. ಕೆಲವೇ ಗುಣಗಳಿಂದ (ಅಂಗಗಳಿಂದ) ಸಹಿತವಾದ ಯಾಗಗಳಿಗಿಂತ, ಎಲ್ಲಾ ಅಂಗ ಗುಣಗಳಿಂದ ಕೂಡಿದ ಯಾಗಗಳು ಹೇಗೆ ಪ್ರಧಾನವಾಗಿರುತ್ತವೆಯೋ, ಅದರಂತೆ, ನಾರಾಯಣನ ಭಕ್ತಿ ಮುಂತಾದ ಗುಣಗಳಲ್ಲಿ, ಏಕದೇಶದಿಂದ ಮಾತ್ರ ಕೂಡಿರುವ ಹಾಗೂ ಉಪವಾಸ ಮುಂತಾದ ಪ್ರಸಿದ್ಧ ವ್ರತಗಳಿಂದ ಕೂಡಿದ ಅನೇಕ ಋಷಿಗಳಿಗಿಂತಲೂ, ಆ ಗೌತಮರು ನಾರಾಯಣನ ಭಕ್ತಿ ವ್ರತ ಉಪವಾಸಾದಿ ಸಕಲ ಗುಣಭರಿತರಾಗಿದ್ದು ಶ್ರೇಷ್ಠರಾಗಿದ್ದರು. ಗೌತಮರು ಭಾಗವತ ಸಾರ್ವಭೌಮರು. ಭಗವಂತನ ಭಕ್ತರಲ್ಲಿ ಅತ್ಯಂತ ಶ್ರೇಷ್ಠರಾಗಿದ್ದರು. ಆದರೂ ಭಗವಂತನಾದ ನಾರಾಯಣನ ಸರ್ವೋತ್ತಮತೆಗೆ ವಿರೋಧಿಯಾದ ವೇದಾದಿ ಸಕಲ ಸಚ್ಛಾಸ್ತ್ರಗಳಲ್ಲಿ ಹೇಳಿರುವ ಅರ್ಥಗಳಿಗಿಂತ ವಿರುದ್ಧವಾದ ಅರ್ಥವನ್ನು ಹೇಳುವ ಐದು ಅಧ್ಯಾಯಗಳಿಂದ ಕೂಡಿದ ನ್ಯಾಯ ಸೂತ್ರಾತ್ಮಕವಾದ ಗ್ರಂಥವನ್ನು ರಚಿಸಿದರು. ಇದು ಭಾಗವತಶಿರೋಮಣಿಗಳಾದವರಿಗೆ ಸಲ್ಲದ ಕಾರ್ಯವೆಂದು ಭಾವಿಸಬಾರದು. ನ್ಯಾಯ– ಶಾಸ್ತ್ರವೇ ಪರಮೋದ್ಧಾರಕವೆಂದು ನಂಬಿ ಆ ದಾರಿಯಲ್ಲಿಯೇ ನಡೆಯಲು ಯೋಗ್ಯರಾದ ಅಯೋಗ್ಯ ಜನರ ಅಸುರ ಸ್ವಭಾವದ ಜನರ ಮೋಹಕ್ಕಾಗಿ ಭಗವಂತನ ಪ್ರೇರಣೆಯಿಂದಲೇ ಅವರು ಆ ಶಾಸ್ತ್ರವನ್ನು ರಚಿಸಿದರು. ಅವರು ರಚಿಸಿದ ಕರ್ಕಶ ತರ್ಕಶಾಸ್ತ್ರದ ಖಂಡನೆಗಾಗಿಯೇ ಅವತರಿಸಿದ ವೇದವ್ಯಾಸರ ಅವತಾರಕ್ಕೂ ಕಾರಣರಾದರು. ತನ್ನ ಶಾಸ್ತ್ರವನ್ನು ನಿರಾಸ ಮಾಡಿರುವ ವೇದವ್ಯಾಸರು ಯುಗಭೇದದಿಂದ ಅನೇಕ ಬಾರಿ ಅವತಾರ ಮಾಡಿದ್ದರಿಂದ, ಈ ಗೌತಮರು ಅನೇಕ ಬಾರಿ ವೇದವ್ಯಾಸರ ಅವತಾರಕ್ಕೂ ಕಾರಣರಾದರು. ಇಷ್ಟೇ ಅಲ್ಲ, ಮತ್ತೊಂದು ಕಾರಣದಿಂದಲೂ ಆ ಗೌತಮರು ವೇದವ್ಯಾಸರ ಅವತಾರಕ್ಕೆ ಕಾರಣರಾದರು. ಆ ಸಂದರ್ಭವು ಹೀಗಿದೆ – ವಿಷ್ಣುಪಾದೋದಕರೂಪಳಾದುದರಿಂದ ಗಂಗೆಯನ್ನು ಹರಿಭಕ್ತರಲ್ಲಿ ಶ್ರೇಷ್ಠನಾದ ಹರನು ಶಿರಸ್ಸಿನಲ್ಲಿ ಧರಿಸಿದ್ದನು. ಪಾರ್ವತಿಯು ಗಂಗೆಯನ್ನು ತನ್ನ ಸವತಿಯೆಂದು ತಿಳಿದು ಸ್ತ್ರೀಯರಿಗೆ ಸಹಜವಾದ ಮಾತ್ಸರ್ಯ ಭಾವನೆಯನ್ನು ಪ್ರಕಟಗೊಳಿಸುತ್ತಾ 'ಗಂಗೆಯನ್ನು ಜಟೆಯಿಂದ ಕಳುಹಿಸಿ ಬಿಡು' ಎಂದು ಹರನನ್ನು ಅನೇಕ ಬಾರಿ ಪ್ರಾರ್ಥಿಸಿದಳು. ಆದರೆ ಈಶ್ವರನು ಆವಳ ಪ್ರಾರ್ಥನೆಯನ್ನು ಅಂಗೀಕರಿಸಲಿಲ್ಲ. ಅನಂತರ ಖಿನ್ನಳಾದ ದೇವಿಯು ಈ ಕಾರ್ಯಕ್ಕಾಗಿ ತನ್ನ ಪುತ್ರನಾದ ಗಣೇಶನನ್ನು ಕೇಳಿಕೊಂಡಳು. ಗಣೇಶನು 'ಅಮ್ಮಾ ಸರಿಯಾದ ಸಮಯ ನೋಡಿ ಈ ಕೆಲಸವನ್ನು ಮಾಡುವೆನು' ಎಂದು ಹೇಳಿ ಸಮಯವನ್ನು ಎದುರು ನೋಡುತ್ತಾ ಇದ್ದನು. ಹೀಗಿರಲು ಒಂದಾನೊಂದು ಸಮಯದಲ್ಲಿ ಹನ್ನೆರಡು ವರ್ಷಗಳವರೆಗೂ ಮಳೆ ಬಾರದೆ ಅತ್ಯಂತ ಭಯಂಕರವಾದ ದುರ್ಭಿಕ್ಷವುಂಟಾಯಿತು. ಆಗ ಗೌತಮರು ತಮ್ಮ ತಪಸ್ಸಿನ ಬಲದಿಂದ ಮೋಡಗಳನ್ನು ನಿರ್ಮಿಸಿ ತಮ್ಮ ಆಶ್ರಮದಲ್ಲಿ ಸುತ್ತಮುತ್ತಲೂ ಮಳೆ ಬರಿಸಿದರು. ಅಂತಹ ಕರಾಳ ದುರ್ಭಿಕ್ಷ

ಕಾಲದಲ್ಲಿಯೂ ಗೌತಮರ ಆಶ್ರಮವು ಸಸ್ಯಾದಿ ಸಮೃದ್ಧವಾಗಿಯೂ, ಆನಂದಕರವಾಗಿಯೂ ಇತ್ತು. ಆಗ ದೇಶಾಂತರದಲ್ಲಿದ್ದ ದುರ್ಭಿಕ್ಷಪೀಡಿತರಾದ ಬ್ರಾಹ್ಮಣಶ್ರೇಷ್ಠರು ಗೌತಮಾಶ್ರಮಕ್ಕೆ ಬಂದು ಸೇರಿದರು. ಗೌತಮರು ಅವರನ್ನೆಲ್ಲಾ ಸ್ವಾಗತಿಸಿ ಅಭಿನಂದಿಸಿ ಅಶನ ವಸನಾದಿಗಳನ್ನಿತ್ತು ಪ್ರೀತಿಯಿಂದ ಕಾಪಾಡಿದರು. ಹೀಗೆ ಗೌತಮರ ಕೃಪೆಯಿಂದ ನಿಶ್ಚಿಂತರೂ ಶಾಂತಚಿತ್ತರೂ ಆದ ಬ್ರಾಹ್ಮಣರು ತಮ್ಮ ಆಶ್ರಮೋಚಿತ ಕರ್ಮಾನುಷ್ಠಾನ ಮಾಡುತ್ತಾ, ಅಂತಃಕರಣಶುದ್ಧಿಯನ್ನು ಮಾಡಿಕೊಂಡು, ವೇದಶಾಸ್ತ್ರಾಧ್ಯಯನ ಮತ್ತು ಪ್ರವಚನ- ಗಳಿಂದ ಚೆನ್ನಾಗಿ ಜ್ಞಾನಾಭಿವೃದ್ಧಿಯನ್ನು ಮಾಡಿಕೊಂಡರು. ಹನ್ನೆರಡು ವರ್ಷಗಳು ಕಳೆದವು. ಎಲ್ಲಾ ದೇಶಗಳಲ್ಲಿಯೂ ಸುವೃಷ್ಟಿಯಾಯಿತು. ಸುಭಿಕ್ಷವುಂಟಾಯಿತು. ಸಸ್ಯ ಧಾನ್ಯ ಧನ ಸಮೃದ್ಧಿಯುಂಟಾಯಿತು. ಆಗ ಗೌತಮಾಶ್ರಮ-ದಲ್ಲಿದ್ದ ಬ್ರಾಹ್ಮಣರು ತಮ್ಮ ತಮ್ಮ ಆಶ್ರಮಗಳಿಗೆ ಹೋಗಬೇಕೆಂದು ಬಯಸಿ ಗೌತಮರ ಹತ್ತಿರ ಅನುಜ್ಞೆಯನ್ನು ಬೇಡಿದರು. ಆಗ ಗೌತಮರು ಬ್ರಾಹ್ಮಣರ ಸೇವೆಯನ್ನು ಕಳೆದುಕೊಳ್ಳಲು ಇಷ್ಟವಿಲ್ಲದೆ, ಅವರ ಪ್ರಾರ್ಥನೆಯನ್ನು ನಿರಾಕರಿಸಲೂ ಸಾಧ್ಯವಿಲ್ಲದೆ, 'ನಾಳೆ ಹೋಗಿರಿ, ನಾಡಿದ್ದು ಹೋಗಿರಿ' ಎಂದು ಹೇಳುತ್ತಾ ಕಾಲ ತಳ್ಳುತ್ತಿದ್ದರು.

ಗಣೇಶನು ಈ ಸಮಯವನ್ನು ತನ್ನ ಕಾರ್ಯಸಾಧನೆಗಾಗಿ ಉಪಯೋಗಿಸಿಕೊಂಡನು. ಅವನು ಬ್ರಹ್ಮಚಾರಿ-ಯಾಗಿ ಬಂದು ಏಕಾಂತದಲ್ಲಿ ಆ ಬ್ರಾಹ್ಮಣರನ್ನು ಸಂಧಿಸಿ ಹೀಗೆಂದನು. ಎಲೈ ವಿಪ್ರೋತ್ತಮರೇ ! ನೀವು ಪರಾನ್ನವನ್ನು ಭುಂಜಿಸುತ್ತಾ, ನಿಮ್ಮ ತಪಸ್ಸನ್ನು ಹಾಳು ಮಾಡಿಕೊಳ್ಳುತ್ತಿದ್ದೀರಿ. ಒಳ್ಳೆಯ ಮಳೆಯಿಂದ ಸುಭಿಕ್ಷವಾಗಿರುವ ನಿಮ್ಮ ಆಶ್ರಮಕ್ಕೆ ಹೋಗಿರಿ' ಎಂದನು. ಆಗ ಬ್ರಾಹ್ಮಣರು ಎಲ್ಲಾ ವಿಷಯವನ್ನು ಗಣೇಶನ ಹತ್ತಿರ ಹೇಳಿದರು. ಅದನ್ನು ಕೇಳಿ ಗಣೇಶನು ನಗುತ್ತಾ ಹೇಳಿದನು. 'ಹಾಗಾದರೆ ನೀವು ನಾನು ಹೇಳಿದಂತೆ ಮಾಡಿರಿ. ನಿಮ್ಮ ತಪೋಬಲದಿಂದ ಒಂದು ಗೋವನ್ನು ನಿರ್ಮಿಸಿರಿ. ಆ ಗೋವು ಗೌತಮರ ಹೊಲದಲ್ಲಿ ಮೇಯುತ್ತಾ ಇರಲಿ. ಗೋವನ್ನು ಅಟ್ಟುವುದಕ್ಕಾಗಿ ಗೌತಮರು, ಹೊಡೆಯುವುದಿರಲಿ, ಕೈಯಿಂದಲೂ ಮುಟ್ಟದೆ ನೀರಿನಿಂದ ಪ್ರೋಕ್ಷಿಸುವರು. ಗೋವುಗಳಿಗೆ ಸ್ವಲ್ಪವಾದರೂ ತೊಂದರೆಯಾಗುವುದು ಅವರಿಗೆ ಇಷ್ಟವಿರುವುದಿಲ್ಲ. ಆದರೆ ಅವರು ನೀರು ಪ್ರೋಕ್ಷಿಸಿದ ಕೂಡಲೇ ಅಷ್ಟರಿಂದಲೇ ಆ ಗೋವು ಪ್ರಾಣ ಬಿಡುತ್ತದೆ. ಆಗ ನೀವೆಲ್ಲಾ ಗೌತಮರ ಬಳಿಗೆ ಹೋಗಿ ಹೇಳಬೇಕು. ಗೌತಮರೇ ! ನೀವು ಗೋಹತ್ಯೆಯನ್ನು ಮಾಡಿದ್ದೀರಿ. ಗೋಹತ್ಯಾ ಪಾತಕದಿಂದ ಕೂಡಿದ ನಿಮ್ಮ ಅನ್ನವು ನಮಗೆ ಅಭೋಜ್ಯ. ಆದ್ದರಿಂದ ನಮ್ಮ ಆಶ್ರಮಗಳಿಗೆ ಹೋಗುತ್ತೇವೆ. ನೀವು ಈಶ್ವರನ ಶಿರಸ್ಸಿನಲ್ಲಿರುವ ಗಂಗೆಯನ್ನು ಅಲ್ಲಿಂದ ಕೆಳಗಿಳಿಸಿ. ಗಂಗಾಜಲದಿಂದ ಈ ಗೋವನ್ನು ಚಿಮುಕಿಸಿರಿ. ಆಗ ಗೋವು ಬದುಕುವುದು. ನಿಮಗೆ ಪಾಪದಿಂದ ಬಿಡುಗಡೆಯಾಗುತ್ತದೆ' ಎಂದು ಹೇಳಿ ನಿಮ್ಮ ನಿಮ್ಮ ಆಶ್ರಮಕ್ಕೆ ಹೊರಡಿರಿ."

ಬ್ರಹ್ಮಚಾರಿ ರೂಪದ ಗಣೇಶನು ಅಲ್ಲಿದ್ದ ಋಷಿಗಳಿಗೆ ಈ ರೀತಿ ಉಪದೇಶಿಸಿ ಅಂತರ್ಧಾನ ಹೊಂದಿದನು. ಅವರು ಗಣೇಶನು ಹೇಳಿದಂತೆಯೇ ಮಾಡಿದರು. ಗೌತಮರು ತಪಸ್ಸನ್ನು ಮಾಡಿ ಈಶ್ವರನನ್ನು ಸಂತೋಷಗೊಳಿಸಿ, ಅವನ ವರದಿಂದ ಗಂಗೆಯನ್ನು ಕೆಳಗಿಳಿಸಿ ಗಂಗಾಜಲದಿಂದ ಗೋವನ್ನು ಬದುಕಿಸಿದರು. ಅನಂತರ ಅವರು ಜ್ಞಾನದೃಷ್ಟಿಯಿಂದ ತನ್ನ ಅನ್ನವನ್ನು ಸೇವಿಸಿ, ಬದುಕಿ ವೃದ್ಧಿ ಹೊಂದಿ ತಪಸ್ಸನ್ನು ಗಳಿಸಿದ ಬ್ರಾಹ್ಮಣರು ತನಗೆ ಈ ರೀತಿ ಮಹತ್ತಾದ ದ್ರೋಹವನ್ನು ಎಸಗಿದ್ದಾರೆ ಎಂದು ತಿಳಿದು ಕೋಪಾವಿಷ್ಟರಾಗಿ ಶಪಿಸಿದರು. 'ನಿಮ್ಮ ಜ್ಞಾನವೆಲ್ಲಾ ನಾಶವಾಗಲಿ' ಎಂದರು. ಗೌತಮರ ಆ ಶಾಪದಿಂದಾಗಿ ಬ್ರಾಹ್ಮಣರ ತತ್ತ್ವಜ್ಞಾನವು ನಾಶವಾದಾಗ, ಬ್ರಹ್ಮಾದಿ ದೇವತೆಗಳು ಅವರಲ್ಲಿ ಕೃಪೆಯಿಂದ ನಾರಾಯಣನನ್ನು ಶರಣು ಹೊಂದಿದರು. ದಯಾಳುವಾದ ಶ್ರೀಹರಿಯು ಅಜ್ಞಾನಾದಿಗಳಿಗೆ ಕಾರಣನಾದ ಕಲಿಯನ್ನು ತಿರಸ್ಕರಿಸಿ ಪುನಃ ಜ್ಞಾನವನ್ನು ಸ್ಥಿರೀಕರಿಸುವುದಕ್ಕಾಗಿ ಶ್ರೀವೇದವ್ಯಾಸ-ರೂಪದಿಂದ ಅವತರಿಸಿ, ವೇದವಿಭಾಗ, ಪುರಾಣ ಇತಿಹಾಸಗಳ ರಚನೆ, ಬ್ರಹ್ಮಮೀಮಾಂಸಾಶಾಸ್ತ್ರನಿರ್ಮಾಣ ಮತ್ತು ದೇವಾಂಶರಾದ ಅನೇಕ ಶಿಷ್ಯರಿಗೆ ಜ್ಞಾನೋಪದೇಶ ಮುಂತಾದ ಕಾರ್ಯಗಳನ್ನು ಮಾಡಿದನು. ಹೀಗೆ ಗೌತಮರು

ದುಶ್ಶಾಸ್ತ್ರರಚನೆ ಮಾಡಿದ್ದರಿಂದ ಮಾತ್ರವಲ್ಲ, ಅನೇಕ ಮಂದಿ ಬ್ರಾಹ್ಮಣರಿಗೆ ಜ್ಞಾನಲೋಪವಾಗುವಂತೆ ಶಾಪ ಕೊಟ್ಟಿದ್ದರಿಂದಲೂ ಶ್ರೀವ್ಯಾಸಾವತಾರಕ್ಕೆ ಕಾರಣರಾದರು.

**ಗೌತಮರ ವಂಶವನ್ನು ಮುಂದೆ ಕವಿಗಳು ವರ್ಣಿಸುತ್ತಾರೆ.** ಈ ಗೌತಮರ ವಂಶದಲ್ಲಿ ಉತ್ತಮರಾದ ಅನೇಕ ಮಂದಿ ಋಷಿಗಳು ಹುಟ್ಟಿದರು. ಅವರೆಲ್ಲರೂ ಸ್ವರ್ಗಕ್ಕಿಂತಲೂ ಅಧಿಕವಾದ ಭೋಗವನ್ನು ಅನುಭವಿಸಿ, ತಪಸ್ಸನ್ನೂ ಮಾಡುತ್ತಾ, ತಮ್ಮ ವಂಶವನ್ನೂ ಬೆಳೆಸಿದರು. ಈ ವಂಶದಲ್ಲಿ ಹುಟ್ಟಿದ ಅನೇಕರು ಮುಕ್ತಿಯನ್ನೇ ಹೊಂದಿದರು. ಮುಕ್ತಿಯೋಗ್ಯರು ಹೆಚ್ಚಾಗಿ ಉಳ್ಳ ಈ ವಂಶದಲ್ಲಿ ಹುಟ್ಟಿದವರು ಬಹಳ ಸಾಧುಶೀಲರೂ, ತಪಸ್ಸು ಪ್ರವಚನಗಳಲ್ಲಿ ಆಸಕ್ತರೂ ಆಗಿದ್ದರು. ಈ ವಂಶದಲ್ಲಿ ಹುಟ್ಟಿದ ಕನ್ಯೆಯರೆಲ್ಲರೂ ಗುಣಶೀಲಾದಿಗಳಲ್ಲಿ ತಂದೆಯಂತೆಯೂ ಇದ್ದು ಸುಶೀಲರೂ ಜ್ಞಾನಸಂಪನ್ನರೂ ಆಗಿ, ಪತಿಗಿಂತ ಬೇರೆಯಾದವರನ್ನು ತಂದೆಯೆಂದೇ ತಿಳಿಯುತ್ತಿದ್ದರು. ಮಕ್ಕಳು ಗುಣಗಳ ವಿಷಯದಲ್ಲಿ ತಂದೆಯನ್ನೇ ಮೀರಿಸುತ್ತಿದ್ದರು. ತಂದೆಗೆ ಹೆಚ್ಚಾದ ಸುಖವನ್ನೂ ಕೊಡುತ್ತಿದ್ದರು. ಹಿರಿಯ ಸಹೋದರರು, ತಮ್ಮಂದಿರನ್ನು ಪ್ರೀತಿಯಿಂದ ನೋಡುತ್ತಾ, ಅವರ ಹಿತವನ್ನು ಬಹಳ ಚೆನ್ನಾಗಿ ನೋಡಿಕೊಳ್ಳುತ್ತಿದ್ದರು.

**ಶ್ರೀಕೃಷ್ಣಭಟ್ಟರು —** ಈ ವಂಶದಲ್ಲಿ ಕಾಲಾನುಕ್ರಮದಲ್ಲಿ ಕೃಷ್ಣಭಟ್ಟರೆಂಬ ಪಂಡಿತ ಶ್ರೇಷ್ಠರು ಹುಟ್ಟಿದರು. ಅವರು ಭೂಮಂಡಲದಲ್ಲಿ ಪ್ರಸಿದ್ಧವಾಗಿದ್ದ, ಬ್ರಾಹ್ಮಣರಿಗೆ ಯೋಗ್ಯವಾದ ಅನೇಕ ಉತ್ತಮ ವಿದ್ಯೆಗಳನ್ನು ಅಭ್ಯಾಸ ಮಾಡಿದ್ದರು. ಕೃಷ್ಣಭಟ್ಟರ ಹಿಂದಿನವರು ಎಲ್ಲರೂ ವೀಣಾವಾದನದಲ್ಲಿ ಅಸಾಧಾರಣವಾದ ನೈಪುಣ್ಯವುಳ್ಳವರಾಗಿದ್ದರು. ಅದರಂತೆ ಕೃಷ್ಣಭಟ್ಟರೂ ಕೂಡ ತನ್ನ ವಂಶ ಪರಂಪರಾಗತವಾದ ವೀಣಾವಾದನವನ್ನು ಚೆನ್ನಾಗಿ ಅಭ್ಯಾಸ ಮಾಡಿದ್ದರು. ಇವರು ಹೀಗೆ ಸರ್ವವಿದ್ಯಾಧರರಾಗಿ, ತಾವು ವಿದ್ಯಾಧರನ ಅವತಾರವೆಂಬ ಕಥೆಯನ್ನು ಅನ್ವರ್ಥವಾಗಿ ಮಾಡಿದರು. ತನ್ನ ವೀಣಾವಾದನದ ಕಲಾ ಪ್ರೌಢಿಮೆಯ ಒಂದು ಅಂಶವನ್ನು ವಿಜಯನಗರ ಸಾಮ್ರಾಜ್ಯಾಧಿಪತಿಯಾದ ಶ್ರೀಕೃಷ್ಣದೇವರಾಯನಿಗೆ ಉಪದೇಶಿಸಿದರು. ತಲೆಯ ಪೇಟಾದಲ್ಲಿ ಧರಿಸುವ ಮುತ್ತಿನ ತುರಾಯಿಯನ್ನೂ, ರತ್ನಖಚಿತವಾದ ಕಡಗಗಳನ್ನೂ, ಇನ್ನೂ ಅನೇಕ ಬಹುಮಾನಗಳನ್ನೂ ಶ್ರೀಕೃಷ್ಣದೇವರಾಯನು ಅವರಿಗೆ ಗುರುದಕ್ಷಿಣೆಯ ರೂಪದಿಂದ ಅರ್ಪಿಸಿದನು. ಅವರು ಶಿಷ್ಯನ ಮೇಲಿನ ಪ್ರೀತಿಯಿಂದ ಅದೆಲ್ಲವನ್ನೂ ಸ್ವೀಕರಿಸಿದರು.

**ಕನಕಾಚಲ ಭಟ್ಟರು —** ಕೃಷ್ಣಭಟ್ಟರ ಮಕ್ಕಳು ಸದ್ಗುಣಸಮುದ್ರರೂ, ಧೈರ್ಯಾದಿ ವಿಷಯದಲ್ಲಿ ಕನಕಾಚಲವೆಂದು ಪ್ರಸಿದ್ಧವಾದ ಮೇರು ಪರ್ವತದಂತೆಯೂ ಇದ್ದ ಪಂಡಿತಶ್ರೇಷ್ಠರಾದ ಕನಕಾಚಲ ಭಟ್ಟರು ತಂದೆಗೆ ಸಮಾನರಾದ ಪುತ್ರರಾಗಿದ್ದರು.

**ತಿಮ್ಮಣ ಭಟ್ಟರು —** ಕನಕಾಚಲ ಭಟ್ಟರ ಮಕ್ಕಳಾದ ಇವರು ವೇದಾಂತಶಾಸ್ತ್ರಾಭಿಜ್ಞರಿಗೂ ಗುರುಗಳಾಗಿದ್ದರು. ಸಕಲ ಶಾಸ್ತ್ರಾಭಿಜ್ಞರಾದ ಇವರು, ಶ್ರೀಶ್ರೀನಿವಾಸನ ಭಕ್ತಾಗ್ರೇಸರರಾಗಿದ್ದು ಕೇವಲ ಅಧ್ಯಾತ್ಮಶಾಸ್ತ್ರ ತತ್ಪರರಾಗಿದ್ದರು. ಅವರು ಬಾಲ್ಯದಲ್ಲಿಯೇ ಎಲ್ಲಾ ವಿದ್ಯೆಗಳನ್ನು ಕಲಿತಿದ್ದು ವಿಶೇಷವಾಗಿ ವೀಣೆ ಮತ್ತು ಗಾನ ಶಾಸ್ತ್ರದಲ್ಲಿ ಪ್ರಾವೀಣ್ಯವನ್ನು ಹೊಂದಿದ್ದರು. ವೀಣಾವಿದ್ಯೆಯನ್ನು ಉಪದೇಶಿಸುತ್ತಾ ತನ್ನ ತಂದೆತಾಯಿಗಳು ಮತ್ತು ಸ್ನೇಹಿತರು ವಾಸಮಾಡುತ್ತಿದ್ದ ವಿಜಯನಗರದಲ್ಲಿಯೇ ತಿಮ್ಮಣ್ಣಭಟ್ಟರು ವಾಸಿಸುತ್ತಿದ್ದರು. ಅವರ ಹೆಂಡತಿಯಾದ ಗೋಪಿಕಾಂಬೆಯು ವೇದಗಳಿಗೆ ಸ್ಮೃತಿಯಂತೆಯೂ, ಸೂರ್ಯನಿಗೆ ಕಮಲಿನಿಯಂತೆಯೂ, ವಸಿಷ್ಠರಿಗೆ ಅರುಂಧತಿಯಂತೆಯೂ, ವಾದವನ್ನು ಮಾಡಿ ಪ್ರತಿವಾದಿಗಳನ್ನು ಜಯಿಸಿ ಹಗಲುದೀವಟಿಗೆ ಮುಂತಾದ ಬಿರುದುಗಳನ್ನು ಕೃಷ್ಣರಾಜ ಆ ನಗರದ ರಾಜನಿಂದ ಪಡೆದರು. ಪ್ರತಿವಾದಿಗಳ ಮಾತಿನ ಅಂಧಕಾರವನ್ನು ಸೂರ್ಯನೂ ಹೋಗಲಾಡಿಸಲು ಅಸಮರ್ಥನಾಗಿದ್ದನು. ಅದನ್ನು ಪೋಗಲಾಡಿಸಲೋ ಎಂಬಂತೆ ತಿಮ್ಮಣಭಟ್ಟರು ಆಗ ಹಗಲು-

ದೀವಟಿಗೆಯ ಬಿರುದನ್ನು ಸ್ವೀಕರಿಸಿದರು. ತೇಜಸ್ಸು ಎಂಬ ದ್ರವ್ಯವೇ ಕತ್ತಲೆಯೆಂಬ ದ್ರವ್ಯದ ಇರುವಿಕೆಯನ್ನು ತಿಳಿಯಲು ಸಹಕಾರಿಯಾಗುತ್ತದೆ. ಪ್ರತಿವಾದಿಗಳ ಅಪಕೀರ್ತಿಯೆಂಬ ಕತ್ತಲೆಯನ್ನು ಪ್ರಕಟಗೊಳಿಸಿ ಎಲ್ಲರಿಗೂ ತಿಳಿಸಲು ಅನುಕೂಲವಾಗುತ್ತದೆಯೆಂಬ ದೃಷ್ಟಿಯಿಂದಲೂ, ಆ ತಿಮ್ಮಣ್ಣಭಟ್ಟರು ಹಗಲು ದೀವಟಿಗೆಯ ಬಿರುದನ್ನು ಸ್ವೀಕರಿಸಿದರೆಂದು ನಾವು ತಿಳಿಯಬಹುದಾಗಿದೆ. ಬ್ರಾಹ್ಮಣಶ್ರೇಷ್ಠರಾದ ತಿಮ್ಮಣ್ಣಭಟ್ಟರು ಯಜನಯಾಜನಾದಿ ಬ್ರಾಹ್ಮಣೋಚಿತ ಕರ್ಮಗಳನ್ನು ಅನುಷ್ಠಾನಮಾಡುತ್ತಾ ಚಂದ್ರಿಕೆಯಿಂದ(ಬೆಳದಿಂಗಳಿನಿಂದ) ಕೂಡಿದ ಚಂದ್ರ- ನಂತೆ ರಮಣೀಮಣಿಯಾದ ಗೋಪಿಕಾಂಬೆಯಿಂದ ಕೂಡಿಕೊಂಡು ವಿಜಯನಗರದಲ್ಲಿ ಬಹುಕಾಲ ವಾಸಿಸಿದರು.

**ತಿಮ್ಮಣ್ಣಾರ್ಯರ ತಿರುಪತಿಯಾತ್ರೆ** — ಹೀಗೆ ಸಮಸ್ತ ಸುಖ ಸಮೃದ್ಧಿಯಿದ್ದರೂ ತಿಮ್ಮಣ್ಣಭಟ್ಟರಿಗೆ ಮಕ್ಕಳಿಲ್ಲ-ವೆಂಬ ಕೊರಗು ದುಃಖವನ್ನುಂಟುಮಾಡುತ್ತಿತ್ತು. ಅವರು ಬಹುಕಾಲ ಯೋಚಿಸಿ ಕೊನೆಗೆ ಆ ದಿವ್ಯ ರಾಜಧಾನಿ-ಯಿಂದ ಹೊರಟು, ಕಾಮಿತಾರ್ಥಪ್ರದಾಯಕನಾದ ಶೇಷಾಚಲಭೂಷಾಮಣಿಯಾದ ಶ್ರೀನಿವಾಸನನ್ನು ಸೇವಿಸಲು. ಪತ್ನೀ ಮತ್ತು ಸ್ನೇಹಿತರೊಡನೆ ವೇಂಕಟಾಚಲಕ್ಕೆ ಹೊರಟರು. ಆ ದಂಪತಿಗಳಿಬ್ಬರೂ ಉತ್ತಮರಾದ ಮಕ್ಕಳನ್ನು ಪಡೆಯಬೇಕೆಂಬ ಉದ್ದೇಶದಿಂದ ತಮ್ಮ ಕುಲದೇವರಾದ ಆ ಶ್ರೀನಿವಾಸನನ್ನು, ಅನೇಕ ರೀತಿಯ ಸೇವೆಗಳಿಂದ ಸಂತೋಷಗೊಳಿಸಿದರು. ಯೋಗ್ಯರಾದ ಮಕ್ಕಳನ್ನು ಪಡೆಯಬೇಕಾದರೆ, ಮಕ್ಕಳಿಂದ ಇಹಪರದ ಶ್ರೇಯಸ್ಸು ಉಂಟಾಗಬೇಕಾದರೆ ಶ್ರೀ ಶ್ರೀನಿವಾಸನ ಪರಮಾನುಗ್ರಹವು ಅಗತ್ಯವಾಗಿ ಬೇಕಾಗಿದೆ. ಹೀಗೆ ದಂಪತಿಗಳು ಶ್ರೀನಿವಾಸನನ್ನು ಬಹುಕಾಲ ಸೇವಿಸಿ, ಅವನ ಅನುಗ್ರಹವನ್ನು ಪಡೆದು, ಅವನ ಅಪ್ಪಣೆಯಿಂದಲೇ ಹಿಂದಿರುಗಿ ಕಾಂಚಿಯ ಸಮೀಪ ಪಟ್ಟಣವೆಂಬ ಅಗ್ರಹಾರವನ್ನು ತಲುಪಿದರು. ಅಲ್ಲಿದ್ದ ನಾರಾಯಣದೇವರನ್ನು ಸೇವಿಸುತ್ತಾ. ಅವನ ಅನುಗ್ರಹವನ್ನು ಪಡೆದು ಪತ್ನೀಸಮೇತರಾಗಿ ಕೆಲ ವರ್ಷಗಳವರೆಗೆ ಅಲ್ಲಿಯೇ ವಾಸಮಾಡಿದರು.

ತಿಮ್ಮಣ್ಣಾರ್ಯರಿಗೆ ಪುತ್ರೋತ್ಸವವಾಯಿತು. ಮೊದಲು ವೆಂಕಟೇಶನ ಅನುಗ್ರಹದಿಂದ ಗೋಪಿಕಾಂಬೆಯು ಗುಣವಂತಳೂ ಸುಂದರಿಯೂ ಆದ ಹೆಣ್ಣು ಮಗಳನ್ನೂ, ಅನಂತರ ಸಕಲ ಗುಣರತ್ನಾಕರನಾದ ಗಂಡುಮಗನನ್ನು ಪಡೆದಳು. ಆ ಅಕ್ಕತಮ್ಮಂದಿರು ಮುಂದೆ ತಮ್ಮ ತಮ್ಮನಾಗಿ ಹುಟ್ಟಲಿರುವ ವೇಂಕಟಾಚಾರ್ಯನ (ಶ್ರೀರಾಘವೇಂದ್ರರ ಪೂರ್ವಾಶ್ರಮದ ಹೆಸರು) ಕೀರ್ತಿ ಮತ್ತು ಪ್ರತಾಪಗಳಂತೆ ಶೋಭಿಸಿದರು. ಕುಲದೇವತೆಯಾದ ಶ್ರೀನಿವಾಸನ ಮತ್ತು ತಮ್ಮ ಕುಲಕ್ರಮಾಗತರಾದ ಜ್ಞಾನೋಪದೇಶಕರಾದ ಗುರುಗಳ ಅನುಗ್ರಹದಿಂದ ತಿಮ್ಮಣಭಟ್ಟರಿಗೆ ಅತುಲವಾದ ಪುತ್ರಸಂಪತ್ತೂ, ಧನಸಂಪತ್ತೂ, ಪ್ರಾಪ್ತವಾಯಿತು. ಅವರು ಮಗಳಿಗೆ "ವೆಂಕಟಾಂಬಾ" ಎಂದು ಮಗನಿಗೆ "ಗುರು-ರಾಜ" ಎಂದೂ ಹೆಸರಿಟ್ಟರು. ತಿಮ್ಮಣ್ಣಾರ್ಯರಿಗೆ ಮತ್ತೊಬ್ಬ ಮಗನು ಬೇಕೆಂಬ ಪ್ರಬಲವಾದ ಆಸೆಯುಂಟಾ-ಯಿತು. 'ದರ್ಶ ಮತ್ತು ಪೂರ್ಣಮಾಸವೆಂಬ ಎರಡು ಯಾಗಗಳು ವೇದದಲ್ಲಿ ಪ್ರಸಿದ್ಧವಾಗಿವೆ. ಅವೆರಡನ್ನೂ ಅನುಷ್ಠಾನ ಮಾಡಿದರೆ ಮಾತ್ರವೇ ಫಲವುಂಟಾಗುತ್ತದೆ. ಒಂದೊಂದೇ ಯಾಗದಿಂದ ಫಲವುಂಟಾಗುವುದಿಲ್ಲ ಹಾಗೆಯೇ ಗುರುರಾಜನೆಂಬ ಮಗನೊಬ್ಬನಿಂದಲೇ ತನ್ನ ಮನೋಭೀಷ್ಟ ಸಿದ್ಧಿಸಲಾರದು. ಅವನಿಗೆ ಜೊತೆಯಾಗಿ ಇನ್ನೊಬ್ಬ ಪುತ್ರನೂ ಬೇಕೆಂದು ತಿಮ್ಮಣ್ಣಾರ್ಯರು ಸಮರ್ಥನಾದ ಮತ್ತೊಬ್ಬ ಮಗನಿಗಾಗಿ ಕುಲದೇವತೆಯಾದ ಶ್ರೀನಿವಾಸನನ್ನು ನಿರಂತರವಾಗಿ ಪ್ರಾರ್ಥಿಸಿದರು.

ಶ್ರೀನಿವಾಸನ ಅನುಗ್ರಹದಿಂದ ಗೋಪಿಕಾಂಬೆಯು ಪುನಃ ಗರ್ಭಿಣಿಯಾದಳು. ಇತರಾದೇವಿಯು ಗರ್ಭದಲ್ಲಿ ಸಾಕ್ಷಾತ್ ಭಗವಂತನಾದ ಮಹಿದಾಸನನ್ನು ಧರಿಸಿದಂತೆ, ಪೂರ್ವದಿಗಂಗನೆಯು ಚಂದ್ರನನ್ನು ಧರಿಸಿದಂತೆ ಭೂಮಿಯು ಶ್ರೇಷ್ಠವಾದ ನಿಧಿಯನ್ನು ಗರ್ಭದಲ್ಲಿ ಧರಿಸಿದಂತೆ ಗೋಪಿಕಾಂಬೆಯೂ ಜಗತ್ತನ್ನು ಉದ್ಧಾರ ಮಾಡಬಲ್ಲ ಶ್ರೇಷ್ಠಕುಮಾರನನ್ನು ಗರ್ಭದಲ್ಲಿ ಧರಿಸಿದಳು. ಗರ್ಭಿಣಿಯಾದ ಗೋಪಿಕಾಂಬೆಯು ಮಂಗಳಕರವಾದ, ಫಲಿತವಾದ

ತಿಮ್ಮಣ್ಣಾರ್ಯರ ಪುಣ್ಯರೇಖೆಯಂತೆ, ಗರ್ಭದಲ್ಲಿರುವ ಶಿಶುವಿನ ಮೂರ್ತಿಮತ್ತಾದ ಕೀರ್ತಿಯಂತೆ, ಬೆಳದಿಂಗಳಿನಂತೆ ಗೋಪಿಕಾಂಬೆಯು ಶೋಭಿಸುತ್ತಿದ್ದಳು. ಅವಳ ಸ್ತನಗಳೆರಡೂ ಸೇರಿಕೊಂಡಿದ್ದವು. ಹಿಂದೆ ಹಿತವಾಗಿಯೂ, ರುಚಿಯಾಗಿಯೂ ಕಂಡಿದ್ದ ಉಚಿತವಾದ ಭೋಗ್ಯವಸ್ತುವಿನಲ್ಲಿಯೂ ಅವಳಿಗೆ ಅರುಚಿಯುಂಟಾಯಿತು. ವೈರಾಗ್ಯ ಉಂಟಾಯಿತು. ಮುಖವು ಪ್ರಸನ್ನತೆ ಮೊದಲಾದ ಗುಣಗಳಿಂದ ತುಂಬುತ್ತಾ ಇತ್ತು. ಎಲ್ಲಾ ಅಂಗಗಳಲ್ಲಿಯೂ ಕೃಶತೆಯೂ ಹೆಚ್ಚಿತು. ಸ್ತನಗಳ ಅಗ್ರಭಾಗಗಳು ಕಪ್ಪು ಕಪ್ಪಾಗಿ ಆದವು. ಹೊಟ್ಟೆಯಲ್ಲಿದ್ದ ತ್ರಿವಳಿ ಎಂಬ ಮೂರು ರೇಖೆಗಳು ಅದೃಶ್ಯವಾದುವು. ಸ್ತನಗಳು ದೃಢವಾದುವು. ಅದೃಶ್ಯವೆಂದು ಕವಿಗಳಿಂದ ವರ್ಣಿತವಾದ ಕಟಿಪ್ರದೇಶವು ಕ್ರಮೇಣ ವೃದ್ಧಿ ಹೊಂದುತ್ತಾ ದೃಶ್ಯವಾಯಿತು.

ಗೋಪಿಕಾಂಬೆಗೆ ಕೆಂಪಾದ ಸುವಾಸನೆಯಾದ ಮಣ್ಣು ತಿನ್ನಬೇಕೆಂದು ಬಹಳ ಆಸೆಯಾಗಿ, ಅಂತಹ ಮಣ್ಣನ್ನೇ ತಿನ್ನುತ್ತಿದ್ದಳು. ಗರ್ಭದಲ್ಲಿರುವ ಶಿಶುವು ಮುಂದೆ ಸನ್ಯಾಸಿಯಾಗಿ ಕೆಂಪಾದ ಕಾವಿಯ ಬಟ್ಟೆಯನ್ನುಡಲಿದೆ ಎಂಬ ಭವಿಷ್ಯವನ್ನು ಇದರಿಂದ ಸೂಚಿಸಿದಂತೆ ಕಾಣಿಸುತ್ತಿತ್ತು. ಅವಳು ಮನೆಯಲ್ಲಿ ಭಂಗಾರದ ಹಂಡೆಗಳಲ್ಲಿ ಬೆಂಕಿಯಿಂದ ಕಾಯಿಸಿದ ನೀರನ್ನು ಬಿಟ್ಟು ಸ್ನಾನಪಾನಗಳಿಗೆ ಹಿಮದಂತೆ ಬೆಳ್ಳಗಿರುವ ನದಿಯ ನೀರನ್ನೇ ಬಯಸುತ್ತಿದ್ದಳು. ಕಣ್ಣು ನಾಲಿಗೆಗಳಿಗೆ ಅತ್ಯಂತ ಹಿತವಾದ ರುಚಿಕರವಾದ ಮನೆಯಲ್ಲಿ ತಯಾರಿಸಿದ ಅನ್ನ ಭಕ್ಷ್ಯ ಭೋಜ್ಯಗಳನ್ನು ಬಿಟ್ಟು ಇತರರ ಮನೆಯಿಂದ ತಂದಿರುವ, ಆಹಾರ ವಸ್ತುಗಳನ್ನು ರುಚಿಕರವಾಗಿರಲಿ, ಅರುಚಿಕರವಾಗಿರಲಿ ತಾನು ಪ್ರೀತಿಯಿಂದ ಸೇವಿಸುತ್ತಿದ್ದಳು. ವಿದುಷಿಯಾದ ಗೋಪಿಕಾಂಬೆಯು ನಾರಾಯಣ ವಾಸುದೇವ ಇತ್ಯಾದಿ ಮುದ್ರಿಕೆಗಳಿಂದ ಕೂಡಿದ ಪದ್ಯ ಕವಿತೆಗಳನ್ನು ತಾನೇ ರಚಿಸಿ ಹಾಡುತ್ತಿದ್ದಳು. ಗರ್ಭಭಾರದಿಂದ ಸಂಚರಿಸಲು ಸಾಧ್ಯವಿಲ್ಲದೇ ಇದ್ದಾಗ, ಮಂಚದಲ್ಲಿಯೇ ಕುಳಿತುಕೊಂಡು, ಇತರ ಸ್ತ್ರೀಯರಿಗೆ ಭಗವಂತನಿಗೆ ಸಂಬಂಧಪಟ್ಟ ಕಥೆಗಳನ್ನು ಹೇಳುತ್ತಿದ್ದಳು. ಯಾವಾಗಲೂ ಕಾಲುಗಳನ್ನು ಅಲತಿಗೆಯಿಂದ (ಅರಗಿನ ಬಣ್ಣದಿಂದ) ಅಲಂಕರಿಸಿಕೊಳ್ಳುತ್ತಿದ್ದಳು. ಕಾಲಿಗೆ ಅರಗಿನ ಬಣ್ಣವಿಲ್ಲದೆ ಅಂಗಳದಲ್ಲಿ ಒಂದು ಹೆಜ್ಜೆಯನ್ನು ಹಾಕುತ್ತಿರಲಿಲ್ಲ. ಉತ್ತಮವಾದ ಬಣ್ಣ ಬಣ್ಣದ ಸೀರೆಗಳನ್ನು ಬಿಟ್ಟು ಪೂರ್ವಸಂಧ್ಯೆಯಂತೆ ಸ್ವಲ್ಪ ಕೆಂಪಾದ ವಸ್ತ್ರಗಳನ್ನೇ ಧರಿಸುತ್ತಿದ್ದಳು. ಅವಳ ಗರ್ಭಕ್ಕೆ ಪುಂಸವನಸಂಸ್ಕಾರವೂ ವಿಧಿವತ್ತಾಗಿ ನಡೆಯಿತು. ಅಶ್ವಗಂಧಿಫಲ ಅಥವಾ ಇತರ ಸಾಮಾನ್ಯವಾದ ಫಲದ ರಸವನ್ನು ಅಥವಾ ಅನ್ನರಸವನ್ನು ವಸ್ತ್ರದ ಮೂಲಕ ಗರ್ಭಿಣಿಯ ಮೂಗಿನಲ್ಲಿ ಹಿಂಡಿದರೆ ಗರ್ಭದಲ್ಲಿರುವ ಶಿಶುವಿಗೆ ತೃಪ್ತಿಯಾಗುತ್ತದೆಂದು ವೇದಾದಿಶಾಸ್ತ್ರದಲ್ಲಿ ಹೇಳಿದೆ. ಇದೇ ಷೋಡಶಸಂಸ್ಕಾರಗಳಲ್ಲಿ ಒಂದಾದ ಪುಂಸವನ ಸಂಸ್ಕಾರ. ಈ ಸಂಸ್ಕಾರವನ್ನು ಗರ್ಭದಲ್ಲಿರುವ ಶಿಶುವಿಗೆ ತಿಮ್ಮಣ್ಣ ಭಟ್ಟರು ಮಾಡಿದರು. ಮುಂದೆ ಈ ಶಿಶುವು ವಸ್ತ್ರದ ಜೋಳಿಗೆಯಲ್ಲಿ ಭಿಕ್ಷೆ ಬೇಡುವ ಸನ್ಯಾಸಿಯಾಗುತ್ತದೆ ಎಂದು ತಿಳಿಸುವುದಕ್ಕೋ ಎಂಬಂತೆ ವಸ್ತ್ರದ ಒಳಗಡೆ ಫಲವನ್ನಿಟ್ಟು ಅದರ ರಸವನ್ನು ಹಿಂಡಿ ಗರ್ಭದಲ್ಲಿರುವ ಮಗುವಿಗೆ ತೃಪ್ತಿಯನ್ನುಂಟು ಮಾಡಿದರು ಎಂದು ನಾವು ತಿಳಿಯಬಹುದಾಗಿದೆ.

ಅನಂತರ ಶುಭಗ್ರಹಗಳ ದೃಷ್ಟಿಯಿಂದ ಕೂಡಿದ ಶುಭಲಗ್ನದಲ್ಲಿ ಪೂರ್ವದಿಗಂಗನೆಯು ಚಂದ್ರನನ್ನು ಎಂಬಂತೆ, ಎಲ್ಲಾ ದ್ವಿಜರಿಂದಲೂ ರಾಜರಿಂದಲೂ ವಂದನೀಯವಾದ ಸುಂದರ ಶಿಶುವನ್ನು ಗೋಪಿಕಾಂಬೆಯು ಪ್ರಸವಿಸಿದಳು. 'ನಿಮಗೆ ಪುತ್ರೋತ್ಸವವಾಗಿದೆ' ಎಂಬ ಆಪ್ತರ ಮಾತನ್ನು ಕೇಳಿದಾಗ ತಿಮ್ಮಣ್ಣಾರ್ಯರು ಆ ಆನಂದಪ್ರದವಾದ ಮಾತೆಂಬ ಸಮುದ್ರದಲ್ಲಿ ಮುಳುಗಿರುವಾಗಲೇ, ನದಿಯಲ್ಲಿ ಹೋಗಿ ಮುಳುಗಿ ಮಂಗಳಸ್ನಾನ ಮಾಡಿದರು. ಪಿತೃಗಳ ಋಣವೆಂಬ ಸಮುದ್ರದಿಂದ ಮೇಲಕ್ಕೆದ್ದರು.

ಸುಮಂಗಲಿಯರು ಈ ಮಂಗಳ ವಾರ್ತೆಯನ್ನು ಕೇಳಿ, ಉಡುಗೊರೆಗಳನ್ನು ಹಿಡಿದುಕೊಂಡು ಬೇಗ ಬೇಗನೆ ಅಲ್ಲಿಗೆ ಬಂದು ಮಗುವನ್ನು ನೋಡಿ ಆನಂದದಿಂದ ಆಶೀರ್ವದಿಸುತ್ತಾ ಮಗುವಿಗೆ ಮೊದಲನೆಯ ಮಂಗಲ ಸ್ನಾನವನ್ನು ಮಾಡಿಸಿದರು. 'ಈಗ ಸ್ನಾನ ಮಾಡಿದ ಈ ಮಗುವು ಚಂದ್ರನಂತೆ ಅತ್ಯಂತ ಶುಭ್ರವಾಗಿದೆ. ಆದ್ದರಿಂದ

ಹೇಗೆ ಕತ್ತಲೆಯು ಚಂದ್ರನನ್ನು ಮುಟ್ಟುವುದಿಲ್ಲವೋ ಅದರಂತೆ ಈ ಶಿಶುವನ್ನು ತಮೋಗುಣವು ಈಗ ಮುಟ್ಟುವುದಿಲ್ಲ ಮುಂದೆಯೂ ಮುಟ್ಟಲಾರದು. ರಜೋಗುಣಕ್ಕೂ ಇಲ್ಲಿ ಅವಕಾಶವೇ ಇಲ್ಲ. ಆಹಾ ಆಶ್ಚರ್ಯ' ಎಂದು ಆ ಸುಮಂಗಲಿಯರು ಹೇಳುತ್ತಾ ಇದ್ದರು. ಅನಂತರ ತಿಮ್ಮಣ್ಣಾರ್ಯರು ಮಗುವಿಗೆ ಜಾತಕರ್ಮ ಸಂಸ್ಕಾರವನ್ನು ಮಾಡಿದರು. ಆ ಜಾತಕರ್ಮದಲ್ಲಿ ಅಗ್ನಿಪುರುಷದೇವರು ಚಂಚಲವಾದ ಇತ್ತ ಅತ್ತ ಚಲಿಸುತ್ತಿರುವ ತನ್ನ ಜ್ವಾಲೆಯೆಂಬ ಕೈಯಿಂದ 'ಈ ಶಿಶುವಿಗೆ ಸಮಾನನಾದವನು ಲೋಕದಲ್ಲಿ ಎಲ್ಲಿಯೂ ಯಾರೂ ಇಲ್ಲ' ಎಂದು ಹೇಳುತ್ತಿರುವರೋ ಎಂಬಂತೆ ತಿಮ್ಮಣ್ಣಾರ್ಯರು ಕೊಟ್ಟ ಹವಿಸ್ಸನ್ನು ಸ್ವೀಕರಿಸಿದರು. ತಿಮ್ಮಣ್ಣಾರ್ಯರು ಅಲ್ಲಿ ಬಂದಿರುವ ಬ್ರಾಹ್ಮಣರಿಗೆ, ಧನ, ಧಾನ್ಯ, ಬಂಗಾರ, ಬಟ್ಟೆ ಬರೆ ಮುಂತಾದ ಅನೇಕಾನೇಕ ವಸ್ತುಗಳನ್ನು ದಾನ ಮಾಡಿದರು. ಬ್ರಾಹ್ಮಣರು ಆ ದಾನಗಳನ್ನು ಸ್ವೀಕರಿಸಿ ಐಹಿಕಾಮುಷ್ಮಿಕ ಫಲಗಳು ಉಂಟಾಗಲೆಂದು ಆಶೀರ್ವದಿಸಿದರು.

ಉದಯಾಚಲದಿಂದ ಅಸ್ತಾಚಲದವರೆಗೆ ಇರುವ ಹಾಗೆಯೇ ಮಲಯಪರ್ವತದಿಂದ ಮೇರುಪರ್ವತದ-ವರೆಗಿರುವ ಎಲ್ಲಾ ಜನರಿಂದಲೂ ವೆಂಕಟಾಚಲಪತಿಯಾದ ಶ್ರೀನಿವಾಸನು ಹೇಗೆ ವಂದನೀಯನಾಗಿದ್ದಾನೆಯೋ ಅದರಂತೆ ಈ ಶಿಶುವೂ ಸಮಸ್ತ ಜನರಿಂದ ವಂದ್ಯವಾಗುತ್ತದೆ ಎಂಬ ವಿಷಯವನ್ನು ತಿಳಿಸಲಿಕ್ಕಾಗಿಯೋ ಎಂಬಂತೆ ತಿಮ್ಮಣ್ಣಾರ್ಯರು ಮಗುವಿಗೆ 'ವೇಂಕಟನಾಥ' ಎಂಬ ಹೆಸರಿಟ್ಟರು.

1. ಸಂಧ್ಯಾವಂದನಾದಿ ಸಮಯದಲ್ಲಿ ಅಭಿವಾದನಾದಿಗಳನ್ನು ಅವಶ್ಯವಾಗಿ ಮಾಡಬೇಕು. ಆಗ ತಂದೆಯು ಇಟ್ಟಿರುವ ನಿಯತವಾದ ಒಂದು ಹೆಸರಿನಿಂದ ಆ ಅಭಿವಾದನವನ್ನು ಮಾಡಬೇಕು. ನಮ್ಮ ಇಷ್ಟದಂತೆ ಹೆಸರಿಟ್ಟು-ಕೊಂಡು ಅಭಿವಾದ ಮಾಡಲಾಗುವುದಿಲ್ಲ. ಪ್ರತಿದಿನವೂ ಬೇರೆ ಬೇರೆ ಹೆಸರಿನಿಂದ ಅಭಿವಾದನ ಮಾಡುವುದೂ ಇಲ್ಲ. ಆದುದರಿಂದ ಸಂಧ್ಯಾವಂದನಾದಿ ನಿತ್ಯಕರ್ಮಗಳು ಸಾಂಗವಾಗಿ ನೆರವೇರುವುದಕ್ಕಾಗಿ ತಂದೆಯು ಮಕ್ಕಳಿಗೆ ನಾಮಕರಣ ಮಾಡಬೇಕೆಂದು ಕೆಲವರ ಅಭಿಪ್ರಾಯ.

2. ಏಕಾದಶೇऽಹನಿ ಪಿತಾ ನಾಮ ಕುರ್ಯಾತ್ 'ಹನ್ನೊಂದನೆಯ ದಿನ ತಂದೆಯು ಮಗುವಿಗೆ ಹೆಸರನ್ನಿಡಬೇಕು' ಎಂಬ ಭಗವಂತನ ಆಜ್ಞಾರೂಪವಾದ ವೇದ ವಾಕ್ಯದಿಂದ ಈ ನಾಮಕರಣವೆಂಬ ಕಾರ್ಯವನ್ನು ತಂದೆಯು ಮಾಡಬೇಕೆಂದು ತಿಳಿದು ಬರುತ್ತದೆ. ಆದುದರಿಂದ ನಾಮಕರಣವೆಂಬ ಈ ಕಾರ್ಯವನ್ನು ಮಾಡಲೇ-ಬೇಕು ಬಿಡಬಾರದು ಎಂದು ಇತರರು ಹೇಳುತ್ತಾರೆ.

3. ಈ ಮಗುವಿನಲ್ಲಿ ಗುಣಗಳು ಇವೆಯೆಂದು ನಾವು ಕಂಠೋಕ್ತಿಯಿಂದ ಹೇಳದಿದ್ದರೂ ಅದರ ಹೆಸರಿನ ಅರ್ಥವನ್ನು ನಿರ್ವಚನ ಮಾಡಿ ಬಿಡಿಸಿದಾಗ ಕಂಡು ಬರುವ ಗುಣಗಳು ಆ ಮಗುವಿನಲ್ಲಿ ಇವೆಯೆಂದು ತಿಳಿಯಲು ಸಾಧ್ಯವಾಗುತ್ತದೆ. ಆದುದರಿಂದ ನಾಮಕರಣ ಮಾಡಬೇಕೆಂದು ಮತ್ತೆ ಕೆಲವರ ಅಭಿಪ್ರಾಯ.

4. ಹೆಸರನ್ನಿಟ್ಟರೆ ಆ ಹೆಸರಿನಿಂದ ಕರೆಯುವುದು ಮುಂತಾದ ವ್ಯವಹಾರ ಸಿದ್ಧಿಸುತ್ತದೆ. ಹೆಸರಿಡದಿದ್ದರೆ ಯಾವ ವ್ಯವಹಾರವನ್ನೂ ಮಾಡಲಾಗುವುದಿಲ್ಲ. ಆದುದರಿಂದ ನಾಮಕರಣ ಮಾಡಬೇಕೆಂದು ಇನ್ನು ಕೆಲವರ ಅಭಿಪ್ರಾಯ.

5. ಶ್ರೀಹರಿಯಲ್ಲಿರುವ ಅನಂತಗುಣಗಳಲ್ಲಿ ಈ ಗುಣವು ಈ ಜೀವನಲ್ಲಿ ಅವನ ಯೋಗ್ಯತಾನುಸಾರ ಇದೆಯೆಂದು ತಿಳಿಸುವುದಕ್ಕೋಸ್ಕರವಾಗಿ ಅವನಲ್ಲಿರುವ ಒಂದು ಗುಣವನ್ನು ಬೋಧಿಸುವ ಒಂದು ಹೆಸರನ್ನಾದರೂ ಇಡಬೇಕೆಂದು ಕೆಲವರು ಹೇಳುತ್ತಾರೆ. ಹೀಗೆ ಮೀಮಾಂಸಾಶಾಸ್ತ್ರಾಭಿಜ್ಞರಾದ ಪಂಡಿತರು ಹೇಳುತ್ತಾರೆ. ಲೋಕ-ದಲ್ಲಿರುವ ಸಾಧಾರಣ ಮಕ್ಕಳಿಗೆ ಹಿಂದೆ ಹೇಳಿದ ಅನೇಕ ಪಕ್ಷಗಳು, (ನಾಮಕರಣ ಮಾಡುವುದಕ್ಕೆ ಹೇಳಿರುವ ನಿಮಿತ್ತಗಳು) ಕೊಡುತ್ತವೆಯೋ ಇಲ್ಲವೋ ಎಂದು ವಿವಾದವಿರಬಹುದು. ಆದರೆ ತಿಮ್ಮಣ್ಣಾರ್ಯರು ಮಗುವಿಗೆ

ಇಟ್ಟ ವೆಂಕಟನಾಥ ಎಂಬ ಹೆಸರು ಮಾತ್ರ ಮೇಲೆ ಹೇಳಿದ ಎಲ್ಲಾ ಪಕ್ಷಗಳಲ್ಲಿಯೂ ಕೂಡುತ್ತದೆ. ಆದುದರಿಂದ ಈ ಹೆಸರು ಅತ್ಯಂತ ಯುಕ್ತವಾಗಿದೆ.

ಈ ಶಿಶುವು ಕೆಲವು ತಿಂಗಳುಗಳಲ್ಲಿಯೇ ಎರಡು ಕೈಗಳನ್ನೂ ಎರಡು ಮೊಣಗಂಟುಗಳನ್ನು ನೆಲದಲ್ಲಿಟ್ಟು ಅಂಬೆಗಾಲಿಕ್ಕಿ ನಡೆಯಲಾರಂಭಿಸಿತು. ಧರ್ಮಕ್ಕೆ ನಾಲ್ಕು ಪಾದಗಳೆಂದೂ, ಅದು ವೃಷಭರೂಪದಿಂದ ಇರುತ್ತದೆ-ಯೆಂದೂ ಶಾಸ್ತ್ರಗಳಲ್ಲಿ ಕೇಳುತ್ತೇವೆ. ಕಾಮಧೇನುವೂ ಕೂಡ ತನಗೆ ಇಷ್ಟಬಂದ ರೂಪವನ್ನು ಧರಿಸುವುದರಿಂದ ನಾಲ್ಕು ಕಾಲುಗಳಿಂದ ಕೂಡಿದ ಧರ್ಮದೇವತೆಯಂತೆ ಇರುತ್ತದೆಯೆಂದು ನಾವು ತಿಳಿಯಬಹುದು. ಈ ಶಿಶುವೂ ಕೂಡ ನಾಲ್ಕು ಪಾದಗಳಿಂದ ಚಲಿಸುವ ಪಶುವಿನಂತೆ ಓಡಾಡುವಾಗ ನಾಲ್ಕು ಪಾದಗಳಿಂದ ಕೂಡಿದ ಪೂರ್ಣ ಧರ್ಮಾ-ಕಾರನೆಂದೂ, ಭಕ್ತರಿಗೆ ಸರ್ವೇಷ್ಟದಾಯಕನಾದುದರಿಂದ ಕಾಮಧೇನುರೂಪನೆಂದೂ ತಿಳಿಯಬಹುದಾಗಿದೆ. ಹೀಗೆ ಅಂಬೆಗಾಲಿಕ್ಕಿ ನಡೆಯುವಾಗ ಈ ಶಿಶುವು ಧರ್ಮರೂಪಧಾರಿಣಿಯಾದ ಕಾಮಧೇನುವಿನಂತೆ ಕಾಣಿಸಿತು.

ಈ ಮಗುವು ಕೆಲವು ಬಾರಿ ತನ್ನ ಕಾಲಿನ ಹೆಬ್ಬೆಟ್ಟನ್ನು ತನ್ನ ಮುಖ ಕಮಲದಲ್ಲಿಟ್ಟುಕೊಂಡು ಚೀಪುತ್ತಿತ್ತು. 'ನನ್ನ ಬಾಯಿಯೇ ಜೀವರ ಹೃದಯಕಮಲ. ಅಲ್ಲಿರುವ ನನ್ನ ಕಾಲಿನ ಹೆಬ್ಬೆಟ್ಟು ಜೀವರ ಅಂಗುಷ್ಠಪರಿಮಿತನಾದ ಪರಮಾತ್ಮ. ನನ್ನ ಕಾಲಿನ ಹೆಬ್ಬೆಟ್ಟು ನನ್ನ ಮುಖಕಮಲದಲ್ಲಿರುವಂತೆ ಜೀವರ ಅಂಗುಷ್ಠ ಪರಿಮಿತನಾದ ಪರಮಾತ್ಮನು ಜೀವರ ಹೃದಯದಲ್ಲಿರುತ್ತಾನೆ. ಆದುದರಿಂದಲೇ ಎಂದು ಸ್ತೋತ್ರ ಮಾಡುತ್ತಿದೆ. 'ಜೀವರ ದೇಹದ ಹೃದಯದಲ್ಲಿ ಅವರ ದೇಹದ ಅಂಗುಷ್ಠ ಪರಿಮಿತನಾಗಿ ಪರಮಾತ್ಮನು ಇರುತ್ತಾನೆಂದೂ, ಜೀವರ ಸ್ವರೂಪದೇಹದ ಹೃದಯದಲ್ಲಿ ಅವರ ಸ್ವರೂಪದೇಹದ ಅಂಗುಷ್ಠಪರಿಮಿತನಾಗಿರುತ್ತಾನೆಂದು, 'ದೇಹಾಂಗುಷ್ಠಮಿತೋ ದೇಹೇ ಜೀವಾಂಗುಷ್ಠ-ಮಿತೋ ಹೃದಿ' ಎಂಬ ಪ್ರಮಾಣವೂ ಹೇಳುತ್ತದೆ. ಈ ವಿಷಯಗಳನ್ನೆಲ್ಲಾ ಹೆಬ್ಬೆಟ್ಟನ್ನು ಚೀಪುತ್ತಿರುವ ಶಿಶುವು ಸೂಚಿಸುತ್ತದೆಯೋ ಎಂಬಂತೆ ಕಾಣಿಸುತ್ತಿತ್ತು.

ಮಗುವು ಎದ್ದು ನಿಲ್ಲಲು ಪ್ರಯತ್ನಿಸಲಾರಂಭಿಸಿತು. ಆಗ ಮೇಲಕ್ಕೆ ಎದ್ದು ನಿಲ್ಲುತ್ತಾ ಬೀಳುತ್ತಿತ್ತು. ಬಿದ್ದು ಪುನಃ ಏಳುತ್ತಿತ್ತು. ಇದರಿಂದ ತಾನು ಮುಂದೆ ಮಾಡುವ ಅನಂತಾನಂತ ನಾರಾಯಣ ನಮಸ್ಕಾರಗಳನ್ನು ಈಗಲೇ ಅಭ್ಯಾಸ ಮಾಡುವಂತೆ ಕಾಣಸುತ್ತಿತ್ತು. ಅನಂತರ ಶಿಶುವು ಕ್ರಮವಾಗಿ ಮನೆಯ ಹೊರಗೆ ಅಂಗಳದಲ್ಲಿ ವಿಹರಿಸಲು ಪ್ರಾರಂಭಿಸಿತು. ಆಗ ಮಗುವಿನ ಮೈಯಲ್ಲಿ ಧೂಳಿನ ರಾಶಿಯು ಮೆತ್ತಿಕೊಳ್ಳುತ್ತಿತ್ತು. ಜಗತ್ತಿನ ಎಂಬಂತೆ ಆ ಧೂಳಿಯ ರಾಶಿಯು ಕಾಣಿಸುತ್ತಿತ್ತು. ಪ್ರಕೃತಿಯು ಅತಿಸೂಕ್ಷ್ಮವಾದುದರಿಂದ ಕಾಣಿಸುವುದಿಲ್ಲ. ಈ ಧೂಳಿಯ ರಾಶಿ-ಯಾದರೋ ಕಾಣಿಸುತ್ತದೆ ಇಷ್ಟೇ ವ್ಯತ್ಯಾಸವು. ಪ್ರಕೃತಿಯೇ ನಮ್ಮ ಕಣ್ಣಿಗೆ ಕಾಣುವುದಾದರೆ ಈ ಧೂಳಿನ ರಾಶಿಯು ಆ ಪ್ರಕೃತಿಗೆ ಸಮಾನವಾದೀತು. ಇಲ್ಲವಾದರೆ ಮಗುವಿನ ಮೈಗೆ ಹತ್ತಿದ ಈ ಧೂಳಿನ ರಾಶಿಯು ಅನುಪಮವೇ ಸರಿ.

ಉತ್ತಮ ಗುಣವಂತರಾದ ತಿಮ್ಮಣ್ಣಭಟ್ಟರು ಮಹಾಗುಣ ಸಂಪನ್ನವಾದ ಈ ಶಿಶುವಿಗೆ ಆರನೆಯ ತಿಂಗಳಿನಲ್ಲಿ ಅನ್ನಪ್ರಾಶನವನ್ನೂ, ಮೂರನೇ ವರ್ಷದಲ್ಲಿ ಚೌಲವನ್ನು ಮಾಡಿದರು. ಮರಳಿನಲ್ಲಿ 'ಓಂ' ಎಂದು ಬರೆದು ಆ ಗೆರೆಯನ್ನು ತೋರಿಸಿ ಮಗು "ಈ ಗೆರೆಯನ್ನು 'ಓಂ'ಎಂದು ಓದು" ಎಂದರು. ಆಗ ಮಗುವಾದ ವೆಂಕಟನಾಥನು ಉತ್ತರ ಕೊಟ್ಟನು. ಅಪ್ಪಾ , ಪರಮಾತ್ಮನು ಅನಂತಗುಣಪರಿಪೂರ್ಣನು. ಇದನ್ನು ತಿಳಿಯಬೇಕಾದರೆ ಅವನಲ್ಲಿರುವ ಅನಂತಗುಣಗಳ ಜ್ಞಾನ ಬೇಕು. ಅನಂತಗುಣಗಳ ಜ್ಞಾನ ಬರಬೇಕಾದರೆ ಪರಮಾತ್ಮನಿಗೆ ವಾಚಕವಾದ ಅನಂತ-ಶಬ್ದಗಳ ಜ್ಞಾನಗಳ ಜ್ಞಾನಬೇಕು. ಅನಂತವಾದ ಶಬ್ದಗಳನ್ನು ಬರೆಯಲು ಅನಂತ ಪ್ರದೇಶ ಬೇಕು. ಅದಕ್ಕಾಗಿ ಅನಂತ ರೇಖೆಗಳನ್ನು ಹಾಕಬೇಕು. ನೀವಾದರೋ ಚಿಕ್ಕ ಜಾಗದಲ್ಲಿ ಬಲು ಚಿಕ್ಕ ರೇಖೆಯೊಂದನ್ನು ಬರೆದಿದ್ದೀರಿ. ಈ ರೇಖೆಯಿಂದ ನೆನಪಿಗೆ ಬರುವ ಬಲು ಚಿಕ್ಕದಾದ ಓಂಕಾರವು ಹೇಗೆ ಗುಣಪೂರ್ಣವಾಚಕವಾಗುತ್ತದೆ ?

ಅಕ್ಷರಾಭ್ಯಾಸದ ಉತ್ಸವವನ್ನು ನೋಡಲು ಬಂದಿದ್ದ ಜನರು 'ಅತಿ ಬಾಲ್ಯದಲ್ಲಿಯೇ ಈ ಬಾಲಕನಿಗೆ ಅಧ್ಯಾತ್ಮ ತತ್ತ್ವವಿಷಯದಲ್ಲಿರುವ ದಾರ್ಢ್ಯವನ್ನು ನೋಡಿ - 'ಈ ಬಾಲಕನು ಪರಮ ವೇದಾಂತಿಗಳಿಗೆ ಮಾತ್ರವೇ ತಿಳಿಯಲು ಸಾಧ್ಯವಾದ ಈ ಮಾತನ್ನು ಸರ್ವಶಾಸ್ತ್ರಾಭಿಜ್ಞರಂತೆ ಸುಖವಾಗಿ ಮಾತಾಡುತ್ತಿದ್ದಾನೆ. ಇಂತಹ ಪುತ್ರರತ್ನವನ್ನು ಪಡೆದ ತಿಮ್ಮಣ್ಣಾಚಾರ್ಯರು ಪುಣ್ಯವಂತರೇ ಸರಿ. ಭಾಗ್ಯಶಾಲಿಗಳೇ ಸರಿ ಎಂದು ಆಶ್ಚರ್ಯದಿಂದ ಉದ್ಗರಿಸಿದರು. ವೆಂಕಟಾಂಬೆ ತಿಮ್ಮಣ್ಣಭಟ್ಟರ ಹಿರಿಯ ಮಗಳು. ಇಬ್ಬರು ತಮ್ಮಂದಿರು ವೆಂಕಟಾಂಬೆಗೆ. ಅವಳೂ ಬಹಳ ಚುರುಕು. ಕಾವ್ಯಗಳನ್ನೆಲ್ಲಾ ಓದಿದ್ದಳು. ಸಲ್ಲಕ್ಷಣವಂತೆಯಾದ ಸುಂದರಿಯಾದ ಹುಡುಗಿ. ತಮ್ಮಂದಿರಿಂದ ಕೂಡಿದ ಅವಳನ್ನು ಕಂಡಾಗ ಬಲರಾಮ ಕೃಷ್ಣರೊಡನೆ ಸುಭದ್ರೆಯನ್ನು ಕಂಡಂತೆ ಆಗುತ್ತಿತ್ತು. ವೆಂಕಟನಾಥನ ಮುಖಕಮಲ ನೋಡಿದ ಮೇಲೆ ಕೃತಕೃತ್ಯರಾದ ತಿಮ್ಮಣ್ಣಭಟ್ಟರು 'ಎಂಟು ವರ್ಷ ವಯಸ್ಸಿನ ತನ್ನ ಮಗಳಿಗೆ ಯೋಗ್ಯವಾದ ವರನು ಎಲ್ಲಿ ಸಿಕ್ಕಿಯಾನು' ಎಂದು ಆಲೋಚಿಸಲಾರಂಭಿಸಿದರು. ಕುಲೀನ ಮತ್ತು ವಿದ್ವಾಂಸನಾದ ಹುಡುಗನು ಎಲ್ಲಿದ್ದಾನೆಂದು ವಿಚಾರಿಸಲಾರಂಭಿಸಿದರು.



ವಿದ್ವತ್ಕುಲಾವತಂಸ,
ಮಹಾಕವಿ ಶ್ರೀಮನ್ನಾರಾಯಣಾಚಾರ್ಯೇಣ ರಚಿತಂ

# ಶ್ರೀಮದ್ರಾಘವೇಂದ್ರವಿಜಯ ಮಹಾಕಾವ್ಯಂ

## ಚತುರ್ಥ ಸರ್ಗ

**ಅವತಾರಿಕೆ :** ಹಿಂದಿನ ಸರ್ಗದ ಕೊನೆಯ ಶ್ಲೋಕದಲ್ಲಿ "ತಿಮ್ಮಣ್ಣಾಚಾರ್ಯರು ತಮ್ಮ ಪುತ್ರಿಯನ್ನು ಕುಲೀನನೂ, ಪಂಡಿತನೂ ಆದ ಉತ್ತಮ ವಿದ್ಯಾವಂತನಾದ ಯಾರಾದರೊಬ್ಬ ಉತ್ತಮ ವರನಿಗೆ ಕೊಟ್ಟು ಮದುವೆ ಮಾಡಬೇಕು ಎಂದು ಯೋಚಿಸಿದರು" ಎಂಬುದಾಗಿ ಹೇಳಿದೆ. ಈಗ ಅಂತಹಾ ವರನೊಬ್ಬನ ಪರಿಚಯವನ್ನು ಹೇಳುವುದಕ್ಕೋಸ್ಕರ ಕಾಶ್ಯಪ ವಂಶವನ್ನು ವರ್ಣನೆ ಮಾಡುತ್ತಿದ್ದಾರೆ.

**ಅಥೇಂದ್ರರಕ್ಷೋತ್ಸುಕವಾಮನೋದ್ಭವಪ್ರಸಿದ್ಧಿಮತ್–ಕಾಶ್ಯಪವಂಶಸಂಭವಃ ।**
**ಭುವಿ ಶ್ರುತಾದಂಕಿಪುರಾಧಿನಾಯಕೋ ಭಭೂವ ತಿಮ್ಮಣ್ಣಡಣಾಯಕಾಭಿಧಃ ॥೧॥**
**(ಭುವಿಶ್ರುತೋಡಂಕಿಪುರಾಧಿನಾಯಕೋ ಭಭೂವ ತಿಮ್ಮಣ್ಣಡಣಾಯಕಾಭಿಧಃ (ಗು.ಸೇ.ಪಾ.))**

**ತಾತ್ಪರ್ಯ :** ಈ ನಾಲ್ಕನೆಯ ಸರ್ಗದಲ್ಲಿ ವೆಂಕಟಾಂಬೆಯ ವಿವಾಹ, ವೇಂಕಟನಾಥನ ಉಪನಯನ, ಅವನ ವಿದ್ಯಾಭ್ಯಾಸ, ಅವನ ಸೌಂದರ್ಯ, ಅವನ ಪತ್ನಿಯಾಗಲಿರುವ ಸರಸ್ವತಿ ಎಂಬ ಕನ್ಯೆಯ ಸದ್ಗುಣಗಳು ಮತ್ತು ಸೌಂದರ್ಯವನ್ನು ವರ್ಣಿಸಲಿರುವ ಕವಿವರ್ಯರು ಆದಿಯಲ್ಲಿ ವೆಂಕಟಾಂಬೆಯ ಪತಿಯಾಗಲಿರುವ ಶ್ರೀಲಕ್ಷ್ಮೀನರಸಿಂಹಾಚಾರ್ಯರ ವಂಶವನ್ನೂ ಅವರ ವಂಶದ ಮೂಲ ಪುರುಷರ ಬಗ್ಗೆಯೂ ತಿಳಿಸುತ್ತಾರೆ. ಒಂದಾನೊಂದು ಕಾಲದಲ್ಲಿ ಬಲಿ ಎಂಬ ಪ್ರಬಲನಾದ ದೈತ್ಯನು ಇಂದ್ರನನ್ನು ಸೋಲಿಸಿ, ಓಡಿಸಿ, ತಾನೇ ಸ್ವರ್ಗಾಧಿಪತಿಯಾದನು. ಆಗ ಶ್ರೀಮನ್ನಾರಾಯಣನು ಕಶ್ಯಪರಿಂದ ಆದಿತಿದೇವಿಯರಲ್ಲಿ ವಾಮನ ಎಂಬ ಹೆಸರಿನಿಂದ ಅವತರಿಸಿ ಬ್ರಹ್ಮಚಾರಿಯಾಗಿ, ಬಲಿ ಚಕ್ರವರ್ತಿಯ ಯಜ್ಞಶಾಲೆಗೆ ಹೋಗಿ ಮೂರು ಹೆಜ್ಜೆ ಭೂಮಿಯನ್ನು ಬೇಡಿದನು. ಆ ಭೂಮಿಯನ್ನು ಅಳೆದು ತೆಗೆದುಕೊಳ್ಳುವ ನೆಪದಿಂದ ಮೂರೂ ಲೋಕಗಳನ್ನು ತನ್ನ ಎರಡು ಹೆಜ್ಜೆಗಳಿಂದ ಅಳೆದು, ಮೂರನೆಯ ಹೆಜ್ಜೆಯಿಂದ ಬಲಿಚಕ್ರವರ್ತಿಯನ್ನು ಸುತಲ ಲೋಕಕ್ಕೆ ತಳ್ಳಿ, ಇಂದ್ರನಿಗೆ ಸ್ವರ್ಗಾಧಿಪತ್ಯವನ್ನು

ಮತ್ತೆ ನೀಡಿದರು. ಹೀಗೆ ವಾಮನದೇವರ ಅವತಾರದಿಂದ ಕಶ್ಯಪ ವಂಶವು ಅತ್ಯಂತ ಪ್ರಸಿದ್ಧವಾಗಿದೆ. ಇಂತಹ ಕಾಶ್ಯಪ ಗೋತ್ರದಲ್ಲಿ ತಿಮ್ಮಣ್ಣ ಡಣಾಯಕನೆಂಬ ಪ್ರಸಿದ್ಧ ಪುರುಷನು ಹುಟ್ಟಿದನು. ಅವನು ತನ್ನ ಪ್ರಭಾವದಿಂದ ಪ್ರಸಿದ್ಧವಾದ ಆದಂಕಿಪುರವನ್ನು (ಡಂಕಿನಪುರ) ವಶಪಡಿಸಿಕೊಂಡು ಅಲ್ಲಿಯೇ ರಾಜನಾಗಿದ್ದನು.

**ವಿಶೇಷಾಂಶ :** ಮರೀಚೇಃ ಕಶ್ಯಪೋಜಜ್ಞೇ ವಾಮನಸ್ಯ ಪಿತಾವಟೋಃ ಎಂಬುದಾಗಿ ಶ್ರೀಮಣಿಮಂಜರಿಯಲ್ಲಿ ಬರುವ ಬ್ರಹ್ಮಮಾನಸ ಪುತ್ರರಾದ ಮರೀಚಿ ಋಷಿಗಳ ಮಕ್ಕಳು ಕಶ್ಯಪರು. ಅವರು ವಾಮನರೂಪಿಯಾದ ಶ್ರೀಹರಿಯ ಆವಿರ್ಭಾವಕ್ಕೆ ಕಾರಣರಾಗಿ ಶ್ರೀವಾಮನದೇವರ ತಂದೆ ಎನಿಸಿದರು ಎಂದು ಹೇಳಿದೆ.

**ಅವತಾರಿಕೆ :** ಆ ವಂಶದಲ್ಲಿ ತಿಮ್ಮರಸ ಎಂಬುವನು ಜನ್ಮಿಸಿದನು ಎಂದು ಹೇಳುತ್ತಾರೆ.

**ತದನ್ವವಾಯೇ ಜನಿತೋ ದ್ವಿಜೋತ್ತಮೋ ಮಹೀತಲೇ ತಿಮ್ಮರಸಾರ್ಯನಾಮಭಾಕ್ ।**
**ಉವಾಸ ನಾರೀಸರಸೀತಿವಿಶ್ರುತಾಂ ಪುರೀಮುದಾರೋ ನಿಜತೇಜಸಾऽऽರ್ಜಿತಾಮ್ ॥೨॥**

**ತಾತ್ಪರ್ಯ :** ಆ ತಿಮ್ಮಣ್ಣ ಡಣಾಯಕನ ವಂಶದಲ್ಲಿ "ತಿಮ್ಮರಸಾರ್ಯ" ಎಂಬುವವರು ಜನ್ಮತಾಳಿದರು. ದಾನಶೂರರೂ ಶ್ರೇಷ್ಠರೂ ಆದ ಆ ಬ್ರಾಹ್ಮಣೋತ್ತಮರು ಸ್ವಸಾಮರ್ಥ್ಯದಿಂದ ನಾರೀಸರಸೀ ಎಂಬ ಭೂಮಿಯಲ್ಲಿ ಪ್ರಖ್ಯಾತವಾದ ಪಟ್ಟಣವನ್ನು ಸಂಪಾದಿಸಿ ಅಲ್ಲಿಯೇ ನಿರಂತರವಾಗಿ ವಾಸಮಾಡುತ್ತಿದ್ದರು.

**ಅವತಾರಿಕೆ :** ಈಗ ಕವಿಗಳು ತಿಮ್ಮರಸಾರ್ಯರ ಮಗನ ವಿಷಯವನ್ನು ತಿಳಿಸುತ್ತಾರೆ.

**ಅಜಾಯತಾಸ್ಮಾದವನೀಸುರೋತ್ತಮಾದ್ಭುವಿ ಪ್ರತೀತಃ ಫಣಿಶಾಯಿಸಂಜ್ಞಯಾ ।**
**ಚಕಾರ ವಾಸಂ ಕೃತಮಾಲಿಕಾಪಗಾಪಯಃಪವಿತ್ರೇ ಮಧುರಾಭಿಧೇ ಪುರೇ ॥೩॥**

**ತಾತ್ಪರ್ಯ :** ಬ್ರಾಹ್ಮಣ ಶ್ರೇಷ್ಠರಾದ ಈ ತಿಮ್ಮರಸಾರ್ಯರಿಗೆ ಫಣಿಶಾಯಿ ಎಂಬು ಪ್ರಸಿದ್ಧನಾದ ಮಗನು ಹುಟ್ಟಿದನು. ಅವನು ಕೃತಮಾಲಿಕಾ ಎಂಬ ನದಿಯ ಜಲದಿಂದ ಪವಿತ್ರವಾದ ಮಧುರಾ ಎಂಬ ಪಟ್ಟಣದಲ್ಲಿ ವಾಸಮಾಡುತ್ತಿದ್ದನು.

**ಅವತಾರಿಕೆ :** ಇನ್ನು ಮುಂದೆ ಲಕ್ಷ್ಮೀನರಸಿಂಹಾಚಾರ್ಯರನ್ನು ವರ್ಣಿಸುತ್ತಾರೆ. ಮೊದಲು ಹಿಂದೆ ಹೇಳಿದ ಫಣಿಶಾಯಿ ಎಂಬುವವರಿಗೆ ಅಸಾಧಾರಣ ಬುದ್ಧಿವಂತನಾದ ಮಗನು ಹುಟ್ಟಿದನು ಎಂದು ತಿಳಿಸುತ್ತಾರೆ.

**ಅರಾತಿವಿದ್ವದ್ವಿಜಯಾರ್ಥವೃ(ಮೃ)ದ್ಧಿಮತ್ಸರಸ್ವತೀನಿತ್ಯನಿವಾಸಮಂದಿರಮ್ ।**
**ಅಭೂದಭೂತೋಪಮಬುದ್ಧಿಸಾಗರಃ ಸುತೋऽಸ್ಯ ಲಕ್ಷ್ಮೀನರಸಿಂಹನಾಮಭಾಕ್ ॥೪॥**

**ತಾತ್ಪರ್ಯ :** ಈ ಹಿಂದೆ ಹೇಳಿದ ಫಣಿಶಾಯಿ ಎಂಬುವವರಿಗೆ ಲಕ್ಷ್ಮೀನರಸಿಂಹ ಎಂಬ ಹೆಸರುಳ್ಳ ಮಗನು ಜನಿಸಿದನು. ಆ ಲಕ್ಷ್ಮೀನರಸಿಂಹಾಚಾರ್ಯರು ಪ್ರತಿವಾದಿಪಂಡಿತರನ್ನು ಜಯಿಸುವ ಸಲುವಾಗಿ ವೃದ್ಧಿಯನ್ನು ಹೊಂದುತ್ತಿರುವ ಸರಸ್ವತಿಗೆ ನಿರಂತರ ಆವಾಸಸ್ಥಾನವಾಗಿದ್ದರು. (ಅವರ ಪಾಂಡಿತ್ಯವು ಪ್ರತಿ

ದಿನವೂ ವೃದ್ಧಿಸುತ್ತಿತ್ತು.) ಅವರು ಅಸಾಧಾರಣ ಬುದ್ಧಿಶಾಲಿಗಳಾಗಿದ್ದರು. ಅವರ ಬುದ್ಧಿಗೆ ಹೋಲಿಕೆ ಕೊಡಲು ಯಾವ ವಸ್ತುವೂ ಸಿಗುತ್ತಿರಲಿಲ್ಲ.

**ಅವತಾರಿಕೆ :** ಫಣಿಶಾಯಿಯವರು ತಮ್ಮ ಮಗನಿಗೆ ಯುಕ್ತ ವಯಸ್ಸಿನಲ್ಲಿ ಉಪನಯನವನ್ನು ಮಾಡಿ ನಂತರ ಅವನ ಮದುವೆಗಾಗಿ ತಿಮ್ಮಣ್ಣಾಚಾರ್ಯರ ಬಳಿಗೆ ಬಂದರು ಎಂದು ವರ್ಣಿಸುತ್ತಾರೆ.

**ಕೃತೋಪನೀತೇಃ ಸುಕೃತಾಕೃತೇರಯಂ ಸುತಸ್ಯ ವೈವಾಹಿಕಶೋಭನೋದಯಮ್ ।**
**ಚಿಕೀರ್ಷುರಾಗಾತ್ ಕಿಲ ಯತ್ರ ಸಂಸ್ಥಿತೌ ಸುತಾವಿವಾಹೋತ್ಸವಕಾರಿದಂಪತೀ ॥೫॥**

**ತಾತ್ಪರ್ಯ :** ಫಣಿಶಾಯಿಯವರು ತಮ್ಮ ಪುತ್ರನಿಗೆ ಯೋಗ್ಯಕಾಲದಲ್ಲಿ ಉಪನಯನವನ್ನು ಮಾಡಿದರು. ಅನಂತರ ವಿದ್ಯಾಭ್ಯಾಸ ಮಾಡಿ ತಾರುಣ್ಯವನ್ನು ಹೊಂದಿದ ಲಕ್ಷ್ಮೀನರಸಿಂಹಾಚಾರ್ಯರು ಅತ್ಯಂತ ಸುಂದರರಾಗಿಯೂ ಧರ್ಮವೇ ಮೂರ್ತಿವೆತ್ತವರಂತೆಯೂ ಇದ್ದರು. ಆಗ ಅವರ ತಂದೆಯು ಮಗನಿಗೆ ಮದುವೆಯೆಂಬ ಉತ್ಕೃಷ್ಟವಾದ ಮಂಗಳ ಕಾರ್ಯವನ್ನು ಮಾಡಲು ಅಪೇಕ್ಷಿಸಿ, ತಮ್ಮ ಮಗಳಾದ ವೆಂಕಟಾಂಬೆಯ ಮದುವೆಯನ್ನು ಮಾಡಲು ಉತ್ಸುಕರಾಗಿದ್ದ ತಿಮ್ಮಣ್ಣಾಚಾರ್ಯ ದಂಪತಿಗಳು ವಾಸ ಮಾಡುತ್ತಿದ್ದ ತುಂಡೀರಮಂಡಲದಲ್ಲಿದ್ದ ಕಾವೇರಿಪಟ್ಟಣ ಎಂಬ ಊರಿಗೆ ಬಂದರು.

**ಅವತಾರಿಕೆ :** ವೆಂಕಟಾಂಬಾದೇವಿಯ ವಿವಾಹ :- ವಿವಾಹಕ್ಕಾಗಿ ಬಂದಿರುವ ವರನಿಗೆ ತಿಮ್ಮಣ್ಣಾಚಾರ್ಯರು ಕನ್ಯಾದಾನ ಮಾಡಿದರೆಂದು ಕವಿಗಳು ವರ್ಣಿಸುತ್ತಾರೆ.

**ಸಮಾಗತಂ ಸದ್ಮ ಸುತೋಚಿತಂ ವರಂ ಸ್ವಕೀಯವಂಶಾನುಗುಣಾನ್ವಯೋದ್ಭವಮ್ ।**
**ಸುತಾಕರಂ ಗ್ರಾಹಯತಿ ಸ್ಮ ಮಾನ್ಯಧೀಃ ಅಪೂಜಯತ್‌ತತ್ಪಿತರೌ ಸಬಾಂಧವೌ ॥೬॥**

**ತಾತ್ಪರ್ಯ :** ಉತ್ತಮ ಜ್ಞಾನಿಗಳಾದ ತಿಮ್ಮಣ್ಣಾಚಾರ್ಯರು ತಮ್ಮ ಮನೆಗೆ ಬಂದ ವರನನ್ನು ನೋಡಿದರು. ಆ ವರನು ತಮ್ಮ ಮಗಳಿಗೆ ರೂಪ ಗುಣಾದಿಗಳಿಂದ ಅನುರೂಪನಾಗಿದ್ದನು. "ವಿವಾಹಶ್ಚ ವಿವಾದಶ್ಚ ಸಮಯೋರೇವ ಶೋಭತೇ" ಎಂಬಂತೆ ತಮ್ಮ ವಂಶಕ್ಕೆ ಅನುಗುಣವಾದ ವಂಶದಲ್ಲಿ ಜನಿಸಿರುವ ಅವರನ್ನು ತಮ್ಮ ಮಗಳಿಗೆ ತಕ್ಕವನೆಂದು ತೀರ್ಮಾನಿಸಿ ಮಂಗಳ ಮುಹೂರ್ತದಲ್ಲಿ ಲಕ್ಷ್ಮೀನರಸಿಂಹಾಚಾರ್ಯರಿಗೆ ತಮ್ಮ ಮಗಳಾದ ವೆಂಕಟಾಂಬಾದೇವಿಯೊಂದಿಗೆ ಪಾಣಿಗ್ರಹಣ ಮಾಡಿಸಿದರು. ವಿವಾಹವು ಬಹಳ ಸಂಭ್ರಮದಿಂದ ನೆರವೇರಿತು. ಮದುವೆಗೆ ಬಂದಿದ್ದ ವರನ ಮಾತಾಪಿತೃಗಳನ್ನೂ, ಅವರ ಬಂಧು ಬಾಂಧವರನ್ನೂ, ವಸ್ತ್ರ, ಗಂಧ, ಪುಷ್ಪ, ಭೋಜನ ತಾಂಬೂಲಾದಿ ಉಪಚಾರಗಳಿಂದ ಪೂಜಿಸಿದರು. ಎಲ್ಲರನ್ನೂ ಯಥೋಚಿತವಾಗಿ ಸತ್ಕರಿಸಿದರು.

**ಅವತರಣಿಕೆ :** ಗುರುರಾಜನ ಉಪನಯನ :- ತಮ್ಮ ಮಗಳಾದ ಗೋಪಿಕಾಂಬಾದೇವಿಯ ವಿವಾಹವನ್ನು ಮಾಡಿದ ನಂತರ ತಿಮ್ಮಣ್ಣಾಚಾರ್ಯರು ತಮ್ಮ ಹಿರಿಯ ಮಗನಾದ ಗುರುರಾಜಾಚಾರ್ಯನ ಉಪನಯನವನ್ನು ಮಾಡಿದರೆಂದು ವರ್ಣಿಸುತ್ತಾರೆ.

**ಅಥೋಪನೀತಿಂ ವಿದಧೇ ಪಿತಾಽಗ್ರತಃ ಸಮುದ್ಭವಸ್ಯಾತ್ಮಗುಣಾನುಕಾರಿಣಃ ।**
**ಸುತಸ್ಯ ಗರ್ಗಃ ಕ್ಷಿತಿವಾಸವೋ ಯಥಾ* ಸ್ವವೈರಿಧಾತ್ರೀಮಥನಾಗ್ರಜನ್ಮನಃ ॥೭॥**
(* ಗು.ಸೇ.ಪಾ. - ಸುತಸ್ಯ ಗರ್ಗಃ ಶಿತಿವಾಸೋಯಥಾ)

**ತಾತ್ಪರ್ಯ** : ದ್ವಾಪರಯುಗದಲ್ಲಿ ಶ್ರೀಕೃಷ್ಣ ಬಲರಾಮರಿಬ್ಬರೂ ಗೋಕುಲದಲ್ಲಿ ಬೆಳೆಯುತ್ತಿದ್ದರು. ಶ್ರೀಕೃಷ್ಣನು ತನ್ನನ್ನು ಕೊಲ್ಲಲು ಬಂದ ದಾಸಿಯ ರೂಪಧರಿಸಿದ ಪೂತನೆಯನ್ನು ಕೊಂದಿದ್ದನು. ಅವನೂ ಅವನ ಅಣ್ಣನಾದ ನೀಲಾಂಬರನೆಂದು ಪ್ರಸಿದ್ಧನಾದ ಬಲರಾಮನೂ ದೊಡ್ಡವರಾದರು. ಮಥುರೆಗೆ ಬಂದರು. ಆಗ ಕಂಸವಧೆಯ ನಂತರ ವಸುದೇವನಿಂದ ಪ್ರೇರಿತರಾದ ಬ್ರಾಹ್ಮಣ ಶ್ರೇಷ್ಠರಾದ ಗರ್ಗಾಚಾರ್ಯರು ಬಲರಾಮನಿಗೆ ಉಪನಯನವನ್ನು ಮಾಡಿಸಿದ್ದರು. ಪ್ರಕೃತ ತಮ್ಮ ಮಗಳಾದ ಗೋಪಿಕಾಂಬೆಯ ಮದುವೆಯಾದ ಸ್ವಲ್ಪ ಸಮಯದ ನಂತರ ತಿಮ್ಮಣ್ಣಾಚಾರ್ಯರು ತಮ್ಮ ಹಿರಿಯ ಮಗನಾದ ತಮ್ಮಂತೆಯೇ ಗುಣಶಾಲಿಯಾಗಿ ತಮ್ಮಂತೆಯೇ ಇರುವ ಗುರುರಾಜಾರ್ಯರಿಗೆ ಬಲರಾಮನಿಗೆ ಗಗಾಚಾರ್ಯರು ಮಾಡಿದ ರೀತಿಯಲ್ಲಿ ಉಪನಯನವನ್ನು ಮಾಡಿದರು.

**ಅವತಾರಿಕೆ** : ವೇಂಕಟನಾಥಾಚಾರ್ಯರ ಉಪನಯನ :– ಕೆಲವು ಸಮಯದ ನಂತರ ತಿಮ್ಮಣ್ಣಾಚಾರ್ಯರು ವಿಧಿವಶರಾದರು. ತದನಂತರದಲ್ಲಿ ಅವರ ಹಿರಿಯ ಪುತ್ರರಾದ ಗುರುರಾಜಾಚಾರ್ಯರು ತಮ್ಮ ಸಹೋದರರಾದ ವೆಂಕಟನಾಥಾಚಾರ್ಯರಿಗೆ ಉಪನಯನ ಮಾಡಿದುದನ್ನು ಕವಿಗಳು ವರ್ಣಿಸುತ್ತಾರೆ.

**ಋತೌ ವಸಂತೇಽನುಜಮಷ್ಟಹಾಯನಂ ತಮಗ್ರಜೋ ಮಾಸಿ ಮಧಾವುಪಾನಯತ್ ।**
**ನಿಘಂಟುನಾನಾಲಿಪಿಲಬ್ಧನೈಪುಣಂ ಪಿತುಃ ಸಮಾನಂ ಕಲಯನ್ನಿವಾತ್ಮನಃ ॥೮॥**

**ತಾತ್ಪರ್ಯ** : ಮಗಳ ಮದುವೆಯಾಗಿ ಸ್ವಲ್ಪ ಸಮಯದ ನಂತರ ವೆಂಕಟನಾಥಾರ್ಯರ ತಂದೆ ತಾಯಿಗಳು ಸ್ವರ್ಗಸ್ಥರಾದರು. ಆಗ ತಿಮ್ಮಣ್ಣಾಚಾರ್ಯರ ಹಿರಿಯ ಪುತ್ರರಾದ ಗುರುರಾಜಾಚಾರ್ಯರ ಮೇಲೆ ಸಂಸಾರದ ಭಾರವು ಬಿದ್ದಿತು. ಅವರು ತಮ್ಮ ತಮ್ಮನನ್ನು ತಂದೆಗೆ ಸಮಾನನನ್ನಾಗಿ ಮಾಡಲು ಬಯಸಿದರು. ಅದಕ್ಕಾಗಿ ವೇದಶಾಸ್ತ್ರ ವಿದ್ಯಾಭ್ಯಾಸಗಳನ್ನು ಮಾಡಬೇಕಾಗಿತ್ತು. ವೇದಾಧಿಕಾರದ ಸಲುವಾಗಿ ತಮ್ಮನಿಗೆ ಉಪನಯನ ಮಾಡಲು ನಿರ್ಧರಿಸಿದರು. ತಮ್ಮನಿಗೆ ಉಪನಯನ ಮಾಡಿ ವಿದ್ಯಾಭ್ಯಾಸ ಮಾಡಿಸಿದರೆ ತಂದೆಗೆ ಗೌರವವನ್ನು ತೋರಿದಂತೆ ಆಗುತ್ತದೆ ಎಂಬುದನ್ನು ತಿಳಿದ ಗುರುರಾಜಾಚಾರ್ಯರು ತಮ್ಮನಿಗೆ ಉಪನಯನವನ್ನು ಮಾಡಲು ಸಂಕಲ್ಪಿಸಿದರು. ಅಷ್ಟು ಹೊತ್ತಿಗೆ ವೆಂಕಟನಾಥಾಚಾರ್ಯರಿಗೆ ಎಂಟು ವರ್ಷಗಳು. ಅವರು ರತ್ನಮಾಲಾದಿ ನಿಘಂಟುಗಳನ್ನು ಕಂಠಪಾಠ ಮಾಡಿದ್ದರು. ನಾನಾ ವಿಧವಾದ ಅಕ್ಷರಗಳನ್ನು ಓದಲು ಬರೆಯಲು ಕಲಿತಿದ್ದರು ಹಾಗೂ ತಿಳಿದಿದ್ದರು. ಅಂತಹಾ ತಮ್ಮ ಸೋದರನಿಗೆ ಗುರುರಾಜಾಚಾರ್ಯರು ವಸಂತ ಋತುವುನಲ್ಲಿ, ಚೈತ್ರಮಾಸದ ಕೃಷ್ಣಪಕ್ಷದಲ್ಲಿ (ಅಥವಾ ವೈಶಾಖಮಾಸದ ಕೃಷ್ಣಪಕ್ಷದಲ್ಲಿ) ಉಪನಯನವನ್ನು ಮಾಡಿದರು.

**ವಿಶೇಷ ವಿಚಾರ** : ಬಾಲಬೋಧಿನೀಕಾರರು ಚೈತ್ರಮಾಸದಲ್ಲಿ ಉಪನಯನವಾಯಿತೆಂದೂ, ಗುರುಸೇವಾಕಾರರು ವೈಶಾಖಮಾಸದಲ್ಲಿ ಉಪನಯನವಾಯಿತೆಂದೂ ಹೇಳುತ್ತಾರೆ. ಇಲ್ಲಿ ಪರಸ್ಪರ ವಿರೋಧವು ಕಂಡು ಬರುತ್ತದೆ. ಆದರೆ ಅಮಾವಾಸ್ಯಾಂತ ಮಾಸ ಪರಿಗಣನೆ ಪಕ್ಷದಲ್ಲಿ ಚೈತ್ರ ಕೃಷ್ಣಪಕ್ಷದಲ್ಲಿ ಉಪನಯನವೆಂದೂ ಹುಣ್ಣಿಮೆಯವರೆಗೆ ಮಾಸವೆಂದೂ ಹೇಳುವ ಪಕ್ಷದಲ್ಲಿ ಚೈತ್ರ ಕೃಷ್ಣಪ್ಷವು ವೈಶಾಖಮಾಸಕ್ಕೆ ಸೇರುತ್ತದೆಯಾದುದರಿಂದ ವೈಶಾಖದಲ್ಲಿ ಉಪನಯನವಾಯಿತೆಂದು ಗುರುಸೇವಾ ವ್ಯಾಖ್ಯಾನಕಾರರು ಹೇಳಿದ್ದಾರೆಂದು ಭಾವಿಸಬಹುದು. ಆದುದರಿಂದ ವ್ಯಾಖ್ಯಾನಗಳಲ್ಲಿ ಪರಸ್ಪರ ವಿರೋಧವಿಲ್ಲ.

**ಅವತಾರಿಕೆ** : ಶ್ರೀವೇಂಕಟನಾಥಾಚಾರ್ಯರ ವಿದ್ಯಾಭ್ಯಾಸ : ಉಪನಯನವಾದ ಮೇಲೆ ವೆಂಕಟನಾಥಾಚಾರ್ಯರು ಗುರುಕುಲದಲ್ಲಿ ವಾಸಮಾಡಿದರೆಂದು ಕವಿಗಳು ವರ್ಣಿಸುತ್ತಾರೆ.

**ಉಪಾಸದತ್ತಂ ಕುತುಕೇನ ಶೇಮುಷೀನಿಧಿಃ (ನಿಧಿಂ) ಸ ಲಕ್ಷ್ಮೀನರಸಿಂಹದೈಶಿಕಮ್ ।**
**ತಪೋಧಿಸಾಂದೀಪಿನಿಭೂಸುರೋತ್ತಮಂ ಯಥಾ ಯಶೋದಾತನಯಸ್ತ್ರಯೀಮಯಃ (ಯಂ) ॥೯॥**

**ತಾತ್ಪರ್ಯ** : ಶ್ರೀವೇಂಕಟನಾಥಾಚಾರ್ಯರು ಸ್ವಯಂ ಪ್ರಜ್ಞಾನಿಧಿಗಳೇ ಆಗಿದ್ದರು. ಆದರೂ ಗುರುಕುಲ ವಾಸಮಾಡಿ ವಿದ್ಯೆ ಕಲಿಯಬೇಕೆಂಬ ಲೋಕರೂಢಿ ಇರುವುದರಿಂದ ಕುತೂಹಲದಿಂದ ಯಾರ ನಿರ್ಬಂಧವೂ ಇಲ್ಲದೇ ಉತ್ತಮ ಜ್ಞಾನನಿಧಿಗಳಾದ ಶ್ರೀಲಕ್ಷ್ಮೀನರಸಿಂಹಾಚಾರ್ಯರೆಂಬ ತಮ್ಮ ಭಾವನವರು ಇದ್ದಲ್ಲಿಗೆ ಹೋದರು. ಅದು ಸಕಲವೇದಪ್ರತಿಪಾದ್ಯನಾದ ಶ್ರೀಕೃಷ್ಣನು ಒಳ್ಳೆಯ ವೇದಜ್ಞರಾದ ಸಾಂದೀಪಿನಿ ಮುನಿಗಳ ಬಳಿಗೆ ಕುತೂಹಲದಿಂದ ವಿದ್ಯಾಭ್ಯಾಸಕ್ಕೆ ಹೋದ ರೀತಿ ಆಯಿತು.

**ಅವತಾರಿಕೆ** : ತದನಂತರದಲ್ಲಿ ವೇಂಕಟನಾಥಾಚಾರ್ಯರು ವೇದಾಭ್ಯಾಸ ಮಾಡಿದರೆಂದು ವರ್ಣಿಸುತ್ತಾರೆ.

**ದ್ವಿಪಂಚಕೃತ್ವಶ್ಶ್ರುತಿಮಾತ್ರತಃ ಶ್ರುತಿ*ತ್ರಿವಿಷ್ಟಪೋದ್ಯಾನವನೀಮಹೀರುಹಃ ।**
**ವಟುರ್ದ್ವಿತೀಯಾಂ ವಟುಭಿರ್ವಯಸ್ಸಮೈರಧತ್ತ ಶಾಖಾಂ ಧರಣೀಸುರೇಶ್ವರಃ ॥೧೦॥**
(* ಶ್ರುತೇ ತ್ರಿವಿಷ್ಟಪೋದ್ಯಾನ ವನೀಮಹೀರುಹಃ – ಬಾಲಬೋಧಿನೀ ಪಾಠ)

**ತಾತ್ಪರ್ಯ** : (ಬಾ.ಬೋ) ವೇದವು ಕಲ್ಪವೃಕ್ಷದಂತೆ ಇರುವ ಅದ್ಭುತವಾದ ವಸ್ತುವು. ಅದರ ಎರಡನೆಯ ಶಾಖೆಯಂತೆ ಇರುವುದು ಯಜುರ್ವೇದವು. ಬ್ರಹ್ಮಚಾರಿಗಳಾದ, ಬ್ರಾಹ್ಮಣ ಶ್ರೇಷ್ಠರಾದ ವೇಂಕಟನಾಥಾಚಾರ್ಯರು ಎರಡು ಬಾರಿ ಅಥವಾ ಐದು ಬಾರಿ ಕೇಳುವ ಮಾತ್ರದಿಂದ ಸಮರ್ಥರಾದ ತನ್ನ ಸ್ನೇಹಿತರಿಂದ ಕೂಡಿಕೊಂಡು ಆ ವೇದವನ್ನು ಅಭ್ಯಸಿಸಿದರು.

(ಗು.ಸೇ.) ಶ್ರೀಲಕ್ಷ್ಮೀನರಸಿಂಹಾಚಾರ್ಯರೇ ಕಲ್ಪವೃಕ್ಷಕ್ಕೆ ಸಮಾನರಾದ ಉಪಾಧ್ಯಾಯರು (ಗುರುಗಳು). ಬ್ರಾಹ್ಮಣ ಶ್ರೇಷ್ಠರಾದ ಬ್ರಹ್ಮಚಾರಿಗಳಾದ ವೇಂಕಟನಾಥಾಚಾರ್ಯರು ತಮ್ಮ ಸಮಾನ ವಯಸ್ಕ ಬ್ರಹ್ಮಚಾರಿಗಳೊಡನೆ ಒಮ್ಮೆ ತಮ್ಮ ಶಾಖೆಯ ಯಜುರ್ವೇದವನ್ನು ತಮ್ಮ ಮನಸ್ಸಿನಲ್ಲಿ ದೃಢವಾಗಿ ಧರಿಸಿದರು.

**ಅವತಾರಿಕೆ** : ಕವಿಗಳು ಈಗ ವೇಂಕಟನಾಥಾಚಾರ್ಯರು ಕಾವ್ಯಗಳ ಅಭ್ಯಾಸವನ್ನು ಮಾಡಿದ ಪರಿಯನ್ನು ವರ್ಣಿಸುತ್ತಾರೆ.

**ಅಸಾವಗೃಹ್ಣಾದಪಿ ಕಾವ್ಯಮಗ್ರಿಮಂ ಮಹೀಸುರೋಽನಧ್ಯಯನೇ ವಯಸ್ಸಮೈಃ ।**
**ಅಚಷ್ಟ ಧೀಮಾನನಿರೀಕ್ಷಿತಂ ಪುನಃ ತದೇವ ಪೃಷ್ಟಂ ಗುರುಣಾಽನ್ಯವಾಸರೇ ॥೧೧॥**

**ತಾತ್ಪರ್ಯ** : ಬ್ರಾಹ್ಮಣ ಶ್ರೇಷ್ಠರಾದ ಶ್ರೀವೇಂಕಟನಾಥಾಚಾರ್ಯರು ಪ್ರತಿಪತ್, ಅಷ್ಟಮೀ, ಚತುರ್ದಶೀ, ಅಮಾವಾಸ್ಯೆ, ಹುಣ್ಣಿಮೆ ಇತ್ಯಾದಿ ಅನಧ್ಯಯನದ ದಿನಗಳನ್ನು ಬಿಟ್ಟು ಉಳಿದ ದಿನಗಳಲ್ಲಿ ವೇದಾಧ್ಯಯನವನ್ನು ಮಾಡಿದರು. ಪಾಠ್ಯವನ್ನು ಬಿಟ್ಟು ಉಳಿದ ಅನಧ್ಯಯನದ ದಿನಗಳಲ್ಲಿ ಸುಮಧ್ವವಿಜಯ ಮುಂತಾದ ಕಾವ್ಯಗಳನ್ನು ಅಭ್ಯಾಸ ಮಾಡುತ್ತಿದ್ದರು. ಒಂದು ಬಾರಿ ಅನಧ್ಯಯನದ ದಿನಗಳಲ್ಲಿ ಅಭ್ಯಾಸ ಮಾಡಿದ ಕಾವ್ಯಗಳನ್ನು ಪುನಃ ಅವಲೋಕನ ಮಾಡದಿದ್ದರೂ, ಅಭ್ಯಾಸ ಮಾಡದಿದ್ದರೂ, ಮತ್ತೊಂದು

ಬಾರಿ ಅನಧ್ಯಯನದ ದಿನ ಗುರುಗಳು ಕೇಳಿದರೆ ಬಹಳ ದಿನಗಳ ನಂತರವೂ ಅದನ್ನು ಸರಿಯಾಗಿ ಹೇಳುತ್ತಿದ್ದರು. ಗುರುಗಳು ಪಾಠವನ್ನು ಮರೆತಿದ್ದಾರೋ ಸ್ಮರಣೆಯಲ್ಲಿ ಇಟ್ಟುಕೊಂಡಿದ್ದಾರೋ ಎಂಬುದನ್ನು ಪರೀಕ್ಷಿಸುವ ಸಲುವಾಗಿ ಕೇಳಿದಾಗ ವೇಂಕಟನಾಥಚಾರ್ಯರು ಸ್ವಲ್ಪವೂ ತಡವರಿಸದೇ ತಾವು ಎಂದೋ ಅಭ್ಯಾಸ ಮಾಡಿದ ಪಾಠಗಳನ್ನು ತಪ್ಪಿಲ್ಲದೇ ಸರಿಯಾಗಿ ಉತ್ತರಿಸುತ್ತಿದ್ದರು ಎಂದು ಭಾವ.

**ಅವತಾರಿಕೆ :** ವೇಂಕಟನಾಥಾಚಾರ್ಯರು ವೇದಗಳನ್ನು ಚೆನ್ನಾಗಿ ಅಭ್ಯಾಸ ಮಾಡಿ ತಮ್ಮ ಬುದ್ಧಿ ಕುಶಲತೆಯನ್ನು ಉತ್ತಮಗೊಳಿಸಿಕೊಂಡುದನ್ನು ಕವಿಗಳು ವರ್ಣಿಸುತ್ತಾರೆ.

**ರಹೋ ದಿವಾರಾತ್ರಮಸಂಖ್ಯಚಿಂತನಂ ಸತೀರ್ಥಸಾರ್ಥೇನ ಕುತೂಹಲಾತ್ಕೃತಮ್ ।**
**ಸುಜಾತಕರ್ಮಾತಿಶಯಂ ಸುತೇ ಕೃತಂ ಚಕಾರ ಪಿತ್ರೇವ (ಪಿತ್ರೈವ) ಮಹೀಯಸಾ ಮತೌ ॥೧೨॥**

**ಬಾಲಬೋಧಿನಿ ವ್ಯಾಖ್ಯಾನಕಾರರ ತಾತ್ಪರ್ಯ :** ವೆಂಕಟನಾಥಾರ್ಯರ ಪೂಜ್ಯ ತಂದೆಯವರಾದ ತಿಮ್ಮಣ್ಣಾಚಾರ್ಯರು ಮಗನಿಗೆ ಶಾಸ್ತ್ರೋಕ್ತ ರೀತಿಯಲ್ಲಿ ಜಾತಕರ್ಮಾದಿ ಸಂಸ್ಕಾರವನ್ನು ಮಾಡಿದ್ದರು. ಆದುದರಿಂದ ವೇಂಕಟನಾಥಾಚಾರ್ಯನ ಬುದ್ಧಿಯಲ್ಲಿ ಒಂದು ಅತಿಶಯವಾದ ಅಪೂರ್ವತೆಯು ಅದರಿಂದ ಹಿಂದೆಯೇ ಉಂಟಾಗಿತ್ತು. ಈಗ ವೇಂಕಟನಾಥಾಚಾರ್ಯರು ಏಕಾಂತದಲ್ಲಿ ಹಗಲು-ರಾತ್ರಿ ಒಳ್ಳೆಯ ಓದುವ ಅಭ್ಯಾಸವುಳ್ಳ ಸಹಪಾಠಿಗಳ ಜೊತೆಯಲ್ಲಿ ಬಹಳ ಆದರದಿಂದ ಲೆಕ್ಕವಿಲ್ಲದಷ್ಟು ಬಾರಿ ಚಿಂತನ ಮಾಡಿದರು. ಇವೆಲ್ಲವೂ ಜಾತಕರ್ಮಾದಿ ಸಂಸ್ಕಾರಗಳನ್ನು ಉತ್ತಮವಾಗಿ ಮಾಡಿದುದರಿಂದ ಉಂಟಾದ ಫಲ. ಹೀಗಾಗಿ ಇವೆಲ್ಲದರ ಫಲವಾಗಿ ವೇಂಕಟನಾಥಾಚಾರ್ಯರ ಬುದ್ಧಿಯು ಒಂದು ಅತಿಶಯವಾದ ಅಪೂರ್ವತೆಯನ್ನು ಹೊಂದಿತು.

**ಗುರುಸೇವಾ ವ್ಯಾಖ್ಯಾನಕಾರರ ತಾತ್ಪರ್ಯ :** ವೇಂಕಟಾನಾಥಾರ್ಯರ ಸಹಪಾಟಿಗಳು ಒಳ್ಳೆಯ ಅಧ್ಯಯನಶೀಲರಾಗಿದ್ದರು. ಅವರುಗಳು ಹಗಲು-ರಾತ್ರಿ ಅಧ್ಯಯನ ಮಾಡುತ್ತಾ ಸಂತೋಷದಿಂದ ಲೆಕ್ಕವಿಲ್ಲದಷ್ಟು ಬಾರಿ ಕಾವ್ಯಾದಿಗಳ ಚಿಂತನವನ್ನು ಮಾಡಿ ಅವುಗಳನ್ನು ಕಂಠಸ್ಥ ಮಾಡಿಕೊಂಡರು. ಇದರಿಂದಾಗಿ ಬುದ್ಧಿ ವಿಸ್ತಾರವನ್ನು ಪಡೆದರು. ವೇಂಕಟನಾಥಾಚಾರ್ಯರಾದರೋ ಸಹಾಧ್ಯಾಯಿಗಳಂತೆ ಅನೇಕ ಬಾರಿ ಚಿಂತನವನ್ನು ಮಾಡಲಿಲ್ಲ. ಅವರ ಪೂಜ್ಯ ತಂದೆಯವರಾದ ತಿಮ್ಮಣ್ಣಾಚಾರ್ಯರು ತಮಗಾಗಿ ಮಾಡಿದ, ಸಂಗ್ರಹಿಸಿದ ಪುಣ್ಯದಿಂದಲೇ ವೇಂಕಟನಾಥಾರ್ಯರ ಬುದ್ಧಿಯಲ್ಲಿ ಅಸಾಧಾರಣವಾದ ಕೌಶಲವುಂಟಾಯಿತು.

**ವಿಶೇಷಾಂಶ :** ಈ ಶ್ಲೋಕದ ತಾತ್ಪರ್ಯದಲ್ಲಿ ಬಾಲಬೋಧಿನಿ ವ್ಯಾಖ್ಯಾನ ಮತ್ತು ಗುರುಸೇವಾ ವ್ಯಾಖ್ಯಾನ ಇವೆರಡರಲ್ಲಿ ವ್ಯತ್ಯಾಸವು ಭಾಸವಾಗುತ್ತದೆ. ಬಾಲಬೋಧಿನೀ ವ್ಯಾಖ್ಯಾನಕಾರರು ವೇಂಕಟನಾಥಾಚಾರ್ಯರು ತಮ್ಮ ಸಹಪಾಠಿಗಳ ಜೊತೆಯಲ್ಲಿ ಅನೇಕ ಬಾರಿ ವ್ಯಾಸಂಗ ಮಾಡಿದರೆಂದು ತಿಳಿಯುತ್ತದೆ. ಗುರುಸೇವಾ ವ್ಯಾಖ್ಯಾನದ ಪ್ರಕಾರ ವೇಂಕಟನಾಥಾಚಾರ್ಯರ ಸಹಾಧ್ಯಾಯಿಗಳು ಮಾತ್ರ ಅನೇಕ ಬಾರಿ ವ್ಯಾಸಂಗ ಮಾಡಿದರೆಂದೂ, ವೇಂಕಟನಾಥಾಚಾರ್ಯರಾದರೋ ತಮ್ಮ ತಂದೆಯವರು ತಮಗಾಗಿ ಗಳಿಸಿದ್ದ ಪುಣ್ಯದಿಂದ ಬುದ್ಧಿವಿಸ್ತಾರವನ್ನು, ಕೌಶಲವನ್ನು ಪಡೆದರೆಂದು ತಿಳಿಯುತ್ತದೆ. "ಸಾಹಾಧ್ಯಾಯಿನಾಮಪರಿಮಿತಿ ಚಿಂತನೇನ ಬುದ್ಧಿ ವಿಸ್ತಾರೋಽಭೂತ್ ವೇಂಕಟಾರ್ಯಸ್ಯತು ಚಿಂತನಾಭಾವೇಪಿ ಪಿತ್ರಾ ಅರ್ಜಿತ ಸುಕೃತಮೇವ ಬುದ್ಧಿ ವಿಸ್ತಾರಂ ಚಕಾರ" ಎಂದು ಗುರುಸೇವಾ ವ್ಯಾಖ್ಯಾನಕಾರರು ಬರೆಯುತ್ತಾರೆ. "ಸಹಾಧ್ಯಾಯಿಗಳಿಗೆ ಅಪರಿಮಿತ ಚಿಂತನದಿಂದ ಬುದ್ಧಿ ವಿಸ್ತಾರ

ಉಂಟಾಯಿತು, ವೇಂಕಟನಾಥಾಚಾರ್ಯರಿಗಾದರೋ ಚಿಂತನವಿಲ್ಲದಿದ್ದರೂ ತಂದೆಯು ಗಳಿಸಿದ ಪುಣ್ಯವಿಶೇಷದಿಂದ ಬುದ್ಧಿವಿಸ್ತಾರವು ಉಂಟಾಯಿತು" ಎಂಬುದು ವಾಕ್ಯದ ಅರ್ಥ. ಈ ರೀತಿಯಾಗಿ ಎರಡೂ ವ್ಯಾಖ್ಯಾನಗಳಲ್ಲಿ ವಿರೋಧವಿದ್ದರೂ ಯಾವುದೋ ಕಾವ್ಯ ಅಥವಾ ಶಾಸ್ತ್ರದ ಒಂದು ಅಂಶದಲ್ಲಿ ಅವರು ಸಹಾಧ್ಯಾಯಿಗಳ ಜೊತೆ ಅಪರಿಮಿತ ಚಿಂತನ ಮಾಡಿದರೆಂದೂ ಸಾಮಾನ್ಯವಾಗಿ ಕಾವ್ಯ ಶಾಸ್ತ್ರಾದಿಗಳ ಚಿಂತನೆಯನ್ನು ಹೆಚ್ಚಾಗಿ ಮಾಡುತ್ತಿರಲಿಲ್ಲ. ಹಿರಿಯರು ಗಳಿಸಿದ ಪುಣ್ಯದಿಂದ ಅವರ ಬುದ್ಧಿಯು ಸ್ವತಃ ವಿಸ್ತಾರವನ್ನು ಹೊಂದಿತು, ಎಂದು ತಾತ್ಪರ್ಯವನ್ನು ಇಟ್ಟುಕೊಂಡು ವಿರೋಧ ಪರಿಹಾರ ಮಾಡಿಕೊಳ್ಳಬಹುದು.

**ಅವತಾರಿಕೆ :** ಸಾಮಾನ್ಯವಾದ ವೇಂಕಟನಾಥನ ಬಾಲಲೀಲೆಗಳನ್ನು ವರ್ಣಿಸುತ್ತಾರೆ.

**ವಿಹಾರಭೇದಾನ್ ವಿವಿಧಾನ್ ವಿಶಾಲಧೀಃ ಸಕೃದ್ವಿಲೋಕ್ಯೈವ ಸಖೀವ್ರಜೈಃ ಕೃತಾನ್ ।**
**ತಾನೇವ ಸಂಗೃಹ್ಯ ತಪೋಽಭಿಶೀಲನಾಕೃತೇ ಸದೈವಾತನುತೇ ಸ್ಮ ಸಾದರಮ್ ॥೧೩॥**

**ತಾತ್ಪರ್ಯ :** ಶ್ರೀವೇಂಕಟಾರ್ಯರು ತಮ್ಮ ಗೆಳೆಯರು ಗುಂಪು ಗುಂಪಾಗಿ ಆಡುತ್ತಿದ್ದ ನಾನಾ ರೀತಿಯ ಆಟಗಳನ್ನು ನೋಡುತ್ತಿದ್ದರು. ಬಹಳ ಬುದ್ಧಿವಂತರಾದ ಅವರು ಒಂದು ಬಾರಿ ನೋಡಿದ ಕೂಡಲೇ ಆ ಆಟಗಳನ್ನು ಚೆನ್ನಾಗಿ ತಿಳಿದು ತಮ್ಮ ಮನಸ್ಸಿನಲ್ಲಿ ದೃಢವಾಗಿ ಧರಿಸುತ್ತಿದ್ದರು. ಮುಂದೆ ತಾವು ಮಾಡಬೇಕಾದ ವ್ರತಾನುಷ್ಠಾನದ ಅಭ್ಯಾಸಕ್ಕಾಗಿಯೋ ಎಂಬಂತೆ ಯಾವಾಗಲೂ ಆ ಆಟಗಳನ್ನು ಆಡುವಂತೆ ಕಾಣುತ್ತಿದ್ದರು. ಈಗ ಯಾವ ರೀತಿಯಾಗಿ ಆಟಗಳನ್ನು ತಾವು ಆಡುತ್ತಾರೋ ಅದೇ ರೀತಿಯಲ್ಲಿ ಮುಂದೆ ತಾವು ವಿವಿಧ ವ್ರತಾನುಷ್ಠನಗಳನ್ನು ಮಾಡಬೇಕಾಗಿದೆ ಎಂದು ಮನಸ್ಸಿನಲ್ಲಿಯೇ ನಿಶ್ಚಯಿಸುತ್ತಿದ್ದರು. .

**ಅವತಾರಿಕೆ :** ಕವಿಗಳು ಈಗ ವೇಂಕಟನಾಥಾಚಾರ್ಯರು ಬಾಲ್ಯದಲ್ಲಿ ಆಡುತ್ತಿದ್ದ ಆಟಗಳನ್ನು ಎರಡು ಶ್ಲೋಕಗಳಿಂದ ವರ್ಣಿಸುತ್ತಾರೆ.

**ಸ ವಾಯುವೇಗಾತ್ ಸರಿತೋಽಪ್ಯವಾತರತ್ ಸ್ವಬಾಹುನಾ ಬಾಣ ಇವಾತಿರಂಹಸಾ ।**
**ಋಜು ವ್ರಜನ್ ವಕ್ರಪದಾತಿಪದ್ಧತಿಂ ಸ್ವಹೃದ್ಯಜು ಬ್ರಹ್ಮಗತಿಂ ನಯನ್ನಿವ ॥೧೪॥**

**ತಾತ್ಪರ್ಯ (ಬಾ.ಬೋ.) :** ಸಾಮಾನ್ಯವಾಗಿ ನದಿಯನ್ನು ದಾಟುವವರು ಅಡ್ಡಲಾಗಿ ಈಜುತ್ತಾ ಅಥವಾ ನೀರು ಕಡಿಮೆಯಿದ್ದಲ್ಲಿ ನಡೆದುಕೊಂಡು ನದಿಯನ್ನು ದಾಟುತ್ತಾರೆ. ಆದರೆ ವೇಂಕಟನಾಥಾಚಾರ್ಯರು ವಾಯುವೇಗಕ್ಕಿಂತಲೂ ಹೆಚ್ಚು ವೇಗವುಳ್ಳ ತಮ್ಮ ಬಾಹುಗಳಿಂದ ಕೆರೆಗಳನ್ನು ಮಾತ್ರವೇ ಅಲ್ಲ ನದಿಗಳನ್ನೂ ದಾಟುತ್ತಿದ್ದರು. ಅವರು ಪರಬ್ರಹ್ಮನನ್ನು ಹೊಂದುವ ಮಾರ್ಗವನ್ನು ತಮ್ಮ ಹೃದಯದಿಂದ ನೇರವಾಗಿ ತಲುಪುವರು ಎಂದು ಈ ಕಾರ್ಯದಿಂದ ತೋರಿಸಿಕೊಡುತ್ತಿದ್ದರು.

**(ಗು.ಸೇ.) :** ವ್ಯಾಖ್ಯಾ ರೀತಿಯಿಂದ ಶ್ಲೋಕದಲ್ಲಿ ಸವಾಯುವೇಗಾಃ ಸರಿತೋಪ್ಯವಾತರತ್.....। ವಕ್ರಪದಾರ್ಥಪದ್ಧತಿಂ... ಎಂಬ ಪಾಠ.

**ತಾತ್ಪರ್ಯ (ಗು.ಸೇ.) :** ವೇದಗಳಲ್ಲಿ ಕೆಲವು ಶಬ್ದಗಳು ಪರಬ್ರಹ್ಮನನ್ನು ಪ್ರತಿಪಾದಿಸುವುದಿಲ್ಲವೆಂದು ತೋರುತ್ತದೆ. ಉದಾಹರಣೆಗೆ ದುಃಖಿ, ಶೂನ್ಯ ಇತ್ಯಾದಿ ಪದಗಳು. ಈ ಶಬ್ದಗಳು ಸರಿಯಾದ ವೈದಿಕ ವ್ಯುತ್ಪತ್ತಿಯಿಂದ ಬ್ರಹ್ಮವಾಚಕವಾಗುತ್ತವೆ. ದುಃಖಕ್ಕೆ ಸ್ವಾಮಿಯಾದುದರಿಂದ 'ಶಂ ಊನಂ' ಯಸ್ಮಾತ್ 'ಶೂನ್ಯಃ'

ಎಂಬ ವ್ಯುತ್ಪತ್ತಿಯಿಂದ ವಿಷ್ಣುವಿಗೆ ಶೂನ್ಯ ಎಂದೂ ಹೆಸರು. ವೈದಿಕ ಪದಗಳಿಗೆ ಈ ರೀತಿಯಾಗಿ ಸರಳವಾಗಿ ಪರಬ್ರಹ್ಮ ಪರವಾಗಿ ಅರ್ಥ ಮಾಡುವ ಮಾರ್ಗವನ್ನು ಪರ್ಯಾಲೋಚಿಸುತ್ತಾ ಶ್ರೀವೇಂಕಟನಾಥಾಚಾರ್ಯರು ತಮ್ಮ ಮನಸ್ಸನ್ನು ಬ್ರಹ್ಮಜ್ಞಾನದ ಕಡೆಗೆ ಕೊಂಡೊಯ್ಯುತ್ತಿರುವರೋ ಎಂಬಂತೆ ವಾಯುವೇಗದಿಂದ ಹರಿಯುವ ನದಿಗಳನ್ನು ತೆಪ್ಪ ಮುಂತಾದವುಗಳ ಸಹಾಯವಿಲ್ಲದೇ ಬಹಳ ವೇಗದಿಂದ ಬಾಣದಂತೆ ದಾಟಿದರು. ಅವರು ನೇರವಾಗಿ ಈಜಿಕೊಂಡು ನದಿಯನ್ನು ದಾಟುತ್ತಿದ್ದ ರೀತಿಯನ್ನು ನೋಡಿದರೆ ಬ್ರಹ್ಮವಾಚಕವಿಲ್ಲದಂತೆ ಕಾಣುವ ಪದಗಳನ್ನು ಬ್ರಹ್ಮಪರವಾಗಿ ಯೋಚಿಸುತ್ತಾ, ವಿಷಯಾಂತರದಲ್ಲಿ ಅನಾಸಕ್ತವಾದ ತಮ್ಮ ಮನಸ್ಸನ್ನು ಬ್ರಹ್ಮಜ್ಞಾನದ ಕಡೆಗೆ ಒಯ್ಯುತ್ತಾ ಇರುವರೋ ಎಂಬಂತೆ ಕಾಣಿಸುತ್ತಿತ್ತು.

**ವಿಶೇಷಾಂಶ :** ಪ್ರಕೃತ ಶ್ಲೋಕದಲ್ಲಿ ಬಾಲಬೋಧಿನೀ, ಗುರುಸೇವಾ ವ್ಯಾಖ್ಯಾನಕಾರರಿಗೆ ಪಾಠಭೇದ ಮತ್ತು ಅಭಿಪ್ರಾಯ ವ್ಯತ್ಯಾಸಗಳಿವೆ. ವ್ರಜನ್ ಎಂಬುದಕ್ಕೆ (ಬಾಲಬೋಧಿನೀ) ವ್ಯಾಖ್ಯಾದಲ್ಲಿ ಹೋಗುತ್ತಾ ಎಂದು ಅರ್ಥಮಾಡಿದರೆ ಗುರುಸೇವಾ ವ್ಯಾಖ್ಯಾದಲ್ಲಿ "ಯೇ ಯೇ ಗತ್ಯರ್ಥಾ ತೇ ತೇ ಜ್ಞಾನಾರ್ಥಾ" ಎಂಬ ನ್ಯಾಯವನ್ನು ಅನುಸರಿಸಿ ತಿಳಿಯುತ್ತಾ ಎಂದು ಅರ್ಥ ಮಾಡಿದ್ದಾರೆ. ತಾವು ನೇರವಾಗಿ ಬ್ರಹ್ಮ ಮಾರ್ಗವನ್ನು ಕುರಿತು ಹೋಗುತ್ತೇವೆ ಎಂಬುದನ್ನು ತಿಳಿಸುತ್ತಾರೆಂದು ಹಿಂದಿನ ವ್ಯಾಖ್ಯಾನಕಾರರ ಅಭಿಪ್ರಾಯವಾದರೆ ಬ್ರಹ್ಮವಾಚಕವಲ್ಲದಂತೆ ಕಾಣುವ ಪದಗಳಿಗೆ ಋಜುವಾಗಿ ಬ್ರಹ್ಮ ಪರವಾಗಿ ಅರ್ಥವನ್ನು ಮಾಡಿ ಅದನ್ನು ಪರ್ಯಾಲೋಚನೆ ಮಾಡುವಂತೆ ಕಾಣಿಸುತ್ತಿದ್ದರು ಎಂದು ಎರಡನೇ ವ್ಯಾಖ್ಯಾನಕಾರರ ಅಭಿಪ್ರಾಯವಾಗಿದೆ.

**ಅವತಾರಿಕೆ :** ಕವಿಗಳು ಈಗ ಶ್ರೀವೇಂಕಟಾರ್ಯರ ಇನ್ನೊಂದು ಆಟವನ್ನು ವರ್ಣಿಸುತ್ತಾರೆ.

**ನಿರಂತರಂ ಸ್ಪೃಷ್ಟಸಮೀರಣಸ್ವನಪ್ರಧಾನಲೀಲಾಂ (ಲಾಃ) ಪುಲಿನೇ ಸಖಿವ್ರಜೈಃ ।**
**ಜನಿಷ್ಯಮಾಣಾಗ್ರ್ಯಜಪಾಂಗರೇಚಕಪ್ರಧಾನಯೋಗಂ ಗುಣಯನ್ನಿವಾತನೋತ್ ॥೧೫॥**

**ತಾತ್ಪರ್ಯ :** ಹುಡು ತುತ್ತು ಅಥವಾ ಡಡು ಆಟ ಎಂಬ ಒಂದು ಆಟವಿದೆ. ಅದರಲ್ಲಿ ಆಟಗಾರರು ಎರಡು ಪಕ್ಷ ಮಾಡಿ ಕೊಂಡಿರುತ್ತಾರೆ. ಒಂದು ಪಕ್ಷದವರು ಇನ್ನೊಂದು ಪಕ್ಷದವರ ಕಡೆಗೆ ಹೋಗಿ ಒಂಟಿಗಾಲಿನಲ್ಲಿಯೇ ಡುಡುಡು ಅಥವಾ ಛಡಗುಡು ಎಂದು ಹೇಳುತ್ತಾ ಶ್ವಾಸ ಬಿಡುತ್ತಲೇ ಇರುತ್ತಾ ಇನ್ನೊಂದು ಪಕ್ಷದಲ್ಲಿ ಒಬ್ಬನನ್ನು ಮುಟ್ಟಿ ಎರಡೂ ಪಕ್ಷದವರಿಗೆ ಗುರುತಾಗಿರುವ ಗೆರೆಯನ್ನು ದಾಟಿ ತಮ್ಮ ಕಡೆಗೆ ಬಂದು ಬಿಡುತ್ತಾರೆ. ಈ ರೀತಿಯಾಗಿ ಮುಟ್ಟಿಸಿಕೊಂಡವನು ಆಟವನ್ನು ಬಿಟ್ಟು ಹೋಗಬೇಕು. ಈ ರೀತಿಯಾಗಿ ಒಬ್ಬೊಬ್ಬರಾಗಿ ಹೊರಗೆ ಹೋಗುತ್ತಾ ಯಾವ ಪಕ್ಷದವರು ತಮ್ಮ ಕಡೆಯ ಎಲ್ಲರೂ ಹೊರಗೆ ಹೋಗುತ್ತಾರೋ ಆ ಪಕ್ಷದವರು ಸೋತರೆಂದು ನಿಯಮ. ಈ ರೀತಿಯಾಗಿ ಒಂದು ಪಕ್ಷದವರು ಇನ್ನೊಂದು ಪಕ್ಷದ ಆಟಗಾರರನ್ನು ಮುಟ್ಟಿ ಹಿಂದಕ್ಕೆ ಹೋಗುವಾಗ ಎದುರು ಪಕ್ಷದವರು ಅವರನ್ನು ಬಲವಾಗಿ ಹಿಡಿದುಕೊಳ್ಳುತ್ತಾರೆ. ಒಂದು ಪಕ್ಷದವರು ಯಾವ ಆಟಗಾರರನ್ನು ಈ ರೀತಿಯಾಗಿ ಹಿಡಿದುಕೊಳ್ಳುತ್ತಾರೋ ಆಗ ಆ ಆಟಗಾರನು ಡುಡುಡು ಎಂದು ನಿಲ್ಲಿಸದೇ ಹೇಳುತ್ತಾ ತನ್ನನ್ನು ಹಿಡಿದವರೆಲ್ಲರನ್ನೂ ಎಳೆದುಕೊಂಡು ತನ್ನ ಕಡೆಯ ಗೆರೆಯನ್ನು ದಾಟಿಬಂದರೆ ಅವನು ಜಯಿಸಿದಂತೆ. ಆಗ ಅವನನ್ನು ಹಿಡಿದಿದ್ದ ಎದುರು ಪಕ್ಷದ ಎಲ್ಲ ಆಟಗಾರರೂ ಹೊರಗೆ ಹೋಗಬೇಕೆಂದು ನಿಯಮ. ಈ ರೀತಿಯಾಗಿ ಎದುರು ಪಕ್ಷದವರು ತನ್ನನ್ನು ಬಿಗಿಯಾಗಿ ಹಿಡಿದುಕೊಂಡಾಗ ಡುಡುಡು ಎನ್ನುವುದನ್ನು ಬಿಟ್ಟು ಶ್ವಾಸವನ್ನು ಬಿಟ್ಟರೆ ಆ ಆಟಗಾರ ಸೋತಂತೆ. ಅವನು ಹೊರಗೆ ಹೋಗಬೇಕಾಗುತ್ತದೆ.

ಇದು ಹುಡು ತುತ್ತು ಆಟ, ಡುಡು ಆಟ, ಅಥವಾ ಕಬಡ್ಡಿ ಆಟ ಎಂದು ಪ್ರಸಿದ್ಧವಾಗಿದೆ. ಕವಿಗಳು ಶ್ರೀವೇಂಕಟಾಚಾರ್ಯರು ಬಾಲ್ಯದಲ್ಲಿ ಈ ಆಟವನ್ನು ಆಡುತ್ತಿದ್ದರೆಂದು ವರ್ಣಿಸುತ್ತಾ ಅವರು ಆಟವನ್ನು ಆಡುತ್ತಿದ್ದುದು ಮುಂದೆ ಸನ್ಯಾಸಿಯಾದ ಮೇಲೆ ರೇಚಕ ಪ್ರಾಣಾಯಾಮ ಮಾಡುವುದಕ್ಕೆ ಈಗಿನಿಂದಲೇ ಅಭ್ಯಾಸ ಮಾಡುತ್ತಿರುವಂತೆ ಇತ್ತು ಎಂಬುದಾಗಿ ಇಲ್ಲಿ ವರ್ಣಿಸಿದ್ದಾರೆ. ಶ್ರೀವೇಂಕಟಾರ್ಯರು ಎಡೆ ಬಿಡದೇ "ಘುಡುಗುಡು ಡುಡುಡ" ಎಂಬ ಶಬ್ದವನ್ನು ಬಾಯಿಯಿಂದ ಹೇಳುತ್ತಾ, ಗಾಳಿಯನ್ನು ನಿರಂತರವಾಗಿ ಹೊರಗೆ ಬಿಡುತ್ತಾ ಮರಳ ದಿನ್ನೆಯಲ್ಲಿ ಸ್ನೇಹಿತರೊಡನೆ 'ಹುಡು ತುತ್ತು' (ಕಬಡ್ಡಿ) ಎಂಬ ಆಟವನ್ನು ಆಡುತ್ತಿದ್ದರು. ಅದನ್ನು ನೋಡಿದರೆ ಮುಂದೆ ತಾವು ಸನ್ನ್ಯಾಸಿಯಾದ ಮೇಲೆ ಮಾಡುವ ಧ್ಯಾನಕ್ಕೆ ಪ್ರಧಾನಾಂಗವಾದ ಪ್ರಾಣಾಯಾಮದಲ್ಲಿ ರೇಚಕ ಪ್ರಾಣಾಯಾಮವನ್ನು ಅಭ್ಯಾಸ ಮಾಡುತ್ತಿರುವರೋ ಎಂಬಂತೆ ಕಾಣಿಸುತ್ತಿತ್ತು.

**ವಿಶೇಷಾಂಶ :** "ಯಮ ನಿಯಮ ಆಸನ ಪ್ರಾಣಾಯಾಮ ಪ್ರತ್ಯಾಹಾರ ಧ್ಯಾನ ಧಾರಣ ಸಮಾಧಿ" ಎಂಬುದಾಗಿ ಯೋಗಕ್ಕೆ ಎಂಟು ಅಂಗಗಳಿವೆ. ಬಲಭಾಗದ ಮೂಗಿನ ಹೊಳ್ಳೆಯಿಂದ ಶ್ವಾಸವನ್ನು ಹೊರಗೆ ಬಿಟ್ಟು ಎಡಭಾಗದ ಮೂಗಿನ ಹೊಳ್ಳೆಯಿಂದ ಶ್ವಾಸವನ್ನು ಒಳಗೆ ಎಳೆದುಕೊಂಡು ಅನಂತರ ಹೃದಯದಲ್ಲಿ ಪ್ರಾಣವಾಯುವನ್ನು ತಡೆದು ಇಟ್ಟುಕೊಳ್ಳುವುದಕ್ಕೆ ಪ್ರಾಣಾಯಾಮ ಎಂದು ಹೆಸರು.

## ಶ್ರೀವೇಂಕಟನಾಥನ ವರ್ಣನೆ

**ಅವತಾರಿಕೆ :** ತಾರುಣ್ಯ ಪ್ರಾರಂಭದ ದೆಶೆಯಲ್ಲಿ ಶ್ರೀವೇಂಕಟನಾಥಾಚಾರ್ಯರ ಅಂಗಸೌಷ್ಠವ ಮತ್ತು ಸೌಂದರ್ಯಗಳನ್ನು ಕವಿಗಳು ಇನ್ನು ಮುಂದಿನ ೨೩ ಶ್ಲೋಕಗಳಲ್ಲಿ ವರ್ಣಿಸುತ್ತಾರೆ.

**ಸರಸ್ವತೀಮಚ್ಚತುರಾಸ್ಯಭಾಸುರೇ ಸ್ವಭ್ರೂಭ್ರಭವೇಽಸ್ಮಿನ್ (ಸ್ವಭೂಭವೇಽಸ್ಮಿನ್) ಸರತಿರ್ವಸಾಮ್ಯಹಮ್ ।**
**ಇತೀವ ಮಾರಃ ಸತತಂ ವಿರಾಜತೇ ಸಹೇತ ಕೋ ವಾ ಸಹಜೇ ಸಮುನ್ನತಿಮ್ ॥೧೬॥**

**ತಾತ್ಪರ್ಯ :** ಶ್ರೀವೇಂಕಟನಾಥರಲ್ಲಿ ಸರಸ್ವತಿಯ ಸನ್ನಿಧಾನದಿಂದ ಒಳ್ಳೆಯ ವಿದ್ಯೆಯ ಕಲೆಯು ಹೆಚ್ಚಿತು. ಬ್ರಹ್ಮದೇವರ ಸನ್ನಿಧಾನದಿಂದ ಬ್ರಹ್ಮ ವರ್ಚಸ್ಸಿನ ಕಾಂತಿಯೂ ಹೆಚ್ಚಿತು. ವಿದ್ಯಾಭ್ಯಾಸದಿಂದ ಸರಸ್ವತಿಯು ಅವರ ನಾಲಿಗೆಯಲ್ಲಿ ನೆಲಸಿದಳು. ಮುಖದಲ್ಲಿ ಚಾತುರ್ಯದ ಕಳೆಯೂ ಶೋಭಿಸುತ್ತಿತ್ತು. ಬ್ರಹ್ಮದೇವರ ಮತ್ತು ಮನ್ಮಥನ ತಂದೆಯಾದ ನಾರಾಯಣನ ಸನ್ನಿಧಾನವೂ ಅವರಲ್ಲಿತ್ತು. ಹೀಗೆ ಸರಸ್ವತೀ ಸಹಿತನಾದ ಚತುರ್ಮುಖನಾದ ಬ್ರಹ್ಮದೇವರೂ ವೇಂಕಟನಾಥರ ಮುಖದಲ್ಲಿ ನೆಲೆಸಿದರು. ಆಗ ಕಾಮನು ಆಲೋಚಿಸಿದನು. ಈ ವೇಂಕಟನಾಥನು ನನ್ನ ಹುಬ್ಬಿನ ಸಂಜ್ಞೆಯಿಂದ, ಪ್ರೇರಣೆಯಿಂದ ಮಾತಾಪಿತೃಗಳ ಸಂಗಮದಿಂದ ಉಂಟಾದನು. ಆದುದರಿಂದ ನಾನೇ ಈ ಶರೀರದಲ್ಲಿ ಇರಲು ಅರ್ಹನು. ನನಗಿಂತಲೂ ಹೆಚ್ಚಾಗಿ ನನ್ನ ಅಣ್ಣನಾದ ಚತುರ್ಮುಖ ಬ್ರಹ್ಮನು ಈ ವೇಂಕಟನಾಥರಲ್ಲಿ ಸನ್ನಿಧಾನವನ್ನು ಇಡುವುದನ್ನು ನಾನು ಸಹಿಸಲಾರೆನು. ನಾನೇ ರತಿಸಹಿತನಾಗಿ ಅಥವಾ ನಾನು ಕೂಡಾ ರತಿ ಸಹಿತನಾಗಿ ಈ ಶರೀರದಲ್ಲಿ ವಾಸಿಸುತ್ತೇನೆ. ನಾನೂ ಬ್ರಹ್ಮನೂ ಇಬ್ಬರೂ ನಾರಾಯಣನ ಮಕ್ಕಳಾದುದರಿಂದ ನನ್ನ ಅಣ್ಣನೊಬ್ಬನಿಗೇ ಆಧಿಕ್ಯವನ್ನು ಹೇಗೆ ಸಹಿಸಲಿ? ಎಂಬುದಾಗಿ ಹೊಟ್ಟೆಕಿಚ್ಚಿನಿಂದಲೋ ಎಂಬಂತೆ ಶ್ರೀವೇಂಕಟನಾಥರ ಸುಂದರ ರೂಪದಲ್ಲಿ ರಾಜಿಸಿದನು. (ಶ್ರೀವೇಂಕಟನಾಥರಿಗೆ ಯೌವ್ವನ ಪ್ರಾರಂಭವಾದಂತೆ ದಿವ್ಯವಾದ ಅದ್ಭುತ ಸೌಂದರ್ಯ ಉಂಟಾಯಿತು. ಆಗ ಮನ್ಮಥನೇ ಅವರ ಶರೀರದಲ್ಲಿ ವಾಸಿಸುತ್ತಾನೆ ಎಂಬಂತೆ ತೋರಿತು.) ಈ ರೀತಿಯಾಗಿ ಬ್ರಹ್ಮನ ಮೇಲಿನ ಸ್ಪರ್ಧೆಯಿಂದ ಮನ್ಮಥನು ಶ್ರೀವೇಂಕಟನಾಥರಲ್ಲಿ ನೆಲೆಸುವುದು ಯುಕ್ತವೇ

ಸರಿ, ಏಕೆಂದರೆ ಸಹೋದರರನು ತನಗಿಂತ ಮಿಗಿಲಾಗುವುದನ್ನು ಯಾರು ತಾನೇ ಸಹಿಸಿಯಾರು? ಯಾರೂ ಸಹಿಸುವುದಿಲ್ಲ, ಆದುದರಿಂದ ಮನ್ಮಥನು ಹೀಗೆ ಮಾಡಿದುದು ಸರಿಯೆಂದು ತಾತ್ಪರ್ಯ.

**ವಿಶೇಷಾಂಕ :** ಈ ಶ್ಲೋಕಕ್ಕೆ ಗುರುಸೇವಾ ವ್ಯಾಖ್ಯಾನದಲ್ಲಿ ಈ ರೀತಿ ತಾತ್ಪರ್ಯ ಹೇಳಿರುತ್ತಾರೆ. "ಬ್ರಹ್ಮಾ ಸ್ವಪತ್ನ್ಯಾ ಸರಸ್ವತ್ಯಾ ಸಹ ಅಸ್ಮಿನ್ ವಸತಿ. ಅಹಮಪಿ ರತ್ಯಾ ಸಹ ಅಸ್ಮಿನ್ ವೇಂಕಟಾರ್ಯೇ ವಸಾಮಿ. ಮಮ ಬ್ರಹ್ಮಣಶ್ಚ ನಾರಾಯಣ ಪುತ್ರತ್ವೇನ ಭ್ರಾತೃತ್ವಾತ್ ತಸ್ಯ ಅಧಿಕಂ ಕಥಂ ಸಹೇಯ. ಇತಿ ಈರ್ಶ್ಯಯಾ ಮನ್ಮಥಃ ಅಸ್ಮಿನ್ ವಸತಿ. ತಾದೃಶ ಸೌಂದರ್ಯವಾನ್ ವೇಂಕಟಾರ್ಯಃ" ಇತಿ ಭಾವಃ "ಬ್ರಹ್ಮನು ತನ್ನ ಪತ್ನಿಯಾದ ಸರಸ್ವತಿಯೊಡನೆ ಈ ವೇಂಕಟಾರ್ಯರಲ್ಲಿ ವಾಸ ಮಾಡುತ್ತಿದ್ದಾನೆ. ನಾನೂ ಕೂಡಾ ರತಿದೇವಿಯ ಜೊತೆಗೆ ಈ ವೇಂಕಟಾರ್ಯರಲ್ಲಿ ವಾಸ ಮಾಡುತ್ತೇನೆ. ನಾನೂ ಬ್ರಹ್ಮನೂ ಇಬ್ಬರೂ ಶ್ರೀಮನ್ನಾರಾಯಣನ ಪುತ್ರರಾದುದರಿಂದ ಸಹೋದರರು. ಆದುದರಿಂದ ಬ್ರಹ್ಮನಿಗೆ ನನಗಿಂತ ಮೇಲ್ಮೆಯನ್ನು ಸಹಿಸಲಾರೆನು. ಈ ರೀತಿಯಾಗಿ ಆಲೋಚಿಸಿದ ಮನ್ಮಥನು ವೇಂಕಟನಾಥರಲ್ಲಿ ವಾಸಮಾಡುತ್ತಿದ್ದಾನೆ. ಶ್ರೀವೇಂಕಟನಾಥರು ಅಂತಹ ಅತ್ಯುತ್ತಮ ಸೌಂದರ್ಯವನ್ನು ಹೊಂದಿದ್ದಾರೆ ಎಂದು ಭಾವ. ಇಲ್ಲಿ ಅರ್ಥಾಂತರನ್ಯಾಸಾಲಂಕಾರ. ಉಕ್ತಿರರ್ಥಾಂತರನ್ಯಾಸಃ ಸ್ಯಾತ್ ಸಾಮಾನ್ಯ ವಿಶೇಷಯೋಃ ಎಂದು ಅದರ ಲಕ್ಷಣ.

**ಅವತಾರಿಕೆ :** ಮುಂದಿನ ಶ್ಲೋಕದಲ್ಲಿ ಕವಿಗಳು ವೇಂಕಟನಾಥಾಚಾರ್ಯರ ಹುಬ್ಬಿನ ಸೌಂದರ್ಯವನ್ನು ವರ್ಣಿಸುತ್ತಾರೆ. ಅವರ ಎರಡು ಕಣ್ಣುಗಳು ಭಗವಂತನ ಮತ್ಸ್ಯಾವತಾರ ರೂಪವೆಂದು ವರ್ಣಿಸುತ್ತಾರೆ.

**ಮಹಾಮತಿಂ ಮಾಣವಕಂ ಚ ತದ್ವಚಃಕೃತಾಧಿವಾಸಂ ಸಹಶಾರದಂ ವಿಧಿಮ್ ।**
**ವಿದುಃ ಪರಂ ಬ್ರಹ್ಮ ಸಮಾಗಮಂ ಬ್ರುವದ್ದ್ವಿಮತ್ಸ್ಯರೂಪಂ ನಯನದ್ವಯಂ ವಿಭೋಃ ॥೧೭॥**

**ತಾತ್ಪರ್ಯ :** ಶ್ರೀವೇಂಕಟನಾಥಾಚಾರ್ಯರ ಎರಡೂ ಕಣ್ಣುಗಳು ಮೀನಿನ ಹಾಗೆ ದೀರ್ಘವಾಗಿದ್ದವು. ಅವುಗಳನ್ನು ನೋಡಿ ಕವಿಗಳು ಹೀಗೆ ಉತ್ಪ್ರೇಕ್ಷಿಸುತ್ತಾರೆ. ವಿದ್ಯಾಗ್ರಹಣದಲ್ಲಿ ಅತ್ಯಂತ ಸಮರ್ಥರಾದವರು ಶ್ರೀವೇಂಕಟನಾಥರು. ಅವರ ಮಾತಿನಲ್ಲಿ ಸರಸ್ವತೀ ಸಮೇತರಾದ ಬ್ರಹ್ಮದೇವರು ಸನ್ನಿಹಿತರಾಗಿದ್ದಾರೆ. ಇವರಿಬ್ಬರನ್ನು ಕುರಿತು ವೇದಾದಿ ಸಚ್ಛಾಸ್ತ್ರಗಳನ್ನು ಉಪದೇಶಿಸಲು ಪರಬ್ರಹ್ಮ ಸ್ವರೂಪಿಯಾದ ಶ್ರೀಮನ್ನಾರಾಯಣನೇ (ಇವರ ಎರಡು ಕಣ್ಣುಗಳೆಂಬ) ಎರಡು ಮತ್ಸ್ಯಾವತಾರಗಳನ್ನು ತಾಳಿ ಹಿಂದೆ ಹೇಳಿದ ವೇಂಕಟನಾಥರು ಮತ್ತು ಬ್ರಹ್ಮದೇವರಿಗೆ ಉಪದೇಶ ಮಾಡುತ್ತಾ ಇದ್ದಾರೆ ಎಂದು ಜ್ಞಾನಿಗಳು ಕುಶಲರು ತಿಳಿಯುತ್ತಾರೆ ಎಂಬುದಾಗಿ ತಾತ್ಪರ್ಯ. ವಿಭೋಃ ನಯನದ್ವಯಂ ದ್ವಿಮತ್ಸ್ಯರೂಪಂ ವಿದುಃ ಸಮರ್ಥರಾದ ವೇಂಕಟನಾಥರ ಎರಡು ಕಣ್ಣುಗಳನ್ನು ಎರಡು ಮತ್ಸ್ಯಗಳನ್ನಾಗಿ ತಿಳಿಯುತ್ತಾರೆ, ಎಂಬುದಾಗಿ ಕಣ್ಣುಗಳನ್ನು ಉದ್ದೇಶಿಸಿ ದ್ವಿಮತ್ಸ್ಯರೂಪ ಎರಡು ಮತ್ಸ್ಯಗಳ ರೂಪಗಳು ಎಂದು ವಿಧೇಯ ವಿಶೇಷಣವನ್ನಾಗಿ ಹೇಳಿದ್ದಾರೆ. ಭಗವಂತನು ಎರಡು ಬಾರಿ ಮತ್ಸ್ಯಾವತಾರ ಮಾಡಿದ್ದಾನೆ ಎಂದು ಪುರಾಣಗಳಲ್ಲಿ ಪ್ರಸಿದ್ಧವಾಗಿದೆ. ಚಾಕ್ಷುಷ ಮನ್ವಂತರದಲ್ಲಿ ಸತ್ಯವ್ರತನಲ್ಲಿ ಅನುಗ್ರಹ ಮಾಡುವುದಕ್ಕಾಗಿ ಮತ್ಸ್ಯರೂಪದಿಂದ ಅವತರಿಸಿದ ಭಗವಂತನು ಅದೇ ಮನ್ವಂತರದ ಕೊನೆಯಲ್ಲಿ ಮತ್ತೊಂದು ಬಾರಿ ಮತ್ಸ್ಯರೂಪದಿಂದ ಅವತರಿಸಿದನು.

ಹೀಗೆ ಕಣ್ಣು ಅತ್ಯಂತ ದೀರ್ಘವಾದುದರಿಂದ ಮತ್ಸ್ಯಾಕಾರ ಉಳ್ಳದ್ದು ಎಂದು ತೋರುತ್ತದೆ. ಶ್ರೀವೇಂಕಟಾರ್ಯರು ಒಬ್ಬರು. ಅವರ ಮಾತಿನಲ್ಲಿ ಸನ್ನಿಹಿತರಾಗಿರುವ ಸರಸ್ವತೀ ಸಹಿತರಾದ ಬ್ರಹ್ಮದೇವರು

ಮತ್ತೊಬ್ಬರು. ಇವರಿಬ್ಬರೂ ಶ್ರೋತ್ರಗಳು, ಅವರಿಬ್ಬರಿಗೆ ಒಂದೇ ಬಾರಿ ಒಂದೇ ಅವತಾರದಿಂದ ಉಪದೇಶ ಮಾಡಲು ಸಾಧ್ಯವಿಲ್ಲ. ಆದುದರಿಂದ ಪರಮಾತ್ಮನು ಹಿಂದೆ ಎರಡು ಬಾರಿ ಮತ್ಸ್ಯಾವತಾರ ಮಾಡಿದಂತೆ ಈಗ ಅದೇ ಮತ್ಸ್ಯಾವತಾರ ರೂಪಗಳು ಎರಡು ಶ್ರೀವೇಂಕಟನಾಥರ ಎರಡು ಕಣ್ಣುಗಳಾಗಿ ಬಂದಿವೆ ಎಂದು ಉತ್ಪ್ರೇಕ್ಷೆ. ಮತ್ಸ್ಯಗಳಂತೆ ಶ್ರೀವೇಂಕಟನಾಥರ ಕಣ್ಣುಗಳೂ ಬಹು ದೀರ್ಘವಾಗಿವೆ ಎಂದು ತಾತ್ಪರ್ಯ.

**ಅವತಾರಿಕೆ :** ಈಗ ಕವಿಗಳು ಅಭೂತೋಪಮೆಯಿಂದ ಮುಖವನ್ನು ವರ್ಣಿಸುತ್ತಾರೆ.

**ಕಪೋಲರಾಜನ್ನವರೋಮವಲ್ಲರೀನಿವೇಷ್ಟಿತಂ ಯಾತಿ ತದಾ ತದಾನನಮ್ ।**
**ಸಮಾನತಾಂ ತೇನ ಯದಾ ಬಹಿರ್ಗಲತ್‌ಕಲಂಕರೇಖಾವೃತಮಿಂದುಮಂಡಲಮ್ ॥೧೮॥**

**ತಾತ್ಪರ್ಯ :** ಯೌವನದಲ್ಲಿ ಪದಾರ್ಪಣ ಮಾಡುತ್ತಿರುವ ಶ್ರೀವೇಂಕಟನಾಥರ ಕಪೋಲ ಪ್ರದೇಶದಲ್ಲಿ ಕೋಮಲವಾದ ರೋಮಗಳು ಚಿಗುರುತ್ತಿದ್ದವು. ಅವುಗಳಿಂದ ಚಂದ್ರಬಿಂಬದಂತಹ ಅವರ ಮುಖವು ಸುಂದರವಾಗಿ ಶೋಭಿಸುತ್ತಿತ್ತು. ಆದರೆ ಚಂದ್ರಬಿಂಬದಲ್ಲಿ ಕಪ್ಪಾದ ಕಳಂಕವು ಒಂದೆಡೆಯಲ್ಲೇ ಇರುವುದರಿಂದ ಎರಡು ಕಪೋಲಗಳಲ್ಲಿ ನವಕೋಮಲ ರೋಮರಾಜಿಯಿಂದ ಕೂಡಿದ ಶ್ರೀವೇಂಕಟನಾಥರ ಮುಖಕ್ಕೆ ಹೋಲಿಕೆ ಕೊಡಲು ಸಾಧ್ಯವಾಗುವುದಿಲ್ಲ. ಒಂದು ವೇಳೆ ಚಂದ್ರನ ಕಪ್ಪಾದ ಕಳಂಕದ ರೇಖೆಗಳು ಚಂದ್ರಮಂಡಲದ ಎರಡೂ ಪಾರ್ಶ್ವಗಳಲ್ಲಿ ಕಾಂತಿಯುಕ್ತವಾಗಿ ಹೊರಹೊಮ್ಮುತ್ತಿದ್ದರೆ ಶ್ರೀವೇಂಕಟನಾಥರ ಮುಖದ ಹೋಲಿಕೆಯನ್ನು ಚಂದ್ರಮಂಡಲವು ಹೊಂದಬಹುದು. (ಹೀಗಾಗುವ ಸಂಭವವು ಇಲ್ಲವಾದುದರಿಂದ ಇದು ಅಭೂತೋಪಮಾ ಎನಿಸಿಕೊಳ್ಳುತ್ತದೆ).

**ಅವತರಣಿಕೆ :** ಈಗ ಕವಿಗಳು ಶ್ರೀವೇಂಕಟನಾಥರ ಮುಖವನ್ನು ಬೇರೊಂದು ಭಂಗಿಯಿಂದ ವರ್ಣಿಸುತ್ತಾರೆ.

**ಗಲಾಂತ*ಪೀತಪ್ರಸವಾಸವೈಃ ಪುನಸ್ತದೀಯಲೋಭಾಚ್ಚಲಿತಾಲಿಭಿರ್ಯುತಮ್ ।**
**ಶರತ್ಸರೋಜಾತಮಿಮಾಸ್ಯ ಭಾಸತೇ ಮುಖಂ ಪರೀತಂ ನವಗಂಡರೋಮಭಿಃ ॥೧೯॥**
(* ಪಾಠ – ಗಲಾಂತಪೀತೇ ಪ್ರಸವಾಸವೈಃ ಪುನಃ)

**ತಾತ್ಪರ್ಯ :** ಕಮಲದಂತಹಾ ಮುಖವುಳ್ಳ ಶ್ರೀವೇಂಕಟನಾಥರ ಕಪೋಲಗಳಲ್ಲಿ ಹೊಸದಾದ ಕೋಮಲವಾದ ರೋಮಗಳು ಹುಟ್ಟಿದವು. ಅದನ್ನು ನೋಡಿದರೆ ಕಂಠಪೂರ್ತಿಯಾಗಿ ಮಕರಂದವನ್ನು ಕುಡಿದ ಅನಂತರದಲ್ಲೂ ಪುನಃ ಆಸೆಯಿಂದ ಶರತ್ಕಾಲದ ತಾವರೆಯ ಸುತ್ತಲೂ ದುಂಬಿಗಳು ಓಡಾಡುತ್ತಿವೆಯೋ ಎಂಬಂತೆ ಭಾಸವಾಗುತ್ತಿತ್ತು. ಈ ರೀತಿಯಾಗಿ ದುಂಬಿಗಳಿಂದ ಸುತ್ತುವರಿಯಲ್ಪಟ್ಟ ಶರತ್ಕಾಲದ ಕಮಲದಂತೆ ಶ್ರೀವೇಂಕಟನಾಥರ ಮುಖವು ಇತ್ತು.

**ಅವತಾರಿಕೆ :** ಈ ವೇಂಕಟನಾಥರ ಮುಖವನ್ನೇ ಪುನಃ ವರ್ಣಿಸುತ್ತಾ ಮುಖದಲ್ಲಿರುವ ಮೀಸೆಯ ಸಾಲನ್ನು ಕಬ್ಬಿಣದ ಬೀಗದ ಸರಪಳಿಯೆಂದೂ, ಮುಖವನ್ನು ನಿಧಿಯನ್ನಿಟ್ಟಿರುವ ಭಂಗಾರದ ಪಾತ್ರೆಯೆಂದೂ, ಮುಖದಲ್ಲಿರುವ ಶಾಸ್ತ್ರವು ನಿಧಿಯೆಂದೂ ಕವಿಗಳು ವರ್ಣಿಸುತ್ತಿದ್ದಾರೆ.

**ವಿಲಂಬಿತೇ ಶ್ಮಶ್ರುಮಹಃಪರಂಪರಾದ್ವಿತಯ್ಯಯಃ ಶೃಂಖಲಮಧ್ಯಸೀಮನೀ ।**
**ತದಾನನೇ ಶಬ್ದ (ಛದ್ಮ) ಸುವರ್ಣಭಾಜನೇ ವಿರಾಜತೇ ವಿಸ್ತೃತಶಾಸ್ತ್ರಶೇವಧಿಃ ॥೨೦॥**

**ತಾತ್ಪರ್ಯ** : ದೊಡ್ಡ ಪಾತ್ರೆಯೊಳಗೆ ಭಂಗಾರದ ನಾಣ್ಯ ಮುಂತಾದ್ದವನ್ನು ಇಟ್ಟು ಎರಡು ಸರಪಳಿಗಳನ್ನು ಕಟ್ಟಿ ಬೀಗ ಹಾಕಿ ಆ ಸರಪಳಿಗಳ ಮೂಲಕ ನಿಧಿಯನ್ನು ನೇತು ಹಾಕುತ್ತಾರೆ. ಆದರೆ ಪ್ರಕೃತದಲ್ಲಿ ಶ್ರೀವೇಂಕಟನಾಥರ ಮೀಸೆಯು ಎರಡೂ ಕಡೆ ಹರಡಿಸಿರುವ ಎರಡು ಕಾಂತಿಯ ಸಾಲುಗಳೆಂಬ ಎರಡು ಕಬ್ಬಿಣದ ಸರಪಳಿಗಳ ಮೂಲಕ ನೇತು ಹಾಕಿರುವ ಅವರ ಬಾಯಿ ಎಂಬ ಚಿನ್ನದ ಪಾತ್ರೆಯಲ್ಲಿ ಜಗತ್ಪ್ರಸಿದ್ಧವಾದ ಬಹಳ ವಿಸ್ತಾರವಾದ ಶಾಸ್ತ್ರಗಳೆಂಬ ನಿಧಿಸಮುದಾಯವು ಶೋಭಿಸುತ್ತಿದೆ. ಮೀಸೆಯ ಎರಡು ಪಕ್ಕದ ಕಾಂತಿಯ ಸಾಲು ಎರಡು ಕಬ್ಬಿಣದ ಸರಪಳಿಯಂತೆ ಇದೆ. ಬಾಯಿಯು ಶಬ್ದಗಳನ್ನು ಪ್ರಕಟಗೊಳಿಸುವ ಚಿನ್ನದ ಪಾತ್ರೆಯಂತಿದೆ. ಪಾತ್ರೆಯಲ್ಲಿ ಪದ್ಮಶಂಖಾದಿ ನಿಧಿಗಳು ಇರುವಂತೆ ಶ್ರೀವೇಂಕಟನಾಥರ ಬಾಯಿಯಲ್ಲಿ ಮಧ್ವಶಾಸ್ತ್ರಾದಿ ಸಮಸ್ತ ಶಾಸ್ತ್ರಗಳೂ ನಿರಂತರವಾಗಿ ಶೋಭಿಸುತ್ತಿವೆ. ಇವರು ಸರ್ವಶಾಸ್ತ್ರಾಭಿಜ್ಞರು, ಇವರ ಮುಖವು ಸುವರ್ಣಕಾಂತಿಯಿಂದ ಕೂಡಿದೆ ಎಂದು ಅಭಿಪ್ರಾಯ.

**ವಿಶೇಷಾಂಶ** : "ಅಥಪುಂಸ್ಕಟ್ಯಾಂ ಶೃಂಖಲಂ ಶ್ರುತಿಷು" ಎಂಬ ಅಮರಕೋಶಾನುಸಾರವಾಗಿ ಶೃಂಖಲ ಶಬ್ದವು ನಪುಂಸಕಲಿಂಗವೂ ಆಗಿದೆ. ಇಲ್ಲಿ ನಪುಂಸಕಲಿಂಗ ಶೃಂಖಲ ಶಬ್ದವನ್ನೇ ಇಟ್ಟುಕೊಳ್ಳಬೇಕು. ಇಲ್ಲಿ ಬಾಲಬೋಧಿನೀ ವ್ಯಾಖ್ಯಾನದಲ್ಲಿ ಶೃಂಖಲವನ್ನು ಸ್ತ್ರೀಲಿಂಗವೆಂದೂ ದ್ವಿತಯಾ ಶಬ್ದವು ಅದಕ್ಕೆ ವಿಶೇಷಣವೆಂದೂ ಇಟ್ಟುಕೊಂಡು ಈ ರೀತಿಯಾಗಿ ವಿಚಾರ ಮಾಡಿದ್ದಾರೆ. "ಶ್ಮಶ್ರುಮಹಃ ಪರಂಪರೇ ಏವ ದ್ವಿತೀಯ್ಯ ಅಯಃ ಶೃಂಖಲೇ", ಮೀಸೆಗಳೆರಡರ ಎರಡು ಕಾಂತಿಗಳ ಎರಡು ಪರಂಪರೆಗಳೇ ದ್ವಿತಯಾ = ಎರಡು ಕಬ್ಬಿಣದ ಸರಪಳಿಗಳು, ಎಂದು ಅರ್ಥವನ್ನು "ತಯಬಯಜೌ ಸ್ತ್ರೀ ನಪುಂಸಕಯೋಃ" ಎಂಬ ಲಿಂಗಾನುಶಾಸನ ವಚನದಿಂದ ದ್ವಯೀ ತೃತಯೀ ಶಬ್ದಗಳಂತೆ ದ್ವಿತಯೀ ಶಬ್ದವೂ ಧರ್ಮ ಎಂದರೆ ಎರಡು ಸಮುದಾಯ ಎಂಬ ಅರ್ಥವನ್ನು ಕೊಡುತ್ತದೆ. ಎರಡು ಸಮುದಾಯವುಳ್ಳದ್ದು, ಎರಡೂ ಅರ್ಥವನ್ನು ಕೊಡುವುದಿಲ್ಲ. ಇಲ್ಲಿ ದ್ವಿತಯ್ಯಯಃ ಶೃಂಖಲೇ=ಎರಡು ಕಬ್ಬಿಣದ ಸರಪಳಿಗಳು ಎಂದು ಅರ್ಥವಾಗಬೇಕು. ಆ ಅರ್ಥವು ಬರುವುದಿಲ್ಲ" "ಚತುಷ್ಟಯೀ ಸನ್ನಿಕರ್ಷೋಽಪ್ಯಧಿಕಂಕರಣಮಿಷ್ಯತೆ" ಎಂಬ ತರ್ಕಭಾಷಾ ಪ್ರಯೋಗದಿಂದಲೂ ಚತುಷ್ಟಯೀ ಖಲು ಧರ್ಮಣಾಂಗತಿಃ ಎಂಬ ಪ್ರಮಾಣಪದ್ಧತೀ ಪ್ರಯೋಗದಿಂದಲೂ ಚತುಷ್ಟಯೀಖಲು ಶಬ್ದಾನಾಂ ಪ್ರವೃತ್ತಿಃ ಎಂಬ ವ್ಯಾಕರಣ ಮಹಾಭಾಷ್ಯ ಪ್ರಯೋಗದಿಂದ 'ತಯಪ್' ಪ್ರತ್ಯಯಾಂತ ಶಬ್ದಕ್ಕೆ ಧರ್ಮ ಮತ್ತು ಧರ್ಮಿ ಉಭಯ ವಾಚಕತ್ವವಿದೆಯೆಂದು ನಾವು ತಿಳಿಯುತ್ತೇವೆ. ಆದ್ದರಿಂದ ಇಲ್ಲಿ ದ್ವಿತಯೀ ಎಂದರೆ ಎರಡು ಅವಯುವ ಸಮುದಾಯವುಳ್ಳ (ಎರಡು)ಎಂದು ಧರ್ಮಿ (ವಿಶೇಷಣವಾಚಕ) ವಾಚಕವಾಗಿಯೇ ಈ ಶಬ್ದವನ್ನು ಇಟ್ಟುಕೊಳ್ಳಬೇಕು ಎಂಬುದಾಗಿ ವಿಚಾರವನ್ನು ಸಮಾಪ್ತಿಗೊಳಿಸಿದ್ದಾರೆ. ಗುರುಸೇವಾ ವ್ಯಾಖ್ಯಾನದಲ್ಲಿ ಈ ವಿಚಾರಕ್ಕೆ ಕೈ ಹಾಕದೇ ವ್ಯಾಖ್ಯಾನಕಾರರು ಶ್ಮಶ್ರುಮಹಃ ಪರಂಪರಯಾಃ ದ್ವಿತಯೀ=ಮೀಸೆಯ ಕಾಂತಿ ಪರಂಪರೆಯ ಎರಡು ಅವಯವವುಳ್ಳ ಸಮುದಾಯ ಎಂದು ಅರ್ಥ ಮಾಡಿರುತ್ತಾರೆ.

**ಅವತಾರಿಕೆ** : ಈಗ ಕವಿಗಳು ಶ್ರೀವೇಂಕಟನಾಥಾಚಾರ್ಯರ ಹುಬ್ಬುಗಳೆರಡನ್ನೂ ವರ್ಣಿಸುತ್ತಾರೆ.

**ಕರೀಶ್ವರಾಣಾಂ ಧರಣೀಸಮಾಗಮೇ ಭವೇದುಪಾದಾನಮಸಂಶಯಂ ಭ್ರುವೌ ।**
**ಅಮುಷ್ಯ ನೋ ಚೇತ್ ಪರಥಾ ಕಥಂ ಕ್ಷಿತೌ ಭವೇದಯಂ ಶಾಮಲಿಮಾ ಮನೋಹರಃ ॥೨೧॥**

**ತಾತ್ಪರ್ಯ :** ಸ್ವರ್ಗದಲ್ಲಿರುವ ದೇವಲೋಕದ ಐರಾವತವೆಂಬ ಆನೆಯ ಸಂತತಿಯು ಶುಭ್ರ ಬಿಳಿಯ ಬಣ್ಣದ್ದಾಗಿರುತ್ತದೆ. ಅವು ಎಲ್ಲವೂ ಭೂಮಿಗೆ ಬಂದು ಹುಟ್ಟಿದಾಗ ಕಪ್ಪು ಬಣ್ಣದ್ದಾಗುತ್ತದೆ. ಇದು ಹೇಗೆ ಎಂಬ ಸಂಶಯ ಉಂಟಾಗುತ್ತದೆ. ಅದಕ್ಕೆ ಕವಿಗಳು ಪರಿಹಾರ ಹೇಳುತ್ತಾರೆ. ಶ್ರೀವೇಂಕಟನಾಥರ ಕಪ್ಪಾದ ಹುಬ್ಬುಗಳ ಬಣ್ಣದಿಂದ ಆನೆಗಳು ಕಪ್ಪಾದವು. ಶ್ರೀವೇಂಕಟನಾಥರ ಕಪ್ಪಾದ ಹುಬ್ಬುಗಳೇ ಆನೆಗಳು ತಮ್ಮ ಶುಭ್ರ ಬಿಳಿಯ ಬಣ್ಣ ಕಪ್ಪು ಬಣ್ಣದ್ದಾಗಲು ಕಾರಣವು. (ಮಡಿಕೆ ಮಣ್ಣಿನಂತೆ) ಹಾಗೆ ಇಲ್ಲದಿದ್ದರೇ ಆ ಆನೆಗಳಿಗೆ ಸ್ವರ್ಗದಲ್ಲಿ ಇರುವ ಬಿಳಿಯ ಬಣ್ಣವು ಮನೋಹರವಾದ ಕಪ್ಪು ಬಣ್ಣವು ಉಂಟಾಗಲು ಹೇಗೆ ಸಾಧ್ಯ?

**ವಿಶೇಷಾಂಶ :** ಪ್ರಸ್ತುತ ಶ್ಲೋಕಕ್ಕೆ ಗುರುಪಾದಸೇವಾ ವ್ಯಾಖ್ಯಾನವಿಲ್ಲ. ಶ್ಲೋಕದ ಅಭಿಪ್ರಾಯವು ಸ್ಪಷ್ಟವಾಗಿಲ್ಲ. ಭೂಲೋಕದಲ್ಲಿರುವ ಆನೆಗಳು ಕಪ್ಪು ಬಣ್ಣದ್ದಾಗಿರುವುದಕ್ಕೆ ಶ್ರೀವೇಂಕಟನಾಥಾಚಾರ್ಯರ ಹುಬ್ಬುಗಳೇ ಕಾರಣ ಎಂದು ವರ್ಣಿಸಿರುವುದು ಕೇವಲ ಅತಿಶಯೋಕ್ತಿಯಲ್ಲ! "ಅತ್ಯುಕ್ತಿ" ಎಂದು ಕಾಣುತ್ತದೆ. "ಅತ್ಯುಕ್ತಿ" ಎಂಬ ಅಲಂಕಾರವೂ ಇದೆ. "ಅತ್ಯುಕ್ತಿರದ್ಭುತಾತಥ್ಯ ಶೌರ್ಯೌದಾರ್ಯಾದಿವರ್ಣನಂ । ತ್ವಯಿದಾತಂ ರಾಜೇಂದ್ರಯಾಚಕಾಃ ಕಲ್ಪಶಾಕಿನಃ ॥" ಆಶ್ಚರ್ಯಕರವಾದ ಶೌರ್ಯ ಔದಾರ್ಯ ಮುಂತಾದವುಗಳ ವರ್ಣನೆಯೇ ಅತ್ಯುಕ್ತಿಯು, ರಾಜೇಂದ್ರ ನೀನು ದಾನ ಕೊಡುತ್ತಿರುವಾಗ ನಿನ್ನನ್ನು ಬೇಡುವವರೆಲ್ಲಾ ಕಲ್ಪವೃಕ್ಷಗಳಾಗಿದ್ದಾರೆ, ಎಂಬಂತೆ ಇಲ್ಲಿಯೂ ಅತ್ಯುಕ್ತಿ ಅಲಂಕಾರವನ್ನು ಇಟ್ಟುಕೊಳ್ಳಬಹುದು.

**ಅವತಾರಿಕೆ :** ಕವಿಗಳು ಈಗ ವೇಂಕಟನಾಥರ ಹಣೆಯನ್ನು ವರ್ಣಿಸುತ್ತಾರೆ.

**ಅಮುಂಚದೇಣಾಂಕವಿಭಾವರೀಶಿತುರ್ದಲೇನ ಕೃತ್ವಾಸ್ಯ ಲಲಾಟಮಂಡಲಮ್ ।**
**ಸರೋಜಭೂಸ್ತಸ್ಯ ಕಲಂಕರೇಖಿಕಾಂ ಚಕಾರ ಚಿಲ್ಲಾಲತಿಕಾಮಪಿ ಪ್ರಭುಃ (ಪ್ರಭೋಃ) ॥೨೨॥**

**ತಾತ್ಪರ್ಯ (ಬಾ.ಬೋ.) :** ಬ್ರಹ್ಮದೇವರು ತಮ್ಮ ಶಿಲ್ಪಕಲಾ ನೈಪುಣ್ಯತೆಯನ್ನು ಸಂಪೂರ್ಣವಾಗಿ ವಿನಿಯೋಗಿಸಿ, ಚಂದ್ರನ ಕಲಂಕ ಇತ್ಯಾದಿ ಯಾವುದನ್ನೂ ಬಿಡದೇ, ಶ್ರೀವೇಂಕಟನಾಥರ ಹಣೆ ಮತ್ತು ಹುಬ್ಬುಗಳನ್ನು ಸೃಷ್ಟಿ ಮಾಡಿದರು. ಚಂದ್ರನ ಕಳಂಕವಿಲ್ಲದ ಶುಭ್ರವಾದ ಅರ್ಧ ಭಾಗದಿಂದ ಹಣೆಯನ್ನು ಸೃಷ್ಟಿಸಿ ಉಳಿದ ಅರ್ಧ ಭಾಗದಲ್ಲಿರುವ ಕಳಂಕ ರೇಖೆಯ ಭಾಗದಿಂದ ವೇಂಕಟನಾಥರ ಎರಡೂ ಹುಬ್ಬು ಬಳ್ಳಿಗಳನ್ನು (ಉದ್ದವಾದ ಅಂಗಾರ ರೇಖಾ ರೂಪವಾದ ತಿಲಕವನ್ನು) ರಚಿಸಿದರು. ಶ್ರೀಬ್ರಹ್ಮದೇವರು ಸರ್ವ ಸಮರ್ಥರಾದುದರಿಂದ ಏನನ್ನೂ ಬೇಕಾದರೂ ಸೃಷ್ಟಿಸಲು ಸಮರ್ಥರು.

**ತಾತ್ಪರ್ಯ (ಗು.ಸೇ.) :** ಚಂದ್ರನಲ್ಲಿ ಜಿಂಕೆಯೆಂಬ ಕಪ್ಪಾದ ಕಳಂಕವಿದೆ. ಅದರಿಂದ ಒಡಗೂಡಿದ ಚಂದ್ರನ ಕಲಂಕ ರಹಿತವಾದ ಭಾಗವನ್ನು ಬೇರ್ಪಡಿಸಿ ಶ್ರೀವೇಂಕಟನಾಥರ ಅರ್ಧ ಚಂದ್ರಾಕಾರವಾದ ಹಣೆಯನ್ನು ಸೃಷ್ಟಿಸಿ ಚಂದ್ರನ ಕಲಂಕ ರೇಖೆಯಿಂದ ಶ್ರೀವೇಂಕಟನಾಥರ ಎರಡು ಹುಬ್ಬಿನ ಬಳ್ಳಿಗಳನ್ನೂ ಸೃಷ್ಟಿ ಮಾಡಿದರು.

**ವಿಶೇಷಾಂಶ :** ಬಾಲಬೋಧಿನೀ ವ್ಯಾಖ್ಯಾನದಂತೆ, ಚಂದ್ರನ ಕಲಂಕರಹಿತವಾದ ಅರ್ಧ ಭಾಗದಿಂದ ಹಣೆಯನ್ನೂ, ಉಳಿದ ಅರ್ಧಭಾಗದಲ್ಲಿರುವ ಕಳಂಕ ಭಾಗದಿಂದ ಕಪ್ಪಾದ ಎರಡು ಹುಬ್ಬುಗಳನ್ನೂ (ತಿಲಕವನ್ನು) ಬ್ರಹ್ಮದೇವರು ತಮ್ಮ ಕೌಶಲದಿಂದ ಸೃಷ್ಟಿ ಮಾಡಿದರು ಎಂದು ಈ ಶ್ಲೋಕದಿಂದ ಹೇಳಿದ್ದಾರೆ. ಗುರುಸೇವಾ ವ್ಯಾಖ್ಯಾನದಂತೆ ಕಳಂಕಸಹಿತವಾದ ಚಂದ್ರನ ಸಾರವಾದ ಶುಭ್ರ ಭಾಗದಿಂದ

ಶ್ರೀವೇಂಕಟನಾಥರ ಹಣೆಯನ್ನು ಸೃಷ್ಟಿಮಾಡಿ ಉಳಿದ ಕಳಂಕಭಾಗದಿಂದ ಎರಡು ಹುಬ್ಬುಗಳನ್ನು ಬ್ರಹ್ಮದೇವರು ಸೃಷ್ಟಿಸಿದರು ಎಂದು ಹೇಳಿದ್ದಾರೆ ಎಂಬುದಾಗಿ ತಾತ್ಪರ್ಯ.

**ಅವತಾರಿಕೆ :** ಈಗ ಕವಿಗಳು ಮುಂದಿನ ಪದ್ಯದಿಂದ ಶ್ರೀವೇಂಕಟನಾಥರ ತುಟಿಗಳನ್ನು ವರ್ಣಿಸುತ್ತಾರೆ.

**ನವಾಕೃತೇರಸ್ಯ ಲಲಾಟತಾಮಸೀವಿಟಾರ್ಧಬಿಂಬಗ್ರಲಸ (ಗಲತ್) ತ್ಸುಧಾರಸಮ್ ।**
**ಉದಗ್ರನಾಸಾಭ್ರ (ಸಾ ಭ್ರ) ಮಮಾರ್ಗನಿರ್ಗತಂ ಬಿಭರ್ತಿ ನೋಚೇದಮೃತಂ ಕುತೋಽಧರೇ ॥೨೩॥**

**ತಾತ್ಪರ್ಯ :** ತರುಣರಾದ ಶ್ರೀವೇಂಕಟನಾಥಾಚಾರ್ಯರ ಹಣೆಯು ಅರ್ಧಚಂದ್ರಾಕೃತಿಯಾಗಿದ್ದು, ಲಲಾಟವೆಂಬ ಚಂದ್ರಬಿಂಬದ ಅರ್ಧದಿಂದ, ಹುಬ್ಬುಗಳ ಮಧ್ಯಭಾಗದಿಂದ ಎತ್ತರವಾದ ಮೂಗಿನ ಮಾರ್ಗವಾಗಿ ಸುರಿದ ಅಮೃತವು ಅವರ ತುಟಿಯಲ್ಲಿ ಸೇರಿತು. ತುಟಿಯಲ್ಲಿ ಈ ಅಮೃತವು ಸೇರುವುದಕ್ಕೆ ಈ ರೀತಿಯಾದ ಕಾರಣವನ್ನು ಹೇಳದೆ ಇದ್ದರೆ ತುಟಿಯಲ್ಲಿ ಅಮೃತ ಸೇರುವುದಕ್ಕೆ ಬೇರೇನು ಕಾರಣವನ್ನು ನೀಡಲು ಸಾಧ್ಯ?

**ವಿಶೇಷಾಂಶ :** ಶ್ರೀವೇಂಕಟನಾಥರ ಹಣೆಯು ಚಂದ್ರನ ಅರ್ಧಭಾಗದಿಂದ ರಚಿತವಾಗಿದೆ ಎಂದು ಕವಿಗಳು ಕಲ್ಪಿಸಿ, ಚಂದ್ರನು ಅಮೃತ ಪೂರ್ಣವಾಗಿರುವಂತೆ ಲಲಾಟವೆಂಬ ಅರ್ಧಚಂದ್ರನೂ ಅಮೃತಭರಿತನಾಗಿದ್ದಾನೆ ಎಂದು ಕಲ್ಪಿಸಿದ್ದಾರೆ. ಹಣೆಯನ್ನು ನಿರ್ಮಿಸಲು ಚಂದ್ರನನ್ನು ಎರಡಾಗಿ ವಿಭಜಿಸಿದಾಗ ಆ ಲಲಾಟವೆಂಬ ಅರ್ಧಚಂದ್ರನಿಂದ ಅಮೃತವು ಹುಬ್ಬುಗಳ ಮಧ್ಯದ ಮೂಲಕ ಜಿನುಗ ಹತ್ತಿತ್ತು. ಅಲ್ಲಿಂದ ಮೂಗಿನ ಮೂಲಕ ಅಮೃತವು ಕೆಳಗೆ ಸುರಿಯ ತೊಡಗಿತು. ಹುಬ್ಬುಗಳ ಮಧ್ಯದಿಂದ ಮೂಗಿನ ಮೂಲಕ ಬರುವ ದಾರಿಯನ್ನು ಭ್ರಮ ಮಾರ್ಗ ಎಂದಿದ್ದಾರೆ. ರತಿವಿಹಾರದಲ್ಲಿ ಅಧರ ಅಂದರೆ ಕೆಳದುಟಿಯು ಚುಂಬನಕ್ಕೆ ಮಧುರವಾದ ಸ್ಥಾನವಾಗಿದ್ದು ಅಮೃತದಿಂದ ಕೂಡಿರುತ್ತದೆ ಎಂಬುದಾಗಿ ಕವಿಗಳು ಕಲ್ಪಿಸಿರುತ್ತಾರೆ. ಈ ರೀತಿಯಾದ ಕಲ್ಪನೆಯನ್ನು ಇಟ್ಟುಕೊಂಡು ಕವಿಗಳು ವರ್ಣಿಸಿರುತ್ತಾರೆ.

**ಅವತಾರಿಕೆ :** ಮಹಾನುಭಾವರಾದ ಶ್ರೀವೇಂಕಟನಾಥರ ಮನಸ್ಸು ತಾರುಣ್ಯದಿಂದ ತುಂಬಿದರೂ ಸತ್ವಗುಣದಿಂದ ಕೂಡಿತ್ತೆಂದೂ, ಕಡೆಗಣ್ಣುಗಳು ಮತ್ತು ಕೆಳದುಟಿಯಲ್ಲಿ ರಕ್ತವರ್ಣದ ರಜೋಗುಣವಿತ್ತೆಂದೂ ಕವಿಗಳು ವರ್ಣಿಸಿರುತ್ತಾರೆ.

**ರಜೋಗುಣಸ್ತಸ್ಯ ಮನೋಽತಿನಿರ್ಮಲಂ ಪ್ರವೇಷ್ಟುಕಾಮೋಽಪ್ಯಪಟುಸ್ತಪೋಬಲಾತ್ ।**
**ದುರಾಶಯಾ ಹಂತ ಚಿರಂ ನಿವರ್ತತೇ ದೃಶೋರ್ಯುಗಲ್ಯಾಮಧರೇಽತಿಭಾಸುರೇ ॥೨೪॥**

**ತಾತ್ಪರ್ಯ :** ಚಂಚಲ ಸ್ವಭಾವವುಳ್ಳ ರಜೋಗುಣವು ಈ ವೇಂಕಟನಾಥರ ಅತ್ಯಂತ ಸ್ವಚ್ಛವಾದ ಮನಸ್ಸನ್ನು ಪ್ರವೇಶಿಸಬೇಕೆಂಬ ದುರಭಿಪ್ರಾಯದಿಂದ ಸಮೀಪಿಸಿದರೂ, ಇವರ ಮನಸ್ಸಿನಲ್ಲಿರುವ ತಪಸ್ಸಿನ ತೀವ್ರ ತಾಪವನ್ನು ತಡೆಯಲಾರದೇ ಅವರ ಎರಡು ಕಡೆಗಣ್ಣುಗಳಲ್ಲಿಯೂ ಮತ್ತು ಕಳೆತುಟಿಯಲ್ಲಿಯೂ ಸ್ಥಾನವನ್ನು ಪಡೆಯಿತು. (ಗು.ಸೇ.– ಶುಕ್ಲವಾದ ಸತ್ವಗುಣದಿಂದ ಪ್ರಚುರವಾದ ಶ್ರೀವೇಂಕಟನಾಥರ ಮನಸ್ಸಿನಲ್ಲಿ ರಕ್ತವರ್ಣದ ರಜೋಗುಣವು ಪ್ರವೇಶಿಸಲು ಸಮರ್ಥವಾಗದೇ, ಮನಸ್ಸಿನಿಂದ ನಿಧಾನವಾಗಿ ಹಿಂತಿರುಗಿ ಮುಂದೆ ಎಂದಾದರೂ ಪುನಃ ಪ್ರವೇಶಿಸಲು ಪ್ರಯತ್ನಿಸುವ ದುರಭಿಪ್ರಾಯದಿಂದ ಅವರ ಎರಡು ಕಣ್ಣುಗಳಲ್ಲಿಯೂ, ಕಳೆದುಟಿಯಲ್ಲಿಯೂ ಬಂದು ಸೇರಿಕೊಂಡು ತನಗೆ ಶ್ರೀವೇಂಕಟನಾಥರ

ಮನಸ್ಸಿನಲ್ಲಿ ಅವಕಾಶಸಿಗಲಾರದೆಂದು ನಿರಾಶೆಯಿಂದ ಅಲ್ಲಿಂದ ಹೊರಗೆ ಹೊರಟು ಹೋಯಿತು. ಇಲ್ಲಿ ನಿವರ್ತತೇ = ನಿವೃತ್ತವಾಗುತ್ತದೆ, ಹೊರಟು ಹೋಗುತ್ತದೆ ಎಂಬ ಅರ್ಥವನ್ನು ಇಟ್ಟುಕೊಂಡಿದ್ದಾರೆ. ಬಾಲಬೋಧಿನೀಕಾರರು–ನಿತರಾಂ ವರ್ತತೇ–ನಿವರ್ತತೇ ಅಲ್ಲಿ ಸರಿಯಾದ ಸ್ಥಾನವನ್ನು ಮಾಡಿಕೊಂಡಿತು ಎಂಬುದಾಗಿ ಅರ್ಥವನ್ನು ಇಟ್ಟುಕೊಂಡಿದ್ದಾರೆ.)

**ವಿಶೇಷಾಂಶ :** ತ್ರಿಗುಣಗಳಲ್ಲಿ ಒಂದಾದ ರಜೋಗುಣವು ಎಲ್ಲಾ ಪ್ರಕೃತಿಯ ವಸ್ತುಗಳಿಗೂ ಸತ್ವ ತಮಸ್ಸುಗಳಂತೆ ಕಾರಣವು. ಅದು ಮನುಷ್ಯನನ್ನು ಉದ್ರೇಕಿಸಿ ಮನಸ್ಸಿನ ಕಾಂತಿಯನ್ನು ಕೆಡಿಸುತ್ತದೆ. ಸತ್ವವು ಬಿಳಿ, ರಜಸ್ಸು ಕೆಂಪು, ತಮಸ್ಸು ಕಪ್ಪು ಎಂದು ಶ್ರುತಿಯಲ್ಲಿದೆ. ರಕ್ತವರ್ಣದ ರಜೋಗುಣಕ್ಕೆ ಮನಸ್ಸಿನಲ್ಲಿ ಪ್ರವೇಶ ಸಿಗದಿದ್ದಾಗ ಅದು ಕಡೆಗಣ್ಣು ಮತ್ತು ಕೆಳ ತುಟಿಯಲ್ಲಿ ಸ್ಥಾನವನ್ನು ಪಡೆಯಿತು. ಕೆಂಪಾದ ರಜೋಗುಣದಿಂದ ಕಡೆಗಣ್ಣು ಮತ್ತು ಕೆಳದುಟಿಯು ಕೆಂಪಾದವು. ಕಡೆಗಣ್ಣು ಮತ್ತು ತುಟಿಯು ಕೆಂಪಾಗಿರುವುದು ಸೌಂದರ್ಯದ ಗುರುತು ಎಂಬ ಪ್ರಸಿದ್ಧಿಯನ್ನು ಇಟ್ಟುಕೊಂಡು ಈ ರೀತಿಯಾಗಿ ವರ್ಣಿಸಿರುತ್ತಾರೆ ಎಂದು ತಿಳಿಯಬೇಕು.

**ಅವತಾರಿಕೆ :** ಮಹಾಪುರುಷರಾದ ಶ್ರೀವೇಂಕಟನಾಥರ ನಾಲಿಗೆ, ಹಲ್ಲುಗಳು ಇವುಗಳಿಗೆ ಆಧಾರವಾದ ಬಾಯಿಯನ್ನು ಕವಿಗಳು ವರ್ಣಿಸುತ್ತಾರೆ.

**ಮನೋಹರೇ ತನ್ಮುಖಗರ್ಭಮಂದಿರೇ ಚಿರಂ ರಸಜ್ಞಾನಿಭತೂಲಿಕಾಂಚಿತೇ ।**
**ವಚೋಽಧಿದೇವ್ಯಾಃ ಶಯನಕ್ರಿಯಾಜುಷೋ ರದಾವಲಿಂ ಹಾರಲತೇತಿ ಮನ್ಮಹೇ ॥೨೫॥**

**ತಾತ್ಪರ್ಯ :** ಅಂತಃಪುರದ ಮಲಗುವ ಮನೆಯಲ್ಲಿ ಹಂಸತೂಲಿಕಾತಲ್ಪವೆಂಬ ಮೃದುವಾದ ಹಾಸಿಗೆಯಿಂದ ಕೂಡಿದ ಮಂಚದ ಮೇಲೆ ರಾಣಿಯ ಮಲಗಿರುತ್ತಾಳೆ. ಆ ಸಮಯದಲ್ಲಿ ಅವಳ ಬಿಳಿಯ ಮುತ್ತಿನ ಸರವು ಮೇಲೆ ಎದ್ದು ಕಾಣಿಸುತ್ತಿರುತ್ತದೆ. ಅದರಂತೆ ಶ್ರೀವೇಂಕಟನಾಥರ ಮನೋಹರವಾದ ನಾಲಿಗೆಯೆಂಬ ಉತ್ತಮವಾದ ಹಾಸಿಗೆಯಿಂದ ಕೂಡಿ ಬಾಯಿಯೆಂಬ ಅಂತಃಪುರದಲ್ಲಿ ಮಾತುಗಳಿಗೆ (ಪಿದ್ಯೆಗಳಿಗೆ) ಅಭಿಮಾನಿಯಾದ ಸರಸ್ವತಿಯು ಬಹಳ ಸಮಯದಿಂದ ಮಲಗಿರುತ್ತಾಳೆ. ಶ್ರೀವೇಂಕಟನಾಥಾಚಾರ್ಯರ ಬೆಳ್ಳಗಿರುವ ಕಾಂತಿಯುಕ್ತವಾದ ಹಲ್ಲಿನ ಎರಡು ಸಾಲುಗಳು ಸರಸ್ವತೀದೇವಿಯವರ ಮುತ್ತಿನ ಸರದ ಎರಡು ಎಳೆಗಳಂತೆ ಕಾಣಿಸುತ್ತದೆ ಎಂದು ಉತ್ಪ್ರೇಕ್ಷಿಸಿರುತ್ತಾರೆ.

**ವಿಶೇಷಾಂಶ :** ಇಲ್ಲಿ ಸರಸ್ವತೀದೇವಿಯು ಬಹಳ ಕಾಲದಿಂದ ಮಲಗಿದ್ದಾಳೆ ಎಂದು ಹೇಳಿರುವುದರಿಂದ ಸರಸ್ವತಿಯು ಚುರುಕಾಗಿಲ್ಲ ಎಂದು ತೋರುತ್ತದೆ. ಅದಕ್ಕಿಂತ ಸ್ವಲ್ಪ ನಿದ್ರೆ (ಕಣ್ಣು ಜೊಂಪು) ಮಾಡುತ್ತಿದ್ದಾಳೆ ಎಂದು ಹೇಳುವುದು ಉಚಿತವೆಂದು ತೋರುತ್ತದೆ. ಆದರೆ ಬಹಳ ಹೊತ್ತು ನಿದ್ದೆ ಮಾಡಿದಾಗ ನಿದ್ದೆಯ ಹೊರಳಾಟದಲ್ಲಿ ಸರವು ಅಸ್ತವ್ಯಸ್ತವಾಗಿ ಕೊರಳ ಸುತ್ತಲೂ ಸುತ್ತಿಕೊಂಡು ಎದ್ದು ಕಾಣಿಸುತ್ತಿದೆ. ಅದಕ್ಕೆ ಚಿರಂ– ಶಯಾನಕ್ರಿಯಾಜುಷಃ = ಅದನ್ನು ಬಹಳ ಹೊತ್ತು ಮಲಗಿರುವ ಎಂದು ಹೇಳಿದ್ದಾರೆ. ಸರಸ್ವತಿಯು ಮಲಗಿದ್ದರೂ, ಅವಳ ಸನ್ನಿಧಾನವು ಇರುವುದರಿಂದ ಮತ್ತು ಶ್ರೀವೇಂಕಟನಾಥರ ಯೌವನದಲ್ಲಿ ಸರಸ್ವತಿಯು ಪ್ರಗಲ್ಭಳಾಗಿ ಎದ್ದು ಕಾಣಿಸುತ್ತಿಲ್ಲ. ಮುಂದೆ ಅವರು ಪರಿವ್ರಾಜಕರಾದ ಮೇಲೆ ಸರಸ್ವತಿಯು ಅವರ ನಾಲಿಗೆಯಲ್ಲಿ ನರ್ತನ ಮಾಡಲಾರಂಭಿಸಿದಳೆಂದೂ ಅಭಿಪ್ರಾಯ ಇರುವುದರಿಂದ ಇಲ್ಲಿ ಅನೌಚಿತ್ಯವಿಲ್ಲ ಎಂದು ಭಾವಿಸಬೇಕು. ಇಲ್ಲಿ ರಸಜ್ಞಾನಿಭತೂಲಿಕಾಂಚಿತೇ ಎಂಬಲ್ಲಿ ಕೈತವಾಪಹ್ನುತಿ ಎಂಬ ಅಲಂಕಾರವಿದೆ.

ಕೈತವಾಪಹ್ನುತಿಃ ವ್ಯಕ್ತೌವ್ಯಾಜಾದ್ಯೈಃ ನಿಹ್ನುತೇ ಪದ್ಯೈಃ ಎಂಬುದಾಗಿ ಅದರ ಲಕ್ಷಣ. ಸಂಪೂರ್ಣ ಶ್ಲೋಕದಲ್ಲಿ ಉತ್ಪ್ರೇಕ್ಷಾಲಂಕಾರವಿದೆ. ಸಂಭಾವನಸ್ಯಾದುತ್ಪ್ರೇಕ್ಷಾ ವಸ್ತುಹೇತು ಫಲಾತ್ಮನಾ ಎಂಬುದು ಅದರ ಲಕ್ಷಣ.

*ಮನ್ಯೆ ಶಂಕೇ ಧ್ರುವಂ ಪ್ರಾಯೋ ನೂನಮಿತ್ಯೇವಮಾದಿಭಿಃ ।*
*ಉತ್ಪ್ರೇಕ್ಷಾ ವ್ಯಜ್ಯತೇ ಶಬ್ದೈಃ ಇವಶಬ್ದೋಽಪಿ ತಾದೃಶಃ ॥*

ಎಂಬ ವಚನದಂತೆ ಹೀಗೆ ತಿಳಿಯುತ್ತೇವೆ. "ಮನ್ಮಹೇ" ಎಂಬುದು ಉತ್ಪ್ರೇಕ್ಷಾಸೂಚಕ ಶಬ್ದವು.

**ಅವತಾರಿಕೆ :** ಈಗ ಕವಿಗಳು ಶ್ರೀವೇಂಕಟನಾಥಾಚಾರ್ಯರ ಎರಡು ಕಿವಿಗಳನ್ನು ವರ್ಣಿಸುತ್ತಿದ್ದಾರೆ.

**ಸರಂಧ್ರಕರ್ಣದ್ವಯಮಾಂಧ್ರದೇಶಿಕಾಃ ಪಯೋಧಿಕನ್ಯಾಮನುಬೀಜರೇಖಿಕೇ ।**
**ಸುವೇಷವೇದಪ್ರಣವೌ ತು ಸಂಜಗುಃ ಸುಮೇಧಸೋಽಸ್ಯ ದ್ರವಿಡಾವನೀಸುರಾಃ ॥೨೬॥**

**ತಾತ್ಪರ್ಯ :** ಆಂಧ್ರಪ್ರದೇಶ ಬ್ರಾಹ್ಮಣರು ಈ ವೇಂಕಟನಾಥಾಚಾರ್ಯರ ಸುಂದರವಾದ ರಂಧ್ರದಿಂದ ಕೂಡಿದ ಎರಡು ಕಿವಿಗಳನ್ನು ಪ್ರತ್ಯೇಕವಾಗಿ ಲಕ್ಷ್ಮೀಮಂತ್ರದ ಬೀಜಾಕ್ಷರ ಎಂದು ಹೇಳುತ್ತಿದ್ದರು. ಕುಶಲರಾದ ದ್ರಾವಿಡ ದೇಶದ ಬ್ರಾಹ್ಮಣರು ಈ ವೇಂಕಟನಾಥಾಚಾರ್ಯರ ಪ್ರತ್ಯೇಕವಾದ ಒಂದೊಂದು ಕಿವಿಯೂ ದ್ರಾವಿಡ ಭಾಷೆಯ ಓಂಕಾರದಂತಿದೆ ಎಂಬುದಾಗಿ ಹೇಳುತ್ತಿದ್ದರು. ಕ್ರಮವಾಗಿ ಆಂಧ್ರ (ತೆಲುಗು) ದ್ರಾವಿಡ (ತಮಿಳು) ಭಾಷೆಗಳ ಶ್ರೀಕಾರ ಮತ್ತು ಓಂಕಾರ ಇರುವಂತೆಯೇ ಈ ವೇಂಕಟನಾಥಾಚಾರ್ಯರ ಕೋಮಲವಾದ ಕಿವಿಗಳು ಸುಂದರವಾಗಿದ್ದುವು ಎಂಬುದಾಗಿ ತಾತ್ಪರ್ಯ.

**ಅವತಾರಿಕೆ :** ಈಗ ಕವಿಗಳು ಶ್ರೀವೇಂಕಟನಾಥರ ವಿಶಿಷ್ಟ ಮುಖಸೌಂದರ್ಯವನ್ನೂ ಭ್ರೂ ಸೌಂದರ್ಯವನ್ನೂ ವರ್ಣಿಸುತ್ತಾರೆ.

**ಅನಂಗಕುಂಭೀಶಿತುರೇತದಾನನಪ್ರಭಾಸುಧೋದನ್ವತಿ ಖೇಲತಶ್ಚಿರಮ್ ।**
**ಸಹೈವ ವಧ್ವಾ ಸಹಸಾ ಸಮುದ್ಯತೌ ಕರಾವಿವೈತೇ ಲಸತೋಽಸಿತೇ ಭ್ರುವೌ ॥೨೭॥**

**ತಾತ್ಪರ್ಯ :** ಶ್ರೀವೇಂಕಟನಾಥಾರ್ಯರ ಮುಖದ ಕಾಂತಿಸಮುದ್ರದಲ್ಲಿ ತನ್ನ ಪತ್ನಿಯಾದ ರತೀದೇವಿಯೊಡನೆ ಮನ್ಮಥನೆಂಬ ಶ್ರೇಷ್ಠ ಗಜವು ವಿಹಾರ ಮಾಡುತ್ತಿದ್ದಾಗ ಅದರ ಮೇಲಕ್ಕೆತ್ತಿದ ಎರಡು ಸೊಂಡಿಲುಗಳೋ ಎಂಬಂತೆ ಕಪ್ಪಾದ ಎರಡು ಹುಬ್ಬುಗಳು ಶೋಭಿಸುತ್ತಿವೆ.

**ವಿಶೇಷಾಂಶ :** ಆನೆಗೆ ಒಂದೇ ಸೊಂಡಿಲು ಇರುವುದಾದರೂ ಅದು ತನ್ನ ಸೊಂಡಿಲನ್ನು ಅತ್ತ ಇತ್ತ ಅಲ್ಲಾಡಿಸುವಾಗ ಎರಡು ಸೊಂಡಿಲುಗಳಂತೆ ಕಾಣಿಸುತ್ತವೆ ಎಂಬುದಾಗಿ ಇಟ್ಟುಕೊಳ್ಳಬಹುದು. ಅಥವಾ ಮನ್ಮಥನೆಂಬ ಆನೆಗೆ ಎರಡು ಸೊಂಡಿಲುಗಳಿವೆ ಎಂದಾದರೂ ಕವಿಗಳ ಕಲ್ಪನೆ ಎಂಬುದಾಗಿಯೂ ಅರ್ಥೈಸಬಹುದು. ಶ್ರೀವೇಂಕಟನಾಥಾಚಾರ್ಯರ ಮುಖವು ಕಾಂತಿ ಸಮುದ್ರದಂತಿದೆ, ಎರಡು ಹುಬ್ಬುಗಳು ಮನ್ಮಥನೆಂಬ ಆನೆಯ ಎರಡು ಸೊಂಡಿಲುಗಳಂತೆ ಅತ್ಯಂತ ಸುಂದರವಾಗಿವೆ ಎಂಬುದಾಗಿ ತಾತ್ಪರ್ಯ.

**ಅವತಾರಿಕೆ :** ಈಗ ಕವಿಗಳು ಶ್ರೀವೇಂಕಟನಾಥರ ಎದೆಯ ರೋಮಗಳನ್ನು ವರ್ಣಿಸುತ್ತಾರೆ.

**ಅಮುಷ್ಯ ಶುದ್ಧಂ ಹೃದಯಂ ಪಯೋಧಿಜಾಮನೋಹರಾಂತಃಪುರಮೇವ ಮನ್ಮಹೇ ।**
**ಉರಃ ಕವಾಟಂ ಸ್ತನಕೀಲಕೀಲಿತಂ ಪ್ರಯಾತಿ ಯದ್ರೋಮಲತಾಭಶೃಂಖಲಮ್ ॥೨೮॥**

**ತಾತ್ಪರ್ಯ (ಗು.ಸೇ.) :** ಶ್ರೀವೇಂಕಟನಾಥರ ಮನಸ್ಸು ಅತ್ಯಂತ ನಿರ್ಮಲವಾದುದು. ಆದುದರಿಂದಲೇ ಅದು ಕ್ಷೀರಸಾಗರನ ಕನ್ಯೆಯಾದ ಲಕ್ಷ್ಮೀದೇವಿಯ ರಮಣನಾದ ಶ್ರೀಹರಿಯ ಅಂತಃಪುರವೆಂದು ನಾವು ತಿಳಿಯುತ್ತೇವೆ. ಈ ಊಹೆಗೆ ಕಾರಣವನ್ನು ಈ ರೀತಿಯಾಗಿ ಹೇಳುತ್ತಾರೆ. ಅಂತಃಪುರಕ್ಕೆ ಬಲವಾದ ಬಾಗಿಲು ಇರುತ್ತದೆ. ಅದಕ್ಕೆ ಹೊರಗಡೆ ಸಂಪರ್ಕ ಸಿಕ್ಕಿಸಿ ಬೀಗವನ್ನು ಹಾಕಿರುತ್ತಾರೆ. ಶ್ರೀವೇಂಕಟನಾಥರ ಎದೆಯೇ ಬಾಗಿಲು. ಎತ್ತರವಾದ ಎರಡು ಸ್ತನಗಳೇ ಬೀಗಗಳು. ಎದೆಯಲ್ಲಿರುವ ಕಪ್ಪಾದ ರೋಮದ ಸಾಲುಗಳು ಸಂಕೋಲೆಯು. ಈ ರೀತಿಯಾಗಿ ಎದೆಯೆಂಬ ಬಾಗಿಲಿಗೆ ಕಪ್ಪಾದ ರೋಮಗಳ ಸಾಲೆಂಬ ಸರಪಳಿ ಸಂಕೋಲೆಯನ್ನು ಸಿಕ್ಕಿಸಿ, ಎರಡು ಸ್ತನಗಳೆಂಬ ಎರಡು ಬೀಗಗಳನ್ನು ಹಾಕಿರಬೇಕಾದರೆ ಇವರ ಎದೆಯ ಒಳಗಿರುವ ಅಂತಃಕರಣವು ಸಾಗರಕನ್ಯಾರಮಣನ ಅಂತಃಪುರವಾಗಿರಲೇಬೇಕು ಎಂದು ಉತ್ಪ್ರೇಕ್ಷಿಸಿದ್ದಾರೆ.

**ತಾತ್ಪರ್ಯ (ಬಾ.ಬೋ.) :** ಶ್ರೀವೇಂಕಟನಾಥರ ಎದೆಯೆಂಬ ಬಾಗಿಲನ್ನು ಎದೆಯಲ್ಲಿರುವ ರೋಮಗಳ ಸಾಲೆಂಬ ಸಂಕೋಲೆಯು ಎರಡು ಸ್ತನಗಳೆಂಬ ಕಬ್ಬಿಣದ ಅಗಳಿಗಳಿಂದ ಬಂಧಿಸಿದೆ. ಅಂತಃಪುರದ ಬಾಗಿಲನ್ನು ಚೆನ್ನಾಗಿ ಭದ್ರಪಡಿಸಬೇಕಾದುದರಿಂದ ಅಗಳಿಯ ಕೀಲು ಮತ್ತು ಸಂಕೋಲೆ ಎರಡರಿಂದಲೂ ಬಂಧಿಸಿದ್ದಾರೆ ಎಂದು ಊಹಿಸಬೇಕಾಗಿದೆ. ಇದರಿಂದ ಇವರ ಸತ್ವಗುಣಪೂರ್ಣವಾದ ಮನಸ್ಸು ಸಮುದ್ರರಾಜ ಕುವರಿಯಾದ ಲಕ್ಷ್ಮಿಯ ರಮಣನಾದ ನಾರಾಯಣನ ಅಂತಃಪುರವೆಂದು ನಾವು ಊಹಿಸಬೇಕಾಗಿದೆ. ಈ ರೀತಿಯಾಗಿ ಇವರ ಹೃದಯವು ಲಕ್ಷ್ಮೀನಾರಾಯಣನ ವಿಲಾಸಗೃಹವೆಂದು ವರ್ಣಿಸಿದ್ದರಿಂದ ಇವರ ಮನಸ್ಸು ಯಾವಾಗಲೂ ಪರಮಾತ್ಮನ ವಿಷಯದಲ್ಲಿಯೇ ಪ್ರವರ್ತಿಸುತ್ತದೆ ಎಂಬುದಾಗಿ ಭಾವ ಎಂದು ತಾತ್ಪರ್ಯ.

**ವಿಶೇಷಾಂಶ (ಗು.ಸೇ.) :** ವ್ಯಾಖ್ಯಾನಕಾರರು 'ಯತ್' ಎಂಬ ಪದವನ್ನು ಬೇರ್ಪಡಿಸಿ, ಯತ್ = ಯಾವ ವಕ್ಷಸ್ಥಲವೆಂಬ ಬಾಗಿಲಿನಿಂದ ಎಂಬುದಾಗಿ ವ್ಯಾಖ್ಯಾನಿಸಿದ್ದಾರೆ. ಆದರೆ ಬಾಲಬೋಧಿನಿಕಾರರು ಯದ್ರೋಮಲತಾಭಶೃಂಖಲಾ (ಶೃಂಖಲಂ) ಎಂಬುದಾಗಿ ಒಂದೇ ಪದವನ್ನಿಟ್ಟುಕೊಂಡು, ಯತ್ = ಯಾವ ವೇಂಕಟನಾಥರ ಎಂದು ಅರ್ಥವನ್ನು ಮಾಡಿರುತ್ತಾರೆ. ಆಗ "ಯತ್" ಪದದಿಂದ ತೆಗೆದುಕೊಂಡಿರುವ ವೇಂಕಟನಾಥರನ್ನು "ತಸ್ಯ" ಎಂಬುದಾಗಿ ತತ್ ಪದದಿಂದ ತೆಗೆದುಕೊಂಡಿರುವ ವೇಂಕಟನಾಥರನ್ನು "ತಸ್ಯ" ಎಂಬುದಾಗಿ ತತ್ ಪದದಿಂದ ಪರಾಮರ್ಶಿಸಬೇಕಾಗಿತ್ತು! ಅಮುಷ್ಯ ಎಂದು ಅದಸ್ ಶಬ್ದದಿಂದ ಪರಾಮರ್ಶಿಸುವುದು ಕೂಡುವುದಿಲ್ಲ ಎಂಬ ಸಂಶಯ ಬರುತ್ತದೆ. ಆದರೆ ಯತ್ ಪದದಿಂದ ಪ್ರಾರಂಭಿಸಿದ ಅರ್ಥವನ್ನು ತತ್ ಪದದಿಂದ ಪರಾಮರ್ಶಿಸಬೇಕೆಂಬ ನಿಯಮವಿಲ್ಲ.

**ಶ್ರೀಮಧ್ವಸಂಸೇವನಲಬ್ಧಶುದ್ಧವಿದ್ಯಾಸುಧಾಂಭೋನಿಧಯೋऽಮಲಾ ಯೇ ।**
**ಕೃಪಾಲವಃ ಪಂಕಜನಾಭತೀರ್ಥಾಃ ಕೃಪಾಲವಃ ಸ್ಯಾನ್ಮಯಿ ನಿತ್ಯಮೇಷಾಮ್ ॥**

(ತತ್ವಪ್ರಕಾಶಿಕಾ ಮಂಗಳ ಗುರುನಮಸ್ಕಾರ) ಈ ಪದ್ಯದಲ್ಲಿಯೇ ಎಂದು ಶ್ರೀಪದ್ಮನಾಭತೀರ್ಥರನ್ನು ನಿರ್ದೇಶಿಸಿ, ಪುನಃ ಏಷಾಂ ಎಂದು ಇದಂ ಶಬ್ದದಿಂದ ಪರಾಮರ್ಶಿಸಿದ್ದರಿಂದ ಯದ್ ಶಬ್ದಾರ್ಥವನ್ನು ತದ್ ಶಬ್ದದಿಂದ ಪರಾಮರ್ಶಿಸಬೇಕೆಂಬ ನಿಯಮವಿಲ್ಲ ಎಂದು ತಿಳಿಯಬೇಕು.

**"ಯಾಭ್ಯಾಂ ಶಶ್ರೂಷುರಾಸೀಃ ಕುರುಕುಲಜನನೇ ಕ್ಷತ್ರ ವಿಪ್ರೋದಿತಾಭ್ಯಾಂ**
**ಬ್ರಹ್ಮಾಭ್ಯಾಂ ಬೃಂಹಿತಾಭ್ಯಾಂ ಚಿತಿಸುಖವಪುಷಾ ಕೃಷ್ಣನಾಮಾಸ್ಪದಾಭ್ಯಾಮ್ ।**

**ನಿರ್ಭೇದಾಭ್ಯಾಂ ವಿಶೇಷಾದ್ ದ್ವಿವಚನ ವಿಷಯಾಭ್ಯಾಮುಭಾಭ್ಯಾಮಮೂಭ್ಯಾಂ**
**ತುಭ್ಯಂ ಚ ಕ್ಷೇಮದೇಭ್ಯಃ ಸರಸಿಜವಿಲಸಲ್ಲೋಚನೇಭ್ಯೋನಮೋಽಸ್ತು ॥"**

ಎಂಬ ಶ್ರೀಹರಿವಾಯುಸ್ತುತಿಯ ಪದ್ಯದಲ್ಲಿಯೂ "ಯಚ್ಛಬ್ದಾರ್ಥ"ವನ್ನು 'ಅದಸ್' ಶಬ್ದದಿಂದ ಪರಾಮರ್ಶಿಸಿರುವುದು ಕಂಡು ಬರುತ್ತದೆ. ಆದುದರಿಂದ ಇಲ್ಲಿಯೂ ಯದ್ರೋಮಲತಾಭಶೃಂಖಲಂ ಎಂದು ಯಚ್ಛಬ್ದಾರ್ಥರಾಗಿರುವ ಶ್ರೀವೇಂಕಟನಾಥರನ್ನು ಅಮುಷ್ಯ ಎಂದು ಅದಸ್ ಶಬ್ದದಿಂದ ಪರಾಮರ್ಶಿಸಿರುವುದು ದೋಷವಾಗುವುದಿಲ್ಲ.

**ಅವತರಣಿಕೆ :** ಈ ಕೆಳಗಿನ ಶ್ಲೋಕದಿಂದ ಕವಿಗಳು ಶ್ರೀವೇಂಕಟನಾಥರ ಎರಡು ಹುಬ್ಬುಗಳನ್ನು ವರ್ಣಿಸುತ್ತಾರೆ.

**ತದೀಯನಾಸಾನಿಟಿಲದ್ಯುತಿಚ್ಛಲದ್ಯುಸಿಂಧುಸಿಂಧುಪ್ರಭುಸಂಗಮಸ್ಥಲೇ ।**
**ಸ್ಫುರನ್ಮಹಾವರ್ತವಿಭೂಷಿತಾಂತರೇ ವಿಭಿನ್ನವೇಲೇ ಇವ ಚಿಲ್ಲವಲ್ಲಿಕೇ (ಗು.ಸೇ.ಚಿಲ್ಲಿವಲ್ಲಿಕೇ) ॥೨೯॥**

**ತಾತ್ಪರ್ಯ :** ಗಂಗಾನದಿಯು ಸಮುದ್ರವನ್ನು ಸೇರುವ ಸ್ಥಳದಲ್ಲಿ ದೊಡ್ಡ ದೊಡ್ಡ ಸುಳಿಗಳು (Whirlpool) ಉಂಟಾಗಿ ಸಂಗಮ ಸ್ಥಳವನ್ನು ಅಲಂಕರಿಸುತ್ತವೆ. ಗಂಗೆಯು ಉದ್ದವಾಗಿ ಹರಿದು ಸೇರುವಾಗ ಸಮುದ್ರದ ಎರಡು ದಡಗಳು ಇದು ಗಂಗೆ – ಇದು ಸಮುದ್ರ ಎಂಬ ಭೇದವನ್ನು ತಿಳಿಸುತ್ತವೆ. ಇದೇ ರೀತಿಯಾಗಿ ಶ್ರೀವೇಂಕಟನಾಥರ ಮೂಗಿನ ಕಾಂತಿಯೇ ಭಾಗೀರಥಿಯು, ಹಣೆಯ ಕಾಂತಿಯೇ ಸಮುದ್ರದಂತೆ ಕಾಣಿಸುತ್ತದೆ. ಎರಡು ಹುಬ್ಬುಗಳ ಮಧ್ಯ ಪ್ರದೇಶವೇ ಸಂಗಮ ಪ್ರದೇಶವು. ಅಲ್ಲಿರುವ ಮಹಾಪುರುಷರ ಲಕ್ಷಣ ರೂಪವಾದ ಗುಂಡಗಿರುವ ಸುಳಿಯ ರೇಖೆಯೇ ನದೀ ಸಮುದ್ರಗಳ ಸಂಗಮ ಪ್ರದೇಶದ ದೊಡ್ಡ ಸುಳಿಯು, ಅದರ ಎರಡು ಪಕ್ಕದಲ್ಲಿರುವ ಎರಡು ಹುಬ್ಬುಗಳು ನದೀ ಸಮುದ್ರಗಳ ಭೇದವನ್ನು ತೋರಿಸುವ ಸಮುದ್ರದ ಎರಡು ದಡಗಳಂತೆ ಕಾಣಿಸುತ್ತಿದೆ ಎಂದು ಅಭಿಪ್ರಾಯ.

**ಅವತರಣಿಕೆ :** ಮತ್ತೆ ಬೇರೊಂದು ರೀತಿಯಿಂದ ಕವಿಗಳು ಶ್ರೀವೇಂಕಟನಾಥರ ಹುಬ್ಬುಗಳನ್ನು ವರ್ಣಿಸುತ್ತಾರೆ.

**ತದಾನನೇ ಕಾಂತಿಪಯಃಪಯೋನಿಧೌ ನಿಮಜ್ಜನೋನ್ಮಜ್ಜನಕೇಲಿಕಾರಿಣಾ ।**
**ಸುಮೇಷುಣಾ ನೂನಮಿಮೌ ಸಮುದ್ಯತೌ ಭುಜೌ ಭ್ರುವೋ ರೂಪಭೃತೌ ವ್ಯರಾಜತಾಮ್ ॥೩೦॥**

**ತಾತ್ಪರ್ಯ :** ಶ್ರೀವೇಂಕಟನಾಥಾಚಾರ್ಯರ ಮುಖದಲ್ಲಿರುವ ಕಾಂತಿಯು ಕ್ಷೀರಸಮುದ್ರದಷ್ಟು ವಿಸ್ತಾರವಾದುದು. ಅದರಲ್ಲಿ ಮನ್ಮಥನು ಮುಳುಗಿ ಏಳುತ್ತಾ ಇರುತ್ತಾನೆ. ಮುಳುಗಿರುವಾಗ ಆಟಕ್ಕಾಗಿ ಎರಡು ಕೈಗಳನ್ನು ಮೇಲಕ್ಕೆತ್ತಿ ಚಾಚಿದಾಗ ಅವನ ಎರಡು ಭುಜಗಳೇ ಆ ಶ್ರೀವೇಂಕಟನಾಥರ ಎರಡು ಹುಬ್ಬುಗಳು, ಎಂದು ನಿಶ್ಚಯ ಮಾಡಿರುತ್ತೇವೆ ಎಂಬುದಾಗಿ ಕವಿಗಳು ಉತ್ಪ್ರೇಕ್ಷಿಸಿರುತ್ತಾರೆ. ಶ್ರೀವೇಂಕಟನಾಥರ ಮುಖವು ಮನ್ಮಥನ ವಿಹಾರದ ನೀರು ಮನೆಯಂತಿದೆ. ಮನ್ಮಥನು ಜಲಕ್ರೀಡೆ ಮಾಡುವ ಸಮುದ್ರದಂತಿದೆ ಎಂಬುದಾಗಿ ಹೇಳರುವುದರಿಂದ ಮುಖವು ಅತ್ಯಂತ ಸೌಂದರ್ಯದಿಂದ ಕೂಡಿದೆ ಎಂದು ತಾತ್ಪರ್ಯ. (ಮುಖಕಾಂತಿಯೆಂಬ ಕ್ಷೀರಸಮುದ್ರದಲ್ಲಿ ಆಡುತ್ತಿರುವ ಮನ್ಮಥನ ಎರಡು ಭುಜಗಳಂತೆ ಹುಬ್ಬುಗಳು ವಿರಾಜಿಸುತ್ತಿವೆ ಎಂಬುದು ಪರಮ ತಾತ್ಪರ್ಯ.)

**ಅವತಾರಿಕೆ :** ಈಗ ಕವಿಗಳು ಶ್ರೀವೇಂಕಟನಾಥಾಚಾರ್ಯರ ವಕ್ಷಸ್ಥಲದ ವಿಶಾಲತೆಯನ್ನು ವರ್ಣಿಸುತ್ತಾರೆ.

**ಅನಂತಕಲ್ಯಾಣಗುಣೈಕಮಂದಿರಂ ಹರಿಂ ಜಗದ್ವ್ಯಾಪ್ತತನುಂ ಹೃದಂತರೇ ।**
**ನಿಧಾತುಕಾಮಸ್ಯ ಭುಜಾಂತರಂ ಕ್ರಮಾದಮುಷ್ಯ ವಿಸ್ತಾರಮಪಾರಮಭ್ಯಗಾತ್ ॥೩೧॥**

**ತಾತ್ಪರ್ಯ :** ಪರಮಾತ್ಮನು ಅಸಂಖ್ಯವಾದ ಕಲ್ಯಾಣ ಗುಣಗಳಿಗೆ ಮುಖ್ಯಾಶ್ರಯನು, ಹದಿನಾಲ್ಕು ಲೋಕಗಳಲ್ಲಿಯೂ ವ್ಯಾಪ್ತವಾದ ಸ್ವರೂಪವುಳ್ಳವನು ಇಂತಹ ಶ್ರೀಹರಿಯನ್ನು ತಮ್ಮ ಹೃದಯದಲ್ಲಿ ಸಾಕ್ಷಾತ್ಕರಿಸಿಕೊಳ್ಳಬೇಕೆಂಬ ಆಸೆಯು ಶ್ರೀವೇಂಕಟನಾಥಾಚಾರ್ಯರಲ್ಲಿ ಬಹಳವಾಗಿ ಇದ್ದಿತು. ಇಂತಹ ವಿಶ್ವಂಭರನನ್ನು ಸ್ಥಾಪಿಸಿಕೊಳ್ಳಲು ಅನುಕೂಲಕರವಾದ ರೀತಿಯಲ್ಲಿ ಇವರ ಎದೆಯು ಕ್ರಮವಾಗಿ ಅಪಾರ ವಿಸ್ತಾರವನ್ನು ಹೊಂದಿತು. (ಅವರ ವಕ್ಷಸ್ಥಲವು ಅತ್ಯಂತ ವಿಶಾಲವಾಗಿತ್ತು ಎಂದು ಭಾವ.)

**ಅವತಾರಿಕೆ :** ಈಗ ಕವಿಗಳು ಶ್ರೀವೇಂಕಟಾರ್ಯರ ಎದೆಯ ಓನ್ನತ್ಯ ಮತ್ತು ಸೌಂದರ್ಯವನ್ನು ವರ್ಣಿಸುತ್ತಾರೆ.

**ಮನೋ ರಮೇಶಾಸ್ಪದಮಸ್ಯ ಮಂಜುಲಂ ವಿಧಾತುಮಂಭೋರುಹಸಾಯಕೇಽಂಚತಿ ।**
**ಉರೋ ವ್ಯಲಾಸೀತ್ ಫಲಕೋದರೋನ್ನತೇ ಫಲೈಸ್ತದೀಯೈರ್ಬಹಿರರ್ಪಿತೇ ಇವ ॥೩೨॥**
**(ಗು.ಸೇ. ಪಾಠ – ಉರೋವ್ಯಲಾಸೀತ್ಫಲಕೇ ದರೋನ್ನತೇ ಭಟೈಸ್ತದೀಯೈರ್ಬಹಿರರ್ಪಿತೇ ಇವ)**

**ತಾತ್ಪರ್ಯ (ಬಾಲಬೋಧಿನೀ) :** ಈ ವೇಂಕಟನಾಥಾಚಾರ್ಯರ ಮನೋಹರವಾದ ಮನಸ್ಸು ಲಕ್ಷ್ಮೀಪತಿಯಾದ ನಾರಾಯಣನಿಗೆ ಆಸ್ಪದವಾಗಿತ್ತು. ಅಲ್ಲಿ ವಿಹರಿಸಬೇಕೆಂದು ಮನ್ಮಥನು ಆಲೋಚಿಸಿ, ಅಲ್ಲಿಗೆ ಬಂದನು. ಆಗ ಆ ಮನ್ಮಥನು ಹಿಂದಿನ ಜನ್ಮದಲ್ಲಿ ಮಾಡಿದ ಹರಿ ಪೂಜಾದಿಗಳಿಂದ ಉಂಟಾದ ಪುಣ್ಯ ಫಲಗಳಿಂದಲೋ ಎಂಬಂತೆ ಹಲಗೆಯಂತೆ ವಿಶಾಲವಾಗಿಯೂ, ಹೊಟ್ಟೆಗಿಂತ ಎತ್ತರವಾಗಿಯೂ ಇರುವ ದೃಢವಾದ ಎದೆಯಲ್ಲಿ ಮನ್ಮಥನಿಗೆ ವಾಸಸ್ಥಾನವು ಲಭ್ಯವಾಯಿತು. ಹೀಗೆ ಮನ್ಮಥನಿಗೆ ಆಶ್ರಯವಾದುದರಿಂದ ಅತಿಸುಂದರವಾಗಿ ಎದೆಯು ಪ್ರಕಾಶಿಸಿತು. ಇವರ ಎದೆಯು ಎತ್ತರವಾಗಿಯೂ, ಸುಂದರವಾಗಿಯೂ ಇತ್ತು ಎಂದು ತಾತ್ಪರ್ಯ.

**ತಾತ್ಪರ್ಯ (ಗುರುಸೇವಾ) :** ಶ್ರೀ ವೇಂಕಟನಾಥಾಚಾರ್ಯರ ಹೃದಯವು (ಮನಸ್ಸು) ಲಕ್ಷ್ಮೀನಾರಾಯಣನ ಸನ್ನಿಧಾನ ಪಾತ್ರವಾಗಿತ್ತು. ಅಂತಹಾ ಮನಸ್ಸಿನಲ್ಲಿಯೂ ಯೌವನ ಸಹಜವಾಗಿ ವಿಹರಿಸಬೇಕೆಂದು ಮನ್ಮಥನು ಪ್ರವೇಶಿಸಲು ಬಯಸಿದನು. ಆದರೆ ಶ್ರೀವೇಂಕಟಾಚಾರ್ಯರ ಮನಸ್ಸಿನಲ್ಲಿ ತನ್ನ ತಂದೆತಾಯಿಗಳಾದ ಲಕ್ಷ್ಮೀನಾರಾಯಣರು ಇರುವುದರಿಂದ ಮಗನಾದ ತಾನು ಅವರು ಇರುವಾಗ ಹತ್ತಿರದಲ್ಲಿಯೇ ವಿಹರಿಸುವುದು ಸರಿಯಲ್ಲವೆಂದು ಹೊರಗೆ ನಿಂತನು. ಆಗ ಅವನಿಗೆ ಕುಳಿತುಕೊಳ್ಳುವ ಸಲುವಾಗಿ ಮನ್ಮಥನ ಸೇವಕರು ಅರ್ಪಿಸಿದ ಸ್ವಲ್ಪ ಎತ್ತರವಾದ ಎರಡು ಮಣಿಗಳಂತೆ ಶ್ರೀವೇಂಕಟಾರ್ಯರ ಎದೆಯು ಶೋಭಿಸಿತು. ಮನ್ಮಥನ ಆಸನವಾದ ಹಲಗೆ ಮಣೆಯ ಹೋಲಿಕೆಯನ್ನು ಕೊಟ್ಟಿರುವುದರಿಂದ ಇವರ ಎದೆಯು ಬಹಳ ವಿಸ್ತಾರವಾಗಿಯೂ, ಕಾಂತಿಪೂರ್ಣವಾಗಿಯೂ, ಸುಂದರವಾಗಿಯೂ, ಮನೋಹರವಾಗಿಯೂ ಇತ್ತು ಎಂದು ಭಾವಿಸಬೇಕಾಗಿದೆ ಎಂಬುದಾಗಿ ತಾತ್ಪರ್ಯ.

**ಅವತಾರಿಕೆ :** ಈಗ ಕವಿಗಳು ಶ್ರೀವೇಂಕಟನಾಥರ ಕಂಠವನ್ನು ಎರಡು ರೀತಿಯಿಂದ ವರ್ಣಿಸುತ್ತಾರೆ.

**ಮೃಣಾಲವಲ್ಲೀಂ ಕಥಯಂತಿ ಕಂಧರಾಂ ಮುಖಾರವಿಂದಸ್ಯ ವಿಕಸ್ವರಶ್ರಿಯಃ ।**
**ಪರೇ ತು ನಾಲಂ ಮೃದುಲಂ ಗಲಂ ಜಗುರ್ಮುಖಾಭಿಧಾಭಾನ್ಮುಕುರಸ್ಯಬಂಧುರಮ್ ॥೩೩॥**
**(ಗು.ಸೇ. ಪಾಠ – ಮುಖಾಭಿಧಾಭೃನ್ಮುಕುರಸ್ಯ)**

**ತಾತ್ಪರ್ಯ :** ಸೌಂದರ್ಯ ಲಾವಣ್ಯಗಳನ್ನು ಸೂಕ್ಷ್ಮವಾಗಿ ತಿಳಿದಿರುವ ಕೆಲವು ಕವಿವರೇಣ್ಯರು ಈ ವೇಂಕಟಾರ್ಯರ ಮುಖವು ಅರಳಿದ ಹೂವಿನ ಕಾಂತಿಯನ್ನು ಧರಿಸಿರುವುದರಿಂದ, ಅವರ ಕಂಠವನ್ನು ಮುಖವೆಂಬ ಕಮಲದ, ಉದ್ದವಾದ ದಂಡವು (ದಂಟಿನ ಬಳ್ಳಿ) (ದೇಟು) ಎಂದು ಹೇಳುತ್ತಿದ್ದರು. ಮತ್ತೆ ಕೆಲಮಂದಿ ಲಾವಣ್ಯವರ್ಣನಪಂಡಿತರು ಇವರ ಮುಖವು ಪ್ರಕಾಶಮಾನವಾದ ಕನ್ನಡಿಯಂತೆ ಇದ್ದುದರಿಂದ, ಇವರ ಕಂಠವು ಮುಖವೆಂಬ ಹೆಸರನ್ನು ಧರಿಸಿರುವ ಕನ್ನಡಿಯನ್ನು ಹಿಡಿಯಲು ಇರುವ ಹಿಡಿಕೆಯು ಎಂದು ಹಾಡಿ ಹೊಗಳುತ್ತಿದ್ದರು. (ಇವರ ಕಂಠವನ್ನು ಕೆಲವರು ಮುಖಕಮಲದ ನಾಳವೆಂದೂ, ಮತ್ತೂ ಕೆಲವರು ಮುಖವೆಂಬ ಕನ್ನಡಿಯ ಹಿಡಿಯೆಂದೂ ವರ್ಣಿಸುತ್ತಿದ್ದರು ಎಂಬುದಾಗಿ ತಾತ್ಪರ್ಯ.)

**ಅವತರಣಿಕೆ :** ಕವಿಗಳು ಈ ಪದ್ಯದಿಂದ ಶ್ರೀವೇಂಕಟಾರ್ಯರ ಕಂಠದಲ್ಲಿರುವ ಮೂರು ರೇಖೆಗಳನ್ನು ವರ್ಣಿಸುತ್ತಾರೆ.

**ಉಪೇಯುಷೋ ಜಾಗರದಾಯಿನೋ ಹರೇಃ ಹೃದಂಬುಜಾದಕ್ಷಿ ತತೋ ಹೃದಂಬುಜಮ್ ।**
**ಅಮುಷ್ಯಕಂಠಸ್ಥಿತತೈಜಸಾತ್ಮನೋ ಗೃಹಾಣಿ ರೇಖಾತ್ರಿತಯಂ ಗಲಾಂತರೇ ॥೩೪॥**

**ತಾತ್ಪರ್ಯ :** ವಿಶ್ವನಾಮಕನಾದ ಪರಮಾತ್ಮನು ಬಲಭಾಗದ ಕಣ್ಣಿನಲ್ಲಿದ್ದು ಜಾಗ್ರದವಸ್ಥೆಗೆ ಪ್ರವರ್ತಕನಾಗುತ್ತಾನೆ. ತೈಜಸನಾಮಕ ಪರಮಾತ್ಮನು ಕಂಠ ಪ್ರದೇಶದಲ್ಲಿದ್ದು ಸ್ವಪ್ನಾವಸ್ಥಾ ಪ್ರವರ್ತಕನಾಗಿರುತ್ತಾನೆ. ಪ್ರಾಜ್ಞನಾಮಕ ಪರಮಾತ್ಮನು ಹೃದಯ ಪ್ರದೇಶದಲ್ಲಿದ್ದು ನಿದ್ರಾವಸ್ಥಾ ಪ್ರವರ್ತಕನಾಗಿರುತ್ತಾನೆ, ಎಂಬುದಾಗಿ ಶಾಸ್ತ್ರಗಳಲ್ಲಿ ಹೇಳುತ್ತಾರೆ. ಹೃದಯಕಮಲ ಪ್ರದೇಶದಿಂದ ಪ್ರಾಜ್ಞನಾಮಕ ಪರಮಾತ್ಮನು ಕಣ್ಣಿನ ಪ್ರದೇಶಕ್ಕೆ ಬಂದು ವಿಶ್ವ ಎಂಬ ಹೆಸರಿನಿಂದ ಜಾಗ್ರದವಸ್ಥೆಗೆ ಪ್ರೇರಕನಾಗುತ್ತಾನೆ. ಅನಂತರ ನೇತ್ರಸ್ಥಾನದಿಂದ ಹೃದಯ ಕಮಲ ಪ್ರದೇಶಕ್ಕೆ ಬಂದು ಪ್ರಾಜ್ಞನಾಮಕನಾಗಿ ಸುಷುಪ್ತಿಯ ಅವಸ್ಥೆಗೆ ಪ್ರೇರಕನಾಗುತ್ತಾನೆ. ಅಲ್ಲಿಂದ ಕಂಠ ಸ್ಥಾನಕ್ಕೆ ಬಂದು ತೈಜಸ ನಾಮಕನಾಗಿ ಸ್ವಪ್ನಾವಸ್ಥೆಗೆ ಪ್ರವರ್ತಕನಾಗುತ್ತಾನೆ. ಹೀಗೆ ಮೂರು ಸ್ಥಾನಗಳಲ್ಲಿ ಓಡಾಡುತ್ತ ಇರುವ ಒಬ್ಬನೇ ಆದ ಪರಮಾತ್ಮನು ಮೂರು ರೂಪಗಳನ್ನು ಸ್ವೀಕರಿಸಿ ಮೂರು ಅವಸ್ಥೆಗಳಿಗೆ ಪ್ರೇರಕನಾಗುತ್ತಾನೆ. ಇಂತಹ ಪರಮಾತ್ಮನ ಮೂರು ರೂಪಗಳಿಗೂ ಮೂರು ಮನೆಗಳಂತೆ ಈ ಶ್ರೀ ವೇಂಕಟಾರ್ಯರ ಕಂಠದಲ್ಲಿರುವ ಮೂರು ರೇಖೆಗಳು ಶೋಭಿಸುತ್ತಿದ್ದವು. (ವರರೇಖತ್ರಯಾವಾನ್ ಗುರೋರ್ಗಲಂ–ಸುಮಧ್ವವಿಜಯ ೭ನೇ ಸರ್ಗ–ಶ್ರೀವೇದವ್ಯಾಸರ ವರ್ಣನೆ) ಎಂಬಂತೆ ಮಹಾಪುರುಷರ ಕಂಠದಲ್ಲಿ ಅಡ್ಡಲಾಗಿ ಮೂರು ರೇಖೆಗಳಿರುತ್ತವೆ. ಶ್ರೀವೇಂಕಟಾರ್ಯರ ಕಂಠದಲ್ಲಿಯೂ ಹೀಗೆಯೇ ಮೂರು ರೇಖೆಗಳಿದ್ದವು. ವಿಶ್ವ ತೈಜಸ ಪ್ರಾಜ್ಞ ಎಂಬ ಮೂರು ರೂಪಗಳಿಂದ ಜಾಗ್ರತ್, ಸ್ವಪ್ನ, ಸುಷುಪ್ತಿ ಅವಸ್ಥೆಗಳನ್ನು ಉಂಟುಮಾಡುವ ಬಲದ ಕಣ್ಣು, ಕಂಠ, ಮತ್ತು ಹೃದಯ ಕಮಲಗಳಲ್ಲಿ ಆಯಾ ಅವಸ್ಥೆಗಳನ್ನು ಪ್ರೇರಿಸುವ ಕಾಲದಲ್ಲಿರುವ ವಿಶ್ವಾದಿ ಹೆಸರಿನ ಶ್ರೀಮನ್ನಾರಾಯಣನಿಗೆ ವಿಶ್ರಾಂತಿಗೋಸ್ಕರ ನಿರ್ಮಿತವಾದ ಮೂರು ಮನೆಗಳಂತೆ ಶ್ರೀ ವೇಂಕಟನಾಥಾಚಾರ್ಯರ ಕಂಠದಲ್ಲಿರುವ ಮೂರು ರೇಖೆಗಳು ಶೋಭಿಸುತ್ತಿದ್ದವು ಎಂದು ಉತ್ಪ್ರೇಕ್ಷಿಸಿದ್ದಾರೆ.

**ಅವತಾರಿಕೆ :** ಈಗ ಕವಿಗಳು ಶ್ರೀವೇಂಕಟನಾಥರ ಕಂಠವನ್ನು ಬೇರೊಂದು ರೀತಿಯಿಂದ ವರ್ಣಿಸುತ್ತಾರೆ.

**ಸದೈವ ದಾಹೋ ನಹನಂ (ಹನನಂ) ಕಪೀಶ್ವರೈರಗಸ್ತ್ಯಪಾನಂ ಮಥನಂ ಮಹೀಭೃತಾ ।**
**ಇತೀವ ಸಂತ್ಯಜ್ಯ ಸಮುದ್ರಮಾದರಾದಮುಷ್ಯ ಕಂಬುರ್ಗಲತಾಮವಾಪ್ತವಾನ್ ॥೩೫॥**

**ತಾತ್ಪರ್ಯ :** ಶಂಖವು ಸಮುದ್ರದಲ್ಲಿ ಹುಟ್ಟಿ, ಅಲ್ಲಿಯೆ ವಾಸಿಸುತ್ತಿತ್ತು. ಆದರೆ ಅಲ್ಲಿ ಅದಕ್ಕೆ ಅನೇಕ

ತೊಂದರೆಗಳು ಕಂಡು ಬರುತ್ತಿದ್ದವು. ಸಮುದ್ರದಲ್ಲಿರುವ ಬಡಬಾನಲವು ಯಾವಾಗಲೂ ಜ್ವಲಿಸುತ್ತಾ ಸುಡುತ್ತಿರುತ್ತದೆ. ರಾಮಾವತಾರದಲ್ಲಿ ಲಂಕೆಗೆ ಹೋಗುವುದಕ್ಕೋಸ್ಕರ ಕಪಿಗಳು ಸಮುದ್ರದಲ್ಲಿ ಸೇತುವೆ ಕಟ್ಟುವಾಗ ಕಲ್ಲು ಬಂಡೆಗಳನ್ನು, ಪರ್ವತ ಶಿಖರಗಳನ್ನು ಮರಗಳನ್ನು ತಂದು ಸಮುದ್ರದಲ್ಲಿ ಎತ್ತಿ ಹಾಕುತ್ತಿದ್ದವು. ಅವುಗಳ ಹೊಡೆತವು ಶಂಖದ ಮೇಲೆ ಆಗುವ ಸಂಭವವಿದೆ. ಕಪಿಶೇಷ್ಠರು ಸಮುದ್ರಕ್ಕೆ ಸೇತುವನ್ನು ಕಟ್ಟುವಾಗ ಶಂಖಕ್ಕೂ ತೊಂದರೆಯಾಗುವ ಸಂಭವವಿದೆ. ಅಷ್ಟೇ ಅಲ್ಲ ಅಗಸ್ತ್ಯ ಋಷಿಗಳು ದೇವತೆಗಳ ಕಾರ್ಯಕ್ಕೋಸ್ಕರ ಯಾವ ತಪ್ಪೂ ಇಲ್ಲದ ಸಮುದ್ರವನ್ನು ಕುಡಿದರು. ಇದರಿಂದ ಶಂಖಕ್ಕೆ ಆಶ್ರಯವಾದ ಸಮುದ್ರವು ತನ್ನ ಜಲನಿಧಿಯನ್ನು ಕಳೆದುಕೊಂಡು ದೀನವಾಗುವುದರಿಂದ ಶಂಖಕ್ಕೂ ದೈನ್ಯ ಉಂಟಾಗುತ್ತದೆ. ಮತ್ತೊಂದು ಬಾರಿ ದೇವತೆಗಳು, ದೈತ್ಯರೂ ಅಮೃತಕ್ಕಾಗಿ ಮಂದರ ಪರ್ವತದಿಂದ ಸಮುದ್ರವನ್ನು ಕಡೆದರು. ಆಗ ಸಮುದ್ರವು ಕ್ಷೋಭಗೊಂಡು ಅದರಲ್ಲಿರುವ ಶಂಖವೂ ತೊಂದರೆಗೊಳಗಾಯಿತು. ನಿತ್ಯದಲ್ಲಿರುವ ಬಡಬಾನಲದ ದಾಹ, ಆಗಾಗ್ಗೆ ಬರಬಹುದಾದ ಬಂಧನ, ಹೊಡೆತ, ನೀರಿನ ಶೋಷಣೆ, ಮಂದರಪರ್ವತದಿಂದ ಕಡೆಯುವುದು ಮುಂತಾದ ತೊಂದರೆಗಳನ್ನು ತಪ್ಪಿಸಿಕೊಳ್ಳಲು ಶಂಖವು ಯಾವ ತೊಂದರೆಯೂ ಇಲ್ಲದ ಶ್ರೀವೇಂಕಟನಾಥಾಚಾರ್ಯರ ಕಂಠದ ರೂಪವನ್ನು ಹೊಂದಿತು. ಶ್ರೀ ವೇಂಕಟನಾಥಾಚಾರ್ಯರ ಕಂಠವು ಶಂಖದಂತಿರುವುದರಿಂದ ಸಮುದ್ರದಲ್ಲಿರುವ ಶಂಖವೇ ಅಲ್ಲಿರುವ ತೊಂದರೆ-ಗಳಿಂದ ಬೇಸತ್ತು ಬಹಳ ಪ್ರೀತಿಯಿಂದಲೂ, ಸಂತೋಷದಿಂದಲೂ, ಶ್ರೀವೇಂಕಟನಾಥರ ಕಂಠ ಸ್ವರೂಪವನ್ನು ಹೊಂದಿತೋ ಎಂಬಂತಿದೆ ಎಂದು ಕವಿಗಳು ಉತ್ಪ್ರೇಕ್ಷಿಸಿದ್ದಾರೆ. (ಶ್ರೀವೇಂಕಟನಾಥಾಚಾರ್ಯರ ಕಂಠವು ಶಂಖದಂತಿದೆ ಎಂದು ತಾತ್ಪರ್ಯ.)

**ಅವತಾರಿಕೆ :** ಈಗ ಕವಿಗಳು ಮುಂದಿನ ಪದ್ಯದಿಂದ ಶ್ರೀವೇಂಕಟನಾಥರ ಎರಡು ಕೈಗಳನ್ನು ವರ್ಣಿಸುತ್ತಾರೆ.

**ಕರೌ ಕೃತೌ ಚೇನ್ನವಚೂತಪಲ್ಲವೈಃ ಕಥಂ ಸಹೇತೇ ಸತತಾಂಬುಸಂಗತಿಮ್ ।**
**ಸದೋದ್ಯತಾಸ್ಯಾಸ್ಯ ಸುಕರ್ಮದಾನಯೋರಿತೀವ ವೇಧಾಃ ಕಮಲೇ ಕರೌ ವ್ಯಧಾತ್ ॥೩೬॥**

**ತಾತ್ಪರ್ಯ :** ಸುಂದರವಾದ ಕೈಗಳನ್ನು ಕೋಮಲವಾದ ಮಾವಿನ ಚಿಗುರೆಲೆಯಂತೆ ಇದೆಯೆಂದು, ಮಾವಿನ ಚಿಗುರೆಲೆಯಿಂದಲೆ ರಚಿತವಾಗಿದೆಯೆಂದು ಕವಿಗಳು ವರ್ಣಿಸುತ್ತಾರೆ. ಆದರೆ ಶ್ರೀವೇಂಕಟನಾಥರ ಎರಡೂ ಕೈಗಳು ಹೊಸದಾದ ಮಾವಿನ ಚಿಗುರೆಲೆಯಿಂದ ಮಾಡಲ್ಪಟ್ಟಿಲ್ಲ. ಮಾವಿನ ಚಿಗುರೆಲೆಯ ರೂಪವುಳದ್ದೂ ಅಲ್ಲ. ಇವರ ಎರಡೂ ಕೈಗಳು ಯಾವಾಗಲೂ ಮಂತ್ರ ಜಪವನ್ನು ಮಾಡಿ ನೀರಿನಿಂದ ಅರ್ಘ್ಯ ಕೊಡುವುದರಲ್ಲಿಯೂ ಹಿರಣ್ಯವನ್ನು ಕೈಗಳಲ್ಲಿ ಇಟ್ಟುಕೊಂಡು ನೀರನ್ನು ಸುರಿದು ದಾನ ಮಾಡುವುದರಲ್ಲಿ ಆಸಕ್ತವಾಗಿರುತ್ತವೆ. ಈ ರೀತಿಯಾಗಿ ಇಲ್ಲಿ ಯಾವಾಗಲೂ ಜಲ ಸಂಬಂಧವಿದೆ. ಎಳೆಯ ಮಾವಿನ ಚಿಗುರು ಯಾವಾಗಲೂ ನೀರು ಸೋಕುತ್ತಿದ್ದರೆ ಕೆಟ್ಟು ಹೋಗುತ್ತದೆ. ಕಮಲಗಳಾದರೋ ನೀರಿನಲ್ಲಿಯೆ ಹುಟ್ಟಿ ಅಲ್ಲಿಯೇ ಬೆಳೆಯುತ್ತವೆ. ಅವುಗಳಿಗೆ ನೀರೇ ಆಶ್ರಯವಾಗಿರುತ್ತದೆ. ಹೀಗೆಂದು ತಿಳಿದು ಬ್ರಹ್ಮದೇವರು ಎರಡು ಕಮಲಗಳನ್ನೆ ಶ್ರೀವೇಂಕಟನಾಥರ ಎರಡು ಕೈಗಳನ್ನಾಗಿ ಮಾಡಿದರು. ಇವರ ಕೈಗಳು ಕಮಲದಂತೆ ಕೆಂಪಾಗಿಯೂ ಕೋಮಲವಾಗಿಯೂ ಇದ್ದವು ಎಂದು ಅಭಿಪ್ರಾಯ. (ಇಲ್ಲಿ ಉತ್ಪ್ರೇಕ್ಷೆಯೆಂಬ ಅಲಂಕಾರವಿದೆ.)

**ಅವತಾರಿಕೆ :** ಈಗ ಕವಿಗಳು ಶ್ರೀವೇಂಕಟನಾಥರ ಕೃಶವಾದ ಹೊಟ್ಟೆಯ ಮೂರು ರೇಖೆಗಳನ್ನು ವರ್ಣಿಸುತ್ತಾರೆ.

**ಅಮುಷ್ಯ ಲೋಕತ್ರಯರಕ್ಷಣಕ್ರಿಯಾನಿಬೋಧನಾಯೇಹ ನೃಣಾಂ ತನೂದರೇ ।**
**ಮಹಾಮಹಿಮ್ನೋಽಸ್ಯ ವಲಿತ್ರಯಚ್ಛಲಾತ್ ಕೃತಾ ವಿಧಾತ್ರಾ ಕಿಮು ಚಿಹ್ನರೇಖಿಕಾ ॥೩೭॥**

**ತಾತ್ಪರ್ಯ :** ಶ್ರೀವೇಂಕಟನಾಥರು ಮಹಾ ಮಹಿಮಶಾಲಿಗಳು. ಇವರು ಮೂರು ಲೋಕದಲ್ಲಿರುವ ಸಜ್ಜನರನ್ನು ಕಾಪಾಡುವರು ಎಂದು ತಿಳಿಸುವುದಕ್ಕೋಸ್ಕರ, ಬ್ರಹ್ಮದೇವರು ಮೂರು ಲೋಕಗಳ ಗುರುತಿಗಾಗಿ ಮೂರು ರೇಖೆಗಳನ್ನು ಇವರ ಕೃಶವಾದ ಉದರದಲ್ಲಿರುವ ಮೂರು ತ್ರಿವಳಿರೇಖೆಗಳ ನೆಪದಿಂದ ಮಾಡಿದ್ದಾರೋ ಎಂಬಂತಿದೆ ಎಂದು ಉತ್ಪ್ರೇಕ್ಷಿಸಿದ್ದಾರೆ. ಕೃಶವಾದ ಹೊಟ್ಟೆಯಲ್ಲಿರುವ ಮೂರು ರೇಖೆಗಳು ಮೂರು ಲೋಕಗಳ ರಕ್ಷಣೆಯನ್ನು ಇವರು ಮಾಡುವರು ಎಂಬ ವಿಷಯವನ್ನು ನೆನಪಿಗೆ ತರುತ್ತದೆ ಎಂದು ಅಭಿಪ್ರಾಯ. (ಇಲ್ಲಿ ಅಪಹ್ನವಾಲಂಕಾರ ಗರ್ಭಿತವಾದ ಉತ್ಪ್ರೇಕ್ಷಾಲಂಕಾರವಿದೆ.) ಇಲ್ಲಿ ಬಾಲಬೋಧಿನೀ ವ್ಯಾಖ್ಯಾನಕಾರರು ಹೇಳಿದ ತಾತ್ಪರ್ಯವು, –

ಮಹಾಪುರುಷಲಕ್ಷಣಭೂತ ಕುಕ್ಷಿಸ್ಥವಲಿತ್ರಯಂ,
'ವೇಂಕಟಾರ್ಯೇಣ ಲೋಕತ್ರಯರಕ್ಷಣಂ ಕ್ರಿಯತೇ ಇತಿ'
ವಿಧಾತಕೃತಸಂಜ್ಞಾರೇಖಾತ್ರಯಂ, ಏಕೈಕಸ್ಯ ಲೋಕಸ್ಯ ಏಕೈಕಾ ರೇಖಾ
ಏವಂ ಕ್ರಮೇಣ ಲೋಕತ್ರಯರಕ್ಷಣಜ್ಞಾಪಕರೇಖಾತ್ರಯಂ ಕೃತಂ ಇತಿ ಭಾವಃ

ಮಹಾಪುರುಷರ ಲಕ್ಷಣವಾಗಿರುವ ಹೊಟ್ಟೆಯಲ್ಲಿರುವ ಮೂರು ರೇಖೆಗಳು ಶ್ರೀವೇಂಕಟನಾಥರಿಂದ ಮೂರು ಲೋಕಗಳು ರಕ್ಷಿಸಲ್ಪಡುತ್ತವೆ ಎಂಬುದಾಗಿ ಬ್ರಹ್ಮದೇವರಿಂದ ಮಾಡಲ್ಪಟ್ಟ ಜ್ಞಾಪಕವಾಗಿರುವ ಮೂರು ರೇಖೆಗಳು. ಒಂದೊಂದು ಲೋಕಕ್ಕೆ ಒಂದೊಂದು ರೇಖೆ ಎಂಬ ಕ್ರಮದಿಂದ ಮೂರು ಲೋಕಗಳ ರಕ್ಷಣೆಗೆ ಜ್ಞಾಪಕವಾದ ಮೂರು ರೇಖೆಗಳು ಮಾಡಲ್ಪಟ್ಟಿವೆ ಎಂದು ತಾತ್ಪರ್ಯ.

**ಅವತರಣಿಕೆ :** ಕವಿಗಳು ಮುಂದಿನ ಪದ್ಯದಿಂದ ಶ್ರೀವೇಂಕಟನಾಥರ ಎರಡು ಪಾದಗಳನ್ನು ವರ್ಣಿಸುತ್ತಾರೆ.

**(ಬಾ.ಬೋ.) –**

**ಪಾದೌ ಕೃತೌ ಚೇತ್ ಕಠಿನೌ ಮಯಾ ಪದಾ ವ್ರಜೇದಯಂ ತನ್ನ ಸಹೇ ನವಾಕೃತೇಃ ।**
**ಚಿರೇಣ ಯಾನೇನ ಚರೇದ್ವಸುಂಧರಾಂ ಇತೀವ ವೇಧಾ ಮೃದುಲೌ ವ್ಯಧಾದಿಮೌ ॥೩೮॥**

**(ಗು.ಸೇ.) –**

**ಪದೇ ಕೃತೇ ಚೇತ್ ಕಠಿನೇ ಮಯಾ ಪದಾ ವ್ರಜೇದಯಂ ತನ್ನ ಸಹೇ ನವಾಕೃತೇಃ ।**
**ಚಿರೇಣ ಯಾನೇನ ವ್ರಜೇದ್ವಸುಂಧರಾಂ ಇತೀವ ವೇಧಾ ಮೃದುಲೇ ವ್ಯಧಾದಿಮೇ ॥೩೮॥**

**ತಾತ್ಪರ್ಯ (ಗು.ಸೇ.–ಬಾ.ಬೋ.) :** ಶ್ರೀವೇಂಕಟನಾಥಾಚಾರ್ಯರು ಅಪೂರ್ವವಾದ ಕೋಮಲ ಶರೀರ ಉಳ್ಳವರು. ಇವರ ಪಾದದ ತಳಭಾಗಗಳನ್ನು (ಅಂಗಾಲುಗಳನ್ನು) ನಾನು ಒರಟಾಗಿ, ಗಟ್ಟಿಯಾಗಿ, ದೃಢವಾಗಿ ಸೃಷ್ಟಿಸಿದರೆ ಇವರು ಕಾಲುಗಳಿಂದಲೇ ಭೂಮಿಯನ್ನು ಸಂಚರಿಸಿಯಾರು, ಹಾಗಾಗಬಾರದು, ಕೋಮಲ ದೇಹವುಳ್ಳ ಇವರು ಪಲ್ಲಕ್ಕಿ, ಮೇನೆ ಮುಂತಾದ ವಾಹನಗಳ ಮೂಲಕವೇ ಭೂಸಂಚಾರವನ್ನು (ಸನ್ಯಾಸಿಗಳಾದ ಮೇಲೆ) ಮಾಡಬೇಕು ಎಂಬುದಾಗಿ ಆಲೋಚಿಸಿದ ಬ್ರಹ್ಮದೇವರು ಶ್ರೀವೇಂಕಟನಾಥರ

ಪಾದದ ಅಡಿಭಾಗಗಳೆರಡನ್ನೂ ಮೃದುವಾಗಿರುವಂತೆ ಸೃಷ್ಟಿ ಮಾಡಿದರು. ಇವರ ಪಾದತಲಗಳೂ ಅತ್ಯಂತ ಕೋಮಲವಾಗಿದ್ದಿತು ಎಂದು ತಾತ್ಪರ್ಯ.

**ವಿಶೇಷಾಂಶ :**

**ಚಕ್ಷುಃ ಸ್ನೇಹೇನ ಸೌಭಾಗ್ಯಂ ದಂತಸ್ನೇಹೇನ ಭೋಜನಮ್ ।**
**ತ್ವಚಃ ಸ್ನೇಹೇನ ಭೋಗಃ ಸ್ಯಾತ್ ಪಾದ ಸ್ನೇಹೇನ ವಾಹನಮ್ ॥**

ಎಂಬುದಾಗಿ ಸಾಮುದ್ರಿಕಾ ಶಾಸ್ತ್ರದಲ್ಲಿ, ಕಣ್ಣುಗಳು ಸ್ನೇಹಪೂರಿತವಾಗಿ ಮೃದುವಾಗಿದ್ದರೆ ಸೌಭಾಗ್ಯ ಪ್ರಾಪ್ತಿಯಾಗುತ್ತದೆ. ಹಲ್ಲುಗಳು ಸ್ನೇಹಪೂರಿತವಾಗಿದ್ದರೆ (ಹೊಳಪಿನಿಂದ ಕೂಡಿದ್ದರೆ) ಒಳ್ಳೆಯ ಭೋಜನ ಪ್ರಾಪ್ತಿಯಾಗುತ್ತದೆ. ತ್ವಚೆಯು (ಚರ್ಮವು) ಹೊಳಪಿನಿಂದ ಕೂಡಿದ್ದರೆ ಭೋಗ ಪ್ರಾಪ್ತಿಯಾಗುತ್ತದೆ. ಪಾದಗಳ ತಳಭಾಗವು ಮೃದುವಾಗಿದ್ದರೆ ವಾಹನ ಪ್ರಾಪ್ತಿಯಾಗುತ್ತದೆ ಎಂದು ಹೇಳಿದ್ದಾರೆ. ಅದರಂತೆ ಶ್ರೀವೇಂಕಟನಾಥರ ಪಾದಗಳ ತಳಭಾಗಗಳೆರಡೂ ಮೃದುವಾಗಿದ್ದುದರಿಂದ ಇವರು ವಾಹನದಲ್ಲಿಯೇ ಸಂಚರಿಸಲಿ ಎಂದು ಆಲೋಚಿಸಿದ ಬ್ರಹ್ಮದೇವರು ಪಾದಗಳ ತಳಭಾಗವನ್ನು ಮೃದುವಾಗಿರುವಂತೆ ಸೃಜಿಸಿದ್ದಾರೆ ಎಂದು ಕವಿಗಳು ಉತ್ಪ್ರೇಕ್ಷಿಸಿದ್ದಾರೆ. (ತಾತ್ಪರ್ಯದಲ್ಲಿ ಎರಡೂ ವ್ಯಾಖ್ಯಾನಗಳೂ ಒಂದೇ ರೀತಿಯಾಗಿವೆ, ವ್ಯತ್ಯಾಸವಿಲ್ಲ.)

**ಅವತಾರಿಕೆ :** ಈಗ ಕವಿಗಳು ಶ್ರೀವೇಂಕಟನಾಥರ ಅಣ್ಣಂದಿರಾದ ಶ್ರೀಗುರುರಾಜಾಚಾರ್ಯರು ತಮ್ಮಂದಿರಾದ ಶ್ರೀವೇಂಕಟನಾಥರಿಗೆ ವಿವಾಹ ಮಾಡಿಸಬೇಕೆಂದು ಬಯಸಿದರು ಎಂಬುದಾಗಿ ಹೇಳುತ್ತಾರೆ.

**ಋಣಾದೃಷೀಣಾಮಥಮುಕ್ತಿಭಾಜನಂ ಮುಮುಕ್ಷುಮಗ್ರ್ಯಂ(ಗ್ರ್ಯಃ) ಸುಧಿಯಾಮೃಣದ್ವಯಾತ್ ।**
**ತದಗ್ರಜೋ ವೀಕ್ಷ್ಯ ವಿವಾಹಮಂಗಲಂ ವಿಧಾತುಮೈಚ್ಛದ್ಗುರುರಾಜನಾಮವಾನ್ (ಭಾಕ್) ॥೩೯॥**

**ತಾತ್ಪರ್ಯ :** ಶ್ರೀವೇಂಕಟನಾಥಾಚಾರ್ಯರ ಅಣ್ಣಂದಿರು ಶ್ರೀಗುರುರಾಜಾಚಾರ್ಯರು. ಅವರು ವಿದ್ವಚ್ಛ್ರೇಷ್ಠರು. ತಮ್ಮನ ಅಧ್ಯಯನವು ಮುಗಿದು ಅವನು ವಿವಾಹ ಯೋಗ್ಯ ವಯಸ್ಸನ್ನು ಹೊಂದಿದನು ಎಂಬ ವಿಷಯವನ್ನು ಅರಿತರು. ಶ್ರೀವೇಂಕಟನಾಥರು ಬ್ರಹ್ಮಚರ್ಯಾಶ್ರಮದಲ್ಲಿದ್ದು ಅಗ್ನಿಕಾರ್ಯ, ಭಿಕ್ಷಾಟನ ಇತ್ಯಾದಿ ಎಲ್ಲ ಸತ್ಕರ್ಮಗಳನ್ನೂ, ಇತರ ನಿಯಮಗಳನ್ನು ಪರಿಪಾಲಿಸಿ ಚೆನ್ನಾಗಿ ವೇದ, ಶಾಸ್ತ್ರಾಭ್ಯಾಸಗಳನ್ನು ಮಾಡಿ ಋಷಿ ಋಣದಿಂದ ಮುಕ್ತರಾಗಿದ್ದರು. ಇನ್ನು ಮುಂದೆ ಯಜ್ಞಾದಿಗಳನ್ನು ಔಪಾಸನ ವೈಶ್ವದೇವಾದಿಗಳನ್ನೂ ಮಾಡಿ ದೇವಋಣದಿಂದಲೂ, ಪುತ್ರಸಂಪತ್ತನ್ನು ಪಡೆದು ಪಿತೃಋಣದಿಂದಲೂ ಮುಕ್ತರಾಗುವ ಇಚ್ಛೆಯೂ ಶ್ರೀವೇಂಕಟನಾಥರಿಗೆ ಇತ್ತು. ಇದನ್ನು ತಿಳಿದ ಅಣ್ಣಂದಿರಾದ ಶ್ರೀಗುರುರಾಜಾಚಾರ್ಯರು, ತಾವು ಧರ್ಮಜ್ಞನಾದುದರಿಂದಲೂ, ಕರ್ತವ್ಯವನ್ನು ಬಲ್ಲವರಾದುದರಿಂದಲೂ ತಮ್ಮನಿಗೆ ವಿವಾಹ ಮಂಗಲ ಮಹೋತ್ಸವವನ್ನು ಮಾಡಬೇಕೆಂದು ಇಚ್ಛಿಸಿದರು.

(ಗುರುಸೇವಾ ವ್ಯಾಖ್ಯಾನದಲ್ಲಿ ಈ ರೀತಿಯಾಗಿ ತಾತ್ಪರ್ಯವನ್ನು ಕೊಟ್ಟಿದ್ದಾರೆ–ದೇವರ್ಷಿ ಪಿತ್ರೂಣಾಂ ಋಣ್ಯೈಃ ಜಾತಃ ದ್ವಿಜಃ ಯಜ್ಞ ಬ್ರಹ್ಮಚರ್ಯಸುತೈಃ ಋಣತ್ರಯಂ ಪರಿಹರೇತ್ ಪ್ರಕೃತೇ ವೇಂಕಟಾರ್ಯಸ್ಯ ಬ್ರಹ್ಮಚರ್ಯೇಣ ಋಷಿಋಣಾನ್ಮುಕ್ತತ್ವೇನ ಶಿಷ್ಟ ಋಣದ್ವಯನ್ಮೋಕ್ತುಕಾಮಸ್ಯ ವಿವಾಹಂ ಕುರ್ಯಾಂ ಇತಿ ಯತ್ನವಾನ್ ಅಭೂತ್ ಇತಿ ಭಾವಂ. ದೇವ ಋಷಿ ಪಿತೃಗಳ ಋಣಸಹಿತವಾಗಿಯೇ ಹುಟ್ಟಿದ ದ್ವಿಜನು ಯಜ್ಞ, ಬ್ರಹ್ಮಚರ್ಯ, ಪುತ್ರರಿಂದ ಋಣತ್ರಯಗಳನ್ನು ಪರಿಹರಿಸಿಕೊಳ್ಳಬೇಕು. ಪ್ರಕೃತದಲ್ಲಿ ಶ್ರೀವೇಂಕಟಾರ್ಯರು ಬ್ರಹ್ಮಚರ್ಯದಿಂದ ಋಷಿಋಣದಿಂದ ಮುಕ್ತರಾಗಿದ್ದರು. ಅವಶಿಷ್ಟವಾದ ಎರಡು

ಋಣಗಳಿಂದ ಬಿಡುಗಡೆ ಹೊಂದಲು ಬಯಸುತ್ತಿದ್ದ ಶ್ರೀವೇಂಕಟನಾಥರಿಗೆ ವಿವಾಹ ಮಾಡಬೇಕೆಂದು ಅವರ ಅಣ್ಣಂದಿರಾದ ಶ್ರೀಗುರುರಾಜಾಚಾರ್ಯರು ಯತ್ನಿಸಿದರು ಎಂಬುದಾಗಿ ತಾತ್ಪರ್ಯ.

**ಅವತಾರಿಕೆ :** ಈ ಪದ್ಯದಲ್ಲಿ ಶ್ರೀ ಗುರುರಾಜಾಚಾರ್ಯರಿಗೆ ಯಾವಾಗ ತಮ್ಮ ತಮ್ಮಂದಿರಾದ ಶ್ರೀವೇಂಕಟನಾಥಾಚಾರ್ಯರಿಗೆ ವಿವಾಹ ಮಾಡಬೇಕೆಂಬ ಇಚ್ಛೆಯುಂಟಾಯಿತೋ ಆಗಲೇ ಸಮೀಪದ ಅಗ್ರಹಾರದಲ್ಲಿ ಅನುರೂಪಳಾದ ಕನ್ಯೆಯು ದೊರಕಿದಳೆಂದು ಕವಿಗಳು ಹೇಳುತ್ತಾರೆ.

**ತದಗ್ರಹಾರೇ ಮಹನೀಯವೈಭವೇ ನಿಜಾಗ್ರಹಾರಸ್ಯ ಸಮೀಪವರ್ತಿನಿ ।**
**ಲಲಾಸ ಕಾಚಿತ್ ಸ್ವಕುಲಸ್ಯ* ಸದ್ಗುಣೈಃ ಸಮೇನ್ವವಾಯೇ ಜನಿತಾऽಗ್ರ್ಯಕನ್ಯಕಾ ॥೪೦॥**
(*ಗು.ಸೇ. ಪಾಠ – ಸಗುಣಸ್ಯಸದ್ಗುಣೈಃ)

ಶ್ರೀಗುರುರಾಜಾಚಾರ್ಯರು ತಮ್ಮ ತಮ್ಮನಿಗೆ ವಿವಾಹಕ್ಕಾಗಿ ಯೋಗ್ಯಳಾದ ಕನ್ಯೆಯನ್ನು ಹುಡುಕುತ್ತಿದ್ದರು. ಆಗ ತಮ್ಮ ಅಗ್ರಹಾರದ ಸಮೀಪದಲ್ಲಿಯೇ ಇರುವ ಉತ್ತಮವಾದ ವೈಭವದಿಂದ ತುಂಬಿದ ಆಗ್ರಹಾರದಲ್ಲಿ ತಮ್ಮ ಸದ್ವಂಶಕ್ಕೆ ಅನುಗುಣವಾದ ಒಳ್ಳೆಯ ವಂಶದಲ್ಲಿ ಹುಟ್ಟಿದ ಓರ್ವ ಕನ್ಯಕೆಯು ಇದ್ದಾಳೆ ಎಂಬ ವಿಷಯವು ತಿಳಿದುಬಂದಿತು. ಉತ್ತಮ ಗುಣಗಳಿಂದ ಕೂಡಿದ ತಮ್ಮ ವಂಶಕ್ಕೆ ಸಮಾನವಾದ ವಂಶದಲ್ಲಿ ಆ ಕನ್ಯಕೆಯು ಹುಟ್ಟಿದ್ದರಿಂದ ಈ ಸಂಬಂಧವು ಪ್ರಶಸ್ತವಾಗಿದೆಯೆಂದು ಶ್ರೀಗುರುರಾಜಾಚಾರ್ಯರು ಆಲೋಚಿಸಿದರು.

**ಅವತಾರಿಕೆ :** ಈಗ ಕವಿಗಳು ಆ ಕನ್ಯಕೆಗೆ ಸರಸ್ವತೀ ಎಂಬ ಹೆಸರು ಅನ್ವರ್ಥಕವಾಗಿದೆಯೆಂದು ಹೇಳುತ್ತಾರೆ.

**ಸಮುದ್ರಪತ್ನೀ ಭವಿತೇತಿ ಸಾದರಂ ಪ್ರಸಾದ್ಯ ವಾಣೀಮಸೃಜತ್ ಪಿತೇತಿ ವಾ ।**
**ಸರೋವರೋ ನಾಭಿರಿವೇತಿ ವಾ ಪುನಃ ಸರಸ್ವತೀತ್ಯೇವ ಜುಹಾವ ತಾಂ ಜನಃ ॥೪೧॥**

**ತಾತ್ಪರ್ಯ :** ಮುಂದೆ ಶ್ರೀವೇಂಕಟನಾಥಾಚಾರ್ಯರ ಪತ್ನಿಯಾಗಲಿರುವ ಕನ್ಯೆಯು ಸರಸ್ವತಿಯ ವಿಶೇಷ ಸನ್ನಿಧಾನವುಳ್ಳವಳಾದುದರಿಂದ ಸರಸ್ವತಿಯಂತೆ, ಸರಸ್ವತಿಯೇ ಎಂದು ತಿಳಿಯಬಹುದು. ಆದರೆ ಆ ಸರಸ್ವತಿಯು ಇಲ್ಲಿಗೆ ಏಕೆ ಬಂದಳು ಎಂದರೆ ಹೇಳುತ್ತಾರೆ. "ಅಮ್ಮ ಸರಸ್ವತಿಯೇ, ನೀನು ನದಿಯ ರೂಪದಲ್ಲಿ ಇರುವಾಗ ಸಮುದ್ರನ ಪತ್ನಿಯಾಗಿದ್ದೆ. ಈಗ ಮಾನವ ದೇಹ ಸ್ವೀಕಾರ ಮಾಡಿದಾಗಲೂ ಸಮುದ್ರನ ಮುದ್ರೆಯಿಂದ ಕೂಡಿದವನ ಅರ್ಥಾತ್ ಶಂಖ, ಚಕ್ರ ಗದಾ, ಪದ್ಮ, ನಾರಾಯಣ ಮುದ್ರೆಗಳನ್ನು ಧರಿಸುವ ವೈಷ್ಣವನ ಪತ್ನಿಯಾಗಬೇಕು, ಇದು ನನ್ನ ಅಭಿಲಾಷೆಯಾಗಿದೆ ಎಂದು ಆ ಕನ್ಯೆಯ ತಂದೆಯು ಸರಸ್ವತಿಯನ್ನು ಪ್ರಾರ್ಥಿಸಿ ಸಂತೋಷಗೊಳಿಸಿ ಪಡೆದಂತಹಾ ಕನ್ಯೆ ಇವಳು. ಆದುದರಿಂದ ಸರಸ್ವತೀ ಸನ್ನಿಧಾನ ಪಾತ್ರಳಾದ ಇವಳನ್ನು ಜನರು ಸರಸ್ವತಿಯೆಂದೇ ಕರೆದರು. ಅಥವಾ ಸ್ತ್ರೀ ಸಾಮುದ್ರಿಕಾ ಲಕ್ಷಣಾನುಸಾರವಾಗಿ ಈ ಕನ್ಯೆಯ ಹೊಕ್ಕಳು ಸರೋವರದಂತೆ ಆಳವಾಗಿದೆ ಎಂದಾಗಲೀ ಜನರು ಇವಳನ್ನು "ಸರಸ್ವತಿ" ಎಂದು ಕರೆದರು. ಇಲ್ಲಿ ಸರಸ್ವತಿ ಎಂಬ ವಿಶೇಷಣಕ್ಕೆ ಯೋಗದಿಂದ ನಿರುಕ್ತಿಯನ್ನು ಹೇಳಿ ಅಥವಾ ರೂಢಿಯ ಅರ್ಥವನ್ನು ಸಮುದ್ರ ಎಂಬ ಶ್ಲೇಷದಿಂದ ಸಮರ್ಥಿಸಿದ್ದರಿಂದ ನಿರುಕ್ತಿ ಅಲಂಕಾರವು.

**ಅವತಾರಿಕೆ :** ಈ ಕನ್ಯೆಯು ಹುಟ್ಟುವುದಕ್ಕೆ ಪೂರ್ವದಲ್ಲಿ ವಿವೇಕಾದಿ ಸದ್ಗುಣಗಳು ಬ್ರಹ್ಮನಿಂದ

ಸೃಷ್ಟಿಸಲ್ಪಟ್ಟಿದ್ದರೂ ಅವು ಆಧಾರ (ಅಶ್ರಯ) ರಹಿತವಾಗಿದ್ದವು. ಈಗಲಾದರೋ ಈ ಕನ್ಯೆಯು ಹುಟ್ಟಿದ ಅನಂತರದಲ್ಲಿ ಆ ವಿವೇಕಾದಿ ಸದ್ಗುಣಗಳು ಇವಳನ್ನು ಅಶ್ರಯಿಸಿದ್ದರಿಂದ ಸಫಲವಾದವು ಎಂದು ಕವಿಗಳು ವರ್ಣಿಸುತ್ತಾರೆ.

**ವಿವೇಕನೈಪುಣ್ಯವಿನೀತಿದಾಕ್ಷಿಣ್ಯಪತೀಶಭಾವಪ್ರಮುಖಾ ನಿಜಾ ಗುಣಾಃ ।**
**ಸುಜಾತಮಾತ್ರಾ ಅಪಿ ಶೋಭನಾಕೃತೇಃ ಸಮೇತರಾಸ್ತೇ ಸಫಲಾ ಇವಾಸತೇ ॥೪೨॥**

**ತಾತ್ಪರ್ಯ :** ಯುಕ್ತಾಯುಕ್ತ ಪರಿಜ್ಞಾನ, ಇದು ಒಳ್ಳೆಯದು – ಇದು ಕೆಟ್ಟದ್ದು ಎಂಬುದರ ವಿವೇಚನೆ, ಕಾರ್ಯಕುಶಲತೆ, ವಿನಯ, ಇನ್ನೊಬ್ಬರಲ್ಲಿ ಬೇಡುವುದನ್ನು ಸರ್ವಥಾ ಒಪ್ಪದಿರುವುದು, ಇನ್ನೊಬ್ಬರ ದೀನತೆಯನ್ನು ಸಹಿಸದೇ ಮೊದಲೇ ಅವರಿಗೆ ಬೇಕಾದುದನ್ನು ಮಾಡಿಕೊಡುವುದು (ಇದೇ ದಾಕ್ಷಿಣ್ಯ), ಪತಿಯಲ್ಲಿ ಪರಮಾತ್ಮನನ್ನು ಕಾಣುವುದು ಇವೇ ಮೊದಲಾದ ಗುಣಗಳು ಸ್ತ್ರೀಯರಿಗೆ ಅತ್ಯಂತ ಮನೋಹರವಾದ ಗುಣಗಳು. ಇವು ಈ ಹಿಂದೆಯೇ ಹುಟ್ಟಿದವು. ಆ ಗುಣಗಳು ಇತರ ಸ್ತ್ರೀಯರಲ್ಲೂ ಇರಬಹುದಾಗಿದ್ದರೂ ಸರಸ್ವತೀ ಎಂಬ ಈ ಕನ್ಯೆಯಲ್ಲಿ ಅಸಾಧಾರಣವಾಗಿ ಸೇರಿಕೊಂಡಿದ್ದವು. ಅವಳಲ್ಲಿದ್ದ ವಿವೇಕಾದಿಗಳು ಇತರ ಸ್ತ್ರೀಯರಲ್ಲಿ ಕಂಡುಬರುತ್ತಿರಲಿಲ್ಲ. ಸುಂದರವಾದ ಮತ್ತು ಕೋಮಲವಾದ ಅಂಗಗಳನ್ನುಳ್ಳ ಈ ಸರಸ್ವತಿಯಲ್ಲಿ ಹಿಂದೆ ಹೇಳಿದ ಗುಣಗಳು ಸೇರಿಕೊಂಡು ಒಳ್ಳೆಯ ಆಶ್ರಯ ದೊರೆತುದರಿಂದ ಸಫಲವಾದವೋ ಎಂಬಂತೆ ಇದ್ದುವು. ಯೋಗ್ಯವಾದ ಸ್ಥಳದಲ್ಲಿಯೇ ಯೋಗ್ಯವಾದ ವಸ್ತುಗಳು ಸೇರಿದರೆ ಅನುರೂಪ್ಯವುಂಟಾಗಿ ಮನೋಹರತೆಯುಂಟಾಗುತ್ತದೆ. ಹಿಂದೆ ಹೇಳಿದ ಗುಣಗಳು ಪರಮ ಸುಂದರಿಯಾದ ಈ ಸರಸ್ವತಿಯನ್ನು ಆಶ್ರಯಿಸಿಯೇ ಸಫಲವಾದವು ಎಂದು ಭಾವ.

**ಅವತಾರಿಕೆ :** ಕವಿಗಳು ಈಗ ಕೆಲವು ಶ್ಲೋಕಗಳಿಂದ ಕನ್ಯೆಯ ಅಂಗಸೌಷ್ಠವವನ್ನು ವರ್ಣಿಸುತ್ತಾರೆ.

**ಪದೇ ಪದೇ ಪಲ್ಲವಕಾಂತಿಸಂಪದಾಂ ನಿಗೂಢಗುಲ್ಫೌ (ಲ್ಫೇ) ನಖರಾಃ ಪ್ರಭಾಕರಾಃ ।**
**ನಿರಸ್ತಕೂರ್ಮಾಕೃತಿನೀ ಚ ಜಾನುನೀ ಕರೌ ತದೂರೂ ಕರಿಣೋ ಮನೋಹರೌ ॥೪೩॥**

**ತಾತ್ಪರ್ಯ :** ಈ ಸರಸ್ವತೀ ಎಂಬ ಕನ್ಯೆಯ ಪಾದಗಳೆರಡೂ ಚಿಗುರೆಲೆಗಳ ಲಾವಣ್ಯವನ್ನು ಹೊಂದಿದ್ದವು. ಕಾಲಿನ ಗಿಣ್ಣುಗಳು ಗೂಢವಾಗಿದ್ದವು. ಕಾಲು ಬೆರಳುಗಳ ಉಗುರುಗಳು ಕಾಂತಿಯನ್ನು ಹೊರಸೂಸುತ್ತಿದ್ದವು. ಮಂಡಿಗಳು ಆಮೆಯ ಬೆನ್ನಿನಂತೆ ಇದ್ದು ಅದಕ್ಕಿಂತಲೂ ಸುಂದರವಾಗಿದ್ದವು. ಅವಳ ಎರಡು ತೊಡೆಗಳೂ ಆನೆಯ ಎರಡು ಸೊಂಡಲಿನಂತೆ ಅತ್ಯಂತ ಮನೋಹರವಾಗಿದ್ದವು.

**ಘನಂ ತದೀಯಂ ಜಘನಂ ಯಥೋಚಿತಂ ಕೃಶಂ ವಲಗ್ನಂ ತು ಕುಶೇಶಯೇ ಶಯೌ ।**
**ನಖಾನಿ ರತ್ನಾನಿ ಬಿಸಾನುಜೌ ಭುಜೌ ಗಭೀರನಾಭೇರ್ಗಹ(ಮ)ನಂ ವಿಮೋಹನಮ್ ॥೪೪॥**

**ತಾತ್ಪರ್ಯ :** ಈ ಕನ್ಯೆಯ ಕಟಿಪುರೋಭಾಗವು ಯಥಾಯೋಗ್ಯವಾಗಿ ಎತ್ತರವಾಗಿ ವಿಶಾಲವಾಗಿತ್ತು. ಮಧ್ಯಭಾಗವಾದರೋ ತಕ್ಕಂತೆ ಚಿಕ್ಕದಾಗಿ ಕೃಶವಾಗಿತ್ತು. ಎರಡು ಕೈಗಳೂ ಕಮಲಗಳೇ ಆಗಿದ್ದವು. ಕೈಕಾಲುಗಳ ಉಗುರುಗಳು ಮಾಣಿಕ್ಯ ರತ್ನಗಳೇ ಆಗಿದ್ದವು. ಎರಡೂ ತೋಳುಗಳು ಕಮಲನಾಳಗಳಂತೆ ಇದ್ದವು. ಆಳವಾದ ಹೊಕ್ಕುಳು ತರುಣರಿಗೆ ಮೋಹವನ್ನು ಉಂಟುಮಾಡುವಂತೆ ಇತ್ತು. ಆ ಹೊಕ್ಕಳಿನ ಸುಲಕ್ಷಣವಾದ ಸ್ಥಿತಿಯು ಅತಿಸುಂದರವಾಗಿಯೂ ಮೋಹಪ್ರದವಾಗಿಯೂ ಇತ್ತು.

**ಗಲೋऽತುಲೋऽಸ್ಯಾಃ ಫಲಕೇ ಚ ತಾಲುನೀ ಮುಖಂ ತದೀಯಂ ಶಶಿನಾऽऽಸನೋನ್ಮುಖಮ್ ।**
**ರದಾಶ್ಚ ಕುಂದಾನ್ಯಧರಂ (ರಃ) ಸುಧೋದರಂ (ರಃ), ಸಮುನ್ನತಾ ಗಂಧಫಲೀವ ನಾಸಿಕಾ ॥೪೫॥**

**ತಾತ್ಪರ್ಯ :** ಈ ಸರಸ್ವತೀ ದೇವಿಯ ಕಂಠಕ್ಕೆ ಹೋಲಿಕೆಯೇ ಇಲ್ಲ. ಅವಳ ಎರಡು ಕಪೋಲಗಳೂ ಎರಡು ಗುರಾಣಿಗಳಂತೆ ಇದ್ದವು. ಅವಳ ಮುಖವು ಚಂದ್ರನೊಡನೆ ಯುದ್ಧಕ್ಕೆ ಸಮಯವನ್ನು ನಿರೀಕ್ಷಿಸುವಂತಿತ್ತು. ಚಂದ್ರನ ವೈರಿಯಾಗಿತ್ತು. ಚಂದ್ರನನ್ನು ಜಯಿಸಿತ್ತು. ಹಲ್ಲುಗಳು ಮಾಗಿ ಮಲ್ಲಿಗೆಯ ಮೊಗ್ಗುಗಳಂತೆ ಇದ್ದವು. ತುಟಿಯು ಅಮೃತ ಗರ್ಭಿತವಾಗಿತ್ತು. ಎತ್ತರವಾದ ಮೂಗು ಸಂಪಿಗೆಯ ಮೊಗ್ಗಿನಂತಿತ್ತು. (ಇಲ್ಲಿಯೂ ಕ್ರಿಯಾಪದವಿಲ್ಲ.)

**ಶಿಶೋರಮುಷ್ಯಾಸ್ತಿಲಕಸ್ಯ ಕೇಲಿನೀಸಖಸ್ಯ ಡೋಲೇವ ಲಲಾಟಪಟ್ಟಿಕಾ ।**
**ಚತುಷ್ಕಪರ್ದಾಯಸಶೃಂಖಲಾಶ್ರಿತಾ ಲಲಂತಿಕಾರತ್ನಗುಲಿಚ್ಛರಾಜಿತಾ ॥೪೬॥**

**ತಾತ್ಪರ್ಯ :** ಕವಿಗಳು ಈ ಪದ್ಯದಿಂದ ಸರಸ್ವತಿಯ ಹಣೆಯನ್ನು ವರ್ಣಿಸುತ್ತಿದ್ದಾರೆ. ಈ ಕನ್ಯೆಯ ವಿಶಾಲವಾದ ಹಣೆಯು ಮಗುವಿನ ತೊಟ್ಟಿಲಿನಂತಿದೆ. ಕನ್ಯೆಯ ಹಣೆಯಲ್ಲಿ ಧರಿಸಿರುವ ಬೊಟ್ಟು ಶಿಶುರೂಪವಾದ ಮನ್ಮಥನಂತಿದೆ. ಈ ಕನ್ಯೆಯ ಕಪ್ಪಾದ ನಾಲ್ಕು ಜಡೆಗಳು ತೊಟ್ಟಿಲನ್ನು ತೂಗು ಹಾಕಿರುವ ಕಬ್ಬಿಣದ ನಾಲ್ಕು ಸರಪಳಿಗಳಂತಿದೆ. ಹಣೆಯ ಮೇಲ್ಭಾಗದಿಂದ ಬೈತಲೆಯ ತುದಿಯಿಂದ ಜೋಲಾಡುತ್ತಿರುವ ಬೈತಲೆ ಬೊಟ್ಟು ಎಂಬ ಹಣೆಯ ಆಭರಣವು ರತ್ನಮಯವಾದ ಮಕ್ಕಳ ಆಟದ ಚೆಂಡಿನಂತೆ, ತೊಟ್ಟಿಲಿನ ಮಧ್ಯ ಭಾಗದಲ್ಲಿ ಮೇಲೆ ತೂಗು ಹಾಕಿರುವ ಗೊಂಡೆಯಂತೆ ಕಾಣಿಸುತ್ತಿದೆ. ಈ ರೀತಿಯಾಗಿ ಸರಸ್ವತೀದೇವಿಯ ಹಣೆಯು ಅದ್ಭುತವಾದ ತೊಟ್ಟಿಲಿನಂತೆ ಶೋಭಾಯಮಾನವಾಗಿದೆ ಎಂದು ಭಾವ.

**ವಿಶೇಷಾಂಶ :** ಇಬ್ಬರು ವ್ಯಾಖ್ಯಾನಕಾರರೂ ಹಣೆಯನ್ನು ತೊಟ್ಟಿಲಿನಂತಿದೆ ಎಂದು ವರ್ಣಿಸುತ್ತಾರೆ. ಆದರೆ ಬಾಲಬೋಧಿನೀಕಾರರು ಹಣೆಯ ಮಧ್ಯದ ಬೊಟ್ಟನ್ನು ಶಿಶುರೂಪಿಯಾದ ಮನ್ಮಥನೆಂದೂ, ನಾಲ್ಕು ಜಡೆಗಳನ್ನು ತೊಟ್ಟಿಲಿನ ನಾಲ್ಕು ಕಬ್ಬಿಣದ ಸರಪಳಿಗಳೆಂದೂ, ಬೈತಲೆಯಿಂದ ಹಣೆಯ ಮೇಲ್ಭಾಗದಲ್ಲಿರುವ ರತ್ನದ ಗೊಂಡೆಗಳನ್ನು ತೊಟ್ಟಿಲಿಗೆ ಅಲಂಕಾರವಾಗಿ ಕಟ್ಟಿರುವ ರತ್ನದ ಗೊಂಡೆ ಅಥವಾ ಚೆಂಡು ಎಂದು ವರ್ಣಿಸಿದ್ದಾರೆ.

**ಗುರುಸೇವಾ ವ್ಯಾಖ್ಯಾನಕಾರರು :** ಕನ್ಯೆಯರಲ್ಲಿ (ತಿಲಕಪ್ರಾಯಳಾದ) ಶ್ರೇಷ್ಠಳಾದ ಸರಸ್ವತೀದೇವಿಯ ಹಣೆಯು ಮನ್ಮಥನ ತೊಟ್ಟಿಲಿನಂತಿದೆ ಎಂದು ಹೇಳಿದ್ದಾರೆ. ಹಣೆಯ ಮೇಲ್ಭಾಗದಲ್ಲಿರುವ ಕೂದಲುಗಳು ತೊಟ್ಟಿಲಿನ ಕಬ್ಬಿಣದ ಸರಪಳಿಗಳು, ಹಣೆಯ ಮೇಲ್ಭಾಗದಲ್ಲಿ ತಲೆಗೂದಲಿನಿಂದ ಇಳಿಬಿದ್ದಿರುವ ಲಲಂತಿಕಾ ಎಂಬ ಹಾರ ವಿಶೇಷವು ತೊಟ್ಟಿಲನ್ನು ಕುಳಿತ ಜಾಗದಿಂದಲೇ ಎಳೆದು ತೂಗುವ ಹಗ್ಗವೆಂದೂ, ತಲೆಯ ಹಾರದ ತುದಿಯಲ್ಲಿರುವ ಗೊಂಡೆಯ ತೊಟ್ಟಿಲಿನ ಮೇಲ್ಭಾಗದ ಗೊಂಡೆಯೆಂದೂ ವರ್ಣಿಸಿದ್ದಾರೆ. ಈ ರೀತಿಯಾಗಿ ವ್ಯಾಖ್ಯಾನಕಾರರಿಬ್ಬರಿಗೂ ಅಭಿಪ್ರಾಯ ಬೇಧವಿದೆ. ಎರಡೂ ಅಭಿಪ್ರಾಯಗಳು ಓದುಗ ಸಹೃದಯರ ಮನಸ್ಸಿಗೆ ನಾಟುವಂತಿದೆ.

**ಅವತಾರಿಕೆ :** ಈಗ ಕವಿಗಳು ಸರಸ್ವತೀದೇವಿ ಮತ್ತು ಶ್ರೀವೇಂಕಟನಾಥಾಚಾರ್ಯರ ವಿವಾಹದ ಪೂರ್ವ ಕರ್ತವ್ಯವನ್ನು ವರ್ಣಿಸುತ್ತಾ ಶ್ರೀವೇಂಕಟನಾಥರು ಇಂತಹಾ ಕನ್ಯಾಮಣಿಯ ವಿವಾಹಕ್ಕಾಗಿ ಪ್ರಯತ್ನ ಮಾಡಿದರೆಂದು ತಿಳಿಸುತ್ತಾರೆ.

**ತಾಮುದ್ವಿವಕ್ಷುಃ ಸುರಭೌ ಸಮಾಗತೇ ವಟುವ್ರತಾನಾಂ ಚ ಚತುಷ್ಟಯಂ ಮುದಾ ।
ವಿಧಾಯ ಭಾಷ್ಯಂ ಲಿಖತಿ ಸ್ಮ ವೇಂಕಟೋ ವಿಕಲ್ಪಿತಂ (ವೆಂಕಟೋಽವಿಕಲ್ಪಿತಂ)**

**ಸಿಂಧುನದೀನಿಮಜ್ಜನಮ್॥೪೭॥**

**ತಾತ್ಪರ್ಯ-೧ :** ಇಂತಹ ಈ ಹಿಂದೆ ವರ್ಣಿಸಿದ ಕನ್ಯೆ ಸರಸ್ವತೀದೇವಿಯನ್ನು ವಿವಾಹವಾಗಬೇಕೆಂದು ಶ್ರೀವೇಂಕಟನಾಥರು ಸಂಕಲ್ಪಿಸಿದರು. ವಸಂತಋತುವೂ ಬಂದಿತು. ಆಗ ಶ್ರೀವೇಂಕಟನಾಥರು ಸಮಾವರ್ತನಕ್ಕಿಂತ ಮೊದಲು ಮಾಡಬೇಕಾಗಿರುವ ಪ್ರಾಜಾಪತ್ಯ, ಸೌಮ್ಯ, ಆಗ್ನೇಯ, ವೈಶ್ವದೇವ ಎಂಬ ನಾಲ್ಕು ಬ್ರಹ್ಮಚಾರಿ ವ್ರತಗಳನ್ನು ಸಂತೋಷದಿಂದ ಮಾಡಿದರು. ಅನಂತರದಲ್ಲಿ ನದಿಯು ಎಲ್ಲಿ ಹುಟ್ಟಿದರೂ ಸಾಗರವನ್ನು ಸೇರುವುದು ನಿಶ್ಚಿತವಾಗಿರುವಂತೆ ಯಾವ ಸಂಶಯವೂ ಇಲ್ಲದೇ ನಿಶ್ಚಯವಾಗಿ ನೆರವೇರಬೇಕಾಗಿರುವ ಮದುವೆಗೋಸ್ಕರ ಲಗ್ನಪತ್ರವನ್ನು (ನಿಶ್ಚಯಪತ್ರವನ್ನು) ತಯಾರಿಸಿದರು. "ನಾವು ವಿವಾಹಕ್ಕೆ ನಿಶ್ಚಯವಾಗಿಯೂ ಬರುತ್ತೇವೆ, ನೀವು ಮದುವೆಯ ತಯಾರಿಯನ್ನು ಮಾಡತಕ್ಕದ್ದು" ಎಂಬುದಾಗಿ ಕನ್ಯೆ ಸರಸ್ವತೀದೇವಿಯವರ ಸಂಬಂಧೀ ಜನರಿಗೆ ಬರೆದ ಪತ್ರವನ್ನು ಕಳುಹಿಸಿದರು ಎಂಬುದಾಗಿ ತಾತ್ಪರ್ಯ.

**ತಾತ್ಪರ್ಯ-೨ :** ವಸಂತ ಋತುವು ಬಂದಿತು. ಶ್ರೀವೇಂಕಟನಾಥರು ಈ ಹಿಂದೆ ವರ್ಣಿತಳಾದ ತಮಗೆ ಅನುರೂಪಳಾದ ಸರಸ್ವತೀದೇವಿಯನ್ನು ವಿವಾಹವಾಗಬೇಕೆಂದು ಬಯಸಿದರು. ವಿವಾಹಕ್ಕಿಂತ ಮೊದಲು ಮಾಡಬೇಕಾಗಿರುವ ಸಮುದ್ರಸ್ನಾನ, ನದೀಸ್ನಾನ ಮುಂತಾದವನ್ನು ಮಾಡಿದರು. ಅನಂತರ ಬ್ರಹ್ಮಚಾರಿಯ ಬ್ರಹ್ಮಚರ್ಯ ವ್ರತದ ಸಮಾಪ್ತಿಯ ಸಮಯದಲ್ಲಿ ಅವಶ್ಯಕವಾಗಿ ಮಾಡಬೇಕು ಎಂದು ಹೇಳಿರುವ ಗೃಹ್ಯ ಸೂತ್ರೋಕ್ತವಾದ ನಾಲ್ಕು ಬ್ರಹ್ಮಚರ್ಯ ವ್ರತಗಳನ್ನು ಅನುಷ್ಠಾನ ಮಾಡಿದರು. ಅನಂತರದಲ್ಲಿ ಸತ್ಕಾಲಕ್ಷೇಪಕ್ಕಾಗಿ ಶ್ರೀಮದ್ಬ್ರಹ್ಮಸೂತ್ರಭಾಷ್ಯವನ್ನು ಬರೆಯುತ್ತಿದ್ದರು.

**ವಿಶೇಷಾಂಶ :** ಕೃಷ್ಣ ಯಜುರ್ವೇದದ ಏಳು ಕಾಂಡಗಳು, ಬ್ರಾಹ್ಮಣ, ಆರಣ್ಯಕ ಭಾಗಗಳಲ್ಲಿ ಪ್ರಜಾಪತಿ ದೇವತಾಕವಾದ ಮಂತ್ರಗಳಿವೆ. ಈ ಮಂತ್ರಭಾಗವನ್ನು ಪ್ರಜಾಪತ್ಯಕಾಂಡ ಎನ್ನುತ್ತಾರೆ. ಹೀಗೆಯೇ ಸೋಮದೇವತಾಕವಾದ ಮಂತ್ರಭಾಗವನ್ನು ಸೋಮಕಾಂಡವೆಂತಲೂ, ಅಗ್ನಿದೇವತಾಕವಾದ ಮಂತ್ರಭಾಗವನ್ನು ಆಗ್ನೇಯಕಾಂಡವೆಂತಲೂ, ವಿಶ್ವೇದೇವ ದೇವತಾಕವಾದ ಮಂತ್ರಗಳನ್ನು ವಿಶ್ವೇದೇವಕಾಂಡವೆಂದು ಹೇಳುತ್ತಾರೆ. ಗೃಹ್ಯಸೂತ್ರಗಳಲ್ಲಿ ಹೇಳಿರುವಂತೆ, ಸಂಹಿತಾ ಬ್ರಾಹ್ಮಣ ಅರಣ್ಯಕಗಳಲ್ಲಿ ಅಲ್ಲಲ್ಲಿ ಚದುರಿ ಇರುವ ಈ ಮಂತ್ರಗಳನ್ನು ಒಟ್ಟು ಸೇರಿಸಿ ಅಧ್ಯಯನ ಮಾಡಿ, ಆಯಾ ದೇವತೆಯನ್ನು ಕುರಿತು ಹೋಮ ಮಾಡುವುದೇ ವ್ರತಚತುಷ್ಟಯ ಎಂಬುದಾಗಿ ಪ್ರಸಿದ್ಧವಾಗಿದೆ. ಈ ವ್ರತಚತುಷ್ಟಯವನ್ನು ಮುಗಿಸಿದ ಮೇಲೆಯೇ ಬ್ರಹ್ಮಚಾರಿಯು ಸಮಾವರ್ತನ ಮಾಡಿಕೊಂಡು ವಿವಾಹ ಮಾಡಿಕೊಳ್ಳಬೇಕು. ಈ ಶ್ಲೋಕದ ಅಭಿಪ್ರಾಯದಲ್ಲಿ ಇಬ್ಬರು ವ್ಯಾಖ್ಯಾನಕಾರರಿಗೂ ಅಭಿಪ್ರಾಯ ಬೇಧವಿದೆ. ಒಬ್ಬರು (ಬಾಲಬೋಧಿನೀ) ಸಿಂಧುನದೀಮಜ್ಜನಂ ಎಂಬುದಕ್ಕೆ ಸಮುದ್ರ ಸ್ನಾನ ಮತ್ತು ನದೀ ಸ್ನಾನ ಎಂದು ಅರ್ಥ ಮಾಡಿದ್ದಾರೆ. ಮತ್ತೊಬ್ಬ (ಗುರುಸೇವಾ) ವ್ಯಾಖ್ಯಾನಕಾರರು ನದಿಗಳು ಸಮುದ್ರವನ್ನು ಸೇರುವುದು ಹೇಗೆ ನಿಶ್ಚಿತವೋ ಅದೇ ರೀತಿಯಾಗಿ "ಅವಿಕಲ್ಪಿತವಾಗಿ ಅಂದು ನಿಶ್ಚಿತವಾಗಿ ಮದುವೆಯನ್ನು ತೀರ್ಮಾನಿಸುವ ಲಗ್ನ ನಿಶ್ಚಯ ಪತ್ರವನ್ನು (ಭಾಷ್ಯವನ್ನು) ಬರೆದರು ಎಂಬ ಅರ್ಥ ಮಾಡಿದರೆ ಮತ್ತೊಬ್ಬರು (ಬಾಲಬೋಧಿನೀ) ವ್ರತ ಚತುಷ್ಟಯವಾದ ಮೇಲೆ ಬ್ರಹ್ಮಸೂತ್ರಭಾಷ್ಯವನ್ನು ಬರೆಯುತ್ತಾ ಸತ್ಕಾಲಕ್ಷೇಪವನ್ನು ಮಾಡುತ್ತಿದ್ದರು ಎಂಬುದಾಗಿ ಅರ್ಥ ಬರೆದಿರುತ್ತಾರೆ.

## ಕನ್ಯೆಯ ಗ್ರಾಮಕ್ಕೆ ವರನ ಪ್ರವೇಶ :

**ಅವತರಣಿಕೆ :** ಅನಂತರದಲ್ಲಿ ಶ್ರೀವೇಂಕಟನಾಥರು ವಿವಾಹಕ್ಕೋಸ್ಕರವಾಗಿ ಬಂಧು ಬಾಂಧವರಿಂದ ಒಡಗೂಡಿ ಸಮೀಪದಲ್ಲಿಯೇ ಇರುವ ಕನ್ಯೆ ಸರಸ್ವತೀದೇವಿಯ ವಾಸಸ್ಥಳವಾದ ಅಗ್ರಹಾರವನ್ನು ಪ್ರವೇಶಿಸಿದರು ಎಂಬುದಾಗಿ ಕವಿಗಳು ಮುಂದಿನ ಶ್ಲೋಕದಲ್ಲಿ ವರ್ಣಿಸುತ್ತಾರೆ.

**ಸಗೋಪಿಕಾಂಬಿಕಾಗ್ರಜಃ ಸುಹೃಜ್ಜನೈಃ ಸಮನ್ವಿತಃ ।**
**ಉಪಾವಿಶತ್ ಸುಪೂಜಿತೋ[1] ಮುದೈವ ಕನ್ಯಕಾಪದಮ್ ॥೪೮॥**
**([1] ಉಪಾವಿಶತ್ ಸ ಪೂಜಿತೇ – ಗು. ಸೇ. ಪಾಠ)**

**ತಾತ್ಪರ್ಯ :** ಅನಂತರದಲ್ಲಿ ತಾಯಿಯಾದ ಗೋಪಿಕಾಂಬಾ ಮತ್ತು ಅಣ್ಣಂದಿರಾದ ಶ್ರೀಗುರುರಾಜಾಚಾರ್ಯರ ಜೊತೆಯಲ್ಲಿ ಅನೇಕ ಬಂಧು ಬಾಂಧವರಿಂದ ಒಡಗೂಡಿ ಶ್ರೀವೇಂಕಟನಾಥಾಚಾರ್ಯರು ವಧುವಿನ ವಾಸಸ್ಥಳವಾದ ಅಗ್ರಹಾರವನ್ನು ಒಂದು ಒಳ್ಳೆಯ ದಿನದಲ್ಲಿ ಶುಭಮುಹೂರ್ತದಲ್ಲಿ ಪ್ರವೇಶಿಸಿದರು. ಆಗ ವಧುವಿನ ಕಡೆಯ ಬಂಧುಗಳು ಅವರೆಲ್ಲರನ್ನೂ ಸ್ವಾಗತಿಸಿ ಸತ್ಕರಿಸಿದರು. ಈ ರೀತಿಯಾಗಿ ಶ್ರೀವೇಂಕಟನಾಥಾಚಾರ್ಯರು ತಮ್ಮ ವಿವಾಹಕ್ಕಾಗಿ ಕನ್ಯಾಮಣಿಯ ಅಗ್ರಹಾರವನ್ನು ಪ್ರವೇಶಿಸಿ ಅಲ್ಲಿ ವಾಸ ಮಾಡಿದರು.

**ಶ್ರೀಮತ್ಕಶ್ಯಪವಂಶವಾರ್ಧಿಶಶಿನಃ ಷಡ್ದರ್ಶಿನೀವಲ್ಲಭ–**
**ಶ್ರೀಲಕ್ಷ್ಮೀನರಸಿಂಹವಿತ್ತವಿದುಷಃ ಶ್ರೀವೇಂಕಟಾಂಬಾಮಣೌ ।**
**ಜಾತೇನಾರ್ಯದಯಾಸುಧಾಮಯಗಿರಾ ನಾರಾಯಣೇನೋದಿತೇ**
**ಕಾವ್ಯೇ ಚಾರುಣಿ ರಾಘವೇಂದ್ರವಿಜಯೇ ಸರ್ಗಶ್ಚತುರ್ಥೋಽಭವತ್ ॥೪೯॥**

ಸರ್ಗದ ಕೊನೆಯಲ್ಲಿ ಬೇರೆ ವೃತ್ತದಿಂದ ಸಮಾಪ್ತಿ ಮಾಡಬೇಕೆಂಬ ನಿಯಮವನ್ನು ಅನುಸರಿಸಿ ಈ ಶ್ಲೋಕ ಮತ್ತು ಹಿಂದಿನ ಶ್ಲೋಕಗಳಲ್ಲಿ ಬೇರೆ ಬೇರೆ ವೃತ್ತವನ್ನು ಅನುಸರಿಸಿದ್ದಾರೆ. ಈ ಪದ್ಯದ ಅರ್ಥವನ್ನು ಪ್ರಥಮ ಸರ್ಗದ ಕೊನೆಯಲ್ಲಿ ಕೊಡಲಾಗಿದೆ.

ಈ ರೀತಿಯಾಗಿ ಶ್ರೀರಾಘವೇಂದ್ರವಿಜಯದ ಕರ್ನಾಟಕ ಭಾಷಾನುವಾದದಲ್ಲಿ ನಾಲ್ಕನೆಯ ಸರ್ಗವು ಸಮಾಪ್ತಿಯಾಯಿತು.

# ಚತುರ್ಥ ಸರ್ಗದ ಕಥಾಸಾರ

**ಕಶ್ಯಪಗೋತ್ರವರ್ಣನಂ** — ಬಲಿಚಕ್ರವರ್ತಿಯಿಂದ ದೇವತೆಗಳು ಸೋತರು. ತಮ್ಮ ತಮ್ಮ ಸ್ಥಾನವನ್ನು ಬಿಟ್ಟು ಓಡಿಹೋದರು. ಆಗ ದೇವತೆಗಳ ತಾಯಿಯಾದ ಅದಿತಿಯು ತನ್ನ ಪತಿಯಾದ ಕಶ್ಯಪರನ್ನು ಶರಣು ಹೊಂದಿಳು. 'ನನ್ನ ಮಕ್ಕಳಾದ ದೇವತೆಗಳು ಶತ್ರುಗಳನ್ನು ನಿಗ್ರಹಿಸಿ ತಮ್ಮ ತಮ್ಮ ಸ್ಥಾನವನ್ನು ಪುನಃ ಹೊಂದುವಂತೆ ಮಾಡಿರಿ' ಎಂದು ಪ್ರಾರ್ಥಿಸಿದಳು. ಆಗ ಕಶ್ಯಪರು ಅದಿತಿದೇವಿಗೆ ಪಯೋವ್ರತವನ್ನು ಉಪದೇಶಿಸಿ 'ಈ ವ್ರತದಿಂದ ಸಂತುಷ್ಟನಾದ ನಾರಾಯಣನು ನಿನ್ನ ಮಗನಾಗಿ ಹುಟ್ಟಿ, ನಿನ್ನ ಇಷ್ಟವನ್ನು ಪೂರೈಸುವನು' ಎಂದು ಹೇಳಿದರು. ಅದಿತಿಯೂ ಹಾಗೆಯೇ ಮಾಡಿದಳು. ಪಯೋವ್ರತದಿಂದ ಸಂತುಷ್ಟನಾದ ನಾರಾಯಣನು ಭಾದ್ರಪದಮಾಸದ ಶುಕ್ಲಪಕ್ಷದ ದ್ವಾದಶಿಯ ದಿನ ಶ್ರವಣಾ ನಕ್ಷತ್ರದಲ್ಲಿ ಅಭಿಜನ್ಮುಹೂರ್ತದಲ್ಲಿ ವಾಮನನಾಗಿ ಅವತರಿಸಿದನು.

'ಧರ್ಮಾತ್ಮನೂ ಭಕ್ತಾಗ್ರೇಸರನೂ ಆದ ಬಲಿಯನ್ನು ಬಲದಿಂದ ನಿಗ್ರಹಿಸಬಾರದು. ಬಲಿಯನ್ನು ಬೇಡಿ ಅವನಿಂದ ಮೂರು ಲೋಕವನ್ನು ತೆಗೆದುಕೊಂಡು ದೇವೇಂದ್ರನಿಗೆ ಕೊಡಬೇಕು. ಆ ಬಲಿಗೆ ಸ್ವರ್ಗಕ್ಕಿಂತ ಹೆಚ್ಚು ಸುಖ ಕೊಟ್ಟು ಸುತಲ ಲೋಕದಲ್ಲಿ ಕಾಪಾಡಬೇಕು. ಮುಂದಿನ ಮನ್ವಂತರದಲ್ಲಿ ಅವನಿಗೆ ಇಂದ್ರಪದವಿಯನ್ನು ಕೊಟ್ಟು ಅನುಗ್ರಹಿಸಬೇಕು'. ಎಂದು ನಿಶ್ಚಯಿಸಿ ಹಾಗೆಯೇ ಮಾಡಿದನು. ಹೀಗೆ ಇಂದ್ರನ ರಕ್ಷಣೆಯಲ್ಲಿ ಉತ್ಸುಕನಾದ ವಾಮನನು ಕಶ್ಯಪರ ಮಗನಾಗಿ ಅವತಾರ ಮಾಡಿ ಕಶ್ಯಪರನ್ನು ಅವರ ವಂಶವನ್ನು ಹದಿನಾಲ್ಕು ಲೋಕಗಳಲ್ಲಿಯೂ ಪವಿತ್ರವನ್ನಾಗಿ ಮಾಡಿದನು.

**ತಿಮ್ಮಣ್ಣದಣಾಯಕ** — ಸುಪ್ರಸಿದ್ಧವಾದ ಅತ್ಯುತ್ತಮವಾದ ಈ ವಂಶದಲ್ಲಿ ತಿಮ್ಮಣ್ಣದಣಾಯಕನೆಂಬುವನು ಹುಟ್ಟಿದನು. ಅವನು 'ಆದಂಕಿ' ಎಂಬ ಗ್ರಾಮದ ಅಧಿಪತಿಯಾಗಿದ್ದನು.

**ತಿಮ್ಮರಸ** — ತಿಮ್ಮಣ್ಣದಣಾಯಕನ ವಂಶದಲ್ಲಿ ತಿಮ್ಮರಸಾರ್ಯನೆಂಬ ಅತ್ಯಂತ ಉದಾರನಾದ ಶ್ರೇಷ್ಠ ಬ್ರಾಹ್ಮಣನು ಹುಟ್ಟಿದನು. ಅವನು ತನ್ನ ಸಾಮರ್ಥ್ಯದಿಂದ ಸಂಪಾದಿಸಿದ 'ನಾರೀಸರಸೀ' ಎಂಬ ಪಟ್ಟಣದಲ್ಲಿ ವಾಸಿಸುತ್ತಿದ್ದನು.

**ಫಣಿಶಾಯಿ** — ತಿಮ್ಮರಸಾರ್ಯನಿಗೆ 'ಫಣಿಶಾಯಿ' ಎಂಬ ಅತ್ಯಂತ ಪ್ರಸಿದ್ಧನಾದ ಮಗನು ಹುಟ್ಟಿದನು. ಅವನು ಕೃತಮಾಲಾ (ವೈಗೈನದೀ) ನದಿಯಿಂದ ಪವಿತ್ರವಾದ ಮಧುರಾ ಪಟ್ಟಣದಲ್ಲಿ ವಾಸಿಸುತ್ತಿದ್ದನು.

**ಲಕ್ಷ್ಮೀನರಸಿಂಹಾರ್ಯ** — ಫಣಿಶಾಯಿಯ ಮಗನೇ ಲಕ್ಷ್ಮೀನರಸಿಂಹಾರ್ಯರು. ಅವರು ಹೋಲಿಕೆಯಿಲ್ಲದ ಅಸಾಧಾರಣ ಬುದ್ಧಿಯಿಂದ ಸಮುದ್ರಸಮಾನರಾಗಿದ್ದರು. ಅವರ ಮಾತುಗಳು ಪ್ರತಿವಾದಿಗಳ ಗರ್ವನಾಶಮಾಡುವುದಕ್ಕೆ ಸಮರ್ಥವಾಗಿದ್ದವು. ಅವರ ಮಾತುಗಳು ಪ್ರತಿಕ್ಷಣದಲ್ಲಿಯೂ ಹೊಸ ಹೊಸ ರೂಪವನ್ನು ಧರಿಸಿ ವೃದ್ಧಿಹೊಂದುತ್ತಿದ್ದವು. ಹೀಗೆ ನಿತ್ಯನೂತನಸರಸ್ವತೀನಿವಾಸಸ್ಥಾನರಾದ ಲಕ್ಷ್ಮೀನರಸಿಂಹಾಚಾರ್ಯರು ಅತ್ಯಂತ ಪುಣ್ಯಮಯ ಶರೀರವುಳ್ಳವರಾಗಿದ್ದರು. ಬಾಲಕ ಲಕ್ಷ್ಮೀನರಸಿಂಹಾಚಾರ್ಯರಿಗೆ ತಂದೆಯು ಉಪನಯನವನ್ನು ಮಾಡಿ, ಅವರು ವಿದ್ಯಾಭ್ಯಾಸವನ್ನು ಪೂರೈಸಿ ಯೌವನವನ್ನು ಹೊಂದಿದಾಗ ವಿವಾಹ ಮಾಡಿಸಬೇಕೆಂದು ಆಲೋಚಿಸಿ ಯೋಗ್ಯಳಾದ ಕನ್ಯೆಯನ್ನು ಹುಡುಕುತ್ತಿದ್ದರು. ಅವರು ಮಗನನ್ನು ಕರೆದುಕೊಂಡು ತಿಮ್ಮಣ್ಣಾರ್ಯ ಗೋಪಿಕಾಂಬೆಯರ ಬಳಿಗೆ ಬಂದರು. ತಮ್ಮ ಗೌತಮವಂಶಕ್ಕೆ ಅನುಗುಣವಾದ ಕಶ್ಯಪವಂಶದಲ್ಲಿ ಹುಟ್ಟಿದ ಈ ವರನು ತನ್ನ ಮಗಳಿಗೆ ತಕ್ಕವನೆಂದು ಆಲೋಚಿಸಿ ತಿಮ್ಮಣಾರ್ಯರು ಶುಭ ಮುಹೂರ್ತದಲ್ಲಿ ವಿವಾಹವನ್ನು ಏರ್ಪಡಿಸಿ ತನ್ನ

ಮಗಳನ್ನು ಫಣಿಶಾಯಿಯ ಮಕ್ಕಳಾದ ಲಕ್ಷ್ಮೀನರಸಿಂಹಾಚಾರ್ಯರಿಗೆ ಪಾಣಿಗ್ರಹಣ ಮಾಡಿಸಿ ಕೊಟ್ಟನು. ವೆಂಕಟಾಂಬೆಯು ಲಕ್ಷ್ಮೀನರಸಿಂಹಾಚಾರ್ಯರ ಧರ್ಮಪತ್ನಿಯಾದಳು. ತಿಮ್ಮಣ್ಣಾರ್ಯರು ಮದುವೆಯನ್ನು ಸಂಭ್ರಮದಿಂದ ನೆರವೇರಿಸಿ ವರನ ತಂದೆತಾಯಿಗಳನ್ನೂ ಬಂಧುಗಳನ್ನೂ ಚೆನ್ನಾಗಿ ಸತ್ಕರಿಸಿದರು.

**ಗುರುರಾಜನ ಉಪನಯನ** — ಮಗಳ ವಿವಾಹ ಮಾಡಿದ ಸ್ವಲ್ಪ ಸಮಯದಲ್ಲಿಯೇ, ಗರ್ಗಾಚಾರ್ಯರು ಶ್ರೀಕೃಷ್ಣನ ಅಣ್ಣನಾದ ಬಲರಾಮನ ಉಪನಯನ ಮಾಡಿದಂತೆ ತಿಮ್ಮಣ್ಣಾರ್ಯರು ತನ್ನ ಗುಣವಂತೆಯೇ ಗುಣವುಳ್ಳ ತನ್ನ ಹಿರಿಯ ಮಗನಾದ ಗುರುರಾಜನಿಗೆ ಉಪನಯನ ಮಾಡಿದರು.

**ವೆಂಕಟನಾಥರ ಉಪನಯನ** — ಅನಂತರ ಕೆಲವು ದಿನಗಳಲ್ಲಿಯೇ ತಿಮ್ಮಣ್ಣಾರ್ಯರು ಹರಿಪದವನ್ನು ಸೇರಿದರು. ತಂದೆಯ ಅನಂತರ ಹಿರಿಯ ಮಗನು ಕುಟುಂಬಭಾರವನ್ನು ಹೊತ್ತು ನಿರ್ವಾಹ ಮಾಡಿದರೆ ತಂದೆಯ ಸೇವೆಯನ್ನು ಮಾಡಿದಂತಾಗುವುದು ಎಂಬ ಶಾಸ್ತ್ರಸಂಪ್ರದಾಯಾನುಸಾರವಾಗಿ ಹಿರಿಯವನಾದ ಗುರುರಾಜನು ಕುಟುಂಬಭಾರವನ್ನು ಹೊತ್ತನು. ತನ್ನ ತಮ್ಮನಾದ ವೆಂಕಟನಾಥನನ್ನು ತನ್ನ ತಂದೆಗೆ ಸಮಾನನಾಗಿ ಮಾಡಬೇಕೆಂದು ಬಯಸಿದನು. ರತ್ನಮಾಲಾ ಮುಂತಾದ ನಿಘಂಟುಗಳನ್ನೂ, ಅನೇಕವಿಧವಾದ ಲಿಪಿಗಳನ್ನೂ ಕಲಿಸಿ ತಮ್ಮನನ್ನು ನಿಪುಣನನ್ನಾಗಿ ಮಾಡಿದನು. ಎಂಟನೆಯ ವಯಸ್ಸಿನಲ್ಲಿ ವಸಂತ ಋತುವಿನಲ್ಲಿ ತಮ್ಮನಿಗೆ ಉಪನಯನ ಮಾಡಿದನು.

**ವೆಂಕಟನಾಥರ ವಿದ್ಯಾಭ್ಯಾಸ** — ಸಕಲ ವಿದ್ಯಾನಿಧಿಯಾದ, ಸರ್ವಜ್ಞನಾದ ಶ್ರೀ ಕೃಷ್ಣನು ಜ್ಞಾನಿಶ್ರೇಷ್ಠರಾದ ತಪಸ್ವಿಗಳಾದ ಸಾಂದೀಪಿನಿ ಎಂಬ ಬ್ರಾಹ್ಮಣರಲ್ಲಿ ವಿದ್ಯಾಭ್ಯಾಸ ಮಾಡಲು ಹೋಗಿದ್ದನು. ಅದರಂತೆ ಜ್ಞಾನನಿಧಿಯಾದ ವೆಂಕಟನಾಥರು ತನ್ನ ಭಾವನಾದ ಲಕ್ಷ್ಮೀನರಸಿಂಹಾಚಾರ್ಯರಲ್ಲಿ ವಿದ್ಯಾಭ್ಯಾಸಕ್ಕಾಗಿ ಹೋದರು. ಅದೂ ಕೂಡ ಯಾರ ನಿರ್ಬಂಧದಿಂದಲೂ ಅಲ್ಲ, ಕುತೂಹಲದಿಂದಲೇ ಕಲ್ಪವೃಕ್ಷದಂತಿರುವ ವೇದದ ಒಂದು ಶಾಖೆಯಂತಿರುವ ಯಜುಃಶಾಖೆಯನ್ನು ಕಲ್ಪವೃಕ್ಷ ಸಮಾನರಾದ ಲಕ್ಷ್ಮೀನರಸಿಂಹಾಚಾರ್ಯರಿಂದ ವೆಂಕಟನಾಥರು ಅಧ್ಯಯನ ಮಾಡಿದರು. ಅವರ ಜೊತೆಗೆ ಒಳ್ಳೆಯ ಬುದ್ಧಿಶಾಲಿಗಳಾದ ಇತರ ಅನೇಕ ವಟುಗಳೂ ಅಧ್ಯಯನ ಮಾಡುತ್ತಿದ್ದರು. ಗುರುಗಳು ಎರಡು ಬಾರಿ, ಐದು ಆವೃತ್ತಿ ಅಥವಾ ಹತ್ತು ಆವೃತ್ತಿ ಕೆಲವು ಬಾರಿ ಒಂದೇ ಆವೃತ್ತಿ ಹೇಳಿದರೂ ವೆಂಕಟನಾಥರು ಅದನ್ನು ಮನಸ್ಸಿನಲ್ಲಿ ಮರೆಯದೆ ಇಟ್ಟುಕೊಳ್ಳುತ್ತಿದ್ದರು. ಅನಧ್ಯಯನ ದಿವಸಗಳಲ್ಲಿ ತನ್ನ ಸಮಾನ ವಯಸ್ಸಿನ ಬ್ರಹ್ಮಚಾರಿಗಳ ಜೊತೆಗೆ ಸುಮಧ್ವವಿಜಯವೇ ಮೊದಲಾದ ಕಾವ್ಯಗಳನ್ನು ಓದುತ್ತಿದ್ದರು. ಅಸತ್ಕಾವ್ಯಗಳನ್ನು ಓದುತ್ತಿರಲಿಲ್ಲ. ಒಂದು ಬಾರಿ ಓದಿದ ಮೇಲೆ ಕಾವ್ಯಗಳನ್ನು ಪುನಃ ಪಠಿಸುತ್ತಿರಲಿಲ್ಲ, ಚಿಂತನೆ ಮಾಡುತ್ತಿರಲಿಲ್ಲ. 'ಇವನು ನನ್ನಿಂದ ಓದಿದ ಕಾವ್ಯವನ್ನು ತಿರುಗಿ ಚಿಂತನೆ ಮಾಡಿ ದೃಢಪಡಿಸಿಕೊಳ್ಳಲಿಲ್ಲ ಆದ್ದರಿಂದ ಮರೆತಿರಬಹುದೆಂದು ತೋರುತ್ತದೆ' ಎಂಬ ಸಂದೇಹದಿಂದ ಗುರುಗಳು ಬಹಳ ಕಾಲದ ನಂತರ ಕೇಳಿದರೆ ಕಾವ್ಯಶ್ಲೋಕಗಳನ್ನೂ ಅದರ ಅರ್ಥಾದಿಗಳನ್ನೂ ಅವರು ಹೇಳಿಕೊಟ್ಟಂತೆಯೇ ಹೇಳುತ್ತಿದ್ದರು. ಹೀಗೆ ವೆಂಕಟನಾಥರ ಧಾರಣಶಕ್ತಿಯು ಅದ್ಭುತವಾಗಿತ್ತು. ವೆಂಕಟನಾಥರ ಸಹಪಾಠಿಗಳು ಹಗಲು ರಾತ್ರಿ ಕುಳಿತು ಅನೇಕ ಬಾರಿ ಚಿಂತನ (ಪಾಠದ ಆವೃತ್ತಿ) ಮಾಡುತ್ತಿದ್ದರು. ಇದರಿಂದ ಅವರ ಬುದ್ಧಿಯು ವಿಶದವಾಯಿತು. ವೆಂಕಟನಾಥರಾದರೋ ಸಹಪಾಠಿಗಳ ಜೊತೆಗೆ ಕೆಲವು ಬಾರಿ ಚಿಂತನ ಮಾಡುತ್ತಿದ್ದರು. ಕೆಲವು ಬಾರಿ ತಾನು ಒಬ್ಬನೇ ಕುಳಿತುಕೊಂಡು ಓದುತ್ತಲೂ ಇರಲಿಲ್ಲ, ಸಹಪಾಠಿಗಳ ಜೊತೆಗೆ ಪಾಠದ ಆವೃತ್ತಿಯನ್ನೂ ಮಾಡುತ್ತಿರಲಿಲ್ಲ. ಆದರೂ ಪಾಠಗಳ ಆವೃತ್ತಿಯನ್ನು ಅನೇಕ ಬಾರಿ ಮಾಡಿದವರಂತೆ ಅವರ ಬುದ್ಧಿಯಲ್ಲಿ ವೈಶದ್ಯವು ದಿನೇ ದಿನೇ ಹೆಚ್ಚುತ್ತಿತ್ತು. ತಿಮ್ಮಣ್ಣಾರ್ಯರು ತನ್ನ ಮಗನಾದ ವೆಂಕಟನಾಥನಲ್ಲಿ ಇಂತಹ ಮಹಿಮೆಯು ಉಂಟಾಗಬೇಕೆಂದು ಶ್ರೀವೆಂಕಟೇಶನನ್ನು ಪ್ರಾರ್ಥಿಸಿದ್ದರು. ಪರಮಾತ್ಮನ ಅನುಗ್ರಹದಿಂದ ತಿಮ್ಮಣ್ಣಾರ್ಯರ ಪುಣ್ಯಫಲದಿಂದ ವೆಂಕಟನಾಥರ ಬುದ್ಧಿಯಲ್ಲಿ ಇಂತಹ ಅತಿಶಯ ಉಂಟಾಗಿತ್ತು.

**ಶ್ರೀವೆಂಕಟನಾಥರ ಲೀಲೆ** — ಶ್ರೀವೆಂಕಟನಾಥರು ತನ್ನ ಸ್ನೇಹಿತರು ಗುಂಪುಗುಂಪಾಗಿ ನಾನಾ ವಿಧವಾದ ಆಟವನ್ನು ಆಡುತ್ತಿದ್ದಾಗ, 'ಈ ನನ್ನ ಗೆಳೆಯರು ಎಷ್ಟು ಉತ್ಸಾಹದಿಂದ ಆಟವಾಡುತ್ತಿದ್ದಾರೋ ಅದಕ್ಕಿಂತ ಹೆಚ್ಚು ಉತ್ಸಾಹದಿಂದ ನಾನು ತಪಸ್ಸು ಮಾಡುತ್ತೇನೆ. ಆ ತಪಸ್ಸಿನ ಅಭ್ಯಾಸಕ್ಕಾಗಿ ಈಗ ಆಟವಾಡುತ್ತೇನೆ ಎಂದು ಮನಸ್ಸಿನಲ್ಲಿ ಆಲೋಚಿಸಿ ಆಟವಾಡುತ್ತಿದ್ದರು. ಒಂದು ಬಾರಿ ಒಂದು ಆಟವನ್ನು ನೋಡಿದರೆ ಸಾಕು, ಅದನ್ನು ಚೆನ್ನಾಗಿ ತಿಳಿದು, ಬಹಳ ಚೆನ್ನಾಗಿ ಆಟವಾಡುತ್ತಿದ್ದರು. ವೇಗವಾಗಿ ಹರಿಯುತ್ತಿರುವ ನದಿಯನ್ನು ಮತ್ತಷ್ಟು ವೇಗವಾಗಿ ಈಜಿ, ಬಾಣವು ವಾಯುವೇಗದಿಂದ ಹೋಗಿ ಗುರಿಯನ್ನು ಮುಟ್ಟುವಂತೆ ಆಚೆಯ ದಡವನ್ನು ಮುಟ್ಟುತ್ತಿದ್ದರು. 'ಒಂದು ವಸ್ತುವನ್ನು ಪಡೆಯುವುದಕ್ಕೆ ಎರಡು ಮಾರ್ಗಗಳಿರುತ್ತವೆ. ಒಂದು ದಾರಿಯು ವಕ್ರ, ಮತ್ತೊಂದು ಸರಳ. ಅವುಗಳಲ್ಲಿ ವಕ್ರ ಮಾರ್ಗದಿಂದ ಹೋದರೆ ಆ ವಸ್ತುವನ್ನು ಹೊಂದುವುದಕ್ಕೆ ಕ್ಲೇಶವನ್ನು ಅನುಭವಿಸಬೇಕಾಗುತ್ತದೆ. ಹೀಗೆ ಕ್ಲೇಶವನ್ನು ಅನುಭವಿಸುವಾಗ ಮಾನವನ ಶಕ್ತಿಯು ಬೆಂಕಿಯಂತಿರುವ ಕ್ಲೇಶದಿಂದ ಕ್ಷೀಣವಾಗಿ ಆ ವಸ್ತುವನ್ನು ಹೊಂದಲು ಸಾಧ್ಯವಾಗದೇ ಹೋಗಬಹುದು. ಸರಳ ಮಾರ್ಗದಲ್ಲಿ ಕ್ಲೇಶವೂ ಕಡಿಮೆ, ಫಲ ಸಿಗುವುದರಲ್ಲಿ ಸಂದೇಹವೂ ಇಲ್ಲ. ನಾವು ತಿಳಿಯಬೇಕಾದ ಬ್ರಹ್ಮನ ಕಡೆಗೆ ಸರಳವಾದ ಶ್ರವಣಮನನಾದಿಗಳ ಮೂಲಕವೇ ಹೋಗಬೇಕು. ತುಂಬಾ ಕ್ಲೇಶಗಳಿರುವ ವಕ್ರಮಾರ್ಗದಿಂದ ಹೋಗಬಾರದು' ಎಂಬ ಈ ಸಾಧನಮಾರ್ಗದ ರಹಸ್ಯವನ್ನು ನೇರವಾಗಿ ನದಿಯನ್ನು ದಾಟಿ ಆಚೆಯ ದಡವನ್ನು ಸೇರುವುದರ ಮೂಲಕ ಶ್ರೀವೆಂಕಟನಾಥರು ಪ್ರಕಟಗೊಳಿಸುತ್ತಿದ್ದರು.

ಹೀಗೆಯೇ ನದಿಯ ಮರಳು ದಿನ್ನೆಗಳಲ್ಲಿ ಮತ್ತೊಂದು ಆಟವನ್ನು ಆಡುತ್ತಿದ್ದರು. 'ಬಾಯಿಯಲ್ಲಿ 'ಗುಡು ಗುಡು' ಎಂಬ ಶಬ್ದವನ್ನು ನಿರಂತರವಾಗಿ ಹೇಳುತ್ತಿರಬೇಕು. ಒಂದು ಪಕ್ಷದವನು ಆ ಶಬ್ದವನ್ನು ಉಚ್ಚರಿಸುತ್ತಾ ಓಡಿ ಇನ್ನೊಂದು ಪಕ್ಷದವರನ್ನು ಮುಟ್ಟಬೇಕು. ಅಲ್ಲಿಂದ ಹಿಂತಿರುಗಿ ತನ್ನ ಜಾಗಕ್ಕೆ ಆ ಶಬ್ದವನ್ನು ಉಚ್ಚರಿಸುತ್ತಲೇ ಹಿಂತಿರುಗಬೇಕು. ಇವನಿಂದ ಮುಟ್ಟಿಸಿಕೊಂಡ ಇನ್ನೊಂದು ಪಕ್ಷದವರು ಇವನು ತನ್ನ ನಿರ್ದಿಷ್ಟ ಸ್ಥಾನವನ್ನು ತಲುಪುವ ಮೊದಲೇ ತೋಳುಗಳಿಂದ ಬಿಗಿಯಾಗಿ ಹಿಡಿದು ಅವನು ಹೇಳುವ 'ಗುಡು ಗುಡು' ಶಬ್ದವು ನಿಲ್ಲುವವರೆಗೂ, ಅವನನ್ನು ತಡೆಯುತ್ತಾರೆ. ಅವನು ತನ್ನ 'ಗುಡು ಗುಡು' ಶಬ್ದವನ್ನು ಹೇಳುತ್ತಾ ಅವರ ಕೈಗೆ ಸಿಕ್ಕದೆ, ತಪ್ಪಿಸಿಕೊಂಡು ತನ್ನ ಸ್ಥಾನಕ್ಕೆ ಹಿಂತಿರುಗಿದರೆ ಅವನಿಗೆ ಜಯ, ಇಲ್ಲದಿದ್ದರೆ ಪರಾಜಯ. ಹೀಗೆ ಬಲವಾದ ಶ್ವಾಸೋಚ್ಛ್ವಾಸಗಳ ಅಭ್ಯಾಸದಿಂದ, ಪ್ರಾಣವಾಯುವನ್ನು ತಡೆಯುವುದರ ಮೂಲಕ ಈ ಆಟವನ್ನು ಆಡಬೇಕು. (ಇದನ್ನು ಹುಡ ತುತ್ತು ಆಟ ಕಬಡ್ಡಿ ಆಟ ಎಂದೂ ಕರೆಯುತ್ತಾರೆ.) ಆ ಆಟವನ್ನು ವೆಂಕಟನಾಥರು ನಿರಂತರವಾಗಿ ಆಡುತ್ತಿದ್ದರು. 'ಮುಂದೆ ಬರುವ ಕಾಲದಲ್ಲಿ ನಾನು ಲೆಕ್ಕವಿಲ್ಲದಷ್ಟು ಪ್ರಣವಗಳನ್ನು ಜಪಿಸುವೆನು. ಪ್ರತಿಒಂದು ಜಪಕ್ಕೂ ಪ್ರಾಣಾಯಾಮಗಳನ್ನು ಮಾಡುವೆನು. ಪ್ರಾಣಾಯಾಮವು ರೇಚಕ ಪೂರಕ ಕುಂಭಕವೆಂದು ಮೂರು ಪ್ರಕಾರವಾಗಿದೆ. ರೇಚಕವೆಂದರೆ ಶ್ವಾಸವನ್ನು ಹೊರಬಿಡುವುದು ಪೂರಕವೆಂದರೆ ಶ್ವಾಸವನ್ನು ಒಳಗೆ ತೆಗೆದುಕೊಳ್ಳುವುದು. ಕುಂಭಕವೆಂದರೆ ಶ್ವಾಸವನ್ನು ಒಳಗೇ ತಡೆದು ಇಟ್ಟುಕೊಳ್ಳುವುದು. ಈ ರೀತಿಯ ಪ್ರಾಣಾಯಾಮ ಪ್ರಕ್ರಿಯೆಯೆಲ್ಲವನ್ನೂ ಈ ಆಟದಿಂದ ಪರಿಚಯ ಮಾಡಿಕೊಳ್ಳುತ್ತೇನೆ' ಎಂದು ಆಲೋಚಿಸಿ ಆ ಆಟವನ್ನು ನಿರಂತರವಾಗಿ ಆಡುತ್ತಿದ್ದರು. ಹೀಗೆ ವೇಂಕಟನಾಥರಿಗೆ ಆಟಗಳು ಕೇವಲ ಆಟಗಳು ಆಗಿರಲಿಲ್ಲ. ತನ್ನ ಮನಸ್ಸನ್ನು ಪರಬ್ರಹ್ಮನ ಕಡೆಗೆ ಒಯ್ಯುವುದಕ್ಕೆ ಸಾಧನವಾದ ಆಟಗಳೇ ಆಗಿದ್ದವು. ವೆಂಕಟನಾಥರು ಆಡಿದ ಆ ಆಟಗಳೇ ಧನ್ಯವೆಂದು ಹೇಳಬೇಕಾಗಿದೆ.

**ಶ್ರೀವೆಂಕಟನಾಥರ ಸೌಂದರ್ಯ** — 'ನನ್ನ ಅಣ್ಣನಾದ ಬ್ರಹ್ಮನು ಸರಸ್ವತೀ ಅತ್ತಿಗೆಯ ಸಹಿತ ವೆಂಕಟನಾಥನಲ್ಲಿ ವಾಸ ಮಾಡುತ್ತಿದ್ದಾನೆ. ನಾನು ಮನಸ್ಸಿನಲ್ಲಿ ನಿಂತು ಪ್ರೇರಿಸಿದಾಗ ಶ್ರೀ ತಿಮ್ಮಣಾರ್ಯರು ಮತ್ತು ಗೋಪಿಕಾಂಬೆ-ಯರಿಂದ ಉತ್ಪನ್ನನಾದ ಈ ವೆಂಕಟನಾಥನಲ್ಲಿ ವಾಸ ಮಾಡಲು ಬ್ರಹ್ಮನಿಗೆ ಏನು ಅಧಿಕಾರ ? ರತಿ ಸಮೇತನಾಗಿ ನಾನೇ ವಾಸ ಮಾಡುತ್ತೇನೆ' ಎಂದು ಜ್ಞಾತಿಮಾತ್ಸರ್ಯದಿಂದಲೋ ಎಂಬಂತೆ ಮನ್ಮಥನು ವೆಂಕಟನಾಥರಲ್ಲಿ ವಾಸ

ಮಾಡಲಾರಂಭಿಸಿದನು. (ವೆಂಕಟನಾಥರು ಮನ್ಮಥನಂತೆ ಸುಂದರರಾಗಿ ಕಾಣಿಸುತ್ತಿದ್ದರು.) ಮಹಾಬುದ್ಧಿಶಾಲಿಯಾದ ವೇಂಕಟನಾಥರಿಗೂ, ಅವನ ಮಾತಿನಲ್ಲಿ ಶಾರದಾಸಮೇತವಾಗಿ ವಾಸಿಸುತ್ತಿದ್ದ ಬ್ರಹ್ಮದೇವರಿಗೂ ಉಪದೇಶ ಮಾಡುವುದಕ್ಕಾಗಿ ನಾರಾಯಣನು ಎರಡು ಮೀನುಗಳ ರೂಪವನ್ನು ಧರಿಸಿ, ಎರಡು ಕಣ್ಣುಗಳ ರೂಪದಿಂದ ವೆಂಕಟನಾಥರಲ್ಲಿ ವಾಸಮಾಡುತ್ತಿದ್ದನು. ತಾರುಣ್ಯ ಸಹಜವಾಗಿ ಬೆಳೆದ ಕಪ್ಪಾದ ಮೀಸೆ, ಗಡ್ಡಗಳಿಂದ ಆವೃತವಾದ ವೆಂಕಟನಾಥರ ಮುಖವು ಕಲಂಕ ರೇಖಾ ರೂಪದಿಂದ ಚಂದ್ರಮಂಡಲದಲ್ಲಿ ವ್ಯಾಪಿಸಿದ್ದರೆ ಆ ಚಂದ್ರಮಂಡಲಕ್ಕೆ ಸಮಾನವಾಗುತ್ತಿತ್ತು. ಶರತ್ಕಾಲದಲ್ಲಿ ಅರಳಿದ ಕಮಲದಲ್ಲಿ ಯಥೇಚ್ಛವಾಗಿ ಮಕರಂದವನ್ನು ಹೀರಿದ ದುಂಬಿಗಳು ಮತ್ತು ಮಕರಂದ ರಸಲೋಭದಿಂದ ಕಮಲವನ್ನು ಆವರಿಸಿಕೊಂಡಿದ್ದವು, ಅಂತಹ ಕಮಲಕ್ಕೆ ಸಮಾನವಾಗಿ ಸುಂದರವಾದ ವೆಂಕಟನಾಥರ ಮುಖವು ಕಾಣಿಸಬಹುದಾಗಿತ್ತು. ಶ್ರೀವೆಂಕಟನಾಥರ ಮುಖವೆಂಬ ನೆಪದಿಂದ ಕೂಡಿರುವ ಮಹಾಪಾತ್ರೆಯಲ್ಲಿ ವಿಸ್ತಾರವಾದ ಶಾಸ್ತ್ರನಿಧಿಯು ರಾರಾಜಿಸುತ್ತಿತ್ತು. ವೆಂಕಟನಾಥರ ಹುಬ್ಬುಗಳು ಚಂದ್ರನ ಕಳಂಕ ರೇಖೆಯಂತೆ ಕಪ್ಪಾಗಿದ್ದವು. ಹಣೆಯು ಚಂದ್ರನಂತೆ ಸುಂದರವಾಗಿತ್ತು. ಹಣೆಯೆಂಬ ಚಂದ್ರನಿಂದ ಕೆಳಕ್ಕೆ ಸುರಿದ ಅಮೃತವನ್ನು ಧರಿಸಿದವುಗಳಂತಿರುವ ತುಟಿಗಳು, ಹೃದಯವನ್ನು ಪ್ರವೇಶಿಸಲು ಸಾಧ್ಯವಾಗದೆ ಕಣ್ಣಿನ ಪ್ರಾಂತಭಾಗದಲ್ಲಿಯೇ ಅರೆಮರೆಯಾಗಿರುವ ರಜೋಗುಣದಂತಿರುವ ಕೆಂಪಾದ ಕಡೆಗಣ್ಣಿನ ನೋಟ, ಶಯನ ಮಾಡುವ ಗರ್ಭಗೃಹದಂತಿರುವ ಮುಖದಲ್ಲಿ, ಹಂಸತೂಲಿಕಾತಲ್ಪದಂತಿರುವ ನಾಲಿಗೆಯಲ್ಲಿ ಮಲಗಿರುವ ವಾಗಭಿಮಾನಿದೇವತೆಯ ಮುತ್ತಿನ ಸರದಂತಿರುವ ಹಲ್ಲಿನ ಸಾಲು, ತಮಿಳು ಲಿಪಿಯ ಓಂಕಾರ, ತೆಲುಗು ಲಿಪಿಯ ಶ್ರೀಕಾರಕ್ಕೆ ಸಮಾನವಾದ ಎರಡು ಕಿವಿಗಳು, ಕ್ಷೀರಸಾಗರ ಪುತ್ರಿಯಾದ ಲಕ್ಷ್ಮೀದೇವಿಯ ವಲ್ಲಭನಾದ ಶ್ರೀಕೃಷ್ಣನ ಅಂತಃಪುರದಂತಿರುವ, ಸರ್ವಜಗದ್ವ್ಯಾಪ್ತನಾದ ಅನಂತಕಲ್ಯಾಣಗುಣಪರಿಪೂರ್ಣನಾದ ಶ್ರೀಹರಿಯು ನಿವಾಸ ಮಾಡಿದ್ದರಿಂದ ವಿಶಾಲತೆಯನ್ನು ಹೊಂದಿದ ಹೃದಯ, ತನ್ನ ತಂದೆಯಾದ ನಾರಾಯಣನು ಹೃದಯ ಮಧ್ಯದಲ್ಲಿ ವಾಸ ಮಾಡುತ್ತಿರುವಾಗ, ತಂದೆಯ ಸಮೀಪದಲ್ಲಿಯೇ ಆಟವಾಡಲು ಬಂದಿರುವ ಮನ್ಮಥಕುಮಾರನಿಗೆ, ಅವನ ಸೇವಕರು ಹಾಕಿರುವ ವಿಶಾಲವಾದ ಕೂತುಕೊಳ್ಳುವ ಮಣೆಯಂತಿರುವ ಎದೆ, ಕಮಲದಂತಿರುವ ಮುಖ, ಮುಖಕಮಲದ ನಾಳ(ದಂಟು)ದಂತಿರುವ ಕತ್ತು, ಕಂಠದಲ್ಲಿರುವ ತೇಜೋರೂಪಿಯಾದ ಹರಿಗೆ ಅಲ್ಲಿಯೆ ವಾಸ ಮಾಡಲಿಕ್ಕೋಸ್ಕರ ಒಂದು ಮನೆಯಂತಿರುವ ಒಂದು ರೇಖೆ, ಜಾಗ್ರದವಸ್ಥೆಯನ್ನುಂಟುಮಾಡುವ ವಿಶ್ವರೂಪಿಯಾದ ಪರಮಾತ್ಮನು (ಬಲದ)ಕಣ್ಣಿನ ಕಡೆಗೆ ಹೋಗುವುದಕ್ಕೆ ಮೊದಲು ಅಲ್ಲಿದ್ದು ಹರಡುವುದಕ್ಕೋಸ್ಕರ ಒಂದು ಮನೆಯಂತಿರುವ ಒಂದು ರೇಖೆ, ಪ್ರಾಜ್ಞರೂಪಿಯಾದ ಪರಮಾತ್ಮನು ಸುಷುಪ್ತಿಯನ್ನುಂಟುಮಾಡಲು ಹೃದಯಪ್ರದೇಶಕ್ಕೆ ಹೊರಡುವ ಮೊದಲು ಅಲ್ಲಿದ್ದು ಅನಂತರ ಹೊರಡಲು ಅನುಕೂಲವಾಗುವಂತೆ ನಿರ್ಮಿಸಿದ ಮನೆಯಂತಿರುವ ಮತ್ತೊಂದು ರೇಖೆ, ಹೀಗೆ ಮೂರು ಮನೆಗಳಂತಿರುವ ಮೂರು ಕಂಠ ರೇಖೆಗಳು, 'ಸಮುದ್ರದಲ್ಲಿ ಯಾವಾಗಲೂ ಬಡಬಾನಲದಿಂದ ದಾಹವುಂಟಾಗುತ್ತದೆ. ಕಪಿಗಳು ಸಮುದ್ರದಲ್ಲಿ ಸೇತುವನ್ನು ಕಟ್ಟಿದ್ದಾರೆ. ಅಗಸ್ತ್ಯರು ಸಮುದ್ರವನ್ನು ಪಾನ ಮಾಡಿದ್ದಾರೆ. ಹೀಗೆ ತಾಪತ್ರಯಕ್ಕೆ ಒಳಗಾಗಿರುವ ಸಮುದ್ರದಲ್ಲಿ ನಾನಿರುವುದು ಒಳ್ಳೆಯದಲ್ಲವೆಂದು ಸಮುದ್ರವನ್ನು ಬಿಟ್ಟು ವೆಂಕಟನಾಥರನ್ನು (ಸಮುದ್ರದಲ್ಲಿ ಹುಟ್ಟಿದ) ಶಂಖವು ಶರಣು ಹೊಂದಿದೆಯೋ ಎಂಬ ಸಂದೇಹವನ್ನುಂಟುಮಾಡುವ ಶಂಖದಂತಹ ಕಂಠವು, ಯಾವಾಗಲೂ ಒಳ್ಳೆಯ ಕೆಲಸ, ದಾನ ಮುಂತಾದ್ದರಿಂದ ನಿರಂತರವಾಗಿ ಜಲಸಂಬಂಧದಿಂದ ಕೂಡಿದ ಕಮಲದಂತಿರುವ ಎರಡು ಕೈಗಳು, 'ಇವನು ಮೂರು ಲೋಕಗಳನ್ನೂ ಕಾಪಾಡುತ್ತಾನೆ ಎಂಬುದನ್ನು ತಿಳಿಸಿ ಕೊಡುವುದಕ್ಕೋಸ್ಕರವೋ ಎಂಬಂತೆ ಮೂರು ರೇಖೆಗಳಿಂದ (ತ್ರಿವಳಿಯಿಂದ) ರಾಜಿಸುತ್ತಿರುವ ಉದರ, ಮೃದುವಾದ ಎರಡು ಕಾಲುಗಳು, ಇವೆಲ್ಲವೂ ಶ್ರೀವೆಂಕಟನಾಥರಲ್ಲಿ ಯೌವನಪ್ರಾದುರ್ಭಾವದಿಂದ ಶೋಭಿಸಿದುವು'.

ಇಷ್ಟರಲ್ಲಿ ವೇದಶಾಸ್ತ್ರಾಧ್ಯಯನವೂ ಮುಗಿಯಿತು. ಇದರಿಂದಾಗಿ ಶ್ರೀವೇಂಕಟನಾಥರು ಋಷಿ ಋಣದಿಂದ ಬಿಡುಗಡೆ ಹೊಂದಿದಂತಾಯಿತು. ಇನ್ನು ಮುಂದೆ ಸಂತತಿಯನ್ನು ಪಡೆದು ಪಿತೃಋಣದಿಂದಲೂ, ಯಾಗವನ್ನು ಮಾಡಿ ದೇವಋಣದಿಂದಲೂ ಮುಕ್ತನಾಗಬೇಕೆಂದು ಶ್ರೀವೇಂಕಟನಾಥರು ಬಯಸಿದರು. ಅದೇ ಸಮಯದಲ್ಲಿ ಅಣ್ಣನಾದ ಗುರುರಾಜಾಚಾರ್ಯರು ತನ್ನ ಸಹೋದರನಿಗೆ ವಿವಾಹ ಮಂಗಳ ಮಹೋತ್ಸವವನ್ನು ನಡೆಸಬೇಕೆಂದು ಬಯಸಿದರು.

**ಸರಸ್ವತಿಯ ಗುಣಸೌಂದರ್ಯ** — ವೆಂಕಟನಾಥರು ವಾಸ ಮಾಡುತ್ತಿದ್ದ ಊರಿನ ಸಮೀಪದ ಅಗ್ರಹಾರ ಒಂದರಲ್ಲಿ ಶ್ರೇಷ್ಠಳಾದ ಒಬ್ಬ ಕನ್ಯೆಯಿದ್ದಳು. ಅವಳ ವಂಶವೂ ಉತ್ತಮವಾಗಿತ್ತು. ಎಲ್ಲಾ ರೀತಿಯಿಂದಲೂ, ಸದ್ಗುಣಗಳಿಂದಲೂ ಅವಳು ಶ್ರೀವೇಂಕಟನಾಥರಿಗೆ ಅನುರೂಪಳಾಗಿದ್ದಳು. ಸಮುದ್ರಪತ್ನಿಯಾದ ಸರಸ್ವತಿ (ನದಿ)ಗೆ ಸಮಾನಳಾಗಿರುವುದರಿಂದಲೂ, ವಿದ್ಯಾದೇವಿಯಾದ ಸರಸ್ವತಿಯ ಅನುಗ್ರಹದಿಂದ ಹುಟ್ಟಿದ್ದರಿಂದಲೂ, ಸರಸ್ಸಿನಂತೆ ಆಳವಾದ ನಾಭಿಯಿಂದ ಕೂಡಿದ್ದರಿಂದಲೂ ಆ ಕನ್ಯೆಯ 'ಸರಸ್ವತೀ' ಎಂಬ ಹೆಸರು ಅನ್ವರ್ಥಕವಾಗಿತ್ತು. ವಿವೇಕ, ನಿಪುಣತೆ, ವಿನಯ, ದಾಕ್ಷಿಣ್ಯ, ಪತಿಯಲ್ಲಿ ಪರಮಾತ್ಮನ ಅನುಸಂಧಾನ ಮುಂತಾದ ಸ್ವಾಭಾವಿಕವಾದ ಉತ್ತಮ ಗುಣಗಳು ಅವಳಲ್ಲಿ ಸೇರಿಕೊಂಡಿದ್ದವು. ಇಂತಹ ಮನೋಹರವಾದ ಸದ್ಗುಣಗಳು ಒಂದೇ ಸ್ಥಳದಲ್ಲಿ ಸೇರಿರುವುದು ಬೇರೆಲ್ಲಿಯೂ ಕಂಡು ಬರುತ್ತಿರಲಿಲ್ಲ. ಅಂತಹ ಉತ್ತಮ ಗುಣಗಳು ಅವಳಲ್ಲಿ ಇರುವುದರಿಂದ ಅದಕ್ಕೆ ತಕ್ಕಂತಹ ಸೌಂದರ್ಯವೂ ಅವಳಲ್ಲಿತ್ತು. ಅವಳ ಪಾದಗಳೆರಡೂ ಚಿಗುರೆಲೆಯ ಕಾಂತಿಯನ್ನು ಪಡೆದಿದ್ದವು. ಕಾಲಿನ ಗಂಟುಗಳು ಗೂಢವಾಗಿದ್ದು ಹೊರಗೆ ಕಾಣಿಸುತ್ತಿರಲಿಲ್ಲ. ಉಗುರುಗಳು ರತ್ನದ ಕಾಂತಿಯಂತಹ ಕಾಂತಿಯಿಂದ ಹೊಳೆಯುತ್ತಿದ್ದವು. ಕಾಲಿನ ಮೊಣಗಂಟುಗಳು ಆಮೆಯ ಬೆನ್ನಿನ ಆಕೃತಿಯನ್ನು ಧಿಕ್ಕರಿಸುತ್ತಿದ್ದುವು. ತೊಡೆಗಳೆರಡೂ ಆನೆಯ ಸೊಂಡಲಿನಂತಿದ್ದವು. ಕಟಿಪುರೋಭಾಗವು ಘನ ಗಂಭೀರವಾಗಿತ್ತು. ಹೊಟ್ಟೆಯು ತೆಳುವಾಗಿ ಕೃಶವಾಗಿತ್ತು. ಕೈಗಳೆರಡೂ ಕಮಲಗಳೇ ಆಗಿದ್ದವು. ಎರಡು ಭುಜಗಳು ತಾವರೆಯ ಉದ್ದವಾದ ದಂಟುಗಳಂತಿದ್ದವು. ಹೊಕ್ಕಳು ಆಳವಾಗಿತ್ತು. ನಡಿಗೆಯು ಮೋಹಕವಾಗಿತ್ತು. ಕಂಠವು ಹೋಲಿಕೆಗೆ ಸಿಗುವಂತಿರಲಿಲ್ಲ. ಅಂಗುಳಗಳು (ತಾಲುಗಳು) ರತ್ನದ ಮಣಿಗಳಂತೆ ಇದ್ದವು. ಮುಖವು ಚಂದ್ರನಿಗೆ ಪಾಠ ಹೇಳಿಕೊಡಲು ಉದ್ಯುಕ್ತವಾಗಿತ್ತು. ಹಲ್ಲುಗಳು ಕುಂದಪುಷ್ಪಗಳಂತೆ ಇದ್ದವು. ಅಧರವು (ತುಟಿಯು) ಸುಧೆಯನ್ನು ಒಳಗೊಂಡಿತ್ತು. ಮೂಗು ನಸು ಎತ್ತರವಾಗಿದ್ದು ಸಂಪಿಗೆಯ ಮೊಗ್ಗನ್ನು ಹೋಲುತ್ತಿತ್ತು. ಹಣೆಯ ಬೊಟ್ಟು ಮನ್ಮಥನ ಚಿತ್ರದಂತಿತ್ತು. ವಿಶಾಲವಾದ ಹಣೆಯು ಮನ್ಮಥನ ಉಯ್ಯಾಲೆಯಂತಿತ್ತು. ನಾಲ್ಕು ಜಡೆಗಳು ಆ ಉಯ್ಯಾಲೆಯ ನಾಲ್ಕು ಮಧ್ಯಭಾಗದಲ್ಲಿ ಜೋಲಾಡುತ್ತಿರುವ ರತ್ನಗುಚ್ಛದಂತಿತ್ತು. ಈ ರೀತಿಯ ಸೌಂದರ್ಯಸಂಪನ್ನಳಾದ ಆ ಸರಸ್ವತಿಯು ಅನುಪಮ ಸುಂದರಿಯಾಗಿ ಕಂಗೊಳಿಸುತ್ತಿದ್ದಳು.

**ಸರಸ್ವತಿ ಮತ್ತು ಶ್ರೀವೇಂಕಟನಾಥರ ವಿವಾಹಸಮಾರಂಭ** — ವಸಂತಕಾಲವು ಬಂದಿತು. ಶ್ರೀವೇಂಕಟಾರ್ಯರು ಸಮಾವರ್ತನಕ್ಕಿಂತ ಮೊದಲು ಮಾಡಬೇಕಾಗಿರುವ ಪ್ರಾಜಾಪತ್ಯ, ಸೌಮ್ಯ ಆಗ್ನೇಯ, ವೈಶ್ವದೇವ ಎಂಬ ಬ್ರಹ್ಮಚಾರಿಗಳ ನಾಲ್ಕು ವ್ರತಗಳನ್ನು ಮುಗಿಸಿ, ಸಂತೋಷದಿಂದ ಸಮುದ್ರಸ್ನಾನವನ್ನೂ ಮುಗಿಸಿಕೊಂಡು ಬಂದರು. ಪ್ರತಿದಿವಸವೂ ಶ್ರೀಮಧ್ವಾಚಾರ್ಯರು ರಚಿಸಿರುವ ಬ್ರಹ್ಮಸೂತ್ರಭಾಷ್ಯವನ್ನು ಬರೆಯುತ್ತಾ ಒಳ್ಳೆಯ ರೀತಿಯಿಂದ ಕಾಲಕ್ಷೇಪ ಮಾಡುತ್ತಿದ್ದರು. ನಂತರ ಮದುವೆಯಾಗಬೇಕೆಂಬ ಬಯಕೆಯುಂಟಾದಾಗ ಹಿಂದೆ ಹೇಳಿರುವ ಸರಸ್ವತಿ ಎಂಬ ಕನ್ಯಾಮಣಿಯ ಗುಣಗಳನ್ನು ಕೇಳಿದರು. ಅಣ್ಣಂದಿರಾದ ಗುರುರಾಜಾಚಾರ್ಯರೇ ಮೊದಲಾದವರು ಕನ್ಯೆಯ ವಂಶ ಗುಣ ಮುಂತಾದುವುಗಳನ್ನು ತಿಳಿದು ಈ ಸಂಬಂಧವು ಆಗಬಹುದೆಂದು ಸಂತೋಷದಿಂದ ಒಪ್ಪಿ ವಿವಾಹದಿನವನ್ನೂ ನಿರ್ಣಯಿಸಿದರು. 'ನಾವು ಇಂತಹ ದಿವಸ ವಿವಾಹಕ್ಕಾಗಿ ನಿಶ್ಚಯವಾಗಿಯೂ ಬರುವವರಿದ್ದೇವೆ.

ನೀವು ವಿವಾಹಮಹೋತ್ಸವದ ತಯಾರಿಯನ್ನು ನಡೆಸುವುದು,' ಎಂಬ ಅರ್ಥ ಬರುವ ಶುಭಮಂಗಳಕರವಾದ ಲಗ್ನಪತ್ರಿಕೆಯನ್ನು ಬರೆದು ವಧುವಿನ ಮನೆಯವರಿಗೆ ಕಳುಹಿಸಿದ್ದೂ ಆಯಿತು. ಕನ್ಯೆಯ ಮಾತಾಪಿತೃಗಳಿಗೂ ಬಂಧುಗಳಿಗೂ ಬಹಳ ಸಂತೋಷ ಉಂಟಾಯಿತು. ಅವರು ವಿವಾಹ ಸಾಮಗ್ರಿಯನ್ನು ಸಂಪಾದಿಸಿದರು. ಇತ್ತ ಶ್ರೀವೇಂಕಟನಾಥರು ತಾಯಿ ಗೋಪಿಕಾಂಬೆ, ಅಣ್ಣ ಗುರುರಾಜ, ಸ್ನೇಹಿತರು ಮತ್ತು ಬಂಧುಗಳೊಡನೆ ವೈಭವ-ದಿಂದ, ಸಂಪದ್ಭರಿತವಾದ ಕನ್ನಿಕೆಯು ಇರುವ ಅಗ್ರಹಾರಕ್ಕೆ ಬಂದು ಸೇರಿದರು.



ವಿದ್ವತ್ಕುಲಾವತಂಸ,
ಮಹಾಕವಿ ಶ್ರೀಮನ್ನಾರಾಯಣಾಚಾರ್ಯೇಣ ರಚಿತಂ

# ಶ್ರೀಮದ್ರಾಘವೇಂದ್ರವಿಜಯ ಮಹಾಕಾವ್ಯಂ

## ಪಂಚಮ ಸರ್ಗ

**ಅವತಾರಿಕೆ :** ಈ ಸರ್ಗದಲ್ಲಿ ಶ್ರೀವೇಂಕಟನಾಥಾಚಾರ್ಯರು ತಮ್ಮ ವಿವಾಹದ ನಂತರದಲ್ಲಿ ಪತ್ನಿಯೊಡನೆ ಬಂಧು ಬಾಂಧವರ ಸಮೇತರಾಗಿ ತಮ್ಮ ಸ್ವಂತ ಊರಿಗೆ ಹಿಂತಿರುಗುತ್ತಿರುವಾಗ ದಾರಿಯಲ್ಲಿ ಉದ್ಯಾನವನದಲ್ಲಿ ಸ್ತ್ರೀಯರುಗಳು ಮಾಡುತ್ತಿದ್ದ ದೋಹಲೋತ್ಸವವನ್ನು ನೋಡುತ್ತಾ ತಮ್ಮ ಗೃಹಪ್ರವೇಶ ಮಾಡಿದರು ಎಂದು ತಿಳಿಸುತ್ತಾರೆ. ಮೊದಲನೆಯ ಪದ್ಯದಲ್ಲಿ ವಧುವಿನ ಮಾತಾಪಿತೃಗಳು ವರನನ್ನು ವೀಕ್ಷಿಸಿದರು ಎಂದು ವರ್ಣಿಸುತ್ತಾರೆ.

**ಅಥ ವಿವಾಹಸಮುತ್ಸುಕಕನ್ಯಕಾಗುಣಮಣೀಪಿತರೌ ನಿಜಮಂದಿರಾತ್ ।**
**ಅಗಮತಾಂ ಅಭಿವೀಕ್ಷಿತುಂ ಆದರಾದ್ವರಮುಪಾಗತಮಾತ್ಮಪುರೋದರಮ್ ॥೧॥**

**ತಾತ್ಪರ್ಯ :** ಶ್ರೀವೇಂಕಟನಾಥರು ತಾಯಿ ಮತ್ತು ಇತರ ಬಂಧುಗಳೊಡನೆ ಸಂಭ್ರಮದಿಂದ ಕನ್ಯಕೆಯ ಊರಿನ ಅಗ್ರಹಾರವನ್ನು ಪ್ರವೇಶಿಸಿ, ತಮಗಾಗಿ ಏರ್ಪಡಿಸಿದ್ದ ಬಿಡಾರದ ಮನೆಯನ್ನು ಪ್ರವೇಶಿಸಿದರು. ಶ್ರೇಷ್ಠ ಗುಣಗಳಿಂದ ಕೂಡಿದ ಸರಸ್ವತಿಯ ತಂದೆ ತಾಯಿಗಳು ಮಗಳ ವಿವಾಹವು ಯಾವಾಗ ಆಗುವುದೋ ಎಂದು ತುಂಬಾ ಉತ್ಕಂಠಿತರಾಗಿದ್ದರು. (ಸರಸ್ವತಿಯೂ ತನ್ನ ವಿವಾಹದ ವಿಷಯದಲ್ಲಿ ತುಂಬ ಉತ್ಕಂಠತೆಯಿಂದ ಕೂಡಿದ್ದಳು.) ಅವಳ ಸುಖ ಸೌಭಾಗ್ಯಗಳನ್ನು ನೋಡಿ ಆನಂದಿಸಬೇಕಾದ ಅವಳ ತಂದೆ ತಾಯಿಯರು ವರನು ತಮ್ಮ ಊರಿಗೆ ಆಗಮಿಸಿದನೆಂಬ ವಿಷಯವನ್ನು ಕೇಳಿ ಬಹಳ ಸಂತೋಷಭರಿತರಾಗಿ ವರನನ್ನು ನೋಡುವ ಸಲುವಾಗಿ ತಮ್ಮ ಮನೆಯಿಂದ ಹೊರಟು ವರನು ಇಳಿದುಕೊಂಡಿದ್ದ ಬಿಡಾರದ ಮನೆಗೆ ಹೊರಟರು.

**ದ್ರುತಮುಪೇತ್ಯ ವರಂ ಪಿತರೌ ಚಿರಂ ಮುಹುರವೇಕ್ಷ್ಯ(೧) ಮುದಂ ಸಮವಾಪತುಃ ।**
**ಪದಯುಗಪ್ರಣತಸ್ಯ ಪಟೀಯ(೨)ಸೋಽಸ್ಯ ಚತುರಸ್ಯ ಸಮಾಶಿಷಮೂಚತುಃ ॥೨॥**

(ಗು. ಸೇ ಪಾಠಾಂತರ – (೧) ಚಿರಾನ್ಮುಹುರವೇಕ್ಷ್ಯ (೨) ಯವೀಯಸೋಽಸ್ಯ)

**ತಾತ್ಪರ್ಯ :** ಶ್ರೀವೇಂಕಟನಾಥಾಚಾರ್ಯರನ್ನು ನೋಡುವ ಕುತೂಹಲದಿಂದ ವಧುವಿನ ತಂದೆ ತಾಯಿಗಳು ಬೇಗನೆ ಬಂದರು. ಶ್ರೀವೇಂಕಟನಾಥರನ್ನು ಬಹಳ ಹೊತ್ತು ಮತ್ತೂ ಮತ್ತೂ ನೋಡಿದರು. ಸಂತೋಷಪಟ್ಟರು. ಆಗ ಸರ್ವಸಮರ್ಥರಾದ, ಬಹಳ ಬುದ್ಧಿವಂತರಾದ ಶ್ರೀವೇಂಕಟನಾಥರು ತಾವು ವಯಸ್ಸಿನಲ್ಲಿ ಕಿರಿಯರಾದುದರಿಂದ ತಮ್ಮ ಭಾವೀ ಅತ್ತೆ ಮಾವಂದಿರ ಕಾಲಿಗೆ ನಮಸ್ಕಾರ ಮಾಡಿದರು. ಅವರಿಬ್ಬರೂ ತತ್ಕಾಲಕ್ಕೆ ಯೋಗ್ಯವಾದ ಆಶೀರ್ವಾದವನ್ನು ಮಾಡಿದರು.

**ಅವತರಣಿಕೆ :** ಅನ್ಯೋನ್ಯ ಗೌರವ ಸತ್ಕಾರ–ಅಲ್ಲಿ ಬಂಧು ಮಂದಿರದಲ್ಲಿ ನಾನಾ ಬಗೆಯ ಬಂಧುವರ್ಗದ ಜನರು ಬಂದು ಸೇರಿರುವಾಗ, ಬಂಧುಗಳೆಲ್ಲರೂ ವಯಸ್ಸಿನ ಕ್ರಮವನ್ನು ಅನುಸರಿಸಿ ಆದರದಿಂದ ಪರಸ್ಪರ ಗೌರವವನ್ನು ಸೂಚಿಸಿದರು ಎಂದು ಹೇಳುತ್ತಾರೆ.

**ಸಮಸಮಾಃ ಪರಿಷಸ್ವಜಿರೇ ಮುದಾऽಧಿಕಸಮಾನ್ ಪೃಥುಕಾಃ ಪ್ರಣಮಂತಿ ಚ ।**
**ಬಹುವಯೋಭರಿತಾ ಬಹುಲಾಶಿಷಂ ಜಗರಿರೇ (ಜಗದಿರೇ)**
**ವಿವಿಧೇಷ್ವಪಿ ಬಂಧುಷು ॥೩॥**

**ತಾತ್ಪರ್ಯ :** ಅಲ್ಲಿ ಸೇರಿರುವ ಅನೇಕ ವಿಧರಾದ ಬಂಧು ಜನರಲ್ಲಿ ಸಮಾನ ವಯಸ್ಸಿನವರು ಒಬ್ಬರು ಇನ್ನೊಬ್ಬರನ್ನು ಪರಸ್ಪರ ಅಪ್ಪಿಕೊಂಡರು. ವಯಸ್ಸಿನಲ್ಲಿ ಕಿರಿಯರಾದವರು ತಮಗಿಂತ ಹಿರಿಯರಾದವರನ್ನು ನಮಸ್ಕರಿಸಿದರು. ಬಹಳ ವಯಸ್ಸಾದವರು ವೃದ್ಧರು ಕಿರಿಯರು ತಮಗೆ ನಮಸ್ಕಾರ ಮಾಡಿದಾಗ ಹೃತ್ಪೂರ್ವಕವಾಗಿ ಬಹಳ ಆಶೀರ್ವಾದವನ್ನು ಮಾಡಿದರು. ಈ ರೀತಿಯಾಗಿ ಅವರವರ ಅಂತಸ್ಸಿಗೆ ತಕ್ಕಂತೆ ಪರಸ್ಪರ ಗೌರವಾದರಗಳಿಂದ ಎಲ್ಲರೂ ಒಬ್ಬರು ಮತ್ತೊಬ್ಬರನ್ನು ಪರಸ್ಪರ ಪುರಸ್ಕರಿಸಿದರು.

**ಅವತರಣಿಕೆ :** ವರನ ಕನ್ಯಾಗೃಹ ಪ್ರವೇಶ – ಅನಂತರದಲ್ಲಿ ಕನ್ಯೆಯ ಮಾತಾಪಿತೃಗಳು ವರ ಮತ್ತು ಅವನ ಬಂಧುಗಳಿಗೆ ಬಿಸಿ ಬಿಸಿಯಾದ ಊಟ ಮಾಡಿಸಲು ತಮ್ಮ ಮನೆಗಿಂತಲೂ ವಿಶಾಲವಾದ ಇನ್ನೊಂದು ಮನೆಗೆ ಎಲ್ಲ ಬಂಧು ಬಾಂಧವರನ್ನು ಕರೆದೊಯ್ದರು ಎಂದು ವರ್ಣಿಸುತ್ತಾರೆ.

**ನಿಜಗೃಹೋಪಮನ್ಯೈಜನಿಕೇತನಂ ಜಿತವಿಶಾಲಪುರಂ ನಿಜಸಂಪದಾ ।**
**ಅನಯತಾಂ ವಿನಯಾವನತಂ ವರಂ ಸಸುಹೃದಂ ಸುಹೃದಾ ಸಹ ದಂಪತೀ ॥೪॥**

**ತಾತ್ಪರ್ಯ :** ಕನ್ಯೆಯ ಮಾತಾಪಿತೃಗಳು ತಮ್ಮ ಮಗಳ ವಿವಾಹದ ವಿಷಯದಲ್ಲಿ ಬಹಳ ಆಸಕ್ತಿಯನ್ನು ಹೊಂದಿದ್ದರು. ಅವರು ಮೊದಲು ವರನಿಗೂ, ವರನ ಬಂಧು ಬಾಂಧವರಿಗೂ ಬೇರೊಂದು ಮನೆಯಲ್ಲಿ ವಾಸಕ್ಕೆ ಏರ್ಪಾಡು ಮಾಡಿದ್ದರು. ಆ ಮನೆಯಿಂದ ಬಿಸಿ ಊಟಕ್ಕಾಗಿ

ತಮ್ಮ ಮನೆಯಂತೆಯೇ ಇದ್ದ ಮತ್ತೊಂದು ಮನೆಗೆ ಕರೆದೊಯ್ದರು. ಆ ಮನೆಯು ವರನೂ ವರನ ಬಂಧುಗಳೂ ಮೊದಲು ಇಳಿದುಕೊಂಡ ಮನೆಯಂತೆಯೇ ಇದ್ದಿತು. ವೈಭವದಿಂದ ಉಜ್ಜಯಿನಿಯನ್ನು ಮೀರಿಸುವಂತಿತ್ತು. ವರನು ಲಲಿತವಾಗಿ ವಿನಯದಿಂದ ಸ್ವಲ್ಪ ಬಾಗಿದ್ದನು. ಅವನನ್ನೂ, ಅವನ ಬಂಧುಗಳನ್ನೂ, ಮಿತ್ರರುಗಳನ್ನೂ ತಮ್ಮ ಬಂಧು ಬಾಂಧವರಿಂದ ಒಡಗೂಡಿ ಬಂದು ಸುಂದರವಾದ ಮತ್ತೊಂದು ಮನೆಗೆ ಕನ್ಯೆಯ ಮಾತಾಪಿತೃಗಳು ಕರೆದೊಯ್ದು ವಾಸಿಸಲು ಅನುಕೂಲ ಮಾಡಿಕೊಟ್ಟರು.

**ವಿಶೇಷಾಂಶ :** ಈ ಶ್ಲೋಕದ ಗುರುಸೇವಾ ವ್ಯಾಖ್ಯಾನದಲ್ಲಿ ನಿಜಗೃಹೋಪಮನ್ಯೈಜನಿಕೇತನಂ ಎಂಬ ಪದಕ್ಕೆ ಅರ್ಥ ಬರೆಯುತ್ತಾ ನಿಜಗೃಹೋಪಮಂ ವರಗೃಹ ಸದೃಶಂ ಎಂದು ಬರೆದಿರುತ್ತಾರೆ. ಅದನ್ನು ನೋಡಿದಾಗ ವರಗೃಹೋಪಮನ್ಯೈಜನಿಕೇತನಂ ಎಂಬ ಪಾಠವಿರಬೇಕೆಂದು ಭಾಸವಾಗುತ್ತದೆ. ಅಥವಾ ನಿಜ ಪದದಿಂದ ಸ್ಮರಣೆಗೆ ಬಂದಿರುವ ವರನನ್ನು ಎಂಬುದಾಗಿಯೂ ಭಾವಿಸಬಹುದು ಎಂದು ತೋರುತ್ತದೆ.

**ಅವತರಣಿಕೆ :** ಆತಪ ಭೋಜನಂ–ಬಿಸಿ ಊಟ–ಕವಿಗಳು ಈ ಪದ್ಯದಲ್ಲಿ ವರಮಹೋದಯನಿಗೆ ನೀಡಿದ ಬಿಸಿಊಟದ ಬಗ್ಗೆ ವರ್ಣಿಸುತ್ತಾರೆ.

**ಬಹುವಿಧಂ ಪರಮಾನ್ನರಸಾಯನಂ ವರನರೋಽಭ್ಯವಹೃತ್ಯ ತದಾಹೃತಮ್ ।**
**ನಿಬಿಡಪಟ್ಟವಿತಾನಕಶೀತಲೇಪ್ಯಹಹ ತುಷ್ಟುವುರಾತಪಭೋಜನಮ್ ॥೫॥**

**ತಾತ್ಪರ್ಯ :** ದಪ್ಪವಾದ ರೇಷ್ಮೆಬಟ್ಟೆ, ನಾರುಬಟ್ಟೆಗಳ ಮೇಲ್ಕಟ್ಟಿನಿಂದ ಕೂಡಿದ ತಂಪಾದ ಮದುವೆ ಚಪ್ಪರದ ನೆರಳಿನಲ್ಲಿ ವರನಾದ ಶ್ರೀವೇಂಕಟನಾಥಾಚಾರ್ಯನ ಬಂಧು ಜನರು ಕುಳಿತಿದ್ದರು. ವಧುವಿನ ಕಡೆಯ ಬಂಧು ಜನರು ಅನೇಕ ವಿಧವಾದ ಪರಮಾನ್ನ ಮತ್ತು ಇತರ ಷಡ್ರಸಭರಿತವಾದ ಭಕ್ಷ್ಯ ಭೋಜ್ಯ ಪದಾರ್ಥಗಳನ್ನು ತಂದು ಬಡಿಸಿದರು. ಹೀಗೆ ತಂಪಾದ ಬಿಸಿ ಊಟ! ಏನು ಚೆನ್ನಾಗಿದೆ! ಎಂದು ಹೇಳುತ್ತಾ ಈ ರೀತಿಯಾದ ಭೋಜನವನ್ನು ನೀಡಿದ ದಂಪತಿಗಳನ್ನು ಹೊಗಳಿದರು. (ಮದುವೆಯ ಸಂಪ್ರದಾಯದಲ್ಲಿ ಬಿಸಿ ಊಟ ಎಂಬ ಒಂದು ವಿನೂತನ ಊಟದ ಸಂಪ್ರದಾಯವಿದೆ. ಬಿಸಿಲಿನಲ್ಲಿ ಈ ರೀತಿ ಊಟ ಮಾಡದಿದ್ದರೂ ಆ ಊಟಕ್ಕೆ ಬಿಸಿ ಊಟ ಎಂದು ಹೆಸರು. ಈ ರೀತಿಯಾಗಿ ತಂಪಿನಲ್ಲಿ ಕುಳಿತು ಸಂಪ್ರದಾಯದ ಬಿಸಿ ಊಟವನ್ನು ಸವಿಯುತ್ತಿದ್ದ ವರನ ಕಡೆಯವರು ಆಹಾ ಬಿಸಿ ಊಟ! ಏನು ಬಿಸಿಯಾಗಿದೆ! ಎಂಬುದಾಗಿ ವಿನೋದವಾಗಿ ಹಾಸ್ಯ ಮಾಡುತ್ತಾ ಊಟ ಮಾಡಿದರು ಎಂದು ಅಭಿಪ್ರಾಯ. ಅನ್ವಯದಲ್ಲಿ ಸ್ವಲ್ಪ ವ್ಯತ್ಯಾಸವಿದೆಯೇ ಹೊರತು ತಾತ್ಪರ್ಯದಲ್ಲಿ ಎರಡೂ ವ್ಯಾಖ್ಯಾನಗಳಲ್ಲಿ ವ್ಯತ್ಯಾಸವಿಲ್ಲ.

## ರಾತ್ರಿಯಲ್ಲಿ ವಧೂಗೃಹದಲ್ಲಿಯೇ ಎಲ್ಲರಿಗೂ ವಾಸ

**ಅವತರಣಿಕೆ :** ಈಗ ಕವಿಗಳು ಬಿಸಿ ಊಟ ಮಾಡಿದ ಎಲ್ಲರೂ ರಾತ್ರಿಯಲ್ಲಿ ಅಲ್ಲಿಯೇ ವಾಸಿಸಿದರು ಎಂದು ವರ್ಣಿಸುತ್ತಾರೆ.

**ಅಭಿದಿದೃಕ್ಷುಜನೇ ವರಮಾದರಾದುಪಗತೇ ಭವನಂ ತದನುಜ್ಞಯಾ ।**
**ಕೃತಪರಸ್ಪರಸಂಕಥನೋ ಜನಃ ಸುಖಮುವಾಸ ನಿಶಾಮಿಹ ವೇಶ್ಮನಿ ॥೬॥**

**ತಾತ್ಪರ್ಯ :** ವರನನ್ನು ನೋಡಬೇಕೆಂಬ ಆಸೆಯಿಂದ ಪ್ರೀತಿಯಿಂದ, ಜನರು ಶ್ರೀವೇಂಕಟನಾಥರು ಉಳಿದುಕೊಂಡಿದ್ದ ಮನೆಗೆ ಬರಲಾರಂಭಿಸಿದರು. ಅವರು ಕನ್ಯೆಯ ಮಾತಾಪಿತೃಗಳನ್ನು ಕೇಳಿ ಅವರ ಒಪ್ಪಿಗೆಯನ್ನು ಪಡೆದು ವರನನ್ನು ನೋಡಿ ಬಹಳ ಸಂತೋಷಪಟ್ಟರು. ವಧೂವರರ ಸಂಬಂಧಿ ಜನರು ಆ ದಿನ ರಾತ್ರಿ ಅಲ್ಲಿಯೇ ವಾಸ ಮಾಡಿ ಪರಸ್ಪರ ಯೋಗಕ್ಷೇಮ ವಿಚಾರ ಮಾಡುತ್ತಾ ಸುಖವಾಗಿ ಕಾಲ ಕಳೆದರು.

## ಎಲ್ಲರ ಪ್ರಾತರಾಹ್ನಿಕ :

**ಅವತರಣಿಕೆ :** ಕವಿಗಳು ನಂತರದಲ್ಲಿ ಬೀಗರುಗಳು ಮಾರನೆಯ ದಿವಸ ಪ್ರಾತಃಕಾಲದಲ್ಲಿ ಪ್ರಾತರಾಹ್ನೀಕವನ್ನು ಮಾಡಿಕೊಂಡರು ಎಂದು ವರ್ಣಿಸುತ್ತಾರೆ.

**ತ್ರಿದಿವ (ದಶ) ದೇವದಿಶಾಧರಕಂದರೇ ಸಮುದಿತೇ ನಲಿನೀಪರಿಣೇತರಿ ।**
**ತ್ರಿಪದಯಾ ಸವಿತಾರಮೃಚಾ ವರಂ ಪರಿಣಮಂ (ಣಿವಂ)**
**ತಮುಪಾಸತ ತ (ಸ)ಜ್ಜನಾಃ ॥೭॥**

**ತಾತ್ಪರ್ಯ :** ಮರುದಿವಸ ಪೂರ್ವದಿಕ್ಕಿನಲ್ಲಿ ಕಮಲಿನೀನಾಥನು ಉದಯಿಸಿದನು. (ಸೂರ್ಯದೇವನು ಕಮಲಿನಿಯನ್ನು ವಿವಾಹವಾದವನು ಎಂಬುದು ಧ್ವನಿ) ಆಗ ವಿದ್ವಾಂಸರುಗಳಾದ ಸಂಬಂಧೀ ಬಂಧುಜನರು ಸ್ನಾನಾದಿಗಳನ್ನು ಮಾಡಿ ತಮ್ಮ ಆಹ್ನೀಕವನ್ನು ಮುಗಿಸಿ ಗಾಯತ್ರೀಮಂತ್ರ ಜಪವನ್ನು ಮಾಡುತ್ತಿದ್ದ ಶ್ರೀವೇಂಕಟನಾಥಾಚಾರ್ಯರ ಬಳಿಯಲ್ಲಿ ಕುಳಿತು ಸ್ವಸ್ತಿವಾಚನ ಮಂತ್ರಗಳನ್ನು ಜಪ ಮಾಡಿದರು.

## ವಿವಾಹಕಾರ್ಯ ಆರಂಭ :

**ವಸನವಾಹನಕುಂಕುಮಚಂದನೈಃ ವಿವಿಧರಮ್ಯರಸೈರಭಿಪೂಜ್ಯ ತಂ (ರಸೈಃ ಪರಿಪೂಜ್ಯತಂ)।**
**ತ್ವರಿತಮಾರಭತಾಭ್ಯುದಯೋತ್ಸವಂ ದ್ವಿಜವರೈಃ ಪಿತರೋ ಸಹ ಸದ್ಮನಿ ॥೮॥**

**ತಾತ್ಪರ್ಯ :** ವರಮಹಾಶಯನ ಕಾಶೀಯಾತ್ರೆಯ ಸಮಯದಲ್ಲಿ ವಧುವಿನ ತಂದೆ ತಾಯಿಗಳು ಉತ್ತಮ–ವಾದ ನೂತನ ವಸ್ತ್ರ, ಪಲ್ಲಕ್ಕಿ ಮುಂತಾದ ವಾಹನ, ಕುಂಕುಮ, ಗಂಧ, ಅತಿಮಧುರ ಕ್ಷೀರಾದಿ ರಸಗಳಿಂದಲೂ ಸುವರ್ಣಾಲಂಕಾರಾದಿಗಳಿಂದಲೂ, ವರನನ್ನು ಪೂಜಿಸಿದರು. ಅನಂತರ ವಧುವಿನ ತಂದೆ ತಾಯಿಗಳು ತಮ್ಮ ಮನೆಯಲ್ಲಿ ಶ್ರೇಷ್ಠ ಬ್ರಾಹ್ಮಣರೊಡನೆ ಅಷ್ಟವರ್ಗ ಎಂಬ ಅಭ್ಯುದಯೋತ್ಸವವನ್ನು ಮಾಡಲಾರಂಭಿಸಿದರು.

## ಕುಲದೇವತಾದ್ಯಾರಾಧನಂ (ದೇವರ ಸಮಾರಾಧನೆ) :

**ಅವತರಣಿಕೆ :** ಆಗ ದಂಪತಿಗಳು ನವಗ್ರಹ ಪೂಜೆಯನ್ನೂ ಕುಲದೇವತಾ ಪೂಜೆಯನ್ನೂ ಮಾಡಿದರೆಂದು ಹೇಳುತ್ತಾರೆ.

**ಸಮಸ್ತ*ವಸ್ತೂನಿ ನವಗ್ರಹೇಭ್ಯೋಽಪ್ಯನುಗ್ರಹಾರ್ಥಂ ನಿರವಗ್ರಹಾರ್ಥಮ್ ।**
**ಕುತೂಹಲಾತ್ತೌ ಕುಲದೇವತಾಯೈ ಸಮರ್ಪಯಾಮಾಸತುರಾದರೇಣ ॥೯॥**

(ಗು.ಸೇ. ಪಾಠ – * ಸಮಗ್ರ ವಸ್ತೂನಿ)

**ತಾತ್ಪರ್ಯ :** ವಧುವಿನ ತಂದೆ ತಾಯಿಯರು ನವಗ್ರಹ ದೇವತಾ ಮತ್ತು ಕುಲದೇವತೆಗಳ ಅನುಗ್ರಹದಿಂದ ವಿವಾಹಕಾರ್ಯವನ್ನು ನಿರ್ವಿಘ್ನವಾಗಿ ನಡೆಸಬೇಕೆಂದು ನಿಶ್ಚಯಿಸಿ ಆದಿತ್ಯಾದಿ ನವಗ್ರಹ ದೇವತೆಗಳಿಗೆ ಗೋ ಅಕ್ಕಿ ಮುಂತಾದ ಧಾನ್ಯಗಳನ್ನಿಟ್ಟು, ಆ ದೇವತೆಗಳನ್ನು ಪೂಜಿಸಿ, ನಿರ್ವಿಘ್ನತೆಯನ್ನೂ ಅನುಗ್ರಹವನ್ನೂ ಪ್ರಾರ್ಥಿಸಿದರು. ಇದೇ ರೀತಿಯಾಗಿ ಕುಲದೇವತೆಯ ಎದುರು ಪೂರ್ಣಫಲಾದಿಗಳನ್ನು ಸಮರ್ಪಿಸಿ ಮಂಗಲ ದ್ರವ್ಯಗಳಿಂದ ಪೂಜಿಸಿ ವಿವಾಹ ಕಾರ್ಯದಲ್ಲಿ ನಿರ್ವಿಘ್ನತೆಯನ್ನೂ, ವಧೂವರರಿಗೆ ಕುಲದೇವತೆಯ ಅನುಗ್ರಹವನ್ನೂ ಪ್ರಾರ್ಥಿಸಿದರು.

## ಕನ್ಯಾದಾನ ವರ್ಣನೆ :

**ಅವತರಣಿಕೆ :** ಅನಂತರ ಮಾರನೆಯ ದಿನದಂದು ವಧುವಿನ ತಂದೆಯು ವಿವಾಹ ಮಹೋತ್ಸವವನ್ನು ಕನ್ಯಾದಾನಾದಿಗಳನ್ನೂ ನೆರವೇರಿಸಿದರೆಂದು ವರ್ಣಿಸುತ್ತಾರೆ.

**ವಿರಚಯ್ಯ ತು ದೀಕ್ಷಿತಃ ಪ್ರಯಾಜಂ ತನುತೇ ಹಂತ ಯಥಾ ಪ್ರಧಾನಯಾಗಮ್ ।**
**ಅತನೋತ್ ಕಿಲ ಕನ್ಯಕಾಪ್ರದಾನಂ ಮಧುಪರ್ಕೈರಭಿಪೂಜ್ಯ ತಜ್ಜನಸ್ತಮ್ ॥೧೦॥**

**ತಾತ್ಪರ್ಯ :** ಯಾಗದೀಕ್ಷಿತನಾದ ಯಜಮಾನನು ಯಾವುದಾದರೊಂದು ಯಾಗವನ್ನು ಪ್ರಾರಂಭಿಸಿ ಆ ಪ್ರಧಾನಯಾಗಕ್ಕೆ ಮೊದಲು ಪ್ರಯಾಜವೆಂಬ ಮೊದಲೇ ಮಾಡಬೇಕಾದ ಹೋಮ ವಿಶೇಷವನ್ನು ಮಾಡಿ ಅನಂತರದಲ್ಲಿ ಮುಖ್ಯವಾದ ಯಾಗವನ್ನು ಮಾಡುತ್ತಾನೆ. ಈ ವಿಷಯವು ಶ್ರೌತ ಪ್ರಕ್ರಿಯೆಯಲ್ಲಿ ಪ್ರಸಿದ್ಧವಾಗಿದೆ. ಈ ರೀತಿಯಲ್ಲಿಯೇ ಪ್ರಕೃತದಲ್ಲಿ ವಿವಾಹ ಕನ್ಯೆಯ ಸಂಬಂಧಿಗಳಾದ ತಂದೆ ತಾಯಿಯರು ಮೊದಲು ಮಧುಪರ್ಕದಿಂದ ವರನನ್ನು ಪೂಜಿಸಿದರು. ಅನಂತರದಲ್ಲಿ ವಿಧ್ಯುಕ್ತವಾಗಿ ಕನ್ಯಾದಾನವನ್ನು ಮಾಡಿದರು. ಆ ಸಂದರ್ಭವು ಎಲ್ಲರಿಗೂ ಬಹಳ ಸಂತೋಷವನ್ನು ಉಂಟುಮಾಡಿತು.

### ವಧೂವರರ ಪರಸ್ಪರ ನಿರೀಕ್ಷಣ :

**ಅವತರಣಿಕೆ :** ಅಂತರಪಟವನ್ನು ತೆರೆದಾಗ ನಿರೀಕ್ಷಣ ಮುಹೂರ್ತ ಕಾಲದಲ್ಲಿ ವಧೂವರರ ಮುಖಸ್ಥಿತಿ ಪ್ರಕಾರವನ್ನು ಕವಿಗಳು ವರ್ಣಿಸುತ್ತಾರೆ.

**ವರಮುಖೇಂದುವಿಲೋಕನಸಂಕುಚಲ್ಲಪನಫುಲ್ಲಸರೋರುಹಕನ್ಯಕಾಮ್ ।**
**ಅಯಮುಪಶ್ಯದಿಯಂ ಚ ವರಾನನದ್ವಿಜಸಖಂ ಹಸಿತೋತ್ಪಲಲೋಚನಾ ॥೧೧॥**

**ತಾತ್ಪರ್ಯ :** ವರನಾದ ಶ್ರೀವೇಂಕಟನಾಥಾಚಾರ್ಯರ ಮುಖಚಂದ್ರನನ್ನು ನೋಡಿದಾಗ ವಧುವಿನ ಮುಖ ಕಮಲವು ನಾಚಿಕೆಯಿಂದ ಸ್ವಲ್ಪ ಸಂಕೋಚಗೊಂಡಿತು. ಚಂದ್ರನು ಉದಯಿಸಿದಾಗ ಕಮಲವು ಸಂಕೋಚಗೊಳ್ಳುವಂತೆ ಶ್ರೀವೇಂಕಟನಾಥರ ಮುಖಚಂದ್ರದರ್ಶನದಿಂದ ಸರಸ್ವತಿಯ ಮುಖ ಕಮಲವು ಲಜ್ಜೆಯಿಂದ ಸ್ವಲ್ಪ ಸಂಕುಚಿತವಾಯಿತು. ಹೊಸ ಮದುವಣಗಿತ್ತಿಗೆ ಸ್ವಲ್ಪ ಸಂಕೋಚ ನಾಚಿಕೆ ಉಂಟಾಗುವುದು ಸ್ವಾಭಾವಿಕವೂ ಸಹಜವೂ ಆಗಿದೆ. ವಧುವಾದ ಸರಸ್ವತಿಯು ಚಂದ್ರೋದಯವಾದಾಗ ನೈದಿಲೆಯು ಅರಳುವಂತೆ ವರಮಹಾಶಯನ ಮುಖಚಂದ್ರ ದರ್ಶನದಿಂದ ಅರಳಿದಂತಹಾ ನೈದಿಲೆಯಂತಹಾ ಕಣ್ಣುಗಳುಳ್ಳವಳಾಗಿ ವರನನ್ನು ನೋಡಿದಳು. ಅಪೂರ್ವ ವರನ ದರ್ಶನದಿಂದ ಚಂದ್ರದರ್ಶನದಿಂದ ನೈದಿಲೆಯು ಸಂತೋಷಪಡುವಂತೆ ಸರಸ್ವತಿಯ ಕಣ್ಣುಗಳಿಗೆ ಸಂತೋಷವು ಉಂಟಾಯಿತು.

### ಸುಮಂಗಲೀ ಸತ್ಕಾರ :

**ಅವತರಣಿಕೆ :** ವಿವಾಹ ಮಹೋತ್ಸವವನ್ನು ನೋಡಲು ಬಂದಿದ್ದ ಸ್ತ್ರೀಯರ ಮಧ್ಯದಲ್ಲಿ

ಓರ್ವಳು ಇತರ ಸುಮಂಗಲಿಯರನ್ನು ಗಂಧ ಪುಷ್ಪಾಕ್ಷತೆಗಳಿಂದ ಪೂಜಿಸಿದಳು ಎಂದು ವರ್ಣಿಸುತ್ತಾರೆ.

**ಆಗತ್ಯ ದ್ರುತಮಬಲಾ ಪ್ರಹರ್ಷಿಣೀ ಕಾಪ್ಯಾಲೋಕ್ಯಾ(ಕ್ಯಾ)**
**ಗಮನಮನಂಗಸಾಯಕಾಂಗೀ ।**
**ನಾರೀಣಾಮುಚಿತತರಾಂಗರಾಗಪುಷ್ಪೈರಾನರ್ಚ ಸ್ಮಿತಲಪನಾಽತಿರೋಹಿತಾಽಽಸು ॥೧೨॥**

**ತಾತ್ಪರ್ಯ :** ಮದುವೆಯ ಮಹೋತ್ಸವದ ಸಂಭ್ರಮದಲ್ಲಿ ಅನೇಕ ಸುಂದರಿಯರಾದ ಸುಮಂಗಲಿಯರು ಬಂದಿದ್ದರು. ಅವರಿಗೆ ಗಂಧ ಪುಷ್ಪ, ತಾಂಬೂಲಾದಿ ಉಪಚಾರಗಳಿಂದ ಆದರ ಗೌರವಗಳನ್ನು ತೋರಿಸಬೇಕಾಗಿತ್ತು. ಅದಕ್ಕಾಗಿ ಆ ಸಭೆಯಲ್ಲಿಯೇ ಇದ್ದ ಧವಲ ಮಂದಹಾಸವನ್ನು ಸೂಸುತ್ತಿರುವ ತರುಣಿಯೊಬ್ಬಳು ಎದ್ದಳು. ಅವಳು ಮನ್ಮಥನ ಅರವಿಂದ ಅಶೋಕಾದಿ ಪುಷ್ಪ ಬಾಣಗಳಂತೆ ಸುಂದರವಾದ ಕೋಮಲವಾದ ಅಂಗವನ್ನುಳ್ಳವಳಾಗಿದ್ದಳು. ಅಲ್ಲಿ ನೆರೆದಿರುವ ಮುತ್ತೈದೆಯರನ್ನು ನೋಡಿ ಅವಳು ಮತ್ತಷ್ಟು ಸಂತೋಷವನ್ನು ಸೂಚಿಸುತ್ತಿದ್ದಳು. ಅವಳ ಮೈಬಣ್ಣವು ಬಂಗಾರದಂತಿದ್ದಿತು. ಅವಳು ಹೆಂಗಸರೆಲ್ಲರೂ ಸೇರಿರುವುದನ್ನು ನೋಡಿ ತಾನೇ ಬೇಗನೆ ಎದ್ದು ಬಂದು ಆ ಸ್ತ್ರೀಯರನ್ನು ಗಂಧ ಮುಂತಾದ ಉಪಚಾರಗಳಿಂದ ಪೂಜಿಸಿದಳು.

**ವಿಶೇಷಾಂಶ :** ವಿವಾಹ ಮಹೋತ್ಸವದಲ್ಲಿ ಸ್ತ್ರೀಯರಿಗೆ ಗಂಧ ಪುಷ್ಪ ತಾಂಬೂಲ ಕುಂಕುಮ ಮುಂತಾದ ಉಪಚಾರ ಮಾಡುವುದು ಬಹಳ ಸಂತೋಷಕರವಾದ ಒಂದು ಕಾರ್ಯಭಾಗವು. ಆ ವಿಷಯವನ್ನು ತಿಳಿಸುತ್ತಾ ಈ ಪದ್ಯವನ್ನು ಕವಿಗಳು ಪ್ರಹರ್ಷಿಣೀ ವೃತ್ತದಿಂದಲೇ ಚಮತ್ಕಾರವಾಗಿ ರಚಿಸಿದ್ದಾರೆ. ಪ್ರಹರ್ಷದಾಯಕವಾದ ವ್ಯಾಪಾರವನ್ನು ಪ್ರಹರ್ಷಿಣೀ ವೃತ್ತದಿಂದಲೇ ಸೂಚಿಸಿದ್ದಾರೆ. "ಮ್ನೌಜೌಗಸ್ತ್ರಿದಶಯತಿ ಪ್ರಹರ್ಷಣೀಯಂ" ಎಂದು ಆ ವೃತ್ತದ ಲಕ್ಷಣ.

**ಅವತರಣಿಕೆ :** ಬಂದಿರುವ ಸುಮಂಗಲಿಯರು ಬಹಳ ಮಂದಿ, ಒಬ್ಬಳೇ ಪ್ರಹರ್ಷಿಣೀ ತರುಣಿಯು ಗಂಧ ಹರಿದ್ರಾ ಕುಂಕುಮ ತಾಂಬೂಲಾದಿಗಳಿಂದ ಪೂಜಿಸುತ್ತಿದ್ದಾಳೆ. ಒಬ್ಬಳಿಂದ ಆ ಕಾರ್ಯವು ಬೇಗನೇ ಆಗುವುದಿಲ್ಲ. ಅವಳಿಗೆ ಸಾಧ್ಯವಾಗುವುದಿಲ್ಲ ಎಂದು ಆಲೋಚಿಸಿ ಮತ್ತಿಬ್ಬರು ಸುಂದರಿಯರು ಬೇಗನೇ ಬಂದು ಅತಿ ಸುಂದರಿಯರಾದ ಬಂದಿದ್ದ ಸುಮಂಗಲಿಯರ ಪೂಜೆಯನ್ನು ತಾವೂ ಮಾಡಿದರು ಎಂದು ವರ್ಣಿಸುತ್ತಾರೆ.

**ಇಂದುವದನಾ ಕಲಿತಮಂದಗಮನಾನಾಂ ಕುಂದರದನಾ ಹಸಿತಹಂಸಗಮನಾನಾಮ್ ।**
**ಕಂದುಕಸಮಾಕೃತಿಪಯೋಧರಯುಗಾನಾಂ ಕಂತುಜನಜಂಗಮಜಯಧ್ವಜಲತಾನಾಮ್ ॥೧೩॥**

**ತಾತ್ಪರ್ಯ :** ಸ್ತ್ರೀಯರ ಸಭೆಯಲ್ಲಿ ಚಂದ್ರನಂತಹಾ ಮುಖವುಳ್ಳ ಮತ್ತೊಬ್ಬಳು ಸುಂದರ ತರುಣಿಯು ಕುಳಿತಿದ್ದಳು. ಅವಳು ಮೆಲ್ಲಗೆ ನಡೆಯುವ ಸ್ವಭಾವವುಳ್ಳ ಸುಂದರ ತರುಣಿಯರು

ಬಂದಿರುವುದನ್ನು ನೋಡಿ ತಾನೇ ಎದ್ದು ಬಂದು ಅವರಿಗೆ ಗಂಧ ಪುಷ್ಪಾದಿ ಉಪಚಾರಗಳಿಂದ ಪೂಜೆ ಮಾಡಿದಳು. ಆ ಸಭೆಯಲ್ಲಿ ಹಂಸಗಳ ನಡಿಗೆಯನ್ನು ಉಪಹಾಸ ಮಾಡುವ ನಡಿಗೆಯುಳ್ಳ ಸುಂದರ ಸ್ತ್ರೀಯರು ಕುಳಿತಿದ್ದರು. ಚೆಂಡಿನಂತೆ ಗುಂಡಗಾದ ಸ್ತನಗಳಿಂದ ಕೂಡಿದ, ಓಡಾಡುತ್ತಿರುವ ಮನ್ಮಥನ ಜಯಧ್ವಜಗಳೋ ಎಂಬಂತೆ ಇರುವ ಆ ಸ್ತ್ರೀಯರು ಸಭೆಗೆ ಬಂದು ಕುಳಿತಿರುವುದನ್ನು ನೋಡಿ, ಕುಂದ ಪುಷ್ಪಗಳಂತೆ ಸುಂದರ ದಂತಗಳುಳ್ಳ ಮತ್ತೊಬ್ಬಳು ಸುಂದರಿಯಾದ ತರುಣಿಯು ಬೇಗನೇ ಎದ್ದು ಬಂದು ಅರಿಶಿನ ಕುಂಕುಮ ಮತ್ತು ಸುಗಂಧ ದ್ರವ್ಯಗಳಿಂದ ಅವರನ್ನು ಪೂಜಿಸಿದಳು. ಈ ರೀತಿಯಾಗಿ ಯಾರಿಂದಲೂ ಹೇಳಿಸಿಕೊಳ್ಳದೇ ಸ್ವತಃ ಉತ್ಸಾಹದಿಂದ ವಿವಾಹಾದಿ ಮಂಗಳ ಸಭೆಗಳಲ್ಲಿ ಉಪಚಾರಾದಿಗಳನ್ನು ಮಾಡುವುದು ಸುಶೀಲೆಯರಾದ ಉತ್ತಮ ಸ್ತ್ರೀಯರ ಲಕ್ಷಣವು ಎಂಬುದಾಗಿ ಇದರಿಂದ ತಿಳಿದು ಬರುತ್ತದೆ.

(ಇಂದುವದನಾ ಕಲಿತ ಮಂದಹಸನಾನಾಂ ಎಂದು ಗುರಸೇವಾ ವ್ಯಾಖ್ಯಾನುಸಾರ 12ನೇ ಶ್ಲೋಕದಲ್ಲಿ ಒಂದು ಪಾಠಾಂತರವು. ಆಗತ್ಯದ್ರುತಮಬಲಾ ಪ್ರಹರ್ಷಿಣೀ ಕಾಪ್ಯಾಲೋಕ್ಯ + ಆಗಮನಂ ಅನಂಗ ಸಾಂಯಕಾಂಗೀ ಎಂದೂ, ನಾರೀಣಾಮುಚಿತತರಂಗರಾಗಪುಷ್ಪೈರಾನರ್ಚಸ್ಮಿತಲಪನಾ + ತಿರೋಹಿತಾಸು ಎಂದು ಗುರುಸೇವಾ ವ್ಯಾಖ್ಯಾನದಂತೆ 13ನೇ ಶ್ಲೋಕದಲ್ಲಿ ಪದಚ್ಛೇದವು. ಎರಡು ಶ್ಲೋಕಗಳಿಗೆ ಏಕಾನ್ವಯ ವಸ್ತು ಸ್ಥಿತಿಯಲ್ಲಿ ಬಾಲಬೋಧಿನೀಕಾರರ ಅಭಿಪ್ರಾಯದಲ್ಲಿಯೂ ಎರಡು ಶ್ಲೋಕಗಳಿಗೆ ಏಕಾನ್ವಯವಿದ್ದಂತೆ ಕಂಡು ಬರುತ್ತದೆ. ಅವರು ಹಿಂದಿನ ಶ್ಲೋಕದ ಪದಗಳನ್ನು ಅಧ್ಯಾಹಾರ ಮಾಡಿ ಜೋಡಿಸಿಕೊಂಡು ಅರ್ಥ ಬರೆದಿರುವುದನ್ನು ನೋಡಿದರೆ ಅವರು ತಾತ್ಪರ್ಯಾರ್ಥವನ್ನು ಬರೆದಿದ್ದಾರೆಂದೂ ತೋರುತ್ತದೆ. ತಾತ್ಪರ್ಯದಲ್ಲಿ ಎರಡೂ ವ್ಯಾಖ್ಯಾನಗಳಿಗೆ ಸ್ವಲ್ಪ ವ್ಯತ್ಯಾಸವಿದ್ದರೂ ವಿರೋಧವಿಲ್ಲ. ಬಾಲಬೋಧಿನೀ ವ್ಯಾಖ್ಯಾನದಂತೆ ಮೊದಲು ಉಪಚಾರ ಮಾಡಲು ಎದ್ದವಳು ಒಬ್ಬಳು, ಇಂದುವದನಾ ಮತ್ತು ಕುಂದರದನಾ ಎಂಬ ಮತ್ತಿಬ್ಬರು ಅನಂತರ ಎದ್ದು ಉಪಚಾರ ಮಾಡಲು ಹೋಗಿದ್ದಾರೆ. ಗುರುಸೇವಾ ವ್ಯಾಖ್ಯಾನದಂತೆ ಇಂದುವದನೆಯೂ ಕುಂದರದನೆಯೂ ಆದ ಒಬ್ಬಳೇ ಅಬಲೆಯು ಪ್ರಹರ್ಷಿಣಿಯಾಗಿ ಮಹಿಳಾ ಸಭೆಯ ಉಪಚಾರ ಮಾಡಿದಳು ಎಂದು ಕಂಡುಬರುತ್ತದೆ.)

**ತಾತ್ಪರ್ಯ (ಗುರುಸೇವಾ ಅನ್ವಯಾನುಸಾರ)** : ಮಂದಹಾಸ ಮಾಡುತ್ತಿರುವ, ಹಂಸದ ನಡುಗೆಯನ್ನು ಉಪಹಾಸ ಮಾಡುತ್ತಿರುವ, ಚಂಡಿನಂತೆ ಆಕಾರವುಳ್ಳ ಎರಡು ಸ್ತನಗಳಿಂದ ಕೂಡಿರುವ, ಮನ್ಮಥನ ಸ್ವಂತವಾದ ಓಡಾಡುತ್ತಿರುವ ಲತೆಯಂತಹ, ಜಯಧ್ವಜ ಸಮಾನವಾದ, ಸುಂದರವಾದ ಸ್ತ್ರೀಯರ ಮಧ್ಯದಲ್ಲಿ, ಚಂದ್ರನಂತಹ ಮುಖವುಳ್ಳ ಕುಂದದಂತಹ ದಂತಗಳನ್ನುಳ್ಳ, ಸಂತೋಷದಿಂದ ಕೂಡಿರುವ, ಮನ್ಮಥನ ಬಾಣವಾದ ನೀಲೋತ್ಪಲದಂತಹ ಅಂಗಗಳನ್ನುಳ್ಳ, ಯಾವಳೋ ಒಬ್ಬ ಅಬಲೆಯು ಬೇಗನೇ ಬಂದು, (ಇತರ ಸ್ತ್ರೀಯರನ್ನು ಉಪಚರಿಸಲು) ಬರದಿರುವುದನ್ನು ನೋಡಿ ಬೇರೇ ಸ್ತ್ರೀಯರು ನಾಚಿಕೆಯಿಂದ ಮರೆಯಾಗಿ ಕುಳಿತಿದ್ದಾಗ,

ತಾನೇ ಮಂದಹಾಸಪೂರ್ಣ ಮುಖವುಳ್ಳವಳಾಗಿ, ಸುಮಂಗಲೀ ಸ್ತ್ರೀಯರಿಗೆ ಯೋಗ್ಯವಾದ ಗಂಧ, ಕುಂಕುಮ, ರಂಗು, ಹೂವು ಇವುಗಳಿಂದ ಸ್ತ್ರೀಯರನ್ನು ಪೂಜಿಸಿದಳು.

**ಅವತರಣಿಕೆ :** ಕವಿಗಳು ಈಗ ಸುಮಂಗಲೀ ಸ್ತ್ರೀಯರು ಸುಮಧುರವಾದ ಮಂಗಲಗಾನ ಮಾಡಿದರು ಎಂದು ವರ್ಣಿಸುತ್ತಾರೆ.

**ಜಿತನೀಲಕಂಠಶುಕಮಂಜುಭಾಷಿಣೀಪರಪುಷ್ಟಿಮದ್ಯುವತಿಗೀತಿಗೀತಿತಃ ।**
**ಸದನಪ್ರಿಯಾಲಕುಸುಮಾಲಯೋ ವಧೂವರವೀಕ್ಷಣಾಗತಸುರಾರ್ಪಿತಾ ಇವ ॥೧೪॥**

**ತಾತ್ಪರ್ಯ :** ಆ ವಿವಾಹ ಮಹೋತ್ಸವದ ಸುಸಂದರ್ಭದಲ್ಲಿ ಸುಂದರ ಸ್ತ್ರೀಯರು ಇಂಪಾಗಿ ಗಾನ ಮಾಡುತ್ತಿದ್ದರು. ನವಿಲು, ಗಿಣಿಗಳ ಸ್ವರದಂತೆ ಅವರ ಸ್ವರವು ಬಹಳ ಮೃದುವಾಗಿತ್ತು. ಕಿನ್ನರ ಸ್ತ್ರೀಯರು, ದುಂಬಿಗಳು, ಕೋಗಿಲೆಗಳು, ನವಿಲು ಮತ್ತು ಗಿಣಿಗಳ ಸ್ವರಗಳನ್ನು ನಾಚಿಸುವಂತೆಯೂ ಅವರು ಹಾಡುತ್ತಿದ್ದರು. ಆ ಮನೆಯಲ್ಲಿ ಒಣಗಿದ ಪ್ರಯಾಲವ ಮರದ ಕಟ್ಟಿಗೆಗಳಿದ್ದವು. ಹಾಗೆಯೇ ಪ್ರಯಾಲ ವೃಕ್ಷಗಳೂ ಇದ್ದವು. ಈ ಯುವತಿಯರ ಹಾಡುಗಳಿಂದ ಅವೆಲ್ಲಾ ಹೂ ಬಿಟ್ಟು ಮದುವೆಯ ಮನೆಯ ತುಂಬಾ ಹೂವುಗಳು ಚೆಲ್ಲಿದ್ದವು. ಅದನ್ನು ವೀಕ್ಷಿಸಿದಾಗ ಇಂತಹ ಪರಮ ಸುಂದರ ಸುಗುಣಿಗಳಾದ ವಧೂ ವರರನ್ನು ನೋಡಲು ಬಂದ ದೇವತೆಗಳು ಪುಷ್ಪವೃಷ್ಟಿ (ಹೂಮಳೆ) ಯನ್ನು ಸುರಿಸಿದರೋ ಎಂಬಂತೆ ತೋರುತ್ತಿತ್ತು. ಇಲ್ಲಿಯೂ 'ಸಜಸಾಜಗೌ ಭವತಿ ಮಂಜುಭಾಷಿಣೀ' ಎಂಬ ಲಕ್ಷಣದಂತೆ ಮಂಜುಭಾಷಿಣೀ ವೃತ್ತ. ಕವಿಗಳು ಇಲ್ಲಿಯೂ ವೃತ್ತದ ಹೆಸರನ್ನು ಪದ್ಯದಲ್ಲಿಯೂ ಚಮತ್ಕಾರದಿಂದ ಸೂಚಿಸಿದ್ದಾರೆ.

**ಅವತರಣಿಕೆ :** ಇಲ್ಲಿಗೆ ಬಂದಿರುವ ಬಂಧುಗಳು ತಾವು ತಂದಿರುವ ವಸ್ತ್ರ ಆಭರಣ ಮುಂತಾದವುಗಳನ್ನು ತಮ್ಮ ಪುರೋಹಿತರ ಮೂಲಕವಾಗಿ ದಂಪತಿಗಳಿಗೆ ಒಪ್ಪಿಸುತ್ತಿದ್ದರು ನೂತನ ದಂಪತಿಗಳಿಗೆ ಉಡುಗೊರೆಯನ್ನು ಓದಿಸುತ್ತಿದ್ದರು) ಎಂದು ವರ್ಣಿಸುತ್ತಾರೆ.

**ಪ್ರಮಿತಾಕ್ಷರಾಮ್ಮೃಚಮನೂದ್ಯ ಸುಹೃತ್ ಸಮುಪಾಹೃತಾನ್ಯಭಿನವಾನಿ ಮುಹುಃ ।**
**ವಿವಿಧಾಂ ಪುರೋಹಿತಜನಾವನಯೋರ್ವಸನಾನಿ ಸಂಸದಿ ಸಮಾರ್ಪಯತಾಮ್ ॥೧೫॥**

**ತಾತ್ಪರ್ಯ :** ವಧೂವರರ ಕಡೆಯ ಪುರೋಹಿತರಿಬ್ಬರು ಬೇರೆ ಬೇರೆ ಚಿಕ್ಕ ಚಿಕ್ಕ ಖುಕ್ಕುಗಳನ್ನು ಪಠಿಸಿ ಸಭೆಯಲ್ಲಿ ಸ್ನೇಹಿತರು, ಬಂಧುಗಳು, ತಂದಿರುವ ಹೊಸದಾದ ಬಟ್ಟೆ, (ಆಭರಣ) ಇತ್ಯಾದಿಗಳನ್ನು ಮತ್ತೂ ಮತ್ತೂ ವಧೂವರರಿಗೆ (ನೂತನ ದಂಪತಿಗಳಿಗೆ) ಉಡುಗೊರೆಯಾಗಿ ನೀಡಿದರು.

**ಮಂಗಳಾರತಿ :**

**ಅವತರಣಿಕೆ :** ಈಗ ಕವಿಗಳು ಇಬ್ಬರು ಸುಮಂಗಲಿಯರು ನವ ದಂಪತಿಗಳಿಗೆ ಮಂಗಳಾರತಿಯನ್ನು ಮಾಡಿದುದನ್ನು ವರ್ಣಿಸುತ್ತಾರೆ.

**ಮಥನಸಂಸ್ಕೃತಿಸಂತತಸಂಭ್ರಮಾತ್ ಸಿತಗುರಾ*ಜತದೀಪಕಭಾಜನಮ್ ।**
**ಭ್ರಮಯತಃ ಸ್ಮ ವಧೂವರ ಸಂ**ಮುಖಂ ದ್ರುತವಿಲಂಬಿತಮೇತ್ಯ ವರಾಂಗನೇ ॥೧೬॥**

**(ಗುರುಸೇವಾ ಪಾಠ : * ಸಿತಗುರೂಜ್ಜ್ವಲ ದೀಪಕಭಾಜನಂ ** ವಧೂವರ ಸಂಮ್ಮುಖೇ)**

**ತಾತ್ಪರ್ಯ :** ಇಬ್ಬರು ಶ್ರೇಷ್ಠರಾದ ಸ್ತ್ರೀಯರು ವಧೂವರರ ಸಮೀಪಕ್ಕೆ ಬಂದರು. ಸಾಣೆಯ ಚಕ್ರದಲ್ಲಿ ಸಾಣೆ ಹಿಡಿದು ಸಂಸ್ಕರಿಸುವದಕೋಸ್ಕರ, ನಿರಂತರವಾಗಿ ತಿರುಗುತ್ತಿರುವ ಚಂದ್ರನಂತಿರುವ, ಬೆಳ್ಳಿಯ ಎರಡು ದೀಪಗಳಿಂದ ಕೂಡಿದ ಆರತಿಯ ತಟ್ಟೆಯನ್ನು ವಧೂವರರ ಮುಖ ಸಮೀಪದಲ್ಲಿ ಮೊದಲು ವೇಗವಾಗಿಯೂ ಅನಂತರ ವಿಳಂಬದಿಂದಲೂ ಸುತ್ತಿಸಿವರಿಸಿದರು (ಆರತಿ ಮಾಡಿದರು.)

**ಗುರುಸೇವಾ ವ್ಯಾಖ್ಯಾನದಂತೆ ತಾತ್ಪರ್ಯ :** ಇಬ್ಬರು ಸುವಾಸಿನಿಯರು (ದ್ರುತವಿಲಂಬಿತಂ – ದ್ರುತಂ ವಿಲಂಬಿತಂ ಯಥಾ ತಥಾ = ಅವಸರದ ಕೆಲಸವಿರುವುದರಿಂದ ಬೇಗನೇ ಮತ್ತು ಸ್ವಭಾವತಃ ನಿಧಾನವಾಗಿ) ಬಂದು, (ಕ್ಷೀರಸಮುದ್ರದ) ಮಥನದಿಂದ ಉಂಟಾದ ವೇಗವೆಂಬ ಸಂಸ್ಕಾರದಿಂದ ಯಾವಾಗಲೂ ತಿರುಗುತ್ತಿರುವ ಶುಕ್ರ ಮತ್ತು ಗುರುಗಳಂತೆ ಪ್ರಕಾಶಮಾನವಾದ ಎರಡು ದೀಪಗಳನ್ನುಳ್ಳ (ಸಿತ–ಗುರು–ಉಜ್ವಲ– ದೀಪಕಭಾಜನಂ) ಎರಡು ದೀಪಗಳುಳ್ಳ ಮಂಗಳಾರತಿಯ ತಟ್ಟೆಯನ್ನು) (ವಧೂವರರ ಸಂಮುಖೇ) ಕನ್ಯೆ ಮತ್ತು ವರನ ಎದುರಿನಲ್ಲಿ ಸುತ್ತಿಸಿದರು. (ಎರಡು ದೀಪಗಳಿಂದ ಕೂಡಿದ ಆರತಿಯ ತಟ್ಟೆಯನ್ನು ಎತ್ತಿಕೊಂಡು ಆರತಿಯನ್ನು ಮಾಡಿದರು.)

**ಅವತರಣಿಕೆ :** ಉತ್ಸವಕ್ಕೆ (ಮದುವೆಗೆ) ಬಂದಿದ್ದ ಹಿರಿಯ ಬ್ರಾಹ್ಮಣರು ನೂತನ ದಂಪತಿಗಳಿಗೆ ಆಶೀರ್ವಾದ ಮಾಡಿದರು.

**ನಾನಾವಿದ್ಯಾಶಾಲಿನೀ ವೃದ್ಧಿಭಾಜಾಂ ಭೂದೇವಾನಾಂ ಭೂಷಣೈ ರಾಜಮಾನಾ ।**
**ವೇದಾನುಚ್ಚೈರುಚ್ಚರಂತೀ ಕಿರಂತೀ ದಂಪತ್ಯೋರಿತ್ಯಾಶಿಷಃ ಸಂಸದೂಚೇ ॥೧೭॥**

**ತಾತ್ಪರ್ಯ :** ಅನಂತರ ನಾನಾ ವಿದ್ಯೆಗಳಲ್ಲಿ ಪಾರಂಗತರಾದ, ನೂತನ ವಸ್ತ್ರಾಭರಣಗಳಿಂದ ಅಲಂಕೃತರಾದ, ವೃದ್ಧರಾದ ಬ್ರಾಹ್ಮಣರು ಎದ್ದು ಬಂದು ಗಟ್ಟಿಯಾಗಿ ಋಗ್ವೇದ ಮುಂತಾದ ವೇದಗಳ ಮಂತ್ರಗಳನ್ನು ಉಚ್ಚರಿಸುತ್ತಾ ನವ ವಿವಾಹಿತರಾದ ದಂಪತಿಗಳ ತಲೆಯ ಮೇಲೆ

ಮಂತ್ರಾಕ್ಷತೆಯ ಕಾಳುಗಳನ್ನು ಎಸೆಯುತ್ತಾ (ಹಾಕುತ್ತಾ) ಮುಂದೆ ಹೇಳಿದ ರೀತಿಯಲ್ಲಿ ಶುಭಾಶಂಸನಪೂರ್ವಕ ಆಶೀರ್ವಾದವನ್ನು ಮಾಡಿದರು.

**ಅವತರಣಿಕೆ :** ಈಗ ಕವಿಗಳು ವೃದ್ಧ ಬ್ರಾಹ್ಮಣ ಸಮುದಾಯವು ನೂತನ ದಂಪತಿಗಳಿಗೆ ಮಾಡಿದ ಆಶೀರ್ವಾದದ ಪ್ರಕಾರವನ್ನು ವರ್ಣಿಸುತ್ತಾರೆ.

**ಬಾಲಾವೇತಾವಾಪ್ನುತಾಂ ದೀರ್ಘಮಾಯುಃ ನಿತ್ಯಾಂ ಪ್ರೀತಿಂ ಚಾಷ್ಟಪುತ್ರಾನ್ ಗುಣಾಢ್ಯಾನ್।**
**ಶಸ್ತಂ ವಿತ್ತಂ ಸಂತತಿಂ ಶೋಭಮಾನಾಂ ಸೌಖ್ಯಂ ಧನ್ಯೌ ಧಾನ್ಯಭೂಗೋಸಮೃದ್ಧಿಮ್॥೧೮॥**

**ತಾತ್ಪರ್ಯ :** ಪುಣ್ಯವಂತರಾದ ಈ ದಂಪತಿಗಳು ದೀರ್ಘಾಯುಸ್ಸನ್ನೂ, ಅವಿಚ್ಛಿನ್ನವಾದ ಸ್ನೇಹವನ್ನೂ, ಗುಣಶಾಲಿಗಳಾದ ಎಂಟು ಮಕ್ಕಳನ್ನೂ, ಬಹಳವಾದ ಧನಸಂಪತ್ತನ್ನೂ, ಬಹುಕಾಲ ಕೀರ್ತಿಶಾಲಿಯಾಗಿ ಬೆಳಗುತ್ತಿರುವ ಮಕ್ಕಳು, ಮೊಮ್ಮಕ್ಕಳು ಮುಂತಾದ ವಂಶ ಪರಂಪರೆಯನ್ನೂ, ನಿರಂತರ ಆನಂದವನ್ನೂ ಧಾನ್ಯ, ಹೊಲ, ಮನೆ, ಹಸು ಮುಂತಾದ ಸಂಪತ್ತನ್ನು ಹೊಂದಲೀ ಎಂದು ಅಲ್ಲಿ ಸೇರಿದ್ದ ಹಿರಿಯರಾದ ಬ್ರಾಹ್ಮಣರು ದಂಪತಿಗಳಿಗೆ ಆಶೀರ್ವಾದ ಮಾಡಿದರು.

**ಅವತರಣಿಕೆ :** ನೆರೆದಿದ್ದ ಬ್ರಾಹ್ಮಣ ಸಭೆಯು ನೂತನ ದಂಪತಿಗಳಿಗೆ ಇನ್ನೊಂದು ರೀತಿಯಿಂದಲೂ ಆಶೀರ್ವಾದ ಮಾಡಿದರು ಎಂದು ಕವಿಗಳು ವರ್ಣಿಸುತ್ತಾರೆ.

**ಇಂದ್ರಾಣೀ ಬಲರಿಪುವೈರಿಣೀವ ವಾಣೀ ಲೋಕೇಶೇ, ಕಲಶಪಯೋಕನ್ಯಕೇವ ।**
**ಗೋವಿಂದೇ ಗರಲಗಲೇ ಗಿರೀಂದ್ರಕನ್ಯಾ ಕನ್ಯಾ ಸ್ಯಾದ್ದಯಿತಮನಃಪ್ರಹರ್ಷಣೀಯಮ್ ॥೧೯॥**

**ತಾತ್ಪರ್ಯ :** ಬಲಾಸುರ ಶತ್ರುವಾದ ಇಂದ್ರನನ್ನು ಶಚೀದೇವಿಯು ಸಂತೋಷ ಪಡಿಸುವಂತೆಯೂ, ಸರಸ್ವತೀದೇವಿಯು ಸಮಸ್ತ ಲೋಕಾಧಿಪತಿಯಾದ ಬ್ರಹ್ಮದೇವರ ಮನಸ್ಸಿಗೆ ಸಂತೋಷವನ್ನುಂಟು ಮಾಡುವಂತೆಯೂ, ವಿಷಕಂಠನಾದ ಪರಮೇಶ್ವರನನ್ನು ಹಿಮವಂತನ ಮಗಳಾದ (ಹಿಮಾಲಯದ ಪುತ್ರಿಯಾದ) ಪಾರ್ವತಿಯು (ಗೌರೀದೇವಿಯು)ಸಂತೋಷಪಡಿಸುವಂತೆಯೂ, ಈ ನವವಧುವಾದ ಸರಸ್ವತೀದೇವಿಯು ತನ್ನ ಪತಿಯಾದ ಶ್ರೀವೇಂಕಟನಾಥಾಚಾರ್ಯರ ಮನಸ್ಸನ್ನು ಸಂತೋಷಪಡಿಸುತ್ತಿರಲಿ ಎಂದು ಅಲ್ಲಿ ನೆರೆದಿದ್ದ ಹಿರಿಯರಾದ ಬ್ರಾಹ್ಮಣರು ದಂಪತಿಗಳನ್ನು ಆಶೀರ್ವದಿಸಿದರು.

## ದೇವ ಬ್ರಾಹ್ಮಣ ನಮಸ್ಕಾರ :

**ಅವತಾರಿಕೆ :** ತದನಂತರದಲ್ಲಿ ನೂತನ ದಂಪತಿಗಳು ಹಸೆಮಣೆಯಿಂದ (ವಿವಾಹ ಪೀಠ) ಎದ್ದು ಹರಿ ಗುರು ಮುಂತಾದ ಹಿರಿಯರನ್ನು ನಮಸ್ಕರಿಸಿದರು ಎಂದು ಕವಿಗಳು ಹೇಳುತ್ತಾರೆ.

**ನತ್ವಾ ಹರಿಂ ಗುರುಮನಂತರಮಾರ್ಯನಾರೀಸೇವಾರತಾವಸಿತವಾರಿಜಲೋಚನಾಭಿಃ ।**
**ದೃಷ್ಟೌ ವಸಂತತಿಲಕಾವಿವ ತಾವಭಾತಾಂ ತತ್ರಾಂತರೇ ಸಕುತುಕಂ ಸುಮನಃ ಪರೀತೌ॥೨೦॥**

**ತಾತ್ಪರ್ಯ :** ಆ ನಂತರ ನವ ದಂಪತಿಗಳು ಹರಿಗುರುನಮಸ್ಕಾರ ಮಾಡಿದರು. ತದನಂತರದಲ್ಲಿ ಹಿರಿಯರಾದ ಬ್ರಾಹ್ಮಣರನ್ನೂ, ಹಿರಿಯ ಸುಮಂಗಲಿಯರನ್ನೂ ಸೇವಿಸಿದರು, ನಮಸ್ಕರಿಸಿದರು. ಆ ಮದುವೆಯ ಮಂಟಪದಲ್ಲಿ ನೂತನ ದಂಪತಿಗಳು ಕಪ್ಪಾದ ನೈದಿಲೆ ಹೂವಿನಂತಹಾ ಕಣ್ಣುಗಳುಳ್ಳ ಸ್ತ್ರೀಯರಿಂದ ಕುತೂಹಲದಿಂದ ವೀಕ್ಷಿಸಲ್ಪಡುತ್ತಾ, ಮಧ್ಯದಲ್ಲಿ ನಿಂತಿರುವಾಗ ವಸಂತ ಕಾಲದಲ್ಲಿ ಹೂ ಬಿಟ್ಟಿರುವ ಎರಡು ತಿಲಕ ವೃಕ್ಷಗಳಂತೆ ಕಾಣಿಸುತ್ತಿದ್ದರು. (ಇಲ್ಲಿ ಕಪ್ಪಾದ ನೈದಿಲೇ ಹೂವಿನಂತಿರುವ ಕಣ್ಣುಗಳೇ ತಿಲಕ ಪುಷ್ಪಗಳು. ಅವುಗಳಿಂದ ಆವರಿಸಲ್ಪಟ್ಟ ದಂಪತಿಗಳು ವಸಂತ ಕಾಲದ ಎರಡು ತಿಲಕ ವೃಕ್ಷಗಳಂತೆ ಶೋಭಿಸಿದರು. ಈ ಪದ್ಯದಲ್ಲಿ ವಸಂತತಿಲಕ ವೃತ್ತ. "ಉಕ್ತಂ ವಸಂತತಿಲಕಂ ತ ಭಜಾ ಜಗೌಗಃ" ಎಂಬುದು ಅದರ ಲಕ್ಷಣ.)

**ವಿಶೇಷಾಂಶ :** ಇಲ್ಲಿ ಬಾಲಬೋಧಿನೀ ವ್ಯಾಖ್ಯಾನದಂತೆ ತಾತ್ಪರ್ಯದಲ್ಲಿ ಸ್ವಲ್ಪ ವ್ಯತ್ಯಾಸವಿದೆ. ಆ ದಂಪತಿಗಳು ವೃದ್ಧ ಬ್ರಾಹ್ಮಣರ ಸೇವಾ ನಮಸ್ಕಾರಗಳನ್ನು ಮಾಡುವಾಗ ಕಪ್ಪಾದ ನೈದಿಲೇ ಹೂವುಗಳಂತಹ ಕಣ್ಣುಗಳುಳ್ಳ ಸ್ತ್ರೀಯರಿಂದ ಕುತೂಹಲ ಸಹಿತರಾಗಿ ನೋಡಲ್ಪಟ್ಟು ಪುಷ್ಪಾಲಂಕಾರಗಳಿಂದ ಕೂಡಿದವರಾಗಿದ್ದರು. ಆದ್ದರಿಂದ ಆ ಸ್ತ್ರೀಯರ ಮಧ್ಯದಲ್ಲಿ ಈ ದಂಪತಿಗಳಿಬ್ಬರೂ ವಸಂತ ಕಾಲದ ಎರಡು ತಿಲಕವೃಕ್ಷಗಳಂತೆ ಕಾಣಿಸಿದರು. ಸ್ತ್ರೀಯರ ಕಪ್ಪಾದ ಕಣ್ಣು ನೋಟಗಳಿಂದ ತಿಲಕ ವೃಕ್ಷದ ಸಾಮ್ಯವೂ ಇತರ ಹೂವುಗಳಿಂದ ವಸಂತ ಕಾಲದ ಇತರ ವೃಕ್ಷಗಳ ಸಾಮ್ಯವೂ ಉಂಟಾಯಿತು. ವಸಂತ ಮತ್ತು ತಿಲಕ ಎಂಬ ಎರಡು ವೃಕ್ಷಗಳಂತೆ ಪುಷ್ಪಾಲಂಕೃತರಾದ ಈ ಇಬ್ಬರು ದಂಪತಿಗಳು ನೋಡಲ್ಪಟ್ಟರು. "ಪಾದಾಘಾತ ದಶೋದಕಃ ತಿಲಕಕುರಬಕೌ ವೀಕ್ಷಣಾಲಿಂಗನಾಭ್ಯಾಂ" ಎಂಬ ಪ್ರಮಾಣದಂತೆ ತಿಲಕ ವೃಕ್ಷವು ಸ್ತ್ರೀಯರ ನೋಟದಿಂದ ಹೂ ಬಿಡುತ್ತದೆ.

**ಅವತರಣಿಕೆ :** ಕನ್ಯೆಯ ತಂದೆಯು ವಿವಾಹ ಸಮಾರಂಭಕ್ಕೆ ಬಂದಿರುವ ಬಂಧುಗಳಿಗೆ ಭೋಜನವನ್ನು ಮಾಡಿಸಲು ವ್ಯವಸ್ಥೆಯನ್ನು ಮಾಡಿ ತಾನೇ ವಧೂವರರಿಗೆ ಊಟ ಮಾಡಿಸಲು ಉಪಕ್ರಮಿಸಿದನು ಎಂಬುದಾಗಿ ಕವಿಗಳು ವರ್ಣಿಸುತ್ತಾರೆ.

**ನಿಯುಜ್ಯ ವಂಶಸ್ಥನಿತಂಬಿನೀರ್ವಧೂಪಿತಾ ತದೀ *ಯಾರ್ಯಜನಾರ್ಚನಾಕೃತೇ ।**
**ವಧೂವರೌ ವಾರಿಜಲೋಚನಾವುಭೌ ಪರಸ್ಪರಂ ಭೋಜಯಿತುಂ ಪ್ರಚಕ್ರಮೇ ॥೨೧॥**

(* ವರೀಯಾರ್ಯಜನಾರ್ಚನಾಕೃತೇ – ಗುರುಸೇವಾವ್ಯಾಖ್ಯಾನದ ಪಾಠ)

**ತಾತ್ಪರ್ಯ :** ಈ ವಿವಾಹ ಸಮಾರಂಭಕ್ಕೆ ವಧೂವಿನ ಮತ್ತು ವರನ ಕಡೆಯ ಸಂಬಂಧಿಗಳಾದ ಅನೇಕ ಮಂದಿ ಶ್ರೇಷ್ಠರಾದ ಜನರು ಬಂದಿದ್ದರು. ವಿವಾಹದ ಕಾರ್ಯವು ಮುಗಿದ ಮೇಲೆ

ವಧುವಿನ ತಂದೆಯು ಅವರುಗಳನ್ನು ಸರಿಯಾದ ರೀತಿಯಲ್ಲಿ ಕೂಡಿಸಿ, ಎಲೆ ಹಾಕಿ, ಊಟ ಬಡಿಸಲು ತನ್ನವರೇ ಆದ ಸತ್ಕುಲ ಪ್ರಸೂತರಾದ ಮಡಿ ಆಚಾರ ವಿಚಾರಗಳನ್ನು ಬಲ್ಲವರಾಗಿ ಉತ್ತಮ ಗುಣವಂತರಾದ ಸುಮಂಗಲಿಯರನ್ನು ನಿಯಮನ ಮಾಡಿದನು. ವಧೂವರರಿಬ್ಬರೂ ಕಮಲದಂತೆ ಸುಂದರವಾದ ಕಣ್ಣುಗಳುಳ್ಳವರಾಗಿ ಆ ಬಂಧು ಜನರ ಮಧ್ಯದಲ್ಲಿ ಶೋಭಿಸುತ್ತಿದ್ದರು. ವಧುವಿನ ತಂದೆಯು ಇಂತಹಾ ವಧೂವರರಿಗೆ ಪರಸ್ಪರವಾಗಿ ಭೂಮದ ಊಟವನ್ನು ಬಡಿಸಲು ತಾನೇ ಸ್ವತಃ ನಿಂತರು. (ವಧೂವರರು ಪರಸ್ಪರ ತಗಲುವಂತೆ ಎಲೆಯನ್ನು ಹಾಕಿಕೊಂಡು ಒಬ್ಬರ ಎಲೆಯಿಂದ ಇನ್ನೊಬ್ಬರು ಭಕ್ಷ್ಯ ಭೋಜ್ಯಾದಿಗಳನ್ನು ತೆಗೆದುಕೊಂಡು ಆಸ್ವಾದಿಸಿ ಊಟ ಮಾಡುವುದು ಎಂಜಲು ಊಟ – ಭೂಮದ ಊಟ). ಈ ಪದ್ಯದಲ್ಲಿ ವಂಶಸ್ಥ ವೃತ್ತವಿದೆ. ಪದ್ಯದ ಅರ್ಥಕ್ಕೆ ಅನ್ವಯಿಸುವಂತೆ ಕವಿಗಳು ವೃತ್ತದ ಹೆಸರನ್ನೂ ಚಮತ್ಕಾರಿಕವಾಗಿ ಸೇರಿಸಿದ್ದಾರೆ.

**ಅವತರಣಿಕೆ :** ವಿವಾಹದ ಎಲ್ಲ ಕಾರ್ಯಗಳೂ ಸುಸಂಪನ್ನವಾದ ಮೇಲೆ ಶ್ರೀವೇಂಕಟನಾಥಾಚಾರ್ಯರು ನಾಲ್ಕೈದು ದಿನಗಳು ತಮ್ಮ ಮಾವನ ಮನೆಯಲ್ಲಿಯೇ ಇದ್ದರು ಎಂಬ ವಿಷಯವನ್ನು ಕವಿಗಳು ವರ್ಣಿಸುತ್ತಾರೆ.

**ಭೂದೇವಾನ್ ಭೋಜಯಿತ್ವಾ ತದನು ತದುಚಿತೈರಂಬರೈರ್ದಕ್ಷಿಣಾಭಿಃ**
**ತಾಂಬೂಲೈಸ್ತೋಷಯಿತ್ವಾ ವಿರಚಿತನಿಯಮಸ್ತ್ರೀಣ್ಯಹಾನ್ಯೇವಮೇಷಃ ।**
**ವಿದ್ವತ್ಸಂಘೈರ್ನಿಕಾಮಂ (ವಿದ್ವತ್ಸಂಘಂ ನಿಕಾಮಂ)**
**ವಿನಯಮುಖಗುಣೈರ್ನಂದಯನ್ ವೇಂಕಟಾರ್ಯಃ ।**
**ದೀಕ್ಷಾಂ ಪ್ರಾಪ್ಯೇವ ಯಜ್ವಾ ತದನು ನಿಶಿ ಮುದಾ**
**ಶೇಷಹೋಮಂ ವ್ಯತಾನೀತ್ ॥೨೨॥**

**ತಾತ್ಪರ್ಯ :** ಮದುವೆಯ ದಿವಸ, ಮತ್ತೆರಡು ದಿವಸಗಳು ಈ ರೀತಿಯಾಗಿ ಮೂರು ದಿನ ಶ್ರೀವೇಂಕಟನಾಥಾಚಾರ್ಯರ ಮದುವೆಯು ಅತ್ಯಂತ ವೈಭವದಿಂದ, ಬಹಳ ಸಂಭ್ರಮದಿಂದ ನಡೆಯಿತು. ಬಂದ ಎಲ್ಲ ಬ್ರಾಹ್ಮಣರಿಗೂ ತೃಪ್ತಿಯಾಗುವಂತೆ ಆದರ, ಉಪಚಾರ ಮತ್ತು ಭೋಜನದ ವ್ಯವಸ್ಥೆಯನ್ನು ಮಾಡಲಾಗಿದ್ದಿತು. ಶ್ರೀವೇಂಕಟನಾಥಾಚಾರ್ಯರು ಭೋಜನದಿಂದ ತೃಪ್ತರಾದ ಬ್ರಾಹ್ಮಣರಿಗೆ ಯೋಗ್ಯತೆಗೆ ತಕ್ಕಂತೆ ವಸ್ತ್ರ, ತಾಂಬೂಲ, ದಕ್ಷಿಣಾದಿಗಳನ್ನು ಕೊಟ್ಟು ಸಂತೋಷ ಹಾಗೂ ತೃಪ್ತಿಪಡಿಸಿದರು. ಮದುವೆಯ ಮೂರು ದಿನಗಳೂ ನಿಯಮದಿಂದ ಇದ್ದ ಶ್ರೀವೇಂಕಟನಾಥಾಚಾರ್ಯರು ಬಂದಿದ್ದ ಪಂಡಿತರ ಜೊತೆಗೆ ವಿನೋದದಿಂದ ಮಾತನಾಡುತ್ತಾ, ತಮ್ಮ ನಯ, ವಿನಯ, ಔದಾರ್ಯ, ಗಾಂಭೀರ್ಯ ಮುಂತಾದ ಗುಣಗಳಿಂದ ಬಂದ ಎಲ್ಲ ಬಂಧು ಬಾಂಧವ ಮಿತ್ರ ಮತ್ತು ಪಂಡಿತವರೇಣ್ಯರುಗಳನ್ನು ಸಂತೋಷಪಡಿಸುತ್ತಾ ಇದ್ದರು. ಯಜ್ಞದೀಕ್ಷೆಯನ್ನು ಹೊಂದಿದ ಯಜ್ಞಕರ್ತನು ಹೇಗೋ ಹಾಗೆ ಶ್ರೀವೇಂಕಟನಾಥಾಚಾರ್ಯರು ನಾಲ್ಕನೆಯ ದಿನ ಅರ್ಧ ರಾತ್ರಿಯ ಅನಂತರದ

ಶೇಷಹೋಮವನ್ನು ಶ್ರದ್ಧೆಯಿಂದ ಮಾಡಿ ಮುಗಿಸಿದರು. ಈ ಶ್ಲೋಕದಲ್ಲಿ ಸ್ರಗ್ಧರಾ ವೃತ್ತವಿದೆ. ವಧೂವರರು ಸ್ರಕ್ = ಅಂದರೆ ಮಾಲೆಯನ್ನು ಧರಿಸಿ ವಿರಾಜಿಸುತ್ತಿದ್ದರು ಎಂಬ ಅರ್ಥಕ್ಕೆ ಸೂಚಕವಾಗಿ ಈ ಪದ್ಯವನ್ನು ಸ್ರಗ್ಧರಾ ವೃತ್ತದಿಂದಲೇ ರಚಿಸಿದ್ದಾರೆ. "ಮ್ರಭ್ನೈರ್ಯಾನಾಂ ತ್ರಯೇಣ ತ್ರಿಮುನಿಯತಿಯುತಾ ಸ್ರಗ್ಧರಾ ಕೀರ್ತಿತೇಯಂ" ಎಂಬುದು ಸ್ರಗ್ಧರಾ ವೃತ್ತದ ಲಕ್ಷಣವು. ಮ, ರ, ಭ, ನ, ಯ, ಮ ಗಣಗಳು = 21 ಅಕ್ಷರಗಳು, ಮೂರು ಮತ್ತು ಏಳಕ್ಕೆ ಯತಿ.

**ಅವತರಣಿಕೆ :** ಈ ರೀತಿಯಾಗಿ ತಮ್ಮ ವಿವಾಹ ಮಹೋತ್ಸವವನ್ನು ಸಾಂಗವಾಗಿ ನೆರವೇರಿಸಿಕೊಂಡ ಶ್ರೀವೇಂಕಟನಾಥಾಚಾರ್ಯರು ತಮ್ಮ ಗ್ರಾಮದತ್ತ ಬರುತ್ತಿರುವಾಗ ಮಾರ್ಗಮಧ್ಯದಲ್ಲಿ ಸುವಾಸಿನಿಯರು ಮಾಡುತ್ತಿರುವ ದೋಹಲೋತ್ಸವವನ್ನು ನೋಡಿದರು ಎಂಬುದಾಗಿ ಕವಿಗಳು ವರ್ಣಿಸುತ್ತಾರೆ. (ದೋಹಲ ಎಂದರೆ ಸುವಾಸಿನಿಯರು ನಾನಾ ಉಪಾಯಗಳಿಂದ ವೃಕ್ಷಗಳಲ್ಲಿ ತತ್ಕಾಲದಲ್ಲಿಯೇ ಹೂವು ಇತ್ಯಾದಿಗಳು ಉಂಟಾಗುವಂತೆ ಮಾಡುವ ಕಾರ್ಯ ಎಂದು ಅರ್ಥ.)

**ಆಗಚ್ಛನ್ ಪಥಿ ವಧ್ವಾ ಸಾಕಂ ಸರ್ವೈಃ ಸಮಂ ನಿಜಗ್ರಾಮಮ್ ।**
**ಕಾನನಭೂಷು ವಧೂನಾಂ ದೋಹಲಲಕ್ಷ್ಮೀಮ(ರ)ಪಶ್ಯದುರುಮೇಧಾಃ ॥೨೩॥**

**ತಾತ್ಪರ್ಯ :** ಈ ರೀತಿಯಾಗಿ ಉತ್ಕೃಷ್ಟ ಮೇಧಾಶಕ್ತಿ ಸಂಪನ್ನರಾದ ಶ್ರೀವೇಂಕಟಾರ್ಯರು ತಮ್ಮ ಮದುವೆಯನ್ನು ಸಾಂಗವಾಗಿ ಮುಗಿಸಿದರು. ಅನಂತರ ತಮ್ಮ ಪತ್ನಿಯೊಡನೆ ಮತ್ತು ಬಂಧು ಬಾಂಧವರಿಂದಲೂ ಸಮೇತರಾಗಿ ಬರುತ್ತಾ ದಾರಿಯಲ್ಲಿ ಕಾಡಿನ ಪ್ರದೇಶದಲ್ಲಿ ಸುಂದರಿಯರು ನಾನಾ ಉಪಾಯಗಳಿಂದ ವೃಕ್ಷಗಳಲ್ಲಿ ಅಕಾಲದಲ್ಲಿ ಹೂವುಗಳ ಉತ್ಪತ್ತಿಗೆ ಕಾರಣವಾದ ವಿಲಾಸ ವಿಶೇಷಗಳನ್ನು ತೋರಿಸುತ್ತಾ ಇರುವುದನ್ನು ನೋಡಿದರು.

**ಅವತರಣಿಕೆ :** ಆ ದೋಹಲ ಸಂಪತ್ತನ್ನು ವರ್ಣಿಸುತ್ತಾ ಮೊದಲು ಅಶೋಕವೃಕ್ಷದ ದೋಹಲವನ್ನು ಹೇಳುತ್ತಾರೆ. ಇನ್ನು ಮುಂದಿನ 19 ಶ್ಲೋಕಗಳಿಂದ ದೋಹಲೋತ್ಸವವನ್ನು ವಿಶೇಷವಾಗಿ ಕವಿಗಳು ವರ್ಣಿಸುತ್ತಾರೆ.

**ಚಕಿತಹರಿಣಶಾವಕೇಕ್ಷಣಸ್ತ್ರೀಚರಣಹತೋಽಪಿ ಪುನಃ ಪುನರ್ಯದೀಯಃ ।**
**ನನು ಹಸತಿತರಾಮಶೋಕಶಾಖೀ ಪ್ರಕಟಯಿತುಂ ನಿತರಾಮಶೋಕಭಾವಮ್ ॥೨೪॥**

**ತಾತ್ಪರ್ಯ :** ಶ್ರೀವೇಂಕಟನಾಥಾಚಾರ್ಯರು ತಮ್ಮ ಗ್ರಾಮಕ್ಕೆ ಬರುವಾಗ ದಾರಿಯಲ್ಲಿ ಕಾಡುಗಳಿದ್ದವು. ಅಲ್ಲಿ ಅಶೋಕ ವೃಕ್ಷಗಳು ಬೆಳೆದಿದ್ದವು. ಆಗ ಬೆದರಿದ ಜಿಂಕೆಮರಿಯಂತೆ ಸುಂದರವಾದ ಕಣ್ಣುಗಳುಳ್ಳ ಸುಂದರಿಯು ಅಶೋಕ ವೃಕ್ಷವನ್ನು ಕಾಲಿನಿಂದ ಒದ್ದಳು. ಆದರೂ ಅದು ಶೋಕವನ್ನು ಪ್ರಕಟಿಸಲಿಲ್ಲ. ತನ್ನ ಅಶೋಕ = ಶೋಕವಿಲ್ಲದ ವೃಕ್ಷ ಎಂಬ ಹೆಸರನ್ನು ಅನ್ವರ್ಥಗೊಳಿಸಬೇಕೆಂದು ಎಷ್ಟು ಬಾರಿ ಒದ್ದರೂ ಪುನಃ ಪುನಃ ನಗುತ್ತಿತ್ತು. ಹೂವುಗಳನ್ನು

ಉಂಟುಮಾಡಿ ನಗುವಂತೆಯೇ ಕಾಣಿಸುತ್ತಿತ್ತು. ತಾನು ಶೋಕವನ್ನು ಪ್ರದರ್ಶಿಸಿದರೆ (ಹೂವುಗಳ) ಮೂಲಕ ನಗದಿದ್ದರೆ ತನ್ನ ಅಶೋಕ ಎಂಬ ಹೆಸರು ಕೂಡಲಾರದು, ಆ ಹೆಸರು ಅನ್ವರ್ಥವಲ್ಲವೆಂದು ಜನಗಳು ಹಾಸ್ಯ ಮಾಡುವರು ಎಂಬ ಹೆದರಿಕೆಯಿಂದ ಆ ಮರವು ನಕ್ಕಿತು, ಎಂದು ಭಾವ. (ಇಲ್ಲಿ ಮರದ ನಗು ಎಂದರೆ ಹೂವುಗಳನ್ನು ಪ್ರಕಟಗೊಳಿಸುವುದು. ಸುಂದರವಾದ ಕಾಲಿನ ಒದೆತದಿಂದ ಅಶೋಕವೃಕ್ಷವು ಹೂ ಬಿಡುತ್ತದೆಯೆಂದು ಪ್ರಸಿದ್ಧಿಯಿದೆ.)

**ಅವತರಣಿಕೆ :** ಈಗ ಕವಿಗಳು ಕುರುಬ ವೃಕ್ಷವನ್ನು ವರ್ಣಿಸುತ್ತಾರೆ.

**ಕುರುಬಕವಿಟಪೇ ಕುಶೇಷಯಕ್ಷ್ಯಾಃ । ಕುಚಯುಗಲಸ್ತಬಕೇನ ಕೋಮಲಾಂಗ್ಯಾಃ ।**
**ಕಿಮಕೃತ ಸಮವಾಯಿನಾ ವಸಂತಸ್ತಬಕಕುಲಾನಿ ತದಾಕೃತೀನಿ ಯಸ್ಮಿನ್ ॥೨೫॥**

**ತಾತ್ಪರ್ಯ :** ಕುರುಬಕ ವೃಕ್ಷವು ಸ್ತ್ರೀಯರು ಆಲಿಂಗನ ಮಾಡಿಕೊಂಡಾಗ ಹೂವನ್ನು ಬಿಡುತ್ತದೆ ಎಂದು ದೋಹದ ಶಾಸ್ತ್ರ ಪ್ರಸಿದ್ಧಿಯಿದೆ ಮತ್ತು ಕವಿ ಪ್ರಸಿದ್ಧಿಯೂ ಇದೆ. ಅದರ ಆಧಾರದ ಮೇಲೆ ಕವಿಗಳು ವರ್ಣಿಸುತ್ತಾರೆ. ಕಮಲದಂತಹಾ ಕಣ್ಣುಗಳುಳ್ಳ ಸುಂದರಿಯಾದ ಕೋಮಲಾಂಗಿಯು ಕುರುಬಕ ವೃಕ್ಷವನ್ನು ಬಿಗಿಯಾಗಿ ಅಪ್ಪಿಕೊಂಡಳು. ಆಗ ವಸಂತನು ತನ್ನ ಚಮತ್ಕಾರದಿಂದ ಹೂವಿನ ಗೊಂಚಲಿನಂತಿರುವ ಎರಡು ಸ್ತನಗಳಿಂದಲೇ ಆ ಎರಡು ಸ್ತನಗಳಂತಿರುವ ಅನೇಕ ಹೂವಿನ ಗೊಂಚಲುಗಳನ್ನು ಉಂಟುಮಾಡಿದನೋ ಎಂಬಂತೆ ಕುರುಬಕ ವೃಕ್ಷದ ತುಂಬಾ ಹೂವಿನ ಗೊಂಚಲುಗಳುಂಟಾದವು.

**ವಿಶೇಷಾಂಶ :** ಇಲ್ಲಿ "ಕೋಮಲಾಂಗ್ಯಾಃ" ಎಂಬ ಪದದ ಬದಲು "ಕೋಮಲೇನ" ಎಂಬ ಪದವು ಗುರುಸೇವಾ ಮತ್ತು ಬಾಲಬೋಧಿನೀ ವ್ಯಾಖ್ಯಾನಗಳಲ್ಲಿ ಕಂಡುಬರುತ್ತದೆ. ಆದುದರಿಂದ ವ್ಯಾಖ್ಯಾನಾನುಸಾರವಾಗಿ ಶ್ಲೋಕದ ಎರಡನೇ ಪಾದವು ಕುಚಯುಗಲಸ್ತಬಕೇನ ಕೋಮಲಾಂಗ್ಯಾಃ ಎಂಬುದಕ್ಕೆ ಬದಲಾಗಿ ಕುಚಯುಗಲಸ್ತಬಕೇನ ಕೋಮಲೇನ ಎಂಬುದಾಗಿ ಇರಬೇಕೆಂದು ತೋರುತ್ತದೆ.

**ಅವತರಣಿಕೆ :** ಈಗ ಕವಿಗಳು ಬಕುಲ ವೃಕ್ಷದ ದೋಹವನ್ನು ಹೇಳುತ್ತಾರೆ.

**ಬಕುಲತರುರವಾಪ್ಯ ವಾರಿಜಾಕ್ಷ್ಯಾ ಮುಖರಸಸೇಚ(ವ)ನಮುನ್ನತೋಽಬಲಾಯಾಃ ।**
**ಪ್ರತಿಕೃತಿಮಕೃತೇವ ಪಕ್ಷ್ಮಲಾಕ್ಷ್ಯಾಃ ಪ್ರಸವಪರಂಪರಯಾ ತದಂಗಭಾಜಾ ॥೨೬॥**

**ತಾತ್ಪರ್ಯ :** ಸುಂದರಿಯರಾದ ಕನ್ಯೆಯರು ಮದ್ಯರಸವನ್ನು ಬಾಯಲ್ಲಿ ತುಂಬಿಕೊಂಡು ಅದನ್ನು ಬಕುಲ ವೃಕ್ಷದ ಮೇಲೆ ಮುಕ್ಕಳಿಸಿದರೆ (ಬಾಯಿಂದ ಉಗುಳಿದರೆ) ಆ ವೃಕ್ಷವು ಹೂವನ್ನು ಬಿಡುತ್ತದೆಯೆಂಬ ಪ್ರಸಿದ್ಧಿಯನ್ನಿಟ್ಟುಕೊಂಡು ಕವಿಗಳು ವರ್ಣಿಸುತ್ತಾರೆ. ಶ್ರೀವೇಂಕಟನಾಥಾಚಾರ್ಯರು ವಧೂಸಮೇತರಾಗಿ ಹೋಗುತ್ತಿರುವ ದಾರಿಯಲ್ಲಿ ಬಕುಲ ವೃಕ್ಷವಿತ್ತು. ಅದು ಸುಂದರಿಯ ಮುಖದ ಮಧುಸೇಚನದಿಂದ ಹೂಬಿಟ್ಟು ತನ್ನ ಮೇಲೆ

ಉಗುಳಿದ ಸ್ತ್ರೀಯು ಪುಷ್ಪಾಲಂಕೃತಳಾಗಿದ್ದಂತೆ ತಾನೂ ಪುಷ್ಪಾಲಂಕಾರವನ್ನು ಹೊಂದಿ ಅವಳ ಸಾದೃಶ್ಯವನ್ನು ಪಡೆಯಿತು. (ಗು.ಸೇ. : ಸುಂದರ ಸ್ತ್ರೀಯ ಮುಖಮಧುವಿನ ಸ್ಪರ್ಶದಿಂದ ಬಕುಲ ವೃಕ್ಷವು ಹೂ ಬಿಟ್ಟು ತನ್ನ ಮೇಲೆ ಉಗುಳಿದ ಸುಂದರಿಗೆ ಪಾದದಿಂದ ಆರಂಭಿಸಿ ತಲೆಯವರೆಗೂ ಹೂಗಳ ಸುರಿಮಳೆಯನ್ನೇ ಸುರಿಸಿ, ಆ ಸುಂದರಿಯ ದೇಹವು ಪುಷ್ಪಚಯವಾಗುವಂತೆ ಮಾಡಿತು. ಅಂಗನೆಯ ಮುಖರಸಸೇವನ ರೂಪವಾದ ದೋಹದದಿಂದ ಬಕುಲ ವೃಕ್ಷವು ಹೂಬಿಟ್ಟು ಸುಂದರಿಯ ಮೇಲೆ ಪುಷ್ಪವೃಷ್ಟಿಯನ್ನು ಮಾಡಿತು ಎಂದು ತಾತ್ಪರ್ಯ) ಇಲ್ಲಿ ಉತ್ಪ್ರೇಕ್ಷಾಲಂಕಾರವಿದೆ.

**ಅವತಾರಿಕೆ :** ಈಗ ಕವಿಗಳು ತಿಲಕವೃಕ್ಷದ ದೋಹದವನ್ನು ಹೇಳುತ್ತಾರೆ.

**ಕುವಲಯದಲನೀಲಲೋಚನಾಭಿಸ್ತಿಲಕತರುಷ್ವವಲೋಕಿತೇಷು ನೂನಮ್ ।**
**ಪ್ರತಿಫಲಿತವಿಲೋಚನಾನಿ ನೋ ಚೇತ್**
**ಸಮರುಚಿಭಾಂಜಿ ಕಥಂ ಸುಮಾನಿ ತೇಷಾಮ್ ॥೨೭॥**

**ತಾತ್ಪರ್ಯ :** ಕಪ್ಪಾದ ಕನ್ನೈದಿಲೆ ಹೂವಿನಂತಹಾ ಕಣ್ಣುಗಳುಳ್ಳ ಸುಂದರ ಸ್ತ್ರೀಯರು ದಾರಿಯಲ್ಲಿರುವ ತಿಲಕವೃಕ್ಷಗಳನ್ನು ನೋಡಿದರು. ಅವರ ಕಣ್ಣುಗಳ ನೋಟವೆಂಬ ದೋಹದದಿಂದ (ದೋಹಲ = ಬಯಕೆ ತೀರಿಸುವುದು) ಆ ತಿಲಕ ವೃಕ್ಷಗಳ ತುಂಬಾ ಹೂವುಗಳುಂಟಾದವು. ಆದರೂ ರಸಿಕರ ದೃಷ್ಟಿಯಿಂದ ಅವು ತಿಲಕ ವೃಕ್ಷದ ಹೂವುಗಳಲ್ಲ. ತಿಲಕ ವೃಕ್ಷದ ಎಲ್ಲಾ ಭಾಗಗಳಲ್ಲಿ ಪ್ರತಿಬಿಂಬಿತವಾದ ಸುಂದರಿಯರ ಕಣ್ಣುಗಳು. ಅವು ಕಣ್ಣುಗಳಲ್ಲ, ತಿಲಕ ವೃಕ್ಷದ ಹೂವುಗಳೇ ಎಂದು ಯಾರಾದರೂ ಹೇಳಿಯಾರು. ಆದರೆ ಈ ವಾದವನ್ನು ನಾವು ಒಪ್ಪುವುದಿಲ್ಲ. ಅವು ತಿಲಕವೃಕ್ಷದ ಹೂವುಗಳೇ ಆಗಿದ್ದರೆ ಸುಂದರಿಯರ ಕಪ್ಪಾದ ಕಣ್ಣಿನಂತೆಯೇ ಏಕೆ ಕಾಣಿಸುತ್ತಿವೆ? ಅವು ಕಪ್ಪಾದ ತಿಲಕ ವೃಕ್ಷದ ಹೂವುಗಳಂತೆ ಕಾಣಿಸುವ ಸುಂದರಿಯರ ಕಣ್ಣುಗಳೇ ಸರಿ ಎಂಬುದಾಗಿ ಕವಿಗಳು ತಿಲಕ ವೃಕ್ಷದ ಶೋಭೆಯನ್ನು ವರ್ಣಿಸುತ್ತಿದ್ದಾರೆ. ಇಲ್ಲಿ ಉತ್ಪ್ರೇಕ್ಷಾಕಾವ್ಯಲಿಂಗಾಲಂಕಾರಗಳು.

**ಅವತಾರಿಕೆ :** ಈಗ ಕವಿಗಳು ನಮೇರುವೃಕ್ಷದ ದೋಹದವನ್ನು ವರ್ಣಿಸುತ್ತಾರೆ.

**ಪರಿಹಸನಪರಾಃ ಪಯೋರುಹಾಕ್ಷ್ಯಃ ಸುಮಕಪಟೇನ ಹಸಂತಮಾಬಬಂಧುಃ ।**
**ವ್ರತತಿತತಿಭಿರಂಗನಾ ನಮೇರುಂ ಪರಿಹಸತೀತಿ ವಿಲೋಕ್ಯ ಕಿಂ ಮದೀಯಮ್ ॥೨೮॥**

**ತಾತ್ಪರ್ಯ :** ಸುಂದರವಾದ ಕಮಲದಂತಹ ಕಣ್ಣುಗಳುಳ್ಳ ಸ್ತ್ರೀಯರು ವನಮಾರ್ಗದಲ್ಲಿ ಬರುತ್ತಾ ನಮೇರು ಎಂಬ ವೃಕ್ಷದ ಬಳಿಗೆ ಬಂದಾಗ ನಗುತ್ತಿದ್ದರು. ಇದರಿಂದ ದೋಹದವನ್ನು ಹೊಂದಿದ ಆ ವೃಕ್ಷವು ಹೂಬಿಟ್ಟು ನಗುವಂತೆ ಕಾಣಿಸುತ್ತಿತ್ತು. ನಾವು ನಗುವುದನ್ನು ಕಂಡು ಈ ವೃಕ್ಷವು ನಮ್ಮನ್ನು ಅಣಕಿಸುವಂತೆ ನಗುತ್ತಿದೆ ಎಂದು ಭಾವಿಸಿ ಆ ಸುಂದರಿಯರು ನಮೇರು

ವೃಕ್ಷಕ್ಕೆ ಶಿಕ್ಷೆಯನ್ನು ನೀಡಬೇಕೆಂದು ಅದನ್ನು ಬಳ್ಳಿಗಳಿಂದ ಕಟ್ಟಿದರು.

ನಮೇರುವೃಕ್ಷದ ಬುಡದಲ್ಲಿ ಸುಂದರಿಯರು ನಕ್ಕರೆ, ಮತ್ತು ಅದನ್ನು ಬಳ್ಳಿಗಳಿಂದ ಕಟ್ಟಿದರೆ ಅದಕ್ಕೆ ದೋಹದವುಂಟಾಗಿ ಅದು ಹೂ ಬಿಡುವುದು ಎಂದು ದೋಹದಶಾಸ್ತ್ರ ಮತ್ತು ಕವಿಸಂಪ್ರದಾಯ, ಅದನ್ನು ಅನುಸರಿಸಿ ಕವಿಗಳು ಈ ರೀತಿಯಾಗಿ ವರ್ಣಿಸಿದ್ದಾರೆ. ಇಲ್ಲಿ ಸುಮಕಪಟೇನ ಎಂಬಲ್ಲಿ ಅಪಹ್ನುತಿ ಅಲಂಕಾರವಿದೆ. ನಮೇರುವು ಹೂ ಬಿಟ್ಟಿರುವುದನ್ನು ಕಂಡು ನಗುತ್ತಿದೆಯೆಂದು ಸಂಭಾವಿಸಿದ್ದರಿಂದ ಉತ್ಪ್ರೇಕ್ಷಾಲಂಕಾರ. (ಇದು ಗುರುಸೇವಾ ವ್ಯಾಖ್ಯಾನದ ತಾತ್ಪರ್ಯ). (ಬಾಲಬೋಧಿನಿ ವ್ಯಾಖ್ಯಾನದ ರೀತಿಯಿಂದ) ಪರಿಹಸನಪರಾಃ ಪಯೋರುಹಾಕ್ಷ್ಯಾಃ ಸುಮಕಪಟೇನ ಹಸಂತಂ ಯದೀಯಂ ನಮೇರುಂ ಅಂಗನಾಃ (ದ್ವಿತೀಯಾ ಬಹುವಚನ) ಪರಿಹಸತೀತಿ ವಿಲೋಕ್ಯ, ವ್ರತತಿತತಿಭಿಃ, ಅನುಬಂಧಂ ಕಿಂ ಎಂದು ತಾತ್ಪರ್ಯ.

ನಗುತ್ತಿರುವ ಸ್ವಭಾವವುಳ್ಳ ಸ್ತ್ರೀಯರು ಅವರ ನಗುವಿನ ಧ್ವನಿಯನ್ನು ಕೇಳಿಯೇ ಹೂಬಿಟ್ಟು ಆ ನೆಪದಿಂದ ನಗುತ್ತಿರುವಂತಿರುವ ಯಾವ ಉದ್ಯಾನವನದ ನಮೇರುವೃಕ್ಷವನ್ನು, ಇದು ಅಂಗನೆಯರನ್ನು (ನಮ್ಮನ್ನು) ಅಣಕಿಸಿ ನಗುತ್ತಿದೆ ಎಂದು ನೋಡಿ ಬಳ್ಳಿಗಳ ಸಮೂಹದಿಂದ ಕಟ್ಟಿದರೋ ಎಂಬಂತಿತ್ತು. ಅಂತಹಾ ಕಾಡಿನಲ್ಲಿ ದೋಹಲಲಕ್ಷ್ಮಿಯನ್ನು ಶ್ರೀವೇಂಕಟಾರ್ಯರು ನೋಡಿದರು ಎಂದು ತಾತ್ಪರ್ಯ. ನಮೇರು ವೃಕ್ಷದಲ್ಲಿ ಶರತ್ಕಾಲದಲ್ಲಿಯೇ ಉಂಟಾದ ಬಳ್ಳಿಗಳ ಪರಂಪರೆಯು ಅದಕ್ಕೆ ಬಂಧಕವಾಯಿತೆಂದು ಉತ್ಪ್ರೇಕ್ಷೆ ಇದೆ ಎಂಬುದಾಗಿ ಬಾಲಬೋಧಿನೀ ವ್ಯಾಖ್ಯಾನದ ತಾತ್ಪರ್ಯ. (ಇಲ್ಲಿ ಯದೀಯಂ ಎಂದು ಪಾಠ. ನಮೇರು ವೃಕ್ಷವು ಹೂ ಬಿಟ್ಟಾಗ 'ಇದು ನಮ್ಮನ್ನು ಪರಿಹಾಸ ಮಾಡುತ್ತಿದೆ, ಇದನ್ನು ಶಿಕ್ಷಿಸಬೇಕು' ಎಂದು ಭಾವಿಸಿ ಸುಂದರಿಯರು ಆ ವೃಕ್ಷವನ್ನು ತೋಳುಗಳಿಂದ ಬಂಧಿಸಿದರು (ಅಪ್ಪಿಕೊಂಡರು) ಆಗ ಆ ಮರವನ್ನು ಬಳ್ಳಿಗಳ ರಾಶಿಯಿಂದ ಕಟ್ಟಿ ಹಾಕಿದಂತಾಯಿತು ಎಂಬುದಾಗಿ ಉತ್ಪ್ರೇಕ್ಷಿಸಿದ್ದಾರೆ ಎಂದೂ ಹೇಳಬಹುದು. ನಮೇರು=ರುದ್ರಾಕ್ಷ, ಸುರಪುನ್ನಾಗ (ಓಚಿಟಜ ಠಜಿ ಣುಜ ಣಡಿಜಜ) ಗಣಾನಮೇರುಪ್ರಸವಾವತಂಸಾಃ*

**ಅವತಾರಿಕೆ :** ಈಗ ಕವಿಗಳು ಆಮ್ರ (ಮಾವು) ವೃಕ್ಷದ ದೋಹದವನ್ನು ವರ್ಣಿಸುತ್ತಾರೆ.

**ಕರಪರಿಮಥ (ಮಿಲ) ನಾತ್ ಕುಶೇಶಯಾಕ್ಷ್ಯಾಃ**
**ಪ್ರತಿವಿಟಪಂ ವಿಕಚತ್‌ಪ್ರಸೂನಶಾಲೀ ।**
**ಸಭಯಮಭಿನಿರೀಕ್ಷಿತಾವಕಾಶೋ ವ್ಯಪಗತನಿದ್ರ ಇವಾಸ ಯತ್ರ ಚೂತಃ ॥೨೯॥**

**ತಾತ್ಪರ್ಯ :** ತಾವರೆಗಣ್ಣಿನ ಸುಂದರ ಸ್ತ್ರೀಯ ಕೈ ಸ್ಪರ್ಶದಿಂದ ಮಾವಿನ ಮರವು ಸಣ್ಣ ಪುಟ್ಟ ಕೊಂಬೆಗಳಲ್ಲೆಲ್ಲಾ ಹೂಬಿಟ್ಟಿತು. ಆ ಸ್ತ್ರೀಯರು ಹೂ ಬಿಡದಿರುವ ಭಾಗವನ್ನು ನೋಡುತ್ತಿರುವಾಗ ಮಾವಿನ ಮರವು ನಿದ್ರೆಯಿಂದ ಎದ್ದವರು ಭಯದಿಂದ ಬೆರಗಾಗಿ ನೋಡುವಂತೆ ಕಾಣಿಸುತ್ತಿತ್ತು. ಈ ಸ್ತ್ರೀಯರು ಏನು ಮಾಡುತ್ತಾರೋ ಎಂದು ಭಯವನ್ನು

ಹೊಂದಿದಂತೆ ಕಾಣಿಸುತ್ತಿತ್ತು. (ಗು.ಸೇ.) ಇಂತಹಾ ಮರಗಳಿಂದ ಕೂಡಿದ ವನದಲ್ಲಿ ವೇಂಕಟಾರ್ಯರು ದೋಹದಲಕ್ಷ್ಮಿಯನ್ನು ನೋಡಿದರು. (ಬಾ.ಬೋ.) ಸುಂದರ ಸ್ತ್ರೀಯು ಕೈಯಿಂದ ಚೆನ್ನಾಗಿ ತಿಕ್ಕಿದಾಗ ಮಾವಿನ ಮರದ ಕಂಪು ಎಲ್ಲೆಡೆಯಲ್ಲಿಯೂ ಪಸರಿಸಿತು. ಆಗ ಮಾವಿನ ಮರವು ಎಲ್ಲಾ ಕೊಂಬೆಗಳಲ್ಲಿಯೂ ಹೂಬಿಟ್ಟು ಕಂಗೊಳಿಸಿತು. ಪುನಃ ಇವರು ಕೈಯಿಂದ ತಿಕ್ಕಿಯಾರು ಎಂಬ ಭಯಪೂರ್ವಕವಾಗಿ ಅದು ಅವಕಾಶವನ್ನು ಎದುರುನೋಡುತ್ತಾ ನಿದ್ದೆಯಿಂದ ಎಚ್ಚೆತ್ತವರಂತೆ ಇತ್ತು.

**ಅವತಾರಿಕೆ :** ತಿಲಕ ವೃಕ್ಷದ ದೋಹಲವನ್ನು ಹಿಂದೆ ಹೇಳಿದ್ದರೂ ಈಗ ಭಂಗ್ಯಂತರದಿಂದ ಪುನಃ ವರ್ಣಿಸುತ್ತಾರೆ.

**ಕುವಲಯದಲನೀಲಲೋಚನಾನಾಂ ತನುರುಚಿಮೀಕ್ಷಿತುಮೀಕ್ಷಿತೋಽಂಗನಾಭಿಃ ।**
**ತಿಲಕತರುರುದಗ್ರಸೂನಜಾಲೈರ್ದಶಶತಲೋಚನತಾಮವಾಪ ನೂನಮ್ ॥೩೦॥**

**ತಾತ್ಪರ್ಯ :** ಸ್ತ್ರೀಯರು ತಿಲಕ ವೃಕ್ಷವನ್ನು ನೋಡಿದಾಗ ಅದು ಮೈಯೆಲ್ಲಾ ಹೂ ಬಿಟ್ಟಿತು. ನೀಲೋತ್ಪಲ ದಳದಂತೆ ಕಪ್ಪಾದ ಕಣ್ಣುಗಳುಳ್ಳ ಸುಂದರಿಯರ ದೇಹಕಾಂತಿಯನ್ನು ನೋಡಲೋಸುಗವೋ ಎಂಬಂತೆ ಅದು ಸಾವಿರಾರು ಕಣ್ಣುಗಳನ್ನು ಧರಿಸಿದಂತೆ ಕಾಣಿಸುತ್ತಿತ್ತು. ಸ್ತ್ರೀಯರು ಕಣ್ಣು ತುಂಬಾ ನೋಡುವುದೇ ತಿಲಕ ವೃಕ್ಷಕ್ಕೆ ದೋಹದವು. ಹಾಗೆ ಹೂ ಬಿಟ್ಟ ತಿಲಕ ವೃಕ್ಷಗಳು ಆ ಸ್ತ್ರೀಯರ ಸೌಂದರ್ಯವನ್ನು ನೋಡಲು ಕಣ್ಣೆರಡು ಸಾಲದೆಂದು ಸಾವಿರ ಕಣ್ಣುಗಳನ್ನು ಹೊಂದಿದೆಯೋ ಎಂಬಂತೆ ಕಾಣಿಸುತ್ತಿದ್ದವು ಎಂಬುದಾಗಿ ಅಭಿಪ್ರಾಯ. ಇಲ್ಲಿ ಉತ್ಪ್ರೇಕ್ಷಾಲಂಕಾರ.

ಅಂಗನೆಯರ ದೇಹಕಾಂತಿಯು ಬಹಳವಾಗಿರುವುದರಿಂದ ಕೆಲವೇ ಕಣ್ಣುಗಳಿಂದ ಅದನ್ನು ನೋಡಲು ಸಾಧ್ಯವಾಗುವುದಿಲ್ಲವೆಂದು ತಿಲಕ ವೃಕ್ಷವು ಸಾವಿರಾರು ಕಣ್ಣುಗಳನ್ನು ಸ್ವೀಕರಿಸಿರುವಂತೆ ತೋರುತ್ತಿತ್ತು. "ಮನ್ಯೇ ಶಂಕೇ ಧ್ರುವಂ ಪ್ರಾಯೋನೂನಮಿತ್ಯೇವಮಾದಿಭಿಃ! ಉತ್ಪ್ರೇಕ್ಷಾ ವ್ಯಜ್ಯತೇ ಶಬ್ದೈಃ ಇವಶಬ್ದೋಽಪಿ ತಾದೃಶಃ" ಎಂಬುದಾಗಿ ಹೇಳಿರುವುದರಿಂದ ನೂನಂ ಎಂಬ ಶಬ್ದವು ಇಲ್ಲಿ ಉತ್ಪ್ರೇಕ್ಷಾ ವ್ಯಂಜಕವಾಗಿದೆ. (ಬಾಲಬೋಧಿನಿ)

**ಅವತಾರಿಕೆ :** ಈಗ ಕವಿಗಳು ಪ್ರಿಯಾಲ ವೃಕ್ಷದ ದೋಹದವನ್ನು ಹೇಳುತ್ತಾರೆ.

**ಶುಕಪಿಕಕಲಕಂಠಕಿನ್ನರಸ್ತ್ರೀಸ್ಮಯಹರವಿಸ್ಮಯಗಾನಮಾಯತಾಕ್ಷ್ಯಾಃ ।**
**ಸಕುತುಕಮುಪಕರ್ಣ್ಯ ಸಂಮದೇನ ಪ್ರಸವಕುಲಂ ಪ್ರವವರ್ಷ ಕಿಂ ಪ್ರಿಯಾಲಃ ॥೩೧॥**

(ಪಾಠ – ವಿಸ್ಮಯಗಾನಮಾನತಾಂಗ್ಯಾಃ)

**ತಾತ್ಪರ್ಯ :** ಸುಂದರವಾದ ಕಣ್ಣುಗಳುಳ್ಳ, ಸ್ವಲ್ಪ ಬಾಗಿದ ಅಂಗವುಳ್ಳ, ಸ್ತ್ರೀಯರು ಗಿಣಿ, ಕೋಗಿಲೆ, ಪಾರಿವಾಳ, ಕಿನ್ನರ ಸ್ತ್ರೀಯರು ಇವರ ಗರ್ವವನ್ನು ಪರಿಹರಿಸುವ ಆಶ್ಚರ್ಯಕರವಾದ

ಸಂಗೀತವನ್ನು ಹಾಡಿದರು. ಪ್ರಿಯಾಲ ವೃಕ್ಷವು ಈ ಸಂಗೀತವನ್ನು ಕೇಳಿ ಸಂತೋಷದಿಂದ ಪುಷ್ಪವೃಷ್ಟಿಯನ್ನು ಮಾಡಿತೋ ಎಂಬಂತೆ ತುಂಬಾ ಹೂವುಗಳನ್ನು ಬಿಟ್ಟಿತು ಮತ್ತು ಆ ಸ್ತ್ರೀಯರ ಮೇಲೆ ಹೂ ಮಳೆಯನ್ನು ಸುರಿಸಿತು. ಅದ್ಭುತವಾದ ಸಂಗೀತ ಮತ್ತು ನರ್ತನವನ್ನು ಕೇಳಿದಾಗ, ನೋಡಿದಾಗ ಹೂವಿನ ಸುರಿಮಳೆಯನ್ನು ಸುರಿಸುವ ಪದ್ಧತಿ ಇರುತ್ತದೆ. ಪ್ರಿಯಾಲ ವೃಕ್ಷವು ಸ್ತ್ರೀಯರ ಸಂಗೀತವನ್ನು ಕೇಳಿ ಹೂಬಿಟ್ಟಿರುವುದನ್ನು ನೋಡಿ ಪುಷ್ಪವೃಷ್ಟಿ ಮಾಡುವುದಕ್ಕೋಸ್ಕರ ಆ ವೃಕ್ಷವು ಹೂ ಬಿಟ್ಟಿತೇನೋ ಎಂದು ಕವಿಗಳು ಉತ್ಪ್ರೇಕ್ಷಿಸಿರುತ್ತಾರೆ.

**ಅವತರಣಿಕೆ :** ಈಗ ಕವಿಗಳು ಮತ್ತೊಂದು ವಿಧವಾಗಿ ಅಶೋಕವೃಕ್ಷದ ದೋಹದವನ್ನು ವರ್ಣಿಸುತ್ತಾರೆ.

**ಅಶೋಕವೃಕ್ಷಾಃ ಕಮಲೇಕ್ಷಣಾನಾಂ ಮನೋಜ್ಞಪಾದಾಂಬುಜತಾಡನೇನ ।**
**ಉಲ್ಲಾಸಮಾಪುಸ್ಸಹಸಾ ತದಾನೀಂ ಯಥೈವ ಲೀಲಾಕಲಮೈರ್ಯುವಾನಃ ॥೩೨॥**

**ತಾತ್ಪರ್ಯ :** ಸುಂದರರಾದ ಯುವತಿಯರು ವಿಲಾಸಕ್ಕಾಗಿ ಹಿಡಿದಿರುವ ಕಮಲದಿಂದ ತಮ್ಮ ಪ್ರಿಯರನ್ನು ಹೊಡೆದಾಗ ಆ ತರುಣರು ಬಹಳ ಸಂತೋಷಗೊಳ್ಳುತ್ತಾರೆ. ಇದೇ ರೀತಿಯಾಗಿ ಕಮಲಾಕ್ಷಿಯರು ತಮ್ಮ ಪಾದ ಕಮಲಗಳಿಂದ ಅಶೋಕವೃಕ್ಷವನ್ನು ನಗುನಗುತ್ತಾ ಪ್ರಹರಿಸಿದಾಗ, ಒದ್ದಾಗ ಆ ಮರಗಳು ಕೂಡಲೇ ಸಂತೋಷಾತಿಶಯವನ್ನು ಹೊಂದಿದವು. ಕಾಮಿನಿಯರ ಕಮನೀಯ ಚರಣ ಸ್ಪರ್ಶದಿಂದ ಅಶೋಕವೃಕ್ಷಗಳು ಹೂಬಿಟ್ಟು ಸಂತೋಷದಿಂದ ನಗುತ್ತಿರುವಂತೆ ಕಾಣಿಸುತ್ತಿದ್ದವು ಎಂದು ತಾತ್ಪರ್ಯ.

**ಅವತರಣಿಕೆ :** ಕವಿಗಳು ಕುರುಬಕ ವೃಕ್ಷಗಳ ದೋಹದವನ್ನು ಇನ್ನೊಮ್ಮೆ ಬೇರೇ ರೀತಿಯಿಂದ ವರ್ಣಿಸುತ್ತಾರೆ.

**ಭುಜಾಲತಾಭಿಸ್ತರುಣೀಜನಾನಾಂ ಮುದಾನ್ವಿತಾನಾಂ ಪರಿರಂಭಣೇನ ।**
**ಅಗಾದ್ವಿಕಾಸಂ ಕುರವೋಽಪಿ ಪಶ್ಚಾನ್ನದದ್ದ್ವಿರೇಫೈಃ ಸುರವೋ ಬಭೂವ ॥೩೩॥**

(ಪಾ – ಮದಾನ್ವಿತಾನಾಂ)

**ತಾತ್ಪರ್ಯ :** ಮದಭರಿತರಾದ ಸುಂದರಿಯರು ಬಹಳ ಸಂತೋಷದಿಂದ ತಮ್ಮ ಬಳ್ಳಿಯಂತಹ ತೋಳುಗಳಿಂದ ಕುರವಗಳನ್ನು (ಕುರುಬ ವೃಕ್ಷಗಳನ್ನು) ಅಪ್ಪಿಕೊಂಡರು. ಆಗ ಅವುಗಳು ಹೂವಿನಿಂದ ತುಂಬಿದವು. ಆ (ಕುರವಗಳು = ಕುರುಬ ವೃಕ್ಷಗಳು) ಮೊದಲು ಕುರವಗಳು ಕೆಟ್ಟ ಧ್ವನಿಯುಳ್ಳವುಗಳಾಗಿದ್ದರೂ ಹೂವು ಬಿಟ್ಟ ಮೇಲೆ ದುಂಬಿಗಳು ಬಂದು ಗುಂಂಯ್ ಗುಡುತ್ತಾ ಇರುವಾಗ ಕುರವಗಳಾಗಲಿಲ್ಲ, ಸುರವಗಳಾದವು. (ಒಳ್ಳೆ ಧ್ವನಿಯುಳ್ಳವುಗಳಾದವು) ಕುರವ (ವೃಕ್ಷಗಳು) ಸುರವಗಳಾದವು ಎಂದು ಹೇಳಿದಾಗ ತೋರುವ ವಿರೋಧವನ್ನು (ಕುರವ ಕೆಟ್ಟ ಧ್ವನಿಯುಳ್ಳವುಗಳು ಸುರವ ದುಂಬಿಗಳ ಒಳ್ಳೆಯ ಧ್ವನಿಯನ್ನು

ಉಳ್ಳವುಗಳಾದವು ಎಂದು ಹೇಳಿದ್ದರಿಂದ ಮೇಲಿಂದ ಮೇಲೆ ತೋರುವ ವಿರೋಧವನ್ನು ಪರಿಹರಿಸಿದ್ದಾರೆ. ಆದುದರಿಂದ ಇಲ್ಲಿ ವಿರೋಧಾಭಾಸಾಲಂಕಾರ.

**ಅವತರಣಿಕೆ :** ಈಗ ಕವಿಗಳು ಬಕುಲ ವೃಕ್ಷದ ದೋಹದವನ್ನು ವರ್ಣಿಸುತ್ತಾರೆ.

**ಚಂದ್ರಾನನಾನಾಂ ಶಫರೇಕ್ಷಣಾನಾಂ ಕುಂಭಸ್ತನೀನಾಂ ಕುಟಿಲಾಲಕಾನಾಮ್ ।**
**ವಿಕಾಸಿನೀನಾಂ ದ್ಯುತಿಮಾಲಲಂಬೇ ಗಂಡೂಷಶೀಧೋರ್ಬಕುಲೋಽವಸೇಕಾತ್ ॥೩೪॥**

**ತಾತ್ಪರ್ಯ :** ಚಂದ್ರನಂತಹಾ ಮುಖವುಳ್ಳ, ಮೀನುಗಳಂತೆ ಉದ್ದವಾದ ಚಂಚಲವಾದ ಕಣ್ಣುಗಳುಳ್ಳ, ಗುಂಗುರು ಗುಂಗುರಾದ ಕೂದಲುಗಳುಳ್ಳ, ನಗು ನಗುತ್ತಿರುವ ವಿಲಾಸಿನಿಯರು ಬಾಯಿ ತುಂಬಾ ಸುವಾಸನೆಯಾದ ಮದಿರೆಯನ್ನು ತುಂಬಿ ಅದನ್ನು ಬಕುಲ ವೃಕ್ಷಗಳ ಮೇಲೆ ಉಗುಳಿದಾಗ ಆ ವೃಕ್ಷಗಳು ಮೈತುಂಬಾ ಹೂವಿನಂಗಿಯನ್ನು ಹೊತ್ತು ಶೋಭಿಸಿದವು. (ಸ್ತ್ರೀಯರು ಬಕುಲ ವೃಕ್ಷದ ಮೇಲೆ ಮದ್ಯವನ್ನು ಉಗುಳಿದರೆ ಅದು ಹೂ ಬಿಡುವುದೆಂದು ದೋಹದ ಶಾಸ್ತ್ರ.) (ಬಕುಲಃ ಸಿಂಧು ಗಂಡೂಷಸೇಕಾತ್ ವಿಕಸತಿ ಎಂದು ಕವಿಸಮಯ.)

**ಅವತರಣಿಕೆ :** ಈಗ ಕವಿಗಳು ತಿಲಕವೃಕ್ಷದ ದೋಹದವನ್ನು ಇನ್ನೊಂದು ರೀತಿಯಿಂದ ವರ್ಣಿಸುತ್ತಾರೆ.

**ಆಲೋಕನಾದಾಯತಲೋಚನಾನಾಂ ಮದೋದ್ಧತಾನಾಂ ಪ್ರಕಟಾನುರಾಗಮ್ ।**
**ದಧಾರ ಶೋಭಾಂ ತಿಲಕದ್ರುಮಾಣಾಂ ಪಾಲಿಃ ಸಭೃಂಗೈಃ ಸ್ತಬಕೈರಿದಾನೀಮ್ ॥೩೫॥**

**ತಾತ್ಪರ್ಯ :** ಯೌವನದ ಮದದಿಂದ ಉಬ್ಬಿದ, ವಿಶಾಲ ಲೋಚನೆಯರಾದ ಸುಂದರಿಯರು ಒಳ್ಳೆಯ ಪ್ರೇಮದಿಂದ ತಿಲಕ ವೃಕ್ಷಗಳ ಸಾಲುಗಳನ್ನು ಓರೆ ನೋಟಗಳಿಂದ ವಯ್ಯಾರದಿಂದ ನೋಡಿದರು. ಆಗ ಆ ತಿಲಕ ವೃಕ್ಷಗಳು ಸಾಲುಸಾಲಾಗಿಯೇ ಹೂವಿನ ಗೊಂಚಲುಗಳನ್ನು ಧರಿಸಿ ನಿಂತವು. ಆ ಹೂವಿನ ಗೊಂಚಲುಗಳಲ್ಲಿ ದುಂಬಿಗಳು ಬಂದು ಗೊಂಯ್ ಗುಡಲಾರಂಭಿಸಿದಾಗ, ಆ ವೃಕ್ಷಗಳ ಸಾಲು ಈ ಸುಂದರ ಸ್ತ್ರೀಯರ ಶೋಭೆಯನ್ನೇ ಧರಿಸಿತು. ಬೆಳ್ಳಗಿರುವ ಹೂವಿನ ಗೊಂಚಲುಗಳಲ್ಲಿ ಕಪ್ಪಾದ ದುಂಬಿಗಳು ಕುಳಿತು ಗುಂಜಾರವ ಮಾಡುತ್ತಿದ್ದಾಗ ಸುಂದರವಾದ ಕಣ್ಣುಗಳುಳ್ಳ ಸ್ತ್ರೀಯರು ಅನುರಾಗದಿಂದ ಮೆಲ್ಲನೆ ಹಾಡುತ್ತಿರುವಂತೆ ಕಾಣುತ್ತಿತ್ತು ಎಂದು ತಾತ್ಪರ್ಯ.

**ಅವತರಣಿಕೆ :** ಕವಿಗಳು ಪುನಃ ಪ್ರಿಯಾಲ ವೃಕ್ಷದ ದೋಹಲವನ್ನು ಹೇಳುತ್ತಾರೆ.

**ಗೀತ್ಯಾ ಮಹತ್ಯಾ ಕಲಕಂಠಕಂಠ್ಯಾ ವಿಕಾಸಮಾಧತ್ತ ತದಾ ಪ್ರಿಯಾಲಃ ।**
**ತನ್ಮಂಜರೀ ಷಟ್‌ಚರಣಾಧಿಗೀತ್ಯಾ ವಿಯೋಗಿನೀ ಚಿತ್ರಮಿದಂ ವಿಷಾದಮ್ ॥೩೬॥**

**ತಾತ್ಪರ್ಯ :** ಕೋಗಿಲೆಯ ಕಂಠದ ಅಂಗನೆಯ ಗಾನದಿಂದ ಪ್ರಿಯಾಲವೃಕ್ಷವು ವಿಕಾಸವನ್ನು ಹೊಂದಿತು. ಆದರೆ ಪ್ರಿಯಾಲ ವೃಕ್ಷದ ಹೂಗೊಂಚಲಿನಲ್ಲಿ ಕುಳಿತಿದ್ದ ಹೆಣ್ಣು ದುಂಬಿಯು ಸುಂದರಿಯ ಇಂಪಾದ ಗಾನವನ್ನು ಕೇಳಿ ತಾನು ಪರಾಜಿತನಾಗಿ ಹಾಡುವುದನ್ನು ಬಿಟ್ಟು ದುಃಖಪಟ್ಟಿತು. ಪ್ರಿಯಾಲವು ಗೀತದಿಂದ ವಿಕಾಸಹೊಂದಿದ್ದರೂ ಹೆಣ್ಣು ದುಂಬಿಯು ಗೀತದಿಂದ ವಿಷಾದವನ್ನು ಹೊಂದಿದುದು ಆಶ್ಚರ್ಯ ಎಂದು ವಿರೋಧ ಗೀತ್ಯಾ ವಿಯೋಗಿನೀ = ತನ್ನ ಸಂಗೀತವನ್ನು ಕಳೆದುಕೊಂಡು ನಾಚಿಕೆಯಿಂದ ಹಾಡಲಾಗದೇ ಇದ್ದು ವಿಷಾದವನ್ನು ಹೊಂದಿತು ಎಂದು ಪರಿಹಾರ. ಇಲ್ಲಿ ವಿರೋಧಾಭಾಸಾಲಂಕಾರ. ವಿರೋಧಸ್ತು ತದಾಭಾಸೇ ಜಯೀಂದ್ರೋಽಪಾಂಗವಿಕ್ರಮಃ ಎಂಬುದಾಗಿ ಶ್ರೀಸುಧೀಂದ್ರತೀರ್ಥರು ತಮ್ಮ ಅಲಂಕಾರ ಮಂಜರಿಯಲ್ಲಿ ಹೇಳಿರುವ ಲಕ್ಷಣ ಉದಾಹರಣಗಳು.

**ಅವತರಣಿಕೆ :** ಈಗ ಮುಂದಿನ ಶ್ಲೋಕದಲ್ಲಿ ಎರಡು ದೋಹಲವನ್ನು ವರ್ಣಿಸುತ್ತಾರೆ.

**ಪದ್ಮಾನನಾನಾಂ ವದನಾನಿಲೇನ ಶ್ರಿಯಂ ವಿವವ್ರೇ ಖಲು ಸಿಂಧುವಾರಃ ।**
**ಬಾಹಾಲತಾಸ್ಪರ್ಶನತೋ ರಸಾಲಸ್ತದಾಂಕುರೈಃ ಕಂಟಕಿತೋ ವ್ಯಲಾಸೀತ್ ॥೩೭॥**

**ತಾತ್ಪರ್ಯ :** ಸಿಂಧುವಾರ ಎಂಬ ವೃಕ್ಷವು ಕಮಲಮುಖಿಯರಾದ ಸುಂದರಿಯರು ತಮ್ಮ ಬಾಯಿಂದ ಗಾಳಿ ಊದಿದಾಗ ಬಹಳ ಹೂವುಗಳನ್ನು ಬಿಟ್ಟು ಶೋಭಿಸಿತ್ತು. ಮಾವಿನ ಮರವು ಸುಂದರಿಯರು ತಮ್ಮ ಎರಡು ತೋಳುಗಳಿಂದ ಅಪ್ಪಿಕೊಂಡಾಗ ಚಿಗುರುಗಳನ್ನು ಪ್ರಕಟಿಸಿ ಶೋಭಿಸಿತು.

**ಅವತಾರಿಕೆ :** ಈಗ ಕವಿಗಳು ಕೆಳಗಿನ ಪದ್ಯದಿಂದ ಕರ್ಣಿಕಾರ (ಕಣಗಲೆಯ) ದೋಹದವನ್ನು ವರ್ಣಿಸುತ್ತಾರೆ.

**ವಾಣೀ (ರ್ತಾ) ವಿಶೇಷೈರ್ವನಜೇಕ್ಷಣಾನಾಂ ಪಿಕಪ್ರಿಯಾನಿಃಸ್ವನಲಾಲನೀಯೈಃ ।**
**ಉದಂಕುರೋಽಭೂದಥ ಕರ್ಣಿಕಾರೋ ರಾಗಶ್ಚ**
**ಯೂನಾಂ ಹೃದಯೇ ತದಾನೀಮ್ ॥೩೮॥**

**ತಾತ್ಪರ್ಯ :** ಹೆಣ್ಣು ಕೋಗಿಲೆಗಳ ಧ್ವನಿಯಂತೆ ಇಂಪಾದ ಧ್ವನಿಯುಳ್ಳ ಸುಂದರ ಸ್ತ್ರೀಯರು ಪ್ರೇಮಭರಿತವಾದ ಹಾಸ್ಯದ ಮಾತುಗಳನ್ನು ಆಡುತ್ತಾ, ಪ್ರೀತಿಯಿಂದ ವಾರ್ತಾಲಾಪ ಮಾಡಿದಾಗ ಕರ್ಣಿಕಾರ ವೃಕ್ಷದಲ್ಲಿ ಹೂಮೊಳಕೆಗಳು ಉಂಟಾದವು. ಆಗ ಆ ಮಾತುಗಳನ್ನು ಕೇಳುತ್ತಿದ್ದ ಪ್ರಿಯರಾದ ತರುಣರ ಹೃದಯಗಳಲ್ಲಿ ಅನುರಾಗದ ಅಂಕುರವುಂಟಾಯಿತು. ತಮ್ಮ ಪ್ರೇಯಸಿಯರ ಮಾತಿನ ಮೋಡಿಯನ್ನು ಕಂಡು ಸಂತಸ ಹೊಂದಿದ ಪ್ರಿಯತರುಣರು ತಮ್ಮ ಪ್ರಿಯೆಯರಲ್ಲಿ ಪ್ರೇಮಾಂಕುರ ಉಳ್ಳವರಾದರು. ಸ್ತ್ರೀಯರ ಮಾತುಗಳು ಅಷ್ಟೊಂದು ಮನೋಹರವಾಗಿದ್ದವು. (ಜಡವಾದ ವೃಕ್ಷದಲ್ಲಿ ಅಂಕುರೋತ್ಪತ್ತಿಯಾದ ಮೇಲೆ ಚೇತನರಾದ ಯುವಕರಲ್ಲಿ ಪ್ರೇಮಾಂಕುರದ

ಉತ್ಪತ್ತಿಯಾಗುವುದರಲ್ಲಿ ಆಶ್ಚರ್ಯವೇನು ಎಂಬ ಕೈಮುತ್ಯ ನ್ಯಾಯವೂ ಇಲ್ಲಿ ತೋರುತ್ತಿದೆ.) ಇಲ್ಲಿ ವರ್ಣ್ಯಗಳಾದ ಕರ್ಣಿಕಾರ ಮತ್ತು ಪ್ರಿಯತರುಣರು ಇಬ್ಬರಿಗೂ ಅಂಕುರೋತ್ಪತ್ತಿ ಎಂಬ ಧರ್ಮವನ್ನು ಹೇಳಿರುವುದರಿಂದ ತುಲ್ಯಯೋಗಿತಾಲಂಕಾರ. ತುಲ್ಯಯೋಗಿತ್ವಮನ್ಯೇಷಾಂ ವರ್ಣ್ಯಾನಾಂ ಚೈಕಧರ್ಮತಾ । ಕೀರ್ತೇ ಜಯೀಂದ್ರವಾಗ್ಗುಂಫೇ ಕಿಯಂತೌ ಶೇಷಗೀಷ್ಪತೀ ॥ (ಅಲಂಕಾರಮಂಜರೀ).

**ಅವತಾರಿಕೆ :** ಈಗ ಕವಿಗಳು ಸಂಪಿಗೆ ಮರದಲ್ಲಿ ಚಿಗುರೆಲೆಗಳ ಉತ್ಪತ್ತಿಯನ್ನು ವರ್ಣಿಸುತ್ತಾರೆ.

**ಮುಖಾನುರಾಗಾನ್ಮಹಿಲಾಜನಾನಾಂ ಚಾಂಪೇಯಶಾಖೀ ನವಪಲ್ಲವೌಘೈಃ ।**
**ಸಮುತ್ಥಿತೈಸ್ತತ್ಕ್ಷಣಜಾತಶೋಭೈಸ್ತದಾನುರಾಗೀ ಸಮಭೂದ್ವಿಚಿತ್ರಮ್ ॥೩೯॥**

**ತಾತ್ಪರ್ಯ :** ಸುಂದರ ಸ್ತ್ರೀಯರು ತಾಂಬೂಲವನ್ನು ಹಾಕಿಕೊಂಡು ಅದನ್ನು ಬಾಯಿಂದ ಸಂಪಿಗೆ ಮರದ ಮೇಲೆ ಪೂತ್ಕರಿಸಿದರು. ಆ ತಾಂಬೂಲದ ಕೆಂಪು ಬಣ್ಣದಿಂದ ಆಗಲೇ ಉತ್ಪನ್ನವಾದ ಸಂಪಿಗೆ ಮರದ ಹೊಸದಾದ ಚಿಗುರೆಲೆಗಳೂ ಕೆಂಪು ಬಣ್ಣದಿಂದ ಕೂಡಿಕೊಂಡು ಪ್ರಕಾಶಿಸಿದವು. ಸಂಪಿಗೆಯ ಮರದಲ್ಲಿ ಅನುರಾಗ (ಕೆಂಪುಬಣ್ಣ) ಉತ್ಪನ್ನವಾಯಿತು. ಬಾಯಿಯ ಕೆಂಪುಬಣ್ಣದಿಂದ ಸಂಪಿಗೆ ಮರದಲ್ಲಿ ಕೆಂಪುಬಣ್ಣ ಹುಟ್ಟುವುದು ಆಶ್ಚರ್ಯ. ಹಾಗೆಯೇ ಸ್ತ್ರೀಯರು ಮುಖಕ್ಕೆ ಲೇಪಿಸಿದ ಅರಿಶಿನ ಬಣ್ಣದಿಂದ ಸಂಪಿಗೆ ಮರದ ಚಿಗುರೆಲೆಗಳು ಅನುರಾಗದಿಂದ (ಕೆಂಪುಬಣ್ಣ –ದಿಂದ) ಕೂಡಿದ್ದವು ಎಂಬುದು ವಿಚಿತ್ರ. ಇದು ಬಾಲಬೋಧಿನೀ ವ್ಯಾಖ್ಯಾನದಂತೆ ಹೇಳಿದ ತಾತ್ಪರ್ಯ.

**ಗುರುಸೇವಾ ವ್ಯಾಖ್ಯಾನದ ಪ್ರಕಾರ :** ಸ್ತ್ರೀಯರು ಮುಖದಿಂದ ಚಂಪಕವೃಕ್ಷವನ್ನು ಸಂತೋಷಗೊಳಿಸುವ ಮಾತುಗಳನ್ನು ಆಡಿದರು. ಆಗ ಸಂಪಿಗೆ ಮರದಲ್ಲಿ ಶೋಭಾಯಮಾನವಾದ ಹೊಸ ಚಿಗುರೆಲೆಗಳು ಹುಟ್ಟಿದವು. ಇವುಗಳಿಂದ ಸಂಪಿಗೆ ಮರವೂ ಅನುರಾಗಭರಿತವಾಯಿತು. ಇದು ವಿಚಿತ್ರ. ಅನುರಾಗ ಎಂದರೆ ಪ್ರೇಮವು ಚೇತನ ಧರ್ಮವಾದುದರಿಂದ ಜಡವಾದ ವೃಕ್ಷದಲ್ಲಿ ಪ್ರೇಮ ಉಂಟಾಯಿತು ಎಂಬುದು ಆಶ್ಚರ್ಯ. (ಇದು ಗುರುಸೇವಾ ವ್ಯಾಖ್ಯಾನಕಾರರ ಅಭಿಪ್ರಾಯ.) ಒಂದು ಸ್ಥಳದಲ್ಲಿ (ಬಾಯಿಯಲ್ಲಿ ಅಥವಾ ಮುಖದಲ್ಲಿ) ಇರುವ ಅನುರಾಗದಿಂದ (ಪ್ರೀತಿಯಿಂದ ಕೆಂಪುಬಣ್ಣದಿಂದ) ಇನ್ನೊಂದು ಸ್ಥಳದಲ್ಲಿ ಅನುರಾಗ ಉತ್ಪನ್ನವಾಗುವುದು ಅಸಂಗತ ಎಂದು ಹೇಳುವುದರಿಂದ ಇಲ್ಲಿ ಅಸಂಗತ್ಯಲಂಕಾರ. ಅಸಂಗತಿಃ ಕಾರ್ಯಹೇತ್ವೋಃ ವಿರುದ್ಧಃ ಪೃಥುಗಾಶ್ರಯಃ । ಸುಧಾ ವಿಜಯೀಂದ್ರ ತೇ ವಾಚಿ ಬುಧತಾಂತೇವಸಜ್ಜನೇ ॥ (ಅಲಂಕಾರಮಂಜರೀ)

**ಅವತಾರಿಕೆ :** ನಮೇರು (ರುದ್ರಾಕ್ಷ) ಮರದ ದೋಹದವನ್ನು ಕವಿಗಳು ವರ್ಣಿಸುತ್ತಾರೆ.

**ಯಾಸಾಂ ನ ಮೇರುಃ ಕುಚಗೌರವೇಣ ತುಲಾಯಿತೋ ನಾಜನಿ ಹಾಸಪಾತ್ರಮ್ ।**
**ನಕಾರಯುಕ್ತತ್ವದವಾಚ್ಯಭೂರುಡ್ ಜಹಾಸ ಹಾಸಾತ್ ಕುಸುಮೈಶ್ಚ ತಾಸಾಮ್ ॥೪೦॥**

**ತಾತ್ಪರ್ಯ :** ಅಲ್ಲಿರುವ ಸುಂದರ ಸ್ತ್ರೀಯರ ಸ್ತನಗಳು ಮೇರುಪರ್ವತದಂತೆ ಇದ್ದವು. ಅಂತಹಾ ಸ್ತ್ರೀಯರು ನಕ್ಕಾಗ ಮೊದಲು ನಕಾರದಿಂದ ಕೂಡಿದ ಮೇರುಶಬ್ದದಿಂದ (ನಮೇರು ಶಬ್ದದಿಂದ) ಹೇಳಲ್ಪಡುವ ನಮೇರು ಎಂಬ ಛಾಯಾವೃಕ್ಷವು ತನಗೆ ಬಯಸಿದ ನಗುವು ದೊರೆತದ್ದರಿಂದ ತಾನೂ ಹೂ ಬಿಟ್ಟು ನಗುವಂತೆ ಕಾಣಿಸಿತು. ಸ್ತ್ರೀಯರು ನಗುವಾಗ ಅವರ ಸ್ತನಗಳು ಮೇರುಪರ್ವತದಂತೆ ಇದೆಯೆಂದು ನೆನಪು ಬಂದು ಹೂ ಬಿಟ್ಟಿರುವ ನಮೇರುವೂ ನಕ್ಕಂತೆ ಕಾಣಿಸುತ್ತಿತ್ತು. (ಬಾಲಬೋಧಿನೀ) ಗುರುಸೇವಾ ವ್ಯಾಖ್ಯಾನಕಾರರ ಅಭಿಪ್ರಾಯದಂತೆ – ಅಲ್ಲಿದ್ದ ಸುಂದರ ಸ್ತ್ರೀಯರ ಭಾರವಾದ ಸ್ತನಗಳು ಮೇರುಪರ್ವತಕ್ಕೆ ಸಮನಾಗಿದೆ ಎಂಬುದಾಗಿ ಕೆಲವು ಸ್ತ್ರೀಯರು ಗುರುವಾದ ದೊಡ್ಡ ಸ್ತನಗಳನ್ನು ಮೇರುಪರ್ವತಕ್ಕೆ ಹೋಲಿಸಿದಾಗ ಆ ಮೇರುಪರ್ವತವು ಪರಿಹಾಸಕ್ಕೆ ಗುರಿಯಾಯಿತು. ಮತ್ತೆ ಕೆಲವರು ಸ್ತ್ರೀಯರ ಸ್ತನಗಳನ್ನು ಮೇರುಪರ್ವತಕ್ಕೆ ಹೋಲಿಸಬಾರದು, ಮೇರು ಪರ್ವತಕ್ಕಿಂತ ಕುಚಗಳೇ ಗುರುಗಳು ಎಂದಾಗ ಮೇರುಪರ್ವತವು ಅಪಹಾಸಕ್ಕೆ ಗುರಿಯಾಯಿತು. ಸ್ತ್ರೀಯರೂ ಮೇರುಪರ್ವತವನ್ನು ಗೇಲಿಮಾಡುತ್ತಾರೋ ಎಂಬಂತೆ ನಕ್ಕರು. ಅವರ ನಗುವಿನಿಂದ ಉತ್ತೇಜಿತವಾದ ಮೇರುಪರ್ವತಕ್ಕೆ ವಿರುದ್ಧವಾದ, ಶತ್ರುವಾದ, ನಮೇರುವೂ ಹೂಗಳನ್ನು ಬಿಟ್ಟು ಅವುಗಳ ನೆಪದಿಂದ ತಾನೂ ನಕ್ಕಂತೆ ಕಾಣಿಸುತ್ತಿತ್ತು ಎಂದು ಉತ್ಪ್ರೇಕ್ಷೆ ಮಾಡುತ್ತಾರೆ. (ನಮೇರು ವೃಕ್ಷಕ್ಕೆ ಸ್ತ್ರೀಯರ ನಗುವೇ ದೋಹದವು.)

**ಅವತಾರಿಕೆ :** ಈಗ ಕವಿಗಳು ಅನೇಕ ಸ್ತ್ರೀಯರು ತನ್ನ ಸಮೀಪದಲ್ಲಿಯೇ ಇರುವುದರಿಂದ ತನ್ನ ದೋಹದವನ್ನು (ಬಯಕೆಯನ್ನು) ಹೊಂದಿದ ಕಿಂಶುಕ (ಮುತ್ತುಗದ) ವೃಕ್ಷದ ದೋಹದವನ್ನು ವರ್ಣಿಸುತ್ತಾರೆ.

**ಷಡಂಘ್ರಿಸಂಘಾರವಕೈತವೇನ ಗಾಯನ್ ಮುದಾ ಮಾಧವಕೀರ್ತಿಮುಚ್ಚೈಃ ।**
**ದ್ವಿಜಪ್ರವೇಕೈರ್ವ್ಯರುಚತ್ ಪರೀತಃ ಶುಕೋ ಯಥಾ ತತ್ರ ಹಿ ಕಿಂಶುಕದ್ರುಃ ॥೪೧॥**

**ತಾತ್ಪರ್ಯ :** ಶುಕಾಚಾರ್ಯರು ಷಡಂಗಸಹಿತವಾದ ಎಲ್ಲ ವೇದಗಳನ್ನು ಗಾನಮಾಡುತ್ತಾ, ಪಾರಾಯಣ ಮಾಡುತ್ತಾ, ಆ ವೇದಗಳ ಅರ್ಥವನ್ನು ವಿವರಿಸಿ ಲಕ್ಷ್ಮೀಪತಿಯಾದ ಶ್ರೀಮನ್ನಾರಾಯಣನ ಕೀರ್ತಿಯನ್ನು ಎಲ್ಲರಿಗೂ ತಿಳಿಯುವಂತೆ ಹೇಳುತ್ತಾರೆ. ಶ್ರೇಷ್ಠರಾದ ದ್ವಿಜರು (ಬ್ರಾಹ್ಮಣರು) ಅವರ ಸುತ್ತಲೂ ನೆರೆದಿರುತ್ತಾರೆ. ಗಿಣಿಯು ದುಂಬಿಗಳ ಧ್ವನಿಯ ನೆಪದಿಂದ ವಸಂತನ ಮತ್ತು ವೈಶಾಖಮಾಸದ ಕೀರ್ತಿಯನ್ನು ತಾನೂ ಗಟ್ಟಿಯಾಗಿ ಹಾಡುತ್ತಾ ತಿಳಿಸುತ್ತಿದೆ. ಇತರ ಅನೇಕ ಪಕ್ಷಿಗಳಿಂದ ಸಹಿತವಾಗಿ ಶೋಭಿಸುತ್ತಿದೆ. ಅದರಂತೆ ಮುತ್ತುಗದ ಮರವೂ ಷಡಂಘ್ರಿ = ಅಂದರೆ ದುಂಬಿಗಳ ಸಮೂಹದ ಕೋಲಾಹಲದ ನೆಪದಿಂದ ತಾನೇ

ವಸಂತ ಮಾಧವನ ಮತ್ತು ವೈಶಾಖ ಮಧುಸೂದನನ ಕೀರ್ತಿಯನ್ನು ಗಟ್ಟಿಯಾಗಿ ಹಾಡುತ್ತದೋ ಎಂಬಂತೆ ಇತ್ತು. ಅನೇಕಾನೇಕ ಪಕ್ಷಿಗಳಿಂದ ಸುತ್ತುವರಿಯಲ್ಪಟ್ಟ ಆ ಕಿಂಶುಕ ವೃಕ್ಷವು ಹಿಂದೆ ಹೇಳಿದ ಶುಕಮುನಿಗಳಂತೆಯೂ, (ಗಿಣಿಯಂತೆಯೂ) ಆ ವನದಲ್ಲಿ ಶೋಭಿಸಿತು. (ಇಲ್ಲಿ ಶ್ಲಿಷ್ಟವಾದ ವಿಶೇಷಣಗಳಿಂದ ಕೂಡಿದ ಉಪಮಾಲಂಕಾರವು.)

**ವಿಶೇಷಾಂಶ :** ಇಲ್ಲಿ ಬಾಲಬೋಧಿನೀ ವ್ಯಾಖ್ಯಾನಕಾರರು ಹೀಗೆ ವಿಶ್ಲೇಷಿಸುತ್ತಾರೆ. ಅನಾಮಯ = ಆರೋಗ್ಯ, ಅನಾಮಯ ಎಂಬಲ್ಲಿರುವ ಅಮಯ ಶಬ್ದಕ್ಕೆ ರೋಗವೆಂಬ ದೋಷ ಎಂಬ ಅರ್ಥವಿದ್ದರೂ ಅನಾಮಯ ಎಂಬಲ್ಲಿ ದೋಷಸಾಮಾನ್ಯ ಎಲ್ಲಾ ವಿಧವಾದ ತೊಂದರೆಗಳು, ಉಪದ್ರವಗಳು ಇವುಗಳು ಇಲ್ಲದಿರುವುದು ಎಂಬ ಅರ್ಥವಿದ್ದ ಅನಾಮಯ ಎಂದರೆ ಯಾವ ತೊಂದರೆಯೂ ಇಲ್ಲದಿರುವಿಕೆ, ಆರೋಗ್ಯ ಎಂಬ ಅರ್ಥ ಬರುವಂತೆ ಷಡಂಘ್ರಿ ಎಂಬಲ್ಲಿ ಪಾದರೀಪವಾದ ಅಂಗವನ್ನು ಹೇಳುವ ಅಂಘ್ರಿ ಶಬ್ದವು ಅಂಗಸಾಮಾನ್ಯ ವಾಚಕವೆಂದು ಇಟ್ಟುಕೊಳ್ಳಬೇಕು. ಆದುದರಿಂದ ಅಂಘ್ರಿ ಎಂದರೆ ಶಿಕ್ಷಾ, ಕಲ್ಪ, ವ್ಯಾಕರಣ, ನಿರುಕ್ತ, ಜ್ಯೋತಿಷ, ಛಂದಸ್ಸು, ಎಂಬ ಷಡಂಗಗಳು ಅವುಗಳಿಂದ ಕೂಡಿದ ವೇದವೇ ಷಡಂಘ್ರಿ ಎಂಬ ಅರ್ಥವನ್ನು ಇಟ್ಟುಕೊಳ್ಳಬೇಕು ಎಂದು ಈ ವ್ಯಾಖ್ಯಾನಕಾರರ ಅಭಿಪ್ರಾಯ.

**ಅವತಾರಿಕೆ :** ಈಗ ಕವಿಗಳು ಕಿಂಶುಕ ವೃಕ್ಷವನ್ನು ನೃಸಿಂಹಾಕಾರವುಳ್ಳದ್ದು ಎಂದು ವರ್ಣಿಸುತ್ತಾ ವೃಕ್ಷಗಳ ದೋಹದ ವರ್ಣನೆಯನ್ನು ಮುಗಿಸುತ್ತಿದ್ದಾರೆ.

**ಕಿಂಶುಕಃ ಕುಸುಮಮಾಲಯಾ ವನೇ ಫುಲ್ಲಯಾ ಕಿಮುತರಾಂ (ಚ ನಿತರಾಂ) ವಿದಿದ್ಯುತೇ।**
**ದಾನವಾರಿಮಸುರಾಂತ್ರಮಾಲಯಾ ಮಂಡಿತಂ ಖಲು ವಿಡಂಬಯನ್ನಿವ ॥೪೨॥**

**ತಾತ್ಪರ್ಯ :** ಆ ಅರಣ್ಯದಲ್ಲಿ ಅರಳಿದ ಕೆಂಪಾದ ಹೂವುಗಳ ಸಾಲಿನಿಂದ ಕೂಡಿದ ಒಂದು ದೊಡ್ಡ ಮುತ್ತುಗದ ಮರವಿತ್ತು. ಅದು ಹಿರಣ್ಯಕಶಿಪುವನ್ನು ಕೊಂದು ಅವನ ಕರುಳುಗಳ ಮಾಲೆಯನ್ನು ಹಾಕಿಕೊಂಡು ಅಲಂಕೃತನಾದ ದೈತ್ಯಶತ್ರುವಾದ ನರಸಿಂಹ ದೇವರನ್ನು ತಾನೂ ಅನುಕರಣೆ ಮಾಡುತ್ತಿದೆಯೋ, ಅಥವಾ ನರಸಿಂಹ ವೇಷವನ್ನು ಹಾಕಿಕೊಂಡು ನರಸಿಂಹದೇವರನ್ನು ಉಪಹಾಸ ಮಾಡುತ್ತಿದೆಯೋ ಎಂಬಂತೆ ಈ ಕಾಡಿನಲ್ಲಿ ಬಹಳ ಚೆನ್ನಾಗಿ ಶೋಭಿಸುತ್ತಿತ್ತು. (ಉತ್ಪ್ರೇಕ್ಷಾಲಂಕಾರ)

**ಅವತರಣಿಕೆ :** ಈ ರೀತಿಯಾಗಿ ದೋಹದ ವಿನೋದವನ್ನು ನೋಡಿ ಶ್ರೀ ವೇಂಕಟನಾಥಾಚಾರ್ಯರು ತಮ್ಮ ಊರಿಗೆ ಹೋಗಿ ತಮ್ಮ ಮನೆಯನ್ನು ಪ್ರವೇಶಿಸಿ ಅಲ್ಲಿ ಸುಖವಾಗಿ ಬಹುಕಾಲ ವಾಸಿಸಿದರು ಎಂದು ವರ್ಣಿಸುತ್ತಾ ದೋಹದ ವರ್ಣನೆಯನ್ನು ಉಪಸಂಹರಿಸುತ್ತಾರೆ.

**ಸ ಇತ್ಥಮಾಲೋಕ್ಯ ವನಂ ಗತಾನಾಂ ವಿಲಾಸಿನೀನಾಂ ವಿಹೃತಿಪ್ರಭೇದಾನ್ ।**
**ಉಪೇಂದ್ರವಜ್ರಾಯಿತಕಾಯಸಾರೋ ಗೃಹಂ ಪ್ರವಿಶ್ಯಾಬ್ದಗಣಾನ್ಮುಮೋದ ॥೪೩॥**

**ತಾತ್ಪರ್ಯ :** ಶ್ರೀವೇಂಕಟನಾಥಾಚಾರ್ಯರು ವಿವಾಹ ಮಾಡಿಕೊಂಡು ಹಿಂದಿರುಗುತ್ತಿರುವಾಗ ವನ ಸಮೀಪದಲ್ಲಿ ಅನೇಕ ಮಂದಿ ವಿಲಾಸವತಿಯರಾದ ಸ್ತ್ರೀಯರು ವೃಕ್ಷಗಳಲ್ಲಿ ಅಂಕುರ ಪುಷ್ಪಾದಿಗಳನ್ನು ಉಂಟುಮಾಡುವ ದೋಹದ ಕ್ರೀಡೆಯನ್ನು ಮಾಡುತ್ತಿರುವುದನ್ನು ಕಂಡರು. ಇಂದ್ರನ ವಜ್ರಾಯುಧದಂತೆ ಅವರ ದೇಹದ ಸಾರವು, ದೇಹ ಬಲವು ಅತ್ಯಂತ ದೃಢವಾಗಿತ್ತು. ಆದ್ದರಿಂದ ಸ್ತ್ರೀಯರ ನಾನಾ ವಿಲಾಸಗಳನ್ನು ನೋಡಿದರೂ ಅವರು ಮನಸ್ಸು ಮತ್ತು ದೇಹಗಳಲ್ಲಿ ಸ್ವಲ್ಪವೂ ವಿಕಾರ ಹೊಂದಲಿಲ್ಲ. ಅವರು ಊರಿಗೆ ಬಂದು ಗೃಹಪ್ರವೇಶ ಮಾಡಿ ಬಹುವರ್ಷಕಾಲ ಸುಖವಾಗಿ ವಾಸ ಮಾಡುತ್ತಿದ್ದರು. (ಇಲ್ಲಿ ಇಂದ್ರವಜ್ರಾಯಿತಕಾಯಸಾರಃ ಎಂಬ ವಿಶೇಷಣವು ಅಭಿಪ್ರಾಯ ಗರ್ಭಿತವಾಗಿರುವುದರಿಂದ ಈ ಶ್ಲೋಕದಲ್ಲಿ ಪರಿಕರಾಲಂಕಾರವು. ಅಲಂಕಾರಃ ಪರಿಕರಃ ಸಾಭಿಪ್ರಾಯೇ ವಿಶೇಷಣೇ । ಸುಧಾಂಶು ಕಲಿತೋತ್ತಂಸಃ ತಾಪಂ ಹರತು ವಾ ಸೂನೋಃಪುರತಃ ಸ್ಥಾತಾ ವಿಜಯೀಂದ್ರ ತೇ ॥ (ಅಲಂಕಾರಮಂಜರೀ)

**ಶ್ರೀಮತ್ಕಶ್ಯಪವಂಶವಾರ್ಧಿಶಶಿನಃ ಷಡ್ದರ್ಶಿನೀವಲ್ಲಭ–**
**ಶ್ರೀಲಕ್ಷ್ಮೀನರಸಿಂಹವಿತ್ತವಿದುಷಃಶ್ರೀವೇಂಕಟಾಂಬಾಮಣೌ ।**
**ಜಾತೇನಾರ್ಯದಯಾಸುಧಾಮಯಗಿರಾ ನಾರಾಯಣೇನೋದಿತೇ**
**ಕಾವ್ಯೇ ಚಾರುಣಿ ರಾಘವೇಂದ್ರವಿಜಯೇ ಸರ್ಗೋಽಭವತ್ ಪಂಚಮಃ ॥**

ಈ ಶ್ಲೋಕದ ತಾತ್ಪರ್ಯವನ್ನು ಈ ಹಿಂದೆಯೇ ಹೇಳಲಾಗಿದೆ.

**ಈ ರೀತಿಯಾಗಿ ಶ್ರೀನಾರಾಯಣಾಚಾರ್ಯರಿಂದ ರಚಿತವಾದ**
**ಶ್ರೀರಾಘವೇಂದ್ರವಿಜಯಮಹಾಕಾವ್ಯದಲ್ಲಿ ಐದನೇ ಸರ್ಗವು**
**ಸಮಾಪ್ತವಾಯಿತು.**

# ಪಂಚಮಸರ್ಗದ ಕಥಾಸಾರ

**ವರನನ್ನು ಕರೆದುಕೊಂಡು ಬರುವುದು** — ಶ್ರೀವೇಂಕಟನಾಥರು ತಮ್ಮ ಬಂಧುಗಳೊಡನೆ ಅಗ್ರಹಾರ ಪ್ರವೇಶ ಮಾಡಿದರೆಂದು ಕೇಳಿದ ಕೂಡಲೇ ಕನ್ಯೆಯ ಸುಖ ಸೌಭಾಗ್ಯಗಳನ್ನೇ ಯಾವಾಗಲೂ ಕೋರುವ ಕನ್ಯೆಯ ತಂದೆ ತಾಯಿಗಳು ಬಹಳ ಪ್ರೀತಿಯಿಂದ ಅವರನ್ನು ಸ್ವಾಗತಿಸಲು ಹೋದರು. ಬೇಗನೆ ಹತ್ತಿರ ಹೋಗಿ ಬಹಳ ಹೊತ್ತು ಪುನಃ ಪುನಃ ನೋಡಿ ಸಂತೋಷಪಟ್ಟರು. ಅತ್ಯಂತ ಪ್ರಭಾವಿಯಾದ ಶ್ರೀವೇಂಕಟನಾಥರು ತನಗೆ ಮುಂದೆ ಆಗಲಿರುವ ಅತ್ತೆ ಮಾವಂದಿರಿಗೆ ನಮಸ್ಕಾರ ಮಾಡಿದರು. ಅವರಿಬ್ಬರೂ ಯೋಗ್ಯವಾದ ಆಶೀರ್ವಾದವನ್ನು ಮಾಡಿದರು. ಅಲ್ಲಿ ಬಂದಿರುವ ವರನ ಕಡೆಯವರೂ ವಧುವಿನ ಕಡೆಯವರೂ ವಯಸ್ಸು ಮತ್ತು ಗುಣಗಳಲ್ಲಿ ಸಮಾನರಾಗಿದ್ದವರನ್ನು ನೋಡಿ ಪರಸ್ಪರ ಆಲಿಂಗಿಸಿಕೊಂಡರು. ವಯಸ್ಸಿನಲ್ಲಿ ಚಿಕ್ಕವರು ದೊಡ್ಡವರಿಗೆ ನಮಸ್ಕಾರ ಮಾಡಿದರು. ವಯಸ್ಸಿನಲ್ಲಿ ದೊಡ್ಡವರು ಚಿಕ್ಕವರಿಗೆ ಬಹಳವಾಗಿ ಆಶೀರ್ವಾದ ಮಾಡಿದರು. ಅನಂತರ ವಿನಯಭರಿತನಾದ ಸ್ನೇಹಿತರಿಂದ ಕೂಡಿದ ವರನನ್ನು ವರನಿಗಾಗಿ ಏರ್ಪಡಿಸಿದ ತಮ್ಮದೇ ಆದ ಬೇರೊಂದು ಮನೆಗೆ ಕರೆದೊಯ್ದರು. ಅದು ಸಕಲ ಸಂಪತ್ತುಗಳಿಂದ ಕೂಡಿದ ಉಜ್ಜಯಿನೀ ನಗರವನ್ನೂ ಜಯಿಸುವಂತಿತ್ತು. ವಧುವಿನ ಮಾತಾಪಿತೃಗಳು ವಾಸ ಮಾಡುವ ಮನೆಯಂತೆಯೇ ಇರುವ ಮನೆಯಲ್ಲಿ ವರನೂ ವರನ ಕಡೆಯವರೂ ಇಳಿದುಕೊಂಡರು.

**ಬಿಸಿ ಊಟ** — ಆ ದಿನ ರಾತ್ರಿಯಲ್ಲಿ ಎಲ್ಲಾ ಕಡೆಯಲ್ಲಿಯೂ ರೇಶ್ಮೆಯ ಪಟ್ಟುವಸ್ತ್ರದಿಂದ ನಿರ್ಮಿತವಾದ ಮೇಲ್ಕಟ್ಟುಳ್ಳ ತಂಪಾದ ಮಂಟಪದಲ್ಲಿ ಎಲ್ಲರಿಗೂ ಊಟವಾಯಿತು. ಆಗ ಅನೇಕ ತರಹ ಭಕ್ಷ್ಯಗಳನ್ನೂ ಊಟ ಮಾಡುತ್ತಿದ್ದ ವರನ ಕಡೆಯವರು ತಂಪಾದ ಈ ಸ್ಥಳದಲ್ಲಿ ತಂಪಾದ ರಾತ್ರಿ ಹೊತ್ತಿನಲ್ಲಿ ಬಿಸಿ ಊಟವು ಬಹಳ ಆಶ್ಚರ್ಯಕರವಾಗಿದೆ ಎಂದು ಹೇಳುತ್ತಾ "ಅಹಹ ಬಹಳ ಚೆನ್ನಾಗಿದೆ ಬಿಸಿ ಊಟ" ಎಂದು ಪರಿಹಾಸ ಮಾಡುತ್ತಾ ನಗುತ್ತಾ ಆ ಬಿಸಿ ಊಟವನ್ನು ಹೊಗಳಿದರು. ಶ್ರೀವೇಂಕಟನಾಥರನ್ನು ನೋಡಲು ಬಂದ ಎಲ್ಲಾ ಬಂಧು ಜನರು ಕನ್ಯೆಯ ತಂದೆ ತಾಯಿಗಳ ಮಾತಿನಂತೆ ಆ ರಾತ್ರಿ ಪರಸ್ಪರ ವಿನೋದ ಸಂಭಾಷಣೆ ನಡೆಸುತ್ತಾ ಅಲ್ಲಿಯೇ ಉಳಿದರು.

**ವಿವಾಹದಿನದ ಕರ್ತವ್ಯಗಳು** — ಮರು ದಿವಸ ಬೆಳಗಾಯಿತು. ಸೂರ್ಯನ ಉದಯವಾಯಿತು. ಆಗಲೇ ಶ್ರೀವೇಂಕಟನಾಥರು ಸ್ನಾನ ಮಾಡಿ ಗಾಯತ್ರೀ ಜಪವನ್ನು ಮಾಡುತ್ತಾ ಜಗತ್ತಿನ ಸೃಷ್ಟಿಕರ್ತನಾದ ನಾರಾಯಣನನ್ನು ಸ್ತೋತ್ರ ಮಾಡುತ್ತಾ ನಮಸ್ಕಾರ ಮಾಡುತ್ತಾ ಇದ್ದರು. ಆಗ ಅನೇಕ ಬಂಧುಗಳು ತಾವು ನಿತ್ಯಾಹ್ನಿಕವನ್ನು ಪೂರೈಸಿ ಶ್ರೀವೇಂಕಟನಾಥರ ಬಳಿ ಬಂದು ಸೇರಿದರು. ವಧುವಿನ ತಂದೆಯು ಬ್ರಾಹ್ಮಣರೊಡನೆ ಸೇರಿಕೊಂಡು ಶ್ರೀವೇಂಕಟನಾಥರ ಕಾಶೀ ಯಾತ್ರೆಯ ವ್ಯವಸ್ಥೆಯನ್ನು ಮಾಡಿದನು. ನಾನಾ ವಸ್ತ್ರಗಳು, ವಾಹನಗಳು, ಕುಂಕುಮ, ಗಂಧ, ಅತ್ತರು ಮುಂತಾದವುಗಳಿಂದ ಶ್ರೀವೇಂಕಟನಾಥರನ್ನು ಪೂಜಿಸಿ ಬೇಗನೆ ಅಷ್ಟವರ್ಗವೆಂಬ ಅಭ್ಯುದಯೋತ್ಸವವನ್ನು ಆರಂಭ ಮಾಡಿದರು. ವಧುವಿನ ತಂದೆ ತಾಯಿಗಳು ನವಗ್ರಹ ಪೂಜಾ ಕುಲದೇವತಾ ಪೂಜೆ ಇವನ್ನೆಲ್ಲಾ ಮಾಡಿ ಆ ದೇವತೆಗಳ ಅನುಗ್ರಹ ಪ್ರಾರ್ಥನೆಯನ್ನು ಮಾಡಿ ನಿರ್ವಿಘ್ನವಾಗಿ ಆರಂಭಿಸಿದ ಕಾರ್ಯವು ಮಂಗಳದಿಂದ ಕೊನೆಗೊಳ್ಳಲಿ ಎಂದು ಪ್ರಾರ್ಥಿಸುತ್ತಾ ಪೂರ್ಣಫಲ, ಪುಷ್ಪ ಮುಂತಾದ ವಸ್ತುಗಳನ್ನು ದೇವರಿಗೆ ಸಮರ್ಪಿಸಿದರು. ಪ್ರಯಾಜವೆಂಬ ಅಂಗಯಾಗವನ್ನು ಮಾಡಿ ಹೇಗೆ ಪ್ರಧಾನ ಯಾಗವನ್ನು ಮಾಡುತ್ತಾರೋ ಅದರಂತೆ ವಧುವಿನ ತಂದೆಯು, ವಿವಾಹಾಂಗವಾದ ಮಧುಪರ್ಕದಿಂದ ವರನನ್ನು ಪೂಜಿಸಿ ಶ್ರೀವೇಂಕಟನಾಥರಿಗೆ ತನ್ನ ಮಗಳಾದ ಸರಸ್ವತಿಯನ್ನು ಕನ್ಯಾದಾನ ವಿಧಿಪೂರ್ವಕವಾಗಿ ಕೊಟ್ಟರು. ಪರಸ್ಪರ ನಿರೀಕ್ಷಣ ಕಾಲದಲ್ಲಿ, ತನ್ನ

ಮುಖಚಂದ್ರನ ದರ್ಶನದಿಂದ ಸರಸ್ವತಿಯ ಮುಖ ಕಮಲವು ಸ್ವಲ್ಪ (ಲಜ್ಜೆಯಿಂದ)ಸಂಕೋಚ ಹೊಂದಿದ್ದನ್ನು ಶ್ರೀವೇಂಕಟನಾಥರು ಕಂಡರು. ಅನಂತರ ಆ ಸರಸ್ವತಿಯು ಅರಳಿ ನಗುತ್ತಿದ್ದ ನೈದಿಲೆಯಂತಹ ಕಣ್ಣುಗಳಿಂದ ಶ್ರೀವೇಂಕಟನಾಥರ ಮುಖ ಚಂದ್ರನನ್ನು ನೋಡಿದಳು. ಸಭಾ ಪೂಜೆಯ ಸಮಯದಲ್ಲಿ ವಧುವಿನ ಕಡೆಯ ಸುಮಂಗಲಿಯರೆಲ್ಲರೂ ಬೇರೆ ಕೆಲಸದಲ್ಲಿ ಆಸಕ್ತರಾಗಿದ್ದರು. ಆಗ ಮದುವೆ ನೋಡುವುದಕ್ಕೆ ಬಂದಿದ್ದ ಆ ಸಭೆಯಲ್ಲಿ ಕುಳಿತಿದ್ದ ಒಬ್ಬಳು ಎದ್ದಳು. ಕುಂದಪುಷ್ಪದಂತಹ ದಂತಗಳು, ಇಂದುವಿನಂತಹ ವದನ, ಮನ್ಮಥನ ಬಾಣವಾದ ಪುಷ್ಪಗಳಂತೆ ಕೋಮಲವಾದ ಅಂಗ, ಸ್ವಲ್ಪ ಕೆಂಪಾದ ಬಣ್ಣ, ನಸುನಗುತ್ತಿರುವ ಮುಖ, ನೋಡಿದವರಿಗೆ ಸಂತೋಷ-ವುಂಟು ಮಾಡುವ ಭಂಗಿ, ಇವೆಲ್ಲವೂ ಅವಳಲ್ಲಿ ಸೇರಿದ್ದವು. ಅವಳು ಬೇಗನೆ ಬಂದರೂ ಮೆಲ್ಲಡಿ ಇಟ್ಟು ಬರುವಂತೆ ಕಾಣುತ್ತಿದ್ದಳು. ಹಂಸಗಳನ್ನು ನಾಚಿಸುವ ನಡಿಗೆಯಿಂದ ಚೆಂಡಿನಂತಹ ತನ್ನ ಸ್ತನಗಳನ್ನು ಕಲುಕಿಸುತ್ತಾ ಅವಳು ಮನ್ಮಥನ ಓಡಾಡುತ್ತಿರುವ ಜಯಧ್ವಜಗಳಂತಿರುವ ಅನೇಕ ಸುಮಂಗಲಿಯರನ್ನು ಗಂಧ, ಅರಸಿನ, ಕುಂಕುಮ, ಅತ್ತರು, ಮುಂತಾದವುಗಳಿಂದ ಪೂಜಿಸಿದಳು. ಸ್ವರದಿಂದ ಹೆಣ್ಣು ಗಿಳಿಗಳನ್ನೂ ಕಿನ್ನರ ಕನ್ಯೆಯರನ್ನೂ ಹೆಣ್ಣು ಕೋಗಿಲೆಗಳನ್ನೂ ಜಯಿಸುವ ಯುವತಿಯರ ಗೀತೆಗಳಿಂದ ಮನೆಯಲ್ಲಿದ್ದ ಮಾವಿನ ಮರಗಳು ಹೂ ಬಿಟ್ಟು ಪುಷ್ಪ ವೃಷ್ಟಿಯನ್ನು ಮಾಡಿದವು. ಆ ಪುಷ್ಪ ವೃಷ್ಟಿಯು ವಧೂ ವರರನ್ನು ನೋಡಲು ಬಂದಿದ್ದ ದೇವತೆಗಳಿಂದ ಮಾಡಲ್ಪಟ್ಟದ್ದೋ ಎಂಬಂತೆ ಶೋಭಿಸುತ್ತಿತ್ತು. ವಿವಾಹವು ಮುಗಿಯುತ್ತಾ ಬಂದಾಗ ವಧೂ ವರರ ಕಡೆಯ ಪುರೋಹಿತರಿಬ್ಬರೂ ಉಡುಗೊರೆ ಓದಿಸುವವರ ಸಂಖ್ಯೆಯು ಬಹಳವಾಗಿರುವುದನ್ನು ತಿಳಿದು ಸಂಕ್ಷಿಪ್ತವಾದ ಋಕ್ಕು-ಗಳಿಂದ ವಧೂ-ವರರಿಗೆ ಸೀರೆ ಕುಪ್ಪಸ ವಸ್ತ್ರ ಆಭರಣ ಮೊದಲಾದ ಉಡುಗೊರೆಗಳನ್ನು ಒಪ್ಪಿಸಿದರು. ಉಡುಗೊರೆಯಾದಮೇಲೆ ಇಬ್ಬರು ಸುಮಂಗಲಿಯರು ಮೇಲೆದ್ದು ದ್ರುತಗತಿಯಿಂದ ಹೊರಟು ವಿಲಂಬಿತ ಗತಿಯಿಂದ ಬಂದು ಸುತ್ತುತ್ತಿರುವ ಚಂದ್ರನಂತಿರುವ ದೀಪ ಸಹಿತವಾದ ಬೆಳ್ಳಿಯ ಹರಿವಾಣವನ್ನು ನಾಲ್ಕು ಕೈಗಳಿಂದ ಹಿಡಿದು ವಧೂವರರ ಎದುರಿನಲ್ಲಿ ಪ್ರದಕ್ಷಿಣಾಕಾರವಾಗಿ ಸ್ತುತಿಸುತ್ತಾ ಆರತಿಯನ್ನು ಮಾಡಿದರು. ಆಗ ನಾನಾ ವಿದ್ಯಾಸಂಪನ್ನರಾದ ವಿದ್ವಾಂಸರಿಗೆ ಉಚಿತವಾದ ಕುಂಡಲಾದಿ ಅಲಂಕಾರಗಳಿಂದ ಪ್ರಕಾಶಿಸುತ್ತಿರುವ ಹಿರಿಯ ಬ್ರಾಹ್ಮಣರು ಗಟ್ಟಿಯಾಗಿ ವೇದಘೋಷ ಮಾಡುತ್ತಾ ಅಕ್ಷತೆಯ ಕಾಳನ್ನು ಎರಚುತ್ತಾ ದಂಪತಿಗಳಿಗೆ ಆಶೀರ್ವಾದ-ಗಳನ್ನು ಮಾಡಿದರು. "ಈ ವಧೂವರರಿಬ್ಬರೂ ದೀರ್ಘಾಯುಸ್ಸನ್ನು ಹೊಂದಲಿ. ಇವರಿಬ್ಬರಿಗೂ ನಿರಂತರವಾಗಿ ಪ್ರೀತಿಯಿರಲಿ, ಅದು ಹೆಚ್ಚುತ್ತಾ ಇರಲಿ. ಇವರಿಬ್ಬರು ಗುಣಾಢ್ಯರಾದ ಎಂಟು ಮಕ್ಕಳನ್ನು ಪಡೆಯಲಿ. ಧನ್ಯರಾದ ಈ ದಂಪತಿಗಳು ಶ್ರೇಷ್ಠವಾದ ಸಂಪತ್ತನ್ನೂ ಒಳ್ಳೆಯ ಸಂತತಿಯನ್ನೂ ಸೌಖ್ಯವನ್ನೂ, ಧಾನ್ಯ, ಭೂಮಿ, ಮತ್ತು ಗೋವುಗಳ ಸಮೃದ್ಧಿಯನ್ನು ಪಡೆಯಲಿ. ಬಲಾಸುರ ಶತ್ರುವಾದ ಇಂದ್ರನ ವಿಷಯದಲ್ಲಿ ಇಂದ್ರಾಣಿಯಂತೆಯೂ (ಶಚೀದೇವಿಯಂತೆಯೂ), ಲೋಕೇಶ್ವರನಾದ ಬ್ರಹ್ಮನ ವಿಷಯದಲ್ಲಿ ವಾಣೀ ದೇವಿಯಂತೆಯೂ ಶ್ರೀಹರಿಯ ವಿಷಯದಲ್ಲಿ ಕ್ಷೀರಸಾಗರ ಕನ್ಯೆಯಾದ ಲಕ್ಷ್ಮೀಯಂತೆಯೂ ವಿಷಕಂಠನಾದ ಶಿವನ ವಿಷಯದಲ್ಲಿ ಹಿಮವಂತನ ಮಗಳಾದ ಪಾರ್ವತಿಯಂತೆಯೂ ಈ ಸರಸ್ವತಿಯು ಪ್ರಿಯಪತಿಯ ಮನಸ್ಸಿಗೆ ಮನಃಸಂತೋಷವುಂಟು ಮಾಡುತ್ತಾ ಇರಲಿ" ಎಂದು ಆಶೀರ್ವದಿಸಿದರು.

ಅನಂತರ ವಧೂ-ವರರು ಹಿರಿಗುರುಗಳನ್ನೂ, ಹಿರಿಯ ಬ್ರಾಹ್ಮಣರನ್ನೂ, ಮುದಿ ಮುತ್ತೈದೆಯರನ್ನೂ ನಮಸ್ಕರಿಸಿದರು. ಕನ್ಯೆಯ ತಂದೆಯು ವರನ ಕಡೆಯ ಸಭ್ಯ ಗೃಹಸ್ಥರಿಗೆ ಬಡಿಸಲು ತನ್ನ ಕಡೆಯ ಸುಮಂಗಲಿ-ಯರನ್ನು ನೇಮಿಸಿ, ಅರಳಿದ ತಾವರೆಯಂತಹ ಕಣ್ಣುಗಳುಳ್ಳ ವಧೂ-ವರರಿಗೆ ಇಬ್ಬರಿಗೂ ತಾನೇ ಬಡಿಸುತ್ತಾ ಪರಸ್ಪರ ಉಚ್ಛಿಷ್ಟವನ್ನು (ಎಂಜಲನ್ನು) ಊಟ ಮಾಡಿಸಲು ಪ್ರಾರಂಭಿಸಿದರು. ವಿದ್ವಾಂಸರ ಸಮೂಹಗಳಿಂದ ಸುತ್ತುವರಿ-ಯಲ್ಪಟ್ಟ ಶ್ರೀವೇಂಕಟನಾಥರು ಮೂರು ದಿನ ಹೀಗೆ ವಿವಾಹದೀಕ್ಷೆಯನ್ನು ಕೈಗೊಂಡು ಯಾಗದೀಕ್ಷಿತನಾದ

ಯಜಮಾನನಂತೆ ಪ್ರತಿದಿನವೂ ಬ್ರಾಹ್ಮಣ ಭೋಜನ ಮಾಡಿಸುತ್ತಾ, ಅನಂತರ ಅವರವರ ಅಂತಸ್ತಿಗೆ ತಕ್ಕಂತಹ ವಸ್ತ್ರಾದಿ ಉಪಚಾರಗಳಿಂದಲೂ ತಾಂಬೂಲ ದಕ್ಷಿಣೆಗಳಿಂದಲೂ ಸಂತೋಷಪಡಿಸಿದರು. ಶ್ರೀವೇಂಕಟನಾಥರ ವಿನಯ ವಿದ್ವತ್ತು ಮುಂತಾದ ಗುಣಗಳಿಂದ ಎಲ್ಲರೂ ಸಂತೋಷ ಪಟ್ಟರು. ನಾಲ್ಕನೆಯ ದಿನ ಹೀಗೆ ಅಸಾಧಾರಣ ವೈಭವದಿಂದ ಶ್ರೀವೇಂಕಟನಾಥರ ವಿವಾಹ ಮಹೋತ್ಸವವು ಜರುಗಿತು. ಕನ್ಯೆಯ ತಂದೆತಾಯಿಗಳು, ಮತ್ತಿತರ ಬಂಧುಗಳೂ ನಾನಾವಿಧವಾದ ಕನ್ಯಾ ಧನವನ್ನು (ಬಳುವಳಿಗಳನ್ನು) ಕೊಟ್ಟರು. ಶ್ರೀವೇಂಕಟನಾಥರು ಅವರನ್ನೆಲ್ಲಾ ಬೀಳ್ಕೊಂಡು ತನ್ನ ಬಂಧುಗಳಿಂದಲೂ ಪತ್ನಿಯಿಂದಲೂ ಕೂಡಿಕೊಂಡು ಹಿಂದಿರುಗಿ ಬರುತ್ತಾ ದಾರಿಯಲ್ಲಿ ಸೌಂದರ್ಯದಿಂದ ಅಪ್ಸರೆಯರನ್ನು ನಾಚಿಸುವಂತಿದ್ದ ಸುಂದರಿಯರು ವೃಕ್ಷಗಳಿಗೆ ಅಕಾಲದಲ್ಲಿಯೂ ಹೂವು ಬರುವಂತೆ ಮಾಡುವ ನಾನಾ ವಿಧವಾದ ದೋಹಲ ಕ್ರೀಡೆ ಮಾಡುತ್ತಿರುವುದನ್ನು ಕಂಡರು. ಬೆದರಿದ ಎರಳೆಯಂತಹ ಕಣ್ಣುಗಳುಳ್ಳ ಒಬ್ಬಳು ಕಾಲುಗಳಿಂದ ಅಶೋಕ ವೃಕ್ಷದ ತಾಡನ ಮಾಡಿದಳು. ತಾವರೆಗಣ್ಣಿನ ಮತ್ತೊಬ್ಬಳು ಕುರಬಕ ವೃಕ್ಷವನ್ನು ಅಪ್ಪಿಕೊಂಡಳು. ಮತ್ತೊಬ್ಬಳು ಕಮಲಾಕ್ಷಿಯಾದ ಕಾಮಿನಿಯು ಬಾಯಿಯಲ್ಲಿರುವ ಮಧುವಿನ ಗಂಡೂಷದಿಂದ (ಮುಕ್ಕಳಿಸಿ ಉಗಿಯುವುದು) ಬಕುಲ ವೃಕ್ಷವನ್ನು ಚುಮುಕಿಸಿದಳು. ಕನ್ನೈದಿಲೆಯಂತೆ ಕಣ್ಣುಗಳುಳ್ಳ ಮತ್ತೆ ಕೆಲ ಕೆಲವು ಸುಂದರಿಯರು ಕಡೆಗಣ್ಣಿನ ನೋಟಗಳಿಂದ ತಿಲಕ ವೃಕ್ಷವನ್ನು ಅನುಗ್ರಸಿದರು. ಮತ್ತೆ ಕೆಲವರು ನಮೇರು ವೃಕ್ಷದಬಳಿ ನಗುತ್ತಿದ್ದರು. ಮತ್ತೊಬ್ಬಳು ಜಲಜಾಕ್ಷಿಯು ತನ್ನೆರಡೂ ಕೈಗಳನ್ನು ತಿಕ್ಕಿದಾಗ ಅವಳ ಕೈಯಿಂದ ಸುವಾಸನೆಯು ಹೊರಟಿತು. ಅಂತಹ ಕೈಯಿಂದ ಅವಳು ಮಾವಿನ ಮರವನ್ನು ವಿಲಾಸದಿಂದ ಮುಟ್ಟಿದಳು. ಮತ್ತೊಬ್ಬಳು ವಿಶಾಲಾಕ್ಷಿಯು ಗಿಣಿ, ಕೋಗಿಲೆ, ಕಿನ್ನರ ಕನ್ಯೆಯರ ದರ್ಪವನ್ನು ಅಡಗಿಸುವ ತನ್ನ ಗಾನದಿಂದ ಪ್ರಿಯಾಲವೆಂಬ ಮರವನ್ನು ಅನುಗ್ರಸಿದಳು. ಮತ್ತೊಬ್ಬಳು ಪದ್ಮಾನನೆಯು ಉಫ್ ಎಂದು ಎಂದು ಊದಿ ಸಿಂಧು-ವಾರವೃಕ್ಷವನ್ನು ಪೂಜಿಸಿದಳು. ಮತ್ತೊಬ್ಬಳು ತಾವರೆಗಣ್ಣಿನ ಬೆಡಗುಗಾತಿಯು ಹೆಣ್ಣು ಕೋಗಿಲೆಯ ಧ್ವನಿಯಂತಹ ಧ್ವನಿಯಿಂದ ಏನೇನೋ ಸಮಾಚಾರಗಳನ್ನು ಹೇಳುತ್ತಾ ಕರ್ಣಿಕಾರ ವೃಕ್ಷವನ್ನು ಸಂತೋಷಪಡಿಸುತ್ತಿರುವಾಗ, ಅಲ್ಲಿದ್ದ ಯುವಕರೂ ಮೈಮರೆಯುತ್ತಿದ್ದರು. ಮತ್ತೆ ಕೆಲವರು ಮಹಿಳೆಯರು ಬಾಯಿಯಲ್ಲಿರುವ ತಾಂಬೂಲ ರಸವನ್ನು ಸಂಪಿಗೆಯ ಮರದ ಮೇಲೆ ಉಗುಳುತ್ತಾ ಬಾಯಿಯಿಂದ ಸಂತೋಷ ಪಡಿಸುವ ಲಲನೆಯ ಮಾತುಗಳನ್ನಾಡು-ತ್ತಿದ್ದರು. ಅನೇಕ ಸ್ತ್ರೀಯರ ಸಾನ್ನಿಧ್ಯದಿಂದಲೇ ಕಿಂಶುಕ ವೃಕ್ಷವು ಪರವಶತೆಯನ್ನು ಹೊಂದಿತು. ಹೀಗೆ ಹೂವಿಲ್ಲದ ಬರಡಾದ ಜಡ ವೃಕ್ಷಗಳೂ ಸ್ತ್ರೀಯರ ಕಾಲುಗಳ ಒದೆತ, ಥೂತ್ಕಾರ, ಮುಂತಾದ ಅಪಮಾನದಂತಹ ಕಾರ್ಯ-ಗಳಿಂದಲೂ ಸಂತೋಷಪಟ್ಟು ಮೈ ಮರೆತು ಹೂವುಗಳಿಂದ ತುಂಬಿಕೊಂಡಿರುತ್ತಿದ್ದವು. ನಗುತ್ತಿದ್ದವು. ಹೀಗಿರುವಾಗ ಜ್ಞಾನವುಳ್ಳ ಮಾನವರು ಆ ಮಾನಿನಿಯರ ದಾಸರಾಗುತ್ತಾರೆಂದರೆ ಆಶ್ಚರ್ಯವಿದೆಯೇ? ಯುವಕರ ಮನಸ್ಸಿಗೆ ಕ್ಷೋಭೆಯನ್ನುಂಟು ಮಾಡುವ ಹೆಂಗಸರು ಮಾಡುತ್ತಿದ್ದ ಈ ವೃಕ್ಷದೋಹಲ ಕ್ರೀಡೆಯನ್ನು ನೋಡುತ್ತಾ ಎಲ್ಲರೂ ಮನ್ಮಥ ಪರಾನರಾಗಿ ಮೋಹಗೊಳ್ಳುತ್ತಿದರು. ಶ್ರೀವೇಂಕಟನಾಥರು ಆ ಕ್ರೀಡೆಯನ್ನು ನೋಡುತ್ತಿದ್ದರೂ ನೋಡ-ದವರಂತೆ ಮನಸ್ಸಿನಲ್ಲಿ ಸ್ವಲ್ಪವೂ ವಿಕಾರ ಹೊಂದದೆ ನಗುತ್ತಾ ತಮ್ಮ ಮನೆಯನ್ನು ಪ್ರವೇಶಿಸಿದರು.

★ ★ ★

ವಿದ್ವತ್ಕುಲಾವತಂಸ,
ಮಹಾಕವಿ ಶ್ರೀಮನ್ನಾರಾಯಣಾಚಾರ್ಯೇಣ ರಚಿತಂ

# ಶ್ರೀಮದ್ರಾಘವೇಂದ್ರವಿಜಯ ಮಹಾಕಾವ್ಯಂ

## ಷಷ್ಠ ಸರ್ಗ

**ಅವತರಣಿಕೆ :** ಪ್ರಸ್ತುತ ಸರ್ಗದಲ್ಲಿ ಕವಿಗಳು ಶ್ರೀವೇಂಕಟನಾಥಾಚಾರ್ಯರ ವಿವಾಹಾನಂತರದಲ್ಲಿ ನಡೆದ ದಾಂಪತ್ಯ ಜೀವನದ ವೃತ್ತಾಂತವನ್ನು ವರ್ಣಿಸುತ್ತಾರೆ. ಪತ್ನಿ ಸರಸ್ವತೀದೇವಿಯೊಂದಿಗೆ ಕಾಂಚೀನಗರದಲ್ಲಿ ವಾಸವಾಡಿ ಕುಲಗುರುಗಳಾದ ಶ್ರೀಸುಧೀಂದ್ರತೀರ್ಥರನ್ನು ನೋಡಲು ಕುಂಭಕೋಣಕ್ಕೆ ಹೋಗಿದ್ದ ಶ್ರೀವೇಂಕಟನಾಥರು ಅಲ್ಲಿ ಶ್ರೀಸುಧೀಂದ್ರತೀರ್ಥರನ್ನು ಸಂದರ್ಶಿಸಿದರು. ಅಲ್ಲಿಯೇ ಕೆಲವು ಕಾಲ ವಾಸ ಮಾಡಿದ ಶ್ರೀವೇಂಕಟನಾಥರು ಗುರುಗಳ ಜೊತೆಗೆ ಪುಣ್ಯಕ್ಷೇತ್ರಗಳ ಯಾತ್ರೆಗೆ ಹೋಗಿದ್ದರು. ಆಗ ಗ್ರಾಮವೊಂದರಲ್ಲಿ ಪಂಡಿತರುಗಳನ್ನು ಮಹಾಭಾಷ್ಯದ ಪಾಂಡಿತ್ಯದಿಂದ ಪರಾಭವಗೊಳಿಸಿದ ಶ್ರೀವೇಂಕಟನಾಥರಿಗೆ ಗುರುಗಳಾದ ಶ್ರೀಸುಧೀಂದ್ರತೀರ್ಥರು "ಮಹಾಭಾಷ್ಯ ವೇಂಕಟನಾಥಾಚಾರ್ಯ" ರೆಂಬ ಬಿರುದನ್ನು ಪಂಡಿತಭೂಷಿತವಾದ ಸಭಾಮಧ್ಯದಲ್ಲಿಯೇ ನೀಡಿ ಸನ್ಮಾನಿಸಿದರು. ತಂಜಾವೂರಿ-ನಲ್ಲಿಯೂ ಪಂಡಿತರುಗಳು ಶ್ರೀವೇಂಕಟನಾಥರನ್ನು ಸನ್ಮಾನಿಸಿದರು. ತದನಂತರ ತಮ್ಮ ಊರಿಗೆ ಮರಳಿದ ಶ್ರೀವೇಂಕಟನಾಥಾಚಾರ್ಯರು ಸ್ವಲ್ಪ ಕಾಲ ಬಡತನವನ್ನು ಅನುಭವಿಸಿದರು. ಗುರುಗಳಾದ ಶ್ರೀಸುಧೀಂದ್ರತೀರ್ಥರು ವೇಂಕಟನಾಥರನ್ನು ಸನ್ಯಾಸವನ್ನು ಸ್ವೀಕರಿಸುವಂತೆ ಆದೇಶಿಸಿದರು. ಅನಂತರದಲ್ಲಿ ಸ್ವಪ್ನದಲ್ಲಿ ಶ್ರೀವಿದ್ಯಾಲಕ್ಷ್ಮೀಯು (ಸರಸ್ವತಿದೇವಿಯು) ದರ್ಶನ ನೀಡಿ ಉಪದೇಶನೀಡಿ ಸನ್ಯಾಸ ಸ್ವೀಕರಿಸಲು ಪ್ರೋತ್ಸಾಹಿಸಿದಳು. ಅನಂತರ ಶ್ರೀಸುಧೀಂದ್ರತೀರ್ಥರು ತಂಜಾವೂರಿನಲ್ಲಿ ಶ್ರೀವೇಂಕಟನಾಥಾಚಾರ್ಯರಿಗೆ ಸನ್ಯಾಸವನ್ನು ನೀಡಿ "ಶ್ರೀರಾಘವೇಂದ್ರತೀರ್ಥ" ರೆಂಬ ಆಶ್ರಮನಾಮವನ್ನು ನೀಡಿ ಪ್ರಣವ ಮಂತ್ರೋಪದೇಶವನ್ನು ಮಾಡಿ ಹಂಸನಾಮಕ ಪರಮಾತ್ಮ ಪ್ರಣೀತ ಶ್ರೀಮನ್ಮಧ್ವಾಚಾರ್ಯರ ವೇದಾಂತ ದಿಗ್ವಿಜಯ ವಿದ್ಯಾಸಿಂಹಾಸನದಲ್ಲಿ ಪಟ್ಟಾಭಿಷೇಕವನ್ನು ಮಾಡಿದರು. ಶ್ರೀಸುಧೀಂದ್ರತೀರ್ಥರು ತಮ್ಮ ಶಿಷ್ಯರಾದ ಶ್ರೀರಾಘವೇಂದ್ರತೀರ್ಥರಿಗೆ

ಚತುರ್ಯುಗಮೂರ್ತಿಯಾದ ಶ್ರೀಮೂಲರಾಮಾದಿ ಇತರ ಸಂಸ್ಥಾನ ಪ್ರತಿಮಾಗಳನ್ನು ನೀಡಿ ಹೃತ್ಪೂರ್ವಕವಾಗಿ ಹರಸಿದರು. ಈ ಎಲ್ಲ ಕಥಾ ವಿಚಾರವು ಈ ಸರ್ಗದಲ್ಲಿ ವಿವರಿಸಲ್ಪಟ್ಟಿದೆ.

## ಶ್ರೀವೇಂಕಟನಾಥಾಚಾರ್ಯರ ಚೋಲದೇಶ ಪ್ರವೇಶ

**ವಧ್ವಾ ಸಾಕಂ ತತ್ರ ತುಂಡೀರದೇಶೇ ವಾಸಂ**
**ಕೃತ್ವಾ ವೇಂಕಟಾರ್ಯೋ ಮಹಾತ್ಮಾ (ವಿಶಿಷ್ಯ) ।**
**ವಂಶಾಚಾರ್ಯಂ ಶ್ರೀಸುಧೀಂದ್ರಂ ದಿದೃಕ್ಷುಶ್ಚಾರುಪ್ರಜ್ಞಃ ಪ್ರವಿಶಚ್ಚೋಲದೇಶಮ್ ॥೧॥**

**ತಾತ್ಪರ್ಯ :** ಶ್ರೀವೇಂಕಟನಾಥಾಚಾರ್ಯರು ಅತ್ಯಂತ ಕುಶಲಮತಿಗಳೂ, ಮಹಾ ಧೈರ್ಯಶಾಲಿಗಳೂ ಆಗಿದ್ದರು. ಅವರು ಕಾಂಚೀ ಮಂಡಲದಲ್ಲಿದ್ದ ಹಿಂದೆ ಹೇಳಿದ ಕಾವೇರಿಪಟ್ಟಣವೆಂಬ ಅಗ್ರಹಾರದಲ್ಲಿ ಕೆಲವು ಕಾಲ ಹೆಂಡತಿಯೊಡನೆ ವಾಸಮಾಡಿದರು. ಅನಂತರ ತಮ್ಮ ವಂಶದ ಗುರುಗಳಾದ ಶ್ರೀ ಸುಧೀಂದ್ರತೀರ್ಥರನ್ನು ನೋಡಬೇಕೆಂಬ ಆಸೆಯಿಂದ ಚೋಲದೇಶವನ್ನು ಪ್ರವೇಶಿಸಿದರು.

## ಚೋಲದೇಶ ವರ್ಣನೆ

**ಅವತರಣಿಕೆ :** ಕವಿಗಳು ಈಗ ಚೋಲದೇಶವನ್ನು ವರ್ಣಿಸುತ್ತಾರೆ.

**ಮಂದಂ ಮಂದಂ ಮಾರುತಸ್ಪರ್ಶಮಾತ್ರಾತ್**
**ನಿರ್ಮರ್ಯಾದಂ ಯತ್ರ ನಿಷ್ಯಂದಮಾನೈಃ ।**
**ಮಾಕಂದಾನಾಂ ಮಾರ್ಗಭೂಮಧ್ಯಗಾನಾಂ ಪೃಥ್ವೀ ಚೈತ್ರೇಷ್ವಾತ್ತಪಂಕಾ ಮರಂದೈಃ ॥೨॥**

**ತಾತ್ಪರ್ಯ :** ಚೋಲದೇಶದಲ್ಲಿ ಮಾರ್ಗದ ಎರಡೂ ಬದಿಗಳಲ್ಲಿ ದೊಡ್ಡ ದೊಡ್ಡ ಮಾವಿನ ಮರಗಳಿದ್ದವು. ಚೈತ್ರಮಾಸದಲ್ಲಿ ಅವುಗಳಲ್ಲಿ ಹೂವು ಬಿಟ್ಟಾಗ, ಆ ಹೂವುಗಳ ತುಂಬ ಮಕರಂದ ರಸವು ತುಂಬಿಕೊಂಡಿತು. ಮೆಲ್ಲ ಮೆಲ್ಲನೆ ಗಾಳಿಯು ಬೀಸಿದ ಮಾತ್ರದಿಂದಲೇ ಆ ಹೂವುಗಳ ಮಕರಂದ ರಸವು ನಿಧಾನವಾಗಿ ಮಾರ್ಗದಲ್ಲಿ ಸುರಿಯುತ್ತಲೇ ಇತ್ತು. ಇದರಿಂದ ಚೈತ್ರಮಾಸದ ದಿನಗಳಲ್ಲಿ ಸೂರ್ಯನ ಕಿರಣಗಳಿಂದ ಒಣಗಿದ್ದರೂ ಆ ದಾರಿಯೆಲ್ಲವೂ ಕೆಸರು ಕೆಸರಾಗಿ ಆಗುತ್ತಿತ್ತು.

**ಅವತರಣಿಕೆ :** ಚೋಲದೇಶವನ್ನು ಪುನಃ ವರ್ಣಿಸುತ್ತಾರೆ.

**ಸಹ್ಯಕ್ಷ್ಮಾಭೃನ್ನಂದಿನೀತೀರದೇಶೇ ಭೂಯೋ ಭೂಯೋ ಭುಸುಪರ್ವಾಗ್ರಹಾರಾಃ ।**
**ಗ್ರಾಮೇ ಗ್ರಾಮೇ ತದ್ಗೃಹಾಣಾಂ ಸಹಸ್ರಂ ಗೇಹೇ ಗೇಹೇ ಪಂಡಿತಾ ಏವ ಸರ್ವೇ॥೩॥**

**ತಾತ್ಪರ್ಯ :** ಕಾವೇರಿ ನದಿಯು ಸಹ್ಯ ಪರ್ವತದ ಮಗಳು. ಅವಳು ಚೋಲದೇಶದಲ್ಲಿಯೂ ಹರಿಯುತ್ತಾಳೆ. ಆ ನದಿಯ ತೀರ ಪ್ರದೇಶದಲ್ಲಿ ಅನೇಕ ಅಗ್ರಹಾರಗಳಿವೆ. ಆ ಅಗ್ರಹಾರದ ಪ್ರತಿಯೊಂದರಲ್ಲಿಯೂ ಸಾವಿರಾರು ಬ್ರಾಹ್ಮಣರ ಮನೆಗಳಿವೆ. ಈ ರೀತಿಯಾದ ಪ್ರತಿಯೊಂದು ಮನೆಗಳಲ್ಲಿಯೂ ಎಲ್ಲರೂ ಪಂಡಿತರುಗಳೇ ಆಗಿದ್ದಾರೆ. ಇಂತಹಾ ಪಂಡಿತೋತ್ತಮರುಗಳಿಂದ ಕೂಡಿದ ಮನೆಗಳನ್ನು ಉಳ್ಳ ಚೋಲದೇಶವನ್ನು ಶ್ರೀವೇಂಕಟನಾಥಾಚಾರ್ಯರು ಪ್ರವೇಶಿಸಿದರು.

**ಅವತರಣಿಕೆ :** ಈಗ ಕವಿಗಳು ಪಂಡಿತೋತ್ತಮರುಗಳಿಂದ ಕೂಡಿದ ಚೋಲದೇಶವನ್ನು ವರ್ಣಿಸುತ್ತಾರೆ.

**ಗ್ರಾಮೇ ಗ್ರಾಮೇಽಧ್ಯಾಪಕಾ ಜಾತಮಾತ್ರಾ ಗೇಹೇ ಗೇಹೇ ಸರ್ವಶಾಸ್ತ್ರಾಗಮಾನಾಮ್ ।**
**ಸಾಯಂಪ್ರಾತರ್ಹೋಮಧೂಮಾತಿನೀಲಂ ರೂಪೋಪೇತಂ**
**ಯತ್ರ ನಿರೂಪಮಭ್ರಮ್ ॥೪॥**

**ತಾತ್ಪರ್ಯ :** ಆ ಚೋಳದೇಶದ ಪ್ರತಿಯೊಂದು ಹಳ್ಳಿಗಳಲ್ಲಿಯೂ, ಪ್ರತಿಯೊಂದು ಮನೆಗಳಲ್ಲಿಯೂ ಹುಟ್ಟಿದ ಎಲ್ಲಾ ಬ್ರಾಹ್ಮಣರುಗಳ ಚಿಕ್ಕ ಮಕ್ಕಳುಗಳು ಕೂಡಾ ತಾವು ಅತಿಬಾಲ್ಯದಲ್ಲಿಯೇ ವ್ಯಾಕರಣಾದಿ ಎಲ್ಲ ಶಾಸ್ತ್ರಗಳನ್ನೂ, ಋಗಾದಿ ಎಲ್ಲ ವೇದಾದಿಗಳನ್ನೂ ಓದಿ ಅನಂತರ ಆ ಶಾಸ್ತ್ರ ಮತ್ತು ವೇದಗಳನ್ನು ಪಾಠ ಹೇಳುತ್ತಿದ್ದರು. ಅಲ್ಲಿ ಪ್ರತಿದಿನವೂ ಪ್ರಾತಃಕಾಲ ಮತ್ತು ಸಾಯಂಕಾಲಗಳಲ್ಲಿ ಅಗ್ನಿಹೋತ್ರ ಹೋಮಾದಿಗಳನ್ನು ನಡೆಸುತ್ತಿದ್ದರು. ಆ ಹೋಮಗಳ ಹೊಗೆಯಿಂದ ರೂಪವಿಲ್ಲದ ಆಕಾಶವೂ ನೀಲಿ ಬಣ್ಣದಿಂದ ಕೂಡಿ ಪ್ರಕಾಶಿಸುತ್ತಿತ್ತು.

**ಅವತರಣಿಕೆ :** ಈಗ ಮತ್ತೆ ಕವಿಗಳು ಚೋಲದೇಶದ ಸೌಭಾಗ್ಯವನ್ನು ವರ್ಣಿಸುತ್ತಾರೆ.

**ನಿತ್ಯಂ ಯಸ್ಮಿನ್ನುರ್ವರೈವಾಖಿಲಾ ಭೂಃ ಸಾಲಾಃ ಪೂರ್ಣಾ ಏವ ಸರ್ವೇ ಫಲೌಘೈಃ ।**
**ಪೃಥ್ವೀದೇವಾ ದೀಕ್ಷಿತಾ ಏವ ಸರ್ವೇ ಸಹ್ಯಕ್ಷ್ಮಾಭೃನ್ನಂದಿನೀಸನ್ನಿಧಾನಾತ್ ॥೫॥**

**ತಾತ್ಪರ್ಯ :** ಆ ಚೋಲದೇಶದಲ್ಲಿ ಸಹ್ಯಾದ್ರಿ ನಂದಿನಿಯಾದ ಕಾವೇರಿಯು ಹರಿಯುತ್ತಿರುವುದರಿಂದ, ಆ ನದೀ ಸನ್ನಿಧಾನದಿಂದ ಅಲ್ಲಿರುವ ಕೃಷಿಯೋಗ್ಯವಾದ ಎಲ್ಲ ಭೂಪ್ರದೇಶವೂ ಸಕಲವಿಧ ಸಸ್ಯ ಸಂಪತ್ತಿನಿಂದ ತುಂಬಿತ್ತು. ಅಲ್ಲಿಯ ಎಲ್ಲ ಮರಗಳೂ ಫಲಭರಿತವಾಗಿದ್ದವು. ಅಲ್ಲಿ ವಾಸಿಸುತ್ತಿದ್ದ ಬ್ರಾಹ್ಮಣರೆಲ್ಲರೂ ಯಾಗಗಳನ್ನು ಮಾಡುವಂತಹಾ ದೀಕ್ಷಿತರುಗಳೇ ಆಗಿದ್ದರು. ಇಂತಹಾ ಚೋಲದೇಶವನ್ನು ಶ್ರೀವೇಂಕಟನಾಥರು ಪ್ರವೇಶಿಸಿದರು.

**ಅವತರಣಿಕೆ :** ತದನಂತರದಲ್ಲಿ ಶ್ರೀವೇಂಕಟನಾಥರು ಇದೇ ಚೋಳದೇಶದಲ್ಲಿದ್ದ

ಕುಂಭಕೋಣಕ್ಕೆ ಹೋಗಿ ಅಲ್ಲಿ ಇದ್ದ ತಮ್ಮ ಕುಲಗುರುಗಳಾದ ಶ್ರೀಸುಧೀಂದ್ರತೀರ್ಥರನ್ನು ನೋಡಿದರು. ಕವಿಗಳು ಈಗ ಶ್ರೀವೇಂಕಟನಾಥರು ಶ್ರೀಸುಧೀಂದ್ರತೀರ್ಥರಲ್ಲಿ ವಿದ್ಯಾಭ್ಯಾಸ ಮಾಡಿದುದನ್ನು ವರ್ಣಿಸುತ್ತಾರೆ.

**ದೇಶೇ ತಸ್ಮಿನ್ ಭೂಮಿಭೂಷಾಯಮಾಣೇ ಕುರ್ವನ್**
**ವಾಸಂ ಕುಂಭಘೋಣೇ ಸುಧೀಂದ್ರಮ್ ।**
**ದೃಷ್ಟ್ವಾ ನಿತ್ಯಂ ಮಾನಿತಸ್ತೇನ ವಿದ್ಯಾಭ್ಯಾಸೋದ್ಯುಕ್ತೋ**
**ವೆಂಕಟಾರ್ಯೋ ಬಭೂವ(ವಿಶಿಷ್ಯ) ॥೬॥**

**ತಾತ್ಪರ್ಯ :** ಹಿಂದೆ ವರ್ಣಿಸಿದಂತೆ ಚೋಳದೇಶವು ಇಡೀ ಭೂಮಂಡಲಕ್ಕೆ ಭೂಷಣಪ್ರಾಯವಾದುದು. ಈ ಚೋಳದೇಶದಲ್ಲಿಯೇ ಕಾವೇರಿ ನದೀ ತೀರದಲ್ಲಿಯೇ ಕುಂಭಘೋಣವೆಂಬ ಪ್ರಸಿದ್ಧವಾದ ಪಟ್ಟಣವಿದೆ. ಶ್ರೀಸುಧೀಂದ್ರತೀರ್ಥರು ವೇಂಕಟನಾಥಾಚಾರ್ಯರು ಚೋಳದೇಶಕ್ಕೆ ಬಂದ ಸಮಯದಲ್ಲಿ ಕುಂಭಘೋಣದಲ್ಲಿಯೇ ವಾಸಮಾಡುತ್ತಿದ್ದರು. ಶ್ರೀವೇಂಕಟನಾಥರು ಕುಂಭಘೋಣಕ್ಕೆ ಬಂದು ತಮ್ಮ ಕುಲಗುರುಗಳ ಸಂದರ್ಶನ ಮಾಡಿದರು. ಆಗ ಕುಲಗುರುಗಳಾದ ಶ್ರೀಸುಧೀಂದ್ರತೀರ್ಥರು ವೇಂಕಟನಾಥಾಚಾರ್ಯರನ್ನು ಆದರದಿಂದ ಬರಮಾಡಿಕೊಂಡು ಅತ್ಯಂತ ಪ್ರೀತಿಯಿಂದ ಸತ್ಕರಿಸಿ ಗೌರವವನ್ನೂ ಮಾಡಿದರು. ತದನಂತರ ವೇಂಕಟನಾಥಾಚಾರ್ಯರು ಕುಂಭಕೋಣದಲ್ಲಿಯೇ ತಮ್ಮ ಕುಲಗುರುಗಳ ಬಳಿ ವಾಸಮಾಡುತ್ತಾ ಅಲ್ಲಿದ್ದ ಕಾಲದಲ್ಲಿ ನಿರಂತರವಾಗಿ ವಿದ್ಯಾಭ್ಯಾಸವನ್ನು ಮಾಡುತ್ತಿದ್ದರು.

## ಶ್ರೀವೇಂಕಟನಾಥಾಚಾರ್ಯರ ವಿದ್ಯಾಭ್ಯಾಸ

**ಅವತರಣಿಕೆ :** ಈಗ ಕವಿಗಳು ಶ್ರೀವೇಂಕಟನಾಥರು ವಿದ್ಯಾಭ್ಯಾಸ ಮಾಡಿದ ಬಗೆಯನ್ನು ವರ್ಣಿಸುತ್ತಾರೆ.

**ಶಾಬ್ದಂ ಭಾಷ್ಯಂ ಜಾಯದೇವೀಂ ಚ ಟೀಕಾಂ ಭಾಟ್ಟಂ**
**ತಂತ್ರಂ ಭಾಮತೀಂ ಗೌರವಂ ಚ ।**
**ವ್ಯಾಸಾರ್ಯೋಕ್ತಾಂ ಚಂದ್ರಿಕಾಂ ವೇಂಕಟಾರ್ಯೋ ಯದ್ಯದ್ವೇದ್ಯಂ ತತ್ತದಭ್ಯಸ್ಯತಿಸ್ಮ ॥೭॥**

**ತಾತ್ಪರ್ಯ :** ಶ್ರೀವೇಂಕಟನಾಥಾಚಾರ್ಯರು ವ್ಯಾಕರಣ ಮಹಾಭಾಷ್ಯ, ಜಯದೇವ ಕೃತವಾದ ಟೀಕೆ, ಕುಮಾರಿಲಭಟ್ಟ ರಚಿತವಾದ ಪೂರ್ವಮೀಮಾಂಸಾ ಗ್ರಂಥ, ವಾಚಸ್ಪತಿಮಿಶ್ರ ಕೃತವಾದ ಭಾಮತಿ ಗ್ರಂಥ, ಪ್ರಭಾಕರ ಗುರುವಿನಿಂದ ರಚಿತವಾದ ಪೂರ್ವಮೀಮಾಂಸಾ

ಗ್ರಂಥ, ಶ್ರೀಮದ್ ವ್ಯಾಸತೀರ್ಥರು ರಚಿಸಿದ ಬ್ರಹ್ಮಸೂತ್ರಭಾಷ್ಯ ತತ್ತ್ವಪ್ರಕಾಶಿಕಾ ತಾತ್ಪರ್ಯಚಂದ್ರಿಕಾ ಎಂಬ ಗ್ರಂಥವನ್ನೂ ಹೀಗೆಯೇ ಇನ್ನೂ ಇತರ ಬೇರೆ ಬೇರೆ ತಿಳಿಯಬೇಕಾದ ವಿಷಯಗಳು ಏನಿವೆಯೋ ಅವುಗಳೆಲ್ಲವನ್ನೂ ಪ್ರತಿದಿನ ಅಭ್ಯಾಸ ಮಾಡುತ್ತಿದ್ದರು.

## ಶಾಸ್ತ್ರಪ್ರವಚನಕ್ರಮ

**ಅವತರಣಿಕೆ :** ಈಗ ಕವಿಗಳು ಶ್ರೀವೇಂಕಟನಾಥಾಚಾರ್ಯರು ಶಾಸ್ತ್ರಪ್ರವಚನ ಮಾಡುವಾಗ ಇಟ್ಟುಕೊಂಡಿದ್ದ ಕಾಲನಿಯಮವನ್ನು ತಿಳಿಸುತ್ತಾರೆ.

**ಪ್ರಾತಃ ಸ್ನಾತ್ವಾ ಸಾಧು ವೇದಾಂತಭಾಷ್ಯಂ ಶಾಬ್ದಂ ಪಶ್ಚಾತ್‌ತರ್ಕಶಾಸ್ತ್ರಂ ತತಸ್ಸಃ ।**
**ಪೂರ್ವಂ ತಂತ್ರಂ ವಾ(ಚಾ)ವದನ್ ವೆಂಕಟಾರ್ಯೋ ತುರ್ಯೇ ಯಾಮೇ**
**ಕಾಂಶ್ಚಿದಬ್ದಾನನೈಷೀತ್ ॥**

**ತಾತ್ಪರ್ಯ :** ಶ್ರೀವೇಂಕಟನಾಥರು ಬೆಳಿಗ್ಗೆ ಸ್ನಾನ ಮಾಡಿ, ಬೆಳಗಿನ ಸಂಧ್ಯಾವಂದನಾದಿಗಳನ್ನು ಮುಗಿಸಿ, ಶ್ರೇಷ್ಠವಾದ ಶ್ರೀಮದಾನಂದತೀರ್ಥಭಗವತ್ಪಾದರಿಂದ ರಚಿತವಾದ ಉಪನಿಷದ್ಭಾಷ್ಯಗಳನ್ನೂ, ಬ್ರಹ್ಮಸೂತ್ರಭಾಷ್ಯಾದಿಗಳನ್ನೂ, ಮೊದಲ ಯಾಮದಲ್ಲಿ ಪ್ರವಚನ ಮಾಡುತ್ತಿದ್ದರು. ತದನಂತರದಲ್ಲಿ ಎರಡನೆಯ ಯಾಮದಲ್ಲಿ ವ್ಯಾಕರಣಮಹಾಭಾಷ್ಯವನ್ನೂ, ಅನಂತರ ಮೂರನೆಯ ಯಾಮದಲ್ಲಿ ತರ್ಕಶಾಸ್ತ್ರವನ್ನೂ, ನಾಲ್ಕನೆಯ ಯಾಮದಲ್ಲಿ ಪೂರ್ವಮೀಮಾಂಸಾ ಶಾಸ್ತ್ರವನ್ನೂ ಪ್ರವಚನ ಮಾಡುತ್ತಾ, ಕೆಲ ವರ್ಷಗಳನ್ನು ಗುರುಗಳಾದ ಶ್ರೀಸುಧೀಂದ್ರತೀರ್ಥರ ಬಳಿಯಲ್ಲಿಯೇ ಕಳೆದರು.

## ಮನ್ನಾರುಗುಡಿ ದಿಗ್ವಿಜಯಯಾತ್ರೆ

**ಅವತಾರಿಕೆ :** ಈಗ ಕವಿವರ್ಯರು ಶ್ರೀಸುಧೀಂದ್ರತೀರ್ಥರು ದಿಗ್ವಿಜಯಯಾತ್ರೆಯನ್ನು ಕೈಗೊಂಡು ಸಂಚಾರ ಹೊರಟಿದ್ದನ್ನು, ಅವರೊಂದಿಗೆ ಶ್ರೀವೇಂಕಟನಾಥರೂ ಗುರುಗಳನ್ನು ಅನುಸರಿಸಿ ಸಂಚಾರ ಹೋದುದನ್ನು ವರ್ಣಿಸುತ್ತಾರೆ.

**ದ್ರಷ್ಟುಂ ಕೃಷ್ಣಂ ದಕ್ಷಿಣದ್ವಾರಕೇಶಂ ಪ್ರಾಪ್ತಸ್ಸಾಕಂ ವೇಂಕಟೋ ದೇಶಿಕೇನ ।**
**ಮಾಯಾವಾದಿವ್ರಾತಮಧ್ಯೇ ನಿಷಣ್ಣಂ ಕಂಚಿದ್ ಭಿಕ್ಷುಂ**
**ದೃಷ್ಟವಾನ್ ವಾವದೂಕಮ್ ॥೯॥**

**ತಾತ್ಪರ್ಯ :** ಒಂದು ಬಾರಿ ಗುರುಗಳಾದ ಶ್ರೀಸುಧೀಂದ್ರತೀರ್ಥ ಶ್ರೀಪಾದಂಗಳವರ

ಜೊತೆಗೆ ದಕ್ಷಿಣ ದ್ವಾರಕೆಯೆಂದು ಪ್ರಸಿದ್ಧವಾದ ಚಂಪಕಾರಣ್ಯ ಕ್ಷೇತ್ರ ಸ್ವಾಮಿಯಾದ ಶ್ರೀಕೃಷ್ಣನ ದರ್ಶನ ಮಾಡಲು ಹೊರಟರು. (ಪ್ರಾಕೃತ ಭಾಷೆಯಲ್ಲಿ ಆ ಕ್ಷೇತ್ರವನ್ನು ಮನ್ನಾರುಗುಡಿ ಎಂದು ಕರೆಯುತ್ತಾರೆ.) ಅಲ್ಲಿ ಅನೇಕ ಮಾಯಾವಾದಿ ಪಂಡಿತರುಗಳ ಸಮೂಹದಲ್ಲಿ ಅವರುಗಳ ಮಧ್ಯದಲ್ಲಿ ಕುಳಿತು ಒಬ್ಬ ಅದ್ವೈತ ಸನ್ನ್ಯಾಸಿಯು ಅದ್ವೈತಶಾಸ್ತ್ರವನ್ನು ಪ್ರವಚನ ಮಾಡುತ್ತಿದ್ದುದನ್ನು ಆಚಾರ್ಯರು ನೋಡಿದರು.

**ಅವತರಣಿಕೆ :** ಈಗ ಕವಿಗಳು ಶ್ರೀವೇಂಕಟನಾಥಾಚಾರ್ಯರ ವಾದಿದಿಗ್ವಿಜಯ ಪ್ರಾರಂಭಿಸಿ ಜೀವಬ್ರಹ್ಮೈಕ್ಯದಲ್ಲಿ ಪ್ರಮಾಣಾಭಾವಸಮರ್ಥನ ಮಾಡಿದುದನ್ನು ವರ್ಣಿಸುತ್ತಾರೆ.

ಆ ದೇವಾಲಯದಲ್ಲಿ ಒಂದೆಡೆ ಕುಳಿತು ತಮ್ಮ ಶಿಷ್ಯರನ್ನು ಕುರಿತು ಜೀವಬ್ರಹ್ಮರ ಅಭೇದ ವಿಷಯದಲ್ಲಿ ಉಪನ್ಯಾಸ ಮಾಡುತ್ತಿದ್ದ ಓರ್ವ ಅದ್ವೈತ ಸನ್ನ್ಯಾಸಿಯನ್ನು ನೋಡಿ ದೇವಾಲಯದಲ್ಲಿ ದೇವರ ದರ್ಶನಕ್ಕಾಗಿ ಹೋಗಿದ್ದ ವೇಂಕಟನಾಥರು ಗುರುಗಳೊಂದಿಗೆ ಅಲ್ಲಿಯೇ ಕುಳಿತರು. ಆ ಮಾಯಾವಾದಿ ಸನ್ನ್ಯಾಸಿಯೊಂದಿಗೆ ಚರ್ಚೆ ಪ್ರಾರಂಭಿಸಿದರು ಎಂದು ಹೇಳುತ್ತಾ ಆ ಚರ್ಚೆಯ ವೈಖರಿಯನ್ನು ವರ್ಣಿಸುತ್ತಾರೆ.

**ಬ್ರಹ್ಮಾಭಿನ್ನೋ ಜೀವಸಂಘಃ ಕುತಸ್ತ್ವಂ ಬ್ರೂಹೀತ್ಯುಕ್ತೇ ಕೇನಚಿತ್ತದ್ಬುಧೇನ ।**
**ಮಿಥ್ಯಾ ಯಸ್ಮಾದ್ ವಿಶ್ವಮಿತ್ಯುಕ್ತಮಾತ್ರೇ**
**ಕಿಂಚಾತೋಽಸ್ಮಿನ್ನಾತ್ರ ಮಾನಂ ತ್ವಯೋಕ್ತಮ್ ॥೧೦॥**

**ತಾತ್ಪರ್ಯ :** "ಜೀವಸಮುದಾಯವು ಬ್ರಹ್ಮನಿಗಿಂತ ಅಭಿನ್ನವು ಎಂಬುದಾಗಿ ನೀವು ಯಾವ ಪ್ರಮಾಣದಿಂದ ಸಾಧಿಸುತ್ತೀರಿ, ಹೇಳಿ" ಎಂದು ಶ್ರೀವೇಂಕಟನಾಥರು ಮಾಯಾವಾದಿ ಸನ್ನ್ಯಾಸಿಯನ್ನು ಪ್ರಶ್ನಿಸಿದರು. ಆಗ ಅಲ್ಲಿ ನೆರೆದಿದ್ದ ಪಂಡಿತರುಗಳಲ್ಲಿ ಒಬ್ಬ ಪಂಡಿತನು "ಪ್ರಪಂಚವು ಮಿಥ್ಯಾ, ಆದುದರಿಂದ ಜೀವಬ್ರಹ್ಮಭೇದವು ಸಿದ್ಧಿಸುತ್ತದೆ" ಎಂದನು. ಆಗ ಶ್ರೀವೇಂಕಟನಾಥರು ಈ ರೀತಿಯಾಗಿ ಹೇಳಿದರು – "ಜೀವಬ್ರಹ್ಮರಿಗೆ ಅಭೇದವಿದೆ ಎಂದು ನೀವು ಹೇಳಿದ ವಿಷಯದಲ್ಲಿ ಯಾವ ಪ್ರಮಾಣವಿದೆ ಎಂದು ಪ್ರಶ್ನಿಸಿ, ನೀವು ಪ್ರಮಾಣವನ್ನೇ ಹೇಳಬೇಕು. ಪ್ರಪಂಚವು ಮಿಥ್ಯಾ ಆದುದರಿಂದ ಜೀವಬ್ರಹ್ಮಭೇದವು ಸಿದ್ಧಿಸುತ್ತದೆ ಎಂಬ ವಚನ ಸಾಮಾನ್ಯವು ಜೀವಬ್ರಹ್ಮಭೇದ ವಿಷಯದಲ್ಲಿ ಪ್ರಮಾಣವಾಗಲಾರದು, ಆದುದರಿಂದ ನಿಮ್ಮ ವಾದವು ಪ್ರಕೃತಕ್ಕೆ ಉಪಯೋಗವಿಲ್ಲ ಎಂದು ಹೇಳಿದರು ಎಂಬುದಾಗಿ ತಾತ್ಪರ್ಯ.

## ವ್ಯಾಕರಣಶಾಸ್ತ್ರದಲ್ಲಿ ಚರ್ಚಾರಂಭ ಮತ್ತು ವಿಜಯ

**ಅವತರಣಿಕೆ :** ಈಗ ಕವಿಗಳು ಆ ಪಂಡಿತನು ಹೇಳಿದ ಮಾತನ್ನೂ, ಅದಕ್ಕೆ ಉತ್ತರವಾಗಿ ಶ್ರೀವೇಂಕಟನಾಥರು ಹೇಳಿದ ಮಾತುಗಳನ್ನು ವಿವರಿಸುತ್ತಾರೆ.

**ಶಾಸ್ತ್ರೇ ನೋಕ್ತೋ ನ ಶ್ರುತಃ ಕೇನಚಿದ್ವಾ ಯಃ ಕಿಂಚಾತಃಶಬ್ದ ಉಕ್ತಸ್ತ್ವಯೇತಿ ।**
**ಉಕ್ತೇ ತೇನ ಪ್ರಾವಚ(ದ)ದ್ವೇಂಕಟಾರ್ಯಃ**
**ವ್ಯಕ್ತಂ ಯಸ್ತ್ವಂ ನಾಶ್ರುಣೋಃ ಶಾಬ್ದಭಾಷ್ಯಮ್ ॥೧೧॥**

**ತಾತ್ಪರ್ಯ :** ಶ್ರೀವೇಂಕಟನಾಥಾಚಾರ್ಯರು "ಕಿಂಚಾತಃ" ಎಂಬ ಶಬ್ದಪ್ರಯೋಗ ಮಾಡಿದುದನ್ನೇ ಹಿಡಿದುಕೊಂಡು ಅದರಲ್ಲಿ ವ್ಯಾಕರಣಶಾಸ್ತ್ರದ, ಹಾಗೂ ಸಂಪ್ರದಾಯದ ಪ್ರಯೋಗವಿಲ್ಲ ಎಂಬ ದೋಷವನ್ನೇ ಆ ಪ್ರತಿವಾದಿಯು ಹೇಳಲಾರಂಭಿಸಿದನು. "ನೀವು ಹೇಳಿದ ಕಿಂಚಾತಃ ಎಂಬ ಶಬ್ದವು ಅಸಂಬದ್ಧ, ಅಸಂಗತ, ಆ ಪದಪ್ರಯೋಗವನ್ನು ವ್ಯಾಕರಣ ಶಾಸ್ತ್ರದಲ್ಲಿ ಯಾರೂ ಮಾಡಿಲ್ಲ, ವ್ಯವಹಾರದಲ್ಲಿ ಯಾರೂ ಉಪಯೋಗಿಸಿದುದನ್ನು ಕೇಳಿಲ್ಲ". ಪ್ರತಿವಾದಿಯ ಈ ಮಾತನ್ನು ಕೇಳಿದ ಶ್ರೀವೇಂಕಟನಾಥರು – "ಎಲೈ ಪಂಡಿತೋತ್ತಮರೇ! ಕಿಂಚಾತಃ ಶಬ್ದಪ್ರಯೋಗವನ್ನು ಅಸಂಬದ್ಧ ಎಂಬುದಾಗಿ ವಾದಿಸುವ ನೀವು ನಿಶ್ಚಯವಾಗಿಯೂ (ಖಂಡಿತವಾಗಿಯೂ) ವ್ಯಾಕರಣಮಹಾಭಾಷ್ಯವನ್ನು ಓದಿಲ್ಲ ಮತ್ತು ಕೇಳಿಲ್ಲ ಎಂದು ತೋರುತ್ತದೆ ಎಂಬುದಾಗಿ ಸ್ಪಷ್ಟ ನುಡಿಗಳಲ್ಲಿ ಹೇಳಿದರು.

**ಅವತರಣಿಕೆ :** ಈಗ ಕವಿಗಳು ಮುಂದೆ ಏನಾಯಿತೆಂಬುದನ್ನು ವರ್ಣಿಸುತ್ತಾರೆ.

**ಶ್ರುತ್ವಾ ಕೋಪಾತ್ತಸ್ಯ ಶಿಷ್ಯೋಽಥ ಕಶ್ಚಿತ್ ಭಾಷ್ಯಂ ಕ್ವ ತ್ವಂ ಕ್ವೇದೃಶಸ್ತೇಽಭಿಮಾನಃ ।**
**ಪೃಷ್ಟಶ್ಚೇತ್ತಾಂ ಪ್ರಕ್ರಿಯಾಂ ಕಿಂ ಬ್ರವೀಷೀತ್ಯುಕ್ತಸ್ತೇನಾನು**
**(ನೂ)ಕ್ತವಾನ್ ಏವಮೇಷಃ ॥೧೨॥**

**ತಾತ್ಪರ್ಯ :** ನೀವು ನಿಜವಾಗಿಯೂ ವ್ಯಾಕರಣ ಮಹಾಭಾಷ್ಯವನ್ನು ಕೇಳಿಲ್ಲ, ಓದಿಲ್ಲ ಎಂಬ ಶ್ರೀವೇಂಕಟನಾಥಾಚಾರ್ಯರ ಮಾತನ್ನು ಕೇಳಿ ಆ ಮಾಯಾವಾದಿ ಸನ್ಯಾಸಿಯ ಶಿಷ್ಯನೊಬ್ಬನು ಕೋಪದಿಂದ ಈ ರೀತಿಯಾಗಿ ಹೇಳಿದನು. "ಆಹಾ ಮಹಾಭಾಷ್ಯವೆಲ್ಲಿ! ನಿನ್ನ ಇಂತಹಾ ದುರಹಂಕಾರವೆಲ್ಲಿ! ಮಹಾಭಾಷ್ಯವನ್ನು ತಿಳಿಯುವುದು ಬಹಳ ಕಷ್ಟಸಾಧ್ಯ, ನೀನಾದರೋ ಅಲ್ಪನು. ನಿನಗೇನು ತಿಳಿದಿದೆ? ನಾವು ಪ್ರಶ್ನೆಯನ್ನು ಕೇಳಿದರೆ ವ್ಯಾಕರಣ ಪ್ರಕ್ರಿಯೆಯನ್ನು ಹೇಳಬಲ್ಲೆಯಾ?" ಎಂದು ಗದರಿಸುವ ಧ್ವನಿಯಲ್ಲಿ ಕೇಳಿದಾಗ ಶ್ರೀವೇಂಕಟನಾಥರು ಆ ಪಂಡಿತನು ಕೇಳಿದ ಎಲ್ಲ ಪ್ರಶ್ನೆಗಳಿಗೂ ವ್ಯಾಕರಣ ಶಾಸ್ತ್ರವನ್ನು ಅನುಸರಿಸಿ ಮಹಾಭಾಷ್ಯದಲ್ಲಿ ಹೇಳಿರುವ ರೀತಿಯಲ್ಲಿಯೇ ಬಹಳ ಪ್ರೌಢವಾಗಿ ಅನುವಾದ ಮಾಡಿದರು. (ವ್ಯಾಕರಣ ಶಾಸ್ತ್ರದಲ್ಲಿ ನಾವು ಪ್ರಕ್ರಿಯೆಯನ್ನು ಕೇಳಿದರೆ ಉತ್ತರಿಸಬಲ್ಲೆಯಾ? ಎಂದು ಪಂಡಿತನು ಆಕ್ಷೇಪಿಸಿದಾಗ ಆ ಪಂಡಿತನ ಸಿಟ್ಟನ್ನು ಹೆಚ್ಚಿಸಲೆಂದೇ ಶ್ರೀವೇಂಕಟನಾಥರು ಮೌನದಿಂದ ಸುಮ್ಮನೆ ಇದ್ದರು. – ಬಾಲಬೋಧಿನೀ ವ್ಯಾಖ್ಯಾನ).

**ಅವತರಣಿಕೆ :** ಈಗ ಕವಿಗಳು ಕುಪಿತನಾದ ಪ್ರತಿವಾದಿಯು ಕೋಪದಿಂದ ಏನು ಹೇಳಿದನೆಂಬುದನ್ನು ವರ್ಣಿಸುತ್ತಾರೆ.

**ದಂಡೇನನ್ಯೈ(ನ್ಯ)ಸ್ತಾಡಿತಃ ಕುಂಡಲೀವ**
**ಸ್ಥಾ(ಪ್ಸಾ)ಧಾತೋರ್ಯದ್‌ಯಙ್‌ಲುಗಂತಸ್ಯ ರೂಪಮ್ ।**
**ಶತ್ರಂತಸ್ಯೇತ್ಯರ್ಧವಾಕ್ಯೇ ಸ ತಾಸ್ಥ(ಪಾಪ್ಸ)ತ್**
**ತಸ್ಯೇತ್ಯುಕ್ತ್ವಾವಾದಿನಂ ಪೃಚ್ಛತಿ ಸ್ಮ ॥೧೩॥**

**ತಾತ್ಪರ್ಯ :** ಯಾರಾದರೂ ಮನುಷ್ಯರು ಕೋಲಿನಿಂದ ಹೊಡೆದರೆ ಸರ್ಪ ಹೇಗೆ ರೋಷದಿಂದ ಬುಸುಗುಟ್ಟುತ್ತದೆಯೋ ಅದೇ ರೀತಿಯಲ್ಲಿ ಅಲ್ಲಿದ್ದ ಪ್ರತಿವಾದಿಯು ಕೋಪದಿಂದ ಹೂಂಕರಿಸುತ್ತಾ ವೇಂಕಟನಾಥರನ್ನು ಈ ರೀತಿಯಾಗಿ ಪ್ರಶ್ನಿಸಲು ಆರಂಭಿಸಿದನು. ಯಙ್‌ಲುಗಂತದಲ್ಲಿ ಶತೃಪ್ರತ್ಯಯಾಂತವಾದ ಸ್ಥಾ ಧಾತುವಿನ ರೂಪವು ..... ಎಂಬುದಾಗಿ ಅರ್ಧವಾಕ್ಯವನ್ನು ಹೇಳುತ್ತಿದ್ದಾಗಲೇ ಆ ರೂಪವು ಯಾವುದು ಎಂದು ಹೇಳಿ ಎಂಬುದಾಗಿ ಪ್ರಶ್ನಿಸುವುದಕ್ಕೆ ಮೊದಲೇ ಶ್ರೀವೇಂಕಟನಾಥರು ಬಹಳ ತ್ವರಿತವಾಗಿ ನೀವು ಕೇಳಿದ ರೂಪವು "ಪಾಪ್ಸತ್" ಎಂದು ಉತ್ತರಿಸಿ, ಅದಿರಲಿ ನಿಮ್ಮನ್ನು ಒಂದು ಪ್ರಶ್ನೆ ಕೇಳುತ್ತೇನೆ ಎಂದರು. (ಬಾಲಬೋಧಿನೀ)

(ಗುರುಸೇವಾ) ಶ್ರೀವೇಂಕಟನಾಥರ ಮಾತನ್ನು ಕೇಳಿ ಕೋಲಿನಿಂದ ಏಟು ತಿಂದ ಹಾವಿನಂತೆ ಸಿಟ್ಟುಗೊಂಡ ಆ ಸನ್ನ್ಯಾಸಿಯ ಮತ್ತೊಬ್ಬ ಶಿಷ್ಯನು "ಪ್ಸಾ" ಎಂಬ ಧಾತುವಿನ ಯಙ್ ಲುಗಂತದ ರೂಪವು ಯಾವುದು? ಶತ್ರಂತದ ರೂಪವು ಯಾವುದು! ಎಂದು ಕೇಳಿ ಅದನ್ನು ಹೇಳಿ ಎಂದು ಪ್ರಶ್ನಿಸುವುದಕ್ಕೆ ಮೊದಲೇ ಅವನು ತನ್ನ ಮಾತನ್ನು ಪೂರ್ತಿ ಮಾಡುವ ಮೊದಲೇ ಶ್ರೀವೇಂಕಟನಾಥರು ಆ ಧಾತುವಿನ ಯಙ್ ಲುಗಂತದ ರೂಪವು ಪಾಪ್ಸಾತಿ ಎಂದು, ಶತ್ರಂತದ ರೂಪವು ಪಾಪ್ಸತ್ ಎಂಬುದಾಗಿ ಉತ್ತರಿಸಿ ವಾದಿಯನ್ನು ಈ ರೀತಿಯಾಗಿ ಪ್ರಶ್ನಿಸಿದರು.

**ವಿಶೇಷಾಂಶ :** ಪುನಃ ಪುನಃ ಅಥವಾ ಅತಿಶಯವಾಗಿ ಎಂಬ ಅರ್ಥದಲ್ಲಿ ಸಂಸ್ಕೃತದಲ್ಲಿ ಧಾತುಗಳಿಗೆ ಯಙ್ ಎಂಬ ಪ್ರತ್ಯಯವು ಬರುತ್ತದೆ. **"ಧಾತೋರೇಕಾಚೋ ಹಲಾದೇಃ ಕ್ರಿಯಾಸಮಭಿಹಾರೇ ಯಙ್" (3–1–22).** ಈ ಸೂತ್ರದಿಂದ ಪಾಣಿನಿಯು ಯಙ್ ಪ್ರತ್ಯಯವನ್ನು ಹೇಳಿದ್ದಾನೆ. ಆ ಯಙ್ ಪ್ರತ್ಯಯಕ್ಕೆ ಯಙೋಚಿ ಚ (2–4–74) ಎಂಬ ಸೂತ್ರದಿಂದ ಲುಕ್ (ಲೋಪವನ್ನೂ) ಹೇಳಿದ್ದಾನೆ. ಈ ರೀತಿಯಾಗಿ ಯಙ್ ಪ್ರತ್ಯಯಕ್ಕೆ ಲುಕ್ ಬಂದಿರುವ ರೂಪವನ್ನು ಸಿದ್ಧಪಡಿಸುವುದು ಬಹಳ ಕಷ್ಟ. **ಕೇಚಿದ್ಭಗ್ನಾಃ ಸುಧ್ಯುಪಾಸ್ಯೇತಿ ಸಂಧೌ ಕೇಚಿದ್ಭಗ್ನಾಃ ಯುಷ್ಮದಸ್ಮದ್ ಪ್ರಯೋಗೇ । ಕೇಚಿದ್ಭಗ್ನಾಃ ತದ್ಧಿತಾಂತ ಪ್ರಯೋಗೇ ಸರ್ವೇ ಭಗ್ನಾಃ ಯಙ್ ಲುಗಂತ ಪ್ರಯೋಗೇ ॥ ಕೆಲವರು ವ್ಯಾಕರಣದ ಸುಧೀ + ಉಪಾಸ್ಯ = ಸುಧ್ಯುಪಾಸ್ಯ** ಎಂಬ ಸಂಧಿರೂಪವನ್ನೂ ವಿಚಾರ ಮಾಡುವಾಗಲೇ ಸೋತು ಹೋಗುತ್ತಾರೆ. ಕೆಲವರು ಯುಷ್ಮದ್ ಅಸ್ಮದ್ ಶಬ್ದಗಳ ಪ್ರಕ್ರಿಯೆಯಲ್ಲಿಯೇ ಸೋತುಹೋಗುತ್ತಾರೆ. ಈ ಕಷ್ಟವಾದ ಭಾಗವನ್ನು

ತಿಳಿದು ಮುಂದುವರೆಯುವವರೂ ಕೂಡಾ ಎಲ್ಲರೂ ಯಙ್ ಲುಗಂತ ಪ್ರಯೋಗದಲ್ಲಿ ಎಡವಿ ಬೀಳುತ್ತಾರೆ, ಮುಗ್ಗರಿಸುತ್ತಾರೆ, ತಪ್ಪು ಮಾಡುತ್ತಾರೆ. ಈ ರೀತಿ ಲೋಕದ ಗಾದೆಯ ಮಾತಿನಂತೆ ಶ್ರೀವೇಂಕಟನಾಥಾಚಾರ್ಯರನ್ನು ಆ ಪ್ರತಿವಾದಿಯು ಪ್ರಶ್ನಿಸಲಾರಂಭಿಸಿದಾಗ ಅವರು ಲೀಲಾಜಾಲವಾಗಿ ಆ ಶಬ್ದಗಳ ಪ್ರಕ್ರಿಯೆಯನ್ನು ಹೇಳಿ ರೂಪವನ್ನು ಸಿದ್ಧಪಡಿಸಿ ಹೇಳಿದರು. ಅಷ್ಟೇ ಅಲ್ಲ; ಪ್ರತಿವಾದಿಗೆ ಮರು ಪ್ರಶ್ನೆಯನ್ನೂ ಹಾಕಿದರು.

ಇಲ್ಲಿ ಬಾಲಬೋಧಿನೀ ವ್ಯಾಖ್ಯಾನದ ಪಾಠದಂತೆ ಸ್ಥಾ (ನಿಲ್ಲುವುದು) ಧಾತುವಿನ ಯಙ್ ಲುಗಂತದ ಶತ್ರಂತ ರೂಪವನ್ನು ಮಾತ್ರ ವಾದಿಯು ಕೇಳಿದನು ಎಂಬುದು ತಾತ್ಪರ್ಯ. ಗುರುಸೇವಾ ವ್ಯಾಖ್ಯಾನದಂತೆ ಪ್ಸಾ (ತಿನ್ನು) ಎಂಬ ಧಾತುವಿನ ಯಙ್ ಲುಗಂತದ ಮತ್ತು ಶತ್ರಂತದ ಎರಡರ ರೂಪವನ್ನು ಕೇಳಿದನು ಎಂಬುದು ತಾತ್ಪರ್ಯ. (ಶತೃ ಪ್ರತ್ಯಯ ಎಂದರೆ ವರ್ತಮಾನ ಕೃದಂತ. <u>(Presence Participle)</u> ಉದಾ: ಪಚತಿ = ಅಡುಗೆ ಮಾಡುತ್ತಾನೆ, ಪಚತ್, ಪಚನ್ = ಅಡುಗೆ ಮಾಡುವವನು, ಪಚಂತೀ–ಅಡುಗೆ ಮಾಡುವವನು. ಇದೇ ರೀತಿಯಲ್ಲಿ ತಾಸ್ಥತ್ = ಮತ್ತೂ ಮತ್ತೂ ನಿಲ್ಲುವವನು, ಪಾಪ್ಸತ್ = ಮತ್ತೂ ಮತ್ತೂ ತಿನ್ನುವವನು.

**ಅವತಾರಿಕೆ :** ಈಗ ಕವಿಗಳು ಶ್ರೀವೇಂಕಟನಾಥರು ಕೇಳಿದ ಪ್ರಶ್ನೆಯ ರೀತಿಯನ್ನು ವರ್ಣಿಸುತ್ತಾರೆ.

**ಏತದ್ಧಾತೋಃ ಕಿಂ ಯಜಂತಸ್ಯ ರೂಪಂ ಬ್ರೂಹೀತ್ಯುಕ್ತೇ ಚಿಂತಯನ್ನರ್ಧಯಾಮೇ ।**
**ತತ್ರತ್ಯಾನಾಂ ದೇಶಿಕೋ ಮಾಯಿಭಿಕ್ಷುಸ್ತೂಷ್ಣೀಮಾಸೀದುತ್ತರೇಽಭಾಸಮಾನೇ ॥೧೪॥**

**ತಾತ್ಪರ್ಯ :** ಶ್ರೀವೇಂಕಟನಾಥರು ಮಾಯಾವಾದಿ ಭಿಕ್ಷುವಿಗೆ ಕೇಳಿದ ಪ್ರಶ್ನೆಯನ್ನು ವಿವರಿಸುತ್ತಾರೆ.

ಯಜಂತವಾದ ಸ್ಥಾ ಧಾತುವಿಗೆ (ಶಾನಚ್) ಪ್ರತ್ಯಯ ಬಂದಾಗ ಯಾವ ರೂಪವಾಗುತ್ತದೆ? ಆ ಶಬ್ದರೂಪವನ್ನು ಹೇಳಿ? (ಗು.ಸೇ. – ಯಜಂತವಾದ ಪ್ಸಾ ಧಾತುವಿಗೆ ಯಾವ ರೂಪವು ಬರುತ್ತದೆ? ಹೇಳಿ) ಎಂದು ಶ್ರೀವೇಂಕಟನಾಥರು ಆ ಮಾಯಾವಾದಿ ಸನ್ನ್ಯಾಸಿಯನ್ನು ಕೇಳಿದರು. ಆ ಸನ್ನ್ಯಾಸಿಯು ಅಲ್ಲಿ ಸೇರಿದ್ದ ಎಲ್ಲರಿಗೂ ಆ ದೇಶದ ಜನತೆಗೂ ಗುರುವಾಗಿದ್ದನು. ಅಂತಹವನಿಗೂ ಶ್ರೀವೇಂಕಟನಾಥರ ಪ್ರಶ್ನೆಗೆ ಉತ್ತರವು ಹೊಳೆಯಲಿಲ್ಲ. ಅವನು ಅರ್ಧಯಾಮ ಯೋಚನೆ ಮಾಡಿದನು ಆದರೂ ಶ್ರೀವೇಂಕಟನಾಥರ ಪ್ರಶ್ನೆಗೆ ಉತ್ತರಿಸಲಾಗಲಿಲ್ಲ. ಅವನು ಉತ್ತರವನ್ನು ಹೇಳದೆಯೇ ಸುಮ್ಮನೇ ಕುಳಿತುಬಿಟ್ಟನು. (ಶಾನಚೇ ಅಂತವಾದ) ಯಙ್ ಪ್ರತ್ಯಯಾಂತ ಸ್ಥಾ ಧಾತುವಿನ ರೂಪ ತೇಷ್ಠೀಯಮಾನ. ಪ್ಸಾ ಧಾತುವಿನ ಯಜಂತ ರೂಪವು ಪಾಪ್ಸಾಯತೇ.

ಮಹಾಭಾಷ್ಯಾಚಾರ್ಯ ವೇಂಕಟನಾಥಾಚಾರ್ಯ ಎಂಬ ಬಿರುದಿನ ಲಾಭ

**ಅವತಾರಿಕೆ :** ಈಗ ಕವಿಗಳು ಶ್ರೀಸುಧೀಂದ್ರತೀರ್ಥರು ಶ್ರೀವೇಂಕಟನಾಥರಿಗೆ ಮಹಾಭಾಷ್ಯದ ಮೇಲೆ ಇದ್ದ ಪ್ರೌಢಿಮೆಯನ್ನು ಗಮನಿಸಿ ಅವರಿಗೆ ಮಹಾಭಾಷ್ಯಾಚಾರ್ಯ ಎಂಬ ಬಿರುದನ್ನು ದಯಪಾಲಿಸಿದುದನ್ನು ವರ್ಣಿಸುತ್ತಾರೆ.

**ದೃಷ್ಟ್ವಾ ಸರ್ವಂ ದೇಶಿಕಃ ಶ್ರೀಸುಧೀಂದ್ರಃ ಪ್ರಾಗಜ್ಞಾತಂ ಕೌಶಲಂ ಶಾಬ್ದಭಾಷ್ಯೇ ।**
**ಪ್ರಾಚೀನಾಖ್ಯಾಂ ತಾಂ ಮಹಾಭಾಷ್ಯಪೂರ್ವಾಂ**
**ಪ್ರಾದಾದಸ್ಮೈ ಪಶ್ಯತಾಂ ಪಂಡಿತಾನಾಮ್ ॥೧೫॥**

**ತಾತ್ಪರ್ಯ :** ಶ್ರೀವೇಂಕಟನಾಥಾಚಾರ್ಯರು ಪ್ರತಿವಾದಿಗಳನ್ನು ನಿರುತ್ತರರನ್ನಾಗಿಸಿ, ಅವರುಗಳನ್ನು ಪರಾಭವಗೊಳಿಸಿ ಮಹಾಭಾಷ್ಯದಲ್ಲಿ ತಮಗಿದ್ದ ಪ್ರೌಢಿಮೆಯನ್ನು ಪ್ರದರ್ಶಿಸಿ ಅಸಾಧಾರಣವಾದ ಕೀರ್ತಿಯನ್ನು ಪಡೆದರು. ಮಹಾಭಾಷ್ಯದ ಅನೇಕ ವಿಚಾರಗಳನ್ನು ತಾವು ಅನುವಾದ ಮಾಡಿ, ಪಂಡಿತರುಗಳ ಸಮೂಹದಲ್ಲಿ ಅವರುಗಳು ಹೇಳಿದ ವಿಷಯಗಳನ್ನು ಪುನಃ ಅನುವಾದ ಮಾಡಿ ಅವರಿಗೆ ಮರುಪ್ರಶ್ನೆಯನ್ನು ಹಾಕಿದರು. ಶ್ರೀವೇಂಕಟನಾಥರಿಗೆ ವ್ಯಾಕರಣ ಶಾಸ್ತ್ರದಲ್ಲಿ ಹಾಗೂ ಮಹಾಭಾಷ್ಯದಲ್ಲಿ ಇಂತಹಾ ಪ್ರಗಾಢ ಪಾಂಡಿತ್ಯವಿರುವುದು ಅವರ ಗುರುಗಳಾದ ಶ್ರೀಸುಧೀಂದ್ರತೀರ್ಥರಿಗೂ ಮೊದಲು ತಿಳಿದಿರಲಿಲ್ಲ. ಈಗ ಅದು ಶ್ರೀಗಳವರ ಅನುಭವಕ್ಕೆ ಬಂದು ವೇದ್ಯವಾಯಿತು. ಆ ಸಭೆಯಲ್ಲಿ ಅನೇಕ ಮಂದಿ ವ್ಯಾಕರಣ ಮತ್ತು ಮಹಾಭಾಷ್ಯದ ಪಂಡಿತರುಗಳು ಉಪಸ್ಥಿತರಿದ್ದರು. ಅವರೆಲ್ಲರನ್ನೂ ಬಿಟ್ಟು, ಅವರೆಲ್ಲರಿಗೂ ಒಪ್ಪಿಗೆಯಾಗುವಂತೆ ಸ್ವಯಂ ಪಂಡಿತೋತ್ತಮರಾದ ಶ್ರೀಸುಧೀಂದ್ರತೀರ್ಥ ಶ್ರೀಪಾದಂಗಳವರು ತಾವೇ ನಿರ್ಧರಿಸಿ ಶ್ರೀವೇಂಕಟನಾಥಾಚಾರ್ಯರ ಹೆಸರಿನ ಹಿಂದೆ ಮಹಾಭಾಷ್ಯಾಚಾರ್ಯ ಎಂಬ ಉಪಪದವನ್ನು ಬಿರುದಿನ ಹೆಸರನ್ನಾಗಿ ಶ್ರೀವೇಂಕಟನಾಥರಿಗೆ ನೀಡಿ ಅವರನ್ನು ಸಂಮಾನಿಸಿದರು. ಅಂದಿನಿಂದ ಶ್ರೀವೇಂಕಟನಾಥಾಚಾರ್ಯರು ಮಹಾಭಾಷ್ಯಾಚಾರ್ಯ ವೇಂಕಟನಾಥಾಚಾರ್ಯರೆಂದು ಪ್ರಸಿದ್ಧಿಯನ್ನು ಹೊಂದಿದರು.

**ಅವತರಣಿಕೆ :** ಇನ್ನೊಮ್ಮೆ ತಂಜಾವೂರಿನಲ್ಲಿ ವಾದ-ವಿವಾದ ಪ್ರಸಂಗದಲ್ಲಿ ಶ್ರೀವೇಂಕಟನಾಥರು ಪ್ರತಿವಾದಿಗಳ ಮೇಲೆ ವಿಜಯವನ್ನು ಸಾಧಿಸಿದುದನ್ನು ಕವಿಗಳು ಈಗ ವರ್ಣಿಸುತ್ತಾರೆ.

**ತಂಜಾಪುರ್ಯಾಮನ್ಯದಾ ಶುಲ್ಬಸೂತ್ರಂ ವ್ಯಾಖ್ಯಾತಾರಂ ವಾವದೂಕಂ ಜಯಂತಮ್ ।**
**ರಾಜ್ಞೋ ವಿದ್ವಾನ್ ಯಜ್ಞನಾರಾಯಣೇಜ್ಯಾಶೀಲೋತ್ತಂಸಸ್ತಂ**
**ನನಂದಾತಿಮಾತ್ರಮ್ ॥೧೬॥**

**ತಾತ್ಪರ್ಯ :** ಮತ್ತೊಂದು ಬಾರಿ ಶ್ರೀವೇಂಕಟನಾಥರು ತಂಜಾವೂರಿಗೆ ಹೋಗಿದ್ದರು. ಅಲ್ಲಿ ತಂಜಾವೂರಿನ ರಾಜನ ಸಭೆಯಲ್ಲಿ ವಾಚಾಲನಾದ (ಅತಿಯಾಗಿ ಮಾತನಾಡುವ)

ಯಾವನೋ ಒಬ್ಬ ಪಂಡಿತನು ಶುಲ್ಬಸೂತ್ರದ ಪ್ರವಚನವನ್ನು ಮಾಡುತ್ತಿದ್ದನು. ಅವನು ಮಾಡಿದ ವ್ಯಾಖ್ಯಾನದಲ್ಲಿ ಬಂದ ದೋಷಗಳನ್ನು ತಿಳಿಸಿ ಸೂತ್ರಗಳಿಗೆ ಸರಿಯಾದ ವ್ಯಾಖ್ಯಾನವನ್ನು ಮಾಡಿ ಆ ಪಂಡಿತನನ್ನು ಶ್ರೀವೇಂಕಟನಾಥದರು ಜಯಿಸಿದರು. ಶ್ರೀಯಜ್ಞನಾರಾಯಣ ದೀಕ್ಷಿತ ಎಂಬುವವರು ತಂಜಾವೂರು ರಾಜನ ಆಸ್ಥಾನ ಪಂಡಿತರಾಗಿದ್ದರು. ಅವರು ವಿಧಿಪೂರ್ವಕವಾಗಿ ಹಲವಾರು ಯಾಗಗಳನ್ನು ಮಾಡಿದ್ದರು. ಆಗಿನ ಕಾಲದಲ್ಲಿ ಯಜ್ಞ ಯಾಗಾದಿಗಳನ್ನು ಮಾಡುವವರಲ್ಲಿ ಶ್ರೇಷ್ಠರಾಗಿದ್ದರು. ಅವರು ಶ್ರೀವೇಂಕಟನಾಥಾಚಾರ್ಯರಿಗೆ ಶುಲ್ಬಶಾಸ್ತ್ರ ಸೂತ್ರಗಳ ಮೇಲಿನ ಪಾಂಡಿತ್ಯವನ್ನು ನೋಡಿ ಅತ್ಯಂತ ಸಂತೋಷವನ್ನು ಹೊಂದಿದರು ಮತ್ತು ಶ್ರೀವೇಂಕಟನಾಥರನ್ನು ಶ್ಲಾಘಿಸಿದರು. (ಆಪಸ್ತಂಬಶುಲ್ಬಸೂತ್ರ = ಯಾಗಶಾಲೆ ಯಜ್ಞಕುಂಡ ಮುಂತಾದವುಗಳನ್ನು ನಿರ್ಮಿಸುವ ವಿಧಾನಗಳನ್ನು ತಿಳಿಸುವ ಗ್ರಂಥ. ಇದರ ಕರ್ತೃಗಳು ಆಪಸ್ತಂಬರು.)

**ಅವತರಣಿಕೆ :** ತಂಜಾವೂರಿನಲ್ಲಿಯೇ ಮತ್ತೊಂದು ಸಂದರ್ಭದಲ್ಲಿ ಶ್ರೀವೇಂಕಟನಾಥರು ಪ್ರತಿವಾದಿಗಳನ್ನು ಪರಾಭವಗೊಳಿಸಿ ವಿಜಯಿಗಳಾದುದನ್ನು ಕವಿಗಳು ಈಗ ವರ್ಣಿಸುತ್ತಾರೆ.

**ಕಾಲೇಽನ್ಯ(ನಾ)ಸ್ಮಿನ್ ಕಾಕತಾಲೀಯಶಬ್ದೇ ಜೇತಾರಂ**
**ತಂ ಯಾಯಜೂಕಾನ್ ಕವೀಂದ್ರಾನ್।**
**ತಸ್ಯಾಂ ಪುರ್ಯಾಂ ತಪ್ತಮುದ್ರಾಂಕನೇ ಚ ಪ್ರೌಢಂ**
**ಮೇನೇ ಯಜ್ಞನಾರಾಯಣಸ್ತಮ್ ॥೧೭॥**

**ತಾತ್ಪರ್ಯ :** ಶ್ರೀವೇಂಕಟನಾಥಾಚಾರ್ಯರು ಇನ್ನೊಮ್ಮೆ ತಂಜಾವೂರಿನ ರಾಜಾಸ್ಥಾನಕ್ಕೆ ಹೋಗಿದ್ದರು. ಅಲ್ಲಿ ಅನೇಕ ಯಾಗಗಳನ್ನು ಮಾಡಿದ್ದ ಪಂಡಿತಶ್ರೇಷ್ಠರುಗಳು ಉಪಸ್ಥಿತರಿದ್ದ ಸಭೆಯಲ್ಲಿ ಕಾಕತಾಲೀಯಂ ಎಂಬ ಶಬ್ದದ ವಿಗ್ರಹ, ಅಲ್ಲಿ ಬರುವ ಪ್ರತ್ಯಯ ಅದರ ಅರ್ಥ ಮುಂತಾದ ವಿಚಾರಗಳ ಚರ್ಚೆಯಲ್ಲಿ ವಿಮರ್ಶನವು ನಡೆಯಿತು. ಶ್ರೀವೇಂಕಟನಾಥರು ಅಲ್ಲಿ ಸೇರಿದ್ದ ಇತರ ಎಲ್ಲ ಪಂಡಿತರುಗಳ ಅಭಿಪ್ರಾಯಗಳನ್ನು ಖಂಡಿಸಿ ತಮ್ಮ ಅಭಿಪ್ರಾಯವನ್ನು ಸಮರ್ಥನೆ ಮಾಡಿದರು. ಎಲ್ಲ ಪಂಡಿತರನ್ನು ಜಯಿಸಿದರು. ಮತ್ತೊಂದು ಬಾರಿ ತಂಜಾವೂರಿನಲ್ಲಿಯೇ ವೈಷ್ಣವರು ಮಾಡಿಕೊಳ್ಳುವ ತಪ್ತಮುದ್ರಾಧಾರಣೆಯು ಶಾಸ್ತ್ರ ಸಮ್ಮತವಾಗಿದೆಯೆಂದು ಸಮರ್ಥಿಸಿ ಅದಕ್ಕೆ ವಿರುದ್ಧವಾಗಿ ಮಾತನಾಡಿದ ಪಂಡಿತರುಗಳ ಅಭಿಪ್ರಾಯಗಳನ್ನು ಖಂಡಿಸಿದರು. ಆಗ ಅಲ್ಲಿದ್ದ ಆಸ್ಥಾನ ಪಂಡಿತರಾಗಿದ್ದ ಶ್ರೀಯಜ್ಞನಾರಾಯಣ ದೀಕ್ಷಿತರು ಈ ಶ್ರೀವೇಂಕಟನಾಥಾಚಾರ್ಯರು ವೈಷ್ಣವ ಪಂಡಿತರಲ್ಲಿಯೂ, ಇತರ ಎಲ್ಲ ಪಂಡಿತರುಗಳಲ್ಲಿಯೂ ಶ್ರೇಷ್ಠರಾದ ಪಂಡಿತರು. ತಪ್ತಮುದ್ರಾಂಕನ ಮಾಡಿಕೊಳ್ಳಬೇಕೆಂದು ಸಮರ್ಥಿಸುವವರಲ್ಲಿ ಅಗ್ರಗಣ್ಯ ವೈಷ್ಣವ ಪಂಡಿತರು ಎಂಬುದಾಗಿ ನಿಶ್ಚಯಿಸಿದರು. ಶ್ರೀವೇಂಕಟನಾಥಾಚಾರ್ಯರನ್ನು ಶ್ರೇಷ್ಠ ರೀತಿಯಲ್ಲಿ ಗೌರವಿಸಿದರು.

## ಶ್ರೀವೇಂಕಟನಾಥರು ಅನುಭವಿಸಿದ ಘೋರ ದಾರಿದ್ರ್ಯ

**ಅವತರಣಿಕೆ :** ಈ ರೀತಿಯಾಗಿ ಶ್ರೀವೇಂಕಟನಾಥಾಚಾರ್ಯರು ಅತ್ಯಂತ ವಿದ್ಯಾವಂತರೂ ಶ್ರೇಷ್ಠ ಪಂಡಿತರೂ ಅತಿ ಸಮರ್ಥರೂ ಆಗಿದ್ದರೂ ಸಹಾ ಪ್ರಾಚೀನ ಕರ್ಮದಿಂದ ಅತಿ ಘೋರವಾದ ಬಡತನದ ಬವಣೆಯನ್ನು ಅನುಭವಿಸಬೇಕಾಗಿ ಬಂದಿತು ಎಂಬುದಾಗಿ ಕವಿಗಳು ಈಗ ವರ್ಣಿಸುತ್ತಾರೆ.

**ವಿದ್ಯೋದ್ಯೋಗಾದ್ವಾಸರಾನ್ ಯಾಪಯಂತಂ**
**(ಯನ್ ಸಃ) ಪ್ರಾಪೌನ್ನತ್ಯಂ ಪಾತಕಂ ನಿರ್ಧನತ್ವಮ್ ।**
**ಅತ್ಯಾಸನ್ನಶ್ರೀನಿದಾನೇಂದಿರೇಶಧ್ಯಾನೋಪಾಯಂ(ಯೋ)**
**ಬುದ್ಧಿವಾರ್ಧಿಂ(ರ್ಧಿಃ)ಸಿಷೇವೇ ॥೧೮॥**

**ತಾತ್ಪರ್ಯ :** (ಬಾಲಬೋಧಿನೀ ವ್ಯಾಖ್ಯಾನುಸಾರ) : ಹಿಂದೆ ವರ್ಣಿಸಿದ ರೀತಿಯಲ್ಲಿ ಶ್ರೀವೇಂಕಟನಾಥಾಚಾರ್ಯರು ವಿದ್ಯೆಯಿಂದ ಕೀರ್ತಿಯ ಶಿಖರವನ್ನೇರಿದರು. ಅದೇ ರೀತಿಯಲ್ಲಿ ಇನ್ನೂ ವಿದ್ಯೆಯನ್ನು ಸಂಪಾದಿಸುವ ಮತ್ತು ಅದನ್ನು ಶಿಷ್ಯರುಗಳಿಗೆ ಪಾಠ ಹೇಳುವ ಪ್ರಯತ್ನದಿಂದಲೇ ದಿನಗಳನ್ನು ಕಳೆಯುತ್ತಿದ್ದರು. ಈ ರೀತಿಯಾಗಿ ಶ್ರೀವೇಂಕಟನಾಥಾಚಾರ್ಯರು ಜ್ಞಾನನಿಧಿಗಳಾಗಿದ್ದರು. ಆದರೂ ಅವರಿಗೆ ಸಂಪತ್ತು ಇರಲಿಲ್ಲ. ಅದೂ ಕೂಡ ಅವರು ಮಹಾಸಂಸ್ಥಾನ ಗದ್ದುಗೆಯನ್ನು ಏರಿದ ಮೇಲೆ ಬರುವುದಿತ್ತು. ಆ ರೀತಿಯಾದ ಸಂಪತ್ತು ಪ್ರಾಪ್ತವಾಗಲು ಲಕ್ಷ್ಮೀಪತಿಯ ನಿರಂತರ ಧ್ಯಾನವು ಅತ್ಯವಶ್ಯಕವಾಗಿತ್ತು. ನಿರಂತರ ಹರಿಧ್ಯಾನ ಪರರಾಗಬೇಕಾದರೆ ಮತ್ತು ಪರಮಾತ್ಮನಲ್ಲಿ ಸ್ಥಿರವಾದ ಮನಸ್ಸನ್ನು ಇಡಲು ಬಡತನವು ಬರಲೇ ಬೇಕಾಗಿತ್ತು. ಆದುದರಿಂದ ಶ್ರೀಲಕ್ಷ್ಮೀಪತಿಯಾದ ಶ್ರೀಮನ್ನಾರಾಯಣನ ಸಂಕಲ್ಪಾನುಸಾರ ಶ್ರೀವೇಂಕಟನಾಥಾಚಾರ್ಯರಿಗೆ ಬಡತನವು ಉಂಟಾಯಿತು. ಅವರು ಅತ್ಯಂತ ಘೋರವಾದ ದಾರಿದ್ರ್ಯವನ್ನು ಅನುಭವಿಸಬೇಕಾಯಿತು.

**ತಾತ್ಪರ್ಯ (ಗುರುಸೇವಾ ವ್ಯಾಖ್ಯಾನಾನುಸಾರ) :** ಶ್ರೀವೇಂಕಟನಾಥರು ಇನ್ನೂ ಬಹಳ ವಿದ್ಯೆಯನ್ನು ಪಡೆಯಲು ಪ್ರಯತ್ನಿಸುತ್ತಲೇ ಇದ್ದರು. ಆ ಪ್ರಯತ್ನದಲ್ಲಿಯೇ ಅವರ ದಿನಗಳು ಕಳೆದು ಹೋಗುತ್ತಿದ್ದವು. ಈ ರೀತಿಯಾಗಿ ಅವರು ವಿದ್ಯಾಪ್ರಾಪ್ತಿಯ ಪ್ರಯತ್ನದಿಂದ ಬುದ್ಧಿಸಾಗರರೇ ಆದರು. ವಿದ್ಯೆಯು ಅವರಲ್ಲಿ ಎಷ್ಟು ಹೆಚ್ಚಿತೋ ಅದರಂತೆ ಅವರಿಗೆ ಬಡತನವೂ ದಿನದಿಂದ ದಿನಕ್ಕೆ ಹೆಚ್ಚುತ್ತಾ ಹೋಯಿತು. ಅದು ದಾರಿದ್ರ್ಯದ ಪರಾಕಾಷ್ಠತೆಯನ್ನೇರಿ ಕುಣಿಯಲಾರಂಭಿಸಿತು. ಜನ್ಮಾಂತರ ಪಾಪಕರ್ಮದ ಫಲವಾದ ಪ್ರಾರಬ್ಧಕರ್ಮ ರೂಪವಾದ ಈ ಘೋರ ಬಡತನವನ್ನು ಶ್ರೀವೇಂಕಟನಾಥರು ಅನುಭವಿಸಿದರು. ಈ ರೀತಿಯಾಗಿ ಈಗ ಬಡತನವನ್ನು ಅನುಭವಿಸಿದ ಕಾರಣದಿಂದಲೇ ಅವರಿಗೆ ಮುಂದೆ ಅಪಾರವಾದ ಸಂಪತ್ತು ಬಂದಿತು. ಶ್ರೀವೇಂಕಟನಾಥರು ಸನ್ಯಾಸಾಶ್ರಮವನ್ನು ಸ್ವೀಕರಿಸಿ ಪೀಠಾಧಿಪತಿಗಳಾದ ಮೇಲೆ ಅವರಿಗೆ ಅಪಾರವಾದ

ಜ್ಞಾನಸಂಪತ್ತಿನೊಂದಿಗೆ ಶ್ರೀಮಹಾಲಕ್ಷ್ಮಿಯ ಕರುಣಾ ಕಟಾಕ್ಷವೂ ಬರುವುದರಲ್ಲಿತ್ತು. ಆದರೆ ಬಡತನ ಬಂದಾಗಲೇ ಧನಾರ್ಜನೆಗಾಗಿ ಪರರ ಮುಂದೆ ಕೈಚಾಚಿದರೆ ತಾವು ಓದಿರುವ ವಿದ್ಯೆಗೆ ಅಪಚಾರವೆಸಗಿದಂತೆ ಆಗಿ ವಿಘ್ನ ಉಂಟಾಗಬಹುದೆಂಬ ಭಯದಿಂದ ಅವರು ಭಗವಂತನ ಸಂಕಲ್ಪಕ್ಕೆ ಅನುಸಾರವಾಗಿ ಬಂದೊದಗಿದ ಬಡತನದಲ್ಲಿ ಜೀವನಕ್ಕೆ ಅವಶ್ಯಕವಾದ ಸಾಮಗ್ರಿಯಿಂದಲೇ ಇದ್ದುದರಲ್ಲಿಯೇ ಸಂತೋಷದಿಂದ ಜೀವಿಸುತ್ತಿದ್ದರು. ಸನ್ಯಾಸ ಪದವಿಯ ಅನಂತರದಲ್ಲಿ ಸಂಪತ್ತು ಬರುವುದಾದರೂ ಅದಕ್ಕಾಗಿ ಶ್ರೀಹರಿಪರಮಾತ್ಮನ ನಿರಂತರವಾದ ಧ್ಯಾನವು ಅತ್ಯವಶ್ಯಕವಾಗಿತ್ತು. ಶ್ರೀಹರಿಯ ಅಂತಹ ನಿರಂತರ ಧ್ಯಾನಕ್ಕೆ ಶ್ರೀವೇಂಕಟನಾಥರು ತಮಗೆ ಬಂದೊದಗಿದ ದಾರಿದ್ರ್ಯವನ್ನು ಸಾಧನವನ್ನಾಗಿ ಮಾಡಿಕೊಂಡರು. ನೀಚಜನರನ್ನು ಬೇಡಿ ಅವರಿಂದ ತಿರಸ್ಕಾರವನ್ನು ಅನುಭವಿಸಿ ಮನನೊಂದು ವಿದ್ಯೆಗೆ ವಿಘ್ನವನ್ನು ತಂದುಕೊಳ್ಳುವುದಕ್ಕಿಂತ ವಿದ್ಯಾರ್ಜನೆಯನ್ನು, ವಿದ್ಯೆಯ ಉಪದೇಶಗಳನ್ನು ಮಾಡಿದರೆ ಶ್ರೀಹರಿಪರಮಾತ್ಮನು ಸಂತುಷ್ಟನಾಗಿ ತಮಗೆ ಎಷ್ಟು ಸಂಪತ್ತು, ಯಾವ ರೂಪದಲ್ಲಿ, ಯಾವಾಗ ಬರಬೇಕಾಗಿದೆಯೋ ಅದನ್ನು ಪರಮಾತ್ಮನು ನೀಡಿಯೇ ನೀಡುವನೆಂಬ ಭರವಸೆಯಿಂದ ಶ್ರೀವೇಂಕಟನಾಥರು ಹರಿಧ್ಯಾನಕ್ಕೆ ಬಡತನವನ್ನೇ ಸಾಧನವನ್ನಾಗಿ ಮಾಡಿಕೊಂಡು ಬಡತನವನ್ನು ಅನುಭವಿಸಿದರು. ಇಲ್ಲಿ ವ್ಯಾಘಾತವೆಂಬ ಅಲಂಕಾರವಿದೆ. ಸ್ಯಾದ್ ವ್ಯಾಘಾತೋऽನ್ಯಾರ್ಥಕಾರಿ ತಥಾಕಾರಿ ಕ್ರಿಯೇತ ಚೇತ್ । ಯೈರ್ಜಗತ್ ಪ್ರೀಯತೇ ಹಂತಿ ತೈರೇವ ಕುಸುಮಾಯುಧಃ ।" ಬೇರೊಂದು ಫಲಪ್ರಾಪ್ತಿಗೆ ಸಾಧನವಾದುದನ್ನು, ಮತ್ತೊಂದು ಫಲಪ್ರಾಪ್ತಿಗೆ ಸಾಧನವನ್ನಾಗಿ ಉಪಯೋಗಿಸಿಕೊಂಡರು ಎಂಬುದಾಗಿ ವರ್ಣಿಸಿದರೆ ಅದು ವ್ಯಾಘಾತಾಲಂಕಾರ. ಹೂವುಗಳಿಂದ ಜಗತ್ತೆಲ್ಲವೂ ಸಂತೋಷಪಡುತ್ತದೆ. ಆದರೆ ಅದೇ ಹೂವುಗಳನ್ನು ಬಾಣವನ್ನಾಗಿ ಮಾಡಿಕೊಂಡು ಪುಷ್ಪ ಬಾಣನಾದ ಮನ್ಮಥನು ವಿರಹಿಗಳನ್ನು ಹೊಡೆದು ದುಃಖಪಡಿಸುತ್ತಾನೆ ಎಂಬುದು ಈ ಅಲಂಕಾರಕ್ಕೆ ಉದಾಹರಣೆಯು. ಪ್ರಕೃತದಲ್ಲಿ ಬಡತನವು ದುಃಖವನ್ನುಂಟುಮಾಡಿ ಪ್ರಾಯಃ ದೇವದೇವನ ವಿಸ್ಮರಣೆಗೆ ಕಾರಣವಾಗುತ್ತದೆ. ಆದರೆ ಶ್ರೀವೇಂಕಟನಾಥರು ಈ ಬಡತನದ ದುಃಖವನ್ನು ದೇವದೇವನ ಧ್ಯಾನಕ್ಕೆ ಉಪಾಯ (ಸಾಧನೆ)ಯನ್ನಾಗಿ ಪರಿವರ್ತಿಸಿಕೊಂಡರು. ಶ್ರೀಹರಿಪರಮಾತ್ಮನ ಧ್ಯಾನ, ಸ್ಮರಣಾದಿಗಳನ್ನು ನಿರಂತರವಾಗಿ ಮಾಡಿ ಮುಂದೆ ಬರಲಿರುವ ಸಂಪತ್ತಿಗೆ ಬಡತನದ ಬವಣೆಯನ್ನು ಸಾಧನವನ್ನಾಗಿ ಮಾಡಿಕೊಂಡರು ಎಂದು ವರ್ಣಿಸಿರುವುದರಿಂದ ಇಲ್ಲಿಯೂ ವ್ಯಾಘಾತಾಲಂಕಾರ.

**ವಿಶೇಷಾಂಶ :** ಶ್ರೀಹರಿಪರಮಾತ್ಮನ (ಶ್ರೀನೃಸಿಂಹದೇವರ) ವಿಶೇಷ ವರಭಾಜನರೂ, ಶ್ರೀವಾಯುದೇವರ ಸತತ ಆವೇಶಯುಕ್ತರೂ, ಶ್ರೀಶಂಖುಕರ್ಣರೆಂಬ ಕರ್ಮಜ ದೇವತೆಯ ಅವತಾರರೂಪರಾದ, ಮತ್ತು ಶ್ರೀಮದಾಚಾರ್ಯರ ಮೂಲಮಹಾಸಂಸ್ಥಾನಾಧಿಪತಿಗಳಾದ ಶ್ರೀಸುಧೀಂದ್ರತೀರ್ಥ ಶ್ರೀಪಾದಂಗಳವರ ಕೃಪಾಕಟಾಕ್ಷದಲ್ಲಿದ್ದ ಶ್ರೀವೇಂಕಟನಾಥ ಆಚಾರ್ಯರಿಗೆ ಇಂತಹಾ ದಾರಿದ್ರ್ಯವನ್ನು ಅನುಭವಿಸುವ ಪ್ರಸಂಗ ಏತಕ್ಕೆ ಬಂದೊದಗಿತು ಎಂಬ ಆಶಂಕೆಯು ಉಂಟಾಗುತ್ತದೆ. ಇದಕ್ಕೆ ಈ ರೀತಿಯಾಗಿ ವಿಶ್ಲೇಷಣೆ ಮಾಡಬಹುದು.

ಶ್ರೀಶಂಖುಕರ್ಣರು ಕರ್ಮಜ ದೇವತೆಯಾಗಿ ಸತ್ಯಲೋಕದಲ್ಲಿ ಶ್ರೀಬ್ರಹ್ಮದೇವರ ಕೃಪಾಕಟಾಕ್ಷದಡಿಯಲ್ಲಿ ಇದ್ದುದರಿಂದ ಅಲ್ಲಿ ದರಿದ್ರಲಕ್ಷ್ಮಿಗೆ ಅವಕಾಶವಿಲ್ಲ! ಇನ್ನು ಅವರ ಪ್ರಥಮ ಅವತಾರರಾದ ಶ್ರೀಪ್ರಹ್ಲಾದರಾಜರು ಸಾಕ್ಷಾತ್ ನರಹರಿಯ ಅನುಗ್ರಹಪಾತ್ರರಾಗಿ ಮೂರೂಲೋಕಗಳಿಗೆ ಚಕ್ರವರ್ತಿಗಳಾಗಿ ಮೆರೆದ ಮಹಾನುಭಾವರು. ಇಲ್ಲಿಯೂ ದರಿದ್ರಲಕ್ಷ್ಮಿಗೆ ಅವಕಾಶವಿಲ್ಲ!! ಅಂತೆಯೇ ಶ್ರೀಬ್ಲಾಹೀಕರೂ ಚಕ್ರವರ್ತಿಗಳಾದುದರಿಂದ ಇಲ್ಲಿಯೂ ದರಿದ್ರಲಕ್ಷ್ಮಿಗೆ ಅವಕಾಶವಿಲ್ಲ!!! ಮುಂದೆ ಶ್ರೀವ್ಯಾಸರಾಜರಾಗಿ ಅವತಾರ ಮಾಡಿದಾಗ ವಿಜಯನಗರದ ಅರಸು ಶ್ರೀಕೃಷ್ಣದೇವರಾಯನಿಗೆ ಒದಗಿದ್ದ ಕುಹಯೋಗವನ್ನು ಶ್ರೀಹರಿಯ ಅನುಗ್ರಹದಿಂದ ತಮ್ಮ ತಪಃಶಕ್ತಿಯ ಬಲದಿಂದ ನಿವಾರಿಸಿ ಅವನಿಂದ ಇಡೀ ವಿಜಯನಗರ ಸಾಮ್ರಾಜ್ಯವನ್ನು ದಾನವಾಗಿ ಸ್ವೀಕರಿಸಿ, ಮತ್ತೆ ಅದನ್ನು ಅವನಿಗೆ ನೀಡಿದ ಮಹಾಪ್ರಭುಗಳು. ಶ್ರೀಹರಿಯ ಒಡತಿ ಐಶ್ವರ್ಯಲಕ್ಷ್ಮಿಯು ಇವರ ಬಳಿ ಸದಾ ತಾಂಡವವಾಡುತ್ತಿದ್ದಳು. ಹೀಗಾಗಿ ಇಲ್ಲಿಯೂ ದರಿದ್ರಲಕ್ಷ್ಮಿಗೆ ಅವಕಾಶವಿಲ್ಲ. ಅಲ್ಲದೆ ಈ ಜಗತ್ತಿನಲ್ಲಿ ಜನ್ಮತಾಳಿದ ಪ್ರತಿಯೊಬ್ಬನೂ ಸುಖ ದುಃಖ ಸಿರಿತನ ಬಡತನ ಎಲ್ಲವನ್ನೂ ತನ್ನ ಕರ್ಮಾನುಸಾರವಾಗಿ ಅನುಭವಿಸಲೇಬೇಕೆಂಬ ವಿಧಿನಿಯಮದಂತೆ ಶ್ರೀಹರಿಯ ಆಣತಿಯಂತೆ ಶ್ರೀಬ್ರಹ್ಮದೇವರ ಶಾಪಾನುಸಾರ ಶಂಖುಕರ್ಣರಿಗೆ ಇದೇ ಕೊನೆಯ ಅವತಾರವಾದುದರಿಂದ, ಅವರು ದರಿದ್ರಲಕ್ಷ್ಮಿಯನ್ನು ಸ್ವತಃ ಪ್ರಾರ್ಥಿಸಿ ಬಡತನವನ್ನು ಅನುಭವಿಸಿದರು. ಇದರಿಂದಾಗಿ ತಾವು ಶ್ರೀಗುರುರಾಘವೇಂದ್ರರಾದ ಮೇಲೆ ಸಾಮಾನ್ಯ ಜನರ ಆರ್ಥಿಕ ಸಂಕಷ್ಟಗಳ ಬಗೆಗೆ ಸ್ವಾನುಭವವಿದ್ದುದರಿಂದ ತಕ್ಷಣ ಸ್ಪಂದಿಸಿ ಅವರ ಕಷ್ಟಗಳನ್ನು ನಿವಾರಿಸಲು ಅನುಕೂಲವಾಯಿತು.

**ಅವತರಣಿಕೆ :** ಈಗ ಕವಿಗಳು ಶ್ರೀವೇಂಕಟನಾಥಾಚಾರ್ಯರು ಅನುಭವಿಸಿದ ಕಡುದಾರಿದ್ರ್ಯವನ್ನು ಕೆಳಗಿನ ಕೆಲವು ಶ್ಲೋಕಗಳಲ್ಲಿ ವರ್ಣಿಸುತ್ತಾರೆ.

**ಅಬ್ದಸ್ಯೈಕಂ ಪಶ್ಯತೋ(ವತ್ಸ್ಯತೋ)ನಾಸ್ಯ ನವ್ಯಂ**
**ಸ್ಥೂಲಂ ವಸ್ತ್ರಂ ಸಂತತಂ ಚಾಲ್ಪಮೂಲ್ಯಮ್।**
**ನವ್ಯಂ ವಸ್ತ್ರಂ ನೈವ ಸೂಕ್ಷ್ಮಂ ಕದಾಪಿ ಕ್ಷೌಮೇ**
**ತಸ್ಮಿನ್ ಕಾ ಕಥಾಽಕಿಂಚನಸ್ಯ ॥೧೯॥**

**ತಾತ್ಪರ್ಯ :** ಶ್ರೀವೇಂಕಟನಾಥಾಚಾರ್ಯರು ಅನುಭವಿಸಿದ ದಾರಿದ್ರ್ಯವು ಅತ್ಯಂತ ಘೋರವಾಗಿತ್ತು. ಅವರು ಒಂದೇ ವಸ್ತ್ರದಲ್ಲಿ ವರ್ಷಪೂರ್ತಿ ಕಾಲ ಕಳೆಯುತ್ತಿದ್ದರು, ಏಕೆಂದರೆ ಬದಲಾಯಿಸಿ ಇನ್ನೊಂದು ವಸ್ತ್ರವನ್ನು ಧರಿಸಲು ಅವರ ಬಳಿ ಬೇರೆ ವಸ್ತ್ರವೇ ಇರಲಿಲ್ಲ. ವರ್ಷಾವಧಿ ಹಬ್ಬಗಳೆಂದು ಕರೆಯಲ್ಪಡುವ ಯುಗಾದಿ ಮತ್ತು ದೀಪಾವಳೀ ಹಬ್ಬಗಳಲ್ಲಿ. ಅತ್ಯಂತ ಕಡಿಮೆ ಬೆಲೆಯ ದಪ್ಪನಾದ ಹೊಸ ಬಟ್ಟೆಗಳನ್ನು ಕೊಂಡು ಧರಿಸಲೂ ಅವರಿಗೆ ಸಾಧ್ಯವಾಗುತ್ತಿರಲಿಲ್ಲ ಇನ್ನು ಹೊಸದಾದ ಉತ್ತಮವಾದ ರೇಷ್ಮೆ ಮುಂತಾದ ಉತ್ತಮ ವಸ್ತ್ರಗಳನ್ನು

ಧರಿಸುವುದು ದೂರತೋಪಾಸ್ತವಾಗಿತ್ತು. ಇಂತಹಾ ದಟ್ಟ ಬಡತನದಲ್ಲಿ ನೂತನ ರೇಷ್ಮೆ ಮತ್ತು ಜರತಾರಿ ಅಂಚಿನ ಬಟ್ಟೆಗಳನ್ನು ಧರಿಸುವುದು ಸಾಧ್ಯವೇ ಇರಲಿಲ್ಲವೆಂದು ಹೇಳಬೇಕಾಗಿಯೇ ಇಲ್ಲವಷ್ಟೇ.

**ವಿಶೇಷಾಂಶ :** ಶ್ರೀರಾಘವೇಂದ್ರವಿಜಯ ಮಹಾಕಾವ್ಯಕ್ಕೆ ಎರಡು ವ್ಯಾಖ್ಯಾನಗಳು ಉಪಲಬ್ಧವಿದೆ. ಅದರಲ್ಲಿ ಶ್ರೀರಾಮಸೂರಿಗಳು (ಶ್ರೀರಾಮಾಚಾರ್ಯ ಎಂಬುವವರು) ಬರೆದ ಬಾಲಬೋಧಿನೀ ವ್ಯಾಖ್ಯಾನವು ಆರನೆಯ ಸರ್ಗ ಮೇಲಿನ ಶ್ಲೋಕದವರೆವಿಗೆ ಮಾತ್ರ ಲಬ್ಧವಿದೆ. ಹತ್ತೊಂಬತ್ತನೇ ಶ್ಲೋಕದ ವ್ಯಾಖ್ಯಾನವೂ ಪೂರ್ತಿಯಾಗಿಲ್ಲ.

**ಅವತಾರಿಕೆ :** ಬಡತನದ ಬವಣೆಯಲ್ಲಿ ಬಳಲುತ್ತಿದ್ದ ಶ್ರೀವೇಂಕಟನಾಥಾಚಾರ್ಯರಿಗೆ ತೈಲಾಭ್ಯಂಜನವು ಅತ್ಯಂತ ದುರ್ಲಭವಾಗಿತ್ತು ಎಂದು ಕವಿಗಳು ವರ್ಣಿಸುತ್ತಾರೆ.

**ತೈಲಾಭ್ಯಂಗಂ ವತ್ಸರಸ್ಯೈಕವಾರಂ ನೈತಸ್ಯಾಸ್ತಿ ಪ್ರಾಜ್ಯಮಾಜ್ಯಂ ಕಥಂ ಸ್ಯಾತ್ ।**
**ಅಗ್ನಿಷ್ಟೋಮೇ ನಾಧಿಕಾರೀ ಕಥಂ ಸ್ಯಾತ್ ಜ್ಯೋತಿಷ್ಟೋಮೇಜ್ಯಾಂತಸಂಸ್ಥಾಧಿಕಾರೀ ॥೨೦॥**

**ತಾತ್ಪರ್ಯ :** ಬಡತನದ ಬವಣೆಯಲ್ಲಿ ಶ್ರೀವೇಂಕಟನಾಥಾಚಾರ್ಯರಿಗೆ ವರ್ಷಕ್ಕೆ ಒಮ್ಮೆಯಾದರೂ ತೈಲಾಭ್ಯಂಜನ (ಎಣ್ಣೆ ನೀರು) ಮಾಡಲು ಸಾಧ್ಯವಾಗುತ್ತಿರಲಿಲ್ಲ. ಹೀಗಿರುವಾಗ ಇಷ್ಟ ಬಂದಷ್ಟು ತುಪ್ಪವನ್ನು ಉಪಯೋಗಿಸಲು ಆಗುತ್ತಿರಲಿಲ್ಲವೆಂದು ಪ್ರತ್ಯೇಕವಾಗಿ ಹೇಳುವ ಅವಶ್ಯಕತೆಯಿಲ್ಲವಷ್ಟೆ! ಅಭ್ಯಂಜನವೂ ಇರಲಿಲ್ಲ, ತುಪ್ಪವೂ ಇರಲಿಲ್ಲ. ಅಗ್ನಿಷ್ಟೋಮವೆಂಬ ಚಿಕ್ಕ ಯಾಗದಲ್ಲಿ ಅಧಿಕಾರವಿಲ್ಲದಿರುವಾಗ, ಆ ಯಾಗವನ್ನೇ ಮಾಡಲು ಶಕ್ತಿಯಿಲ್ಲದವನು ಜ್ಯೋತಿಷ್ಟೋಮವೆಂಬ ಕೊನೆಯಲ್ಲಿ ಮಾಡುವ ಯಾಗದಲ್ಲಿ ಅಧಿಕಾರಿಯಾಗಲು ಸಾಧ್ಯವೇ? ಸ್ವಲ್ಪ ವೆಚ್ಚದಲ್ಲಿಯೇ ಅಗ್ನಿಷ್ಟೋಮ ಎಂಬ ಯಾಗವನ್ನು ಮಾಡಬಹುದು. ಅದನ್ನೇ ಮಾಡಲು ಸಾಧ್ಯವಿಲ್ಲದವನು ಬಹಳ ಹಣ ವೆಚ್ಚಮಾಡಿ ಮಾಡಬೇಕಾಗಿರುವ ಜ್ಯೋತಿಷ್ಟೋಮ ಎಂಬ ಯಾಗವನ್ನು ಮಾಡಲು ಸಾಧ್ಯವೇ! ಖಂಡಿತಾ ಸಾಧ್ಯವಿಲ್ಲ. ಅದೇ ರೀತಿಯಲ್ಲಿ ವರ್ಷಕ್ಕೆ ಒಂದು ಬಾರಿಯೂ ತೈಲಾಭ್ಯಂಜನ ಮಾಡಲು ಸಾಧ್ಯವಿಲ್ಲದವನಿಗೆ ತಿನ್ನಲು ತುಂಬಾ ತುಪ್ಪವು ಎಲ್ಲಿಂದ ಸಾಧ್ಯವಾಗುತ್ತದೆ? ತುಪ್ಪವು ಸಿಗುವುದೇ ಇಲ್ಲ ಎಂಬುದಾಗಿ ಹೇಳುವುದೇ ಸರಿ ಎಂದು ಅಭಿಪ್ರಾಯ. ಇಲ್ಲಿ ದೃಷ್ಟಾಲಂಕಾರವಿದೆ. "ಚೇದ್ ಬಿಂಬ ಪ್ರತಿಬಿಂಬತ್ವಂ ದೃಷ್ಟಾಂತಸ್ತದಲಂಕೃತಿಃ । ತ್ವಮೇವ ಕೀರ್ತಿಮಾನ್ ರಾಜನ್ ವಿಧುರೇವ ಹಿ ಕಾಂತಿಮಾನ್ ॥" ಎಂಬುದು ದೃಷ್ಟಾಂತಾಲಂಕಾರದ ಲಕ್ಷಣಗಳು.

**ಅವತರಣಿಕೆ :** ಬಡತನದ ಬೇಗೆಯಲ್ಲಿ ಬೇಯುತ್ತಿದ್ದ ಶ್ರೀವೇಂಕಟನಾಥಾಚಾರ್ಯರ ಆಹಾರ ಪ್ರಕಾರವನ್ನು ವರ್ಣಿಸುತ್ತಾರೆ.

**ಕಾಲೇ ಕಾಲೇ ಲಭ್ಯತೇ ನಾಸ್ಯ ಭಕ್ತಂ ಲಬ್ಧಂ ಚೇತ್ತದ್ ಭುಜ್ಯತೇ ಹಂತ ಭೂಮೌ ।**
**ಪತ್ರಾಭಾವೇದೇಕದಾ ನಾಥಿತೇಽಪಿ ಕ್ಷುದ್ಬಾಧಾಯಾಃ ಶಾಂತಿಮೇವಾಲಭಿಷ್ಟ ॥೨೧॥**

**ತಾತ್ಪರ್ಯ :** ಶ್ರೀವೇಂಕಟನಾಥಾಚಾರ್ಯರಿಗೆ ಮಧ್ಯಾಹ್ನ ಸಾಯಂಕಾಲ ರಾತ್ರಿಗಳಲ್ಲಿ ಊಟಕ್ಕೆ ಬೇಕಾದಷ್ಟು ಅನ್ನವೂ ಸಿಗುತ್ತಿರಲಿಲ್ಲ. ಒಂದು ವೇಳೆ ಹೇಗೋ ತಾತ್ಕಾಲದಲ್ಲಿ ಊಟಕ್ಕೆ ಬೇಕಾದಷ್ಟು ಅನ್ನ ಮುಂತಾದ್ದು ಸಿಕ್ಕಿದರೂ ಅದನ್ನು ಊಟಮಾಡಲು ಎಲೆ, ತಟ್ಟೆ ಮುಂತಾದುದು ಯಾವುದೂ ಇಲ್ಲದ್ದರಿಂದ ನೆಲದ ಮೇಲೆಯೇ ಊಟಮಾಡಬೇಕಾಗುತ್ತಿತ್ತು. ಶ್ರೀವೇಂಕಟನಾಥರ ಬಡತನವು ಇಷ್ಟೊಂದು ವಿಷಾದಕರವಾಗಿತ್ತು. ಅವರು ಯಾರನ್ನೂ ಬೇಡುತ್ತಿರಲಿಲ್ಲ. ಯಾಚನೆ ಮಾಡಲು ಸಾಧ್ಯವೇ ಇಲ್ಲ ಎಂದು ಆದಾಗ ಯಾರನ್ನೋ ಏನಾದರೂ ಬೇಡಿದರೂ ತತ್ಕಾಲದ ಹಸಿವಿನ ಪರಿಹಾರಕ್ಕೆ ಮಾತ್ರ ಸಾಕಾಗುತ್ತಿತ್ತು. ಅವರು ಅದಕ್ಕಿಂತ ಹೆಚ್ಚಾಗಿ ಬೇಡುತ್ತಿರಲಿಲ್ಲ. ಬೇಡಿದರೂ ಹೆಚ್ಚಾಗಿ ಸಿಗುತ್ತಿರಲಿಲ್ಲ. ಶ್ರೀವೇಂಕಟನಾಥರ ದಾರಿದ್ರ್ಯದ ಅನುಭವವು ಹೀಗಿತ್ತು.

**ಅವತಾರಿಕೆ :** ಈಗ ಕವಿಗಳು ಶ್ರೀವೇಂಕಟನಾಥಾಚಾರ್ಯರ ಮನೆಯಲ್ಲಿ ಕಳ್ಳತನವಾದುದನ್ನು ವರ್ಣಿಸುತ್ತಾರೆ.

**ಛಿನ್ನೇ ವಸ್ತ್ರೇ ಭಿನ್ನಪಾನೀಯಪಾತ್ರೇ ಜೀರ್ಣಸ್ಥಾಲ್ಯಾಂ ದಸ್ಯುಭಿರ್ನೀಯಮಾನೇ ।**
**ಪ್ರಾಗಾಕೃಷ್ಟಂ ಭಾವಿ ಕೌಪೀನಮಸ್ಯ ಭಾಗೇ ಯಾಗೇ ಪ್ರಾಗಿವಾಭೂತ್ ಪ್ರಯಾಜಃ ॥೨೨॥**

**ತಾತ್ಪರ್ಯ :** ಶ್ರೀವೇಂಕಟನಾಥಾಚಾರ್ಯರು ಗೋಡೆ, ಛಾವಣಿ, ಕಂಭ, ಆವರಣಗಳು ಸರಿಯಾಗಿಲ್ಲದಿರುವ ಸ್ವಾಭಾವಿಕ ಭೂಪ್ರದೇಶದಂತಿರುವ ಮನೆ ಎಂದು ಹೆಸರು ಮಾತ್ರ ಇರುವ ಪ್ರದೇಶದಲ್ಲಿ ವಾಸಿಸುತ್ತಿದ್ದರು. ಅವರಲ್ಲಿ ಸಂಪತ್ತು ಇರಲಿಲ್ಲ. ಹರಕಲು ಪಂಚೆ, ಒಡೆದು ಹೋದ ತೂತುಬಿದ್ದ ಕುಡಿಯುವ ಪಾತ್ರೆ ಇತ್ಯಾದಿ ವಸ್ತುಗಳು ಇದ್ದುವು. ಆದರೆ ಅದನ್ನು ಒಂದು ದಿನ ಕಳ್ಳರು ಕದ್ದು ಕೊಂಡೊಯ್ದರು. ಆಗ ಅವರು ಮುಂದೆ ಸನ್ನ್ಯಾಸ ಸ್ವೀಕರಿಸಿದ ಮೇಲೆ ಉಡಬೇಕಾಗಿರುವ ಕೌಪೀನವನ್ನು ಈಗಲೇ ಉಡುವಂತಾಯಿತು. ಅದು ಭಾಗ ಯಾಗದಲ್ಲಿ ಮೊದಲು ಪ್ರಯಾಜ ಎಂಬ ಹೋಮವನ್ನು ಮಾಡುವಂತೆ ಆಮೇಲೆ ಸ್ವೀಕರಿಸಬೇಕಾದ ಸನ್ನ್ಯಾಸ ಎಂಬ ಮಹಾಕಾರ್ಯದ ಅಂಗವಾದ ಕೌಪೀನ ಧಾರಣೆಯನ್ನು ಮೊದಲೇ ಮಾಡಿದಂತಾಯಿತು.

**ಅವತಾರಿಕೆ :** ಕವಿಗಳು ಶ್ರೀವೇಂಕಟನಾಥರ ಬಡತನವನ್ನು ಇನ್ನೊಂದು ರೀತಿಯಲ್ಲಿ ವರ್ಣಿಸುತ್ತಾರೆ.

**ವಿಷ್ಣೋರೇಕೋ ವಾಸರೋ ವರ್ಧಮಾನೇಽಲೋಕೇ ಕ್ಲೃಪ್ತಃ ಪಂಚಪಾಸ್ತಸ್ಯ ಗೇಹೇ ।**
**ಇಷ್ಟೌ ಪಂಚೈವೋದಿತಾಸ್ತೇ ಪ್ರಯಾಜಾಶ್ಚಾತುರ್ಮಾಸ್ಯೇಷ್ವೇಧಮಾನಾ ನವಾಸನ್ ॥೨೩॥**

**ತಾತ್ಪರ್ಯ :** ಏಕಾದಶಿಯು ವಿಷ್ಣುತಿಥಿಯೆಂದು ಪ್ರಸಿದ್ಧಿಯಾಗಿದೆ. ಶುಕ್ಲಪಕ್ಷದಲ್ಲಿ ಒಂದು, ಕೃಷ್ಣಪಕ್ಷದಲ್ಲಿ ಒಂದು ಈ ರೀತಿಯಾಗಿ ಒಂದು ತಿಂಗಳಿನಲ್ಲಿ ಎರಡು ಏಕಾದಶಿಗಳು ಬರುತ್ತವೆ. ಇದು ಸಾಧಾರಣವಾಗಿ ವಿಹಿತವಾದ ಕ್ರಮ. ಆದರೆ ಶ್ರೀವೇಂಕಟನಾಥಾಚಾರ್ಯರ ಮನೆಯಲ್ಲಿ ಒಂದು ತಿಂಗಳಿನಲ್ಲಿ ಐದು ಅಥವಾ ಆರು ಏಕಾದಶಿಗಳು ಬರುತ್ತಿದ್ದವು. ಸಾಮಾನ್ಯವಾಗಿ ಇಷ್ಟಿಯಲ್ಲಿ ಐದು ಪ್ರಯಾಜಗಳು ಬರುತ್ತವೆ. ಅವುಗಳು ಚಾತುರ್ಮಾಸ್ಯೇಷ್ಟಿಯಲ್ಲಿ ಹೆಚ್ಚಾಗುತ್ತಾ ಒಂಭತ್ತು ಆಗುತ್ತವೆ. ಶ್ರೀವೇಂಕಟನಾಥಾಚಾರ್ಯರ ಮನೆಯಲ್ಲಿ ಏಕಾದಶಿಗಳು ಐದು ಅಥವಾ ಆರು ಆಗುವುದಕ್ಕೆ ಇದೇ ದೃಷ್ಟಾಂತವು ಸರಿಹೋಗುತ್ತದೆ.

**ಪಶ್ಚಾಲ್ಲಬ್ಧಾ ಯಾದೃಶೀ ಶ್ರೀಸ್ತದೀಯೈಃ ತಸ್ಯಾ ಸಾಮ್ಯಂ ಲಭ್ಯತೇ ಚೇತ್ ಕಯಾಚಿತ್ ।**
**ಅಪ್ಯೇತಸ್ಯಾಃ ಸಂಪದೋ ನೋಪಮಾನಂ ಲಭ್ಯಂ ಲೋಕೇ ಸಮ್ಯಗಾಲೋಚಿತೇಽಪಿ ॥೨೪॥**

**ತಾತ್ಪರ್ಯ :** ಶ್ರೀವೇಂಕಟನಾಥಾಚಾರ್ಯರ ತಂದೆ, ಅಜ್ಜ, ಮುತ್ತಜ್ಜ ಮುಂತಾದವರು ಅತುಲವಾದ ಸಂಪತ್ತನ್ನು ಹೊಂದಿದ್ದರು. ಆ ಸಂಪತ್ತು ಇಂದ್ರನ ಸಂಪತ್ತಿನಂತೆ ಇತ್ತು. ಎಂದು ಯಾವುದಾದರೂ ಒಂದು ಸಂಪತ್ತಿನೊಡನೆ ಹೋಲಿಸಲು ಸಾಧ್ಯವಿತ್ತು. ಆದರೆ ಅದೇ ವಂಶದಲ್ಲಿ ಹುಟ್ಟಿದ ಈ ವೇಂಕಟನಾಥಾಚಾರ್ಯರು ಅನುಭವಿಸುತ್ತಿದ್ದ ಈ ಘೋರ ದಾರಿದ್ರ್ಯಕ್ಕೆ ಹೋಲಿಸಲು ಯಾವ ಒಂದು ದಾರಿದ್ರ್ಯವೂ ಸಿಗಲಾರದು. ಇವರ ವಂಶದವರೆಲ್ಲರೂ ಸಂಪನ್ನರಾಗಿದ್ದರು. ಶ್ರೀವೇಂಕಟನಾಥಾಚಾರ್ಯರೊಬ್ಬರೇ ದರಿದ್ರರಾಗಿದ್ದರು ಎಂದು ಅಭಿಪ್ರಾಯ.

**ಅವತರಣಿಕೆ :** ಇಂತಹಾ ಕಡು ಬಡತನದಲ್ಲಿಯೂ ಶ್ರೀವೇಂಕಟನಾಥಾಚಾರ್ಯರ ಧರ್ಮನಿಷ್ಠೆ, ಪ್ರವಚನಾಸಕ್ತಿಗಳು ಸ್ವಲ್ಪವೂ ಕುಂದಲಿಲ್ಲವೆಂದು ವರ್ಣಿಸುತ್ತಾರೆ.

**ಏವಂ ಚೇದಪ್ಯಾದರಾದ್ ಭೋಕ್ತೃಚಿಹ್ನಂ ಸಂಧಾರ್ಯಾಯಂ ಶಾಸ್ತ್ರಮುಖ್ಯಾದಜಸ್ರಮ್।**
**ಹರ್ಷಂ ಪ್ರಾಪ್ತಾ ಹ್ಯಾತ್ಮಧರ್ಮಾನುರೂಪಾ ಪತ್ಯಾಕಾರಸ್ಪರ್ಶನಾಲಾಪಜಾತಮ್ ॥೨೫॥**

**ತಾತ್ಪರ್ಯ :** ಈ ಮೇಲೆ ಹೇಳಿದ ರೀತಿಯಲ್ಲಿ ಶ್ರೀವೇಂಕಟನಾಥಾಚಾರ್ಯರು ಭಯಂಕರವಾದ ಬಡತನವನ್ನು ಅನುಭವಿಸುತ್ತಿದ್ದರು. ಹೊರಗೆ ಆ ಬಡತನವನ್ನು ತೋರ್ಪಡಿಸುತ್ತಿರಲಿಲ್ಲ. ಊಟ ಮಾಡದಿದ್ದರೂ, ಊಟ ಮಾಡಿದವರ ಚಿಹ್ನೆಗಳಾದ ಗಂಧ ಅಕ್ಷತೆ ಮುಂತಾದವುಗಳನ್ನು ಧರಿಸಿ ಹಸನ್ಮುಖಿಗಳಾಗಿ ಬಹಳ ಶ್ರದ್ಧೆ ಮತ್ತು ಪ್ರೀತಿಯಿಂದ ಶಾಸ್ತ್ರವನ್ನು ಅಭ್ಯಾಸ ಮಾಡುತ್ತಿದ್ದರು. ಪತ್ನಿಯಾದ ಸರಸ್ವತೀ ದೇವಿಯೂ ಕೂಡಾ ಬಡತನದಿಂದ ದುಃಖಿಸುತ್ತಿರಲಿಲ್ಲ. ಅವರು ತಮ್ಮ ಪತಿಯ ದೇಹದ ಸ್ಪರ್ಶ, ಅವರ ಒಡನಾಟ, ಅವರ ಜೊತೆಗೆ ಮಾತುಕಥೆಯಾಡುವುದು, ಇಷ್ಟರಿಂದಲೇ ಸಂತೋಷಪಡುತ್ತಾ ಕಾಲ ಕಳೆಯುತ್ತಿದ್ದರು. ತಮ್ಮ ಬಡತನಕ್ಕಾಗಿ ಸ್ವಲ್ಪವೂ ಚಿಂತಿಸುತ್ತಿರಲಿಲ್ಲ. ಪತಿವ್ರತಾ ಶಿರೋಮಣಿಯಾದ ಸರಸ್ವತೀ ಮಾತೆಯು ಕಾಲಕಾಲಕ್ಕೆ ಊಟ, ಬಟ್ಟೆ ಮುಂತಾದ ಸೌಕರ್ಯವಿಲ್ಲದಿದ್ದರೂ ಪತಿಯ ಜೊತೆಗೆ

ಸಂತೋಷದಿಂದ ಮಾತನಾಡುವುದು, ದೇಹ ಸ್ಪರ್ಶ, ಮುಂತಾದ ಕಾರ್ಯಗಳಿಂದ ಸಂತೋಷಪಡುತ್ತಾ ಇರುತ್ತಿದ್ದರು ಎಂದು ತಾತ್ಪರ್ಯ.

## ಶ್ರೀಸುಧೀಂದ್ರತೀರ್ಥರು ಶ್ರೀವೇಂಕಟನಾಥಾಚಾರ್ಯರನ್ನು ಸನ್ನ್ಯಾಸಕ್ಕೆ ಪ್ರೇರೇಪಿಸುವುದು

**ಅವತಾರಿಕೆ :** ಶ್ರೀಸುಧೀಂದ್ರತೀರ್ಥರು ತಮಗಾದ ಸ್ವಪ್ನಸೂಚನೆಯಂತೆ ಶ್ರೀವೇಂಕಟನಾಥಾಚಾರ್ಯರಿಗೆ ಸನ್ನ್ಯಾಸವನ್ನು ಸ್ವೀಕರಿಸಬೇಕೆಂದು ಪ್ರೇರೇಪಿಸಿದರು ಎಂಬುದಾಗಿ ಕವಿಗಳು ವರ್ಣಿಸುತ್ತಾರೆ.

**ದೃಷ್ಟಸ್ವಪ್ನಃ ಶ್ರೀಸುಧೀಂದ್ರೋಽಥ**
**ವಿದ್ಯಾಸಾಮ್ರಾಜ್ಯಾರ್ಹಂ ತಂ ಪಯೋಧಿಂ ಗುಣೌಘೈಃ।**
**ಜ್ಞಾತ್ವಾ ವಿದ್ಯಾಸಂಪ್ರದಾಯಂ ಸ ಗೋಪ್ತುಂ**
**ಪಾರಿವ್ರಾಜ್ಯಂ ಪ್ರಾರ್ಥಯಾಮಾಸ ಧೀರಮ್ ॥೨೬॥**

**ತಾತ್ಪರ್ಯ :** ಅನಂತರ ಶ್ರೀಸುಧೀಂದ್ರತೀರ್ಥರಿಗೆ ಶ್ರೀವೇಂಕಟನಾಥರಿಗೇ ಸನ್ನ್ಯಾಸವನ್ನು ಕೊಟ್ಟು ಮುಂದಿನ ಪೀಠಾಧಿಕಾರವನ್ನು ಕೊಡಬೇಕೆಂದು ಸ್ವಪ್ನವಾಯಿತು. ಅವರು ಸನ್ನ್ಯಾಸ ಯೋಗ್ಯವಾದ ಗುಣಗಳುಳ್ಳ ಶ್ರೀವೇಂಕಟನಾಥಾಚಾರ್ಯರನ್ನು ವೇದಾಂತ ವಿದ್ಯಾರಾಜ್ಯವನ್ನು ಆಳಲು ಯೋಗ್ಯರೆಂದೂ, ವೇದಾಂತ ವಿದ್ಯೆಯ ಸಿದ್ಧಾಂತೋಪದೇಶ ಪರಂಪರೆಯನ್ನು ಮುಂದುವರೆಸಲು ಅರ್ಹರು ಹಾಗೂ ಸಮರ್ಥರೆಂದು ನಿರ್ಧರಿಸಿ ಶ್ರೀವೇಂಕಟನಾಥಾಚಾರ್ಯರನ್ನು ಸನ್ನ್ಯಾಸವನ್ನು ಸ್ವೀಕರಿಸುವಂತೆ ಪ್ರೇರಿಸಿದರು.

ಶ್ರೀವೇಂಕಟನಾಥಾಚಾರ್ಯರು ತಮಗೆ ಸನ್ನ್ಯಾಸ ಸ್ವೀಕರಿಸಲು ಅಧಿಕಾರವಿಲ್ಲವೆಂದು ಹೇಳಿ ಸನ್ನ್ಯಾಸಕ್ಕೆ ಒಪ್ಪದಿರುವುದು

**ಅವತಾರಿಕೆ :** ಶ್ರೀಸುಧೀಂದ್ರತೀರ್ಥರು ಸನ್ನ್ಯಾಸ ಸ್ವೀಕರಿಸುವಂತೆ ಶ್ರೀವೇಂಕಟನಾಥಾಚಾರ್ಯರನ್ನು ಕೇಳಿದಾಗ ಶ್ರೀವೇಂಕಟನಾಥರು ತಾವು ಸನ್ನ್ಯಾಸ ಸ್ವೀಕರಿಸಲು ಅನರ್ಹರೆಂದು ಹೇಳಿ ಸನ್ನ್ಯಾಸವನ್ನು ನಿರಾಕರಿಸಿದರು ಎಂಬುದಾಗಿ ಕವಿಗಳು ವರ್ಣಿಸುತ್ತಾರೆ.

**ಕ್ವಾಹಂ ನ್ಯಾಸಃ ಕುತ್ರ ವಾ ವೇದವಿದ್ಯಾಸಾಮ್ರಾಜ್ಯಂ ತೇ ಕ್ವಾಪಿ ವಿದ್ಯಾಽಹಮಾರ್ಯ ।**
**ಪಾರಂ ಸಿಂಧೋರ್ಭಾರಮೂಢ್ವಾ ವಿವೇಕೀ ಗಂತುಂ ಯತ್ನಂ ಕೋ ಜನಃ**
**ಸಂತನೋತಿ ॥೨೭॥**

**ತಾತ್ಪರ್ಯ :** ಶ್ರೀಸುಧೀಂದ್ರತೀರ್ಥರು ಸನ್ನ್ಯಾಸ ಸ್ವೀಕಾರಕ್ಕೆ ಕರೆ ನೀಡಿದಾಗ

ಶ್ರೀವೇಂಕಟನಾಥರು ಈ ರೀತಿಯಾಗಿ ಹೇಳುತ್ತಾರೆ. ಪರಮಪೂಜ್ಯರಾದ ಶ್ರೀಗುರುವರ್ಯರೇ. ನಾನೆಲ್ಲಿ? ಸನ್ನ್ಯಾಸವೆಲ್ಲಿ? ಈ ವೇದಾಂತ ಸಾಮ್ರಾಜ್ಯವೆಲ್ಲಿ? ನಾನೆಲ್ಲಿ? ತಮ್ಮ ವಿದ್ಯೆಯೆಲ್ಲಿ? ನನ್ನ ವಿದ್ಯೆಯೆಲ್ಲಿ? ನನಗೂ ಸನ್ನ್ಯಾಸಕ್ಕೂ ವೇದಾಂತ ವಿದ್ಯಾಸಾಮ್ರಾಜ್ಯಕ್ಕೂ ಯಾವ ಹೊಂದಾಣಿಕೆಯಾಗುವ ಗುಣಗಳೂ ಇಲ್ಲ. ತಲೆಯ ಮೇಲೆ ಭಾರವಾದ ಪದಾರ್ಥವನ್ನು ಹೊತ್ತು ಯಾವ ವಿವೇಕಿಯಾದರೂ ಸಮುದ್ರವನ್ನು ದಾಟಿ ಮತ್ತೊಂದು ದಡವನ್ನು ಸೇರಲು ಪ್ರಯತ್ನಿಸುತ್ತಾನೆಯೇ? ಯಾವನೂ ಪ್ರಯತ್ನಿಸುವುದಿಲ್ಲ. (ನಾನು ಸನ್ನ್ಯಾಸ ಸ್ವೀಕಾರ ಮಾಡಿ ವಿದ್ಯಾಸಿಂಹಾಸನವನ್ನು ಏರಿ ವೇದಾಂತವಿದ್ಯಾಸಂಪ್ರದಾಯವನ್ನು ಮುಂದುವರೆಸಲು ನೋಡಿದರೆ ತಲೆಯ ಮೇಲೆ ಭಾರವನ್ನು ಹೊತ್ತು ಸಮುದ್ರವನ್ನು ದಾಟಲು ಪ್ರಯತ್ನಿಸುವವರಂತೆ ಮೂರ್ಖನಾಗುತ್ತೇನೆ ಎಂದು ಭಾವ.)

**ಅವತಾರಿಕೆ** : ಶ್ರೀಸುಧೀಂದ್ರತೀರ್ಥರು ಶ್ರೀವೇಂಕಟನಾಥರಿಗೆ ಸನ್ನ್ಯಾಸ ಸ್ವೀಕರಿಸಲು ಅಧಿಕಾರ ಇದೆಯೆಂದು ತಿಳಿಸುತ್ತಾ ಮತ್ತೆ ಸನ್ನ್ಯಾಸ ಸ್ವೀಕಾರಕ್ಕೆ ಪ್ರೇರೇಪಿಸುತ್ತಾರೆ.

**ಇತ್ಯುಕ್ತಸ್ತ್ವಂ ಪ್ರಾಹ ನಾವೋ ಹಿ ಬಹ್ವ್ಯಃ**
**ಶಾಂತಿರ್ದಾಂತಿರ್ಧೀರತೋಽದಾರತಾ ಚ ।**
**ಕೇತುಸ್ತಾಸಾಂ ಮತ್ಪ್ರಸಾದೋ ಗರೀಯಾನ್**
**ವಿದ್ಯಂತೇ ಕಿಂ ದುರ್ಘಟಂ ಸಿಂಧುಯಾನೇ ॥೨೮॥**

**ತಾತ್ಪರ್ಯ** : ಶ್ರೀವೇಂಕಟನಾಥಾಚಾರ್ಯರು ಹಿಂದೆ ಹೇಳಿದಂತೆ ಶ್ರೀಸುಧೀಂದ್ರತೀರ್ಥರಲ್ಲಿ ತಿಳಿಸಿದಾಗ ಶ್ರೀಸುಧೀಂದ್ರತೀರ್ಥರು ಅವರಿಗೆ ಪುನಃ ಈ ರೀತಿಯಾಗಿ ಉಪದೇಶಿಸುತ್ತಾರೆ. ಸಂಸಾರ ಸಮುದ್ರವನ್ನು ದಾಟಲು ಪರಮಾತ್ಮನಲ್ಲಿ ಸ್ಥಿರವಾದ ಮನೋನಿಷ್ಠೆ. ಇಂದ್ರಿಯಗಳ ನಿಗ್ರಹ, ನಿರ್ವಿಕಾರ ಮನಸ್ಸಿನಿಂದ ಇರುವುದು, ಧಾರಾಳವಾಗಿ ಕೊಡುವ ಸ್ವಭಾವ, ಇಂತಹಾ ಅನೇಕ ನೌಕೆಗಳಿವೆ. ಆ ನೌಕೆಗಳಿಗೆ ನನ್ನ ಅನುಗ್ರಹವೇ ನೌಕೆಯ ಮಧ್ಯದಲ್ಲಿರುವ ಧ್ವಜ ಹಾರಿಸುವ ಕಂಭದಂತಿದೆ. ಇವೆಲ್ಲಾ ಇರುವಾಗ ಸಮುದ್ರವನ್ನು ದಾಟಿದರೆ ಸನ್ನ್ಯಾಸಾಶ್ರಮವನ್ನು ಸುಖವಾಗಿ ನಿರ್ವಹಿಸಬಹುದು. (ಶಮ, ದಮ, ವೈರಾಗ್ಯ, ಔದಾರ್ಯಗುಣಗಳಿಂದಲೂ ನನ್ನ ಅನುಗ್ರಹದಿಂದಲೂ ನೀವು ಸನ್ನ್ಯಾಸಾಶ್ರಮವನ್ನು ಚೆನ್ನಾಗಿ ನಿರ್ವಹಿಸಿ ಸನ್ನ್ಯಾಸಾಶ್ರಮದಂತಹಾ ಮಹಾಕಾರ್ಯವೆಂಬ ಸಮುದ್ರವನ್ನು ಸುಖವಾಗಿ ದಾಟಬಹುದು. ನಿಮಗೆ ಯಾವ ಕಷ್ಟವೂ ಆಗಲಾರದು ಎಂದು ಶ್ರೀವೇಂಕಟನಾಥಾಚಾರ್ಯರನ್ನು ಕುರಿತು ಶ್ರೀಸುಧೀಂದ್ರತೀರ್ಥ ಶ್ರೀಪಾದಂಗಳವರು ಉಪದೇಶಿಸಿದರು ಎಂದು ಪರಮ ತಾತ್ಪರ್ಯ.)

**ಅವತಾರಿಕೆ** : ಸನ್ನ್ಯಾಸವನ್ನು ಒಪ್ಪದಿರಲು ಶ್ರೀವೇಂಕಟನಾಥರು ಲೌಕಿಕವಾದ ಕಾರಣವನ್ನು ಹೇಳುತ್ತಾರೆ.

**ಏಕಾಂತೇ ತೈರ್ಭೋಽಧಿತಃ ಪ್ರತ್ಯವಾದೀದ್ಬಾಲಾ ಭಾರ್ಯಾ ಬಾಲಕೋ ನೋಪನೀತಃ ।**
**ಬಾಲಶ್ಚಾಹಂ ನಾಶ್ರಮೇ ಮೇಽಸ್ತಿ ವಾಂಛಾ**
**ನಿರ್ಬಂಧಶ್ಚೇನ್ನಿರ್ಗಮಿಷ್ಯಾಮಿ ನೂನಮ್ ॥೨೯॥**

**ತಾತ್ಪರ್ಯ :** ಶ್ರೀಸುಧೀಂದ್ರತೀರ್ಥ ಶ್ರೀಪಾದಂಗಳವರು ಏಕಾಂತದಲ್ಲಿ ಶ್ರೀವೇಂಕಟನಾಥರನ್ನು ಕುರಿತು ಹಿಂದೆ ಹೇಳಿದಂತೆ ಉಪದೇಶಿಸಿದರು. ಆಗ ಶ್ರೀವೇಂಕಟನಾಥರು ಈ ರೀತಿಯಾಗಿ ಪ್ರತ್ಯುತ್ತರ ನೀಡಿದರು. "ಗುರುವರ್ಯರೇ! ನನ್ನ ಹೆಂಡತಿಯು ಇನ್ನೂ ಚಿಕ್ಕ ವಯಸ್ಸಿನವಳು. ನನ್ನ ಮಗನೂ ಚಿಕ್ಕವನು. ಅವನಿಗೆ ಇನ್ನೂ ಉಪನಯನವಾಗಿಲ್ಲ. ನಾನೂ ಚಿಕ್ಕವಯಸ್ಸಿನವನು. ನನಗೆ ಸನ್ನ್ಯಾಸಾಶ್ರಮದಲ್ಲಿ ಆಸೆಯಾಗಲಿ, ಆಸಕ್ತಿಯಾಗಲಿ ಇಲ್ಲ. ನನಗೂ ಸ್ವಲ್ಪ ಯೌವನ ಕಾಲ ಕಳೆದಾಗ, ಪತ್ನಿಯ ತಾರುಣ್ಯವು ಕಳೆದಾಗ, ಉಪನಯನ ಮಾಡಬೇಕಾದವರ ಉಪನಯನವನ್ನು ಮುಗಿಸಿ, ವಿವಾಹಕ್ಕೆ ಯೋಗ್ಯರಾದವರ ವಿವಾಹವನ್ನು ಮುಗಿಸಿ, ನನಗೂ ವೈರಾಗ್ಯ ಬಂದಾಗ, ಸನ್ನ್ಯಾಸದಲ್ಲಿ ಇಚ್ಛೆಯು ಬಂದಾಗ, ಸನ್ನ್ಯಾಸಾಶ್ರಮ ಸ್ವೀಕಾರ ಮಾಡುವುದು ಸೂಕ್ತ ಹಾಗೂ ಯುಕ್ತ. ಇಂತಹಾ ಸನ್ನಿವೇಶವು ಒದಗದಿದ್ದಾಗಲೂ ನನಗೆ ಸನ್ನ್ಯಾಸದಲ್ಲಿ ಆಸೆ ಇಲ್ಲದಿದ್ದಾಗಲೂ ನೀವು ಸನ್ನ್ಯಾಸ ಸ್ವೀಕಾರ ಮಾಡಲು ನನ್ನನ್ನು ಬಲಾತ್ಕರಿಸುವುದಾದರೆ ನಾನು ಇಲ್ಲಿ ನಿಲ್ಲುವುದೇ ಇಲ್ಲ. ಎಲ್ಲಾದರೂ ದೇಶಾಂತರಕ್ಕೆ ಹೊರಟು ಹೋಗುವೆನು ಎಂಬುದಾಗಿ ಶ್ರೀವೇಂಕಟನಾಥರು ವಿನಂತಿಸಿಕೊಂಡರು ಎಂದು ಭಾವ.

**ಅವತಾರಿಕೆ :** ಶ್ರೀಸುಧೀಂದ್ರತೀರ್ಥರು ಸನ್ನ್ಯಾಸ ಸ್ವೀಕರಿಸದಿರಲು ಶ್ರೀವೇಂಕಟನಾಥಾಚಾರ್ಯರು ಹೇಳಿದ ಲೌಕಿಕ ಕಾರಣಗಳನ್ನೆಲ್ಲಾ ನಿರಾಕರಿಸಿ ಸನ್ನ್ಯಾಸ ಸ್ವೀಕರಿಸಲು ಮತ್ತೆ ಪ್ರೇರೇಪಿಸಿ ಉಪದೇಶಿಸುತ್ತಾರೆ.

**ಶ್ರೇಯೋಽತೀತೇ ಕೀದೃಶೋಽತ್ರಾನುರಾಗಃ ಕಾ ವಾ**
**ಭಾರ್ಯಾ ಜಾನತೋ ನಂದನಃ ಕಃ ।**
**ಸ್ತ್ರೀಸಂಪರ್ಕೋ ದುಃಖದಾಯ್ಯೇವ ನೂನಂ ದೃಷ್ಟಾಂತೋಽಸ್ಮಿನ್**
**ವಾಲಿಧರ್ಮಾತ್ಮಜಾದ್ಯಾಃ ॥೩೦॥**

**ತಾತ್ಪರ್ಯ :** ವೇಂಕಟನಾಥಾ! ಗೃಹಸ್ಥಾಶ್ರಮವು ಮೋಕ್ಷ ಮಾರ್ಗಕ್ಕೆ ಹೋಗುವುದಕ್ಕೆ ಉತ್ತಮ ಸಾಧನವಲ್ಲ. ಪ್ರತಿಬಂಧಕವೂ ಆಗಬಹುದು. ನಿನ್ನಂತಹವನಿಗೆ ಅದು ಸರ್ವರೀತಿಯಿಂದಲೂ ಶ್ರೇಯಸ್ಕರವಲ್ಲ. ಅಂತಹಾ ಗೃಹಸ್ಥಾಶ್ರಮದಲ್ಲಿ ನಿನಗೆ ಅದೆಷ್ಟರಮಟ್ಟಿನ ಪ್ರೀತಿಯಪ್ಪಾ! ಶಾಸ್ತ್ರವನ್ನು ಓದಿ ತಿಳಿದ ಪುರುಷನಿಗೆ ಹೆಂಡತಿ ಯಾವಳು? ಮಗನು ಯಾರು? ಒಬ್ಬ ಜೀವನಿಗೆ ಇನ್ನೊಂದು ಜೀವವು ಹೆಂಡತಿ, ಮತ್ತೊಂದು ಜೀವವು ಮಗ ಎಂಬ ಕ್ರಮವಿದೆಯೇ? ಅದನ್ನು ತಿಳಿಯಲು ಬರುತ್ತದೆಯೇ? ಜೀವರಿಗೆ ಈ ಸಂಸಾರದಲ್ಲಿರುವ ಯಾವ ಸಂಬಂಧವೂ ನಿಯತವಲ್ಲ. ಅಷ್ಟೇ ಅಲ್ಲಾ, ವೇಂಕಟನಾಥಾ ಕೇಳು. ನಿನ್ನ ಹೆಂಡತಿ

ಚಿಕ್ಕವಳು ಎಂದೆಯಲ್ಲ. ಜ್ಞಾನಿಗಳಿಗೆ ಸ್ತ್ರೀಯರ ಸಂಗವು ಸರ್ವಥಾ ಒಳ್ಳೆಯದಲ್ಲಾ. ಅದು ದುಃಖವನ್ನು ಕೊಡದಿರುವುದಿಲ್ಲ. ಇದು ಸರ್ವಥಾ ಸತ್ಯ. ಜ್ಞಾನಿಯಾದ ಇಂದ್ರಾಂಶನಾದ ವಾಲಿಯು ತನ್ನ ತಮ್ಮ ಸುಗ್ರೀವನ ಪತ್ನಿಯಾದ ರಮೆಯನ್ನು ಕಾಮಿಸಿ ಅವಳನ್ನು ಗಂಡನಿಂದ ಬೇರ್ಪಡಿಸಿ ತನ್ನ ಹತ್ತಿರ ಇಟ್ಟುಕೊಂಡನು. ಇದರಿಂದಾಗಿ ಬಹಳ ಕಷ್ಟವನ್ನು ಅನುಭವಿಸಿದನು. ಶ್ರೀರಾಮನು ಅವನು ತಪ್ಪು ಮಾಡಿದವನೆಂದು ನಿರ್ಧರಿಸಿ ಅವನನ್ನು ಸುಗ್ರೀವನಿಗಾಗಿ ಕೊಂದನು. ಧರ್ಮರಾಜನು ಜ್ಞಾನಿಯಾಗಿದ್ದರೂ ತನ್ನ ಹೆಂಡತಿಯಾದ ದ್ರೌಪದಿಯನ್ನೇ ಜೂಜಿನ ಪಣವಾಗಿ ಒಡ್ಡಿ ಅವಳನ್ನು ಸೋತನು. ಶತ್ರುಗಳಿಂದ ಅವಳಿಗೆ ಅಪಮಾನವಾದುದನ್ನು ನೋಡಿ ದುಃಖಿಸಿದನು. ಕೊನೆಗೆ ಆ ನಿಮಿತ್ತದಿಂದಲೇ ರಾಜ್ಯವನ್ನು ಕಳೆದುಕೊಂಡು ವನವಾಸ ಅಜ್ಞಾತವಾಸಾದಿ ಅನೇಕ ದುಃಖಗಳನ್ನು ಅನುಭವಿಸಿದನು. ಇದನ್ನೆಲ್ಲಾ ವಿಚಾರ ಮಾಡಿದಾಗ ನಿನಗೆ ಗೃಹಸ್ಥ ಧರ್ಮದಲ್ಲಿ ಆಸೆ, ಆಸಕ್ತಿ ಉಂಟಾಗುತ್ತಿದೆಯೇ? ಹೇಳು ವೇಂಕಟನಾಥ! ಎಂದು ಸುಧೀಂದ್ರತೀರ್ಥರು ಉಪದೇಶಿಸಿದರು.

ಹೆಂಡತಿ ಮಕ್ಕಳು ಮುಂತಾದವರನ್ನು ಕಾಪಾಡಲು ಮಾಡಬೇಕಾಗುವ, ಅಕಾರ್ಯ, ಅಥವಾ ದುಃಖಕರವಾದ ಕಾರ್ಯಗಳ ಬಗ್ಗೆ ಶ್ರೀಸುಧೀಂದ್ರತೀರ್ಥರು ವಿವರಿಸುತ್ತಾರೆ.

**ಅವತಾರಿಕೆ :** ಗೃಹಸ್ಥನಾದವನು ಹಣ ಸಂಪಾದನೆ ಮಾಡಲು ಅನೇಕ ಅವಗುಣಗಳಿಂದ ಕೂಡಿದ ಧನಿಕರ ಬಳಿಗೆ ಹೋಗಬೇಕಾಗುತ್ತದೆ. ಅವರ ದೋಷಗಳನ್ನೆಲ್ಲಾ ಗುಣವೆಂದೇ ಹೊಗಳಬೇಕಾಗುತ್ತದೆ ಎಂಬುದಾಗಿ ಗೃಹಸ್ಥಾಶ್ರಮದ ಕಷ್ಟಗಳನ್ನು ಸುಧೀಂದ್ರರು ಹೇಳಿದ್ದನ್ನು ಮುಂದಿನ ನಾಲ್ಕು ಶ್ಲೋಕಗಳಿಂದ ಕವಿಗಳು ವರ್ಣಿಸುತ್ತಾರೆ.

**ಹೆಂಡತಿ ಮಕ್ಕಳು ಮುಂತಾದವರನ್ನು ಕಾಪಾಡಲು ಮಾಡಬೇಕಾಗುವ ಅಕಾರ್ಯ, ಅಥವಾ ದುಃಖಕರವಾದ ಕಾರ್ಯಗಳ ಬಗ್ಗೆ ಶ್ರೀ ಸುಧೀಂದ್ರತೀರ್ಥರು ವಿವರಿಸುತ್ತಾರೆ.**

**ಅಕ್ಷಾಣಾ ಕಾಣಂ ಕರ್ಣಪರ್ಯಂತನೇತ್ರಂ**
**ಲೋಭಾಗಾರಂ ಸಂತತೌದಾರ್ಯಭಾಜಮ್।**
**ಸಂಧ್ಯೋಪಾಸಾವರ್ಜಿತಂ ಯಾಯಜೂಕಂ**
**ದುಷ್ಟಾಚಾರಂ ಸಾಧುಕರ್ಮಾಽಚರಂತಮ್ ॥೩೧॥**

**ಕ್ರೂರಂ ಶಾಂತಂ ರಾಗಶೀಲಂ ವಿರಕ್ತಂ ಮತ್ತಂ**
**ಮುಗ್ಧಂ ವೃದ್ಧಿಮಂತಂ ಯುವಾನಮ್ ।**
**ದುಷ್ಟಂ ಸಾಧುಂ ದುರ್ವಿನೀತಂ ವಿನೀತಂ**
**ಲಕ್ಷ್ಮಾತೀತಂ ಲಕ್ಷಣೌಘೈರುಪೇತಮ್ ॥೩೨॥**

ಓಂಕಾರಜ್ಞಂ ಸಾಂಗಸರ್ವಾಗಮಜ್ಞಂ ವೈರಾಗಾರಂ ವರ್ಧಿತಸ್ನಿಗ್ಧಭಾವಮ್ ।
ಅಜ್ಞೋತ್ತಂಸಂ ಜ್ಞಾನಿನಾಮಗ್ರಗಣ್ಯಂ ವ್ಯಕ್ತಾಕೂತಂ ಲಬ್ಧಗಂಭೀರಭಾವಮ್ ॥೩೩॥

ಗತ್ವಾಽಗಮ್ಯಂ ಪೂಜಯಿತ್ವಾಽಪ್ಯಪೂಜ್ಯಂ ಸೋಢ್ವಾಽಮಾನಂ ತೇನ ಚಾದಾಯ ಕಿಂಚಿತ್।
ನಾಲಂಬುದ್ಧಿರ್ದೀಯಮಾನೇಽಪಿ ತಾಸಾಂ ಜಾತಾತ್ಮಾನಂ ಕ್ಲೇಶಯಿತ್ವಾಪಿ ನೂನಮ್ ॥೩೪॥

**ತಾತ್ಪರ್ಯ** : ಎಲೈ ವೇಂಕಟಾರ್ಯನೇ! ಗೃಹಸ್ಥಾಶ್ರಮದಲ್ಲಿರುವವನು ಕುಟುಂಬಭರಣಕ್ಕಾಗಿ ಮಾಡಬೇಕಾಗುವ ಹೀನ ಕಾರ್ಯಗಳನ್ನು ನಾನು ನಿನಗೆ ವಿಸ್ತಾರವಾಗಿ ಹೇಳುತ್ತೇನೆ ಕೇಳು ಎಂದು ಶ್ರೀಸುಧೀಂದ್ರತೀರ್ಥರು ಶ್ರೀವೇಂಕಟನಾಥರಿಗೆ ಉಪದೇಶಿಸುತ್ತಾರೆ.

ವೇಂಕಟಾರ್ಯ! ದರಿದ್ರನಾದ ಗೃಹಸ್ಥನು ಎಷ್ಟೇ ಜ್ಞಾನಿಯಾಗಿದ್ದರೂ ತನ್ನ ಸಂಸಾರ ಪೋಷಣೆಗಾಗಿ ತನ್ನ ಮನಸ್ಸಿಗೆ ಹಿಡಿಸದ ಕಾರ್ಯವನ್ನು ಮಾಡಲೇಬೇಕಾಗುತ್ತದೆ. ಅನೇಕ ದೋಷಗಳನ್ನು ಗುಣಗಳೆಂದೇ ಸ್ತೋತ್ರ ಮಾಡಬೇಕಾಗುತ್ತದೆ. ಒಬ್ಬ ಒಕ್ಕಣ್ಣನಾದ ಧನಿಕನ ಬಳಿಗೆ ಹೋದಾಗ "ಅಯ್ಯಾ, ಮಹಾನುಭಾವ, ನೀನು ಕಿವಿಗಳವರೆಗೂ ಉದ್ದವಾದ ಸುಂದರವಾದ ಕಣ್ಣುಗಳನ್ನು ಉಳ್ಳವನು ಎಂದೇ ಹೊಗಳಬೇಕಾಗುತ್ತದೆ. ಅವನ ಕಣ್ಣಿನ ನ್ಯೂನತೆಯನ್ನು ಎತ್ತಿ ಹೇಳುವಂತಿಲ್ಲ. ಹೇಗೆ ಇದ್ದರೂ ನಿಮ್ಮ ಕಣ್ಣುಗಳು ಅತ್ಯಂತ ಸುಂದರವಾಗಿವೆ ಎಂದು ಹೊಗಳಬೇಕಾಗುತ್ತದೆ. ಒಬ್ಬ ಕಡು ಲೋಭಿಯ ಬಳಿಗೆ ಹೋದಾಗ ಅವನಿಂದ ಹೇಗಾದರೂ ಹಣವನ್ನು ಪಡೆಯಬೇಕೆಂಬ ಆಸೆಯಿಂದ ಮಹನೀಯರೆ! ನೀವು ಕರ್ಣನಂತೆ ನಿರಂತರವಾಗಿ ಉದಾರತೆಯಿಂದ ದಾನ ಮಾಡುವ ದೊರೆ – ಎಂಬುದಾಗಿ ಹೊಗಳಬೇಕಾಗುತ್ತದೆ. ದ್ರವ್ಯದ ಆಶೆಯಿಂದ ಬಡವರು ಲೋಭಿಯನ್ನು ಉದಾರಿ ಎಂದು ಹೊಗಳುತ್ತಾರೆ. ಹೊಗಳಬೇಕಾಗುತ್ತದೆ. ಮತ್ತೊಬ್ಬ ಸಂಧ್ಯಾವಂದನೆಯನ್ನೇ ಮಾಡದ ದುರಾಚಾರಿ ಧನಿಕನಿರುತ್ತಾನೆ. ಅವನ ಬಳಿಗೆ ಹೋಗಿ ಅವನನ್ನು ಸಂತೊಷಪಡಿಸುವುದಕ್ಕಾಗಿ ಮಹನೀಯರೇ ನೀವು ಅಶ್ವಮೇಧ, ರಾಜಸೂಯ ಯಾಗ ಮಾಡಿದ ಮಹಾನುಭಾವರಿಗೆ ಏನೂ ಕಡಿಮೆಯಿಲ್ಲ. ನಿರಂತರ ಯಜ್ಞಯಾಗಾದಿಗಳನ್ನು ಮಾಡಿ ದೇವತೆಗಳನ್ನು, ಭೂದೇವತೆಗಳನ್ನು, ಬಡ ಬಗ್ಗರನ್ನು, ಸಂತೋಷಪಡಿಸಿದ ಭೂಪರು ನೀವು ಎಂದು ಹೊಗಳಬೇಕಾಗುತ್ತದೆ. ಮತ್ತೊಬ್ಬ ಧನಿಕನು ಮಹಾದುರಾಚಾರಿ ಆಗಿರುತ್ತಾನೆ. ಯಾವ ಶೌಚಾಚಾರವನ್ನೂ ಅರಿಯನು, ಮಾಡುವವನೂ ಅಲ್ಲ, ಮಾಡುವ ಇಚ್ಛೆಯುಳ್ಳವನೂ ಅಲ್ಲ. ಅಂತಹವನ ಬಳಿಗೆ ಹೋಗಿ ಅಯ್ಯಾ ನೀವು ಮಹಾಸದಾಚಾರಿಗಳು. ನಿಮ್ಮಂತೆ ಆಚಾರವೆಸಗತಕ್ಕವರು ಇಲ್ಲಿ ಮತ್ಯಾರಿದ್ದಾರೆ? ಎಂದು ಹೊಗಳಬೇಕಾಗುತ್ತದೆ.

ಮಹಾ ಕೋಪಿಷ್ಠನಾದ ಕ್ರೂರ ಮುಖಭಾವವನ್ನು ಹೊಂದಿರುವ ದುರುಳರನ್ನು ಅಯ್ಯಾ, ನೀನು ಮಹಾ ಶಾಂತ ಸ್ವಭಾವವನ್ನು ಉಳ್ಳವನಾಗಿದ್ದೀಯೆ. ನಿನಗಿರುವ ತಾಳ್ಮೆ ಇಡೀ ಜಗತ್ತಿನಲ್ಲೇ ಯಾರಿಗೂ ಇಲ್ಲ ಎಂಬುದಾಗಿ ಸ್ತುತಿಸಬೇಕಾಗುತ್ತದೆ. ಸದಾ ದುರ್ವಿಷಯಗಳಲ್ಲಿ ಆಸಕ್ತನಾದ ಲಂಪಟನೊಬ್ಬನನ್ನು ಎಲೈ ಮಹಾಶಯನೆ ನೀನು ಮಹಾ ವಿರಕ್ತ! ನಿನಗೆ ಯಾವುದೇ ಆಸೆಗಳು

ಇಲ್ಲ ಎಂದು ಹೊಗಳಬೇಕಾಗುತ್ತದೆ. ಹಾಗೆಯೇ ಮದೋನ್ಮತ್ತನಾಗಿ, ಕಾರ್ಯಾ ಕಾರ್ಯಗಳನ್ನು, ಪಾತ್ರಾಪಾತ್ರ ವಿವೇಚನೆ ಇಲ್ಲದವನನ್ನು ಬಹಳ ಕೊಬ್ಬಿದ ಮನುಷ್ಯನನ್ನು ಆಹಾ ತಾವೆಷ್ಟು ಮುಗ್ಧರು! ಮಗುವಿನಂತಹಾ ಮನಸ್ಸು ನಿಮ್ಮದು, ಸುಂದರವಾದ ನಿಷ್ಕಲ್ಮಶವಾದ ಮನಸ್ಸು ಹೊಂದಿರುವಿರಿ. ನಿರ್ದೋಷವಾದ ಮನಸ್ಸನ್ನು ಹೊಂದಿರುವ ನಿಮ್ಮನ್ನು ಎಷ್ಟು ಹೊಗಳಿದರೂ ಸಾಲದು ಎನ್ನಬೇಕಾಗುತ್ತದೆ. ಇನ್ನೊಬ್ಬ ವ್ಯಕ್ತಿ ತನ್ನ ವೃದ್ಧಾಪ್ಯದಲ್ಲಿ ಇರುತ್ತಾನೆ. ಅವನನ್ನು ಹೊಗಳಿದರೆ ಏನಾದರೂ ಸಿಗಬಹುದೆಂದು ಆಲೋಚಿಸಿ ಸ್ವಾಮೀ! ಇಷ್ಟು ವಯಸ್ಸಾಗಿದ್ದರೂ ನೀವು ಉತ್ಸಾಹದಲ್ಲಿ ತರುಣರನ್ನು ನಾಚಿಸುವಂತೆ ಇದ್ದೀರಿ ನಿಮ್ಮಲ್ಲಿ ಮುಪ್ಪಿನ ಯಾವ ಲಕ್ಷಣವೂ ಕಾಣುತ್ತಿಲ್ಲ. ತಾವು ಇಪ್ಪತ್ತೈದು ವಯಸ್ಸಿನ ಯುವಕರಂತೆಯೇ ಇರುವಿರಿ ಎಂದು ಹೊಗಳಬೇಕು. ಮಹಾ ದೋಷಿಯಾದ ನೀಚ ಮನುಷ್ಯನನ್ನು ನೀವು ಬಹಳ ಸಾಧುಗಳು! ನಿಮ್ಮಲ್ಲಿ ಯಾವ ದೋಷವು ಕಾಣುವುದಿಲ್ಲ ಎಂದು ಸ್ತುತಿಸಬೇಕು. ಉದ್ಧಟನಾಗಿ ಗುರು ಹಿರಿಯರನ್ನು ಗೌರವಿಸದ ಮದೋನ್ಮತ್ತನನ್ನು ಕುರಿತು ಸ್ವಾಮಿ, ನಿಮ್ಮ ವಿನಯ ಯಾರಿಗಿದೆ! ನಿಮಗಿರುವ ಸಂಪತ್ತಿಗೆ ಈ ನಿಮ್ಮ ವಿನಯ ಅತ್ಯಂತ ಭೂಷಣವಾಗಿದೆ ಎಂಬುದಾಗಿ ಅವನ ಮುಂದೆ ಹಲ್ಲು ಕಿಸಿಯುತ್ತಾ ಕೈ ಮುಗಿದು ಸ್ತೋತ್ರ ಮಾಡಬೇಕಾಗುತ್ತದೆ. ಯಾವ ಒಳ್ಳೆಯ ಲಕ್ಷಣವನ್ನೂ ಹೊಂದಿರದ ಕೆಟ್ಟ ಮುಖವನ್ನು ಹೊಂದಿರುವವನನ್ನು ನೋಡಿ ಅವನನ್ನು ಹೊಗಳಿದರೆ ಏನಾದರೂ ಸಿಗಬಹುದೆಂಬ ಆಸೆಯಿಂದ ಯಜಮಾನರೇ! ನಿಮ್ಮಲ್ಲಿ ಒಳ್ಳೆಯ ಸಾಮುದ್ರಿಕಾ ಲಕ್ಷಣಗಳು ಕಾಣಿಸುತ್ತದೆ. ನಿಮ್ಮ ಹಸ್ತರೇಖೆಗಳು ಮಹಾ ಭಾಗ್ಯಸೂಚಕವಾಗಿದೆ ಎಂದು ಮುಂತಾಗಿ ತಗ್ಗಿ ಬಗ್ಗಿ ಬಾಯಿ ತೆರೆದು ಸ್ತೋತ್ರ ಮಾಡಬೇಕಾಗುತ್ತದೆ. ಮತ್ತೊಬ್ಬ ಮಹಾಶುದ್ಧ ಶುಂಠನಾದ, ವಿದ್ಯೆ ನೈವೇದ್ಯವಾದ ಅಕ್ಷರ ಶತ್ರುವಾದ ಧನಿಕನಿರುತ್ತಾನೆ. ಅವನಿಗೆ ಓಂಕಾರ ಎಂದರೆ ಏನೆಂದು ತಿಳಿಯದು. ಸರಿಯಾಗಿ ಅದನ್ನು ಉಚ್ಚರಿಸಲೂ ಬರದು. ಅಂತಹಾ ಅಜ್ಞಾನಿಯ ಬಳಿ ಹೋಗಿ ಮಹಾಪ್ರಭೂ! ತಮ್ಮ ಮಾತುಕತೆಗಳನ್ನು ನೋಡಿದರೆ ನೀವು ಷಡಂಗ ಸಹಿತವಾದ ವೇದವನ್ನು ಓದಿದವರಿಗಿಂತ ಯಾವ ರೀತಿಯಲ್ಲಿಯೂ ಏನೂ ಕಡಿಮೆಯಿಲ್ಲ ಎಂದು ನಾನು ಭಾವಿಸುತ್ತೇನೆ. ನೀವು ನಿಜವಾಗಿಯೂ ಎಂದೋ ಅದೆಲ್ಲವನ್ನೂ ಓದಿದ್ದೀರಿ, ತಿಳಿದಿದ್ದೀರಿ, ಎಂಬುದಾಗಿ ನಾನು ಭಾವಿಸುತ್ತೇನೆ ಎಂದು ಹೊಗಳಬೇಕಾಗುತ್ತದೆ. ಎಲ್ಲರನ್ನೂ ದ್ವೇಷಿಸುತ್ತಾ, ಎಲ್ಲರಲ್ಲೂ ದ್ವೇಷದ ಬೀಜವನ್ನು ಬಿತ್ತಿ ಹಗೆತನವನ್ನು ಬೆಳೆಸುವ ಧನ ಮದಾಂಧನ ಬಳಿಗೆ ಹೋಗಿ ಪರಮ ಸಹೃದಯರೇ! ಸ್ನೇಹ ಜೀವಿಗಳೇ!! ಯಾರಲ್ಲಿ ಎಷ್ಟೇ ಅವಗುಣವಿರಲಿ, ಅವರು ನಿಮ್ಮನ್ನು ಎಷ್ಟೇ ದ್ವೇಷಿಸಲಿ, ಅದನ್ನೊಂದನ್ನೂ ಗಮನಿಸದೇ ಎಲ್ಲರಲ್ಲಿಯೂ ಸ್ನೇಹ ವಿಶ್ವಾಸ ಬೆಳೆಸುವ ಮಹಾ ವಿಶಾಲ ಹೃದಯವನ್ನು ಹೊಂದಿರುವಿರಿ. ನಿಮ್ಮಂತಹವರು ಈ ಭೂಮಂಡಲದಲ್ಲೇ ವಿರಳ ಅಥವಾ ಇಲ್ಲವೆಂದೇ ಹೇಳಬಹುದು ಎಂಬುದಾಗಿ ರಾಗವಾಗಿ ಸ್ತುತಿಸಬೇಕಾಗುತ್ತದೆ. ಮತ್ತೊಬ್ಬ ವಜ್ರಮೂರ್ಖನಾದ ಧನಿಕ ಇರುತ್ತಾನೆ. ಅವನ ಬಳಿಗೆ ಹೋಗಿ ನೀವು ಜ್ಞಾನಿಶ್ರೇಷ್ಠರು ಎಂಬುದಾಗಿ ಹಣದ ಆಸೆಯಿಂದ ಮನಸಾಕ್ಷಿಗೆ ವಿರುದ್ಧವಾಗಿ ಸ್ತುತಿಸಬೇಕಾಗುತ್ತದೆ. ಗೂಢವಾದ ಅಭಿಪ್ರಾಯವನ್ನು ಮನಸ್ಸಿನಲ್ಲಿ ಇಟ್ಟುಕೊಂಡು ಗಂಭೀರವಾಗಿ ಮಿತವಾಗಿ ಮಾತನಾಡಲು

ಬರದ ಕ್ಷುಲ್ಲಕ ಮನುಷ್ಯನು ಇರುತ್ತಾನೆ. ಎಲ್ಲವನ್ನೂ ಸ್ಪಷ್ಟವಾಗಿ ಲಘುವಾಗಿ ಮಾತನಾಡುತ್ತಾನೆ. ಅವನ ಹತ್ತಿರ ಅಯ್ಯಾ! ನಿಮ್ಮ ಮಾತಿನ ಗಾಂಭೀರ್ಯವೆಷ್ಟು? ಗತ್ತು ಎಷ್ಟು? ನಿಮ್ಮ ಮಾತಿನ ಅಭಿಪ್ರಾಯ ಪೂರ್ತಿ ಗೊತ್ತಾಗಬೇಕಾದರೆ ಹತ್ತು ಬಾರಿ ನೀವಾಡಿದ ಮಾತನ್ನು ಮೆಲಕು ಹಾಕಿ ಬಾಯಲ್ಲಿ ಅಂದುಕೊಂಡು ನಿಮ್ಮ ಮಾತಿನ ಒಳ ರಹಸ್ಯವನ್ನು ಆಲೋಚಿಸಬೇಕು. ಅಷ್ಟು ಗಂಭೀರವಾದ ಮಾತು ನಿಮ್ಮದು ಎಂದು ಹೊಗಳಬೇಕಾಗುತ್ತದೆ.

ಯಾರ ಬಳಿಗೆ ಜ್ಞಾನಿಗಳು ಹೋಗಬಾರದೋ ಅಂತಹವರ ಬಳಿಗೂ ಹೋಗಬೇಕಾಗುತ್ತದೆ. ಯಾರನ್ನು ಸರ್ವಥಾ ಪೂಜಿಸಲೇಬಾರದೋ ಅಂತಹಾ ಹೀನರಾದವರನ್ನು ಪೂಜಿಸಬೇಕಾಗುತ್ತದೆ. ಅಧಿಕಾರ ಮದದಿಂದ ಈ ಹೀನ ಮಾನವರು ಮಾಡುವ ಅವಮಾನಗಳನ್ನು ಸಹಿಸಿಕೊಳ್ಳಬೇಕಾಗುತ್ತದೆ. ಇಷ್ಟೆಲ್ಲಾ ಮಾಡಿದ ಮೇಲೂ ಕುಲೀನನಾದ ಸುಸಂಸ್ಕೃತನಾದ ಸಜ್ಜನನ ಮನಸ್ಸು ಮೃದುವಾದ ಹೂವಿನಂತೆ ಅದೆಷ್ಟೋ ಕಂದಿ ಕುಂದಿ ಕಮರಿಹೋಗುತ್ತದೆ! ಆ ಸಜ್ಜನನು ಆತ್ಮವನ್ನು ಕಳೆದುಕೊಂಡ ಜೀವಚ್ಛವದಂತೆ ಆಗುತ್ತಾನೆ. ಹೀಗೆ ಸಂಸಾರ ಸಮುದ್ರದಲ್ಲಿ ಬಡ ಸಜ್ಜನನ ಪಾಡು ವರ್ಣನಾತೀತ. ಆದರೆ ಇಷ್ಟು ಮಾಡಿದ ಮೇಲೂ ಯಾರಾದರೂ ಹಿಂದೆ ಹೇಳಿದವರು ಏನಾದರೂ ಸ್ವಲ್ಪ ಹೆಚ್ಚು ಕೊಟ್ಟರೆ ಅದನ್ನು ತಂದು ದಾಸನಂತೆ ಮನೆಯಲ್ಲಿರುವ ಮಹಾ ಕಾಳಿಯಂತಿರುವ ಹೆಂಡತಿಗೆ ಒಪ್ಪಿಸುತ್ತಾನೆ. ಅವಳಾದರೋ ಇವನು ಅದನ್ನು ಸಂಪಾದಿಸಲು ಪಟ್ಟ ಪಾಡುಗಳನ್ನು ಯಾವುದನ್ನೂ ಗಣನೆಗೆ ತಾರದೇ ಓಹೋ, ನೀವು ತಂದಿರುವುದು ಇಷ್ಟೆಯೋ? ಇದು ಯಾವ ಮೂಲೆಗೆ? ಅವಳನ್ನು ನೋಡಿ ಅವಳು ಹೇಗಿದ್ದಾಳೆ! ಅವಳ ಯಜಮಾನರು ಹೇಗಿದ್ದಾರೆ! ಅವಳು ಎಷ್ಟು ಸುಖವಾಗಿದ್ದಾಳೆ! ಅವಳ ಗಂಡ ಹೇಗೆ ತರುತ್ತಾನೆ! ನೀವು ತರುವುದು ಸಾಸುವೆಯಷ್ಟು, ನಿಮಗೆ ಬೆಟ್ಟ ಹೊತ್ತಷ್ಟು ಆಯಾಸ ಎಂಬುದಾಗಿ ಮೂದಲಿಸುವ ಹೆಂಡತಿ ಒಬ್ಬಳಲ್ಲ, ಇಬ್ಬರಲ್ಲ, ಇಂತಹವರೆ ಲೋಕದಲ್ಲಿ ಬಹಳ. ವೇಂಕಟನಾಥ! ನಾನು ಹೇಳುವ ಮಾತು ಸುಳ್ಳಲ್ಲ. ಸಂಸಾರಭರಣಕ್ಕೆ ಹೊರಟ ಪುರುಷನು ತನ್ನ ಜೀವನದ ಕೊನೆಯವರೆಗೂ ಅದೇ ಕಾರ್ಯದಲ್ಲಿಯೇ ಮುಳುಗಿ ತೇಲುತ್ತಿರಬೇಕಾಗುತ್ತದೆ. ಆ ಪುರುಷನಿಗೆ ಈ ಕಾರ್ಯದಿಂದ ಎಂದಿಗೂ ಬಿಡುಗಡೆಯಿಲ್ಲ. ವಸ್ತುಸ್ಥಿತಿಯು ಹೀಗಿರುವಾಗ ನೀನು ಯಾವ ಲಾಭಕ್ಕಾಗಿ ಸಂಸಾರವೆಂಬ ಸುಳಿಗೆ ಸಿಲುಕಿ ಅದಕ್ಕೆ ಅಂಟಿಕೊಳ್ಳಬೇಕೆಂದು ಆಶಿಸುತ್ತೀಯೆ? ಹೇಳು? ವಿವೇಕಿಗಳಾದ ಸಜ್ಜನರು ಸಂಸಾರವೆಂಬ ಸಾಗರದಿಂದ ಆದಷ್ಟು ಬೇಗ ತಪ್ಪಿಸಿಕೊಳ್ಳಬೇಕು. ಎಂಬುದಾಗ ಶ್ರೀಸುಧೀಂದ್ರತೀರ್ಥರು ವೇಂಕಟನಾಥಾಚಾರ್ಯರಿಗೆ ಬಹು ಪರಿಯಾಗಿ ಉಪದೇಶ ಮಾಡಿದರು.

**ಅವತರಣಿಕೆ :** ಶ್ರೀಸುಧೀಂದ್ರತೀರ್ಥ ಶ್ರೀಪಾದಂಗಳವರು ತಮ್ಮ ಉಪದೇಶವನ್ನು ಮುಗಿಸಿದರೆಂದು ಈ ಶ್ಲೋಕದಲ್ಲಿ ಕವಿಗಳು ವರ್ಣಿಸುತ್ತಾರೆ.

**ವೇದವ್ಯಾಖ್ಯಾಸಂಪದೋ ನೈವ ಯುಕ್ತಾ ವ್ಯಾಸಂಗೇ ತೇ ಮಜ್ಜತೋ ಗೇಹಜಾತೇ ।**
**ತಸ್ಮಾದಾಶಾಂ ಮುಂಚ ತಸ್ಯಾಂ ತರುಣ್ಯಾಂ ಶೀಘ್ರಂ ಕುರ್ಯಾಃ**

**ಬಾಲಮಂಗೋಪನೀತಮ್ ॥೩೫॥**

**ತಾತ್ಪರ್ಯ :** ಅಯ್ಯಾ, ವೇಂಕಟನಾಥಾಚಾರ್ಯನೇ! ನೀನು ಸಂಸಾರಿಯಾಗಿ ಗೃಹಸ್ಥನಾದರೆ ಮನೆಯಲ್ಲಿ ಹತ್ತು ನೂರು ಕಾರ್ಯಗಳು ಆಗಾಗ್ಯೆ ಬಂದೊದಗುತ್ತವೆ. ನೀನು ಸಂಸಾರವೆಂಬ ಈ ಸಾಗರದ ಅಲೆಯಲ್ಲಿ ಮುಳುಗಿ ತೇಲುತ್ತಿರುತ್ತೀಯೆ. ಮನೆಯ ಕೆಲಸ ನಿರ್ವಹಣೆಗಾಗಿ ಅತ್ತ ಇತ್ತ ತಿರುಗುತ್ತಿರಬೇಕಾಗುತ್ತದೆ. ಈ ಕೆಲಸಗಳಲ್ಲಿ ನೀನು ಸಂಪೂರ್ಣವಾಗಿ ತನ್ಮಯನಾಗಿ ಹೋಗುತ್ತೀಯೆ. ಹೀಗಿರುವಾಗ ನೀನು ವೇದಾಂತ ಕಾಲಕ್ಷೇಪ ಮಾಡಲು ಅವಕಾಶವೇ ಸಿಗುವುದಿಲ್ಲ. ಹೇಳು? ಸಂಸಾರ ಸಮುದ್ರದಲ್ಲಿ ನೀನು ಮುಳುಗಿದರೆ ಉಸಿರಾಡಲೂ ಅವಕಾಶ ಸಿಗುವುದಿಲ್ಲ. ವೇದಾಂತಶಾಸ್ತ್ರಪಾಠ ಪ್ರವಚನಕ್ಕೆ ಸರ್ವಥಾ ಅವಕಾಶ ಸಿಗುವುದಿಲ್ಲ. ಆದುದರಿಂದ ವೇದಾಂತವಿದ್ಯಾಸಾಮ್ರಾಜ್ಯ ಪರಿಪಾಲನೆಗೆ, ವೇದಾಂತಕಾಲಕ್ಷೇಪಕ್ಕೆ ಪ್ರತಿಬಂಧಕಳಾದ ನಿನ್ನ ಎಳೆಯ ವಯಸ್ಸಿನ ಹೆಂಡತಿಯ ಮೇಲೆ ಹೊಂದಿರುವ ಮೋಹವನ್ನು, ಪ್ರೀತಿಯನ್ನು ಬಿಡು. ವೇದಾಂತಸಾಮ್ರಾಜ್ಯ ಲಕ್ಷ್ಮಿಯು ನಿನ್ನ ಆ ವೇದಾಂತ ವಿದ್ಯಾ ಪ್ರತಿಬಂಧಕಳಾದ ಗೃಹಲಕ್ಷ್ಮಿಗಿಂತಲೂ ಪ್ರೀತ್ಯಾಸ್ಪದಳಲ್ಲವೇ? ಈ ಹಿಂದೆ ನೀನು ಸಣ್ಣ ವಯಸ್ಸಿನವನಾದ ನನ್ನ ಮಗನಿಗೆ ಉಪನಯನವನ್ನು ಮಾಡಿಲ್ಲ ಎಂದು ಹೇಳಿದ್ದೀ. ಆದಷ್ಟು ಜಾಗ್ರತೆ ನಿನ್ನ ಕುಮಾರನಾದ ಚಿರಂಜೀವಿ ಲಕ್ಷ್ಮೀನಾರಾಯಣನಿಗೆ ಉಪನಯನವನ್ನು ಮಾಡು. ನಂತರ ನಿನಗಾಗಿ ಸಿದ್ಧವಾಗಿರುವ ಸನ್ನ್ಯಾಸವನ್ನು ಸ್ವೀಕರಿಸು ಎಂಬುದಾಗಿ ಶ್ರೀಸುಧೀಂದ್ರತೀರ್ಥರು ವೇಂಕಟನಾಥಾಚಾರ್ಯರಿಗೆ ಉಪದೇಶ ಮಾಡಿ ಆಶೀರ್ವದಿಸಿ ತಮ್ಮ ಉಪದೇಶವನ್ನು ಮುಕ್ತಾಯಗೊಳಿಸಿದರು.

ಗುರೂಪದೇಶದಿಂದ ಶ್ರೀವೇಂಕಟನಾಥಾಚಾರ್ಯರ ಮನಸ್ಸಿಗೆ ಕ್ಷೋಭೆ ; ಗುರುಗಳು ಮಾಡಿದ ಆಚಾರ್ಯರ ರಕ್ಷಣೆ ವ್ಯವಸ್ಥೆ

**ಅವತಾರಿಕೆ :** ಶ್ರೀಸುಧೀಂದ್ರತೀರ್ಥರು ವೇಂಕಟನಾಥಾಚಾರ್ಯರಿಗೆ ಉಪದೇಶ ಮಾಡಿದ ಮೇಲೆ ಮುಂದೇನಾಯಿತು ಎಂಬುದನ್ನು ಕವಿಗಳು ಈಗ ವರ್ಣಿಸುತ್ತಾರೆ.

**ಶ್ರುತ್ವಾಽಶೃಣ್ವನ್ನೇವಮುಕ್ತಂ ಗುರೂಣಾಂ ಗತ್ವಾಽಯಾಸೀದೇಷ ಚಿಂತಾಂ ದುರಂತಾಮ್ ।**
**ನಿರ್ಯಾಯಾದಿತ್ಯೇಷ ನಿಶ್ಚಿತ್ಯ ತಾವತ್ ಮರ್ತ್ಯೈರಾಪ್ತೈ ರಕ್ಷತಿ ಸ್ಮೈನಮೇಷಃ ॥೩೬॥**

**ತಾತ್ಪರ್ಯ :** ಶ್ರೀವೇಂಕಟನಾಥಾಚಾರ್ಯರು ತಮ್ಮ ಗುರುಗಳು ಹೇಳಿದ ಮಾತುಗಳನ್ನೆಲ್ಲಾ ಕೇಳಿದರು. ಆದರೂ ಕೇಳದವರಂತೆಯೇ ತೋರ್ಪಡಿಸುತ್ತಾ ಮನೆಗೆ ತೆರಳಿದರು. ಮನೆಗೆ ಹೋದ ಮೇಲೆ ಶ್ರೀವೇಂಕಟನಾಥರ ಮನಸ್ಸಿನಲ್ಲಿ ಅಪಾರವಾದ ಚಿಂತೆ ಹಾಗು ಆಲೋಚನೆಗಳು ಸುಳಿಯಹತ್ತಿದವು. ಇತ್ತ ಶ್ರೀಸುಧೀಂದ್ರತೀರ್ಥರು ಅಷ್ಟರಲ್ಲಿಯೇ ವೇಂಕಟನಾಥರು ತಮಗೆ ತಿಳಿಸದೆಯೇ ಊರನ್ನು ಬಿಟ್ಟು ಹೋಗಬಹುದು ಎಂಬುದಾಗಿ ಆಲೋಚಿಸಿ ನಂಬಿಕೆಗೆ ಅರ್ಹರಾದ

ಜನರುಗಳನ್ನು ಇಟ್ಟು ಶ್ರೀವೇಂಕಟನಾಥರ ರಕ್ಷಣೆಗೆ ಏರ್ಪಾಡು ಮಾಡಿದರು. ಅವರ ಎಲ್ಲ ಓಡಾಟಗಳನ್ನೂ ಪರೀಕ್ಷಿಸುತ್ತಿದ್ದರು.

**ಅವತಾರಿಕೆ :** ಈಗ ಕವಿಗಳು ಶ್ರೀವೇಂಕಟನಾಥರ ಚಿಂತೆಯ ಪ್ರಕಾರವನ್ನು ತಿಳಿಸುತ್ತಾರೆ.

**ಸ್ಥಾಸ್ಯಾಮಶ್ಚೇಲ್ಲಭ್ಯತೇ ಸಂಯಮಿತ್ವಂ ಗಚ್ಛಾಮಶ್ಚೇತ್ತೇऽಧುನಾ ಮಾಂ ಶಪೇರನ್ ।**
**ಸ್ಥಾತುಂ ಶಕ್ಯಂ ನೈವ ಗಂತುಂ ಚ ಶಕ್ಯಂ ಕುರ್ಮಃ**
**ಕಿಂ ವೇತ್ಯಾತ್ಮನಾಧ್ಯಾಯಧಿತ್ಥಮ್ ॥೩೭॥**

**ತಾತ್ಪರ್ಯ :** ನಾವು ಇಲ್ಲಿಯೇ ಉಳಿದರೆ ಶ್ರೀಸುಧೀಂದ್ರತೀರ್ಥ ಗುರುಗಳು ನಮಗೆ ಸನ್ನ್ಯಾಸವನ್ನು ನೀಡಿಯೇ ನೀಡುತ್ತಾರೆ. ನಾವು ಈ ದೇಶವನ್ನು ಬಿಟ್ಟು ದೇಶಾಂತರಕ್ಕೆ ಹೊರಟು ಹೋದರೆ ಆಗ ಶ್ರೀಸುಧೀಂದ್ರತೀರ್ಥ ಗುರುಗಳು ನಾನು ಹೊರಟು ಹೋದೆನೆಂದು ತಿಳಿದು ಆ ಕ್ಷಣದಲ್ಲಿಯೇ ನನ್ನನ್ನು ಶಪಿಸಿಯಾರು! ಆದುದರಿಂದ ಇಲ್ಲಿ ಇರಲೂ ಸಾಧ್ಯವಿಲ್ಲ! ಹೊರಟು ಹೋಗಲೂ ಸಾಧ್ಯವಿಲ್ಲ!! ಏನು ಮಾಡಲಿ? ಎಂಬುದಾಗಿ ಶ್ರೀವೇಂಕಟನಾಥರು ತಮ್ಮ ಮನಸ್ಸಿನಲ್ಲಿಯೇ ಚಿಂತಿಸಹತ್ತಿದರು.

**ಅವತಾರಿಕೆ :** ಶ್ರೀವೇಂಕಟನಾಥಾಚಾರ್ಯರಿಗೆ ಶ್ರೀಸುಧೀಂದ್ರತೀರ್ಥರು ಸನ್ನ್ಯಾಸವನ್ನು ನೀಡಲಿದ್ದಾರೆ. ನನ್ನ ಪತಿಯು ಸನ್ನ್ಯಾಸವನ್ನು ಸ್ವೀಕರಿಸಲಿದ್ದಾರೆ ಎಂಬ ಜನರುಗಳಿಂದ ತಿಳಿದ ವಾರ್ತೆಯಿಂದ ಶ್ರೀವೇಂಕಟನಾಥರ ಪತ್ನಿಯಾದ ಸರಸ್ವತೀದೇವಿಯವರ ಮನಸ್ಸಿನಲ್ಲಿ ಉಂಟಾದ ಕ್ಷೋಭೆಯನ್ನು, ಅವರ ಶೋಕ ಪ್ರಕಾರವನ್ನು ಕವಿಗಳು ಈಗ ವರ್ಣಿಸುತ್ತಾರೆ.

**ಕರ್ಣಾಕರ್ಣಿ ಪ್ರಾಪ್ಯ ಹೃತ್ಕರ್ಣಶಲ್ಯಂ ಕಾಂತೋದಾಂತಂ ಸಾ ಸರಸ್ವತ್ಯುದಗ್ರೈಃ ।**
**ಅಶ್ರುವ್ಯೂಹೈಃ ಪ್ರೋಕ್ಷತೀವಾತ್ಮಹವ್ಯಂ ಪೂತಂ ದಾತುಂ ತದ್ವಿಯೋಗಾನಲಾಯ ॥೩೮॥**

**ತಾತ್ಪರ್ಯ :** ಶ್ರೀವೇಂಕಟನಾಥಾಚಾರ್ಯರಿಗೆ ಶ್ರೀಸುಧೀಂದ್ರತೀರ್ಥ ಶ್ರೀಪಾದಂಗಳವರು ಸನ್ನ್ಯಾಸ ನೀಡುವರಂತೆ ಎಂಬ ಸಮಾಚಾರವು ಕಿವಿಯಿಂದ ಕಿವಿಗೆ ಹಬ್ಬುತ್ತ ಸರಸ್ವತಮ್ಮನವರ ಕಿವಿಗೂ ಬಿತ್ತು. ಆಗ ಅವರ ಹೃದಯ ಹಾಗೂ ಕಿವಿಗಳಿಗೆ ಕಬ್ಬಿಣದ ಸಲಾಕೆಯಿಂದ ತಿವಿದಂತೆ ಆಯಿತು. ಆಗ ಸರಸ್ವತಮ್ಮನವರು ಬಹಳವಾದ ಕಣ್ಣೀರ ಧಾರೆಗಳಿಂದ ತಮ್ಮ ದೇಹವನ್ನು ತೋಯಿಸಿದರು. ಶ್ರೀವೇಂಕಟನಾಥರ ವಿಯೋಗವೆಂಬ ಬೆಂಕಿಯಲ್ಲಿ ತನ್ನನ್ನೇ ಹೋಮಿಸಲು ನಿರ್ಧರಿಸಿದ ಸರಸ್ವತಮ್ಮನವರು ಹೋಮದ್ರವ್ಯವನ್ನು ಹೋಮಕ್ಕಿಂತ ಮೊದಲೇ ಪ್ರೋಕ್ಷಿಸುವಂತೆ ತಮ್ಮ ದೇಹವನ್ನು ಹೋಮಾಗ್ನಿಗೆ ಅರ್ಪಿಸುವ ಮೊದಲು ಅದನ್ನು ಕಣ್ಣೀರಿನಿಂದ ಪ್ರೋಕ್ಷಿಸುತ್ತಾರೋ ಎಂಬಂತೆ ಇತ್ತು. (ಉತ್ಪ್ರೇಕ್ಷಾಲಂಕಾರ) (ಸರಸ್ವತಮ್ಮನವರು ಬಹುವಾಗಿ ದುಃಖಿಸಿದರು ಎಂಬುದಾಗಿ ತಾತ್ಪರ್ಯ).

**ಅವತರಣಿಕೆ :** ಈಗ ಕವಿಗಳು ಅಂದು ರಾತ್ರಿ ಶ್ರೀವೇಂಕಟನಾಥಾಚಾರ್ಯರಿಗೆ ಸ್ವಪ್ನದಲ್ಲಿ ಶ್ರೀವಿದ್ಯಾದೇವಿಯ ದರ್ಶನವಾಯಿತು ಎಂದು ವರ್ಣಿಸುತ್ತಾರೆ.

**ತಸ್ಯಾಂ ರಾತ್ರ್ಯಾಮಂತ್ಯಯಾಮಾರ್ಧಭಾಗೇ ಕಂಚಿದ್ದೇವೀಂ ಕಾಂಚಿಕಾಲಕ್ಷ್ಯನೀವೀಮ್।**
**ಶಯ್ಯೋಪಾಂತೇ ಶಾರದಾಂಭೋಜನೇತ್ರಾಮ್**
**ಅಧ್ಯಾಸೀನಾಂ ವಿಸ್ಮಿತಃ ಪಶ್ಯತಿ ಸ್ಮ ॥೩೯॥**

**ತಾತ್ಪರ್ಯ :** ಯಾವ ದಿನ ಶ್ರೀವೇಂಕಟನಾಥರು ಚಿಂತಾಕ್ರಾಂತರಾಗಿದ್ದರೋ, ಅದೇ ದಿವಸದ ರಾತ್ರೆಯಲ್ಲಿ ಕೊನೆಯ ಜಾವದ ಅರ್ಧ ಭಾಗದಲ್ಲಿ ಬೆಳಗಿನ ಜಾವದಲ್ಲಿ ಪ್ರಭಾತವಾಗುತ್ತಿರುವಾಗ ಒಂದು ಸ್ವಪ್ನವನ್ನು ನೋಡಿದರು. ದಿವ್ಯಳಾದ ಒಬ್ಬ ದೇವತಾ ಸ್ತ್ರೀಯು ಅವರ ಹಾಸಿಗೆಯ ಹತ್ತಿರದಲ್ಲಿ ಕುಳಿತಿದ್ದಾಳೆ. ಅವಳು ಧರಿಸಿದ ರತ್ನಖಚಿತವಾದ ಚಿನ್ನದ ಒಡ್ಯಾಣದಿಂದ ಅವಳ ಸೀರೆಯ ನೆರಿಗೆ, ಗಂಟುಗಳೆಲ್ಲವೂ ಝಗಮಗಿಸುತ್ತಿದ್ದವು. ಅವಳ ಕಣ್ಣುಗಳೆರಡೂ ಶರತ್ಕಾಲದಲ್ಲಿ ಅರಳಿದ ಕಮಲಗಳಂತೆ ಅತಿ ಸುಂದರವಾಗಿ ಕಾಣಿಸು (ಹೊಳೆಯು)ತ್ತಿದ್ದವು. ಇಂತಹಾ ದೇವಿಯನ್ನು ತಮ್ಮ ಹಾಸಿಗೆಯ ಪಕ್ಕದಲ್ಲಿ ನೋಡಿ ಶ್ರೀವೇಂಕಟನಾಥಾಚಾರ್ಯರು ಬಹಳವಾಗಿ ಆಶ್ಚರ್ಯಚಕಿತರಾದರು. ಹಾಗೆಯೇ ಆ ದಿವ್ಯ ಸ್ತ್ರೀಯನ್ನು ನೋಡುತ್ತಲಿದ್ದರು. (ಆ ದಿವ್ಯರೂಪದ ಸ್ತ್ರೀಯು ಸಾಕ್ಷಾತ್ ಸರಸ್ವತೀದೇವಿಯು.)

**ಅವತಾರಿಕೆ :** ಆ ದಿವ್ಯ ರೂಪದ ಸ್ತ್ರೀ ದೇವತೆಯುನ್ನು ದರ್ಶಿಸಿದ ಶ್ರೀವೇಂಕಟನಾಥಾಚಾರ್ಯರ ಮನಸ್ಸಿನಲ್ಲಿ ಉಂಟಾದ (ಊಹಾಪೋಹವನ್ನು) ವಿತರ್ಕವನ್ನು ಕವಿಗಳು ಈಗ ವರ್ಣಿಸುತ್ತಾರೆ.

**ಕೈಷಾ ಯೋಷಾ ಕಾಂಚನಾನರ್ಘ್ಯಭೂಷಾ ದೋಷಾಧೀಶಾನಾನನಾ ಚಾರುವೇಷಾ ।**
**ದೋಷಾತೀತಾ ಸಾಂದ್ರಧಮ್ಮಿಲ್ಲದೋಷಾ ಭಾಷಾದೇವೀ ಸರ್ವಸಾಕ್ಷಾನ್ಮನೀಷಾ ॥೪೦॥**

**ತಾತ್ಪರ್ಯ :** ಈ ಹೆಂಗಸು ಸುವರ್ಣದ ಅಮೂಲ್ಯವಾದ ಆಭರಣಗಳನ್ನು ಧರಿಸಿದ್ದಾಳೆ. ಇವಳ ಮುಖವು ಚಂದ್ರನಂತಿದೆ. ಇವಳ ರೂಪ ಮತ್ತು ವಸ್ತ್ರಗಳು ಮನೋಹರವಾಗಿದೆ. ಇವಳ ಸೌಂದರ್ಯ ಲಾವಣ್ಯಗಳಲ್ಲಿ ಯಾವ ರೀತಿಯ ಕುಂದೂ ಕಾಣಿಸುತ್ತಿಲ್ಲ. ರಾತ್ರಿಯಂತೆ ಇವಳ ತಲೆ ಕೂದಲು ಒತ್ತೊತ್ತಾಗಿ ಕಪ್ಪಾಗಿವೆ. ಎಲ್ಲಾ ವಿಷಯಗಳನ್ನು ಬಲ್ಲ ಸಾಕ್ಷಾತ್ ಶ್ರೀಸರಸ್ವತೀದೇವಿಯಂತೆ ಇರುವ ಈ ಸ್ತ್ರೀಯು ಯಾರಿರಬಹುದು? ಎಂಬುದಾಗಿ ಶ್ರೀವೇಂಕಟನಾಥಾಚಾರ್ಯರು ಊಹಾಪೋಹಗಳನ್ನು ಮಾಡಲಾರಂಭಿಸಿದರು.

**ಅವತಾರಿಕೆ :** ಇನ್ನೂ ಇದೇ ರೀತಿಯಾಗಿ ನಾನಾ ಊಹಾಪೋಹ ಮಾಡುತ್ತಿದ್ದ ಶ್ರೀವೇಂಕಟನಾಥರನ್ನು ನೋಡಿ ವಿದ್ಯಾದೇವಿಯು ನಸು ನಗುತ್ತಾ ತನ್ನ ಸ್ವರೂಪವನ್ನು ತಿಳಿಸುತ್ತಾಳೆ.

**ಯದ್ವಾ ನಾರೀ ಕಿನ್ನರೀ ವೋರಗೀ ವಾ ದೇವಸ್ತ್ರೀ ವಾ ಹಂತ ಯಾ ಕಾಚಿದಸ್ತು ।**
**ಕಸ್ಮಾದೇಷಾಽಭ್ಯಾಗತಾ ಮತ್ಸಮೀಪಂ ಪ್ರೋವಾಚೈಷಾ ಚಿಂತಯಂತಂ ತಮಿತ್ಥಮ್ ॥೪೧॥**

**ತಾತ್ಪರ್ಯ :** ಈಕೆಯು ಯಾರಿರಬಹುದು? ಮನುಷ್ಯ ಸ್ತ್ರೀಯೋ, ಕಿನ್ನರ ಸ್ತ್ರೀಯೋ, ನಾಗ ಕನ್ನಿಕೆಯೋ, ದೇವತಾ ಸ್ತ್ರೀಯೋ? ಯಾರಾದರೂ ಆಗಿರಲಿ, ಸಂತೋಷವೇ ಸರಿ. ಸ್ವಪ್ನದಲ್ಲಿ ದೇವತಾದರ್ಶನವು ಮಂಗಳಕರವೇ ಆಗಿದೆಯಷ್ಟೆ! ಆದರೆ ಈ ದೇವತಾ ಸ್ತ್ರೀಯು ನನ್ನ ಹತ್ತಿರಕ್ಕೆ ಏಕೆ ಬಂದಿದ್ದಾಳೆ? ಎಂದು ಮುಂತಾಗಿ ಆಲೋಚಿಸುತ್ತಿದ್ದ ಶ್ರೀವೇಂಕಟನಾಥರನ್ನು ಕುರಿತು ಆ ಸ್ತ್ರೀಯು ಹೇಳಲಾರಂಭಿಸಿದಳು.

**ಅವತರಣಿಕೆ :** ವಿದ್ಯಾದೇವಿಯು ತನ್ನ ಸ್ವರೂಪವನ್ನು ತಿಳಿಸುತ್ತಾ ತನ್ನ ಅಭಿವೃದ್ಧಿಗೆ ಕಾರಣಕರ್ತರಾದವರ ಬಗೆಗೆ ತಿಳಿಸಿದುದನ್ನು ಈಗ ಕವಿಗಳು ವರ್ಣಿಸುತ್ತಾರೆ.

**ಕಾನೀನೋಽಸೌ ಕನ್ಯಕಾಭಾವಮಾದಾತ್**
**ಭೋಗ್ಯಾಯಾ ಮೇ ಸಂತತಂ ಪಂಡಿತಾನಾಮ್ ।**
**ತಸ್ಮಾಜ್ಜಾತಾಽಽನಂದತೀರ್ಥಪ್ರಿಯಾಹಂ ವಿದ್ಯಾಲಕ್ಷ್ಮೀಂ ವಿದ್ಧಿ ಮಾಂ ವಿದ್ವದಾದ್ಯ ॥೪೨॥**

**ತಾತ್ಪರ್ಯ :** ಕನ್ಯೆಯಾದ ಸತ್ಯವತೀ ದೇವಿಯಲ್ಲಿ ಪರಾಶರರಿಂದ ಅವತರಿಸಿದ ಶ್ರೀವೇದವ್ಯಾಸರು ನನ್ನ ತಂದೆ. ನಾನು ಅವರಿಂದಲೇ ಹುಟ್ಟಿದೆನು. ಪಂಡಿತರಿಗೆಲ್ಲಾ ಆನಂದವನ್ನು ಕೊಡುವ ನಾನು ಆ ನನ್ನ ತಂದೆಯ ಆರೈಕೆಯಲ್ಲಿ ಬಾಲ್ಯವನ್ನು ಕಳೆದು ಕನ್ಯಕಾವಸ್ಥೆಯನ್ನು ಹೊಂದಿದೆನು. ನಾನು ಕನ್ಯೆಯಾದಾಗ ಶ್ರೀಮದಾನಂದತೀರ್ಥರಿಗೆ ಅತ್ಯಂತ ಪ್ರೀತಿಪಾತ್ರಳಾದೆನು. ಪ್ರಾಜ್ಞಶ್ರೇಷ್ಠನಾದ ವೇಂಕಟಾರ್ಯನೆ! ನನ್ನನ್ನು ವಿದ್ಯಾಲಕ್ಷ್ಮೀ ಎಂಬ ಹೆಸರಿನ ಸರಸ್ವತಿಯೆಂದೇ ತಿಳಿಯುವವನಾಗು.

**ಅವತಾರಿಕೆ :** ವಿದ್ಯಾಲಕ್ಷ್ಮೀನಾಮಕಳಾದ ಸರಸ್ವತೀದೇವಿಯು ಮುಂದೆ ತಾನು ಅಭಿವೃದ್ಧಿ ಹೊಂದಿದ ರೀತಿಯನ್ನು ತಿಳಿಸಿದುದನ್ನು ಕವಿಗಳು ವರ್ಣಿಸುತ್ತಾರೆ.

**ಬಾಲಾಮೇನಾಮೇಧಯಾಮಾಸ ಮಧ್ವೋ ಭಾಷ್ಯಕ್ಷೀರಾತ್ ವ್ಯಾಸವಾಕ್ಕಾಮಧೇನೋಃ ।**
**ಅಕ್ಷೋಭ್ಯಶ್ರೀಪಾದಶಿಷ್ಯಾಗ್ರಗಣ್ಯೈಃ ಪ್ರೌಢೋತ್ತಂಸ್ಯೈಃ ಪ್ರಾಪಿತಂ ಯೌವನಂ ಮೇ ॥೪೩॥**

**ತಾತ್ಪರ್ಯ :** ಶ್ರೀವೇದವ್ಯಾಸದೇವರ ಬ್ರಹ್ಮಮೀಮಾಂಸಾಶಾಸ್ತ್ರಸೂತ್ರಸಮುದಾಯವು ಕಾಮಧೇನುವಾಗಿದೆ. ಆ ಸೂತ್ರಗಳಿಗೆ ಶ್ರೀಮದಾನಂದತೀರ್ಥರು ರಚಿಸಿದ ಶ್ರೀಮದ್ಬ್ರಹ್ಮಸೂತ್ರಭಾಷ್ಯವು ಬ್ರಹ್ಮಸೂತ್ರ ಕಾಮಧೇನುವಿನ ಹಾಲಿನಂತಿದೆ. ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯರು ಬ್ರಹ್ಮಸೂತ್ರವೆಂಬ ಕಾಮಧೇನು ಹಸುವಿನಿಂದ ಬ್ರಹ್ಮಸೂತ್ರ ಭಾಷ್ಯವೆಂಬ ಹಾಲಿನಿಂದ ನನ್ನನ್ನು ಬೆಳಸಿದರು. ಮುಂದೆ ಶ್ರೀಮದಕ್ಷೋಭ್ಯತೀರ್ಥ ಶ್ರೀಪಾದಂಗಳವರಿಗೆ ಪಂಡಿತಮಂಡಲೀಮಾನ್ಯರಾದ

ಸನ್ನ್ಯಾಸಕುಲ ಮುಕುಟಮಣಿಗಳಾದ ಶ್ರೀಮಜ್ಜಯತೀರ್ಥರೆಂಬ ಪ್ರಾಜ್ಞಶಿರೋಮಣಿಗಳು ಶಿಷ್ಯರಾದರು. ಅವರು ತತ್ತ್ವಪ್ರಕಾಶಿಕಾ ಸುಧಾಗ್ರಂಥಗಳೆಂಬ ರಸಾಯನವನ್ನು ಕೊಟ್ಟು ನನಗೆ ತಾರುಣ್ಯ ಉಂಟಾಗುವಂತೆ ಮಾಡಿದರು. (ಶ್ರೀಮಧ್ವಾಚಾರ್ಯರ ಭಾಷ್ಯಕ್ಷೀರದಿಂದ ಬೆಳೆದ ನಾನು ಶ್ರೀಮಜ್ಜಯತೀರ್ಥರಿಂದ ತಾರುಣ್ಯವನ್ನು ಪಡೆದೆನು.)

**ಅವತಾರಿಕೆ :** ಈಗ ಕವಿಗಳು ಶ್ರೀಮದ್ವ್ಯಾಸತೀರ್ಥ ಶ್ರೀಮಚ್ಚರಣರಿಂದ ಅಭಿವೃದ್ಧಿ ಹೊಂದಿದ ವಿಚಾರವನ್ನು ವಿದ್ಯಾಲಕ್ಷ್ಮಿಯು ತಿಳಿಸಿದುದನ್ನು ವರ್ಣಿಸುತ್ತಾರೆ.

**ಊರ್ವೀ ಸರ್ವಾ ಯೇನ ರಾಜನ್ವತೀತ್ವಂ ರಾಜ್ಞಾ ಹಂತ ಪ್ರಾಪ ಯತ್ಪಾದಭಾಜಾ ।**
**ತೇಷಾಂ ವ್ಯಾಸಾಚಾರ್ಯರಾಜೇಶ್ವರಾಣಾಂ ಸಂಗೃಹ್ಯಾಹಂ ಪಾಣಿಮದ್ಧಾ ಸಮಿದ್ಧಾ॥೪೪॥**

**ತಾತ್ಪರ್ಯ :** ಗಜಗಹ್ವರ (ಆನೆಗೊಂದಿ) ಮತ್ತು ವಿಜಯನಗರ ಸಂಸ್ಥಾನದ ಶ್ರೀಕೃಷ್ಣದೇವರಾಯ ಮಹಾಪ್ರಭುವು ಶ್ರೀಮದ್ವ್ಯಾಸರಾಜತೀರ್ಥರೆಂಬ ವಿದ್ವತ್ಕುಲ ಚಕ್ರವರ್ತಿಗಳ ಸೇವೆಯಿಂದ ಸಾಮರ್ಥ್ಯವನ್ನು ಹೊಂದಿ ವಿಶಾಲವಾದ ಭೂಮಂಡಲವನ್ನು ಚೆನ್ನಾಗಿ ಪರಿಪಾಲಿಸಿದನು. ಅವನಿಂದಾಗಿ ಈ ಭೂಮಿಯು ಒಳ್ಳೆಯ ರಾಜನನ್ನು ಉಳ್ಳದ್ದಾಗಿ (ರಾಜನ್ವತೀ) ಆಯಿತು. ಇಂತಹಾ ಶ್ರೀಮದ್ವ್ಯಾಸರಾಜತೀರ್ಥರೆಂಬ ಮಹಾಚಾರ್ಯರ ಕೈಹಿಡಿದು ನಾನು ಚೆನ್ನಾಗಿ ಬೆಳೆದೆನು. (ಶ್ರೀವ್ಯಾಸರಾಜ ಗುರುಸಾರ್ವಭೌಮರು ರಚಿಸಿದ ನ್ಯಾಯಾಮೃತ, ತರ್ಕತಾಂಡವ, ಚಂದ್ರಿಕಾ ಗ್ರಂಥಗಳಿಂದ ಬೆಳೆದೆನು.)

**ಅವತಾರಿಕೆ :** ವಿದ್ಯಾಲಕ್ಷ್ಮಿಯು ಶ್ರೀವ್ಯಾಸರಾಜತೀರ್ಥರು ತನ್ನನ್ನು ಬೆಳಸಿದ ರೀತಿಯನ್ನು ವರ್ಣಿಸಿದುದನ್ನು ಕವಿಗಳು ಈಗ ತಿಳಿಸುತ್ತಾರೆ.

**ಆಕಲ್ಪಂ ಮೇಽಕಲ್ಪಯಜ್ಜೀವನೇಚ್ಛೋರ್ವಾಸಂ ವಲ್ಲ್ಯಾಸ್ತರ್ಕನಾಟ್ಯೋತ್ಸುಕಾಯಾಃ ।**
**ಸೌಧಾಯನ್ನ್ಯಾಯಾಮೃತಾದ್ವೃದ್ಧಿಮತ್ಯಾಸ್ತಾತ್ಪರ್ಯಾದ್ಯಾ ಚಂದ್ರಿಕಾಖ್ಯಾ ಸ ತಸ್ಯಾಮ್ ॥೪೫॥**

**ತಾತ್ಪರ್ಯ :** ಎಲೈ ವೇಂಕಟನಾಥಾಚಾರ್ಯ, ಪ್ರಳಯ ಕಾಲದವರೆಗೂ ಪ್ರಸಿದ್ಧಿಯಿಂದಲೂ ಗೌರವದಿಂದಲೂ ಇರಬೇಕೆಂದು ನಾನು ಬಯಸಿದ್ದೆನು. ಬಳ್ಳಿಯಂತಿರುವ ನಾನು ತರ್ಕತಾಂಡವದಲ್ಲಿ ಉತ್ಕಂಠಿತಳಾಗಿದ್ದೆನು. ಶ್ರೀವ್ಯಾಸತೀರ್ಥರು ತರ್ಕತಾಂಡವ ಗ್ರಂಥರಚನೆ ಮಾಡಿ ನನ್ನ ಬಯಕೆಯನ್ನು ಪೂರೈಸಿದರು, ಅಮೃತವನ್ನು ಕುಡಿದು ಬೆಳೆಯಬೇಕೆಂಬ ಇಚ್ಛೆಯುಳ್ಳ ನನಗೆ ಶ್ರೀವ್ಯಾಸರಾಜ ಗುರುಸಾರ್ವಭೌಮರು ನ್ಯಾಯಾಮೃತ ರಚನೆ ಮಾಡಿ ಅಮೃತ ಕುಡಿಸಿ ಬೆಳೆಸಿದರು. ನ್ಯಾಯಸುಧಾ ಗ್ರಂಥದಲ್ಲಿ ಹೇಳಿರುವ ಅರ್ಥವನ್ನು ಒಳಗೊಂಡಿರುವ ನ್ಯಾಯಸುಧಾ ತಾತ್ಪರ್ಯಾರ್ಥಗರ್ಭಿತವಾದ ತಾತ್ಪರ್ಯಚಂದ್ರಿಕಾ ಗ್ರಂಥವನ್ನು ರಚಿಸಿ ಕೊಟ್ಟು ನನಗೆ ಚಂದ್ರಿಕೆಯಲ್ಲಿ ಸ್ಥಿರವಾದ ವಾಸವನ್ನು ಶ್ರೀವ್ಯಾಸತೀರ್ಥರು ಏರ್ಪಡಿಸಿಕೊಟ್ಟರು.

ಕಲ್ಪಾಂತರದವರೆಗೆ ಜೀವಿಸಲು ಬಯಸುತ್ತಿದ್ದ ನನಗೆ ತರ್ಕತಾಂಡವದಲ್ಲಿ ಕುತೂಹಲವಿತ್ತು. ನ್ಯಾಯಾಮೃತದಿಂದ ನಾನು ಬೆಳೆದೆನು. ಬಳ್ಳಿಯಂತಿರುವ ನನಗೆ ನ್ಯಾಯಸುಧಾ ತಾತ್ಪರ್ಯಾರ್ಥದ್ಯೋತಕವಾದ ಚಂದ್ರಿಕೆಯಲ್ಲಿ ತರ್ಕತಾಂಡವ ಮಾಡಿಸಿ ನ್ಯಾಯಾಮೃತದಿಂದ ಬೆಳೆಸಿದ ಶ್ರೀವ್ಯಾಸತೀರ್ಥರೇ ತಾತ್ಪರ್ಯ ಚಂದ್ರಿಕೆಯಲ್ಲಿ ಸ್ಥಿರವಾದ ವಾಸವನ್ನು ಕಲ್ಪಿಸಿದರು.

ಬಳ್ಳಿಯೊಂದು ಒಳ್ಳೆಯ ಅಮೃತವನ್ನು ಹೀರಿ ಬೆಳೆದು ಜಗತ್ಪ್ರಾಣನಾದ ವಾಯುವು ಬೀಸುವಾಗ ಅತ್ತಿತ್ತ ಬಳುಕಿ ತಾಂಡವನೃತ್ಯ ಮಾಡಬೇಕೆಂದು ಬಯಸುತ್ತಿತ್ತು. ದಯಾಲುವಾದ ಪುಷ್ಪಕಾರನೊಬ್ಬನು ಆ ಬಳ್ಳಿಗೆ ಪಾತಿ ಕಟ್ಟಿ ಆಶ್ರಯ ಕೊಟ್ಟು ಅದು ಬೆಳದಿಂಗಳಿನಲ್ಲಿ (ಚಂದ್ರಿಕೆಯಲ್ಲಿ) ಅಮೃತ ಕಿರಣವನ್ನು ಹೀರುತ್ತಾ ಸಂತೋಷವಾಗಿರುವಂತೆ ಮಾಡುತ್ತಾನೆ ಎಂಬ ಮತ್ತೊಂದು ಅರ್ಥವು ಇಲ್ಲಿ ಧ್ವನಿಸಲಾಗುತ್ತದೆ.

**ಅವತಾರಿಕೆ :** ಈಗ ವಿದ್ಯಾಲಕ್ಷ್ಮಿಯು ಚತುಃಷಷ್ಟಿಕಲಾನಿಪುಣರೂ, ಚತುರಧಿಕಶತಗ್ರಂಥ ರಚಯಿತರೂ ಆದ ಶ್ರೀವಿಜಯೀಂದ್ರತೀರ್ಥ ಶ್ರೀಪಾದಂಗಳವರು ರಚಿಸಿದ ನ್ಯಾಯಾಮೃತಾಮೋದ ವ್ಯಾಖ್ಯಾನದ ಪ್ರಶಂಸೆಯನ್ನು ಮಾಡುತ್ತಾ ಶ್ರೀವಿಜಯೀಂದ್ರತೀರ್ಥರನ್ನು ಪ್ರಶಂಸಿಸುತ್ತಾಳೆ.

**ವಿಖ್ಯಾತೋ ಯಶ್ಶ್ರೀಜಯೀಂದ್ರೋವ್ರತೀಂದ್ರಸ್ಸಖ್ಯಾ**
**ಲಬ್ಧ್ವಾ ಸಾಧುಕೀರ್ತಿಂ ಮಯೋರ್ವ್ಯಾಮ್ ।**
**ವ್ಯಾಖ್ಯಾವ್ಯಾಜಾದಾಲವಾಲಂ ವ್ಯತಾನೀತ್ತಸ್ಯಾ ವಲ್ಲ್ಯಾ ನ್ಯಾಯಪೂರ್ವಾಮೃತಸ್ಯ ॥೪೬॥**

**ತಾತ್ಪರ್ಯ :** ಜಗತ್ಪ್ರಸಿದ್ಧರಾದ ಶ್ರೀಮದ್ವಿಜಯೀಂದ್ರತೀರ್ಥರು ನನ್ನನ್ನು ಸಹಾಯಕಳನ್ನಾಗಿ ಹೊಂದಿ ಮೂರು ಲೋಕಗಳಲ್ಲಿಯೂ ಪ್ರಶಸ್ತವಾದ ಕೀರ್ತಿಯನ್ನು ಹೊಂದಿದರು. ಬಳ್ಳಿಯು ಚೆನ್ನಾಗಿ ಬೆಳೆಯಬೇಕಾದರೆ ಅದರ ಸುತ್ತಲೂ ಒಂದು ಹಳ್ಳವನ್ನು ಮಾಡಿ, ಸುತ್ತಲು ಪಾತಿಯನ್ನು ಕಟ್ಟಿ. ಆ ಪಾತಿಗೆ ನೀರನ್ನು ಸುರಿಯಬೇಕು. ಬಳ್ಳಿಯ ಸುತ್ತಲೂ ಇರುವ ನೀರು ನಿಲ್ಲುವ ಹಳ್ಳವನ್ನು ಪಾತಿ ಎಂದು ಕರೆಯುತ್ತಾರೆ. ನಾನೂ ಸಹಾ ಒಂದು ಬಳ್ಳಿಯಂತೆ ಇರುವವಳು. ನನ್ನ ಬೆಳವಣಿಗೆಗಾಗಿ ಶ್ರೀವಿಜಯೀಂದ್ರತೀರ್ಥರು ಶ್ರೀವ್ಯಾಸರಾಜ ಗುರುಸಾರ್ವಭೌಮರ ನ್ಯಾಯಾಮೃತ ಗ್ರಂಥಕ್ಕೆ ಆಮೋದವೆಂಬ ವ್ಯಾಖ್ಯಾನವನ್ನು ರಚಿಸುವುದರ ಮೂಲಕ ಪಾತಿಯನ್ನು ಕಟ್ಟಿದರು. ಶ್ರೀಮದ್ವಿಜಯೀಂದ್ರತೀರ್ಥ ಶ್ರೀಪಾದಂಗಳವರು ರಚಿಸಿರುವ ನ್ಯಾಯಾಮೃತಾಮೋದವು ವಿದ್ಯಾಲಕ್ಷ್ಮಿ ಎಂಬ ಬಳ್ಳಿಯ ಬೆಳವಣಿಗೆಗೆ ಮುಖ್ಯವಾದ ನೀರನ್ನು ನಿಲ್ಲಿಸುವ ಪಾತಿಯಾಗಿದೆ ಎಂಬುದಾಗಿ ಅಭಿಪ್ರಾಯ.

**ಅವತಾರಿಕೆ :** ವಿದ್ಯಾಲಕ್ಷ್ಮಿಯು ಈಗ ಶ್ರೀವಿಜಯೀಂದ್ರತೀರ್ಥರು ತನಗೆ ಒಂದು ಅತ್ಯುತ್ತಮವಾದ ಗೌರವಪೂರ್ವಕವಾದ ಉಡುಗೊರೆಯನ್ನು ನೀಡಿದರೆಂದು ತಿಳಿಸಿದ ವಿಷಯವನ್ನು ಕವಿಗಳು ವರ್ಣಿಸುತ್ತಾರೆ.

**ಚಿತ್ರೈರ್ವರ್ಣೈಃ ಶೋಭಿತಂ ಶ್ಲಾಘಿತಾರ್ಥಂ ವ್ಯಾಪ್ತಂ ದೇಶೇ**
**ಕ್ಷೌಮವಾಸೋಽತಿನೂತ್ನಮ್ ।**
**ಪ್ರಾಯಚ್ಛನ್ಮೇ ಕಂಟಕೋದ್ಧಾರದಂಭಾದಾಚಂದ್ರಾರ್ಕಸ್ಥಾಯಿ ಚಾರುಪ್ರಭಾವಃ ॥೪೭॥**

**ತಾತ್ಪರ್ಯ :** ಬಿಳಿ, ಹಳದಿ ಮುಂತಾದ ಬಣ್ಣಗಳಿಂದ ಶೋಭಿಸುತ್ತಿರುವ, ಒಳ್ಳೆಯ ಬೆಲೆಯಿಂದ ಕೂಡಿದ್ದಾದ, ಎಲ್ಲರಿಂದಲೂ ಶ್ಲಾಘನೀಯವಾದ, ಜಾಳುಜಾಳಾಗಿಲ್ಲದೆ ಒತ್ತೊತ್ತಾಗಿ ನೇಯ್ದಿರುವ, ಅಚ್ಚ ಹೊಸದಾದ ಬಹಳ ಕಾಲ ಬಾಳಿಕೆ ಬರುವ ಒಳ್ಳೆಯ ಬಿಳಿ ರೇಶ್ಮೆಯ ಸೀರೆಯನ್ನುಡಬೇಕೆಂದು ನನಗೆ ಬಹಳ ಕಾಲದಿಂದಲೂ ಆಸೆಯಿತ್ತು. ಶ್ರೀವಿಜಯೀಂದ್ರತೀರ್ಥರು ಅಂತಹಾ ಸೀರೆಯನ್ನು ನನಗೆ ಕೊಟ್ಟರು. ಅವರು ಶ್ರೀಮಧ್ವಾದ್ವಕಂಟಕೋದ್ಧಾರ ಎಂಬ ಗ್ರಂಥವನ್ನು ಬರೆದರು. ಆ ಗ್ರಂಥವೂ ಕೂಡಾ ಸೀರೆಯಂತೆಯೇ ಚಿತ್ರವರ್ಣಗಳಿಂದ ಅಂದರೆ ವಿಚಿತ್ರವಾದ ಅಕ್ಷರಗಳಿಂದ ಶೋಭಿತವಾಗಿ ಸೀರೆಯಂತೆಯೇ ಪ್ರಶಸ್ತವಾದ ಅರ್ಥಗಳಿಂದ ಕೂಡಿ (ವಿದ್ವನ್ಮಾನ್ಯವಾದ ವಿಷಯಗಳಿಂದ ಕೂಡಿ) ಸೀರೆಯಂತೆಯೇ ದೇಶದಲ್ಲೆಲ್ಲಾ ವ್ಯಾಪ್ತವಾಗಿ, ಸೀರೆಯಂತೆಯೇ ಕಲಾತ್ಮಕವಾಗಿ ಆಚಂದ್ರಾರ್ಕಸ್ಥಾಯಿಯಾಗಿ ಬಹುಕಾಲ ಬಾಳುವಂತಹಾ ಯೋಗ್ಯತೆ ಉಳ್ಳದ್ದು. ಶ್ರೀವಿಜಯೀಂದ್ರತೀರ್ಥರು ಅತ್ಯಂತ ಜನಾದರಣೆಯ ಪ್ರಭಾವ ಉಳ್ಳವರು. ಅವರು ಇಂತಹಾ ಗ್ರಂಥವನ್ನು ಬರೆದು ಆ ಗ್ರಂಥದ ನೆಪದಿಂದ ನನಗೆ ಒಂದು ಒಳ್ಳೆಯ ಸೀರೆಯನ್ನೇ ಕೊಟ್ಟರು. (ಶ್ಲೇಷದಿಂದ ಉಜ್ಜೀವಿತವಾದ ಅಪಹ್ನುತಿ ಅಲಂಕಾರ).

**ಅವತರಣಿಕೆ :** ಶ್ರೀವಿಜಯೀಂದ್ರತೀರ್ಥ ಶ್ರೀಪಾದಂಗಳವರು ಇದೇ ರೀತಿಯ ಇನ್ನೂ ಅನೇಕ ಆಭರಣರೂಪವಾದ ಗ್ರಂಥಗಳನ್ನು (ಆಭರಣಗಳನ್ನು) ಇಡುವ ಪೆಟ್ಟಿಗೆಯನ್ನು ಕೊಟ್ಟಿದ್ದಾಗಿ ವಿದ್ಯಾಲಕ್ಷ್ಮಿಯು ತಿಳಿಸಿದಳೆಂದು ಕವಿಗಳು ವರ್ಣಿಸುತ್ತಾರೆ.

**ಭೂಷಾಪೇಟೀಂ ತತ್ವಮಾಣಿಕ್ಯಪೇಟ್ಯಾ ಮುಕ್ತಾಭೂಷಾಂ ನ್ಯಾಯಮುಕ್ತಾಸ್ರಜಾ ಮೇ ।**
**ಯದ್ವತ್ ಕ್ಲಪ್ತಂ ಭೂಷಣತ್ವೇನ ವಧ್ವಾಸ್ತಸ್ತದ್ಗ್ರಂಥೈರಾತನಿಷ್ಟಾತುಲಶ್ರೀಃ ॥೪೮॥**

**ತಾತ್ಪರ್ಯ :** ಶ್ರೀವಿಜಯೀಂದ್ರತೀರ್ಥ ಶ್ರೀಪಾದಂಗಳವರು ಅತ್ಯಂತ ಶ್ರೇಷ್ಠವಾದ ವಿದ್ಯಾಸಂಪತ್ತನ್ನು ಹೊಂದಿದ್ದರು. ಅವರು ತತ್ವಮಾಣಿಕ್ಯಪೇಟಿಕಾ ಎಂಬ ಅನುಪಮವಾದ ಗ್ರಂಥವನ್ನು ರಚಿಸಿ ನನಗೆ ಆಭರಣಗಳನ್ನು ಇಡಲು ಒಂದು ಪೆಟ್ಟಿಗೆಯನ್ನು ಮಾಡಿಕೊಟ್ಟರು. ನ್ಯಾಯಮೌಕ್ತಿಕಮಾಲ ಎಂಬ ಕೃತಿಯನ್ನು ರಚಿಸಿ ನನಗೆ ಒಂದು ಮುತ್ತಿನ ಸರವನ್ನೇ ಉಡುಗೊರೆಯಾಗಿ ಕೊಟ್ಟರು. ಲೋಕದಲ್ಲಿ ಲಾವಣ್ಯವತಿಯಾದ ಸುಂದರಿಯಾದ ಮಹಿಳೆಗೆ ಯಾವ ಯಾವ ಅಲಂಕಾರಗಳು ಬೇಕೋ ಅದೆಲ್ಲವನ್ನೂ ಆಯಾ ಆಭರಣಗಳ ಹೆಸರಿನ ಗ್ರಂಥಗಳನ್ನೇ ರಚಿಸಿ ವಿದ್ಯಾಲಕ್ಷ್ಮಿಯಾದ ನನಗೆ ನೀಡಿದರು.

**ಅವತಾರಿಕೆ :** ಈಗ ಕವಿಗಳು ವಿದ್ಯಾಲಕ್ಷ್ಮಿಯು ಶ್ರೀಸುಧೀಂದ್ರತೀರ್ಥ ಶ್ರೀಪಾದಂಗಳವರು

ತನಗೆ ತರ್ಕತಾಂಡವ ಗ್ರಂಥಕ್ಕೆ ವ್ಯಾಖ್ಯಾನ ಗ್ರಂಥ ರಚಿಸುವ ಮೂಲಕ ರಂಗಸ್ಥಳವನ್ನು ನಿರ್ಮಿಸಿಕೊಟ್ಟರು ಎಂಬುವುದಾಗಿ ತಿಳಿಸಿದಳು ಎಂದು ವರ್ಣಿಸುತ್ತಾರೆ.

**ವಾದೇ ನಿತ್ಯಂ ವೈರಿವಿದ್ವಜ್ಜಯಶ್ರೀ ರಾಜಸ್ಥಾನೇ । ಪ್ರಾಪಿತಾ ಮಾಂ ತಯೇತಿ ।**
**ವ್ಯಾಖ್ಯಾವ್ಯಾಜಾತ್ತರ್ಕನೃತ್ತಸ್ಯ ಮಹ್ಯಂ ರಂಗಸ್ಥಾನಂ ನಿರ್ಮಮೇ ಶ್ರೀಸುಧೀಂದ್ರಃ ॥೪೯॥**

**ತಾತ್ಪರ್ಯ :** ರಾಜರ ಸಭೆಗಳಲ್ಲಿ ಪ್ರತಿವಾದಿಗಳ ಜೊತೆಗೆ ಚರ್ಚೆಯು ಪ್ರಾರಂಭವಾದಾಗ ನನಗೆ ಯಾವಾಗಲೂ ಈ ವಿದ್ಯಾಲಕ್ಷ್ಮಿಯೇ (ಸರಸ್ವತಿಯೇ) ವಿಜಯವನ್ನು ಉಂಟುಮಾಡಿದ್ದಾಳೆ ಎಂಬುವುದಾಗಿ ಭಾವಿಸಿದ ಶ್ರೀಸುಧೀಂದ್ರತೀರ್ಥರು ಶ್ರೀವ್ಯಾಸರಾಜಗುರುಗಳ ತರ್ಕತಾಂಡವ ಎಂಬ ಗ್ರಂಥಕ್ಕೆ ಒಂದು ವಿಶಿಷ್ಟವಾದ ವ್ಯಾಖ್ಯಾನವನ್ನು ರಚಿಸಿ ಆ ನೆಪದಿಂದ ನನಗೆ ನರ್ತಿಸಲು ಒಂದು ಸುಂದರವಾದ ರಂಗಸ್ಥಳವನ್ನು ನಿರ್ಮಿಸಿ ಉಡುಗೊರೆಯನ್ನಾಗಿ ನೀಡಿದರು.

**ಅವತಾರಿಕೆ :** ಕವಿಗಳು ಈಗ ಶ್ರೀಸುಧೀಂದ್ರತೀರ್ಥರು ನನ್ನ ಕಿರೀಟಕ್ಕೆ ಒಂದು ಮುತ್ತನ್ನೂ, ನನ್ನ ವಿಹಾರಕ್ಕೆ ಒಂದು ಉದ್ಯಾನವನವನ್ನೂ ಮಾಡಿಕೊಟ್ಟರು ಎಂದು ವಿದ್ಯಾಲಕ್ಷ್ಮಿಯು ಹೇಳಿದುದನ್ನು ವರ್ಣಿಸುತ್ತಾರೆ.

**ವ್ಯಾಸೇನೋಕ್ತಂ ವ್ಯಾಕರೋತ್ ಯತ್ ದ್ವಿತೀಯಸ್ಕಂಧಂ**
**ಪ್ರಾಯೋ ದುರ್ಗಮೈಕಾದಶಂ ಚ ।**
**ಮೌಲೇರಗ್ರೇ ಮೌಕ್ತಿಕಂ ತನ್ಮಮಾಸೀನ್ನಿರ್ಮಾರಾಮಂ ನಾಟಕಂ ಚಿತ್ರಗದ್ಯಮ್ ॥೫೦॥**

**ತಾತ್ಪರ್ಯ :** ಶ್ರೀಸುಧೀಂದ್ರತೀರ್ಥ ಶ್ರೀಪಾದಂಗಳವರು ಶ್ರೀಮದ್ವೇದವ್ಯಾಸದೇವರಿಂದ ರಚಿತವಾದ ಶ್ರೀಮದ್ಭಾಗವತ ಎರಡನೇ ಸ್ಕಂಧಕ್ಕೆ ವ್ಯಾಖ್ಯಾನ ಮಾಡಿದರು. ಹಾಗೆಯೇ ತಿಳಿಯಲು ಸಾಧ್ಯವಾಗದ ಹೆಚ್ಚಾದ ಗೂಢವಾದ ಅಭಿಪ್ರಾಯ(ಅರ್ಥ)ಗಳನ್ನು ಹೊಂದಿದ ಭಾಗವತದ ಹನ್ನೊಂದನೇ ಸ್ಕಂಧಕ್ಕೂ ವ್ಯಾಖ್ಯಾನ ಮಾಡಿದರು. ಈ ವ್ಯಾಖ್ಯಾನವು ನನ್ನ ಕಿರೀಟದ ಮೇಲ್ಭಾಗದಲ್ಲಿ ವಿರಾಜಿಸುವ ಶ್ರೇಷ್ಠವಾದ ಒಂದು ಮುತ್ತಾಯಿತು. ಶ್ರೀಸುಧೀಂದ್ರರು ಅದ್ಭುತವಾದ ಚೂರ್ಣಿಕಾ ಗದ್ಯಗಳಿಂದ ಕೂಡಿದ ಸುಭದ್ರಾಪರಿಣಯ ಎಂಬ ನಾಟಕವನ್ನು ರಚಿಸಿದ್ದಾರೆ. ಅದು ನನಗೆ ವಿಹರಿಸಲು ಅನುಕೂಲವಾದ ಒಂದು ಉತ್ತಮವಾದ ಉದ್ಯಾನವನವಾಯಿತು.

**ಅವತಾರಿಕೆ :** ಈಗ ವಿದ್ಯಾಲಕ್ಷ್ಮಿಯು ವೇಂಕಟನಾಥಾಚಾರ್ಯನನ್ನು ಉದ್ದೇಶಿಸಿ ಎಲೈ ವೇಂಕಟನಾಥನೆ, ನೀನು ಸುಧಾ ಚಂದ್ರಿಕಾ ಗ್ರಂಥಗಳಿಗೆ ಟಿಪ್ಪಣಿಗಳನ್ನು ಬರೆದು ಬಳ್ಳಿಯಂತಿರುವ ನನ್ನನ್ನು ಭದ್ರಪಡಿಸಬೇಕು, ಇಲ್ಲವಾದಲ್ಲಿ ನಾನು ನಿನಗೆ ಹಿಂದೆ ಹೇಳಿದ ನನ್ನ ಆಭರಣಾದಿಗಳೆಲ್ಲವೂ ವ್ಯರ್ಥವಾಗುತ್ತದೆ, ಎಂಬ ಈ ಮಾತುಗಳನ್ನು ಕವಿಗಳು ವರ್ಣಿಸುತ್ತಾರೆ.

**ಸರ್ವಂ ವ್ಯರ್ಥಂ ಭಾತಿ ಮೇ ಜೀವನಾಡ್ಯಾಶ್ಛಿನ್ನೇ ಮೂಲೇ ಚಂದ್ರಿಕಾಸೌಧವಲ್ಲ್ಯಾಃ ।**
**ವ್ಯಾಖ್ಯಾನಾತ್ ತ್ವಂ ಮಾಽಕರೋ ರೂಢಮೂಲಾಂ**
**ಧರ್ಮೀ ನೋ ಚೇತ್ ಧರ್ಮಚಿಂತಾ ಕ್ವ ದೃಷ್ಟಾ ॥೫೧॥**

**ತಾತ್ಪರ್ಯ :** ಚಂದ್ರಿಕಾ ಸಹಿತವಾದ ಸುಧಾ ಗ್ರಂಥದ ಸಂಬಂಧಿಯಾದ ಬಳ್ಳಿಯು ನನ್ನ ಜೀವನಾಡಿಯಾಗಿದೆ. ಅದಕ್ಕೆ ಸರಿಯಾದ ವ್ಯಾಖ್ಯಾನವಿಲ್ಲದೇ ಜಿಜ್ಞಾಸುಗಳಿಗೆ ಸರಿಯಾಗಿ ಅರ್ಥವಾಗದೇ ಇದ್ದರೆ ನನ್ನ ಬುಡವೇ ಕತ್ತರಿಸಿ ಹಾಕಿದಂತಾಗುತ್ತದೆ. ವಿದ್ಯಾಲಕ್ಷ್ಮಿಯಾದ ನನಗೆ ಅಸ್ತಿತ್ವವೇ ಇಲ್ಲದಂತಾಗುತ್ತದೆ. ಆಗ ಹಿಂದೆ ನಾನು ಹೇಳಿದ ಆಭರಣಗಳು, ನನ್ನ ನರ್ತನದ ರಂಗಸ್ಥಳ, ನನ್ನ ವಿಹಾರದ ಉದ್ಯಾನವನ ಮುಂತಾದ ಎಲ್ಲ ವೈಭವಗಳೂ ವ್ಯರ್ಥವಾಗಿ ಹೋಗುತ್ತವೆ. ನೀನು ಸನ್ನ್ಯಾಸವನ್ನು ಸ್ವೀಕರಿಸಿ ಚಂದ್ರಿಕಾ ಸುಧಾ ಗ್ರಂಥಗಳಿಗೆ ವ್ಯಾಖ್ಯಾನಗಳನ್ನು ಮಾಡಿ ನನ್ನ ಬಳ್ಳಿಯ ಬುಡವನ್ನು ಭದ್ರ ಪಡಿಸಿದರೆ ನೀನು ಧರ್ಮಾತ್ಮ, ಪುಣ್ಯಾತ್ಮ, ಎಂಬ ಕೀರ್ತಿಯು ನಿನಗೆ ಲಭಿಸಿ ನೀನು ಲೋಕವಿಖ್ಯಾತನಾಗುತ್ತೀಯೆ. ನೀನು ಎಲ್ಲ ಪ್ರಾಣಿಗಳಿಗೂ ಹಿತಕಾರಿ; ವಿದ್ಯಾಲಕ್ಷ್ಮಿಯಾದ ನನಗೆ ಜೀವನವನ್ನು ಕೊಡದಿದ್ದರೆ ನೀನು ಹೇಗೆ ಧಾರ್ಮಿಕನೆಂದು ಕರೆಯಲ್ಪಡುವೆ? ನೀನೇ ಧರ್ಮವನ್ನು ಪಾಲಿಸದಿದ್ದರೆ ಇನ್ನು ಜಗತ್ತಿನಲ್ಲಿ ನಾವುಗಳು ಧರ್ಮವನ್ನು ಎಲ್ಲಿ ಹುಡುಕಬೇಕು? ನಿನ್ನನ್ನು ಧಾರ್ಮಿಕನೆಂದು ಯಾರು ತಾನೆ ಭಾವಿಸುತ್ತಾರೆ?

**ಅವತಾರಿಕೆ :** ಈಗ ವಿದ್ಯಾಲಕ್ಷ್ಮಿಯು ವೇಂಕಟನಾಥನನ್ನು ಸನ್ನ್ಯಾಸ ಸ್ವೀಕಾರಕ್ಕೆ ಪ್ರೇರಿಸುತ್ತಾಳೆ.

**ಜಾನೀಹಿ ತ್ವಂ ವೇಂಕಟಾರ್ಯ ತ್ವದಾರ್ಯೇ ವಾಸೋ ಯನ್ಮೇ ವತ್ಸರದ್ವಂದ್ವಮೇವ ।**
**ತದ್ವ್ಯಾಖ್ಯಾನೇ ಲಬ್ಧವರ್ಣೋ ನ ಚಾಸ್ತೇ ವಿದ್ವತ್ಸಂಘೇ ನೈವ ಭಾವೀ ತ್ವದನ್ಯಃ ॥೫೨॥**

**ತಾತ್ಪರ್ಯ :** ಎಲೈ ವೇಂಕಟನಾಥನೇ, ನಿನ್ನ ಗುರುಗಳಾದ ಶ್ರೀಸುಧೀಂದ್ರತೀರ್ಥರಲ್ಲಿ ಇನ್ನು ಮುಂದೆ ಕೇವಲ ಎರಡು ವರ್ಷಗಳ ಕಾಲ ಮಾತ್ರ ನಾನು ಇರುವೆನು. ಆನಂತರ ನಾನು ಅಲ್ಲಿ ಇರುವುದಿಲ್ಲ. (ನಿನ್ನ ಗುರುಗಳು ಇನ್ನು ಎರಡು ವರ್ಷಗಳ ಕಾಲ ಮಾತ್ರ ಈ ಭೂಲೋಕದಲ್ಲಿ ಇರುವರು.) ಅವರು ಈ ವ್ಯಾಖ್ಯಾನದ ಕಾರ್ಯವನ್ನು ಮಾಡಲು ಸಾಧ್ಯವಿಲ್ಲ. ಆದುದರಿಂದಲೇ ನೀನು ಈ ಕಾರ್ಯವನ್ನು ಮಾಡಬೇಕು ಎಂಬುದಾಗಿ ನಾನು ಒತ್ತಾಯಿಸುತ್ತಿದ್ದೇನೆ. ಪಂಡಿತರ ಸಮೂಹದಲ್ಲಿ ನಿನ್ನ ಹೊರತಾಗಿ ಚಂದ್ರಿಕಾ ಸುಧಾ ಗ್ರಂಥಗಳ ವ್ಯಾಖ್ಯಾನವನ್ನು ಮಾಡಬಲ್ಲವರು ಮತ್ತೊಬ್ಬರು ಇಲ್ಲ. ಇನ್ನು ಮುಂದೆ ಹುಟ್ಟುವವರು ಯಾರೂ ಆ ಕಾರ್ಯವನ್ನು ಮಾಡಲಾರರು. ಆದ ಕಾರಣ ನೀನೇ ಸುಧಾ ಚಂದ್ರಿಕಾ ಎರಡೂ ಗ್ರಂಥಗಳಿಗೆ ವ್ಯಾಖ್ಯಾನ ಮಾಡು ಎಂದು ನಾನು ಪ್ರೇರಿಸುತ್ತಿದ್ದೇನೆ. ಸನ್ನ್ಯಾಸ ಸ್ವೀಕಾರ ಮಾಡುವುದರಿಂದ ಶ್ರೀವೇಂಕಟನಾಥಾಚಾರ್ಯರಿಗೆ ಪ್ರಯೋಜನವಿದೆಯೆಂದು ವಿದ್ಯಾದೇವಿಯು ಹೇಳುತ್ತಾಳೆ.

**ಅವತಾರಿಕೆ :** ಈಗ ವಿದ್ಯಾಲಕ್ಷ್ಮಿಯು ವೇಂಕಟನಾಥಾಚಾರ್ಯರಿಗೆ ಅವಳ ವಾಸವು

ಸನ್ನ್ಯಾಸಿಗಳಲ್ಲಿ ಮಾತ್ರ, ಬೇರೆಯವರಲ್ಲಿ ವಾಸ ಮಾಡುವುದಿಲ್ಲ ಎಂದು ಹೇಳಿದುದನ್ನು ಕವಿಗಳು ವರ್ಣಿಸುತ್ತಾರೆ.

**ಶ್ರೀರಾಮಾರ್ಚಾ ಪೂಜ್ಯತೇ ಯೇನ ತಸ್ಮಿನ್ ವಾಸಂ**
**ಯನ್ಮೇಽಕಲ್ಪಯತ್ ವ್ಯಾಸದೇವಃ ।**
**ಕರ್ಮಂದೀಂದ್ರೈರೇವ ಪೂಜಾಽಪಿ ಕ್ಲೃಪ್ತಾ ತಸ್ಮಾತ್**
**ಸಾಽಹಂ ತೇಷು ನಿತ್ಯಂ ವಸಾಮಿ ॥೫೩॥**

**ತಾತ್ಪರ್ಯ :** ಯಾರು ಶ್ರೀಮೂಲರಾಮನ ಪ್ರತಿಮೆಯನ್ನು ಪೂಜಿಸುತ್ತಾರೋ ಅಂತಹ ಪುರುಷರಲ್ಲಿ ನಾನು ಸನ್ನಿಧಾನವನ್ನು ಇಟ್ಟಿರಬೇಕೆಂದು ಶ್ರೀವೇದವ್ಯಾಸರೇ ನಿಯಮವನ್ನು ಮಾಡಿರುತ್ತಾರೆ. ಶ್ರೀಮೂಲರಾಮನ ಪೂಜೆಯನ್ನು ಸನ್ನ್ಯಾಸಿಗಳೇ ಮಾಡಬೇಕೆಂಬ ನಿಯಮವನ್ನೂ ಅವರೇ ಮಾಡಿರುತ್ತಾರೆ. ಈ ಕಾರಣದಿಂದಲೇ ಶ್ರೀಮೂಲರಾಮನ ಅರ್ಚಕರಾದ ಸನ್ನ್ಯಾಸಿಗಳಲ್ಲಿಯೇ ನಾನು ಯಾವಾಗಲೂ ಸನ್ನಿಹಿತಳಾಗಿರುತ್ತೇನೆ. ಆದ ಕಾರಣ ನೀನು ಸನ್ನ್ಯಾಸವನ್ನು ಸ್ವೀಕಾರ ಮಾಡಬೇಕೆಂದು ನಾನು ಒತ್ತಾಯ ಮಾಡುತ್ತಿದ್ದೇನೆ.

**ಅವತಾರಿಕೆ :** ಶ್ರೀವೇಂಕಟನಾಥರು ಸನ್ನ್ಯಾಸವನ್ನು ಸ್ವೀಕರಿಸದಿದ್ದರೆ ತನಗೂ ಮತ್ತು ಇತರರಿಗೂ ಉಂಟಾಗುವ ಹಾನಿಯನ್ನು ವಿದ್ಯಾಲಕ್ಷ್ಮಿಯು ತಿಳಿಸಿದಳೆಂದು ಈಗ ಕವಿಗಳು ವರ್ಣಿಸುತ್ತಾರೆ.

**ತಸ್ಮಾದಂಗೀಕೃತ್ಯ ಕರ್ಮಂದಿಭಾವಂ ರಾಜಾ ವಿದ್ಯಾರಾಜ್ಯಲಕ್ಷ್ಮ್ಯಾ ಭವ ತ್ವಮ್ ।**
**ನೋ ಚೇಲ್ಲುಂಪೇನ್ನಿತ್ಯವಾಚಾಂ ವಿಚಾರೈಃ**
**ಸಾಕಂ ಲೋಕೇ ವೈಷ್ಣವಃ ಸಂಪ್ರದಾಯಃ ॥೫೪॥**

**ತಾತ್ಪರ್ಯ :** ಎಲೈ ವೇಂಕಟನಾಥನೇ! ಮೇಲೆ ಹೇಳಿದ ಕಾರಣಗಳಿಂದ ನೀನು ಸನ್ನ್ಯಾಸವನ್ನು ಅಂಗೀಕರಿಸಿ ವೇದಾಂತ ವಿದ್ಯೆಯೆಂಬ ರಾಜ್ಯದ ಲಕ್ಷ್ಮಿಗೆ, ರಾಜನಾಗು. ನೀನು ಸನ್ನ್ಯಾಸವನ್ನು ಅಂಗೀಕಾರ ಮಾಡದಿದ್ದರೆ, ಅಪೌರುಷೇಯವಾದ ವೇದಗಳ ವಿಮರ್ಶೆಗಳೂ, ವೈಷ್ಣವ ಸಂಪ್ರದಾಯವೂ ನಾಶ ಹೊಂದಿಯಾವು. ವೇದಗಳು ನಾಶವಾಗದೇ ಶಾಶ್ವತವಾಗಿ ಉಳಿಯಬೇಕಾದರೆ ನೀನು ಸನ್ನ್ಯಾಸವನ್ನು ಸ್ವೀಕರಿಸಲೇ ಬೇಕು.

**ಅವತಾರಿಕೆ :** ಇನ್ನು ಮುಂದಿನ ಒಂಬತ್ತು ಶ್ಲೋಕಗಳಿಂದ ಕವಿಗಳು ವೇಂಕಟನಾಥಚಾರ್ಯರು ಸನ್ನ್ಯಾಸವನ್ನು ಸ್ವೀಕರಿಸದಿದ್ದರೆ ಮುಂದೆ ಉಂಟಾಗಬಹುದಾದ ಅನಾಹುತ, ಅನಿಷ್ಟ ಪರಂಪರೆಗಳನ್ನು ತಿಳಿಸಿ ಈ ಕಾರಣಕ್ಕಾಗಿಯಾದರೂ ಅವುಗಳ ಬಗೆಗೆ ಆಲೋಚಿಸಿ ಸನ್ನ್ಯಾಸವನ್ನು ಸ್ವೀಕರಿಸು ಎಂಬುದಾಗಿ ವಿದ್ಯಾಲಕ್ಷ್ಮಿಯು ಉಪದೇಶ ಮಾಡಿದುದನ್ನು

ವರ್ಣಿಸುತ್ತಾರೆ. ಮೊದಲು ವೇದಾಂತ ನ್ಯಾಯ ಮತ್ತು ವೇದಾಂತ ಪುಸ್ತಕಗಳಿಗೆ ಒದಗಬಹುದಾದ ದುರ್ದಶೆಯನ್ನು ವರ್ಣಿಸುತ್ತಾರೆ.

**ಉತ್ಸೂತ್ರತ್ವಂ ಕೇವಲಂ ನಾದ್ಯಪಕ್ಷೇ ನ್ಯಾಯೌಘಾನಾಂ ಕಿಂ ತು ತತ್ಪುಸ್ತಕಾನಾಮ್ ।**
**ರಕ್ಷಾಭಾವಾದ್ಭಕ್ಷಣಾನ್ಮೂಷಿಕಾಣಾಂ ಮಾಯಾವಾದಿಬ್ರಹ್ಮವನ್ನಿರ್ಗುಣಾನಾಮ್ ॥೫೫॥**

**ತಾತ್ಪರ್ಯ :** ಎಲೈ ವೇಂಕಟನಾಥಾಚಾರ್ಯನೇ! ನೀನು ಸನ್ಯಾಸವನ್ನು ಸ್ವೀಕರಿಸದಿದ್ದರೆ ಆಗುವ ಅನರ್ಥಗಳನ್ನು ಒಂದೊಂದಾಗಿ ಹೇಳುತ್ತೇನೆ ಕೇಳು, ಮಾಯಾವಾದಿಗಳ ಸಿದ್ಧಾಂತವೇ ಪ್ರಥಮಕಲ್ಪ, ಅಂದರೆ ನಮಗೆ ಪೂರ್ವಪಕ್ಷವು. ಈ ಪೂರ್ವಪಕ್ಷಗಳ ಮತದಲ್ಲಿ ಶ್ರುತ್ಯರ್ಥವನ್ನು ನಿರ್ಣಯಿಸುವ ನ್ಯಾಯಗಳೆಲ್ಲವೂ ಸೂತ್ರಾರ್ಥಕ್ಕೆ ಅನುಗುಣವಾಗಿಲ್ಲವೆಂದು ನಾವು ಖಂಡಿಸುತ್ತೇವೆ. ಈ ಉತ್ಸೂತ್ರತ್ವವು ಈಗ ಮಾಯಾವಾದಿ ಪಕ್ಷದಲ್ಲಿ ಮಾತ್ರವೇ ಇದೆ. ನೀನು ಸನ್ಯಾಸ ಸ್ವೀಕರಿಸದಿದ್ದರೆ ವೇದಾಂತ ಪುಸ್ತಕಗಳೆಲ್ಲವೂ ಉತ್ಸೂತ್ರವಾಗುತ್ತವೆ. ಮೊದಲು ಮಾಯಾವಾದಿಗಳ ನಿರ್ಗುಣಬ್ರಹ್ಮವು ಮಾತ್ರವೇ ಉತ್ಸೂತ್ರವಾಗಿತ್ತು. ಸೂತ್ರಗಳಲ್ಲಿ ಹೇಳುವ ನ್ಯಾಯವನ್ನು ಮೀರಿತ್ತು. ಈಗ ವೇದಾಂತ ಪುಸ್ತಕಗಳಿಗೆ ರಕ್ಷಣೆಯು ತಪ್ಪಿಹೋಗುವುದರಿಂದ, ಇಲಿಗಳು ಅವನ್ನು ಕಚ್ಚಿ ತಿನ್ನುವುದರಿಂದ ಆ ಪುಸ್ತಕಗಳಿಗೂ ಮಾಯಾವಾದಿಗಳ ಬ್ರಹ್ಮದಂತೆ ನಿರ್ಗುಣ (ಹಗ್ಗವಿಲ್ಲದವುಗಳು) ಆಗುತ್ತವೆ. (ಅದ್ವೈತ ಪಕ್ಷದಲ್ಲಿ ವೇದಾಂತ ನ್ಯಾಯಗಳು ಮಾರ್ಗಭ್ರಷ್ಟವಾಗುತ್ತವೆ. ಪುಸ್ತಕಗಳು ಬಂಧನದ ರಜ್ಜು (ಹಗ್ಗ) ಇಲ್ಲದೇ ಹಾಳಾಗುತ್ತವೆ.)

**ಅವತಾರಿಕೆ :** ಈಗ ಕವಿಗಳು ಶ್ರೀವೇಂಕಟನಾಥಾಚಾರ್ಯರು ಸನ್ಯಾಸ ಸ್ವೀಕರಿಸದಿದ್ದರೆ ಮುಂದೆ ಆಗಬಹುದಾದ ಇನ್ನೂ ಅನೇಕ ತೊಂದರೆಗಳ ಬಗೆಗೆ ವಿದ್ಯಾಲಕ್ಷ್ಮಿಯು ಹೇಳಿದುದನ್ನು ವರ್ಣಿಸುತ್ತಾರೆ.

**ಆದ್ಯೇ ತಂತ್ರೇ ಪ್ರಕ್ರಿಯಾಯಾಂ ವಿಚಾರಸ್ತತ್ರೈವ ಸ್ಯಾತ್ ಕರ್ಮಣಾಂ ನಿರ್ಣಯೋಽಪಿ ।**
**ಕಿಂಚಾತ್ರೈವ ನ್ಯಾಯಪೂರ್ವಾಂ ಸುಧಾಖ್ಯಾಂ ಭಾಷ್ಯಾರಂಭಂ**
**ಶಾಬ್ದಿಕಾ ಏವ ಕುರ್ಯುಃ ॥೫೬॥**

**ತಾತ್ಪರ್ಯ :** ಋಷಿಗಳು ಮಾಡಿರುವ ಎಲ್ಲ ಶಾಸ್ತ್ರಗಳೂ ಶ್ರೀವೇದವ್ಯಾಸರಿಗೆ ಒಪ್ಪಿಗೆಯಾಗುವ ಅರ್ಥದ ಒಂದು ಭಾಗವನ್ನು ಮಾತ್ರ ವರ್ಣಿಸುತ್ತವೆ. ಯಾವ ಋಷಿಗಳು ಮಾಡಿರುವ ಶಾಸ್ತ್ರಗಳೂ ವೇದವ್ಯಾಸರ ಅಭಿಪ್ರಾಯಕ್ಕೆ ವಿರುದ್ಧವಾದ ಅಭಿಪ್ರಾಯವನ್ನು ಸಮರ್ಥಿಸುವುದಿಲ್ಲ. ಆದರೆ ಇತರ ಋಷಿಗಳು ಮಾಡಿರುವ ಶಾಸ್ತ್ರಗಳು ಮೇಲುನೋಟಕ್ಕೆ ವೇದವ್ಯಾಸರ ಅಭಿಪ್ರಾಯಕ್ಕೆ, ಅವರ ಶಾಸ್ತ್ರಕ್ಕೆ ವಿರುದ್ಧವಾಗಿರುವಂತೆ ಕಾಣಿಸುತ್ತವೆ. ವೇಂಕಟಾರ್ಯ! ನೀನು ಸನ್ಯಾಸವನ್ನು ಸ್ವೀಕರಿಸದಿದ್ದರೆ ಪೂರ್ವಮೀಮಾಂಸಾಶಾಸ್ತ್ರಕ್ಕೆ ವೇದವ್ಯಾಸರಿಗೆ ಅಭಿಮತವಾದ ಅರ್ಥಕ್ಕಿಂತ ಅವಿರುದ್ಧವಾದ ಅರ್ಥವನ್ನು ಉಪದೇಶ ಮಾಡುವವರು ಇಲ್ಲದ್ದರಿಂದ, ವೇದವ್ಯಾಸಾಭಿಮತವಾದ

ಅರ್ಥವು ಪಂಡಿತರಿಗೂ ಹೊಳೆಯದಿರುವುದರಿಂದ ಪಂಡಿತರೂ ಸಹಾ ಆಪಾತತವಾಗಿ (ಮೇಲುನೋಟಕ್ಕೆ) ತೋರುವ ಅರ್ಥವನ್ನೇ ಇಟ್ಟುಕೊಂಡು ಯಾಗಾದಿಗಳಿಗೆ ಸಂಬಂಧಪಟ್ಟ ವಿಚಾರವನ್ನೇ ಮಾಡಿಯಾರು. ವೇದವ್ಯಾಸಾಭಿಮತವಾದ ಅರ್ಥಕ್ಕೆ ಅವಿರುದ್ಧವಾದ ವಿಚಾರವನ್ನು ಮಾಡಲಾರರು. ಜೈಮಿನೀ ಮತವು ವೇದವ್ಯಾಸರ ಮತಕ್ಕೆ ಅವಿರುದ್ಧವೆಂದು "ಅನ್ಯಾರ್ಥಂ ತು ಜೈಮಿನೀ" "ಸಾಕ್ಷದಪ್ಯವಿರೋಧಃ ಜೈಮಿನಿಃ" ಇತ್ಯಾದಿ ಸೂತ್ರಗಳಲ್ಲಿ ಹೇಳಿದ್ದಾರೆ.

**ಹಾಗೆಯೇ, ವ್ಯಾಸಚಿತ್ತಸ್ಥಿತಾಕಾಶಾದವಚ್ಛಿನ್ನಾನಿ ಕಾನಿಚಿತ್!**
**ಅನ್ಯೇ ವ್ಯವಹರಂತ್ಯೇತಾನ್ಯೂರೀಕೃತ್ಯಗೃಹಾದಿವತ್ ॥**

ಶ್ರೀವೇದವ್ಯಾಸರ ಹೃದಯಾಕಾಶದಲ್ಲಿರುವ ಅಪರಿಮಿತವಾದ ಅರ್ಥಗಳಲ್ಲಿ ಪ್ರತ್ಯೇಕಿಸಲ್ಪಟ್ಟ ಕೆಲವು ವಿಷಯಗಳನ್ನು ಇತರರು ಪ್ರತ್ಯೇಕವೆಂದು ಪರಿಗಣಿಸಿ (ಆಕಾಶದ ಒಂದು ಚಿಕ್ಕ ಭಾಗವನ್ನು) ಮನೆ ಎಂದು ವ್ಯವಹರಿಸುವಂತೆ ವರ್ತಿಸುತ್ತಾರೆ, ಇತ್ಯಾದಿ ಭಾಷ್ಯೋದಾಹೃತ ಪ್ರಮಾಣಗಳಲ್ಲಿಯೂ ಈ ವಿಷಯವನ್ನು ತಿಳಿಸಿರುತ್ತಾರೆ.

ಎಲೈ ವೇಂಕಟಾರ್ಯ, ಇಷ್ಟೇ ಅಲ್ಲ; ಯಾಗಾದಿಕರ್ಮಗಳನಿರ್ಣಯವು ವೇದಾಂತಶಾಸ್ತ್ರದಲ್ಲಿಯೇ ಮುಖ್ಯತಃ ಆಗಬೇಕಾಗಿದೆ. ಆದರೆ ನೀನು ಸನ್ನ್ಯಾಸ ಸ್ವೀಕರಿಸದಿದ್ದರೆ ಯಾಗಾದಿಕರ್ಮಗಳ ನಿರ್ಣಯವನ್ನೂ ಕರ್ಮಮೀಮಾಂಸಾಶಾಸ್ತ್ರದಲ್ಲಿಯೇ ಮಾಡುವ ಸಂಭವವಿದೆ.

ಈ ಶಬ್ದವು ತಪ್ಪು, ಈ ಶಬ್ದವು ಒಪ್ಪು, ಎಂದು ಕೋಶಾದಿಗಳಿಂದ ಜ್ಞಾನವನ್ನು ಪಡೆದವರೂ ಅಥವಾ ಲೋಕವ್ಯವಹಾರಾದಿಗಳಿಂದ ಶಬ್ದಾರ್ಥ ಜ್ಞಾನವನ್ನು ಮಾತ್ರ ಹೊಂದಿದವರೂ, ಕೇವಲ ವೈಯಾಕರಣರೂ, ಶಬ್ದಮಯವಾದ ನ್ಯಾಯಸುಧಾ ಮುಂತಾದ ಗ್ರಂಥಗಳ ಅಧ್ಯಯನದಲ್ಲಿಯೂ ಪ್ರವೃತ್ತರಾಗುವರು. ಭಾಷ್ಯವನ್ನು ಓದಬೇಕಾದರೆ ಅದರಲ್ಲಿ ಹೇಳಿರುವ ಅರ್ಥದ ಪರಿಜ್ಞಾನಕ್ಕೆ ಬೇಕಾದ ನ್ಯಾಯಾದಿ ಜ್ಞಾನಗಳು ಬೇಕು. ಆದರೆ ಈಗ ಆ ಪೂರ್ವ ಸಿದ್ಧತೆಯೂ ಇಲ್ಲದೇ ಓದಲು ಪ್ರವೃತ್ತರಾಗುತ್ತಾರೆ. ಭಾಷ್ಯ ನ್ಯಾಯಸುಧಾದಿ ಗ್ರಂಥಗಳು ಶಬ್ದಮಯಗಳಾದುದರಿಂದ ಶಬ್ದಮಯವಾದ ಈ ಭಾಷ್ಯಾದಿಗಳ ಅಧ್ಯಯನದಲ್ಲಿ ನಾವೂ ಅಧಿಕಾರಿಗಳು ಎಂಬ ಬುದ್ಧಿಯು ಅವರಿಗೆ ಉಂಟಾಗುತ್ತದೆ. ಪ್ರಮಾಣ ಲಕ್ಷಣ ಮುಂತಾದ ಪ್ರಕರಣ ಗ್ರಂಥಗಳನ್ನು ಓದದೇ ಭಾಷ್ಯಾದಿಗಳ ಅರ್ಥ ಪರಿಜ್ಞಾನಕ್ಕೆ ಉಪಯುಕ್ತವಾದ ಪ್ರಮಾಣಗಳ ಸಾಧುತ್ವ ಅಸಾಧುತ್ವಗಳ ಜ್ಞಾನವಿಲ್ಲದವರು ಈ ಉದ್ಗ್ರಂಥಗಳ ಅಧ್ಯಯನದಲ್ಲಿ ಪ್ರವರ್ತಿಸಿಯಾರು. ಇದರಿಂದ ಅವರಿಗೂ ಈ ಗ್ರಂಥಗಳ ಅರ್ಥವು ಸರಿಯಾಗಿ ತಿಳಿಯುವುದಿಲ್ಲ. ಅಷ್ಟೇ ಅಲ್ಲಾ, ವಿಪರೀತವಾಗಿಯೂ ಅರ್ಥವನ್ನು ತಿಳಿಯುತ್ತಾರೆ. ಹೀಗಾಗಿ ಶಿಷ್ಯ ಪರಂಪರೆಗೆ ವಿಪರೀತವಾದ ಅರ್ಥವನ್ನು ಉಪದೇಶಿಸಿ ಇಡೀ ಜಗತ್ತನ್ನು ಅಜ್ಞಾನವೆಂಬ ಕಗ್ಗತ್ತಲಿನಲ್ಲಿ ಮುಳುಗಿಸಿಬಿಡುತ್ತಾರೆ. ಇಂತಹಾ ಪರಿಸ್ಥಿತಿ ಉಂಟಾಗದಂತೆ ನೀನೇ ಕಾರ್ಯನಿರತನಾಗಬೇಕು.

**ಅವತಾರಿಕೆ :** ಈಗ ವಾಗ್ದೇವಿಯು ವೇಂಕಟನಾಥನು ಸನ್ನ್ಯಾಸವನ್ನು ಸ್ವೀಕರಿಸದಿದ್ದರೆ ಉಂಟಾಗುವ ಮತ್ತೊಂದು ಅನರ್ಥವನ್ನು ವಿವರಿಸಿದಳೆಂದು ಕವಿಗಳು ತಿಳಿಸುತ್ತಾರೆ.

**ವಕ್ತ್ರೀ ವಿಷ್ಣೋರುತ್ತಮತ್ವಂ ಕಥಾ ಯಾ ಭೂಪಾಲಾನಾಂ ಭಾತಿ ವಿದ್ವತ್ಸಭಾಯಾಮ್ ।**
**ಶಕ್ತೇರ್ಭಾನೋಃ ಶಕ್ತಿಪಾಣೇರ್ಗಣೇಶಃ ಶಕ್ರಾದೀನಾಂ**
**ಧೂರ್ಜಟೇರ್ವಾ ತದಾ ಸ್ಯಾತ್ ॥೫೭॥**

**ತಾತ್ಪರ್ಯ :** ವೇಂಕಟಾರ್ಯ! ನೀನು ಸನ್ನ್ಯಾಸವನ್ನು ಸ್ವೀಕರಿಸದಿದ್ದರೆ ಉಂಟಾಗುವ ಇನ್ನೊಂದು ಅನರ್ಥವನ್ನು ಹೇಳುತ್ತೇನೆ. ಕೇಳು. ಇದುವರೆಗೆ ರಾಜರು ಪೋಷಿಸುತ್ತಿರುವ ವಿದ್ವಾಂಸರ ಪರಿಷತ್ತು, ರಾಜರು ನಡೆಸುವ ಸಭೆಗಳಲ್ಲಿ "ಶ್ರೀಹರಿಯೇ ಸರ್ವೋತ್ತಮನು" ಎಂಬ ತೀರ್ಮಾನವನ್ನು ಕೈಗೊಳ್ಳುತ್ತಿತ್ತು. ಪಂಡಿತರ ಸಮೂಹವು ಈ ನಿರ್ಣಯವನ್ನು ಒಪ್ಪಿಕೊಳ್ಳುತ್ತಿತ್ತು. ಆದರೆ ನೀನು ಪರಮಹಂಸ ಪರಿವ್ರಾಜಕನಾಗದಿದ್ದರೆ ಮುಂದೆ ನಡೆಯುವ ವಿದ್ವಾಂಸರ ಪರಿಷತ್ತಿನ ಚರ್ಚೆ ಮತ್ತು ನಿರ್ಣಯಗಳ ದಾರಿಯೇ ಬೇರೆಯಾಗುತ್ತದೆ, ಬದಲಾಗುತ್ತದೆ. ಇನ್ನು ಮುಂದೆ ಅದೇ ಪಂಡಿತರ ಪರಿಷತ್ತಿನಲ್ಲಿ ಶಕ್ತಿದೇವತೆಯೇ ಸರ್ವೋತ್ತಮವಾದುದೆಂದೋ, ಸೂರ್ಯನೇ ಸರ್ವೋತ್ತಮನೆಂದೋ, ಸುಬ್ರಹ್ಮಣ್ಯನೇ ಸರ್ವೋತ್ತಮನೆಂದೋ, ಗಣೇಶನೇ ಸರ್ವೋತ್ತಮನೆಂದೋ, ಇಂದ್ರಾದಿಗಳೇ ಸರ್ವೋತ್ತಮ ದೇವತೆಗಳೆಂದೋ, ನಿರ್ಣೀತವಾಗುತ್ತದೆ. ಇದರ ಸಾರಾಂಶವೇನೆಂದರೆ ಇನ್ನು ಮುಂದೆ ವಿದ್ವಾಂಸರು ಕಲಿಗಾಲದ ಸಾಮರ್ಥ್ಯದಿಂದಾಗಿ ಶ್ರೀಮನ್ಮಹಾವಿಷ್ಣುವೊಬ್ಬನನ್ನು ಬಿಟ್ಟು ಬೇರೆ ಯಾರಾದರೂ ಒಬ್ಬ ದೇವತೆಯನ್ನು ಸರ್ವೋತ್ತಮ ದೇವತೆಯೆಂದು ಚರ್ಚೆಯ ಕೊನೆಯಲ್ಲಿ ಸಿದ್ಧಾಂತ ಮಾಡುವರು. ವಿಷ್ಣು ಸರ್ವೋತ್ತಮ ಸಿದ್ಧಾಂತವು ಮಲಿನವಾಗುವುದು ಎಂಬುದಾಗಿ ವಿದ್ಯಾಲಕ್ಷ್ಮಿಯು ಹೇಳಿದಳು.

**ವಿಶೇಷಾಂಶ :** ಈ ಶ್ಲೋಕದ ಮೊದಲನೆಯ ಪಾದದಲ್ಲಿ "ವಕ್ತಾ ವಿಷ್ಣೋರುತ್ತಮತ್ವಂ ಕಥಾಯಾಃ" ಎಂಬ ಪಾಠಾಂತರವು ಕಂಡುಬರುತ್ತದೆ. ಆ ಪಾಠದಲ್ಲಿ ಯದಿ ತ್ವಂ ಸನ್ನ್ಯಾಸೀ ನ ಭವೇಃ ತದಾ=ನೀನು ಸನ್ನ್ಯಾಸಿಯಾಗದಿದ್ದರೆ, ಭೂಪಾಲಾನಾಂ ವಿದ್ವತ್ಸಭಾಯಾಂ=(ರಾಜರು ನಡೆಸುವ) ಪಂಡಿತರ ಪರಿಷತ್ತಿನಲ್ಲಿ, ವಿಷ್ಣೋಃ ಕಥಾಯಾಃ ಉತ್ತಮತ್ವಂ ವಕ್ತಾ=ಶ್ರೀಹರಿಯ ಕಥೆಗೆ ಉತ್ತಮತ್ತ್ವವನ್ನು ಪ್ರತಿಪಾದಿಸುವ, (ಪಂಡಿತ ಸಮೂಹಃ=ಪಂಡಿತರ ಗುಂಪು), ಯಃ ಇದಾನೀಂ ಭಾತಿ=ಯಾವುದು ಈಗ ಶೋಭಿಸುತ್ತದೆಯೋ, ಸ ಏವ ಶಕ್ತ್ಯಾದೀನಾಂ ಉತ್ತಮತ್ವಂ ವಕ್ತಾ ಸ್ಯಾತ್=ಆ ಪಂಡಿತರ ಸಮೂಹವೇ ಶಕ್ತಿ ದೇವತೆ ಮುಂತಾದವುಗಳಿಗೆ ಸರ್ವೋತ್ತಮತ್ವವನ್ನು ಪ್ರತಿಪಾದಿಸುವಂತಹುದು ಆಗಬಹುದು ಎಂಬುದಾಗಿ ಅರ್ಥವನ್ನು ಮಾಡಬೇಕು.

**ಅವತಾರಿಕೆ :** ಶ್ರೀವೇಂಕಟನಾಥಾಚಾರ್ಯರು ಸನ್ನ್ಯಾಸವನ್ನು ಸ್ವೀಕರಿಸದಿದ್ದರೆ ಮಠಗಳ ಅವಸ್ಥೆಯು ಹೇಗೆ ಆಗುತ್ತದೆ ಎಂದು ವಿದ್ಯಾಲಕ್ಷ್ಮಿಯು ವಿವರಿಸಿದುದನ್ನು ಕವಿಗಳು ಈಗ ವರ್ಣಿಸುತ್ತಾರೆ.

**ಛಾತ್ರಾಗಾರಂ ಶಶ್ವದೇಕಪ್ರಕಾರಂ ವೇದೋದ್ಘೋಷೈರ್ವೈದಿಕಾನಾಮುದಾರವ್ ।**
**ಗೋಮಾಯೂನಾಂ ಜಲ್ಪಕಾನಾಮಜಸ್ರಂ ಕಾರಾಗಾರಂ ಸರ್ವದೇಶೇ ತದಾನೀಮ್ ॥೫೮॥**

**ತಾತ್ಪರ್ಯ :** ವೇಂಕಟಾರ್ಯ! ಈಗ ಎಲ್ಲ ಮಠಗಳಲ್ಲಿಯೂ ವೇದಜ್ಞರು ತಮ್ಮ ತಮ್ಮ ಶಾಖೆಯ ವೇದಗಳನ್ನು ವಿದ್ಯಾರ್ಥಿಗಳಿಗೆ ಅಲ್ಲಲ್ಲಿ ಮಠಗಳಲ್ಲಿ ಬೋಧಿಸುತ್ತಿದ್ದಾರೆ. ಎಲ್ಲ ಪ್ರದೇಶಗಳಲ್ಲಿರುವ ಮಠಗಳೂ ವಿದ್ಯಾರ್ಥಿಗಳ ವೇದಘೋಷಗಳಿಂದ ಪ್ರತಿಧ್ವನಿಗೈಯುತ್ತಾ ಒಂದೇ ರೀತಿಯಿಂದ ಶೋಭಿಸುತ್ತಿವೆ. ಮಠ ಎಂಬ ಹೆಸರು ಅವುಗಳಿಗೆ ಅನ್ವರ್ಥಕವಾಗಿವೆ. ಮಠವೆಂದರೆ ವಿದ್ಯಾರ್ಥಿಗಳು ಮತ್ತು ಉಪಾಧ್ಯಾಯರು ವಿದ್ಯಾಧ್ಯಯನಕ್ಕಾಗಿ ಒಟ್ಟು ಸೇರಿ ಇರುವ ಸ್ಥಳವಾಗಿದೆ. ಹೀಗೆ ಅನ್ವರ್ಥಕವಾಗಿ ಶೋಭಿಸುತ್ತಿರುವ ಮಠಗಳು ನೀನು ಸನ್ನ್ಯಾಸವನ್ನು ಸ್ವೀಕರಿಸಿ ಈ ಅಧ್ಯಯನ ಪರಂಪರೆಯನ್ನು ಮುಂದುವರೆಸಿ ಕಾಪಾಡದಿದ್ದರೆ, ಬಂದೀಖಾನೆಯಂತಾಗುತ್ತವೆ, ಶೂನ್ಯವಾಗುತ್ತವೆ. ಆಗ ಅಲ್ಲಿ ನರಿಗಳು ಬಂದು ಊಳಿಡುತ್ತಾ ಅಪಸ್ವರದಿಂದ ಕಿರುಚುತ್ತಾ ಇರುವಂತೆ ಆಗಬಹುದು. ಆ ಸನ್ನಿವೇಶವು ಬಹಳ ದುಃಖವನ್ನು ಉಂಟುಮಾಡುತ್ತದೆ ಅಲ್ಲವೇ? ಹೀಗೆ ವೇದ ಸಂರಕ್ಷಣೆಗಾಗಿಯೂ ನೀನು ಸನ್ನ್ಯಾಸವನ್ನು ಸ್ವೀಕರಿಸಬೇಕು.

**ಅವತಾರಿಕೆ :** ಶ್ರೀವೇಂಕಟನಾಥರು ಸನ್ನ್ಯಾಸವನ್ನು ಸ್ವೀಕರಿಸದಿದ್ದರೆ ವೇದಾಂತ ಪುಸ್ತಕಗಳಿಗೆ ಆಗಬಹುದಾದ ಗತಿಯನ್ನು ವಿದ್ಯಾದೇವಿಯು ವಿವರಿಸಿದುದನ್ನು ಕವಿಗಳು ಈಗ ವರ್ಣಿಸುತ್ತಾರೆ.

**ವೃಂದಾನೀವ ಕ್ಷ್ಮಾಧರಾಣಾಂ ತದಾನೀಂ ಹೇತ್ಯಾ ಜಿಷ್ಣೋಶ್ಛಿನ್ನಪತ್ರಾಣಿ ಕೀಟೈಃ ।**
**ವೇದಾಂತಾನಾಂ ಪುಸ್ತಕಾನ್ಯಾರ್ಯ!**
**ಲೋಕೇ ಪರ್ಣೋಜ್ಝಾನಿ ಸ್ಯುರ್ಮಹಾಪಾತಕಾನಾಮ್ ॥೫೯॥**

**ತಾತ್ಪರ್ಯ :** ಎಲೈ ವೇಂಕಟಾರ್ಯನೇ! ನೀನು ಸನ್ನ್ಯಾಸವನ್ನು ಸ್ವೀಕರಿಸದಿದ್ದರೆ ಆಗುವ ದುರವಸ್ಥೆಯನ್ನು ಹೇಳುತ್ತೇನೆ, ಕೇಳು. ಹಿಂದೆ ಪರ್ವತಗಳು ರೆಕ್ಕೆಗಳಿಂದ ಕೂಡಿದ್ದು ಅಲ್ಲಲ್ಲಿ ಹಾರಿ ಹೋಗಿ ಕುಳಿತು ಗ್ರಾಮ ನಗರಗಳನ್ನು, ಜನರನ್ನು ನಾಶ ಮಾಡುತ್ತಿದ್ದಾಗ ಇಂದ್ರನು ತನ್ನ ವಜ್ರಾಯುಧದಿಂದ ಅವುಗಳ ರೆಕ್ಕೆಗಳನ್ನು ಕತ್ತರಿಸಿದ್ದನು. ರೆಕ್ಕೆ ಕತ್ತರಿಸಿಕೊಂಡ ಆ ಪರ್ವತಗಳು ಅಲ್ಲಲ್ಲಿ ಬಿದ್ದಿರುವಂತೆ, ನಿನ್ನಂತಹಾ ರಕ್ಷಕರು ಇಲ್ಲದಿದ್ದರೆ ಶುದ್ಧವಾದ ಪಾಠದಿಂದ ಕೂಡಿದ ಉತ್ತಮವಾದ ವೇದಾಂತಶಾಸ್ತ್ರದ ಗ್ರಂಥಗಳನ್ನು ಹುಳುಗಳು ತಿಂದು ಕತ್ತರಿಸಿ, ಆ ಗ್ರಂಥಗಳ ಪತ್ರಗಳನ್ನು ನಾಶಮಾಡಿ ಆ ಗ್ರಂಥಗಳು ಅಲ್ಲಿಯೇ ಅಸ್ತವ್ಯಸ್ತವಾಗಿ ಬೀಳುವಂತೆ ಆಗುತ್ತದೆ. (ಪುಸ್ತಕದ ಪತ್ರಗಳನ್ನೆಲ್ಲಾ ಹುಳುಗಳು ತಿಂದು ಕತ್ತರಿಸುವುದರಿಂದ ಪತ್ರ (ರೆಕ್ಕೆ) ಇಲ್ಲದ ಪರ್ವತಗಳಂತೆ ವೇದಾಂತ ಪುಸ್ತಕಗಳೂ ಅಲ್ಲಲ್ಲಿ ಬಿದ್ದು ರಕ್ಷಕರಿಲ್ಲದೇ ಶೋಚನೀಯ ಅವಸ್ಥೆಯನ್ನು ಹೊಂದುತ್ತವೆ.)

**ಅವತಾರಿಕೆ :** ಈಗ ವಿದ್ಯಾಲಕ್ಷ್ಮಿಯು ವೇಂಕಟನಾಥರು ಸನ್ನ್ಯಾಸವನ್ನು ಸ್ವೀಕರಿಸದಿದ್ದರೆ ಉಂಟಾಗುವ ಅನರ್ಥವನ್ನು ವಿವರಿಸಿದ್ದನ್ನು ಕವಿಗಳು ವರ್ಣಿಸುತ್ತಾರೆ.

**ಆಚಾರ್ಯಾಣಾಂ ಕರ್ಮಠನಾಂ ಮಠಾನಾಂ ವೇದ್ಯಾಂ ವಿದ್ಯಾಂ ತತ್ತ್ವಮಿಥ್ಯಾತ್ವವಾದಃ।**

(ಪಾಠಾಂತರ = ವೇದ್ಯಾಂ ವಿದ್ಯಾತತ್ತ್ವಮಿಥ್ಯಾತ್ವವಾದಃ)

**ಮರ್ತ್ಯಾಭಾವಾದ್ವಾಸನಾ ವಾಶಿತಾನಾಂ ತತ್ರತ್ಯಾನಾಮಂಡಜಾನಾಂ ತದಾನೀಮ್ ॥೬೦॥**

**ತಾತ್ಪರ್ಯ :** ಎಲೈ ವೇಂಕಟಾರ್ಯನೇ! ನೀನು ಸನ್ನ್ಯಾಸವನ್ನು ಸ್ವೀಕರಿಸದಿದ್ದರೆ ಉಂಟಾಗುವ ಮತ್ತೊಂದು ಅನರ್ಥವನ್ನು ಹೇಳುತ್ತೇನೆ ಕೇಳು! ಈಗ ಕರ್ಮನುಷ್ಠಾನಶೀಲರಾದ ಆಚಾರ್ಯರ ಮಠಗಳ ಜಗಲಿಗಳಲ್ಲಿ ಯಾವಾಗಲೂ ಜನಗಳು ಕುಳಿತಿರುತ್ತಾರೆ. ಅಲ್ಲಿ ವಿದ್ವಾಂಸರು ವಿದ್ಯಾರ್ಥಿಗಳು ಜಗತ್ತು ಸತ್ಯವೇ ಮಿಥ್ಯೆಯೇ ಇತ್ಯಾದಿಯಾಗಿ ಚರ್ಚೆಯನ್ನು ಮಾಡುತ್ತಿರುತ್ತಾರೆ. ಸಾಮಾನ್ಯ ಜನರು ಆ ಚರ್ಚೆಯನ್ನು ಸಂತೋಷದಿಂದ ಕೇಳುತ್ತಿರುತ್ತಾರೆ – ಆನಂದ ಪಡುತ್ತಾರೆ. ಆದರೆ ನೀನು ಸನ್ನ್ಯಾಸವನ್ನು ಸ್ವೀಕರಿಸದಿದ್ದರೆ ಈ ಮಠಗಳೆಲ್ಲವೂ ನಿರ್ಜನವಾಗುತ್ತದೆ. ಅಲ್ಲಿ ಜನ ಸಂಚಾರವೇ ಇರುವುದಿಲ್ಲ. ಆದರೆ ಪಕ್ಷಿಗಳು ಅಲ್ಲಿ ಸೂರುಗಳ ಕಂಭಗಳ ಮೇಲೆ ಕುಳಿತು ಅಸ್ಪಷ್ಟವಾದ ಗಟ್ಟಿಯಾದ ಚಿಲಿಪಿಲಿ ಧ್ವನಿಯನ್ನು ಮಾಡುತ್ತಿರುವಾಗ ಇದೇ ಜಗತ್ತು ಸತ್ಯವೋ ಮಿಥ್ಯೆಯೋ ಎಂಬ ವಾದ ಎಂದು ನಾವುಗಳು ತಿಳಿಯಬೇಕಾಗುತ್ತದೆ. (ಈ ರೀತಿಯಾಗಿ ವಿದ್ಯಾಲಕ್ಷ್ಮಿಯು ಹೇಳುತ್ತಿದ್ದಾಳೆ.) (ಪಾಠಾಂತರದಲ್ಲಿ – ನಿರ್ಜನವಾದ ಮಠಗಳ ಜಗಲಿಯಲ್ಲಿ ಹಕ್ಕಿಗಳ ಕೂಗಿನ ಗದ್ದಲವಾಗುತ್ತಿರುವಾಗ ಇದೇ ಹಿಂದೆ ಇಲ್ಲಿಯ ಪಂಡಿತರು ಮತ್ತು ವಿದ್ಯಾರ್ಥಿಗಳು ಜಗತ್ತು ಸತ್ಯವೋ ಅಥವಾ ಮಿಥ್ಯೆಯೋ ಎಂಬುದಾಗಿ ಚರ್ಚಿಸುತ್ತಿದ್ದಾಗ ಉಂಟಾಗುತ್ತಿದ್ದ ಸದ್ದು ಎಂಬುದಾಗಿ ತಿಳಿಯಬೇಕಾಗುತ್ತದೆ.) (ಪಂಡಿತರ ಮತ್ತು ವಿದ್ಯಾರ್ಥಿಗಳ ವಾಕ್ಯಾರ್ಥ ಗೋಷ್ಠಿಯು ನಡೆಯುವುದಿಲ್ಲ. ಕೇವಲ ಪಕ್ಷಿಗಳ ಗದ್ದಲವೇ ಇರುತ್ತದೆ ಎಂಬುದಾಗಿ ಅಭಿಪ್ರಾಯ.)

**ಅವತಾರಿಕೆ :** ಶ್ರೀವೇಂಕಟನಾಥಾಚಾರ್ಯನು ಸನ್ನ್ಯಾಸವನ್ನು ಸ್ವೀಕರಿಸದಿದ್ದರೆ ಗುರುಗಳ ದೇವತಾರ್ಚನ ಗೃಹಗಳು ಹೇಗಿರುತ್ತವೆ ಎಂಬುದಾಗಿ ವಿದ್ಯಾಲಕ್ಷ್ಮಿಯು ವಿವರಿಸಿದಳು ಎಂದು ಈಗ ಕವಿಗಳು ವರ್ಣಿಸುತ್ತಾರೆ.

**ದೇವಾಗಾರಂ ದೇಶಿಕಾನಾಂ ಪ್ರದೀಪಜ್ವಾಲಾಮಾಲಾದೀಪ್ಯಮಾನಂ ತದಾ ತು ।**
**ಸೂರ್ಯಾಲೋಕಂ ಸಂಶ್ರಿತೋಲೂಕಲೋಕಂ**
**ಸೂರ್ಯಾಲೋಕೇನೋಜ್ಝಿತಂ ನೋ ಲಭೇತ ॥೬೧॥**

**ತಾತ್ಪರ್ಯ :** ವೇಂಕಟನಾಥನೇ! ಈಗ ನಿನ್ನ ಗುರುಗಳ ದೇವತಾರ್ಚನ ಗೃಹದಲ್ಲಿ ಬಹಳ ದೀಪಗಳ ಸಾಲು ಜ್ವಾಜ್ವಲ್ಯಮಾನವಾಗಿ ಪ್ರಜ್ವಲಿಸುತ್ತಿದೆ. ದೇವತಾ ಗೃಹದಲ್ಲಿ ಕತ್ತಲೆಯು ಯಾವ ದಿಕ್ಕಿನಿಂದಲೂ ಸುಳಿಯುವಂತಿಲ್ಲ. ಪಂಡಿತ ಪಾಮರರು ಬಂದು ದೇವರ ದರ್ಶನ ಮಾಡಿ

**ಛಾತ್ರಾಗಾರಂ ಶಶ್ವದೇಕಪ್ರಕಾರಂ ವೇದೋದ್ಘೋಷೈರ್ವೈದಿಕಾನಾಮುದಾರಮ್ ।**
**ಗೋಮಾಯೂನಾಂ ಜಲ್ಪಕಾನಾಮಜಸ್ರಂ ಕಾರಾಗಾರಂ ಸರ್ವದೇಶೇ ತದಾನೀಮ್ ॥೫೮॥**

**ತಾತ್ಪರ್ಯ :** ವೇಂಕಟಾರ್ಯ! ಈಗ ಎಲ್ಲ ಮಠಗಳಲ್ಲಿಯೂ ವೇದಜ್ಞರು ತಮ್ಮ ತಮ್ಮ ಶಾಖೆಯ ವೇದಗಳನ್ನು ವಿದ್ಯಾರ್ಥಿಗಳಿಗೆ ಅಲ್ಲಲ್ಲಿ ಮಠಗಳಲ್ಲಿ ಬೋಧಿಸುತ್ತಿದ್ದಾರೆ. ಎಲ್ಲ ಪ್ರದೇಶಗಳಲ್ಲಿರುವ ಮಠಗಳೂ ವಿದ್ಯಾರ್ಥಿಗಳ ವೇದಘೋಷಗಳಿಂದ ಪ್ರತಿಧ್ವನಿಗೈಯುತ್ತಾ ಒಂದೇ ರೀತಿಯಿಂದ ಶೋಭಿಸುತ್ತಿವೆ. ಮಠ ಎಂಬ ಹೆಸರು ಅವುಗಳಿಗೆ ಅನ್ವರ್ಥಕವಾಗಿವೆ. ಮಠವೆಂದರೆ ವಿದ್ಯಾರ್ಥಿಗಳು ಮತ್ತು ಉಪಾಧ್ಯಾಯರು ವಿದ್ಯಾಧ್ಯಯನಕ್ಕಾಗಿ ಒಟ್ಟು ಸೇರಿ ಇರುವ ಸ್ಥಳವಾಗಿದೆ. ಹೀಗೆ ಅನ್ವರ್ಥಕವಾಗಿ ಶೋಭಿಸುತ್ತಿರುವ ಮಠಗಳು ನೀನು ಸನ್ನ್ಯಾಸವನ್ನು ಸ್ವೀಕರಿಸಿ ಈ ಅಧ್ಯಯನ ಪರಂಪರೆಯನ್ನು ಮುಂದುವರೆಸಿ ಕಾಪಾಡದಿದ್ದರೆ, ಬಂದೀಖಾನೆಯಂತಾಗುತ್ತವೆ, ಶೂನ್ಯವಾಗುತ್ತವೆ. ಆಗ ಅಲ್ಲಿ ನರಿಗಳು ಬಂದು ಊಳಿಡುತ್ತಾ ಅಪಸ್ವರದಿಂದ ಕಿರುಚುತ್ತಾ ಇರುವಂತೆ ಆಗಬಹುದು. ಆ ಸನ್ನಿವೇಶವು ಬಹಳ ದುಃಖವನ್ನು ಉಂಟುಮಾಡುತ್ತದೆ ಅಲ್ಲವೇ? ಹೀಗೆ ವೇದ ಸಂರಕ್ಷಣೆಗಾಗಿಯೂ ನೀನು ಸನ್ನ್ಯಾಸವನ್ನು ಸ್ವೀಕರಿಸಬೇಕು.

**ಅವತಾರಿಕೆ :** ಶ್ರೀವೇಂಕಟನಾಥರು ಸನ್ನ್ಯಾಸವನ್ನು ಸ್ವೀಕರಿಸದಿದ್ದರೆ ವೇದಾಂತ ಪುಸ್ತಕಗಳಿಗೆ ಆಗಬಹುದಾದ ಗತಿಯನ್ನು ವಿದ್ಯಾದೇವಿಯು ವಿವರಿಸಿದುದನ್ನು ಕವಿಗಳು ಈಗ ವರ್ಣಿಸುತ್ತಾರೆ.

**ವೃಂದಾನೀವ ಕ್ಷ್ಮಾಧರಾಣಾಂ ತದಾನೀಂ ಹೇತ್ಯಾ ಜಿಷ್ಣೋಶ್ಛಿನ್ನಪತ್ರಾಣಿ ಕೀಟೈಃ ।**
**ವೇದಾಂತಾನಾಂ ಪುಸ್ತಕಾನ್ಯಾರ್ಯ!**
**ಲೋಕೇ ಪರ್ಣೋರ್ಜ್ಝಾನಿ ಸ್ಯುರ್ಮಹಾಪಾತಕಾನಾಮ್ ॥೫೯॥**

**ತಾತ್ಪರ್ಯ :** ಎಲೈ ವೇಂಕಟಾರ್ಯನೇ! ನೀನು ಸನ್ನ್ಯಾಸವನ್ನು ಸ್ವೀಕರಿಸದಿದ್ದರೆ ಆಗುವ ದುರವಸ್ಥೆಯನ್ನು ಹೇಳುತ್ತೇನೆ, ಕೇಳು. ಹಿಂದೆ ಪರ್ವತಗಳು ರೆಕ್ಕೆಗಳಿಂದ ಕೂಡಿದ್ದು ಅಲ್ಲಲ್ಲಿ ಹಾರಿ ಹೋಗಿ ಕುಳಿತು ಗ್ರಾಮ ನಗರಗಳನ್ನು, ಜನರನ್ನು ನಾಶ ಮಾಡುತ್ತಿದ್ದಾಗ ಇಂದ್ರನು ತನ್ನ ವಜ್ರಾಯುಧದಿಂದ ಅವುಗಳ ರೆಕ್ಕೆಗಳನ್ನು ಕತ್ತರಿಸಿದ್ದನು. ರೆಕ್ಕೆ ಕತ್ತರಿಸಿಕೊಂಡ ಆ ಪರ್ವತಗಳು ಅಲ್ಲಲ್ಲಿ ಬಿದ್ದಿರುವಂತೆ, ನಿನ್ನಂತಹಾ ರಕ್ಷಕರು ಇಲ್ಲದಿದ್ದರೆ ಶುದ್ಧವಾದ ಪಾಠದಿಂದ ಕೂಡಿದ ಉತ್ತಮವಾದ ವೇದಾಂತಶಾಸ್ತ್ರದ ಗ್ರಂಥಗಳನ್ನು ಹುಳುಗಳು ತಿಂದು ಕತ್ತರಿಸಿ, ಆ ಗ್ರಂಥಗಳ ಪತ್ರಗಳನ್ನು ನಾಶಮಾಡಿ ಆ ಗ್ರಂಥಗಳು ಅಲ್ಲಿಯೇ ಅಸ್ತವ್ಯಸ್ತವಾಗಿ ಬೀಳುವಂತೆ ಆಗುತ್ತದೆ. (ಪುಸ್ತಕದ ಪತ್ರಗಳನ್ನೆಲ್ಲಾ ಹುಳುಗಳು ತಿಂದು ಕತ್ತರಿಸುವುದರಿಂದ ಪತ್ರ (ರೆಕ್ಕೆ) ಇಲ್ಲದ ಪರ್ವತಗಳಂತೆ ವೇದಾಂತ ಪುಸ್ತಕಗಳೂ ಅಲ್ಲಲ್ಲಿ ಬಿದ್ದು ರಕ್ಷಕರಿಲ್ಲದೇ ಶೋಚನೀಯ ಅವಸ್ಥೆಯನ್ನು ಹೊಂದುತ್ತವೆ.)

**ಅವತಾರಿಕೆ :** ಈಗ ವಿದ್ಯಾಲಕ್ಷ್ಮಿಯು ವೇಂಕಟನಾಥರು ಸನ್ಯಾಸವನ್ನು ಸ್ವೀಕರಿಸದಿದ್ದರೆ ಉಂಟಾಗುವ ಅನರ್ಥವನ್ನು ವಿವರಿಸಿದ್ದನ್ನು ಕವಿಗಳು ವರ್ಣಿಸುತ್ತಾರೆ.

**ಆಚಾರ್ಯಾಣಾಂ ಕರ್ಮಠನಾಂ ಮಠಾನಾಂ ವೇದ್ಯಾಂ ವಿದ್ಯಾಂ ತತ್ತ್ವಮಿಥ್ಯಾತ್ವವಾದಃ।**

(ಪಾಠಾಂತರ = ವೇದ್ಯಾಂ ವಿದ್ಯಾತತ್ತ್ವಮಿಥ್ಯಾತ್ವವಾದಃ)

**ಮರ್ತ್ಯಾಭಾವಾದ್ವಾಸನಾ ವಾಶಿತಾನಾಂ ತತ್ರತ್ಯಾನಾಮಂಡಜಾನಾಂ ತದಾನೀಮ್ ॥೬೦॥**

**ತಾತ್ಪರ್ಯ :** ಎಲೈ ವೇಂಕಟಾರ್ಯನೇ! ನೀನು ಸನ್ಯಾಸವನ್ನು ಸ್ವೀಕರಿಸದಿದ್ದರೆ ಉಂಟಾಗುವ ಮತ್ತೊಂದು ಅನರ್ಥವನ್ನು ಹೇಳುತ್ತೇನೆ ಕೇಳು! ಈಗ ಕರ್ಮನುಷ್ಠಾನಶೀಲರಾದ ಆಚಾರ್ಯರ ಮಠಗಳ ಜಗಲಿಗಳಲ್ಲಿ ಯಾವಾಗಲೂ ಜನಗಳು ಕುಳಿತಿರುತ್ತಾರೆ. ಅಲ್ಲಿ ವಿದ್ವಾಂಸರು ವಿದ್ಯಾರ್ಥಿಗಳು ಜಗತ್ತು ಸತ್ಯವೇ ಮಿಥ್ಯೆಯೇ ಇತ್ಯಾದಿಯಾಗಿ ಚರ್ಚೆಯನ್ನು ಮಾಡುತ್ತಿರುತ್ತಾರೆ. ಸಾಮಾನ್ಯ ಜನರು ಆ ಚರ್ಚೆಯನ್ನು ಸಂತೋಷದಿಂದ ಕೇಳುತ್ತಿರುತ್ತಾರೆ – ಆನಂದ ಪಡುತ್ತಾರೆ. ಆದರೆ ನೀನು ಸನ್ಯಾಸವನ್ನು ಸ್ವೀಕರಿಸದಿದ್ದರೆ ಈ ಮಠಗಳೆಲ್ಲವೂ ನಿರ್ಜನವಾಗುತ್ತದೆ. ಅಲ್ಲಿ ಜನ ಸಂಚಾರವೇ ಇರುವುದಿಲ್ಲ. ಆದರೆ ಪಕ್ಷಿಗಳು ಅಲ್ಲಿ ಸೂರುಗಳ ಕಂಭಗಳ ಮೇಲೆ ಕುಳಿತು ಅಸ್ಪಷ್ಟವಾದ ಗಟ್ಟಿಯಾದ ಚಿಲಿಪಿಲಿ ಧ್ವನಿಯನ್ನು ಮಾಡುತ್ತಿರುವಾಗ ಇದೇ ಜಗತ್ತು ಸತ್ಯವೋ ಮಿಥ್ಯೆಯೋ ಎಂಬ ವಾದ ಎಂದು ನಾವುಗಳು ತಿಳಿಯಬೇಕಾಗುತ್ತದೆ. (ಈ ರೀತಿಯಾಗಿ ವಿದ್ಯಾಲಕ್ಷ್ಮಿಯು ಹೇಳುತ್ತಿದ್ದಾಳೆ.) (ಪಾಠಾಂತರದಲ್ಲಿ – ನಿರ್ಜನವಾದ ಮಠಗಳ ಜಗಲಿಯಲ್ಲಿ ಹಕ್ಕಿಗಳ ಕೂಗಿನ ಗದ್ದಲವಾಗುತ್ತಿರುವಾಗ ಇದೇ ಹಿಂದೆ ಇಲ್ಲಿಯ ಪಂಡಿತರು ಮತ್ತು ವಿದ್ಯಾರ್ಥಿಗಳು ಜಗತ್ತು ಸತ್ಯವೋ ಅಥವಾ ಮಿಥ್ಯೆಯೋ ಎಂಬುದಾಗಿ ಚರ್ಚಿಸುತ್ತಿದ್ದಾಗ ಉಂಟಾಗುತ್ತಿದ್ದ ಸದ್ದು ಎಂಬುದಾಗಿ ತಿಳಿಯಬೇಕಾಗುತ್ತದೆ.) (ಪಂಡಿತರ ಮತ್ತು ವಿದ್ಯಾರ್ಥಿಗಳ ವಾಕ್ಯಾರ್ಥ ಗೋಷ್ಠಿಯು ನಡೆಯುವುದಿಲ್ಲ. ಕೇವಲ ಪಕ್ಷಿಗಳ ಗದ್ದಲವೇ ಇರುತ್ತದೆ ಎಂಬುದಾಗಿ ಅಭಿಪ್ರಾಯ.)

**ಅವತಾರಿಕೆ :** ಶ್ರೀವೇಂಕಟನಾಥಾಚಾರ್ಯನು ಸನ್ಯಾಸವನ್ನು ಸ್ವೀಕರಿಸದಿದ್ದರೆ ಗುರುಗಳ ದೇವತಾರ್ಚನ ಗೃಹಗಳು ಹೇಗಿರುತ್ತವೆ ಎಂಬುದಾಗಿ ವಿದ್ಯಾಲಕ್ಷ್ಮಿಯು ವಿವರಿಸಿದಳು ಎಂದು ಈಗ ಕವಿಗಳು ವರ್ಣಿಸುತ್ತಾರೆ.

**ದೇವಾಗಾರಂ ದೇಶಿಕಾನಾಂ ಪ್ರದೀಪಜ್ವಾಲಾಮಾಲಾದೀಪ್ಯಮಾನಂ ತದಾ ತು ।**
**ಸೂರ್ಯಾಲೋಕಂ ಸಂಶ್ರಿತೋಲೂಕಲೋಕಂ**
**ಸೂರ್ಯಾಲೋಕೇನೋಜ್ಝಿತಂ ನೋ ಲಭೇತ ॥೬೧॥**

**ತಾತ್ಪರ್ಯ :** ವೇಂಕಟನಾಥನೇ! ಈಗ ನಿನ್ನ ಗುರುಗಳ ದೇವತಾರ್ಚನ ಗೃಹದಲ್ಲಿ ಬಹಳ ದೀಪಗಳ ಸಾಲು ಜ್ವಾಜ್ವಲ್ಯಮಾನವಾಗಿ ಪ್ರಜ್ವಲಿಸುತ್ತಿದೆ. ದೇವತಾ ಗೃಹದಲ್ಲಿ ಕತ್ತಲೆಯು ಯಾವ ದಿಕ್ಕಿನಿಂದಲೂ ಸುಳಿಯುವಂತಿಲ್ಲ. ಪಂಡಿತ ಪಾಮರರು ಬಂದು ದೇವರ ದರ್ಶನ ಮಾಡಿ

ಧನ್ಯರಾಗಿ ಹೋಗುತ್ತಿದ್ದಾರೆ. ಒಂದು ವೇಳೆ ನೀನು ಸನ್ನ್ಯಾಸವನ್ನು ಸ್ವೀಕರಿಸದಿದ್ದರೆ, ಆಗ ಈ ದೇವತಾ ಗೃಹದಲ್ಲಿ ಗೂಬೆಗಳ ಗುಂಪು ಬಂದು ವಾಸ ಮಾಡುತ್ತವೆ. ಇಲ್ಲಿ ದೀಪಗಳನ್ನು ಹಚ್ಚುವುದಿಲ್ಲವಾದುದರಿಂದಲೂ, ಹಚ್ಚುವವರು ಯಾರೂ ಇಲ್ಲದಿರುವುದರಿಂದಲೂ, ಸೂರ್ಯನ ಪ್ರಕಾಶವು ಇರುವುದಿಲ್ಲವಾದುದರಿಂದಲೂ ಅಂಧಕಾರ ಪೂರ್ಣವಾದ ಈ ದೇವತಾಗೃಹವು ಸೂರಿಗಳ (ಪಂಡಿತರ) ದರ್ಶನಕ್ಕೆ ಯೋಗ್ಯವಾಗುವುದಿಲ್ಲ. (ತ್ವಯಾ ಸನ್ನ್ಯಾಸೇಽನಂಗೀಕೃತೇ ದೀಪಪ್ರಕಾಶರಹಿತಂ ಘೂಕಲೋಕಾವೃತಂ ಅಂಧಕಾರನಿಬಿಡಂದೇವಾಗಾರಂ ಭವತಿ – ಗುರುಸೇವಾ ವ್ಯಾಖ್ಯಾ) (ನೀನು ಸನ್ನ್ಯಾಸವನ್ನು ಅಂಗೀಕರಿಸದಿದ್ದರೆ ದೇವಾಗಾರವು ದೀಪಪ್ರಕಾಶವಿಲ್ಲದೇ, ಗೂಬೆಗಳ ಹಿಂಡುಗಳಿಂದ ಆವೃತವಾಗಿ ಅಂಧಕಾರ ಪರಿಪೂರ್ಣವಾಗಿ ಆಗುವುದು.)

**ಅವತಾರಿಕೆ** : ಈಗ ವಿದ್ಯಾಲಕ್ಷ್ಮಿಯು ಗುರುಗಳ ದೇವತಾ ಗೃಹದ ಅವಸ್ಥೆಯು ಹೇಗಾಗುವುದೆಂಬುದನ್ನು ಮತ್ತಷ್ಟು ವರ್ಣಿಸಿದಳೆಂದು ಕವಿಗಳು ಹೇಳುತ್ತಾರೆ.

**ಹಂತೇದಾನೀಂ ದೇವತಾಯಾ ಗುರೂಣಾಮರ್ಚಾಗಾರಂ ಗುಗ್ಗುಲುವ್ಯೂಹಧೂಮ್ರೈಃ ।**
**ದೀಪೈರ್ದೀಪ್ತೈರ್ದೀಪ್ಯಮಾನಂ ತದಾನೀಂ ನಿತ್ಯಾಸಕ್ತಾಲಾತಭೂತಾಸ್ಯದೀಪ್ತೈಃ ॥೬೨॥**

**ತಾತ್ಪರ್ಯ** : ವೇಂಕಟನಾಥನೇ! ಗುರುಗಳ ದೇವಪೂಜಾ ಗೃಹದಲ್ಲಿ ಈಗ ದಶಾಂಗದೂಪದ ಹೊಗೆಯು ಹರಡಿ, ಆ ಪ್ರದೇಶವೆಲ್ಲವೂ ಸುವಾಸನೆಯಿಂದ ತುಂಬಿದೆ. ತುಂಬಾ ಬೆಳಕನ್ನು ಬೀರುವ ದೀಪಗಳಿಂದ ಆ ಪ್ರದೇಶವೆಲ್ಲವೂ ಪ್ರಕಾಶಮಾನವಾಗಿದೆ. ನೀನು ಸನ್ನ್ಯಾಸವನ್ನು ಅಂಗೀಕರಿಸದಿದ್ದರೆ ಆ ದೇವತಾಗೃಹದಲ್ಲಿ ಪೂಜೆ ನಡೆಯುವುದಿಲ್ಲ. ಧೂಪದ ಹೊಗೆಯು ಇರುವುದಿಲ್ಲ. ಅಲ್ಲಿ ಕೊಳ್ಳಿದೆವ್ವಗಳು ವಾಸಮಾಡುತ್ತವೆ. ಅವುಗಳು ತಮ್ಮ ಬಾಯೊಳಗೆ ಕೊಳ್ಳಿಯನ್ನು ಕಚ್ಚಿಕೊಂಡು, ಆ ಕೊಳ್ಳಿಯ ಹೊಗೆಯನ್ನು ಉಗುಳುತ್ತಾ, ತಮ್ಮ ಬಳಿಯಲ್ಲಿರುವ ಕೊಳ್ಳಿಗಳ ಬೆಳಕಿನಿಂದಲೇ ನಿನ್ನ ಗುರುಗಳ ದೇವಪೂಜಾಗೃಹವನ್ನು ಬೆಳಗುವ ಸಂದರ್ಭವು ಒದಗುತ್ತದೆ (ಬರುತ್ತದೆ.) (ದೇವತೆಗಳ ಸನ್ನಿಧಾನಪಾತ್ರವಾದ ದೇವಪೂಜಾ ಗೃಹವು ದೆವ್ವಗಳ ವಾಸಸ್ಥಾನವಾಗುತ್ತದೆ. ಅಯ್ಯೋ ಎಂಥಹಾ ದುಃಖಕರವಾದ ಸಂದರ್ಭವು ಒದಗಿ ಬರಲಿದೆ ಎಂಬುದಾಗಿ ವಿದ್ಯಾಲಕ್ಷ್ಮಿಯು ಹೇಳಿದಳು.)

**ಅವತಾರಿಕೆ** : ಈಗ ಕವಿಗಳು ವಿದ್ಯಾಲಕ್ಷ್ಮಿಯು ವೇಂಕಟನಾಥರಿಗೆ ಸನ್ನ್ಯಾಸವನ್ನು ಸ್ವೀಕರಿಸದಿದ್ದರೆ ಉಂಟಾಗಬಹುದಾದ ಇನ್ನೊಂದು ದುರವಸ್ಥೆಯನ್ನು ಬೇರೊಂದು ರೀತಿಯಲ್ಲಿ ವರ್ಣಿಸಿದುದನ್ನು ತಿಳಿಸುತ್ತಾರೆ.

**ಉಲ್ಲೋಚಾನಾಮುನ್ನತಾನಾಂ ಪ್ರಕೀರ್ಣೈಃ ಧೂಲೀವೃಂದೈರ್ಧೂಸರಾ ಕೇತಕಾನಾಮ್ ।**
**ವೇದೀ ಸ್ಯಾತ್ತದ್ದೇವತಾಮಂದಿರಾಣಾಂ ರಥ್ಯಾಧೂಲೀಧೂಮ್ರವರ್ಣಾ ತದಾನೀಮ್ ॥೬೩॥**

**ತಾತ್ಪರ್ಯ :** ದೇವಮಂದಿರಗಳಲ್ಲಿ ದೇವರನ್ನು ಕೂಡಿಸುವ ಜಗಲಿಯ (ಕಟ್ಟೆಯ) ಮೇಲ್ಭಾಗದಲ್ಲಿ ರೇಶ್ಮೆಯ ಮೇಲ್ಕಟ್ಟನ್ನು ಕಟ್ಟಿ, ಮೇಲ್ಕಟ್ಟಿನಿಂದ ತಾಳೇ ಹೂವುಗಳನ್ನು ಕೆಳಕ್ಕೆ ಜೋತು ಬಿಟ್ಟು ಅಲಂಕಾರ ಮಾಡಿರುತ್ತಾರೆ. ಆ ತಾಳೇ ಹೂವುಗಳ ಪರಾಗಗಳಿಂದ ದೇವರ ಕಟ್ಟೆಯು ಹಳದೀ ಬಿಳೀ ಬಣ್ಣದ ಸುವಾಸನೆಯಾದ ಪುಡಿಯಿಂದ ಅಲಂಕೃತವಾದಂತೆ ಈಗ ಕಾಣುತ್ತಿದೆ. ವೇಂಕಟಾರ್ಯ! ನೀನು ಸನ್ಯಾಸಕ್ಕೆ ಒಪ್ಪಿಕೊಳ್ಳದ ಪಕ್ಷದಲ್ಲಿ, ಆ ದೇವಮಂದಿರಗಳಲ್ಲಿ ದೇವರನ್ನು ಕೂಡಿಸುವುದಿಲ್ಲ. ಧೂಳು ಹೊಡೆಯುವುದಿಲ್ಲ. ಮೇಲ್ಕಟ್ಟನ್ನು ಕಟ್ಟಿ ತಾಳೇ ಹೂವುಗಳಿಂದ ಅಲಂಕರಿಸುವುದಿಲ್ಲ. ರಾಜಮಾರ್ಗದ ಧೂಳು ಗಾಳಿಯಿಂದ ಹಾರಿ ರಾಶಿಯಾಗಿ ಬಂದು ಅಲ್ಲಿ ಬೀಳುತ್ತದೆ. ಹೀಗಾಗಿ ದೇವಮಂದಿರಗಳೂ ಹಾಳು ಬೀಳುತ್ತದೆ. (ಇಲ್ಲಿ ಉತ್ಸೂತ್ರತ್ವಂ ಕೇವಲಂ ಎಂಬಲ್ಲಿಂದ ಉಲ್ಲೋಚಾನಾಂ ಎಂಬುವವರೆಗಿನ ಆರನೇ ಸರ್ಗದ 55 ರಿಂದ 63ರವರೆಗೆ ಮುಂದೆ ಆಗಬಹುದಾದ ವಿಷಯಗಳ ಸಾಕ್ಷಾತ್ಕಾರವನ್ನು ವರ್ಣಿಸಿರುವುದರಿಂದ ಭಾವಿಕಾಲಂಕಾರ – ಭಾವಿಕಂ ಭೂತಭವ್ಯಾರ್ಥಸಾಕ್ಷಾತ್ಕರಸ್ಯ ವರ್ಣನಂ ಎಂಬುದಾಗಿ ಅದರ ಲಕ್ಷಣ.)

## ಸನ್ಯಾಸ ಸ್ವೀಕಾರ ಪಕ್ಷದಲ್ಲಿ ವಿದ್ಯಾದೇವಿಯ ಹರ್ಷಾವಿಷ್ಕಾರ

**ಅವತಾರಿಕೆ :** ಈಗ ಕವಿಗಳು ಶ್ರೀವೇಂಕಟನಾಥರು ಸನ್ಯಾಸವನ್ನು ಸ್ವೀಕರಿಸಿದ ಪಕ್ಷದಲ್ಲಿ ಅದರಿಂದ ತನಗೆ ಉಂಟಾಗುವ ಸಂತೋಷವನ್ನು ವಿದ್ಯಾದೇವಿಯು ಸೂಚಿಸಿದುದನ್ನು ವರ್ಣಿಸುತ್ತಾರೆ.

**ನೇದಾನೀಮೇತಾದೃಶಃ ಸಂಪ್ರಮೋದಃ ಪರಿವ್ರಾಜ್ಯಂ ಯಾದೃಶಃ ಪ್ರಾಪ್ಯತೇ ಚೇತ್ ।**
**ಸಂಪ್ರಾಪ್ತಾ ತ್ವಾಂ ನ ತ್ಯಜಾಮಿ ಕ್ಷಣಂ ವಾ ಸ್ವಪ್ನೇ**
**ವಾಽಹಂ ನ ಸ್ಮರಾಮ್ಯನ್ಯಭಿಕ್ಷೋಃ ॥೬೪॥**

**ತಾತ್ಪರ್ಯ :** ವೇಂಕಟಾರ್ಯ! ನೀನು ಸನ್ಯಾಸವನ್ನು ಸ್ವೀಕರಿಸಿದರೆ ನನಗೆ ಎಂತಹಾ ಆನಂದ ಉಂಟಾಗುವುದೋ ಅಂತಹಾ ಆನಂದವು ಈಗ ನೀನು ಗೃಹಸ್ಥಾಶ್ರಮಿಯಾಗಿಯೇ ಇರುವಾಗ ಆಗುತ್ತಿಲ್ಲ. ನೀನು ಸನ್ಯಾಸವನ್ನು ಸ್ವೀಕರಿಸಿದರೆ ನಾನು ನಿನ್ನನ್ನೇ ಆಶ್ರಯಿಸುತ್ತೇನೆ. ಒಂದು ಕ್ಷಣಮಾತ್ರವೂ ನಿನ್ನನ್ನು ಅಗಲಿರುವುದಿಲ್ಲ. ನಿನ್ನ ಹೊರತು ಬೇರೆ ಯಾವ ಸನ್ಯಾಸಿಯನ್ನು ಸ್ವಪ್ನದಲ್ಲಿಯೂ ಸ್ಮರಿಸುವುದಿಲ್ಲ.

## ಮಂತ್ರೋಪದೇಶ ಮಾಡಿ ವಿದ್ಯಾದೇವಿಯ ಅಂತರ್ಧಾನ

**ಅವತಾರಿಕೆ :** ಈಗ ಕವಿಗಳು ವಿದ್ಯಾದೇವಿಯು ಈ ರೀತಿಯಾಗಿ ಶ್ರೀವೇಂಕಟನಾಥರಿಗೆ

ಉಪದೇಶಿಸಿ ತನ್ನ ಮಾತನ್ನು ಉಪಸಂಹರಿಸಿ (ಮುಗಿಸಿ) ಅಂತರ್ಧಾನಳಾದುದುದನ್ನು ತಿಳಿಸುತ್ತಾರೆ.

**ವಿಧ್ಯಾಯತ್ತಂ ತೇ ಯತಿತ್ವಂ ನ ಶಕ್ಯಂ ತ್ಯಕ್ತುಂ ಪ್ರಾಪ್ತಂ ತ್ವದ್ವಶತ್ವಂ ಮಮಾಪಿ ।**
**ಇತ್ಯುಕ್ತ್ವಾ ಸಾ ಮಂತ್ರಮಸ್ಯೋಪದಿಶ್ಯ ಸ್ವೀಯಂ ದೇವೀ ಪಶ್ಯತೋಽಂತರ್ದಧೇಽದ್ಧಾ ॥೬೫॥**

**ತಾತ್ಪರ್ಯ :** ಎಲೈ ವೇಂಕಟನಾಥ! ನೀನು ಸನ್ನ್ಯಾಸಿಯಾಗಬೇಕೆಂಬುದು ದೈವವು ನಿನ್ನ ಹಣೆಯಲ್ಲಿ ಬರೆದ ಬರಹ. ಅದನ್ನು ನೀನು ಬಿಡಲು ಅದರಿಂದ ತಪ್ಪಿಸಿಕೊಳ್ಳಲು ಸಾಧ್ಯವಿಲ್ಲ. ಅದೇ ರೀತಿಯಲ್ಲಿ ನಾನು ನಿನ್ನ ಅಧೀನದಲ್ಲಿ ಇರಬೇಕೆಂಬುದೂ ವಿಧಿಯಿಂದ ನಿಯತವಾಗಿದೆ. ಅದರಿಂದ ತಪ್ಪಿಸಿಕೊಳ್ಳಲು ನನಗೂ ಸಾಧ್ಯವಿಲ್ಲ. "ನೀನು ಸನ್ನ್ಯಾಸಿ ಆಗಲೇಬೇಕು, ವಿದ್ಯಾಧಿದೇವತೆಯಾದ ನಾನು ನಿನ್ನ ಅಧೀನದಲ್ಲಿ ಇರಬೇಕು ಎಂಬುದು ವಿಧಿಯಿಂದ ಮೊದಲೇ ಕ್ಲೃಪ್ತವಾದ ನಿರ್ಣಯ."

ಈ ರೀತಿಯಾಗಿ ಹೇಳಿ ಆ ದೇವಿಯು ತನ್ನ ಮಂತ್ರವನ್ನು ಶ್ರೀವೇಂಕಟನಾಥರ ಕಿವಿಯಲ್ಲಿ ಜಪಿಸಿ ಉಪದೇಶಿಸಿದಳು. ಅನಂತರ ಶ್ರೀವೇಂಕಟನಾಥಾಚಾರ್ಯರು ನೋಡುತ್ತಿರುವಾಗಲೇ ಆ ದೇವಿಯು ಅಂತರ್ಧಾನ ಹೊಂದಿದಳು.

**ಅವತಾರಿಕೆ :** ಈ ರೀತಿಯಾಗಿ ತಮ್ಮ ಗುರುಗಳಾದ ಶ್ರೀಸುಧೀಂದ್ರತೀರ್ಥರಿಂದಲೂ, ವಿದ್ಯಾಧಿದೇವತೆಯಾದ ವಾಗ್ದೇವಿಯಿಂದಲೂ ಉಪದೇಶ ಪಡೆದ ಶ್ರೀವೇಂಕಟನಾಥಾಚಾರ್ಯರು ತಮ್ಮ ಮಗನ ಉಪನಯನ ಮಾಡಲು ಉದ್ಯುಕ್ತರಾದರು ಎಂಬುದಾಗಿ ಈಗ ಕವಿಗಳು ವರ್ಣಿಸುತ್ತಾರೆ.

**ಭೂಯೋ ಭೂಯೋ ಬೋಧಿತಸ್ಸಾಧಕೈಸ್ಸೈಃ ಪಾರಿವ್ರಾಜ್ಯಂ ಬಾಧಕೈರನ್ಯಥಾತ್ವೇ ।**
**ಸ್ಮಾರಂ ಸ್ಮಾರಂ ದೇವತೋಕ್ತಂ ಚ ವಿದ್ವಾನ್**
**ಉದ್ಯುಂಕ್ತೇ ಸ್ಮ ಸ್ವಾತ್ಮಜಸ್ಯೋಪನೀತೌ ॥೬೬॥**

**ತಾತ್ಪರ್ಯ :** ಶ್ರೀವೇಂಕಟನಾಥಾಚಾರ್ಯರು ಸನ್ನ್ಯಾಸವನ್ನು ಸ್ವೀಕರಿಸಲು ಸಾಧಕವಾದ ಯುಕ್ತಿಗಳನ್ನೂ, ತಾವು ಸನ್ನ್ಯಾಸವನ್ನು ಸ್ವೀಕರಿಸದಿದ್ದರೆ ಉಂಟಾಗಬಹುದಾದ ತೊಂದರೆಗಳನ್ನೂ, ಸಮರ್ಥಿಸುವ ಬಾಧಕ ಯುಕ್ತಿಗಳನ್ನೂ, ಹೇಳಿ ಶ್ರೀಸುಧೀಂದ್ರತೀರ್ಥರು ಶ್ರೀವೇಂಕಟನಾಥರನ್ನು ಸನ್ನ್ಯಾಸ ಸ್ವೀಕಾರಕ್ಕೆ ಒಪ್ಪುವಂತೆ ಮನ ಒಲಿಸಿದರು. ಅನೇಕ ರೀತಿಯಲ್ಲಿ ಬೋಧಿಸಿದರು. ಸ್ವಪ್ನದಲ್ಲಿ ವಾಗ್ದೇವಿ ಶ್ರೀಸರಸ್ವತಿಯು ಉಪದೇಶಿಸಿದ ವಿಷಯವನ್ನೂ, ಗುರುಗಳ ಉಪದೇಶವನ್ನೂ, ಪುನಃ ಪುನಃ ನೆನಪು ಮಾಡಿಕೊಂಡು ಪ್ರಾಜ್ಞರಾದ ಶ್ರೀವೇಂಕಟನಾಥರು ಸನ್ನ್ಯಾಸ ಸ್ವೀಕರಿಸಲು ಮನಸ್ಸು ಮಾಡಿ ಅದಕ್ಕೆ ಮೊದಲು ತಮ್ಮ ಪುತ್ರ ಲಕ್ಷ್ಮೀನಾರಾಯಣನ ಉಪನಯನವನ್ನು ಮಾಡಿ ಮುಗಿಸಲು ಉದ್ಯುಕ್ತರಾದರು.

**ಅವತಾರಿಕೆ :** ಈಗ ಕವಿಗಳು ಲಕ್ಷ್ಮೀನಾರಾಯಣನ ಉಪನಯನವು ಸಂಪನ್ನವಾದ ರೀತಿಯನ್ನೂ, ಉಪನಯನದ ಸಂದರ್ಭದಲ್ಲಿ ನಡೆದ ವಿಶೇಷ ಸಂಘಟನೆಯನ್ನು ಕರುಣಾಪೂರ್ಣವಾಗಿ ವರ್ಣಿಸುತ್ತಾರೆ.

**ಸೋಮಾದಿಭ್ಯೋ ದೇವತಾಭ್ಯಃ ಪ್ರದಾನಂ ಪುತ್ರಸ್ಯೈತನ್ಮುಖ್ಯಮೇವಂವಿಧಸ್ಯ ।**
**ಲೋಕೇ ಗೌಣಂ ನೂನಮಿತ್ಥಂ ವದಂತಂ ದೃಷ್ಟ್ವಾ**
**ಕೋ ವಾ ನಾಶ್ರು ಸರ್ವೋ ಮುಮೋಚ ॥೬೭॥**

**ತಾತ್ಪರ್ಯ :** ಉಪನಯನದಲ್ಲಿ, ಬ್ರಹ್ಮೋಪದೇಶಕ್ಕಿಂತ ಪೂರ್ವದಲ್ಲಿ, ಅಗ್ನಿ, ಸವಿತಾ, ಸೋಮ, ಈ ದೇವತೆಗಳಿಗೆ ಮಂತ್ರಪೂರ್ವಕವಾಗಿ, ತಂದೆಯು ಪುತ್ರನನ್ನು ಸಮರ್ಪಿಸಬೇಕು ಎಂಬ ವಿಧಿಯಿದೆ. ಉಪನಯನದಲ್ಲಿ ಎಲ್ಲರೂ ಹೀಗೆಯೇ ಮಾಡುತ್ತಾರೆ. ಆದರೆ ಇದು ಮುಖ್ಯವಾದ ಸಮರ್ಪಣವಲ್ಲ. ಒಂದು ಉಪಚಾರದ ಮಾತು, "ಅಗ್ನಿ ಮೊದಲಾದ ದೇವತೆಗಳೇ! ರಕ್ಷಣೆಗಾಗಿ ಈ ನನ್ನ ಪುತ್ರನನ್ನು ನಿಮಗೆ ಸಮರ್ಪಿಸಿದ್ದೇನೆ" ಎಂಬ ಯಜಮಾನನ ಮಾತು ವಿಧಿ ವಿಧಾನಗಳ ಆಚರಣೆ ಮಾತ್ರ. ಏಕೆಂದರೆ ಲೋಕದಲ್ಲಿ ಉಪನೀತನಾಗುವ ಬಾಲಕನಿಗೆ ತಾಯಿ ತಂದೆ ಮುಂತಾದ ಮುಖ್ಯ ರಕ್ಷಕರು ಇರುತ್ತಾರೆ. ಪ್ರಕೃತದಲ್ಲಿಯಾದರೋ ಹಾಗಲ್ಲ. "ನಾನು ಸನ್ನ್ಯಾಸವನ್ನು ಸ್ವೀಕರಿಸಿದ ಮೇಲೆ, ಈ ಬಾಲಕನ ತಾಯಿಗೆ ಇವನನ್ನು ಕಾಪಾಡುವ ಸಾಮರ್ಥ್ಯವಿಲ್ಲ! ಬೇರೆ ಯಾರೂ ರಕ್ಷಕರಿಲ್ಲ!! ಇಂತಹಾ ನನ್ನ ಮಗನನ್ನು ದೇವತೆಗಳ ರಕ್ಷಣೆಗೆ ಬಿಟ್ಟುಕೊಡುವುದು ಮುಖ್ಯವಾಗಿದೆ" ಎಂದು ಹೇಳುತ್ತಾ ಶ್ರೀವೇಂಕಟನಾಥರು ಮಗನ ಉಪನಯನ ಮಾಡುತ್ತಿದ್ದರು. "ನಾನು ಸನ್ನ್ಯಾಸಿಯಾದ ಮೇಲೆ ಬೇರೆ ರಕ್ಷಕರಿಲ್ಲದ ಈ ಬಾಲಕನನ್ನು ದೇವತೆಗಳೇ ಕಾಪಾಡಲಿ" ಎಂದು ದೀನ ವಚನವನ್ನು ಆಡುತ್ತಿರುವ ಶ್ರೀವೇಂಕಟನಾಥರನ್ನು ನೋಡಿ, ಅಲ್ಲಿ ಸಮಾವೇಶಗೊಂಡಿದ್ದ ದೊಡ್ಡ ಜನಸಮುದಾಯವೆಲ್ಲಾ ಕಣ್ಣೀರು ಸುರಿಸಿದರು, ಎಲ್ಲರೂ ದುಃಖಿತರಾದರು.

**ವಿಶೇಷಾಂಶ :** ಅಗ್ನಯೇ ತ್ವಾ ಪ್ರತಿದದಾಮಿ = ಬಾಲಕನೇ! ನಿನ್ನನ್ನು ಅಗ್ನಿಯ ರಕ್ಷಣೆಗೆ ಒಪ್ಪಿಸುತ್ತೇನೆ. ಸವಿತ್ರೇ ತ್ವಾ ಪ್ರತಿದದಾಮಿ = ಸವಿತೃ ದೇವತೆಗೆ (ಸೂರ್ಯನಿಗೆ) ನಿನ್ನನ್ನು ಸಮರ್ಪಿಸುತ್ತೇನೆ. ಸೋಮಾಯ ತ್ವಾ ಪ್ರತಿದದಾಮಿ–ಸೋಮದೇವತೆಗೆ (ರಕ್ಷಣೆಗಾಗಿ) ನಿನ್ನನ್ನು ಸಮರ್ಪಿಸುತ್ತೇನೆ ಎಂಬ ಈ ಮಂತ್ರಗಳನ್ನು ಹೇಳಿ ಉಪನಯನವಾಗುತ್ತಿರುವ ಬಾಲಕನನ್ನು ಅಗ್ನಿಸವಿತೃಸೋಮ ದೇವತೆಗಳಿಗೆ ಸಮರ್ಪಿಸಬೇಕು ಎಂಬ ವಿಧಿಯಿದೆ.

**ಅವತಾರಿಕೆ :** ಶ್ರೀ ವೇಂಕಟನಾಥಾಚಾರ್ಯರಿಗೆ ಕುಂಭಕೋಣದಲ್ಲಿಯೇ ಸನ್ನ್ಯಾಸ ನೀಡಿದರೆ ಅವರ ಪತ್ನಿಯಾದ ಸರಸ್ವತೀದೇವಿಯು ಏನಾದರೂ ಅನಾಹುತ ಮಾಡಿಕೊಳ್ಳಲು ಪ್ರಯತ್ನಿಸಬಹುದೆಂದು ಯೋಚಿಸಿ ಶ್ರೀಸುಧೀಂದ್ರತೀರ್ಥರು ಶ್ರೀವೇಂಕಟನಾಥಾಚಾರ್ಯರನ್ನು ತಂಜಾವೂರಿಗೆ ಕರೆದುಕೊಂಡು ಹೋದರು ಎಂಬುದಾಗಿ ಕವಿಗಳು ಈಗ ವರ್ಣಿಸುತ್ತಾರೆ.

**ಸನ್ನ್ಯಾಸಶ್ಚೇದ್ದೀಯತೇಽತ್ರೈವ ಮೋಹಾತ್ ಭಾರ್ಯಾ**
**ಕುರ್ಯಾತ್ ಸಾಹಸಂ ತಸ್ಯ ನೂನಮ್ ।**
**ಇತ್ಯಾಲೋಚ್ಯ ಶ್ರೀಸುಧೀಂದ್ರೋಽಥ ಯೋಗೀ ಸಾಕಂ**
**ಯಾ(ಪ್ರಾ)ಯಾತ್ತೇನ ತಂಜಾಪುರೀಂ ಸಃ ॥೬೮॥**

**ತಾತ್ಪರ್ಯ :** ಈ ಕುಂಭಕೋಣ ನಗರದಲ್ಲಿ ಶ್ರೀವೇಂಕಟನಾಥಾಚಾರ್ಯರಿಗೆ ಆಶ್ರಮವನ್ನು ನೀಡಿದರೆ ಅವರ ಪತ್ನಿಯಾದ ಸರಸ್ವತೀದೇವಿಯು ಪತಿಯ ಮೇಲಿನ ಮೋಹದಿಂದ ಅಂಧಳಾಗಿ, ನಿರಾಸೆಗೊಂಡು ಆತ್ಮಹತ್ಯೆಯಂತಹ ದುಸ್ಸಾಹಸಕ್ಕೆ ಮನಸ್ಸು ಮಾಡಬಹುದೆಂದು ಶ್ರೀಸುಧೀಂದ್ರತೀರ್ಥರು ಚಿಂತಿಸಿದರು. ಇದು ಸತ್ಯವಾದ ವಿಷಯ. ಆದುದರಿಂದ ಕುಂಭಕೋಣ ನಗರದಲ್ಲಿ ಸನ್ನ್ಯಾಸವನ್ನು ನೀಡಲೇಬಾರದು ಎಂದು ಶ್ರೀಸುಧೀಂದ್ರತೀರ್ಥರು ತೀರ್ಮಾನಿಸಿದರು. ಶ್ರೀವೇಂಕಟನಾಥರಿಗೆ ಸನ್ನ್ಯಾಸವನ್ನು ತಂಜಾವೂರಿನಲ್ಲಿ ನೀಡುವುದು ಸೂಕ್ತ ಎಂಬುದಾಗಿ ಉಪಾಯ ಮಾಡಿ ಶ್ರೀಸುಧೀಂದ್ರತೀರ್ಥರು ಅದರಂತೆ ನಿಶ್ಚಯ ಮಾಡಿ ಶ್ರೀವೇಂಕಟನಾಥರನ್ನು ಕರೆದುಕೊಂಡು ತಂಜಾವೂರಿಗೆ ಪ್ರಯಾಣ ಬೆಳೆಸಿದರು.

**ಅವತಾರಿಕೆ :** ಈಗ ಕವಿಗಳು ತಂಜಾವೂರಿಗೆ ಬಂದ ಶ್ರೀವೇಂಕಟನಾಥಾಚಾರ್ಯರು ಪೂಜ್ಯ ಶ್ರೀಸುಧೀಂದ್ರತೀರ್ಥರ ಆದೇಶದಂತೆ ಸನ್ನ್ಯಾಸ ಸ್ವೀಕಾರಕ್ಕೆ ಪೂರ್ವಭಾವಿಯಾಗಿ ವಿರಜಾ ಹೋಮ ಇತ್ಯಾದಿಗಳನ್ನು ಮಾಡಿದ್ದನ್ನು ವರ್ಣಿಸುತ್ತಾರೆ

**ಆಶಾಪಾಶೇ ವೈರಜಾ ಹೋಮಸಂಸ್ಥಾ ಸಂಸ್ಥಾಽಕೇ ಸತ್ಯೇಷ ನಿಘ್ನಂಸ್ತಮಾಂಸಿ ।**
**ಸ್ನಾತಸ್ಸಿಂಧೋರುದ್ಗತೋ ದೀಧಿತೀನಾಂ ಧಾಮೇವಾಯಂ ಭಾತಿ ರಕ್ತಾಂಶುಕಶ್ರೀಃ ॥೬೯॥**

**ತಾತ್ಪರ್ಯ :** ಸಂಸಾರಿಯಾದ ಮಾನವನಿಗೆ ಹಗ್ಗದ ಉರುಳಿನಂತಹ ಆಶೆಯೆಂಬ ಬಲವಾದ ಬಂಧನವಿರುತ್ತದೆ. ಅದು ಒಂದು ವಿಧವಾದ ದುಃಖವಾಗಿರುತ್ತದೆ. ವೈರಾಗ್ಯಶಾಲಿಯಾದ ಮಾನವನು ಸನ್ನ್ಯಾಸವನ್ನು ಸ್ವೀಕರಿಸಲು ನಿರ್ಧರಿಸಿದಾಗ ವಿರಜಾ ಹೋಮವನ್ನು ಮಾಡಬೇಕು. ಆ ವಿರಜಾ ಹೋಮವು ಆಶಾಪಾಶವನ್ನು ಕತ್ತರಿಸುವ ಕತ್ತರಿಯಿದ್ದಂತೆ ವಿರಜಾ ಹೋಮವನ್ನು ಮಾಡಿ ಮುಗಿಸಿದ ನಂತರ ಆಶಾಪಾಶವನ್ನು ಸಂಪೂರ್ಣವಾಗಿ ತ್ಯಜಿಸಬೇಕು. ಶ್ರೀವೇಂಕಟನಾಥಾಚಾರ್ಯರು ವಿರಜಾ ಹೋಮವನ್ನು ಸಂಪನ್ನಗೊಳಿಸಿ ಆಶಾಪಾಶವನ್ನು ಕತ್ತರಿಸಿ ಸ್ನಾನಮಾಡಿ ಶುಭ್ರವಾದ ಕಾವಿ ಬಟ್ಟೆಯನ್ನು ಉಟ್ಟು ಕಾಂತಿಪೂರ್ಣರಾಗಿ ಶೋಭಿಸುತ್ತಿದ್ದರು. ಸಮುದ್ರದಲ್ಲಿ ಅಸ್ತಂಗತನಾದ ಸೂರ್ಯದೇವನು ಪ್ರಾತಃಕಾಲದಲ್ಲಿ ಸಮುದ್ರದಿಂದ ಉದಯಿಸುತ್ತಾ ಮೇಲಕ್ಕೇರುತ್ತಾ ಕತ್ತಲೆಯನ್ನು ನಾಶಮಾಡುತ್ತಾ ಇರುತ್ತಾನೆ. ತನ್ನ ಕೆಂಪಾದ ಕಿರಣಗಳಿಂದ ಕಾಂತಿಯನ್ನು ಪ್ರಸರಿಸುತ್ತಾ ಶೋಭಾಯಮಾನವಾಗಿರುತ್ತಾನೆ. ವಿರಜಾ ಹೋಮವನ್ನು ಸಂಪನ್ನಗೊಳಿಸಿ ಸಮುದ್ರದಲ್ಲಿ ಮುಳುಗಿ ಸ್ನಾನಮಾಡಿ ಮೇಲಕ್ಕೆ ಬರುತ್ತಾ, ಮನಸ್ಸಿನಲ್ಲಿರುವ ತಮವನ್ನು ಕಳೆದುಕೊಂಡು (ಆಶೆಯನ್ನು ತ್ಯಜಿಸಿ), ಕಾವಿ ಬಟ್ಟೆಯನ್ನುಟ್ಟು ಕಾಂತಿಯಿಂದ

ಶೋಭಿಸುತ್ತಿರುವ ಶ್ರೀವೇಂಕಟನಾಥಾ ಚಾರ್ಯರು ಪ್ರಾತಃಕಾಲದ ಸೂರ್ಯನಂತೆ ಶೋಭಿಸುತ್ತಿದ್ದರು.

**ಅವತಾರಿಕೆ :** ಈಗ ಕವಿಗಳು ಶ್ರೀಸುಧೀಂದ್ರತೀರ್ಥ ಶ್ರೀಪಾದಂಗಳವರು ಜ್ಯೋತಿಷಿಗಳು ವಿಮರ್ಶೆ ಮಾಡಿ ನಿರ್ಧರಿಸಿದ್ದ ಪವಿತ್ರ ಮುಹೂರ್ತದಲ್ಲಿ ಶ್ರೀವೇಂಕಟನಾಥರಿಗೆ ತುರೀಯಾಶ್ರಮವನ್ನಿತ್ತು, ಮಂತ್ರೋಪದೇಶ ಮಾಡಿ ಹರಸಿ ಸನ್ಯಾಸಾಶ್ರಮ ನಾಮಧೇಯವನ್ನು ನೀಡಿದ್ದನ್ನು ತಿಳಿಸುತ್ತಾರೆ.

**ಲಗ್ನೇ ಲಗ್ನಗುಣೇ ನಿಲಿಂಪಗುರುಣಾ ದೃಷ್ಟೇ ವಿಮೃಷ್ಟೇ ದ್ವಿಜೈ-**
**ರೇನಂ ಸಂಮದಭಾಗಧೀಹಿ ಭಗವೋ ಬ್ರಹ್ಮೇತ್ಯುದೀರ್ಯ ಸ್ಥಿತಮ್ ।**
**ಆಲೋಕ್ಯೋಪದಿದೇಶ ದೇಶಿಕವರಸ್ತಸ್ಮೈ ಸ ತಾರಂ ಪುರಾ**
**ಸ್ವಪ್ನೇऽಸ್ವಪ್ನಧುರಾಪವೈಭವನಿಧಿರ್ಲಬ್ಧಾಂ ದದೌ ಚಾಭಿಧಾಮ್ ॥೭೦॥**

**ತಾತ್ಪರ್ಯ :** ಶ್ರೀ ಸುಧೀಂದ್ರತೀರ್ಥರ ಆದೇಶದಂತೆ ಜ್ಯೋತಿಷ್ಯ ಶಾಸ್ತ್ರದಲ್ಲಿ ತಜ್ಞರಾದ ಬ್ರಾಹ್ಮಣರುಗಳು ಚೆನ್ನಾಗಿ ಚರ್ಚಿಸಿ ವಿಮರ್ಶಿಸಿ ಪಂಚೇಷ್ಟಿಕಾ ಮುಂತಾದ ಲಗ್ನದ ಗುಣಗಳಿಂದ ಕೂಡಿದ ಮತ್ತು ಲಗ್ನಕ್ಕೆ ಗುರು ದೃಷ್ಟಿಯುಳ್ಳ ಒಂದು ಉತ್ತಮವಾದ ಹಾಗೂ ಶ್ರೇಷ್ಠವಾದ ಲಗ್ನವನ್ನು ನಿರ್ಧರಿಸಿದರು. ಇದಕ್ಕೆ ಮುಂಚೆ ಸನ್ಯಾಸ ಸ್ವೀಕಾರಕ್ಕೆ ನಡೆಸಬೇಕಾದ ಎಲ್ಲ ಸಾಂಪ್ರದಾಯಿಕ ಮತ್ತು ಧಾರ್ಮಿಕ ವಿಧಿ – ವಿಧಾನಗಳನ್ನು ಶ್ರೀವೇಂಕಟನಾಥಾಚಾರ್ಯರು ಮಾಡಿ ಮುಗಿಸಿದರು. ಶ್ರೀಸುಧೀಂದ್ರತೀರ್ಥರು ತಮ್ಮ ಮನೋರಥವು ಈಡೇರಿತೆಂದು ಬಹಳ ಸಂತೋಷಭರಿತರಾಗಿದ್ದರು. ಶ್ರೀವೇಂಕಟನಾಥಾಚಾರ್ಯರು "ಪರಮಪೂಜ್ಯರೇ! ಪರಬ್ರಹ್ಮದ ಮುಖ್ಯವಾಚಕವಾದ ಪ್ರಣವ ಮಂತ್ರವನ್ನು ಉಪದೇಶ ಮಾಡಬೇಕು" ಎಂದು ವಿನೀತರಾಗಿ ಕೈಜೋಡಿಸಿ ಗುರುಗಳಾದ ಶ್ರೀಸುಧೀಂದ್ರತೀರ್ಥರ ಎದುರಿಗೆ ಬಂದು ಕುಳಿತುಕೊಂಡರು. ಪ್ರಣವ ಮಂತ್ರೋಪದೇಶಕ್ಕೆ ಸಿದ್ಧರಾಗಿ ಅತ್ಯಂತ ವಿನೀತರಾಗಿ ಎದುರು ಕುಳಿತಿದ್ದ ಶ್ರೀವೇಂಕಟನಾಥಾಚಾರ್ಯರಿಗೆ ಶ್ರೀಸುಧೀಂದ್ರತೀರ್ಥರು ಸಕ್ರಮವಾಗಿ, ಸಾಂಗೋಪಾಂಗವಾಗಿ ಓಂಕಾರ (ಪ್ರಣವ) ಮಂತ್ರವನ್ನು ಉಪದೇಶ ಮಾಡಿದರು. ಶ್ರೀಸುಧೀಂದ್ರತೀರ್ಥರು ಈ ಹಿಂದೆಯೇ ಸ್ವಪ್ನದಲ್ಲಿ ತಮಗೆ ದೇವತೆಯಿಂದ ಉಪದಿಷ್ಟವಾದ "ಶ್ರೀರಾಘವೇಂದ್ರ ತೀರ್ಥರು" ಎಂಬ ಆಶ್ರಮನಾಮವನ್ನು ಶ್ರೀವೇಂಕಟನಾಥರಿಗೆ ನೀಡಿದರು. ಇನ್ನು ಮುಂದೆ ಶ್ರೀವೇಂಕಟನಾಥರು ತಮ್ಮ ಆಶ್ರಮನಾಮದಿಂದಲೇ ಪ್ರಸಿದ್ಧರಾಗುವರು. (ಈ ರೀತಿಯಾಗಿ ಪ್ರಣವ ಮಂತ್ರೋಪದೇಶ ಮಾಡೀ ತಮಗೆ ಸ್ವಪ್ನಲಬ್ಧವಾದ ಆಶ್ರಮನಾಮವನ್ನು ಇಟ್ಟರು.)

**ಅವತಾರಿಕೆ :** ಈಗ ಕವಿಗಳು ಶ್ರೀಸುಧೀಂದ್ರತೀರ್ಥರು ಶ್ರೀವೇಂಕಟನಾಥರಿಗೆ ನೀಡಿದ "ಶ್ರೀರಾಘವೇಂದ್ರತೀರ್ಥ" ಎಂಬ ಆಶ್ರಮನಾಮವನ್ನೂ ಅದರ ಔಚಿತ್ಯದ ವಿವರಣೆಯನ್ನೂ ಹೇಳುತ್ತಾರೆ.

**ತಸ್ಯ ನಾಮ ಸ ದದೇ ಸದಾಶಿಷಾ ರಾಜರಾಜ ಇವ ರಾಜಿತಃ ಶ್ರೀಯಾ ।**
**ರಾಮಭದ್ರ ಇವ ಭದ್ರಭಾಜನಂ ತತ್ಕೃಪೇವ ಜಗತಾಂ ಹಿತೇ ರತಃ ॥೭೧॥**

**ತಾತ್ಪರ್ಯ :** ಶ್ರೀಸುಧೀಂದ್ರತೀರ್ಥರು ಸಂಪತ್ತಿನಿಂದ ಕುಬೇರನಂತೆ ಶೋಭಾಯಮಾನರಾಗಿದ್ದರು! ಶ್ರೀರಾಮಚಂದ್ರನಂತೆ ಸಮಸ್ತ ಮಂಗಳಗಳಿಗೂ ಆಶ್ರಯರಾಗಿದ್ದರು!! ಶ್ರೀರಾಮಚಂದ್ರನ ಕೃಪೆಯಂತೆ ಜಗತ್ತಿನಲ್ಲಿರುವ ಸಕಲ ಸಾತ್ವಿಕ ಜನರುಗಳಿಗೆ ಅನುಕೂಲತೆಯನ್ನೂ, ಪ್ರಿಯವಾದ ಕಾರ್ಯವನ್ನು ಮಾಡುವವರೂ ಆಗಿದ್ದರು!!! ಅವರು ತಮ್ಮಿಂದ ಪ್ರಣವೋಪದೇಶವನ್ನು ಹೊಂದಿದ ಶ್ರೀವೇಂಕಟನಾಥರಿಗೆ ಮಂಗಳಕರವಾದ, ಉತ್ತಮವಾದ ಆಶೀರ್ವಾದವನ್ನು ಮಾಡಿ "ಶ್ರೀರಾಘವೇಂದ್ರ" ಎಂಬ ಆಶ್ರಮನಾಮವನ್ನು ನೀಡಿದರು.

**ಅವತಾರಿಕೆ :** ಶ್ರೀಸುಧೀಂದ್ರತೀರ್ಥ ಶ್ರೀಪಾದಂಗಳವರು ತಮ್ಮ ಪ್ರಿಯ ಶಿಷ್ಯಂದಿರಾದ ಶ್ರೀರಾಘವೇಂದ್ರತೀರ್ಥರಿಗೆ ಮಾಡಿದ ಆಶೀರ್ವಾದದ ಪ್ರಕಾರವನ್ನು ಕವಿಗಳು ಈಗ ವರ್ಣಿಸುತ್ತಾರೆ.

**ಶ್ರೀಸುರೇಂದ್ರವದಯಂ ತಪಸ್ಯಯಾ ಶ್ರೀಜಯೀಂದ್ರ ಇವ ಕೀರ್ತಿಸಂಪದಾ ।**
**ವಿಶ್ರುತೋಽಹಮಿವ ವಾದಸಂಗರೇ ರಾಘವೇಂದ್ರ ಯತಿರಾಟ್ ಸಮೇಧತಾಮ್ ॥೭೨॥**

**ತಾತ್ಪರ್ಯ :** "ನಮ್ಮ ಪರಮಗುರುಗಳಾದ ಶ್ರೀಸುರೇಂದ್ರತೀರ್ಥರು ಕಠಿಣವಾದ ವ್ರತಚರ್ಯೆಯಿಂದ ತಮ್ಮ ಜೀವನ ನಡೆಸುತ್ತಿದ್ದರು! ನಮ್ಮ ಪೂಜ್ಯ ಗುರುಗಳಾದ ಶ್ರೀವಿಜಯೀಂದ್ರತೀರ್ಥರು ಅತ್ಯಂತ ಶ್ರೇಷ್ಠವಾದ ಕೀರ್ತಿ ಸಂಪತ್ತಿನಿಂದ ಸಮೃದ್ಧರಾಗಿದ್ದರು!! ನಾವಾದರೋ ವಾದಿ ದಿಗ್ವಿಜಯದಲ್ಲಿ ಎಲ್ಲ ಪ್ರತಿವಾದಿಗಳನ್ನು ಜಯಿಸಿ ಪ್ರಸಿದ್ಧರೂ ಕೀರ್ತಿಶಾಲಿಗಳೂ ಆಗಿದ್ದೇವೆ!!! ನಮ್ಮ ಪ್ರಿಯ ವರಕುಮಾರರಾದ ಶ್ರೀರಾಘವೇಂದ್ರ ಯತಿಚಕ್ರವರ್ತಿಗಳು ತಪಸ್ಸಿನಲ್ಲಿ ಶ್ರೀಸುರೇಂದ್ರತೀರ್ಥರಂತೆಯೂ, ಕೀರ್ತಿ ಸಮೃದ್ಧಿಯಲ್ಲಿ ನಮ್ಮ ಗುರುಗಳಾದ ಶ್ರೀವಿಜಯೀಂದ್ರತೀರ್ಥರಂತೆಯೂ, ವಾದಿದಿಗ್ವಿಜಯದಲ್ಲಿ ನಮ್ಮಂತೆಯೂ ಪ್ರಸಿದ್ಧರಾಗಿ ಅಭಿವೃದ್ಧಿಯನ್ನು ಹೊಂದಲಿ ಎಂಬುದಾಗಿ ಶ್ರೀಸುಧೀಂದ್ರತೀರ್ಥರು ಪುನಃಪೂರ್ವಕವಾಗಿ ತಮ್ಮ ಶಿಷ್ಯರನ್ನು ಹರಸಿದರು.

**ಅವತಾರಿಕೆ :** ಶ್ರೀಸುಧೀಂದ್ರತೀರ್ಥರು ಶ್ರೀರಾಘವೇಂದ್ರತೀರ್ಥರಿಗೆ ಶ್ರೀಮನ್ಮಧ್ವಾಚಾರ್ಯರ ಮೂಲಮಾಹಾ ಸಂಸ್ಥಾನದ ವೇದಾಂತ ದಿಗ್ವಿಜಯ ವಿದ್ಯಾಸಿಂಹಾಸನದಲ್ಲಿ ಕುಳ್ಳಿರಿಸಿ ಪಟ್ಟಾಭಿಷೇಕ ಮಾಡಿದರು ಎಂದು ಕವಿಗಳು ವರ್ಣಿಸುತ್ತಾರೆ.

**ಮಂತ್ರೈಃ ಪೂತೈರ್ವಾರಿಜಾದ್ಯೈಃ ಪ್ರಸೂನೈರ್ಮುಕ್ತಾಮುಖ್ಯೈ ರತ್ನಜಾಲೈರುಪೇತೈಃ ।**
**ವಾರ್ಭಿಃ ಶಂಖಾಪೂರಿತೈಃ ಸೋಽಭಿಷಿಚ್ಯ ಪ್ರಾಜ್ಞಂ ವಿದ್ಯಾರಾಜ್ಯರಾಜಂ ವಿತೇನೇ ॥೭೩॥**

**ತಾತ್ಪರ್ಯ :** ಕಮಲ ಮೊದಲಾದ ಹೂವುಗಳಿಂದಲೂ, ಮುತ್ತು ಮೊದಲಾದ

ರತ್ನಗಳಿಂದಲೂ ಸಹಿತವಾಗಿ, ಶಂಖದಲ್ಲಿ ಪವಿತ್ರವಾದ ಜಲವನ್ನು ತುಂಬಿ ಋಗಾದಿ ಸಕಲ ವೇದಮಂತ್ರಗಳನ್ನು ಉಚ್ಚರಿಸುತ್ತಾ, ಶ್ರೀಸುಧೀಂದ್ರತೀರ್ಥರು ತಮ್ಮ ಕರಕಮಲ ಸಂಜಾತರಾದ ಶ್ರೀರಾಘವೇಂದ್ರತೀರ್ಥರಿಗೆ ಆ ಜಲದಿಂದ ಅಭಿಷೇಚನ ಮಾಡಿದರು. ಮತ್ತು ಶ್ರೀಮನ್ಮಧ್ವಾಚಾರ್ಯರ ಮೂಲಮಹಾ ಸಂಸ್ಥಾನದ ವೇದಾಂತ ವಿದ್ಯಾರಾಜ್ಯದ ಚಕ್ರವರ್ತಿಗಳನ್ನಾಗಿ ಮಾಡಿದರು.

**ಅವತಾರಿಕೆ :** ಶ್ರೀಸುಧೀಂದ್ರತೀರ್ಥರು ಶ್ರೀರಾಘವೇಂದ್ರತೀರ್ಥರಿಗೆ ಸಂಸ್ಥಾನದ ಮೂಲಪ್ರತಿಮೆಗಳಾದ ಶ್ರೀಬ್ರಹ್ಮದೇವರ ಕರಾರ್ಚಿತ ಶ್ರೀಮನ್ಮೂಲರಾಮದೇವರು, ಶ್ರೀಮನ್ಮಧ್ವಾಚಾರ್ಯ ಕರಾರ್ಚಿತ ಶ್ರೀದಿಗ್ವಿಜಯರಾಮ ದೇವರು, ಶ್ರೀಜಯತೀರ್ಥರ ಕರಾರ್ಚಿತ ಶ್ರೀಜಯರಾಮದೇವರುಗಳನ್ನೂ, ಸಂಸ್ಥಾನದ ರಾಜಮರ್ಯಾದೆಗಳನ್ನು ಕೊಟ್ಟಿದ್ದನ್ನು ಕವಿಗಳು ಈಗ ವರ್ಣಿಸುತ್ತಾರೆ.

**ಶ್ರೀರಾಮಾರ್ಚಾಂ ವ್ಯಾಸದೇವೋಪಲೌ ದ್ವೌ ಶಾಸ್ತ್ರೌಘಾನಾಂ ಪುಸ್ತಕಂ ಚಾಮರೇ ಚ ।**
**ಶ್ವೇತಚ್ಛತ್ರಂ ಸ್ವರ್ಣಯಾನಂ ಸವಾದ್ಯಂ ಪ್ರಾದದಸ್ಮೈರಾಜಚಿಹ್ನಂ ಸ ಸರ್ವಮ್ ॥೭೪॥**

**ತಾತ್ಪರ್ಯ :** ಶ್ರೀಮೂಲರಾಮದೇವರ ಪ್ರತಿಮಾ, ಶ್ರೀವೇದವ್ಯಾಸದೇವರ ಶಿಲಾತ್ಮಕವಾದ ಎರಡು ಪ್ರತಿಮೆಗಳು ವ್ಯಾಸಮುಷ್ಟಿ, ಬೇರೆ ಬೇರೆ ಶಾಸ್ತ್ರಗಳ ಪುಸ್ತಕಗಳ ರಾಶಿಗಳು, ಎರಡು ಚಾಮರಗಳು, ಶ್ವೇತಚ್ಛತ್ರ, ಚಿನ್ನದ ಪಲ್ಲಕ್ಕಿ, ಆನೆಯ ಅಂಬಾರಿಯ ಮೇಲೆ ಅಲಂಕರಿಸಿದ ಚಿನ್ನದ ಮಂಟಪ, ವೀಣಾ, ಮೃದಂಗ, ಕೊಳಲು, ತಾಳ, ಎಂಬ ಚತುರ್ವಿಧ ವಾದ್ಯಗಳು, ಶಂಖ, ಧವಳ, ಮದ್ದಳೆ, ಕಹಳೆ, ನಗಾರಿ ಮುಂತಾದ ಇನ್ನೂ ಅನೇಕ ವಾದ್ಯಗಳು, ಚಿನ್ನ ಬೆಳ್ಳಿಯ ರಾಜಮರ್ಯಾದೆಯ ಬೆತ್ತಗಳು, ತಾಳ ಹಾಕುವವರು, ಸ್ತುತಿ ಪಾಠಕರು, ಹಗಲು ದೀವಿಟಿಗೆ ಇತ್ಯಾದಿಯಾದ ಯಾವ ಯಾವ ವೇದಾಂತ ವಿದ್ಯಾಸಿಂಹಾಸನದ ರಾಜ ಚಿಹ್ನೆಗಳಿವೆಯೋ ಅವೆಲ್ಲವನ್ನೂ ಶ್ರೀಸುಧೀಂದ್ರತೀರ್ಥರು ಶ್ರೀರಾಘವೇಂದ್ರತೀರ್ಥರಿಗೆ ನೀಡಿ ಹರಸಿದರು.

**ಅವತಾರಿಕೆ :** ಈಗ ಕವಿಗಳು ಶ್ರೀರಾಘವೇಂದ್ರತೀರ್ಥರನ್ನು ವೇದಾಂತ ವಿದ್ಯಾಲಕ್ಷ್ಮಿಯು ಆಶ್ರಯಿಸಿದಳು ಎಂಬುದಾಗಿ ವರ್ಣಿಸುತ್ತಾರೆ.

**ಆಚಾರ್ಯೇ ರಾಜಮಾನಾ ಶ್ರುತಿಶಿಖರಕಲಾರಾಜ್ಯಲಕ್ಷ್ಮೀಃ ಸುಧೀಂದ್ರೇ**
**ಮುಕ್ತ್ವಾ ತಂ ತುಂಗಭದ್ರಾತಟಭುವಿ ಗುರುಭಿರ್ಭ್ರಾಜಮಾನಂ ತಪೋಭಿಃ ।**
**ರಾಜಂತಂ ಕುಂಭಘೋಣೇ ರಘುಪತಿಚರಣಾಸೇವನಾಸಕ್ತಚಿತ್ತಂ**
**ವಿದ್ವಾಂಸಂ ವರ್ಧಮಾನಂ ಗುಣಗಣಜಲಧಿಂ ಸಂಶ್ರಿತಾ ರಾಘವೇಂದ್ರಮ್ ॥೭೫॥**

**ತಾತ್ಪರ್ಯ :** ವೇದಾಂತವಿದ್ಯಾ ರಾಜ್ಯಲಕ್ಷ್ಮಿಯು ಶ್ರೀರಾಘವೇಂದ್ರತೀರ್ಥರ ಗುರುಗಳಾದ

ಶ್ರೀಸುಧೀಂದ್ರತೀರ್ಥರಲ್ಲಿ ಸೇರಿ ಶೋಭಿಸುತ್ತಾ ಇದ್ದಳು. ಶ್ರೀಸುಧೀಂದ್ರತೀರ್ಥರು ಶ್ರೀತುಂಗಭದ್ರಾ ನದಿಯ ತೀರದ ಸಮೀಪದಲ್ಲಿರುವ ಕಾಲಾದ್ರಿ ಎಂಬ ಪ್ರದೇಶದಲ್ಲಿ ವಿಶೇಷವಾದ ಮತ್ತು ಮಹತ್ವಪೂರ್ಣವಾದ ತಪಸ್ಸನ್ನು ಮಾಡುತ್ತಾ ವೃಂದಾವನಾಂತರ್ಗತರಾದರು. ಆಗ ಅದುವರೆಗೂ ಅವರಲ್ಲಿ ಇದ್ದ ವೇದಾಂತವಿದ್ಯಾ ರಾಜ್ಯಲಕ್ಷ್ಮಿಯು ಅವರಿಂದ ಕುಂಭಘೋಣದಲ್ಲಿ ವಿರಾಜಮಾನರಾಗಿದ್ದ ಹಾಗೂ ಶ್ರೀಮೂಲರಾಮಚಂದ್ರದೇವರ ಚರಣಕಮಲ ಸೇವಾಸಕ್ತರೂ, ಮಹಾವಿದ್ವಾಂಸರೂ, ಶಮದಮಾದಿ ಗುಣಗಣ ಸಮೂಹರೂಪರೂ, ಆದ ಶ್ರೀರಾಘವೇಂದ್ರತೀರ್ಥರನ್ನು ಆಶ್ರಯಿಸಿದಳು. (ಶ್ರೀಸುಧೀಂದ್ರತೀರ್ಥರ ನಿರ್ಯಾಣದ ನಂತರ ಶ್ರೀರಾಘವೇಂದ್ರತೀರ್ಥರು ವೇದಾಂತವಿದ್ಯಾಸಾಮ್ರಾಜ್ಯದ ಪೂರ್ಣಾಧಿಕಾರಿಗಳಾದರು.)

**ಶ್ರೀಮತ್ಕಶ್ಯಪವಂಶವಾರ್ಧಿಶಶಿನಃ ಷಡ್ದರ್ಶಿನೀವಲ್ಲಭ–**
**ಶ್ರೀ ಲಕ್ಷ್ಮೀವರಸಿಂಹವಿತ್ತವಿದುಷಃ ಶ್ರೀವೇಂಕಟಾಂಬಾಮಣೌ ।**
**ಜಾತೇನಾರ್ಯದಯಾಸುಧಾಮಯಗಿರಾ ನಾರಾಯಣೇನೋದಿತೇ**
**ಕಾವ್ಯೇ ಚಾರುಣಿ ರಾಘವೇಂದ್ರವಿಜಯೇ ಸರ್ಗೋಽದ್ಯ ಷಷ್ಠೋಽಭವತ್ ॥೭೬॥**

ಕಶ್ಯಪವಂಶಾಂಬುಧಿ ಚಂದ್ರಮರಾದ ಷಡ್ದರ್ಶಿನೀ ವಲ್ಲಭ ಶ್ರೀಲಕ್ಷ್ಮೀನರಸಿಂಹಾಚಾರ್ಯರು ಮತ್ತು ವೇಂಕಟಾಂಬಾ ದಂಪತಿಗಳ ಪುತ್ರರಾದ ನಾರಾಯಣಾಚಾರ್ಯರಿಂದ ರಚಿತವಾದ ಶ್ರೀರಾಘವೇಂದ್ರವಿಜಯ ಮಹಾಕಾವ್ಯದಲ್ಲಿ ಆರನೇಯ ಸರ್ಗವು ಇಲ್ಲಿಗೆ ಸಮಾಪ್ತವಾಯಿತು.

# ಆರನೆಯ ಸರ್ಗದ ಕಥಾಸಾರ

**ಶ್ರೀವೆಂಕಟನಾಥರ ಚೋಳದೇಶ ಪ್ರವೇಶ** — ಶ್ರೀವೆಂಕಟಾರ್ಯರು ಬಹುಕಾಲ ಕಾಂಚೀಮಂಡಲಾಂತರ್ಗತವಾದ ತನ್ನ ಜನ್ಮಭೂಮಿಯಾದ ಪಟ್ಟಣಾಗ್ರಹಾರದಲ್ಲಿ ವಾಸಮಾಡುತ್ತಿದ್ದರು. ಅನಂತರ ಉತ್ತಮ ಪ್ರಜ್ಞಾವಂತರಾದ ಅವರು ಚೋಲದೇಶದಲ್ಲಿರುವ ತಮ್ಮ ಕುಲಗುರುಗಳಾದ ಶ್ರೀಸುಧೀಂದ್ರತೀರ್ಥರನ್ನು ನೋಡಲು ಚೋಲದೇಶವನ್ನು ಪ್ರವೇಶಿಸಿದರು. ಆ ಚೋಲದೇಶದಲ್ಲಿ ಲೆಕ್ಕವಿಲ್ಲದಷ್ಟು ಮಾವಿನ ಮರಗಳಿವೆ. ಅವುಗಳು ಚೈತ್ರಮಾಸದಲ್ಲಿ ಹೂ ಬಿಟ್ಟಾಗ ಗಾಳಿಯ ಸ್ಪರ್ಶಮಾತ್ರದಿಂದ ಹೂವುಗಳ ಮಕರಂದರಸವು ಸುರಿದು ಬೀದಿಗಳು ಒದ್ದೆಯಾಗುತ್ತಿದ್ದವು, ಕೆಸರಾಗುತ್ತಿದ್ದವು. ಚೋಲದೇಶದಲ್ಲಿ ಕಾವೇರೀ ತೀರದಲ್ಲಿ ಬಹಳ ಬ್ರಾಹ್ಮಣರ ಅಗ್ರಹಾರಗಳಿದ್ದವು. ಪ್ರತಿ ಗ್ರಾಮದಲ್ಲಿಯೂ ಸಾವಿರಾರು ಬ್ರಾಹ್ಮಣರ ಮನೆಗಳು, ಪ್ರತಿಯೊಂದು ಮನೆಯಲ್ಲಿಯೂ ಎಲ್ಲರೂ ಪಂಡಿತರಾಗಿದ್ದರು. ಅಲ್ಲಿ ಬಾಲಕರೇ ಪಂಡಿತರಾಗಿದ್ದು ಎಲ್ಲಾ ವೇದ ಮತ್ತು ಶಾಸ್ತ್ರಗಳನ್ನು ಪಾಠ ಹೇಳುತ್ತಿದ್ದರು. ಆ ಗ್ರಾಮಗಳಲ್ಲಿದ್ದ ಅಗ್ನಿಹೋತ್ರಿಗಳು ಮಾಡುವ ಹೋಮಗಳ ಹೊಗೆಯಸಾಲಿನಿಂದ ರೂಪವಿಲ್ಲದ ಆಕಾಶವೂ ನೀಲವಾಗಿ ಕಾಣಿಸುತ್ತಿತ್ತು. ಅಲ್ಲಿಯ ಭೂಮಿಯು ಯಾವಾಗಲೂ ಎಲ್ಲಾ ಸಸ್ಯಗಳಿಂದ ಸಮೃದ್ಧವಾಗಿತ್ತು. ಮರಗಳು ಹಣ್ಣುಗಳ ಗೊಂಚಲುಗಳಿಂದ ತುಂಬಿದ್ದವು. ಬ್ರಾಹ್ಮಣರೆಲ್ಲರೂ ಯಾಗ ದೀಕ್ಷಿತರಾಗಿದ್ದರು. ಶ್ರೀ ವೆಂಕಟಾರ್ಯರು ಅಂತಹ ಚೋಲದೇಶವನ್ನು ಪ್ರವೇಶಿಸಿ ಕಾವೇರಿತೀರದಲ್ಲಿಯೇ ಇರುವ ಭೂಮಿಗೆ ಅಲಂಕಾರರೂಪವಾಗಿರುವ ಕುಂಭಘೋಣದಲ್ಲಿ ವಾಸವಾಗಿದ್ದ ಶ್ರೀಸುಧೀಂದ್ರತೀರ್ಥರನ್ನು ಕಂಡರು. ಅವರಿಂದ ವಿಶೇಷರೀತಿಯಿಂದ ಸನ್ಮಾನಿತರಾಗಿ ನಿತ್ಯದಲ್ಲಿಯೂ ವಿಶೇಷ ರೀತಿಯಿಂದ ವಿದ್ಯಾಭ್ಯಾಸದಲ್ಲಿಯೇ ಆಸಕ್ತರಾಗಿ ಕಾಲ ಕಳೆಯಲಾರಂಭಿಸಿದರು.

**ಶ್ರೀವೆಂಕಟಾರ್ಯರ ವಿಶೇಷವಿದ್ಯಾಭ್ಯಾಸ** — ಶ್ರೀವೆಂಕಟಾರ್ಯರು ಕುಂಭಘೋಣದಲ್ಲಿ ಶ್ರೀಸುಧೀಂದ್ರತೀರ್ಥರ ಸನ್ನಿಧಿಯಲ್ಲಿ ವ್ಯಾಕರಣ ಮಹಾಭಾಷ್ಯ, ಜಯದೇವಕೃತವಾದ ಟೀಕಾ, ಕುಮಾರಿಲಭಟ್ಟ ನಿರ್ಮಿತವಾದ ಪೂರ್ವಮೀಮಾಂಸಾ ಸಂಬಂಧಿಯಾದ ಗ್ರಂಥ, ವಾಚಸ್ಪತಿಮಿಶ್ರಕೃತವಾದ ಭಾಮತೀಗ್ರಂಥ, ಪ್ರಭಾಕರಕೃತವಾದ ಪೂರ್ವಮೀಮಾಂಸಾಗ್ರಂಥ, ಶ್ರೀವ್ಯಾಸತೀರ್ಥರಚಿತವಾದ ತಾತ್ಪರ್ಯಚಂದ್ರಿಕಾಗ್ರಂಥ, ಇನ್ನೂ ಅವಶ್ಯವಾಗಿ ಅಭ್ಯಾಸ ಮಾಡಬೇಕಾದ ಎಲ್ಲವನ್ನೂ, ಅಭ್ಯಾಸಮಾಡುತ್ತಿದ್ದರು. ಪ್ರಾತಃಕಾಲದಲ್ಲಿ ಎದ್ದು ಸ್ನಾನ ಮಾಡಿ ನಿತ್ಯಾಹ್ನಿಕವನ್ನು ಪೂರೈಸಿ, ಶ್ರೀವೆಂಕಟನಾಥರು ಮೊದಲನೆಯ ಯಾಮದಲ್ಲಿ (ಪ್ರಾತಃ 6 ರಿಂದ 9 ರವರೆಗೆ) ಬ್ರಹ್ಮಸೂತ್ರಭಾಷ್ಯವನ್ನೂ, ಎರಡನೆಯ ಯಾಮದಲ್ಲಿ ವ್ಯಾಕರಣ ಮಹಾಭಾಷ್ಯವನ್ನೂ, (9 ರಿಂದ 12) ಮೂರನೆಯ ಯಾಮದಲ್ಲಿ (12 ರಿಂದ 3) ತರ್ಕಶಾಸ್ತ್ರವನ್ನೂ ಪಾಠ ಹೇಳುತ್ತಾ ಕೆಲವು ವರ್ಷಗಳನ್ನು ಕುಂಭಘೋಣದಲ್ಲಿಯೇ ಕಳೆದರು.

**ದಿಗ್ವಿಜಯ ಯಾತ್ರಾ** — ಅನಂತರ ಒಂದಾನೊಂದು ಸಮಯದಲ್ಲಿ ಶ್ರೀವೆಂಕಟಾರ್ಯರು ಗುರುಗಳಾದ ಶ್ರೀಸುಧೀಂದ್ರತೀರ್ಥರೊಡನೆ ದಕ್ಷಿಣದ್ವಾರಕಾ ಎಂದೇ ಹೆಸರು ಪಡೆದಿರುವ ಚಂಪಕಾರಣ್ಯಕ್ಷೇತ್ರವನ್ನು ಕುರಿತು ಪ್ರಯಾಣ ಮಾಡಿದರು. ಈ ಚಂಪಕಾರಣ್ಯ ಕ್ಷೇತ್ರವನ್ನೇ ದೇಶಭಾಷೆಯಲ್ಲಿ ''ಮನ್ನಾರುಗುಡಿ'' ಎಂದು ಹೇಳುತ್ತಾರೆ. ಅಲ್ಲಿಯ ಕ್ಷೇತ್ರಸ್ವಾಮಿಯಾದ ಶ್ರೀರಾಜಗೋಪಾಲಸ್ವಾಮಿಯ ದರ್ಶನ ಮಾಡಿದರು. ಆ ದೇವಾಲಯದಲ್ಲಿ ಒಂದು ಸ್ಥಳದಲ್ಲಿ ಅನೇಕ ಮಾಯಾವಾದಿಗಳ ಮಧ್ಯದಲ್ಲಿ ಕುಳಿತುಕೊಂಡು ಒಬ್ಬ ಮಾಯಾವಾದಿಸನ್ಯಾಸಿಯು ಪ್ರವಚನ ಮಾಡುತ್ತಿದ್ದನು. ಶ್ರೀಸುಧೀಂದ್ರತೀರ್ಥರೊಡನೆ ಆ ಸ್ಥಳವನ್ನು ಹಾದು ಹೋಗುವಾಗ, ಆ ದೃಶ್ಯವನ್ನು ಕಂಡು ಶ್ರೀವೆಂಕಟನಾಥರು ಅಲ್ಲಿಯೇ ನಿಂತು ಆ ಉಪನ್ಯಾಸವನ್ನು ಕೇಳಲಾರಂಭಿಸಿದರು.

**ಶ್ರೀವೆಂಕಟನಾಥರು ಮತ್ತು ಮಾಯಾವಾದಿ ಸಂನ್ಯಾಸಿಗಳಲ್ಲಿ ಪರಸ್ಪರ ಶಾಸ್ತ್ರಾರ್ಥವಿಚಾರ** — ಆ ಮಾಯಾವಾದಿಯು ಉಪನ್ಯಾಸ ಮಾಡುತ್ತಾ ಜೀವಬ್ರಹ್ಮರಲ್ಲಿ ಪರಸ್ಪರ ಭೇದವಿಲ್ಲ ಎಂದನು. ಶ್ರೀ ವೇಂಕಟನಾಥರು 'ಜೀವಬ್ರಹ್ಮರಿಗೆ ಅಭೇದವಿದೆಯೆಂಬ ವಿಷಯದಲ್ಲಿ ಪ್ರಮಾಣವೇನು? ಎಂದು ಕೇಳಿದರು. ಆಗ ಆ ಮಾಯಾವಾದಿ ಸಂನ್ಯಾಸಿಯ ಶಿಷ್ಯನೊಬ್ಬನು ಪ್ರಪಂಚವೆಲ್ಲವೂ ಮಿಥ್ಯಾ ಅಂದರೆ ಸುಳ್ಳು. ಆದುದರಿಂದ ಪ್ರಪಂಚದಲ್ಲಿ ಸೇರಿರುವ ಜೀವಬ್ರಹ್ಮರ ಭೇದವೂ ಸುಳ್ಳು, ಎಂದು ಹೇಳಿದನು. ಆಗ ಶ್ರೀವೆಂಕಟಾರ್ಯರು ಹೇಳಿದರು.

''ನಾನು ಜೀವಬ್ರಹ್ಮರಿಗೆ ಅಭೇದವಿದೆಯೆಂಬ ವಿಷಯದಲ್ಲಿ ಪ್ರಮಾಣವೇನೆಂದು ಕೇಳಿದನು. ಆದುದರಿಂದ ನೀನು ಜೀವಬ್ರಹ್ಮರಿಗೆ ಅಭೇದವನ್ನು ಹೇಳುವ ಪ್ರಮಾಣವನ್ನೇ ಹೇಳಬೇಕು. 'ಪ್ರಪಂಚವೆಲ್ಲವೂ ಸುಳ್ಳಾದುದರಿಂದ ಭೇದವೂ ಸುಳ್ಳು. ಆದುದರಿಂದ ಜೀವಬ್ರಹ್ಮರಿಗೆ ಅಭೇದವಿದೆಯೆಂಬ ನಿನ್ನ ಮಾತಾಗಲೀ, ಪ್ರಪಂಚವು ಸುಳ್ಳು ಎಂದು ಸಾಧಿಸತಕ್ಕ ನಿನಗೆ ಒಪ್ಪಿಗೆಯಾದ ಬೇರೆ ಮಾತಾಗಲೀ ಜೀವಬ್ರಹ್ಮರ ಅಭೇದ ವಿಷಯದಲ್ಲಿ ಪ್ರಮಾಣವಾಗಲಾರದು. ಆದುದರಿಂದ ಈ ತರಹದ ಮಾತನ್ನಾಡುವುದು ವ್ಯರ್ಥ. 'ಮತ್ತು ಇದರಿಂದ 'ಕಿಂಚಾತಃ' ಶ್ರೀವೆಂಕಟನಾಥರು ಸಂಸ್ಕೃತ ಭಾಷೆಯಲ್ಲಿಯೇ ಇಷ್ಟು ವಿಷಯವನ್ನು ಹೇಳಿ ಇನ್ನೂ ಏನೋ ಹೇಳಲಿದ್ದವರು 'ಮತ್ತೂ ಕೂಡ ಇದರಿಂದ ಎಂಬರ್ಥದಲ್ಲಿ 'ಕಿಂಚಾತಃ' ಎಂಬ ಪದವನ್ನು ಪ್ರಯೋಗಿಸಿದರು. ಶ್ರೀವೆಂಕಟನಾಥರ ವಾಗ್ವೈಖರಿಯನ್ನು ಕೇಳಿ ಆ ಮಾಯಾವಾದಿಯ ಶಿಷ್ಯನಾದ ಪಂಡಿತನು ಉತ್ತರ ಹೇಳಲಾರದೆ ಹೋದನು. ಅವನು ಈ ರೀತಿ ಪರಾಜಿತನಾದರೂ ತನ್ನ ಸೋಲನ್ನು ಮುಚ್ಚಿಟ್ಟುಕೊಳ್ಳುವ ಉದ್ದೇಶದಿಂದ ಶ್ರೀವೆಂಕಟನಾಥರು ಪ್ರಸಂಗವಶಾತ್ ಹೇಳಿದ್ದ 'ಕಿಂಚಾತಃ' ಎಂಬ ಪದವನ್ನೇ ತೆಗೆದುಕೊಂಡು ವಿಚಾರ ಮಾಡತೊಡಗಿ ವ್ಯಾಕರಣಶಾಸ್ತ್ರದಲ್ಲಿ ವಾಕ್ಯಾರ್ಥ ಮಾಡತೊಡಗಿದನು.

'ಕಿಂಚಾತಃ' ಎಂದು ನೀವು ಪ್ರಯೋಗ ಮಾಡಿದ ಶಬ್ದವನ್ನು ವ್ಯಾಕರಣ ಶಾಸ್ತ್ರದಲ್ಲಿ ಎಲ್ಲಿಯೂ ಹೇಳಿಲ್ಲ, ಯಾವ ಪಂಡಿತರೂ ಆ ಶಬ್ದವನ್ನು ಕೇಳಿಲ್ಲ. ಇಂತಹ ಅಶ್ರುತವಾದ ಶಬ್ದವನ್ನು ಪ್ರಯೋಗ ಮಾಡಿದ ನಿಮಗೆ ಅಪಶಬ್ದ ಪ್ರಯೋಗ ಮಾಡಿದ್ದರಿಂದ ನಿಗ್ರಹ ಸ್ಥಾನವುಂಟಾಗಿದೆ. (ಪರಾಜಯದ ನಿಮಿತ್ತವನ್ನು ಶಾಸ್ತ್ರದಲ್ಲಿ ನಿಗ್ರಹ ಸ್ಥಾನವೆಂದು ಹೇಳುತ್ತಾರೆ.) ಆದ್ದರಿಂದ ನೀವು ಸೋತಿದ್ದೀರಿ. (ಅಪಶಬ್ದ = ವ್ಯಾಕರಣವಿರುದ್ಧ ಶಬ್ದ)

ಆಗ ವೆಂಕಟಾರ್ಯರು ಮಹಾಭಾಷ್ಯದಲ್ಲಿ ಅನೇಕ ಸ್ಥಳಗಳಲ್ಲಿ 'ಕಿಂಚಾತಃ' ಎಂಬ ಶಬ್ದಪ್ರಯೋಗ ಬಂದಿರುವುದನ್ನು ಹೇಳಿ 'ಕಿಂಚಾತಃ ಎಂಬ ಈ ಶಬ್ದವು ಶಾಸ್ತ್ರದಲ್ಲಿ ಪ್ರಸಿದ್ಧವೇ ಆಗಿದೆ. ಮಹಾಭಾಷ್ಯವನ್ನು ಓದಿರುವ ನಿಮ್ಮವರು ಈ ಶಬ್ದವನ್ನು ಕೇಳಿಯೇ ಇರುತ್ತಾರೆ. ಮಹಾಭಾಷ್ಯವನ್ನು ಓದದೆ ಇರುವ ನೀನೊಬ್ಬನು ಕೇಳಿಲ್ಲದೆ ಇದ್ದರೆ ನಾನು ಪ್ರಯೋಗ ಮಾಡಿದ 'ಕಿಂಚಾತಃ' ಎಂಬ ಈ ಶಬ್ದವು ಅಪಶಬ್ದವಾಗುವುದಿಲ್ಲ.' ಎಂದು ಸಾವಧಾನವಾಗಿ ಉತ್ತರ ಕೊಟ್ಟರು. ಆಗ ಆ ಪಂಡಿತನು ವೆಂಕಟಾರ್ಯರ ಮಾತಿಗೆ ಉತ್ತರ ಕೊಡಲಾರದೆ ಸುಮ್ಮನಾದನು. ಆ ಮಾಯಾವಾದಿ ಸಂನ್ಯಾಸಿಯ ಮತ್ತೊಬ್ಬ ಶಿಷ್ಯನು ಶ್ರೀವೆಂಕಟನಾಥರ ಮಾತನ್ನು ಕೇಳಿ ಸಿಟ್ಟಾಗಿ ಉತ್ತರ ಕೊಟ್ಟನು. 'ಮಹಾಭಾಷ್ಯವೆಲ್ಲಿ ? ನೀವೆಲ್ಲಿ ? ನಿಮಗೆ ನಾನೇ ಮಹಾಭಾಷ್ಯ ಓದಿದವನೆಂಬ ಅಭಿಮಾನವು ಅದೆಷ್ಟಿದೆ ! ನಾನು ಮಹಾಭಾಷ್ಯವನ್ನು ಚೆನ್ನಾಗಿ ತಿಳಿದಿದ್ದೇನೆ ಎಂಬ ಗರ್ವವುಳ್ಳ ನೀವು ನಾನು ಕೇಳಿದ ಯಾವುದಾದರೊಂದು ಶಬ್ದದ ಪ್ರಕ್ರಿಯೆಯನ್ನು ಹೇಳುತ್ತೀರೇನು ?' ಎಂದು ಕೇಳಿದನು. ಆಗ ವೆಂಕಟಾರ್ಯರು ಅವನಿಗೆ ಹೆಚ್ಚು ಕೋಪವನ್ನು ಉಂಟು ಮಾಡುವುದಕ್ಕಾಗಿ ಸುಮ್ಮನೆ ಇದ್ದರು. ಆನಂತರ ಅವನು ಕೇಳಿದ ಎಲ್ಲಾ ಶಬ್ದಗಳ ಪ್ರಕ್ರಿಯೆಗಳನ್ನೆಲ್ಲಾ ಹೇಳಿದರು. ಇವನು ನಾನು ಕೇಳಿದ ಎಲ್ಲಾ ಶಬ್ದಗಳ ಪ್ರಕ್ರಿಯೆಗಳನ್ನು ಹೇಳುತ್ತಿದ್ದಾನೆ. ಇವನನ್ನು ಸೋಲಿಸಲು ನನಗೆ ಸಾಧ್ಯವಾಗಲಾರದು ಎಂದು ಕೋಪಾವೇಶ ಹೊಂದಿ ಬಡಿಗೆ ಏಟು ತಿಂದ ಸರ್ಪದಂತೆ ಬುಸುಗುಟ್ಟುತ್ತಾ 'ಎಲೈ

ಮಹಾಭಾಷ್ಯಪಾರಾವಾರಪಾರಂಗತನೇ, 'ಸ್ಥಾ'ಧಾತುವಿನ ಯಙ್‌ಲುಗಂತರೂಪದ, ಶತೃಪ್ರತ್ಯಯಾಂತರೂಪವನ್ನು ಎಂದು ಅರ್ಧವಾಕ್ಯವನ್ನು ಹೇಳುವಷ್ಟರಲ್ಲಿ - **'ತಾಸ್ಥತ್'** - ಇದೇ 'ಸ್ಥಾ' ಧಾತುವಿನ ಯಙ್‌ಲುಗಂತದ ಶತ್ರಂತವಾದ ರೂಪವು. ಇದನ್ನು ತಾನೇ ನೀನು ಕೇಳಿದ್ದೀ ? ಎಂದು ಪ್ರತ್ಯುತ್ತರವನ್ನು ಕೊಟ್ಟು ಅದೇ 'ಸ್ಥಾ' ಧಾತುವಿನ ಯಙಂತ-ರೂಪವನ್ನು ನೀನು ಹೇಳು ? ಎಂದು ಶ್ರೀವೆಂಕಟನಾಥರು ಆ ಪಂಡಿತನನ್ನೇ ಕೇಳಿದರು. ಆಗ ಆ ಮಾಯಾವಾದಿ ಸಂನ್ಯಾಸಿಯೂ ಅವನ ಶಿಷ್ಯರೂ ಅರ್ಧಯಾಮದವರೆಗೆ ($1^1/_2$ ಘಂಟೆ)ವರೆಗೂ ಯೋಚನೆ ಮಾಡಿದರೂ ಸರಿಯಾಗಿ ಆ ಶಬ್ದರೂಪವನ್ನು ನಿರ್ಧರಿಸಲಾರದೆ, ಮಾತಾಡದೆ ಸುಮ್ಮನೆ ಇದ್ದುದರಿಂದ ಪರಾಜಿತರಾದರು.

**ಮಹಾಭಾಷ್ಯ ವೆಂಕಟಾರ್ಯರು' ಎಂಬ ಬಿರುದಿನ ಪ್ರಾಪ್ತಿ** — ಶ್ರೀವೆಂಕಟಾರ್ಯರ ಗುರುಗಳಾದ ಶ್ರೀಸುಧೀಂದ್ರತೀರ್ಥಶ್ರೀಪಾದಂಗಳವರು ಶ್ರೀವೆಂಕಟನಾಥರಿಗೆ ವ್ಯಾಕರಣ ಮಹಾಭಾಷ್ಯದಲ್ಲಿ ಇಂತಹ ಪಾಂಡಿತ್ಯ-ವಿದೆಯೆಂದು ತಿಳಿದೇ ಇರಲಿಲ್ಲ. ಈಗ ಅವರ ಮಹಾಭಾಷ್ಯ ಪಾಂಡಿತ್ಯವನ್ನು ಪ್ರತ್ಯಕ್ಷವಾಗಿ ನೋಡಿ, ಅವರಿಗೆ ಎಲ್ಲಾ ಪಂಡಿತರ ಮಧ್ಯದಲ್ಲಿ ''ಮಹಾಭಾಷ್ಯ ವೆಂಕಟನಾಥರು'' ಎಂಬ ಬಿರುದನ್ನು ಕೊಟ್ಟರು.

ಇನ್ನೊಂದು ಬಾರಿ ಶ್ರೀವೆಂಕಟನಾಥರು ತಂಜಾವೂರಿಗೆ ಹೋಗಿದ್ದರು. ಅಲ್ಲಿ ಒಬ್ಬ ವಾಚಾಳನಾದ ಪಂಡಿತನು ಶುಲ್ವಸೂತ್ರಗಳ ವ್ಯಾಖ್ಯಾನ ಪ್ರವಚನಗಳನ್ನು ಮಾಡುತ್ತಿದ್ದನು. ಪ್ರಸಂಗ ಬಂದಾಗ ಶ್ರೀವೆಂಕಟನಾಥರು ಆ ಪಂಡಿತ-ನನ್ನು ವಾದದಲ್ಲಿ ಜಯಿಸಿದರು.

ಮತ್ತೊಂದು ಬಾರಿ ಯಾಗಾನುಷ್ಠಾನ ತತ್ಪರರೂ, ಒಳ್ಳೆ ಕವಿಗಳೂ ಅಲಂಕಾರ ಶಾಸ್ತ್ರಜ್ಞರೂ ಆದ ಪಂಡಿತರನ್ನು 'ಕಾಕತಾಲೀಯ' ಎಂಬ ಶಬ್ದಾರ್ಥವಿಷಯದಲ್ಲಿ ಶ್ರೀವೇಂಕಟನಾಥರು ಜಯಿಸಿದರು. ಮತ್ತೊಂದು ಬಾರಿ ತಪ್ತ-ಮುದ್ರಾಂಕನವು ಅಶಾಸ್ತ್ರೀಯವು ಎಂದು ಕೆಲವರು ವಾದಿಸುತ್ತಿದ್ದಾಗ ಶ್ರೀವೆಂಕಟನಾಥರು ಅದು ಶಾಸ್ತ್ರೀಯವೆಂದು ಸಮರ್ಥಿಸುತ್ತಾ ವಾದ ಮಾಡಿ ಪ್ರತಿವಾದಿಗಳನ್ನು ನಿರುತ್ತರರನ್ನಾಗಿ ಮಾಡಿದರು. ಇದನ್ನೆಲ್ಲಾ ನೋಡಿ ಯಜ್ಞಾನುಷ್ಠಾನ ಮಾಡುವ ಶ್ರೋತ್ರಿಯರಲ್ಲಿ ಚಕ್ರವರ್ತಿಯಂತಿರುವ ಯಜ್ಞನಾರಾಯಣ ಎಂಬುವರು ಶ್ರೀವೆಂಕಟನಾಥರು ಸರ್ವ-ಶಾಸ್ತ್ರ ಪಾರಂಗತರು ಎಂದು ತಿಳಿದು ತುಂಬಾ ಸಂತೋಷಪಟ್ಟರು.

**ಶ್ರೀವೆಂಕಟನಾಥರು ಅನುಭವಿಸಿದ ಕಡುಬಡತನ** — ತನ್ನ ಊರಿಗೆ ಬಂದು ವಾಸಿಸುತ್ತಿದ್ದ ಶ್ರೀವೆಂಕಟನಾಥರಿಗೆ ಘೋರದಾರಿದ್ರ್ಯವನ್ನು ಅನುಭವಿಸುವ ಪ್ರಸಂಗವೂ ಬಂದಿತು. ಹಿಂದೆ ಹೇಳಿದಂತೆ ಪ್ರತಿವಾದಿ ದಿಗ್ವಿಜಯ, ನಿರಂತರ ಶಾಸ್ತ್ರಾಭ್ಯಾಸ, ಬಿರುದು ಬಾವಲಿಗಳ ಪ್ರಾಪ್ತಿಯಿಂದ ದಿನ ದಿನದಲ್ಲಿ ಶ್ರೀವೆಂಕಟನಾಥರ ಕೀರ್ತಿಯು ಹೆಚ್ಚುತ್ತಿತ್ತು. ಆದರೆ ಯಾವುದೋ ಜನ್ಮದ ಪಾಪ ಫಲರೂಪವಾದ ಬಡತನವೂ ಅವರ ಬೆನ್ನು ಬಿಡಲಿಲ್ಲ. ಆದರೆ ಈ ಬಡತನವು ವೈರಾಗ್ಯ ಭಕ್ತಿ ಮುಂತಾದವುಗಳಿಗೂ ಪರಮಾತ್ಮನ ವಿಷಯಕವಾದ ಶ್ರವಣಾದಿಗಳಿಗೂ ಕಾರಣವಾಯಿತು. ನಿರಂತರವಾಗಿ ಪರಮಾತ್ಮನ ಧ್ಯಾನ ಮಾಡುವುದಕ್ಕೆ ಸಾಧನವಾಯಿತು. ಈ ಬಡತನವು ಭಗವಂತನ ಹೆಚ್ಚಿನ ಅನುಗ್ರಹವನ್ನು ಅವರಲ್ಲಿ ಉಂಟು ಮಾಡಿ ಸಂನ್ಯಾಸ ಸ್ವೀಕಾರಕ್ಕೆ ಕಾರಣವೂ ಆಯಿತು. ಅವರು ಸಂನ್ಯಾಸಿ-ಗಳಾದಮೇಲೆ ಉಂಟಾಗಲಿರುವ ಎಣೆಯಿಲ್ಲದ ಸಂಪತ್ತಿಗೂ ಈ ಕಡು ಬಡತನದ ಬವಣೆಯು ಕಾರಣವಾಯಿತು. ಆದುದರಿಂದ ದಾರಿದ್ರ್ಯವು ಹಿಂದಿನ ಜನ್ಮಗಳ ಸುಕೃತ ಫಲವೆಂದೇ ಹೇಳಿದರೂ ತಪ್ಪಾಗಲಾರದು. ಬಡತನದ ತುತ್ತ ತುದಿಯನ್ನೇರಿ ನಿಂತಿದ್ದರೂ ಶ್ರೀವೆಂಕಟನಾಥರು ಹಣ ಸಂಪಾದಿಸಲು ಅತ್ತಿತ್ತ ಸಂಚರಿಸಿದರೆ ವಿದ್ಯಾವಿಘ್ನ-ವುಂಟಾಗುತ್ತದೆಂದು, ಪರಮಾತ್ಮನ ಸಂಕಲ್ಪದಂತೆ ಪ್ರಾಪ್ತವಾದ ಸಂಪತ್ತಿನಿಂದಲೇ ಜೀವಿಸುತ್ತಾ, ಯಾರನ್ನೂ ಬೇಡದೆ, ನೀಚಜನರನ್ನು ಬೇಡುವ ವಿಷಯವನ್ನಂತೂ ಕನಸಿನಲ್ಲಿಯೂ ಯೋಚಿಸದೆ ಬಡತನದ ಬೇಗೆಯನ್ನು ಅನು-ಭವಿಸಿದರು. ಒಂದೇ ಒಂದು ಹಳೆಯ ತೂತುಬಿದ್ದ ಬಟ್ಟೆಯನ್ನು ವೆಂಕಟನಾಥರು ಒಂದು ವರ್ಷ ಪೂರ್ತಿ

ಉಟ್ಟರು. ವರ್ಷ ಕಳೆದಾಗ ಹೊಸ ವರ್ಷದಲ್ಲಿ ಹೊಸದಾದ ದಪ್ಪದಾರದ ಕಡಿಮೆ ಬೆಲೆಯ ಒಂದು ಬಟ್ಟೆಯೂ ಉಡಲು ಸಿಗುತ್ತಿರಲಿಲ್ಲ, ಸಣ್ಣ ದಾರದ ಒಳ್ಳೆ ಬಟ್ಟೆಯನ್ನಂತೂ ಅವರು ಉಡಲೇ ಇಲ್ಲ. ರೇಶ್ಮೆ ಬಟ್ಟೆಯ ವಿಚಾರವನ್ನಂತೂ ಹೇಳಬೇಕಾಗಿಯೇ ಇಲ್ಲ. ಸ್ವಲ್ಪವೇ ದ್ರವ್ಯದಿಂದ ಮಾಡಬಹುದಾದ ಅಗ್ನಿಷ್ಟೋಮ ಯಾಗದಲ್ಲಿ ಅಧಿಕಾರಿಯಲ್ಲದವನು (ಅಗ್ನಿಷ್ಟೋಮ ಯಾಗವನ್ನು ಮಾಡಲಾರದವನು) ತುಂಬಾ ಹಣ ಖರ್ಚು ಮಾಡಿ ಮಾಡಬೇಕಾದ ಜ್ಯೋತಿಷ್ಟೋಮ ಯಾಗದಲ್ಲಿ ಅಧಿಕಾರಿಯಾಗುತ್ತಾನೆಯೇ ? (ಜ್ಯೋತಿಷ್ಟೋಮ ಯಾಗವನ್ನು ಮಾಡಬಲ್ಲನೇ ?) ವರ್ಷಕ್ಕೆ ಒಂದು ಬಾರಿ ತೈಲಾಭ್ಯಂಜನವೂ ಇಲ್ಲವೆಂದಮೇಲೆ ಊಟಕ್ಕೆ ತುಪ್ಪ ಎಲ್ಲಿಂದ ಬರಬೇಕು ? ಸಮಯಕ್ಕೆ ಸರಿಯಾಗಿ ಊಟವೂ ಸಿಗುತ್ತಿರಲಿಲ್ಲ. ಊಟವು ದೊರಕಿದರೂ ಬಾಳೆ ಎಲೆ ಮುಂತಾದ ಊಟದ ಸಾಧನವು ಸಿಗದೆ ಇರುವುದರಿಂದ ನೆಲದಮೇಲೆಯೇ ಊಟ ಮಾಡಬೇಕಾಗುತ್ತಿತ್ತು. ಇಂತಹ ಘೋರ ದಾರಿದ್ರ್ಯವಿದ್ದರೂ ಅನ್ನಕ್ಕೋಸ್ಕರ ಶ್ರೀವೆಂಕಟನಾಥರು ಯಾರನ್ನೂ ಬೇಡುತ್ತಿರಲಿಲ್ಲ. ಅವರ ಮನೆಗೆ ಮೇಲ್ಚಾವಣೆ, ಹುಲ್ಲು ಹಂಚುಗಳ ಹೊದಿಕೆಯೂ ಇರಲಿಲ್ಲ. ಗೋಡೆಗಳೂ ಅಲ್ಲಲ್ಲಿ ಅರ್ಧಂಬರ್ಧ ಬಿದ್ದು ಹೋಗಿದ್ದುವು. ಕೆಲವು ಕಡೆ ತೂತು ಬಿದ್ದಿತ್ತು. ನೆಲವೆಲ್ಲಾ ಹಾಳಾಗಿತ್ತು , ಸೀಳಿಹೋಗಿ ಅಲ್ಲಲ್ಲಿ ಹಳ್ಳ ಬಿದ್ದಿತ್ತು. ನೂರು ತೂತುಗಳಿಂದ ಕೂಡಿದ ಹಳೇ ಬಟ್ಟೆ ಒಂದು, ಒಡಕು ನೀರಿನ ಪಾತ್ರೆ ಒಂದು, ಇವೆರಡು ಅವರ ಸರ್ವಸ್ವ ಧನವಾಗಿತ್ತು. ಅದನ್ನೂ ಒಂದುದಿನ ಕಳ್ಳರು ಕದ್ದುಕೊಂಡು ಹೋದರು. ಮುಂದೆ ನಡೆಸಬೇಕಾದ ಪಶುಯಾಗಕ್ಕೆ ಪೂರ್ವರಂಗವಾಗಿ ಪ್ರಯಾಜ-ಯಾಗವಿರುವಂತೆ ಮುಂದೆ ಶ್ರೀವೆಂಕಟನಾಥರು ಸ್ವೀಕರಿಸಬೇಕಾಗಿರುವ ಸಂನ್ಯಾಸಾಶ್ರಮಕ್ಕೆ ಪೂರ್ವಾಂಗವಾಗಿ ಕೌಪೀನವನ್ನೇ ಧರಿಸಬೇಕಾದ ಪ್ರಸಂಗ ಒದಗಿಬಂದಂತಾಯಿತು. ಇಷ್ಟಿಗಳಲ್ಲಿ ಐದು ಪ್ರಯಾಜಯಾಗಗಳು ಕ್ಲುಪ್ತವಾಗಿವೆ. ಆದರೆ ಚಾತುರ್ಮಾಸ್ಯ ಯಾಗದಲ್ಲಿ ಈ ಐದು ಪ್ರಯಾಜಗಳೇ ಒಂಭತ್ತಾಗಿ ಬೆಳೆಯುತ್ತವೆ. ಅದರಂತೆ ಪ್ರತಿ ತಿಂಗಳೂ ಎರಡರಂತೆ ಬರುವ ಏಕಾದಶ್ಯುಪವಾಸಗಳು, ಶ್ರೀವೆಂಕಟನಾಥರ ಮನೆಯಲ್ಲಿ ಊಟವೇ ಇಲ್ಲದ್ದರಿಂದ ಐದು ಅಥವಾ ಆರಾಗಿ ಬೆಳೆದು ಬರುತ್ತಿದ್ದವು. ಶ್ರೀ ವೇಂಕಟನಾಥರ ಹಿರಿಯರು ಹಿಂದೆ ಅನುಭವಿಸಿದ ಸಂಪತ್ತು, ಶ್ರೀವೆಂಕಟನಾಥರು ಶ್ರೀರಾಘವೇಂದ್ರತೀರ್ಥರಾದಮೇಲೆ ಅವರ ಭಕ್ತರು ಅಂದೂ ಮತ್ತು ಇಂದೂ ಅನುಭವಿಸಿದ ಮತ್ತು ಅನುಭವಿಸುವ ಸಂಪತ್ತು ಇವುಗಳಿಗೆ ಸಾಮ್ಯವೇ ಸಿಗಲಾರದು. ಈ ಸಂಪತ್ತುಗಳಿಗೆ ಸಮಾನವಾದ ಸಂಪತ್ತೇ ಇಲ್ಲ. ಹೀಗೆ ತನ್ನ ಹಿರಿಯರು ಬೇಕಾದಷ್ಟು ಸಂಪತ್ತನ್ನು ಅನುಭವಿಸಿದ್ದರೂ, ತಾನೇ ಸಂನ್ಯಾಸಿಯಾದಮೇಲೆ ತನ್ನ ಭಕ್ತರು ಬೇಕಾದಷ್ಟು ಸಂಪತ್ತನ್ನು ಅನುಭವಿಸಲಿದ್ದರೂ ಶ್ರೀವೆಂಕಟನಾಥರು ಸಹಿಸ-ಲಸಾಧ್ಯವಾದ ದಾರಿದ್ರ್ಯದ ಬೇಗೆಯನ್ನು ಅನುಭವಿಸಬೇಕಾಯಿತು. ಅವರ ಹಿರಿಯರು ಮತ್ತು ಭಕ್ತರ ಸಂಪತ್ತುಗಳಿಗೆ ಉಪಮೆಯಿಲ್ಲ ದೃಷ್ಟಾಂತವಿಲ್ಲ, ಎಂಬ ಹಾಗೆಯೇ ಶ್ರೀವೆಂಕಟನಾಥರ ದಾರಿದ್ರ್ಯಕ್ಕೂ ಉಪಮೆಯಿಲ್ಲ, ದೃಷ್ಟಾಂತವಿಲ್ಲ. ಹೀಗೆ ಊಟವಿಲ್ಲದಿದ್ದರೂ ಊಟ ಮಾಡಿದವರ ಚಿಹ್ನೆಯಾದ ಗಂಧ ಅಕ್ಷತ ಅಂಗಾರಾದಿಗಳನ್ನು ಧರಿಸಿ ತಮ್ಮ ಉಪವಾಸವನ್ನು ಮರೆಮಾಚಿಕೊಂಡು ವೆಂಕಟನಾಥರು ನಿರಂತರವಾಗಿ ಶಾಸ್ತ್ರಾಭ್ಯಾಸ ಮಾಡಿದರು. ಅವರ ಪತ್ನಿಯಾದ ಸರಸ್ವತಿಯೂ ಕೂಡ ಪತಿಗೆ ಅನುರೂಪರಾಗಿದ್ದರು. ಅವರು ಬಡತನವನ್ನು ಮರೆಮಾಚಿಕೊಂಡು ಬಡತನದ ಕಷ್ಟವನ್ನು ಸಹಿಸಿಕೊಳ್ಳುತ್ತಿದ್ದರು. ಹೊರಗೆ ಯಾರಿಗೂ ತೋರಿಸಿಕೊಳ್ಳುತ್ತಿರಲಿಲ್ಲ. ತನ್ನ ಪತಿಯ ದರ್ಶನ, ಕಾಲು ಒತ್ತುವುದೇ ಮುಂತಾದ ಸ್ಪರ್ಶನ, ಸಂಭಾಷಣೆ ಮುಂತಾದವುಗಳಿಂದ ಆನಂದವನ್ನು ಅನುಭವಿಸುತ್ತಾ ಕಾಲವನ್ನು ಕಳೆಯುತ್ತಿದ್ದರು.

**ಶ್ರೀಸುಧೀಂದ್ರತೀರ್ಥರಿಂದ ಸಂನ್ಯಾಸಕ್ಕಾಗಿ ಪ್ರೇರಣೆ —** ಒಂದು ದಿನ ಶ್ರೀಮೂಲರಾಮದೇವರು ಶ್ರೀ ಸುಧೀಂದ್ರತೀರ್ಥರಿಗೆ ಸ್ವಪ್ನದಲ್ಲಿ ಈ ರೀತಿ ಅಪ್ಪಣೆ ಮಾಡಿದನು. 'ಮಗೂ, ಸುಧೀಂದ್ರ ! ಇನ್ನೆರಡು ವರ್ಷಗಳಲ್ಲಿ ನೀನು ನನ್ನ ಸ್ಥಾನವನ್ನು ಸೇರುವೆ. ಆದ್ದರಿಂದ ಈಗಲೇ ಶ್ರೀವೆಂಕಟನಾಥನಿಗೆ ಸಂನ್ಯಾಸವನ್ನು ಕೊಡು.

ಮಂತ್ರೋಪದೇಶ ಮಾಡು. ಅವನು ಸಜ್ಜನರ ಸಂಪ್ರದಾಯವನ್ನು ರಕ್ಷಿಸಲಿ'. ಶ್ರೀಮೂಲರಾಮದೇವನ ಈ ಆಜ್ಞೆಯನ್ನು ಕೇಳಿ ಪರಮಾನಂದಭರಿತರಾದ ಶ್ರೀಸುಧೀಂದ್ರತೀರ್ಥರು ಮರುದಿನ ಬೆಳಿಗ್ಗೆ ಶ್ರೀವೇಂಕಟನಾಥರನ್ನು ಕರೆದು – 'ಮಗೂ, ವೆಂಕಟನಾಥ, ನೀನು ಸಂನ್ಯಾಸ ಸ್ವೀಕಾರ ಮಾಡಿ, ಶ್ರೀಮೂಲರಾಮದೇವರ ಪೂಜಾ ಮಾಡಬೇಕೆಂದು ಆ ಪರಮಾತ್ಮನೇ ಅಪ್ಪಣೆ ಮಾಡಿದ್ದಾನೆ. ಆದ್ದರಿಂದ ನೀನು ಶುಭಮುಹೂರ್ತದಲ್ಲಿ ಸಂನ್ಯಾಸದೀಕ್ಷಾಸ್ವೀಕಾರ ಮಾಡಬೇಕು.' ಎಂದರು. ಗುಣಸಮುದ್ರರಾದ ಶ್ರೀವೆಂಕಟನಾಥರು ವಿನಯದಿಂದ – 'ಗುರುಗಳೇ, ಮಹಾವೈರಾಗ್ಯಶಾಲಿಗಳಿಗೇ ಸಂನ್ಯಾಸವು ಉಚಿತವಲ್ಲವೇ ? ನಾನೆಲ್ಲಿ ಸಂನ್ಯಾಸವೆಲ್ಲಿ ? ಅತಿ ನಿರ್ಮಲ ಮನಸ್ಸುಳ್ಳವರು ಮಾತ್ರವೇ ನಿರ್ವಹಿಸಲು ಸಾಧ್ಯವಾದ ಸಂನ್ಯಾಸಾಶ್ರಮವೆಲ್ಲಿ ? ವಿಷಯಗಳ ಕೆಸರಿನಿಂದ ಮಲಿನನಾದ ನಾನೆಲ್ಲಿ ? ವೇದವಿದ್ಯಾಸಾಮ್ರಾಜ್ಯವೆಲ್ಲಿ ? ವಿದ್ಯಾವಿಹೀನನಾದ ನಾನೆಲ್ಲಿ ? ತಮ್ಮ ವಿದ್ಯಾಸೂರ್ಯಪ್ರಭೆಯೆಲ್ಲಿ ? ಮಿಂಚುಹುಳದ ಪ್ರಭೆಯಂತಿರುವ ನನ್ನ ವಿದ್ಯಾಪ್ರಭೆಯಲ್ಲಿ? ದೊಡ್ಡಭಾರವನ್ನು ಹೊತ್ತು ಬಾಹುಗಳಿಂದಲೇ ಈಜಿ ಸಮುದ್ರದ ಆ ಕಡೆಯ ದಡವನ್ನು ತಲುಪುತ್ತೇನೆಂಬ ಮಹತ್ತಾದ ಆಸೆಯನ್ನು ಯಾವನಾದರೂ ವಿವೇಕಿಯು ಇಟ್ಟುಕೊಳ್ಳಲು ಸಾಧ್ಯವೇ ?' ಎಂದು ಹೇಳಿದರು.

ಆಗ ಶ್ರೀಸುಧೀಂದ್ರತೀರ್ಥಗುರುವರ್ಯರು ಹೀಗೆಂದರು — 'ವತ್ಸ ಸಮುದ್ರವನ್ನು ತೋಳುಗಳ ಬಲದಿಂದಲೇ ಈಜಿ ದಾಟುವುದು ಅಸಾಧ್ಯವಾದರೂ, ದೋಣಿಯಿಂದ ಅಥವಾ ಹಡಗಿನ ಮೂಲಕ ದಾಟಬಹುದಲ್ಲವೇ ? ಪರಮಾತ್ಮನಲ್ಲಿಯೇ ಮನಸ್ಸಿನ ಅಭಿರತಿ ಎಂಬ ಶಾಂತಿ, ಬಾಹ್ಯ-ಇಂದ್ರಿಯಗಳ ನಿಗ್ರಹರೂಪವಾದ ದಾಂತಿ, ಧೀರತೆ, ಉದಾರತೆ ಇವೇ ಮೊದಲಾದ ಅನೇಕ ನೌಕೆಗಳಿವೆ. ಆ ನೌಕೆಗಳಿಗೆ ನನ್ನ ಅನುಗ್ರಹವೆಂಬ ಹಾಯಿಬಟ್ಟೆ ಮತ್ತು ಧ್ವಜವಿದೆ. ಆದ್ದರಿಂದ ಸಮುದ್ರ ದಾಟುವುದು ನಿನಗೇನೂ ಕಷ್ಟಕರವಾಗುವುದಿಲ್ಲ. ನೀನು ಸಂನ್ಯಾಸವನ್ನು ಸ್ವೀಕರಿಸಿ ಸುಖವಾಗಿ ಸಂಸಾರಸಮುದ್ರವನ್ನು ದಾಟುತ್ತೀ'.

ಶ್ರೀಸುಧೀಂದ್ರತೀರ್ಥರ ಯುಕ್ತಿಯುಕ್ತವಾದ, ವಾತ್ಸಲ್ಯಪೂರ್ಣವಾದ ಈ ಮಾತುಗಳನ್ನು ಕೇಳಿದ ಶ್ರೀವೇಂಕಟನಾಥರು ಇನ್ನೇನು ಮಾಡಬೇಕೆಂದು ಮನಸ್ಸಿನಲ್ಲಿಯೇ ಆಲೋಚಿಸಿದರು. 'ಗುರುಗಳು ತನ್ನಲ್ಲಿ ಸಂನ್ಯಾಸಕ್ಕೆ ಯೋಗ್ಯವಾದ ಎಲ್ಲಾ ಗುಣಗಳಿವೆ ಎಂದು ತಿಳಿಸಿದ್ದಾರೆ. ಈಗ ಯಾವ ರೀತಿ, ಯಾವ ಕಾರಣಗಳನ್ನು ಒಡ್ಡಿ ತಪ್ಪಿಸಿಕೊಳ್ಳಲಿ ?' ಎಂದು ವಿಚಾರ ಮಾಡಿ ಶ್ರೀವೆಂಕಟನಾಥರು ಲೌಕಿಕ ಕಾರಣಗಳನ್ನು, ಮುಂದೊಡ್ಡಿ ಈ ಸಂನ್ಯಾಸವನ್ನು ತಪ್ಪಿಸಿಕೊಳ್ಳಲು ಹವಣಿಸಿದರು. 'ಗುರುವರ್ಯರೇ ! ನನ್ನ ಹೆಂಡತಿಯು ಇನ್ನೂ ಎಳೆವಯಸ್ಸಿನವಳು; ಇರುವ ಒಬ್ಬನೇ ಮಗನೂ ಚಿಕ್ಕವನೂ, ಅವನಿಗಿನ್ನೂ ಉಪನಯನವೂ ಆಗಿಲ್ಲ. ನಾನೂ ಚಿಕ್ಕವಯಸ್ಸಿನವನು, ಬಾಲಕರಂತಿರುವವನು, ನನಗೆ ಸಂನ್ಯಾಸದಲ್ಲಿ ಆಸೆಯೂ ಇಲ್ಲ. ಹೀಗಿದ್ದರೂ ತಾವು ಒತ್ತಾಯ ಮಾಡುವುದಾದರೆ ನಾನು ಇಲ್ಲಿಂದ ಹೊರಟು ಎಲ್ಲಾದರೂ ಹೋಗಿಬಿಡುತ್ತೇನೆ ?

ಆಗ ಶ್ರೀ ಸುಧೀಂದ್ರತೀರ್ಥರು ಮಂದಹಾಸಪೂರ್ವಕವಾಗಿ ಗಂಭೀರವಾಗಿ ಹೀಗೆ ಹೇಳಲಾರಂಭಿಸಿದರು-ಅಪ್ಪ ವೆಂಕಟನಾಥ ! ಹೆಂಡತಿ ಮಕ್ಕಳು ಮುಂತಾದವರಲ್ಲಿ ಮಾಡುವ ಅನುರಾಗವು ಶ್ರೇಯಸ್ಕರವಲ್ಲ, ಶ್ರೇಯಸ್ಸಿಗೆ ಮಾರ್ಗವೂ ಅಲ್ಲ. ಅಷ್ಟೇ ಅಲ್ಲ ಅದು ಶ್ರೇಯಸ್ಸಿನ ಮಾರ್ಗಕ್ಕೆ ವಿರೋಧಿಯಾದುದು. ಆದುದರಿಂದ ವಿವೇಕಿಯಾದ ನೀನು ಭಾರ್ಯಾ ಪುತ್ರಾನುರಾಗವನ್ನು ಬಿಡು. ಜೀವಾತ್ಮನಿಗೆ ಇರುವ ಈ ದೇಹಾಭಿಮಾನದಿಂದಲೇ ಹೆಂಡತಿ, ಮಕ್ಕಳು ಮುಂತಾದವರಲ್ಲಿ ಅಭಿಮಾನ ಉಂಟಾಗುವುದು. ಈ ಪ್ರಪಂಚದ ತತ್ತ್ವವನ್ನು ತಿಳಿದು ದೇಹಕ್ಕೂ ಆತ್ಮನಿಗೂ ಇರುವ ಸಂಬಂಧವನ್ನು ತಿಳಿದ ಜ್ಞಾನಿಗೆ ಹೆಂಡತಿ ಯಾರು ? ಮಗನು ಯಾರು ? ಅದರಲ್ಲೂ ಈ ಲೋಕದ ವ್ಯವಹಾರದಲ್ಲಿ ಸ್ತ್ರೀ ಸಂಪರ್ಕವು ಅತ್ಯಂತ ದುಃಖಕರ ಮತ್ತು ಕಷ್ಟಕರವೂ ಆಗಿದೆ. ನೀನೇ ತಿಳಿದಿಲ್ಲವೇ ? ವಾಲಿಯು

ತನ್ನ ತಮ್ಮನಾದ ಸುಗ್ರೀವನ ಪತ್ನಿಯಲ್ಲಿ ಮೋಹವನ್ನು ಹೊಂದಿ ಹತನಾದನು. ಧರ್ಮರಾಜನೂ ತನ್ನ ಹೆಂಡತಿಯ ಮೇಲಿನ ಅಭಿಮಾನದಿಂದಲೇ ರಾಜ್ಯಭ್ರಂಶ, ವನವಾಸ ದುಃಖ ಮುಂತಾದವುಗಳನ್ನು ಅನುಭವಿಸಿದನು. ಆದುದರಿಂದ ವಿವೇಕಿಯಾದ ನೀನು ಹೆಂಡತಿಯ ಮೇಲಿನ ಮೋಹದಿಂದ ಸಂನ್ಯಾಸವನ್ನು ಒಲ್ಲೆನೆಂದು ಹೇಳ-ಬಾರದು. ಅಷ್ಟೇ ಅಲ್ಲ, ಹೆಂಡತಿಯನ್ನು ಕಟ್ಟಿಕೊಂಡರೆ ಸಾಕೇ ? ಅವಳನ್ನು ಮತ್ತು ಮಕ್ಕಳನ್ನು ಕಾಪಾಡಲು ಹಣ ಬೇಕು. ಹಣ ಸಂಪಾದಿಸುವಾಗ ಉಂಟಾಗುವ ಪಾಪಪರ್ವತಗಳು ಎಷ್ಟೆಂದು ನಿನಗೇ ತಿಳಿದಿಲ್ಲವೇ ? ಹಣ ಸಂಪಾದಿಸಲು ನಮಗೆ ಇಷ್ಟವಿಲ್ಲದ ಅನೇಕ ಕಾರ್ಯಗಳನ್ನು ಮಾಡಬೇಕಾಗುತ್ತದೆ. ಯಾರಾದರೊಬ್ಬನನ್ನು ಹೊಗಳಿ ಉಬ್ಬಿಸಿ, ಸೇವಿಸಿ ಹಣ ಪಡೆಯಬೇಕಲ್ಲವೇ ? ಅವನು ಒಕ್ಕಣ್ಣನಾಗಿದ್ದರೂ, 'ಅಯ್ಯಾ ನೀನು ಪುಂಡರೀಕಾ-ಯತಾಕ್ಷನು, ನಿನ್ನ ಕಣ್ಣುಗಳು ಕಿವಿಗಳವರೆಗೆ ಉದ್ದವಾಗಿ ಸುಂದರವಾಗಿವೆ' ಎಂದು ಅವನನ್ನು ಹೊಗಳಬೇಕಾಗುತ್ತದೆ. ಮಹಾಲೋಭಿಯನ್ನು ನಿರಂತರ ದಾನ ಮಾಡುವ ದಾನಶೂರಕರ್ಣನೆಂದೂ, ಸಂಧ್ಯಾವಂದನೆಯನ್ನೂ ಮಾಡ-ದವನನ್ನು ಯಾವಾಗಲೂ ಯಾಗ ಮಾಡುವವನೆಂದೂ, ದುರಾಚಾರಿಯನ್ನು ಸದಾಚಾರ ಪರಾಯಣನೆಂದೂ, ಕ್ರೂರಸ್ವಭಾವದವನನ್ನು ಶಾಂತನೆಂದೂ, ರಾಗಭರಿತನಾದ ಕಾಮುಕನನ್ನು ವಿರಕ್ತಶಿಖಾಮಣಿಯೆಂದೂ, ಕಾರ್ಯಾ-ಕಾರ್ಯವಿವೇಕಶೂನ್ಯನಾದ ಉನ್ಮತ್ತನನ್ನು, ವಿವೇಕಿಯಾದ ಸುಂದರಪುರುಷನೆಂದೂ, ಮುದುಕನನ್ನು ಯುವಕ-ನೆಂದೂ, ದುಷ್ಟನನ್ನು ಸಾಧುವೆಂದೂ, ಅವಿಧೇಯನಾದವನನ್ನು ವಿನೀತನೆಂದೂ, ಅವಲಕ್ಷಣವಂತನನ್ನು ಉತ್ತಮ ಲಕ್ಷಣಭರಿತನೆಂದೂ, 'ಓಂ' ಎನ್ನಲೂ ಬಾರದವನನ್ನು ಎಲ್ಲಾ ಶಾಸ್ತ್ರವನ್ನೂ ಚೆನ್ನಾಗಿ ಬಲ್ಲವನೆಂದೂ, ತನ್ನ ಮಹಾ-ಶತ್ರುವನ್ನು ಸ್ನೇಹವನ್ನು ಹೆಚ್ಚಿಸತಕ್ಕವನೆಂದೂ, ಅಜ್ಞಶಿಖಾಮಣಿಯನ್ನು ಜ್ಞಾನಿಗಳಲ್ಲಿ ಶ್ರೇಷ್ಠನೆಂದೂ, ಸ್ಪಷ್ಟವಾಗಿ ತನ್ನ ಅಭಿಪ್ರಾಯವನ್ನು ಪ್ರಕಟಪಡಿಸದವನನ್ನೂ ಮಹಾ ಗಂಭೀರನೆಂದೂ, ಹಣದ ಆಶೆಯಿಂದ ಬಡವರು ಹೊಗಳುತ್ತಾರೆ. ಹಾಗೆ ಹೊಗಳಬೇಕಾಗುತ್ತದೆ. ಯಾರ ಮನೆಗೆ ಕಾಲಿಡಬಾರದೋ ಅಂತಹವರ ಮನೆಗೂ ಹೋಗುತ್ತಾರೆ. ಅಪೂಜ್ಯನನ್ನೂ ಪೂಜಿಸುತ್ತಾರೆ. ಅವರು ಮಾಡಿದ ಅಪಮಾನವನ್ನು ಸಹಿಸುತ್ತಾರೆ. ಹೀಗೆ ಕಷ್ಟದಿಂದ ಸಂಪಾದಿಸಿ ತಂದ ಹಣವನ್ನು ಪತ್ನಿಯರ ಕೈಯಲ್ಲಿಟ್ಟರೂ ಅವರಿಗೆ ಇನ್ನು ಹಣ ಸಾಕು ಎಂಬ ಅಲಂಬುದ್ಧಿಯು ಹುಟ್ಟುವುದಿಲ್ಲ.

ಅಷ್ಟೇ ಅಲ್ಲ, ಪತ್ನೀಪುತ್ರಾದಿಗಳಲ್ಲಿ ಅಭಿಮಾನವಿಟ್ಟರೆ ಅವರ ರಕ್ಷಣಾದಿ ಚಿಂತೆಯಿಂದಲೇ ಕಾಲವು ಕಳೆದು ಹೋಗುತ್ತದೆ. ವೆಂಕಟಾರ್ಯ ! ನೀನೂ ಹೀಗೆ ಗೃಹಸ್ಥನಾಗಿದ್ದರೆ ಮನೆಯ ಕೆಲಸದಲ್ಲಿಯೇ ಆಸಕ್ತನಾದ ನಿನಗೆ ವೇದಾಂತ ಕಾಲಕ್ಷೇಪ ಮಾಡುವುದು ಬಹಳ ಕಷ್ಟಸಾಧ್ಯವಾದೀತು. ನೀನು 'ನನ್ನ ಹೆಂಡತಿಯು ಇನ್ನೂ ಚಿಕ್ಕವಳು' ಎಂದು ನಿನ್ನ ಸಂನ್ಯಾಸ ಸ್ವೀಕಾರಕ್ಕೆ ಹೆಂಡತಿಯ ಪ್ರತಿಬಂಧಕಳು ಎಂದು ಹೇಳಿದೆ. ಸಂನ್ಯಾಸಕ್ಕೆ ಪ್ರತಿಬಂಧಕಳಾದ ಹೆಂಡತಿಯಲ್ಲಿ ಆಶೆಯನ್ನು ಬಿಡು. ಸಂನ್ಯಾಸಕ್ಕೆ ಅಡಚಣೆಯಾಗಿರುವ ಹೆಂಡತಿಯಲ್ಲಿ ಮೋಹದಿಂದ ಮಹಾ-ಮಂಗಳಕರವಾದ ಸನ್ಯಾಸವನ್ನು ಸ್ವೀಕರಿಸದೆ ನೀನು ಗೃಹಸ್ಥನಾಗಿ ಕಾಲ ಕಳೆಯುವೆಯಾ ? 'ನನ್ನ ಪುತ್ರನಿಗೆ ಉಪನಯನವಾಗಿಲ್ಲ' ಎಂಬ ಎರಡನೆಯ ಕಾರಣವನ್ನು ಒಡ್ಡಿ ನೀನು ಸಂನ್ಯಾಸ ಸ್ವೀಕಾರಕ್ಕೆ ಒಪ್ಪಲಿಲ್ಲವಷ್ಟೇ ? ಈ ಎರಡನೆಯ ಪ್ರತಿಬಂಧಕವು ಅತ್ಯಂತ ದುರ್ಬಲವು. ಎಲೈ ವೆಂಕಟನಾಥ ! ಮಗನಿಗೆ ಬೇಗನೆ ಉಪನಯನ ಮಾಡು. ಹೀಗೆ ಎರಡು ಪ್ರತಿಬಂಧಕಗಳು ದೂರವಾದರೆ ಸಾಕು. ನಾನು ಇನ್ನೂ ಚಿಕ್ಕವನು, ಆಶ್ರಮದಲ್ಲಿ ನನಗೆ ಆಸೆಯಿಲ್ಲ ಎಂಬ ಇನ್ನೆರಡು ಪ್ರತಿಬಂಧಕ ಮಲಗಳ ನನ್ನ ಉಪದೇಶಜಲದಿಂದ ತೊಳೆಯಲ್ಪಟ್ಟು ಸ್ವಚ್ಛವಾಗುವುವು'. ಹೀಗೆ ಗುರುಗಳು ಉಪದೇಶ ಮಾಡಿದಾಗ ಶ್ರೀವೆಂಕಟನಾಥರು ತುಂಬಾ ವ್ಯಾಕುಲತೆಗೆ ಒಳಗಾದರು. ಗುರುಗಳು ಹೇಳಿದ ಮಾತುಗಳನ್ನು ಮನಃಪೂರ್ವಕವಾಗಿ ಕೇಳುತ್ತಿದ್ದರೂ ಹೊರನೋಟಕ್ಕೆ ಕೇಳದವನಂತೆ ತೋರಿಸಿಕೊಂಡ ವೆಂಕಟನಾಥರು ಮನೆಗೆ ಹೋದರು. ಮನೆಗೆ ಹೋದಮೇಲೆ ಶ್ರೀವೆಂಕಟನಾಥರು ದುರಂತಚಿಂತೆಯಿಂದ

ಒಳಗಿಂದೊಳಗೇ ತಳಮಳಗೊಳ್ಳಲಾರಂಭಿಸಿದರು. ಇತ್ತ ಶ್ರೀಸುಧೀಂದ್ರತೀರ್ಥರು 'ನನಗೆ ಸಂನ್ಯಾಸವನ್ನು ಸ್ವೀಕರಿಸಲು ಇಚ್ಛೆಯಿಲ್ಲ, ತಾವು ಮತ್ತೂ ಆಗ್ರಹ ಪಡಿಸಿದರೆ ನಾನು ಊರುಬಿಟ್ಟು ಎಲ್ಲಾದರೂ ದೂರಕ್ಕೆ ಹೊರಟುಹೋಗುತ್ತೇನೆ' ಎಂದು ಶ್ರೀವೆಂಕಟನಾಥರು ಹೇಳಿದ ಮಾತನ್ನು ನೆನೆಸಿಕೊಂಡು, 'ನಾನು ಸಂನ್ಯಾಸ ಸ್ವೀಕಾರಕ್ಕಾಗಿ ಒತ್ತಾಯಪಡಿಸಿದ್ದರಿಂದ ಈ ವೆಂಕಟನಾಥನು ಊರು ಬಿಟ್ಟು ಎಲ್ಲಾದರೂ ದೂರಕ್ಕೆ ಓಡಿಹೋಗ-ಬಹುದು' ಎಂದು ಭಾವಿಸಿ, ವಿಶ್ವಾಸಿಗಳಾದ ಕೆಲವು ಮಂದಿಯನ್ನು ಶ್ರೀವೆಂಕಟನಾಥರ ಮೇಲೆ ಕಾವಲಿಟ್ಟರು. ಈಗ ಶ್ರೀವೆಂಕಟನಾಥರು ಗುರುಗಳಿದ್ದ ಕುಂಭಘೋಣದಲ್ಲಿಯೇ ಅವರ ರಕ್ಷಣೆಯಲ್ಲಿ ಪತ್ನೀಪುತ್ರರ ಜೊತೆಗೆ ವಾಸಿಸುತ್ತಿದ್ದರು. ಗುರುಗಳು ತನ್ನ ಮೇಲೆ ಕಾವಲಿಟ್ಟಿರುವ ವಿಚಾರವು ಅವರಿಗೆ ತಿಳಿಯಿತು. ಆಗ ಅವರಿಗೆ ಮತ್ತಷ್ಟು ಚಿಂತೆಯುಂಟಾಯಿತು. 'ನಾನು ಈ ಊರಿನಲ್ಲಿಯೇ ಇದ್ದರೆ ಗುರುಗಳು ಇನ್ನೂ ಉಪದೇಶ ಮಾಡಿ ನನ್ನ ಮನವೊಲಿಸಿ ಹೇಗಾದರೂ ಸಂನ್ಯಾಸ ಕೊಡಿಸುತ್ತಾರೆ. ಈಗಿನ ನನ್ನ ಮನಸ್ಸಿನ ಸ್ಥಿತಿಯಿಂದ ವಿಚಾರ ಮಾಡಿದರೆ ಅದು ಬಲಾತ್ಕಾರ ಸಂನ್ಯಾಸವೇ ಆಗುತ್ತದೆ. ಹೇಗಾದರೂ ಮಾಡಿ ಗುರುಗಳ ಕಣ್ಣು ತಪ್ಪಿಸಿ ಇಲ್ಲಿಂದ ಹೊರಟು ಹೋದರೆ ತನ್ನ ಆಜ್ಞೆಯನ್ನು ಉಲ್ಲಂಘಿಸಿದ್ದಕ್ಕಾಗಿ ಗುರುಗಳು ಕುಪಿತರಾಗಿ ನನ್ನನ್ನು ಶಪಿಸಿಯಾರು. ಈಗ ಏನು ಮಾಡಲಿ. ಇಲ್ಲಿ ಇರಲೂ ಸಾಧ್ಯವಿಲ್ಲ, ಇಲ್ಲಿಂದ ಹೊರಟುಹೋಗಲೂ ಸಾಧ್ಯವಿಲ್ಲ. ಏನು ಮಾಡಲಿ ? ಎಲ್ಲಿಗೆ ಹೋಗಲಿ ? ಈ ಉಭಯ ಸಂಕಟದಿಂದ ಹೇಗೆ ಪಾರಾಗಲಿ ?' ಎಂದು ಶ್ರೀವೆಂಕಟನಾಥರು ಬಹಳ ದಿನಗಳವರೆಗೆ ಚಿಂತಿಸುತ್ತಾ ಕಾಲ ಕಳೆದರು.

**ಸರಸ್ವತಿಗೆ ವಿಷಯ ತಿಳಿಯಿತು. ಸರಸ್ವತಿಯ ಮನಸ್ಸು ಕ್ಷೋಭೆಗೊಂಡಿತು** — ಇತ್ತ ಸರಸ್ವತಿಗೆ ತನ್ನ ಪತಿಯು ಸಂನ್ಯಾಸಿಯಾಗಲು ಹವಣಿಸುತ್ತಿದ್ದಾರೆ. ಗುರುಗಳು ಅವರಿಗೆ ಒತ್ತಾಯವನ್ನು ತರುತ್ತಿದ್ದಾರೆ ಎಂಬ ವಿಷಯವು ತಿಳಿಯಿತು. ಅವರಿಗೆ ಈ ವಿಷಯವನ್ನು ಸ್ವತಃ ವೆಂಕಟನಾಥರೂ ತಿಳಿಸಲಿಲ್ಲ, ಬೇರೆಯವರೂ ಹೇಳಲಿಲ್ಲ. ಆದರೆ ಒಬ್ಬರ ಕಿವಿಯಿಂದ ಮತ್ತೊಬ್ಬರ ಕಿವಿಗೆ ವೆಂಕಟನಾಥರ ಸಂನ್ಯಾಸದ ವಿಚಾರವು ಹರಡುತ್ತಾ ಕೊನೆಗೆ ಸರಸ್ವತಿಯ ಕಿವಿಗೂ ಈ ಸಮಾಚಾರವು ಮುಟ್ಟಿತು. ಆಗ ಸರಸ್ವತೀ ದೇವಿಗೆ ದಿಕ್ಕೇ ತೋಚಲಿಲ್ಲ. ಅವರ ಎರಡೂ ಕಣ್ಣುಗಳಿಂದ ಧಾರಾಕಾರವಾಗಿ ಕಣ್ಣೀರು ಸರಿಯಲಾರಂಭಿಸಿತು. ಮೌನವಾಗಿ ಒಳಗಿಂದೊಳಗೇ ಅಳುತ್ತಾ ಅವರು ಪತಿಗೆ ಕಾಣಿಸದಂತೆ ಅಳುತ್ತಾ 'ತನ್ನ ಪ್ರಪಂಚವೆಲ್ಲವೂ ಶೂನ್ಯವಾಗುತ್ತಾ ಬರುತ್ತಿದೆ. ತಾನಿನ್ನು ಯಾರೂ ದಿಕ್ಕಿಲ್ಲದ ಅನಾಥೆ' ಎಂದು ಯೋಚಿಸಿ ಅದೆಷ್ಟು ಕಣ್ಣೀರು ಸುರಿಸಿದರೋ ? ಅಗ್ನಿಯಲ್ಲಿ ಹೋಮ ಮಾಡುವುದಕ್ಕೆ ಮೊದಲು ಅಗ್ನಿದೇವರ ಸುತ್ತಲೂ ನೀರಿನಿಂದ 'ಅದಿತೇಽನುಮನ್ಯಸ್ವ' ಇತ್ಯಾದಿ ಮಂತ್ರದಿಂದ ಪರಿಷೇಕ (ನೀರಿನಿಂದ ಸುತ್ತಲೂ ಚಿಮುಕಿಸುವುದು) ಮಾಡುತ್ತಾರೆ. ಅನಂತರ ಹೋಮ ಮಾಡುತ್ತಾರೆ. ಅದರಂತೆಯೇ ಸರಸ್ವತಿಯು ಮುಂದೆ ಉಂಟಾಗಲಿರುವ ಪತಿಯ ವಿರಹಾಗ್ನಿಯಲ್ಲಿ ತನ್ನ ದೇಹವನ್ನು ಹೋಮಿಸಲು ಈಗ ಪರಿಷೇಕ ಮಾಡುತ್ತಿದ್ದಾಳೋ ಎಂಬಂತೆ ಧಾರಾಕಾರವಾಗಿ ಕಣ್ಣೀರು ಸುರಿಸುತ್ತಾ ತನ್ನ ದೇಹವನ್ನು ಅಭಿಷೇಕಿಸಿದರು.

**ಶ್ರೀವೆಂಕಟನಾಥರಿಗೆ ಸರಸ್ವತಿಯ ಸಾಕ್ಷಾತ್ಕಾರ** — ಆದರೆ ಇತ್ತ ವೆಂಕಟಾನಾಥರ ಜೀವನದಲ್ಲಿ ಒಂದು ಅದ್ಭುತ ಘಟನೆಯು ನಡೆಯಿತು. ಯಾವ ದಿನ ಶ್ರೀವೆಂಕಟನಾಥರು ಚಿಂತಾಕ್ರಾಂತರಾಗಿ ಇದ್ದರೋ ಆ ದಿನ ರಾತ್ರಿ ಮಲಗಿದ್ದಾಗ, ಕೊನೆಯ ಜಾಮದ ಅರ್ಧಭಾಗವೂ ಕಳೆದಿದ್ದಾಗ ಅರುಣೋದಯ ಸಮಯದಲ್ಲಿ ಅವರು ಒಂದು ಆಶ್ಚರ್ಯಕರವಾದ ದೃಶ್ಯವನ್ನು ನೋಡಿದರು. ಇನ್ನೇನು ಅರುಣೋದಯವಾಗುತ್ತಾ ಬರುತ್ತದೆ. ಆ ಸಮಯದಲ್ಲಿ ನೋಡಿದ ದಿವ್ಯ (ಸ್ವಪ್ನ) ದೃಶ್ಯವಿದು. ವೆಂಕಟನಾಥರ ಹಾಸಿಗೆಯ ಬಳಿಯಲ್ಲಿ ಯಾವಳೋ ಒಬ್ಬ ದೇವತಾ ಸ್ತ್ರೀಯು ನಿಂತಿದ್ದಾಳೆ. ಅವಳ ದಿವ್ಯ ಮುಖ ಮತ್ತು ಕಣ್ಣುಗಳು ಶರತ್ಕಾಲದ ಕಮಲದಂತಿವೆ. ದಿವ್ಯವಾದ ವಸ್ತ್ರವನ್ನುಟ್ಟು ಸೊಂಟದಲ್ಲಿ ಪ್ರಕಾಶಿಸುವ ಒಡ್ಯಾಣವನ್ನು ಧರಿಸಿದ ಆ ದೇವಿಯು ವೆಂಕಟನಾಥರ ಹತ್ತಿರಕ್ಕೆ ಬಂದಿದ್ದಾಳೆ. ಆ

ದೇವತಾ ಸ್ತ್ರೀಯನ್ನು ನೋಡಿ ವೆಂಕಟನಾಥರಿಗೆ ಪರಮಾಶ್ಚರ್ಯವಾಯಿತು. 'ಅವರು ಆ ದೇವಿಯನ್ನು ನೋಡಿದರು. ನೋಡುತ್ತಾ ಆಲೋಚಿಸಿದರು – 'ಮೈಯಲ್ಲೆಲ್ಲಾ ದಿವ್ಯವಾದ ಬಂಗಾರದ ಆಭರಣಗಳನ್ನು ಧರಿಸಿ ಅಲಂಕೃತಳಾದ ಈ ದೇವಿ ಯಾರು ? ಇವಳ ಮುಖವು ಚಂದ್ರನಂತಿದೆ. ದಿವ್ಯವಾದ ಸೀರೆಕುಪ್ಪಸ ಮುಂತಾದವು-ಗಳನ್ನು ಧರಿಸಿದ ಈ ದೇವಿಯಲ್ಲಿ ಯಾವ ದೋಷವೂ ಕಂಡು ಬರುತ್ತಿಲ್ಲ. ಪ್ರಕಾಶ ವರ್ತುಲದಲ್ಲಿ ಕಗ್ಗತ್ತಲೆಯ ರಾತ್ರಿಯಂತೆ ಬಹಳ ಕಪ್ಪು ಕಪ್ಪಾದ ಕೇಶಪಾಶ ಹೊಳೆಯುತ್ತಿದೆ. ಆದರೆ ಬಳಿಯಲ್ಲಿಯೇ ಸುಂದರನಾದ ಹುಣ್ಣಿಮೆ ಚಂದ್ರನನ್ನು ಧಿಕ್ಕರಿಸುವ ಮುಖಚಂದ್ರನೂ ಹೊಳೆಯುತ್ತಿದ್ದಾನೆ. ಇವಳನ್ನು ನೋಡಿದರೆ ಸರ್ವಜ್ಞಳಾದ ಸರಸ್ವತಿ-ದೇವಿಯಂತೆ ಕಾಣಿಸುತ್ತಿದ್ದಾಳೆ. ಇವಳು ಯಾರಿರಬಹುದು ? ಇವಳು ಮನುಷ್ಯ ಸ್ತ್ರೀಯೋ, ಕಿನ್ನರಲಲನೆಯೋ, ದೇವಾಂಗನೆಯೋ ? ಇವಳು ಇಂತಹವಳೇ ಎಂಬ ನಿರ್ಧಾರವು ನನಗೆ ಉಂಟಾಗುತ್ತಿಲ್ಲ. ಯಾರೇ ಆಗಿರಲಿ ? ಇವಳೇಕೆ ನನ್ನ ಹತ್ತಿರ ಬಂದಿದ್ದಾಳೆ ?' ಎಂದು ಶ್ರೀವೆಂಕಟನಾಥರು ಆಲೋಚಿಸುತ್ತಿದ್ದಾಗ ಆ ಅಲೌಕಿಕ ನಾರೀಮಣಿಯು ತಾನೇ ಮಾತನಾಡಲಾರಂಭಿಸಿದಳು.

**ವಿದ್ಯಾದೇವಿಯ ಉಪದೇಶ** — ವೆಂಕಟನಾಥ ! ನಾನು ವಿದ್ಯಾದೇವಿಯು. ನೀನು ಸಂನ್ಯಾಸ ಸ್ವೀಕಾರ ಮಾಡಿ ಶ್ರೀಮೂಲರಾಮನನ್ನು ಅರ್ಚಿಸಿ ಜಗತ್ತನ್ನು ಉದ್ಧಾರ ಮಾಡುವುದಕ್ಕಾಗಿಯೆ ಹುಟ್ಟಿರುವ ಸುವರ್ಣ ಜೀವಾತ್ಮನು. ನಿನ್ನ ಸಂನ್ಯಾಸ ಸ್ವೀಕಾರದಿಂದ ನನಗೆ ಬಹಳಪ್ರಯೋಜನವಿದೆ. ನನ್ನ ಉಪದೇಶವನ್ನು ಮನಸ್ಸಿಟ್ಟು ಕೇಳು.

'ಕನ್ಯೆಯಾದ ಸತ್ಯವತೀ ದೇವಿಯಲ್ಲಿ ಆವಿರ್ಭವಿಸಿದ ಕಾನೀನ ಎಂದು ಪ್ರಸಿದ್ಧರಾದ ಶ್ರೀವೇದವ್ಯಾಸರು ನಾನು ಯಾವಾಗಲೂ ಕನ್ಯೆ'ಯಾಗಿಯೇ ಇರುವಂತೆ ಅನುಗ್ರಹಿಸಿದ್ದಾರೆ. ನನ್ನನ್ನು ವಿದ್ಯಾಲಕ್ಷ್ಮೀ ಎಂದು ತಿಳಿದುಕೋ, ಆ ಕಾರಣದಿಂದ ಎಲ್ಲಾ ಪಂಡಿತರಿಗೂ ಜಗದ್ಗುರುಗಳಾದ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಗೂ ನಾನು ಪ್ರೀತಿ ವಿಷಯಳಾದೆನು. ನನಗೆ ಶ್ರೀಮಧ್ವಾಚಾರ್ಯರೇ ತಂದೆಯು. ಚಿಕ್ಕ ಶಿಶುವಾಗಿದ್ದ ನನ್ನನ್ನು ನನ್ನ ತಂದೆ ಮಧ್ವಾಚಾರ್ಯರು ಶ್ರೀವೇದವ್ಯಾಸರ ವಾಣಿಯೆಂಬ ಕಾಮಧೇನುವಿನಿಂದ ಕರೆದ ತಮ್ಮ ಭಾಷ್ಯವೆಂಬ ಹಾಲಿನಿಂದ ಬೆಳೆಸಿದರು. ಶ್ರೀಮದಕ್ಷೋಭ್ಯತೀರ್ಥಶ್ರೀಚರಣರ ಶಿಷ್ಯರಲ್ಲಿ ಅಗ್ರಗಣ್ಯರಾದ ಪ್ರೌಢಪಂಡಿತವರೇಣ್ಯರಾದ ಶ್ರೀಜಯತೀರ್ಥಾರ್ಯರು ನನಗೆ ತಾರುಣ್ಯ ಬರುವವರೆಗೂ ಪೋಷಿಸಿದರು. ಶ್ರೀಕೃಷ್ಣದೇವರಾಯನು ಯಾರ ಸೇವೆಯಿಂದ ಈ ಕರ್ನಾಟಕದೇಶ ಮತ್ತು ಭಾರತಭೂಮಿಯನ್ನು ಒಳ್ಳೆಯ ರಾಜನುಳ್ಳದ್ದು ಎಂಬ ಹೆಸರು ಬರುವಂತೆ ಮಾಡಿದನೋ ಅಂತಹ ಶ್ರೀಮದ್‌ವ್ಯಾಸತೀರ್ಥರು ನನ್ನನ್ನು ಕೈಹಿಡಿದು ನಡೆಸಿ ಬೆಳೆಸಿದರು. ಅವರ ಪಾಲನ-ಪೋಷಣಗಳಿಂದ ನಾನು ಚೆನ್ನಾಗಿ ಬೆಳೆದೆನು. ನನಗೆ ಕಲ್ಪಪರ್ಯಂತವಾಗಿ ಬದುಕಿರಬೇಕೆಂದು ಆಸೆಯಿತ್ತು. ನಾನು ಬಳ್ಳಿಯಂತೆ ಬೆಳೆಯುತ್ತಿದ್ದೆನು. ನ್ಯಾಯಾಮೃತವೆಂಬ ಅಮೃತವನ್ನು ಕುಡಿದು ಬೆಳೆದೆನು. ನಾಟ್ಯವಾಡುವ ಬಯಕೆಯುಳ್ಳ ನನಗೆ ತರ್ಕತಾಂಡವವು ನರ್ತನಕ್ಕೆ ಅನುಕೂಲವಾಯಿತು. ಶ್ರೀಮನ್ನ್ಯಾಯಸುಧಾತಾತ್ಪರ್ಯದ ಪ್ರಕಾಶನಕ್ಕೋಸ್ಕರ ಆವಿರ್ಭವಿಸಿದ ಚಂದ್ರಿಕೆಯು ನನಗೆ ವಾಸಭೂಮಿಯಾಯಿತು. ಹೀಗೆ ನನಗೆ ಅಮೃತವನ್ನು ಕುಡಿಸಿ, ನನ್ನಿಂದ ನಾಟ್ಯವಾಡಿಸಿ ನನಗೆ ಸ್ಥಿರವಾದ ಭೂಮಿಕೆಯನ್ನು ಸಿದ್ಧಪಡಿಸಿಕೊಟ್ಟವರು ಶ್ರೀಮದ್‌ವ್ಯಾಸ-ತೀರ್ಥರು. ಶ್ರೀವಿಜಯೀಂದ್ರತೀರ್ಥರು ನನ್ನನ್ನು ಗೆಳತಿಯನ್ನಾಗಿ ಮಾಡಿಕೊಂಡರು. ಉತ್ತಮವಾದ ಕೀರ್ತಿಯನ್ನು ನನ್ನ ಮೂಲಕವಾಗಿಯೇ ಪಡೆದರು. ಜಗತ್ತಿನಲ್ಲಿ ಪ್ರಖ್ಯಾತರಾದರು. ಅವರು ''ನ್ಯಾಯಾಮೃತ ಆಮೋದ''ವೆಂಬ ನ್ಯಾಯಾಮೃತವ್ಯಾಖ್ಯಾನವನ್ನು ರಚಿಸಿ ಬಳ್ಳಿಯಂತಿರುವ ನನಗೆ ಒಂದು ಪಾತಿಯನ್ನು ಮಾಡಿಕೊಟ್ಟರು. ಶ್ರೀವಿಜಯೀಂದ್ರತೀರ್ಥರ ಪ್ರಭಾವವು ಚಮತ್ಕಾರಕರವಾದುದು, ಆನಂದಕರ ಮತ್ತು ಸುಂದರ. ಅವರು ಬಣ್ಣ ಬಣ್ಣದ ಅತಿ ಹೊಸದಾದ ಎಲ್ಲಾ ಕಡೆ ಪ್ರಸಿದ್ಧವಾದ ''ಮಧ್ವಾಧ್ವಕಂಟಕೋದ್ಧಾರ'' ಎಂಬ ನಾರುಮಡಿಯನ್ನು ಕೊಟ್ಟರು. ಅದರ ಬೆಲೆಯನ್ನು ಕೇಳಿ ಎಲ್ಲರೂ ಇದು ನ್ಯಾಯವಾದ ಬೆಲೆ, ಇದಕ್ಕಿಷ್ಟು ಬೆಲೆ ಕೊಡುವುದು ಸರಿ

ಎಂದು ಹೊಗಳಿದರು. ಆ ಗ್ರಂಥದ ಅರ್ಥವನ್ನು ಶ್ಲಾಘಿಸಿದರು. ನನ್ನ ಆಭರಣಗಳನ್ನು ಇಟ್ಟುಕೊಳ್ಳಲು ಒಂದು ಪೆಟ್ಟಿಗೆಯ ಆವಶ್ಯಕತೆಯಿತ್ತು. ನನ್ನ ಸ್ನೇಹಿತರಾದ ಶ್ರೀಮದ್ ವಿಜಯೀಂದ್ರತೀರ್ಥರು ''ತತ್ತ್ವಮಾಣಿಕ್ಯಪೇಟೀ'' ಎಂಬ ಆಭರಣಗಳನ್ನು ಇಡುವ ಪೆಟ್ಟಿಗೆಯನ್ನು ಮಾಡಿಕೊಟ್ಟರು. ಪೆಟ್ಟಿಗೆಯೇನೋ ಸಿಕ್ಕಿತ್ತು. ಆದರೆ ಪೆಟ್ಟಿಗೆಯೊಳಗೆ ಇಟ್ಟುಕೊಳ್ಳಲು ಆಭರಣಗಳಿರಬೇಡವೇ ? ಪೂಜ್ಯರಾದ ಶ್ರೀ ವಿಜಯೀಂದ್ರರು ''ನ್ಯಾಯಮೌಕ್ತಿಕ ಮಾಲಾ'' ಎಂಬ ಮುತ್ತಿನ ಸರ, ಹೀಗೆಯೇ ಲೋಕದಲ್ಲಿ ಆಭರಣವೆಂದು ಯಾವ ಯಾವುದು ಪ್ರಸಿದ್ಧವಾಗಿದೆಯೋ, ಆಯಾ ಹೆಸರಿನ ಗ್ರಂಥಗಳನ್ನೇ ನನಗೆ ಆಭರಣವನ್ನಾಗಿ ಮಾಡಿಕೊಟ್ಟು, ನನ್ನನ್ನು ಬಹಳ ಚೆನ್ನಾಗಿ ಅಲಂಕಾರ ಮಾಡಿದರು. ಆ ಆಭರಣಗಳನ್ನೆಲ್ಲಾ ನಾನು ಬೇಡವಾದಾಗ ಪೆಟ್ಟಿಗೆಯಲ್ಲಿಟ್ಟುಕೊಳ್ಳಲು ಅನುಕೂಲ ಮಾಡಿಕೊಟ್ಟರು. ಶ್ರೀಸುಧೀಂದ್ರತೀರ್ಥರು ವಾದಸಭೆಗಳಲ್ಲಿ ಪ್ರತಿವಾದಿಗಳ ಜೊತೆಗೆ ಜಯಪರಾಜಯದ ನಿಯಮವನ್ನಿಟ್ಟುಕೊಂಡು 'ಜಲ್ಪ'-ವೆಂಬ ಚರ್ಚೆಯನ್ನು ನಡೆಸಿ ಪ್ರತಿವಾದಿಗಳನ್ನು ಜಯಿಸಿದರು. ಆಗ ಅವರು 'ಸರಸ್ವತಿಯು ನನಗೆ ಜಯವನ್ನು ಕೊಟ್ಟಳು' ಎಂದು ಸಂತೋಷಪಟ್ಟು, ನಾನು ಮಾಡಿದ ಉಪಕಾರವನ್ನು ಸ್ಮರಿಸುತ್ತಾ, ಏನಾದರೂ ಪ್ರತ್ಯುಪಕಾರ ಮಾಡಬೇಕೆಂದು ಆಲೋಚಿಸಿ ತರ್ಕತಾಂಡವ ಗ್ರಂಥದ ವ್ಯಾಖ್ಯಾನವೆಂಬ ಉತ್ತಮವಾದ ರಂಗಸ್ಥಲವನ್ನು ಮಾಡಿ-ಕೊಟ್ಟು ನನ್ನ ನರ್ತನಕ್ಕೆ ಅನುಕೂಲ ಮಾಡಿಕೊಟ್ಟರು. ನನ್ನ ಕಿರೀಟದ ಮೇಲ್ಭಾಗದಲ್ಲಿ ಒಂದು ಅಲಂಕಾರದ ಮುತ್ತು ಬೇಕಾಗಿತ್ತು. ಶ್ರೀಸುಧೀಂದ್ರತೀರ್ಥರು ಶ್ರೀಮದ್‌ವೇದವ್ಯಾಸರಿಂದ ರಚಿತವಾದ ಶ್ರೀಮದ್‌ಭಾಗವತದ ದುರ್ಗಮ-ವಾದ ಎರಡು ಮತ್ತು ಹನ್ನೊಂದನೆಯ ಸ್ಕಂಧಗಳಿಗೆ ವ್ಯಾಖ್ಯಾನವನ್ನು ಬರೆದು, ನನ್ನ ಕಿರೀಟವನ್ನು ಮುತ್ತಿನಿಂದ ಅಲಂಕರಿಸಿದರು. ಈ ಸುಧೀಂದ್ರತೀರ್ಥರೇ ನನಗೊಂದು ಕ್ರೀಡೋದ್ಯಾನವನ್ನು ಮಾಡಿಕೊಟ್ಟರು. ವಿಚಿತ್ರವಾದ ಚೂರ್ಣಿಕಾ ಎಂಬ ಗದ್ಯಗಳುಳ್ಳ ಉತ್ತಮವಾದ ''ಸುಭದ್ರಾಪರಿಣಯ'' ನಾಟಕವೇ ನನ್ನ ವಿಹಾರದ ಉದ್ಯಾನವನ-ವಾಯಿತು. ಹೀಗೆ ಕ್ರಮವಾಗಿ ಬೆಳೆದು, ಇವರೆಲ್ಲರಿಂದ ಅಲಂಕೃತಳಾದ ನಾನು ಈ ಕಷ್ಟದ ದಾರಿಯಲ್ಲಿದ್ದೇನೆ. ಚಂದ್ರಿಕಾಸಹಿತಳಾದ ಅಮೃತದ ಬಳ್ಳಿಯಂತಿರುವ, ಸುಧಾವಲ್ಲಿಯಾದ ನನ್ನ ಬುಡವನ್ನೇ ಕತ್ತರಿಸಿದರೆ, ಇದುವರೆಗೆ ನನ್ನನ್ನು ಎಲ್ಲರೂ ಬೆಳೆಸಿದ್ದು ಅಲಂಕರಿಸಿದುದು ವ್ಯರ್ಥವಾಗುತ್ತದೆ. ಒಂದು ಆಧಾರವಾದ ವಸ್ತುವು ಇದ್ದರೆ ತಾನೇ ಅದರ ಗುಣಧರ್ಮಗಳ ಅಥವಾ ಅಲಂಕಾರದ ಚಿಂತೆ. ಗೋಡೆ ಇದ್ದರೆ ತಾನೇ ಚಿತ್ರ ಬರೆಯುವ ಆಲೋ-ಚನೆಯು ? ಆದುದರಿಂದ ನೀನು ಚಂದ್ರಿಕಾ ಮತ್ತು ಸುಧಾಗ್ರಂಥಗಳಿಗೆ ವ್ಯಾಖ್ಯಾನ ಬರೆದು ಸುಧೆಯ ಬಳ್ಳಿ-ಯಂತಿರುವ ನನ್ನ ಬುಡವನ್ನು ಭದ್ರಗೊಳಿಸು. ಅಪ್ಪಾ! ವೆಂಕಟಾರ್ಯ ! ನಿನ್ನ ಗುರುಗಳಾದ ಶ್ರೀಸುಧೀಂದ್ರ ತೀರ್ಥರಲ್ಲಿ ಇನ್ನು ಮುಂದೆ ನಾನು ಕೇವಲ ಎರಡೇ ವರ್ಷ ವಾಸ ಮಾಡುವೆನು. ಎರಡು ವರ್ಷಗಳ ಅನಂತರ ನಿನ್ನ ಗುರುಗಳಾದ ಶ್ರೀಸುಧೀಂದ್ರತೀರ್ಥರು ಹರಿಪಾದಪದ್ಮಯುಗಲವನ್ನು ಸೇರುವರು. ಆದ್ದರಿಂದ ನಿನ್ನ ಗುರುಗಳಿಗೆ ಸುಧಾ-ಚಂದ್ರಿಕೆಗಳ ವ್ಯಾಖ್ಯಾನವನ್ನು ಮಾಡಲು ಸಾಧ್ಯವಾಗುವುದಿಲ್ಲ. ನ್ಯಾಯಸುಧಾ ಮತ್ತು ಚಂದ್ರಿಕೆಗಳ ವ್ಯಾಖ್ಯಾನ ಮಾಡುವುದಕ್ಕೆ ನಿನ್ನನ್ನೂ, ನಿನ್ನ ಗುರುಗಳಾದ ಶ್ರೀಸುಧೀಂದ್ರತೀರ್ಥರನ್ನೂ ಬಿಟ್ಟು ಮತ್ತಾರೂ ಭೂಲೋಕ-ದಲ್ಲಿ ಸಮರ್ಥರು ಈಗ ಇಲ್ಲ. ಮುಂದೆ ಹುಟ್ಟುವುದೂ ಇಲ್ಲ. ಆದ್ದರಿಂದ ನೀನೇ ಆ ಕಾರ್ಯವನ್ನು ಮಾಡಬೇಕಾಗಿದೆ.

ವಿದ್ಯಾದೇವಿಯು ವೆಂಕಟಾರ್ಯರು ಸಂನ್ಯಾಸಸ್ವೀಕಾರ ಮಾಡಿದರೆ ಅದರಿಂದ ಅವರಿಗೆ (ಸ್ವತಃ ವೆಂಕಟ-ನಾಥರಿಗೆ) ಆಗುವ ಪ್ರಯೋಜನವನ್ನು ಹೇಳುತ್ತಾಳೆ- ಎಲೈ ವೆಂಕಟಾರ್ಯನೇ ! ಶ್ರೀಮೂಲರಾಮನ ಪ್ರತಿಮೆಯನ್ನು ಯಾರು ಪೂಜೆ ಮಾಡುತ್ತಾರೋ ಅವನಲ್ಲಿ ನಾನು ವಾಸಿಸಬೇಕೆಂದೂ, ಸನ್ನಿಧಾನವಿಡಬೇಕೆಂದೂ, ಸಂನ್ಯಾಸಿಶ್ರೇಷ್ಠರೇ ಆ ಮೂಲರಾಮಪ್ರತಿಮೆಯ ಪೂಜೆ ಮಾಡಬೇಕೆಂದೂ ಶ್ರೀವೇದವ್ಯಾಸರು ನಿಯಮವನ್ನು ಮಾಡಿದ್ದಾರೆ. ಆದುದರಿಂದ ಯಾವ ಯತಿಶ್ರೇಷ್ಠರು ಶ್ರೀರಾಮನ ಪ್ರತಿಮೆಯನ್ನೂ ನನ್ನನ್ನೂ ಪೂಜಿಸುತ್ತಾರೋ ಅವರಲ್ಲಿ ನಾನು

ನಿತ್ಯವೂ ವಾಸಮಾಡುತ್ತೇನೆ. ಯಾರು ಸಂನ್ಯಾಸಿಗಳಲ್ಲವೋ, ಸಂನ್ಯಾಸಿಗಳಾಗಿದ್ದರೂ ಶ್ರೀಮೂಲರಾಮನನ್ನು ಪೂಜಿಸು- ವುದಿಲ್ಲವೋ ಅವರಲ್ಲಿ ನಾನು ನಿತ್ಯ ಸನ್ನಿಧಾನವನ್ನು ಇಡುವುದಿಲ್ಲ. ಆದುದುರಿಂದ ನೀನು ಸಂನ್ಯಾಸವನ್ನು ಸ್ವೀಕರಿಸು, ಶ್ರೀಮೂಲರಾಮನನ್ನು ಪೂಜಿಸು. ನನ್ನ ನಿತ್ಯಸನ್ನಿಧಾನಕ್ಕೆ ಪಾತ್ರನಾಗು. ವಿದ್ಯಾರಾಜ್ಯಲಕ್ಷ್ಮಿಯ ರಾಜನಾಗು.

**ವಿದ್ಯಾದೇವಿಯು ,ಶ್ರೀವೆಂಕಟನಾಥರು ಸಂನ್ಯಾಸಸ್ವೀಕಾರ ಮಾಡದಿದ್ದರೆ ತನಗೂ ಮತ್ತು ಇತರರಿಗೂ ಆಗುವ ಹಾನಿಯನ್ನು ಹೇಳುತ್ತಾಳೆ.**

ನೀನು ನನ್ನ ಮಾತನ್ನು ಕೇಳದಿದ್ದರೆ, ವಿದ್ಯಾಸಾಮ್ರಾಜ್ಯವನ್ನು ರಕ್ಷಿಸುವವರು ನಿನ್ನ ಹೊರತು ಬೇರೊಬ್ಬರು ಇಲ್ಲದಿರುವುದರಿಂದ, ನೀನು ಸಾಮ್ರಾಜ್ಯಲಕ್ಷ್ಮಿಯ ಹೊಣೆಯನ್ನು ಒಪ್ಪಿಕೊಳ್ಳದಿದ್ದರೆ ಈ ವೇದಾಂತರಾಜ್ಯವು ಅರಾಜಕವಾಗುತ್ತದೆ. ಆಗ ವೇದವಿಚಾರವೇ ನಾಶವಾಗುವುದು. ಆಗ ವೇದವಿಚಾರ ಮೂಲಕವಾದ ವೈಷ್ಣವ ಸಂಪ್ರದಾಯವು ನಶಿಸಿಹೋಗುವುದು. ಅಯ್ಯೋ! ಎಂತಹ ಆಪತ್ತು! ಮತ್ತೂ ಹೇಳುತ್ತೇನೆ. ಮಗೂ ವೇಂಕಟನಾಥ ! ನೀನು ವಿದ್ಯಾಸಾಮ್ರಾಜ್ಯದ ಆಧಿಪತ್ಯವನ್ನು ಅಂಗೀಕರಿಸದಿದ್ದರೆ ಮುಂದೆ ಹೇಳುವ ಅನರ್ಥಪರಂಪರೆಗಳು ಉಂಟಾಗುವುವು. ಅದನ್ನೆಲ್ಲಾ ವಿಸ್ತಾರವಾಗಿ ಹೇಳುತ್ತೇನೆ, ಕೇಳು. ಶ್ರೀಮದ್ ವೈಷ್ಣವ ಸಿದ್ಧಾಂತ ಪ್ರತಿಷ್ಠಾಪನೆಗಾಗಿ ಶ್ರೀಮದ್ ಬಾದರಾಯಣರಿಂದ ಬ್ರಹ್ಮಸೂತ್ರಗಳಲ್ಲಿ ಅನಂತ ನ್ಯಾಯಗಳು ಹೇಳಲ್ಪಟ್ಟಿವೆ. ಆ ನ್ಯಾಯಗಳನ್ನು ಬೇರೆ ಬೇರೆ ವಾದಿಗಳು ಬೇರೆ ಬೇರೆ ರೀತಿಯಿಂದ ಕಲ್ಪಿಸಿದ್ದಾರೆ. ಶ್ರೀವೇದವ್ಯಾಸರ ಅಭಿಪ್ರಾಯಕ್ಕೆ ವಿರುದ್ಧವಾದ ಈ ಕಲ್ಪಿತ ನ್ಯಾಯಗಳು ಸೂತ್ರಗಳ ಅರ್ಥವೆಂದೇ ಸಾಧಾರಣ ಜನರು ತಿಳಿದಾಗ ಬ್ರಹ್ಮಸೂತ್ರೋಕ್ತನ್ಯಾಯಗಳಿಂದ ಶ್ರೀಮದ್ವೈಷ್ಣವಸಿದ್ಧಾಂತವನ್ನು ಸ್ಥಿರವಾಗಿ ಸ್ಥಾಪಿಸಲು ಸಾಧ್ಯವಾಗುವುದಿಲ್ಲ. ವೈಷ್ಣವ ಸಿದ್ಧಾಂತಕ್ಕೆ ನೇರ ವಿರುದ್ಧವಾದ ಸಿದ್ಧಾಂತಗಳ ಸ್ಥಾಪನೆಗೆ ಇತರರು ಕಲ್ಪಿಸಿದ ಬ್ರಹ್ಮಸೂತ್ರಗಳ ನ್ಯಾಯಾಭಾಸಗಳು ಸಹಕಾರಿಯಾಗುತ್ತವೆ. ಆ ಸಿದ್ಧಾಂತಗಳನ್ನೇ ಈ ಕಲ್ಪಿತನ್ಯಾಯಗಳು ಸ್ಥಿರೀಕರಿಸುತ್ತವೆ. ಆದುದರಿಂದ ಆಯಾ ಸೂತ್ರದಿಂದ ಸೂಚಿತವಾದ ಸನ್ನ್ಯಾಯಗಳ ಸ್ವರೂಪವನ್ನು ಸ್ಪಷ್ಟವಾಗಿ ತಿಳಿಸುವುದಕ್ಕಾಗಿ ನೀನೇ ಪ್ರಯತ್ನಮಾಡಬೇಕಾಗಿದೆ. ಮತ್ತೊಂದು ವಿಷಯವನ್ನೂ ನಾನು ತಿಳಿಸಬೇಕಾಗಿದೆ. ವಿದ್ಯಾಭಿಮಾನಿನಿಯಾದ ನನಗೆ ಅಭಿಮಾನಪಾತ್ರವಾದ ನನ್ನ ಆವಾಸ-ಸ್ಥಾನರೂಪವಾಗಿರುವ ಸತ್‌ಸಿದ್ಧಾಂತಗ್ರಂಥಗಳು ಈಗ ಒಳ್ಳೆಯ ಸೂತ್ರಗಳಿಂದ (ದಾರಗಳಿಂದ ಮತ್ತು ಸೂತ್ರಗಳಿಂದ) ಕಟ್ಟಲ್ಪಟ್ಟು ರಕ್ಷಿತವಾಗಿ ಅಲ್ಲಲ್ಲಿ ವಿರಾಜಿಸುತ್ತಿವೆ. ನೀನು ವೈಷ್ಣವ ಸಿದ್ಧಾಂತರಕ್ಷಕನಾಗದ್ದಿರೆ ಆ ಪುಸ್ತಕಗಳಲ್ಲಿ ಜನರಿಗೆ ಶ್ರದ್ಧೆಯು ಕಡಿಮೆಯಾಗುತ್ತದೆ. ಆಗ ಆ ಗ್ರಂಥಗಳ ರಕ್ಷಣೆಯ ಕಾರ್ಯವೂ ಕ್ರಮೇಣ ಕ್ಷೀಣಿಸುತ್ತದೆ. ಆಗ ಪುಸ್ತಕ-ಗಳನ್ನು ಕಟ್ಟುವ ಹಗ್ಗವೆಂಬ ಗುಣವು ಇಲ್ಲದೇ ಹೋದಾಗ ಮಾಯಾವಾದಿಗಳ ಬ್ರಹ್ಮದಂತೆ ಆ ಪುಸ್ತಕಗಳೂ ನಿರ್ಗುಣ(ಹಗ್ಗವಿಲ್ಲದ್ದು, ಗುಣವಿಲ್ಲದ್ದು)ವಾಗುತ್ತದೆ. ಕಟ್ಟುವ ಹಗ್ಗವು ಹರಿದುಹೋದಾಗ ತಾಳಪತ್ರರೂಪವಾದ ಆ ಪುಸ್ತಕಗಳ ಪತ್ರಗಳು ಹಿಂದು ಮುಂದಾಗುತ್ತವೆ. ಕೆಲ ಕೆಲವು ಪತ್ರಗಳ ನಾಶವೂ ಆಗಬಹುದು. ಇಷ್ಟೇ ಅಲ್ಲ ; ರಕ್ಷಕರಿಲ್ಲದಿರುವಾಗ ಆ ಪುಸ್ತಕಗಳನ್ನು ಇಲಿಗಳು ಅಥವಾ ಗೆದ್ದಲು ಮುಂತಾದ ಹುಳುಗಳು ತಿಂದುಬಿಟ್ಟಾವು.

ವೆಂಕಟನಾಥ ! ಲೋಕದಲ್ಲಿ ಅನೇಕ ಮಂದಿ ಋಷಿಗಳು ಅನೇಕ ಶಾಸ್ತ್ರಗಳನ್ನು ರಚಿಸಿದ್ದಾರೆ. ಅವೆಲ್ಲವೂ ಶ್ರೀವೇದವ್ಯಾಸರಿಗೆ ಅಭಿಮತವಾದ ವಿಷಯದ ಒಂದು ಅಂಶವನ್ನು ಸ್ವಲ್ಪ ಮಟ್ಟಿಗೆ ವಿವರಿಸುತ್ತವೆ. ಅವು ಶ್ರೀವೇದವ್ಯಾಸರ ಅಭಿಪ್ರಾಯಕ್ಕೆ ವಿರುದ್ಧಗಳಲ್ಲ. ಆದರೆ ಮೇಲಿನ ನೋಟಕ್ಕೆ ಅವು ಶ್ರೀಬಾದರಾಯಣರ ಸಿದ್ಧಾಂತಕ್ಕೆ ವಿರುದ್ಧವಾಗಿ ಕಾಣಿಸುತ್ತವೆ. ಒಂದು ವೇಳೆ ನೀನು ಸಂನ್ಯಾಸ ಸ್ವೀಕಾರವನ್ನು ಮಾಡುವುದಿಲ್ಲವಾದರೆ ಮತ್ತೊಂದು ತೊಂದರೆಯೂ ಬರುತ್ತದೆ. ಪೂರ್ವಮೀಮಾಂಸಾಶಾಸ್ತ್ರಕ್ಕೆ ವೇದವ್ಯಾಸರಿಗೆ ಅಭಿಮತವಾದ ಅರ್ಥಕ್ಕಿಂತ

ಅವಿರುದ್ಧವಾದ ಅರ್ಥವನ್ನು ಉಪದೇಶ ಮಾಡುವವರು ನಿನ್ನ ಹೊರತು ಮತ್ತಾರೂ ಇಲ್ಲದಿರುವುದರಿಂದ ಪೂರ್ವ-ಮೀಮಾಂಸಾಶಾಸ್ತ್ರದ ವೇದವ್ಯಾಸಾಭಿಮತವಾದ ಅರ್ಥವು ತಿಳಿಯದೆ ಹೋಗುವುದರಿಂದ ಎಲ್ಲಾ ಪಂಡಿತರೂ ಮೇಲಿಂದ ಮೇಲೆ ತೋರುವ ಅರ್ಥವನ್ನು ಆಶ್ರಯಿಸಿ ಯಾಗಕ್ಕೆ ಸಂಬಂಧಪಟ್ಟ ವಿಚಾರವನ್ನೇ ಮಾಡಿಯಾರು. ವೇದವ್ಯಾಸರಿಗೆ ಅಭಿಮತವಾದ ಅರ್ಥಕ್ಕೆ ಅವಿರುದ್ಧವಾದ ಅರ್ಥವನ್ನು ಯಾರಿಗೂ ವಿಚಾರಮಾಡಲು ಸಾಧ್ಯವಾಗಲಾರದು. ಪೂರ್ವಮೀಮಾಂಸಾಶಾಸ್ತ್ರದಲ್ಲಿ ಅನೇಕ ಕರ್ಮಗಳ ಸ್ವರೂಪನಿರ್ಣಯವನ್ನು ಮಾಡಿದ್ದಾರೆ. ಅದು ಶ್ರೀವೇದವ್ಯಾಸರು ಮಾಡಿರುವ 'ಜ್ಞಾನವೇ ಮೋಕ್ಷ ಕಾರಣ' ಎಂಬ ಸಿದ್ಧಾಂತಕ್ಕೆ ವಿರೋಧಿಯಲ್ಲ. ಕರ್ಮ-ದಿಂದ ಜ್ಞಾನಸಿದ್ಧಿಯುಂಟಾಗುತ್ತದೆ. 'ಕರ್ಮಣಾ ಜ್ಞಾನಮಾತನೋತಿ' ಎಂಬ ವಚನವಿದೆ. ಆದ್ದರಿಂದ ಜ್ಞಾನಸಿದ್ಧಿ-ಗಾಗಿ ಕರ್ಮಸ್ವರೂಪದ ಜ್ಞಾನವನ್ನು ಪಡೆದು ಕರ್ಮಾನುಷ್ಠಾನ ಮಾಡಬೇಕು ಎಂದು ಹೇಳಿದಾಗ ಪೂರ್ವ-ಮೀಮಾಂಸಾಶಾಸ್ತ್ರ ಸಿದ್ಧಾಂತಕ್ಕೂ, ಬ್ರಹ್ಮಮೀಮಾಂಸಾಶಾಸ್ತ್ರ ಸಿದ್ಧಾಂತಕ್ಕೂ ಯಾವ ವಿರೋಧವೂ ಇರುವುದಿಲ್ಲ. ನೀನು ಸಂನ್ಯಾಸಸ್ವೀಕಾರ ಮಾಡಿ ಈ ವಿಷಯವನ್ನೆಲ್ಲಾ ಸ್ಪಷ್ಟ ಪಡಿಸುವ ಗ್ರಂಥವನ್ನು ಬರೆಯದಿದ್ದರೆ 'ಕರ್ಮಗಳು ಸ್ವರ್ಗಾದಿ ಅನಿತ್ಯಫಲಗಳಿಗೆ ಸಾಧನವಾಗುತ್ತವೆಯೇ ಹೊರತು ಮೋಕ್ಷಸಿದ್ಧಿಗೆ ಅವುಗಳಿಂದ ಏನೂ ಉಪಯೋಗವಿಲ್ಲ. ಅವುಗಳು ಜ್ಞಾನವನ್ನುಂಟು ಮಾಡಿಯೂ ಮೋಕ್ಷಸಾಧನವಾಗುವುದಿಲ್ಲ ಎಂಬ ಅಪಾತತಃ ತೋರುವ ಅರ್ಥವನ್ನೇ ಎಲ್ಲಾ ಮೀಮಾಂಸಕರೂ ಹೇಳುತ್ತಾರೆ. ಆ ಅಭಿಪ್ರಾಯವನ್ನು ಅಂಗೀಕರಿಸಿ ಪ್ರಾಯಶಃ ಎಲ್ಲಾ ಪಂಡಿತರೂ ಕೇವಲ ಕರ್ಮಗಳಿಗೆ ಸಂಬಂಧಪಟ್ಟ ವಿಚಾರವನ್ನೇ ಮಾಡಿಯಾರು. ವೇದವ್ಯಾಸರಿಗೆ ಸಮ್ಮತವಾದ ಅಭಿಪ್ರಾಯಕ್ಕೆ ಅವಿರುದ್ಧವಾದ ಅರ್ಥವಿಚಾರವನ್ನು ಯಾರೂ ಮಾಡಲಾರರು. ನೀನು ಸಂನ್ಯಾಸ ಸ್ವೀಕಾರ ಮಾಡದಿದ್ದರೆ ಈ ಶಬ್ದಗಳು ಸಾಧುವಾಗಿವೆ, ಸರಿಯಾಗಿವೆ ಎಂದು ಶಬ್ದರೂಪಾವಳಿಗಳನ್ನು ಕಂಠಪಾಠ ಮಾಡಿ ತಿಳಿದಿರುವವರೂ ಅಥವಾ ಕೋಶಾದಿಗಳನ್ನು ಅಧ್ಯಯನ ಮಾಡಿ ಸಾಮಾನ್ಯರೂಪದಿಂದ ಶಬ್ದಾರ್ಥವನ್ನು ತಿಳಿದಿರುವವರೂ, ಗೂಢ-ಶಬ್ದಮಯವಾದ ನ್ಯಾಯಸುಧಾದಿಗ್ರಂಥಗಳ ಅಧ್ಯಯನದಲ್ಲಿ ನಾವೂ ಅಧಿಕಾರಿಗಳು ಎಂದು ಭ್ರಮಿಸಿ, ಪ್ರಮಾಣಲಕ್ಷಣ ಮುಂತಾದ ಯಾವ ಪ್ರಕರಣಗ್ರಂಥಗಳನ್ನೂ ಓದದೆ, ಭಾಷ್ಯ ಅಣುಭಾಷ್ಯ ನ್ಯಾಯಸುಧಾ ಮುಂತಾದ ಗ್ರಂಥಗಳ ಅರ್ಥಪರಿಜ್ಞಾನಕ್ಕೆ ಬೇಕಾಗಿರುವ ಪ್ರಮಾಣಗಳ ಸಮೀಚೀನತೆ, ಅಸಮೀಚೀನತೆಗಳನ್ನು ತಿಳಿಯಲು ಪ್ರಯತ್ನಿಸದಿರುವವರು, ಪ್ರಮಾಣಗಳ ಸರಿಯಾದ ಜ್ಞಾನವಿಲ್ಲದಿರುವವರೂ ಪ್ರೌಢವಾದ ಮೇಲೆ ಹೇಳಿದ ಗ್ರಂಥಗಳ ಅಧ್ಯಯನದಲ್ಲಿ ಪ್ರವೃತ್ತರಾದಾರು. ಹೀಗೆ ಅನ್ಯಾಧ್ಯಯನದಿಂದ ಅವರು ಸರಿಯಾಗಿ ಅರ್ಥ-ವನ್ನು ತಿಳಿಯದೆ ಇರುವುದಷ್ಟೇ ಅಲ್ಲ, ವಿಪರೀತಾರ್ಥವನ್ನೂ ತಿಳಿಯುತ್ತಾರೆ. ಅವರು ತಮ್ಮ ಶಿಷ್ಯ ಪರಂಪರೆಗೂ ಈ ವಿಪರೀತಾರ್ಥವನ್ನೇ ಬೋಧಿಸಿ ಅಪಮಾರ್ಗದಲ್ಲಿ ಅವರು ನಡೆಯುವಂತೆ ಮಾಡಿ ಜಗತ್ತನ್ನೆಲ್ಲಾ ಅಜ್ಞಾನವೆಂಬ ಕಗ್ಗತ್ತಲೆಯಲ್ಲಿ ಮುಳುಗುವಂತೆ ಮಾಡಿಯಾರು. ಆದುದರಿಂದ ನೀನು ಸಂನ್ಯಾಸವನ್ನು ಸ್ವೀಕರಿಸಿ ಋಷಿಗಳು ಮಾಡಿರುವ ಎಲ್ಲಾ ಗ್ರಂಥಗಳ ಸರಿಯಾದ ಅರ್ಥವನ್ನು ವರ್ಣಿಸಿ, ತಿಳಿಸಿ ಎಲ್ಲಾ ಶಾಸ್ತ್ರಗಳ ರಕ್ಷಣೆಯನ್ನು ಮಾಡು. ಆಹಾ ! ಅಪ್ಪಾ ವೆಂಕಟನಾಥ ! ಈಗ ಶಾಸ್ತ್ರರಕ್ಷಕರಾಗಿರುವ ಶ್ರೀಸುಧೀಂದ್ರತೀರ್ಥರ ಕೀರ್ತಿಯು ಲೋಕದಲ್ಲೆಲ್ಲಾ ಹರಡಿರುವುದರಿಂದ, ಅವರ ಕೀರ್ತಿಗೆ ಹೆದರಿ, ರಾಜರ ಆಸ್ಥಾನಗಳಲ್ಲಿ ನಡೆಯುವ ವಿದ್ವತ್ ಸಭೆಗಳಲ್ಲಿ ಪ್ರಾಯಃ ಎಲ್ಲಾ ವಿದ್ವಾಂಸರೂ 'ಶ್ರೀವಿಷ್ಣುಸರ್ವೋತ್ತಮತ್ವ' ಸಿದ್ಧಾಂತದ ವಿಚಾರವನ್ನೇ ಮಾಡಿ ಆ ಸಿದ್ಧಾಂತದ ಅಂಗೀಕಾರವನ್ನೇ ಮಾಡಿ ಸಭಾಮಂಗಳವನ್ನು ಹಾಡುತ್ತಾರೆ. ಶ್ರೀಸುಧೀಂದ್ರತೀರ್ಥರ ನಂತರ ನೀನು ವೇದಾಂತ ಶಾಸ್ತ್ರಸಾಮ್ರಾಜ್ಯದ ರಕ್ಷಕನಾಗದಿದ್ದರೆ, ಅದೇ ಹಿಂದಿನ ವಿದ್ವಾಂಸರು ಯಾವ ಭಯವೂ ಇಲ್ಲದೆ ದುರ್ಗೆಯೇ ಸರ್ವೋತ್ತಮ-ದೇವತೆಯೆಂದೋ', ಸೂರ್ಯನಿಗಿಂತ ದೊಡ್ಡ ದೇವತೆಯೇ ಇಲ್ಲವೆಂದೋ, ಶಿವನೇ ಸರ್ವಾಧಿಕ ದೇವತೆ-ಯೆಂದೋ, ಸುಬ್ರಹ್ಮಣ್ಯನು ಅದ್ವಿತೀಯ, ಉತ್ತಮ ದೇವತೆಯೆಂದಾಗಲೀ ಅಥವಾ ಗಣೇಶನೇ ಸರ್ವೋತ್ತಮ-

ನೆಂದೂ, ಇನ್ನೂ ಕೆಲವರು ಇಂದ್ರ, ಮರುತ್ತುಗಳು ಮುಂತಾದವರೇ ಸರ್ವೋತ್ತಮ ದೇವತೆಗಳೆಂದು ರಾಜರ ಸಭೆಗಳಲ್ಲಿ ಪ್ರಚಾರ ಮಾಡಿಯಾರು. ಇನ್ನೂ ಒಂದು ವಿಷಯವನ್ನು ಕೇಳು. ಈಗ ವೈದಿಕರ ಮಠಗಳಲ್ಲಿ ನಿರಂತರವಾಗಿ ವೇದಘೋಷವು ಕೇಳಿಸುತ್ತಿದೆ. ನೀನು ಸಂನ್ಯಾಸಸ್ವೀಕಾರ ಮಾಡಿ ವೇದರಕ್ಷಣೆ ಮಾಡದಿದ್ದರೆ ಆ ಮಠಗಳು ನಿರಂತರವಾಗಿ ಊಳಿಡುವ ನರಿಗಳು ವಾಸ ಮಾಡುವ ಕಾರಾಗೃಹಗಳಾದಾವು. ಈಗ ಮಠದ ಜಗುಲಿ, ಕಟ್ಟೆ ಚಾವಡಿಗಳಲ್ಲಿ ಕರ್ಮಠರಾದ ಆಚಾರ್ಯರು ಸೇರಿ ಪ್ರಪಂಚವು ಸತ್ಯವೇ ಮಿಥ್ಯೆಯೇ ಎಂದು ಚರ್ಚಿಸುತ್ತಿದ್ದಾರೆ. ನಾನು ಹೇಳಿದ್ದಕ್ಕಿಂತ ವಿಪರೀತವಾಗಿ ನೀನು ನಡೆದುಕೊಂಡರೆ ಆಗ ಮಠಗಳಲ್ಲಿ ಮನುಷ್ಯರು ಬಂದು ಚರ್ಚೆ ಮಾಡುವುದಿಲ್ಲ. ಗೂಬೆ ಮುಂತಾದ ಅಪಶಕುನದ ಪಕ್ಷಿಗಳು ಬಂದು ವಾಸ ಮಾಡಿಯಾವು. ಅವುಗಳ ಕರ್ಕಶವಾದ ಅಮಂಗಳ ಧ್ವನಿಯೇ ಅಲ್ಲಿ ಕೇಳಿ ಬರಬಹುದು. ಈಗ ಗುರುಗಳ ಮಠಗಳ ದೇವಾಲಯವು ಪ್ರದೀಪಗಳ ಪ್ರಕಾಶಮಾನವಾದ ಜ್ವಾಲೆಗಳಿಂದ ಶೋಭಿಸುತ್ತಿವೆ. ಆಗ (ನಾನು ಹೇಳಿದಂತೆ ಆಗದಿದ್ದಾಗ) ಅಲ್ಲಿ ಸೂರ್ಯಪ್ರಕಾಶವೂ ಇಣುಕಲಾರದು. ಜನರೂ ಸಂಚಾರ ಮಾಡಲಾರರು. ಗೂಬೆಗಳು ಅಲ್ಲಿ ವಾಸ ಮಾಡುತ್ತಿರುತ್ತವೆ. ಜ್ಞಾನಿಗಳು ಯಾರೂ ಆ ಗುರುಗಳ ದೇವಾಲಯಗಳನ್ನು ನೋಡಲು ಹೋಗಲಾರರು. ಅವರು ದರ್ಶನ ಮಾಡುವುದಕ್ಕೆ ಆ ಸ್ಥಳಗಳು ಯೋಗ್ಯವಾಗಿರುವುದಿಲ್ಲ. ಈಗ ಗುರುಗಳ ದೇವತಾಮಂದಿರವು ಗುಗ್ಗುಳಸಾಂಬ್ರಾಣಿ ಧೂಪದಿಂದ ಸುವಾಸಿತವಾಗಿದ್ದು, ದೀಪಗಳಿಂದ ಶೋಭಿಸುತ್ತಿದ್ದರೆ, ಆಗ ಕೊಳ್ಳಿ ದೆವ್ವಗಳು ಅಲ್ಲಿ ಓಡಾಡುತ್ತಿದ್ದು ಅವುಗಳ ಬಾಯಿಯ ಉರಿನಾಲಿಗೆ ಅಥವಾ ದೀಪದಂತೆ ಉರಿಯುತ್ತಿರುವ ಅವುಗಳ ಮುಖಗಳಿಂದ ಆ ದೇವತಾಗೃಹಗಳು ಪ್ರಕಾಶ ಹೊಂದಬೇಕಾದೀತು. ಈಗ ಮಠದಲ್ಲಿರುವ ದೇವಪೂಜಾಮಂದಿರದ ಮುಂಭಾಗದಲ್ಲಿ ತಾಳೇ ಹೂವುಗಳ ಮೇಲ್ಕಟ್ಟುಗಳು ಶೋಭಿಸುತ್ತಿವೆ. ಮೇಲ್ಕಟ್ಟಿನ ಅಲಂಕಾರವಾದ ಆ ಹೂವುಗಳಿಂದ ಕೆಳಗೆ ಧೂಳುಗಳಿಂದ ಮಠದ ಮುಂಭಾಗವು ಅಲಂಕೃತವಾಗಿದೆ. ಆಗಲಾದರೋ ರಸ್ತೆಯ ಧೂಳಿ ಮುಚ್ಚಿದ ಮಠದ ಮುಂಭಾಗಗಳು ನಿಜವಾಗಿಯೂ ತುಂಬಾ ಮಲಿನವಾಗಿರುತ್ತವೆ.

**ವಿದ್ಯಾದೇವಿಯ ಮಾತಿನ ಉಪಸಂಹಾರ** — ಎಲೈ ಕುಮಾರ ವೆಂಕಟನಾಥ ! ನೀನು ಸಂನ್ಯಾಸವನ್ನು ಒಪ್ಪಿದರೆ, ನಿನಗೆ ಆಗುವ ಪ್ರಯೋಜನಗಳು, ನನಗೆ ಆಗುವ ಪ್ರಯೋಜನಗಳು, ಪುಸ್ತಕಗಳಿಗೆ ಆಗುವ ಪ್ರಯೋಜನಗಳು, ಮಠಗಳಲ್ಲಿ ಆಗತಕ್ಕ ಪ್ರಯೋಜನಗಳು, ಶಾಸ್ತ್ರಗಳಿಗೆ ಆಗುವ ಪ್ರಯೋಜನಗಳು, ಎಲ್ಲವನ್ನೂ ಹೇಳಿದ್ದಾಯಿತು. ಹಾಗೆಯೇ ಸಂನ್ಯಾಸಾಶ್ರಮಕ್ಕೆ ಒಪ್ಪಿಕೊಳ್ಳದಿದ್ದರೆ ಆಗಲಿರುವ ಅನರ್ಥಪರಂಪರೆಗಳನ್ನು ವಿಸ್ತಾರವಾಗಿ ವರ್ಣಿಸಿದ್ದಾಯಿತು. ಇನ್ನು ಮುಂದೆ ನಾನು ಹೇಳಿದ್ದೆಲ್ಲವನ್ನೂ ಮನಸ್ಸಿನಲ್ಲಿಯೇ ಮಥಿಸಿ ಹೇಗೆ ಬೇಕೋ ಹಾಗೆ ಮಾಡು. ಅಪ್ಪಾ ವೆಂಕಟನಾಥ ! ಮತ್ತೂ ಹೇಳುತ್ತೇನೆ. ಈಗಲೂ ಗೃಹಸ್ಥನಾಗಿರುವಾಗಲೂ ನನ್ನ ಸೇವೆಯಲ್ಲಿಯೇ ನಿರತನಾಗಿರುವ ನಿನ್ನ ಮಾತುಗಳಿಂದ ನನಗೆ ಸಂತೋಷವಾಗುತ್ತಿದೆ. ಆದರೆ ಈ ಸಂತೋಷಕ್ಕೆ ಒಂದು ಎಲ್ಲೆ ಇದೆ. ಆದರೆ ನೀನು ಸಂನ್ಯಾಸವನ್ನು ಸ್ವೀಕರಿಸಿ ನನ್ನ ಸೇವೆಯನ್ನು ಮಾಡಿದರೆ ನನಗೆ ಉಂಟಾಗುವ ಸಂತೋಷಕ್ಕೆ ಎಲ್ಲೆಯೇ ಇಲ್ಲ. ಎಣೆಯೇ ಇಲ್ಲ. ಆಗ ನಾನು ನಿನ್ನಲ್ಲಿಯೇ ಸೇರಿಕೊಂಡಿರುತ್ತೇನೆ. ನಿನ್ನನ್ನು ಬಿಟ್ಟು ಒಂದು ಕ್ಷಣವೂ ಇರುವುದಿಲ್ಲ. ಮತ್ತೊಬ್ಬ ಸಂನ್ಯಾಸಿಯನ್ನು ಸ್ವಪ್ನದಲ್ಲಿಯೂ ನೆನೆಸುವುದಿಲ್ಲ. ಮಗೂ ವೆಂಕಟನಾಥ, ಸುಮ್ಮನೆ ಬಹಳ ಮಾತನಾಡಿದುದರಿಂದ ಏನು ಪ್ರಯೋಜನ ? ಹರಿಸಂಕಲ್ಪವನ್ನು ನಾನೀಗ ಸ್ಪಷ್ಟವಾಗಿ ಹೇಳುತ್ತೇನೆ. ನೀನು ಸಂನ್ಯಾಸಿಯಾಗಬೇಕೆಂದು ಶ್ರೀಹರಿಯ ಸಂಕಲ್ಪವೇ ಇದೆ. ವಿದ್ಯಾಲಕ್ಷ್ಮಿಯಾದ ನಾನು ನಿನ್ನ ಅಧೀನಳಾಗಿ ಇರಬೇಕೆಂಬುದೂ ಕೂಡ ಹರಿಸಂಕಲ್ಪ. ಇವರೆಡನ್ನೂ ವ್ಯತ್ಯಾಸಗೊಳಿಸಲು ಯಾರಿಗೂ ಸಾಧ್ಯವಿಲ್ಲ. ಪರಮಾತ್ಮನ ಸಂಕಲ್ಪಶಕ್ತಿಯನ್ನು ತಿಳಿದಿರುವ ನೀನು ನನ್ನ ಅಪ್ಪಣೆಯನ್ನು ಶಿರಸಾ ಮಾನ್ಯವನ್ನಾಗಿ ಮಾಡಿ ಸ್ವೀಕರಿಸು.' ವಿದ್ಯಾದೇವಿಯು ಇಷ್ಟನ್ನು ಪೇಳಿ ಮುಂದೆ ಈ ರೀತಿ ಹೇಳಿದಳು.

**ವಿದ್ಯಾದೇವಿಯಿಂದ ತನ್ನ ಮಂತ್ರದ ಉಪದೇಶ** — ವಿದ್ಯಾದೇವಿಯು ವೆಂಕಟನಾಥರನ್ನು ಕರೆದು 'ವತ್ಸ ! ವೆಂಕಟನಾಥ ! ಇಲ್ಲಿ ಬಾ. ನಿನ್ನ ಬಲಗಿವಿಯನ್ನು ನನ್ನ ಮುಖದ ಬಳಿ ತಾ' ಎಂದಳು. ಶ್ರೀವೆಂಕಟನಾಥರು ಹಾಗೆಯೇ ಮಾಡಿದರು. ಆಗ ದೇವಿಯು ಶ್ರೀವೆಂಕಟನಾಥರ ಬಲ ಕಿವಿಯಲ್ಲಿ ತನ್ನ ಮಂತ್ರವನ್ನು ಉಪದೇಶಿಸಿ ಅವರ ತಲೆಯ ಮೇಲೆ ತನ್ನ ಕೈಯನ್ನಿಟ್ಟು, ಅನಂತರ ಅಲ್ಲಿಯೆ ಅಂತರ್ಧಾನ ಹೊಂದಿದಳು.

**ಎರಡು ಉಪದೇಶಗಳ ಪರಿಣಾಮ** — ಆ ವೆಂಕಟನಾಥರು, ವಿದ್ಯಾದೇವಿಯು ಅಂತರ್ಧಾನ ಹೊಂದಿದ ಕೂಡಲೇ ತುಂಬಾ ಆಶ್ಚರ್ಯಪಟ್ಟು ದಿಕ್ಕುಗಳನ್ನು ನೋಡಿ, ಆ ವಿದ್ಯಾದೇವಿಯನ್ನು ನೋಡದೇ ಇದ್ದಾಗ, ವಿದ್ಯಾದೇವಿಯ ಅನುಗ್ರಹದಿಂದ ತನ್ನ ಮಾತು ದೇಹ ಮತ್ತು ಮನಸ್ಸುಗಳಲ್ಲಿ ಒಂದು ಅಸಾಧಾರಣವಾದ ಶಕ್ತಿಯು ಬಂದಿತೆಂದು ತಿಳಿದರು; ವಿದ್ಯಾದೇವಿಯ ಸನ್ನಿಧಾನವು ತನ್ನಲ್ಲಿ ಉಂಟಾದ ಅನುಭವವನ್ನು ಪಡೆದರು. ಸನ್ಯಾಸ ಸ್ವೀಕಾರ ಮಾಡಿದರೆ ಆಗುವ ಪ್ರಯೋಜನ, ಸ್ವೀಕಾರ ಮಾಡದಿದ್ದರೆ ಆಗುವ ಹಾನಿ, ಸಾಧಕ ಬಾಧಕಗಳು ಇವನ್ನೆಲ್ಲಾ ಆಲೋಚಿಸಿ, ತನ್ನ ಗುರುಗಳಾದ ಶ್ರೀಸುಧೀಂದ್ರತೀರ್ಥರು ಮಾಡಿದ ಉಪದೇಶ, ವಿದ್ಯಾದೇವಿಯು ಮಾಡಿದ ಉಪದೇಶ, ಎರಡನ್ನು ಮತ್ತು ಮತ್ತು ನೆನೆಸಿಕೊಳ್ಳುತ್ತಾ, ಸನ್ಯಾಸವನ್ನು ಸ್ವೀಕರಿಸುವ ವಿಷಯದಲ್ಲಿ ಆಶಾಂಕುರವನ್ನು ಹೊಂದಿ ಮೊದಲು ಮಗನಿಗೆ ಉಪನಯನ ಮಾಡಲು ಉದ್ಯುಕ್ತರಾದರು.

ಉಪನಯನವಾದ ಮೇಲೆ ವಟುವು ತಂದೆ ತಾಯಿಗಳನ್ನು ಬಿಟ್ಟು ವಿದ್ಯಾಭ್ಯಾಸಕ್ಕಾಗಿ ಗುರುಕುಲಕ್ಕೆ ಹೋಗಬೇಕು. ಅವನು ಗುರುಕುಲದಲ್ಲಿ ವಿದ್ಯಾಭ್ಯಾಸವನ್ನು ಮುಗಿಸಿ ಹಿಂದಿರುವವರೆಗೆ ಅವನನ್ನು ತಂದೆ ತಾಯಿಗಳು ರಕ್ಷಿಸುವುದಿಲ್ಲ. ಬ್ರಹ್ಮಚಾರಿಗಳು ಗುರುಕುಲದಲ್ಲಿ ವಾಸ ಮಾಡುತ್ತಿರುವಾಗ ಗುರುಸೇವೆಯನ್ನು ಮಾಡುತ್ತಾ, ಗುರುಗಳ ಕಾರ್ಯಕ್ಕಾಗಿ ಕಾಡು, ಬೆಟ್ಟ, ನದೀತೀರ, ನದಿಯ ಮಧ್ಯದ ಮರಳು ದಿನ್ನೆಗಳು ಮುಂತಾದ ಸ್ಥಳಗಳಲ್ಲಿ ಸಂಚರಿಸಬೇಕಾಗುತ್ತದೆ. ಆಗ ಗುರುಗಳಿಂದಲೂ ಅವರಿಗೆ ರಕ್ಷಣೆಯು ದೊರಕುವುದಿಲ್ಲ. ಆಗ ದೇವತೆಗಳೇ ಅವರನ್ನು ಕಾಪಾಡಬೇಕು. ಈ ಅಭಿಪ್ರಾಯದಿಂದಲೇ ಉಪನಯನ ಕಾಲದಲ್ಲಿ ಬ್ರಹ್ಮಚಾರಿಯನ್ನು ಕುರಿತು 'ಅಗ್ನಯೇ ತ್ವಾ ಪರಿದದಾಮಿ' ನಿನ್ನನ್ನು ಅಗ್ನಿದೇವರಿಗೆ ರಕ್ಷಣೆಗಾಗಿ ಒಪ್ಪಿಸುತ್ತೇನೆ, 'ಸವಿತ್ರೇ ತ್ವಾ ಪರಿದದಾಮಿ' ಸವಿತೃದೇವತೆಗೆ ರಕ್ಷಣೆಗಾಗಿ ನಿನ್ನನ್ನು ಕೊಡುತ್ತಿದ್ದೇನೆ, 'ಸೋಮಾಯ ತ್ವಾ ಪರಿದದಾಮಿ', ಸೋಮನಿಗೆ ರಕ್ಷಣೆಯ ಸಲುವಾಗಿ ನಿನ್ನನ್ನು ಒಪ್ಪಿಸುತ್ತಿದ್ದೇನೆ' ಇವೇ ಮೊದಲಾದ ಮಂತ್ರಗಳಿಂದ ಅಗ್ನಿ ಸವಿತೃ ಸೋಮ ಮೊದಲಾದ ದೇವತೆಗಳಿಗೆ ಬ್ರಹ್ಮಚಾರಿಯನ್ನು ಗುರುಕುಲವಾಸಕಾಲದಲ್ಲಿ ಅವನನ್ನು ರಕ್ಷಿಸಲೆಂದು ಒಪ್ಪಿಸುವ ವಿಧಿಯು ಕಂಡುಬರುತ್ತದೆ. ಸೋಮಾದಿದೇವತೆಗಳು ಎಲ್ಲಾ ಕಾಲದಲ್ಲಿ ರಕ್ಷಿಸುವವರೇ ಆಗಿದ್ದಾರೆ. ಆದರೆ ಗುರುಕುಲ-ವಾಸಕಾಲದಲ್ಲಿ ಬೇರೆ ರಕ್ಷಕರು ಇಲ್ಲದಿರುವುದರಿಂದ ಅವರ ರಕ್ಷಣೆಯೇ ಮುಖ್ಯವಾಗಿರುತ್ತದೆ. ಗುರುಕುಲವಾಸಕ್ಕಿಂತ ಮೊದಲೂ, ಗುರುಕುಲ ವಾಸವನ್ನು ಮುಗಿಸಿ ಬಂದಮೇಲೆಯೂ ಇತರ ರಕ್ಷಕರು ಇರುವುದರಿಂದ ಈ ದೇವತೆಗಳು ಮಾಡುವ ರಕ್ಷಣೆಯು ಗುರುಕುಲವಾಸ ಕಾಲದ ರಕ್ಷಣೆಯಷ್ಟು ಮುಖ್ಯವಾಗುವುದಿಲ್ಲ. ಶ್ರೀವೆಂಕಟನಾಥರು ತನ್ನ ಕುಮಾರನಿಗೆ ಉಪನಯನ ಮಾಡಿ ಕೇಲವೇ ದಿನಗಳಲ್ಲಿ ಸನ್ಯಾಸವನ್ನು ಸ್ವೀಕರಿಸಲಿದ್ದರು. ಆದ್ದರಿಂದ ಅವರ ಈ ಕುಮಾರನು ಉಪನೀತನಾಗಿ ಗುರುಕುಲಕ್ಕೆ ಹೋಗಿ ವಿದ್ಯಾಭ್ಯಾಸವನ್ನು ಮುಗಿಸಿ ಹಿಂದಿರುಗುವ ಸಮಯದಲ್ಲಿ ತಂದೆಯು ಸನ್ಯಾಸಿಯಾಗಿರುತ್ತಾನೆ. ತಾಯಿಯು ಪುತ್ರನ ರಕ್ಷಣೆ ಮಾಡಲು ಅಶಕ್ತಳಾಗಿರುತ್ತಾಳೆ. (ಇರುತ್ತಾಳೋ ಇಲ್ಲವೋ) ಇತರ ಬಂಧುಗಳು ಆದರದಿಂದ ನೋಡಿಕೊಳ್ಳಲಾರರು. ಆದ್ದರಿಂದ ಶ್ರೀವೆಂಕಟನಾಥರ ಈ ಕುಮಾರನಿಗೆ ಉಪನಯನವಾಗಿ ಗುರುಕುಲದಿಂದ ಹಿಂದಿರುಗಿದ ಮೇಲೆ, ತಂದೆ ತಾಯಿ ಮುಂತಾದ ಯಾರಿಂದಲೂ ರಕ್ಷಣೆ ಇಲ್ಲ. ಆದುದರಿಂದ ಗುರುಕುಲವಾಸಕಾಲದಲ್ಲಿಯೂ ಅನಂತರವೂ ಕೂಡ ಸೋಮಾದಿ

ದೇವತೆಗಳೇ ಈ ಕುಮಾರನನ್ನು ಸದಾ ಕಾಪಾಡಬೇಕು. ಈ ಬಾಲಕನಿಗೆ ಇನ್ನು ಮುಂದೆ ಆಗಬೇಕಾದ ರಕ್ಷಣೆಯು ಮುಖ್ಯವಾಗಿ ಸೋಮಾದಿ ದೇವತೆಗಳಿಂದಲೇ ಆಗಬೇಕು. ಅವರು ಮಾಡುವ ರಕ್ಷಣೆಯೇ ಮುಖ್ಯವಾದುದು. ಆದುದರಿಂದ ಇನ್ನು ಮುಂದೆ ಈ ಬಾಲಕನಿಗೆ ಸೋಮಾದಿ ದೇವತೆಗಳೇ ರಕ್ಷಕರು ಮತ್ತಾರೂ ಇಲ್ಲ. ಆದ್ದರಿಂದ 'ಅಗ್ನಯೇ ತ್ವಾ ಪರಿದದಾಮಿ' ಇತ್ಯಾದಿ ಮಂತ್ರಗಳನ್ನು ಬೇರೆ ವಟುಗಳ ಉಪನಯನ ಕಾಲದಲ್ಲಿ ಹೇಳುವಾಗ ಅವುಗಳಿಗೆ ಮುಖ್ಯವಾದ ಅರ್ಥವು ಬರುವುದಿಲ್ಲವಾದರೂ, ನನ್ನ ಮಗನ ವಿಷಯದಲ್ಲಿ ಇನ್ನು ಮುಂದೆ ಯಾವಾಗಲೂ ಈ ದೇವತೆಗಳೇ ರಕ್ಷಕರಾದುದರಿಂದ, ಈ ಮಂತ್ರಗಳ ಮುಖ್ಯಾರ್ಥವನ್ನು ಮನಸ್ಸಿನಲ್ಲಿಟ್ಟುಕೊಂಡೇ ನಾನು ಹೇಳುತ್ತಿದ್ದೇನೆ. ಎಂಬ ತಾತ್ಪರ್ಯವನ್ನು ಮನಸ್ಸಿನಲ್ಲಿ ಇಟ್ಟುಕೊಂಡು ಮಂತ್ರಾರ್ಥತತ್ತ್ವಜ್ಞರಾದ ಶ್ರೀವೇಂಕಟನಾಥರು ಉಪನಯನ ಸಮಯದಲ್ಲಿ ಗದ್ಗದಸ್ವರದಿಂದ ಈ ಮಂತ್ರಗಳನ್ನು ಪಠಿಸಿದರು. ಅವರ ಈ ಅಭಿಪ್ರಾಯವನ್ನು ತಿಳಿದ ಅಲ್ಲಿದ್ದ ಎಲ್ಲಾ ಪಂಡಿತರೂ ಕೂಡ ಕಣ್ಣೀರು ತುಂಬಿದ ಕಣ್ಣಿನಿಂದ ವೆಂಕಟನಾಥರನ್ನು ನೋಡುತ್ತಾ ಅತ್ತುಬಿಟ್ಟರು.

**ಸನ್ಯಾಸಕೊಡಲು ತಂಜಾವೂರಿಗೆ ಶ್ರೀ ವೆಂಕಟನಾಥರನ್ನು ಕರೆದು ಒಯ್ದರು** — ಹೀಗೆ ಶ್ರೀಸುಧೀಂದ್ರತೀರ್ಥರ ಅಪ್ಪಣೆಯಿಂದ ಬಾಲಕನಿಗೆ ಉಪನಯನ ಮಾಡಿ ಶ್ರೀವೆಂಕಟನಾಥರು ಸನ್ಯಾಸ ಸ್ವೀಕಾರ ಮಾಡಲು ಸಿದ್ಧರಾದರು. ಶ್ರೀಸುಧೀಂದ್ರರು ತನ್ನ ಬಳಿಗೆ ಬಂದ ವೆಂಕಟನಾಥರನ್ನು ನೋಡಿದರು. ''ಇಲ್ಲಿಯೇ ಈ ವೆಂಕಟನಾಥನಿಗೆ ಸನ್ಯಾಸವನ್ನು ಕೊಟ್ಟರೆ ಇಲ್ಲಿಯೇ ಇರುವ ಅವನ ಹೆಂಡತಿಯಾದ ಸರಸ್ವತಿಯು ಆತ್ಮಹತ್ಯೆಯನ್ನೇ ಮಾಡಿ-ಕೊಂಡಾಳು. ಆದುದರಿಂದ ಇವನನ್ನು ಬೇರೆ ಊರಿಗೆ ಕರೆದುಕೊಂಡು ಹೋಗಿ ಅಲ್ಲಿಯೇ ಸನ್ಯಾಸ ಕೊಡುವುದು ಯೋಗ್ಯವೆಂದು ನಿಶ್ಚಯಿಸಿ ಶ್ರೀ ವೆಂಕಟನಾಥರನ್ನು ತಂಜಾವೂರಿಗೆ ಕರೆದುಕೊಂಡು ಹೋದರು.''

**ಶ್ರೀವೆಂಕಟನಾಥರಿಗೆ ಸನ್ಯಾಸಾಶ್ರಮ ಪ್ರದಾನ** — ಈ ಸಾಂಸಾರಿಕವಾದ ದುಃಖವೆಲ್ಲವೂ ಆಶಾಪಾಶದಿಂದಲೇ ಉಂಟಾಗಿರುವುದು. ಆ ಹಗ್ಗವನ್ನು ಕತ್ತರಿಸಿ ಬಿಟ್ಟರೆ ಸಾಂಸಾರಿಕ ದುಃಖವು ತನ್ನಷ್ಟಕ್ಕೇ ದೂರವಾಗುವುದು. ಸನ್ಯಾಸಾಂಗವಾದ ವಿರಜಾಹೋಮಸಮಾಪ್ತಿಯೇ ಆಶಾಪಾಶವನ್ನು ಕತ್ತರಿಸುವ ಕತ್ತರಿ. ಶ್ರೀವೆಂಕಟನಾಥರು ವಿರಜಾ ಹೋಮವನ್ನು ಮಾಡಿದರು. ಅನಂತರ ಸ್ನಾನ ಮಾಡಿ ಬಂದು ಕೆಂಪಾದ ಕಾವಿಯ ಬಟ್ಟೆಯನ್ನುಟ್ಟ ಶ್ರೀ ವೆಂಕಟನಾಥರು ಕೆಂಪಾದ ಕಿರಣಗಳಿಂದ ಸಹಿತವಾಗಿ ಸಮುದ್ರದಿಂದ ಮೇಲಕ್ಕೇಳುತ್ತಿರುವ ಸೂರ್ಯನಂತೆ ಶೋಭಿಸಿದರು. ಬ್ರಾಹ್ಮಣರು ಲಗ್ನದ ಎಲ್ಲಾ ಗುಣಗಳಿಂದ ಕೂಡಿದ, ಗುರು ದೃಷ್ಟಿಯುಳ್ಳ ಒಳ್ಳೆಯ ಒಂದು ಲಗ್ನವನ್ನು ನಿರ್ಧರಿಸಿದರು.ಆ ಶುಭ ಲಗ್ನದಲ್ಲಿ ಶ್ರೀ ವೆಂಕಟನಾಥರು ಶ್ರೀಸುಧೀಂದ್ರತೀರ್ಥರ ಮುಂದೆ ಅವರ ಅಪ್ಪಣೆಯಿಂದ ಕುಳಿತುಕೊಂಡು ಎರಡೂ ಕೈಗಳನ್ನು ಸೇರಿಸಿ ಮೊಗ್ಗಾಗಿ ಮಾಡಿ ಗುರುಗಳ ಮುಖವನ್ನೇ ನೋಡುತ್ತಾ, ಏಕಾಗ್ರಚಿತ್ತದಿಂದ 'ಅಧೀಹಿ ಭಗವೋ ಬ್ರಹ್ಮ' ಪೂಜ್ಯರೇ ವೇದಾರ್ಥವಾಗಿರುವ ಸಕಲಗುಣ ಬೃಂಹಿತವಾದ ಬ್ರಹ್ಮತತ್ತ್ವವನ್ನೂ, ಅದನ್ನು ಪ್ರತಿಪಾದಿಸುವ ಶಾಸ್ತ್ರವನ್ನೂ ಅಧ್ಯಾಪನ ಮಾಡಿಸಿರಿ ಎಂದು ಪ್ರಾರ್ಥಿಸಿದರು. ಶ್ರೀ ಸುಧೀಂದ್ರತೀರ್ಥರು ಭಗವಂತನ ಕೃಪೆಯಿಂದ ದೇವತೆಗಳಿಗೂ ದುರ್ಲಭವಾದ ಜ್ಞಾನ ಭಕ್ತಿ ವೈರಾಗ್ಯ ಸಂಪತ್ತುಗಳನ್ನೂ, ಇಂತಹ ಉತ್ತಮಶಿಷ್ಯ ಸಂಪತ್ತನ್ನೂ, ಶ್ರೀಹರಿಯ ಪೂಜೆಗೆ ಬೇಕಾದ ಲೌಕಿಕ ಸಂಪತ್ತನ್ನೂ ಪಡೆದರು. ಅವರು ಶ್ರೀವೆಂಕಟನಾಥನು ಸನ್ಯಾಸಾಶ್ರಮವನ್ನು ಸ್ವೀಕರಿಸಿ ಶ್ರೀಮೂಲರಾಮನ ಪೂಜೆಯನ್ನು ಮಾಡಲು ಒಪ್ಪಿ, ಪ್ರಕೃತ ತನ್ನಿಂದ ಉಪದೇಶ ಪಡೆಯಲು ಸಿದ್ಧನಾಗಿರುವುದನ್ನು ನೋಡಿ ಬಹಳ ಸಂತೋಷಪಟ್ಟರು. ಅವರು ಪರಿ ಗುರುಗಳನ್ನು ಧ್ಯಾನಿಸುತ್ತಾ ಶ್ರೀ ವೆಂಕಟನಾಥರಿಗೆ ಪ್ರಣವ ಮಂತ್ರೋಪದೇಶವನ್ನು ವಿಧಿಪೂರ್ವಕವಾಗಿ ಮಾಡಿದರು. 'ಮಗು ಸುಧೀಂದ್ರ! ನನ್ನ ಭಕ್ತಶಿಖಾಮಣಿಯಾದ ಈ ವೆಂಕಟನಾಥನಿಗೆ ನೀನು ಸನ್ಯಾಸವನ್ನು ಕೊಟ್ಟಮೇಲೆ 'ರಾಘವೇಂದ್ರ' ಎಂಬ ರಘುವಂಶಾಧಿಪತಿಯಾದ ನನ್ನ ಹೆಸರನ್ನೇ ಇಡು' ಎಂದು ಸ್ವಪ್ನದಲ್ಲಿ ಶ್ರೀ ಮೂಲ-

ರಾಮದೇವರು ಶ್ರೀಸುಧೀಂದ್ರತೀರ್ಥರಿಗೆ ಅರ್ಪಣೆ ಮಾಡಿದ್ದರು. ಕುಬೇರನಂತೆ ಸಂಪತ್ತಿನಿಂದ ಶೋಭಿತರಾದ, ಶ್ರೀರಾಮಚಂದ್ರನಂತೆ ಸಕಲ ಮಂಗಳಗಳಿಗೆ ಆಶ್ರಯರಾದ, ಶ್ರೀರಾಮನ ಕೃಪೆಯಂತೆ ಜಗತ್ತಿನ ಹಿತದಲ್ಲಿ ಆಸಕ್ತರಾದ ಈ ಮಹಾಮಹಿಮರಾದ ಶ್ರೀಸುಧೀಂದ್ರತೀರ್ಥರು, ಶ್ರೀವೇಂಕಟನಾಥರಿಗೆ ಪ್ರಣವಮಂತ್ರೋಪದೇಶ ಮಾಡಿ ಸನ್ಯಾಸವನ್ನು ಕೊಟ್ಟು, ಸನ್ಯಾಸನಾಮವನ್ನು ಇಡುವಾಗ ಈ ನೂತನ ಯತಿರಾಜರು 'ರಾಘವೇಂದ್ರ' ಎಂಬ ಹೆಸರಿನಿಂದ ಪ್ರಸಿದ್ಧರಾಗಿ, ತಪಸ್ಸಿನಿಂದ ನಮ್ಮ ಪರಮಗುರುಗಳಾದ ಶ್ರೀಸುರೇಂದ್ರತೀರ್ಥರಂತೆಯೂ, ಕೀರ್ತಿ-ಸಮೃದ್ಧಿಯಿಂದ ನಮ್ಮ ಗುರುಗಳಾದ ಶ್ರೀವಿಜಯೀಂದ್ರತೀರ್ಥರಂತೆಯೂ, ವಾದ ಯುದ್ಧದಲ್ಲಿ ನಮ್ಮಂತೆಯೂ ಆಗಿ ಅಭಿವೃದ್ಧಿ ಹೊಂದಲಿ' ಎಂದು ಸಂತೋಷದಿಂದ ಹರಸಿದರು.

**ವೇದಾಂತ ವಿದ್ಯಾಸಿಂಹಾಸನದಲ್ಲಿ ಪಟ್ಟಾಭಿಷೇಕ** — ಶ್ರೀಸುಧೀಂದ್ರತೀರ್ಥರು ಕಮಲ ಮುಂತಾದ ಹೂವು-ಗಳಿಂದಲೂ. ಮುತ್ತು ಮುಂತಾದ ರತ್ನಸಮೂಹಗಳಿಂದಲೂ ಸಹಿತವಾಗಿ ತೀರ್ಥಜಲವನ್ನು ಶಂಖದಲ್ಲಿ ತುಂಬಿಸಿ, ಅವರನ್ನು ಶ್ರೀ ರಾಘವೇಂದ್ರತೀರ್ಥರ ಶಿರಸ್ಸಿನ ಮೇಲೆ ಅಭಿಷೇಕಿಸಿದರು, ಆ ಮೂಲಕ ಅವರನ್ನು ವೇದಾಂತ ವಿದ್ಯಾಸಾಮ್ರಾಜ್ಯದ ರಾಜರನ್ನಾಗಿ ಮಾಡಿದರು. ಶ್ರೀಮೂಲರಾಮ ಪ್ರತಿಮೆಯನ್ನು ಶ್ರೀವೇದವ್ಯಾಸದೇವರು ಶ್ರೀಮಧ್ವಾ-ಚಾರ್ಯರಿಗೆ ಕೊಟ್ಟಿರುವ ಶುದ್ಧ (ಬಿಳಿಯ) ಶಿಲಾತ್ಮಕವಾದ ವ್ಯಾಸಮೂರ್ತಿಗಳಲ್ಲಿ ಎರಡನ್ನೂ, ಪರಂಪರಾಗತವಾದ ತಾಳಪತ್ರಾತ್ಮಕವಾದ ಶಾಸ್ತ್ರಪುಸ್ತಕಗಳ ಸಮೂಹವನ್ನು, ಎರಡು ಚಾಮರಗಳು, ಒಂದು ಶ್ವೇತಛತ್ರ, ಆನೆಯ ಮೇಲಿನ ಮಂಟಪದಂತಿರುವ ಒಂದು ಪಲ್ಲಕ್ಕಿ, ನಾಲ್ಕು ವಿಧವಾದ ವಾದ್ಯಗಳ ಸಹಿತವಾದ ಎಲ್ಲಾ ರಾಜಚಿಹ್ನವನ್ನೂ, ತನ್ನ ಶಿಷ್ಯರಾದ ಶ್ರೀರಾಘವೇಂದ್ರತೀರ್ಥರಿಗೆ ಶ್ರೀಸುಧೀಂದ್ರತೀರ್ಥರು ಕೊಟ್ಟರು.

**ಶ್ರೀ ರಾಘವೇಂದ್ರತೀರ್ಥಗುರುಗಳನ್ನು ರಾಜ್ಯಲಕ್ಷ್ಮಿಯು ಆಶ್ರಯಿಸಿದಳು** — ಶ್ರೀರಾಘವೇಂದ್ರ ತೀರ್ಥರು ಸನ್ಯಾಸಿಗಳಾಗಿ ಎರಡು ವರ್ಷಗಳು ಕಳೆದವು. ಶ್ರೀಸುಧೀಂದ್ರತೀರ್ಥರು ಹರಿಚರಣಸನ್ನಿಧಿಯನ್ನು ಸೇರಿದರು. ಈ ಶ್ರೀಸುಧೀಂದ್ರತೀರ್ಥರು ತುಂಗಭದ್ರಾನದಿಯ ದಡದಲ್ಲಿರುವ ಗಜಗಹ್ವರವೆಂಬ ಪುಣ್ಯಕ್ಷೇತ್ರದಲ್ಲಿ, ನದಿಯ ನಡು-ಗಡ್ಡೆಯಲ್ಲಿರುವ ವೃಂದಾವನದಲ್ಲಿ ಸನ್ನಿಹಿತರಾಗಿ ತಪಸ್ಸು ಮಾಡುತ್ತಾ ಈಗಲೂ ವಿರಾಜಮಾನರಾಗಿದ್ದಾರೆ. ಅವರು ಭೂಲೋಕದಲ್ಲಿ ಎಲ್ಲರ ಎದುರೂ ಇದ್ದಾಗ ಅವರನ್ನು ಆಶ್ರಯಿಸಿದ್ದ ವೇದಾಂತರಾಜ್ಯಲಕ್ಷ್ಮಿಯು ಅವರನ್ನು ಬಿಟ್ಟು ಕುಂಭಘೋಣದಲ್ಲಿ ವಿರಾಜಿಸುತ್ತಿದ್ದ ಶ್ರೀಮೂಲರಾಮಚಂದ್ರನ ಚರಣಸೇವಾಸಕ್ತರಾದ, ಮಹಾವಿದ್ವಾಂಸರಾದ, ದಿನೇದಿನೇ ವರ್ಧಿಷ್ಣುಗಳಾದ, ಗುಣಗಣಸಮುದ್ರರಾದ ಶ್ರೀರಾಘವೇಂದ್ರತೀರ್ಥರನ್ನು ಆಶ್ರಯಿಸಿದಳು.



ವಿದ್ವತ್ಕುಲಾವತಂಸ,
ಮಹಾಕವಿ ಶ್ರೀಮನ್ನಾರಾಯಣಾಚಾರ್ಯೇಣ ರಚಿತಂ

# ಶ್ರೀಮದ್ರಾಘವೇಂದ್ರವಿಜಯ ಮಹಾಕಾವ್ಯಂ

## ಸಪ್ತಮ ಸರ್ಗ

**ಅವತಾರಿಕೆ :** ಈಗ ಕವಿಗಳು ಶ್ರೀರಾಘವೇಂದ್ರಸ್ವಾಮಿಗಳು ಪೂರ್ವದಿಕ್ಕಿನಲ್ಲಿ ಕಾವೇರಿ ಸಮುದ್ರ ಸಂಗಮದಿಂದ ಆರಂಭಿಸಿ ಪ್ರದಕ್ಷಿಣಾಕಾರವಾಗಿ ಚಂಪಕಾರಣ್ಯ ರಾಮಸೇತು. ಶ್ರೀಮದನಂತಪುರ, ಜನಾರ್ದನ ಕ್ಷೇತ್ರ, ತಾಮ್ರಪರ್ಣೀತಟ, ನವದೇವತಾ ಸನ್ನಿಧಿ, ದಕ್ಷಿಣ ಮಧುರೆ, ಶ್ರೀರಂಗ ಮೊದಲಾದ ತೀರ್ಥಯಾತ್ರೆಯನ್ನು ಮಾಡಿದುದನ್ನು ಈ ಏಳನೇ ಸರ್ಗದಲ್ಲಿ ತಿಳಿಸುತ್ತಾರೆ. ಮೊದಲು ಶ್ರೀರಾಘವೇಂದ್ರಸ್ವಾಮಿಗಳು ತೀರ್ಥಯಾತ್ರೆಗೆ ಹೊರಟರೆಂದು ಹೇಳುತ್ತಾರೆ.

**ಸ ಕದಾಚಿದಾದೃತಮನಾ ಹರೇಃ ಸ್ಥಲಾನ್ಯಖಿಲಾನಿ ಪುಣ್ಯಸರಸೀಶ್ಚ ವೈಷ್ಣವೀಃ ।**
**ಅವಲೋಕಿತುಂ ಯತಿವರೋ ಧೃತವ್ರತಃ ಪ್ರಥಮಂ ಸುರಪ್ರಭುದಿಶಂ ಪ್ರತಸ್ಥಿವಾನ್॥೧॥**

**ತಾತ್ಪರ್ಯ :** ಶ್ರೀರಾಘವೇಂದ್ರತೀರ್ಥರು ಅನೇಕ ವ್ರತನಿಯಮಗಳನ್ನು ಸ್ವೀಕರಿಸಿದವರು. ಅವರು ಶ್ರೀಹರಿಯ ಸನ್ನಿಧಾನ ಪಾತ್ರವಾದ ಪುಣ್ಯಕ್ಷೇತ್ರಗಳನ್ನೂ, ಶ್ರೀಹರಿಗೆ ಸಂಬಂಧಪಟ್ಟ ಎಲ್ಲ ಸರೋವರ, ನದಿ ಮುಂತಾದವುಗಳನ್ನು ಸಂದರ್ಶಿಸಲು ಮನಸ್ಸು ಮಾಡಿದರು. ಈ ರೀತಿಯಾಗಿ ತೀರ್ಥಯಾತ್ರಾ ಸಂಕಲ್ಪವನ್ನು ಮಾಡಿ ಮೊದಲು ಪೂರ್ವ ದಿಕ್ಕಿಗೆ ಹೊರಟರು.

**ಅವತಾರಿಕೆ :** ಈಗ ಕವಿಗಳು ಶ್ರೀರಾಘವೇಂದ್ರಸ್ವಾಮಿಗಳು ಮೊದಲು ದ್ಯುಪುರೀ, ಮತ್ತು ಪರಿಪೂರ್ಣ ದೇವನಗರಗಳ ಯಾತ್ರೆಯನ್ನು ಮಾಡಿದರೆಂದು ಹೇಳುತ್ತಾರೆ.

**ಅನಮನ್ನಮಜ್ಜನಮನೋವಿನೋದನಂ ದ್ಯುಪುರೀಶಮೀಶಮಘರಾಶಿಭಂಜನೇ ।**
**ಅಗಮತ್ತತೋ ನಿಗಮಗೀತಸದ್‌ವ್ರತಃ ಪರಿಪೂರ್ಣದೇವನಗರಂ ಗುಣಾಕರಮ್ ॥೨॥**

**ತಾತ್ಪರ್ಯ :** ಶ್ರೀರಾಘವೇಂದ್ರತೀರ್ಥರು ವೇದಗಳಲ್ಲಿ ಹೇಳಿರುವ ಪ್ರಶಸ್ತವಾದ ಅನೇಕ ವ್ರತಗಳನ್ನು ಆಚರಿಸುತ್ತಿದ್ದರು. ಅವರು ಯಾತ್ರಾ ಸಂಕಲ್ಪವನ್ನು ಮಾಡಿ ಭಕ್ತರ ಹೃದಯಗಳಿಗೆ

ಆನಂದವನ್ನು ಉಂಟುಮಾಡುವ ಮತ್ತು ಭಕ್ತರ ಪಾಪ ಸಮೂಹವನ್ನೆಲ್ಲಾ ನಾಶ ಮಾಡುವುದರಲ್ಲಿ ಸಮರ್ಥನಾದ ದ್ಯುಪುರೀಶನೆಂಬ ಹೆಸರುಳ್ಳ ಶ್ರೀಹರಿಯನ್ನು ನಮಿಸಿದರು. ತದನಂತರ ಸಕಲ ಸದ್ಗುಣಗಳಿಗೆ ಆಶ್ರಯವಾದ ಪರಿಪೂರ್ಣ ದೇವನಗರ ಎಂಬ ಪುಣ್ಯಕ್ಷೇತ್ರಕ್ಕೆ ಹೋದರು.

ಶ್ರೀರಾಘವೇಂದ್ರತೀರ್ಥರು ವೇದಗಳಲ್ಲಿ ಹೇಳಿರುವ ಪ್ರಶಸ್ತವಾದ ಅನೇಕ ವ್ರತ ನಿಯಮಗಳನ್ನು ಸ್ವೀಕರಿಸಿದ್ದರು. ಅವರು ಮೊದಲು ದ್ಯುಪುರೀ ಎಂಬ ಕ್ಷೇತ್ರಕ್ಕೆ ಹೋದರು. ಅಲ್ಲಿ ಭಕ್ತರ ಮನಸ್ಸಿನ ದುಗುಡವನ್ನೆಲ್ಲಾ ಕಳೆದು ಆನಂದವನ್ನು ಉಂಟುಮಾಡುವ, ಭಕ್ತರ ಪಾಪರಾಶಿಯನ್ನು ನಾಶಮಾಡುವ ಶ್ರೀಹರಿಯ ಸನ್ನಿಧಾನವಿತ್ತು. ಆ ಶ್ರೀಹರಿಯನ್ನು ಶ್ರೀರಾಘವೇಂದ್ರ ಗುರುಗಳು ನಮಿಸಿದರು. ಅನಂತರ ಅಲ್ಲಿಂದ ಎಲ್ಲಾ ಒಳ್ಳೆಯ ಗುಣ ನಡತೆಗಳಿಂದ ಕೂಡಿದ ಜನಗಳಿಂದ ಭರಿತವಾದ ಪರಿಪೂರ್ಣದೇವನಗರ ಎಂಬ ಊರಿಗೆ ಪ್ರಯಾಣ ಬೆಳೆಸಿದರು.

**ಅವತಾರಿಕೆ** : ಅನಂತರ ಶ್ರೀರಾಘವೇಂದ್ರತೀರ್ಥರು ಮಣಿಶೃಂಗ ಎಂಬಲ್ಲಿ ಇರುವ ದುರ್ಗಾದೇವಿಯನ್ನು ಸಂದರ್ಶಿಸಿ ವಂದಿಸಿದುದನ್ನು ವರ್ಣಿಸುತ್ತಾರೆ.

**ಅಥ ಲೋಕಮಾತರಮವಂದತೇಂದಿರಾಮನವದ್ಯಹೃದ್ಯಮಣಿಶೃಂಗಮಂದಿರಾಮ್ ।**
**ವದನೇನ ಕಾಂತಿಸದನೇನ ಪುಷ್ಣತೀಂ ನಮತೋ ನಿರಸ್ತಮಮತೋ ಯತೀಶ್ವರಃ ॥೩॥**

**ತಾತ್ಪರ್ಯ** : ಶ್ರೀರಾಘವೇಂದ್ರತೀರ್ಥ ಗುರುಗಳು ಪರಿಪೂರ್ಣ ದೇವನಗರವನ್ನು ಪ್ರವೇಶಿಸಿದರು. ಅಲ್ಲಿ ಲಕ್ಷ್ಮೀದೇವಿಯ ದೇವಾಲಯವಿತ್ತು. ಆ ಲಕ್ಷ್ಮೀದೇವಿಯು ಲೋಕಕ್ಕೆಲ್ಲಾ ತಾಯಿಯು. ಯಾವ ದೋಷವೂ ಇಲ್ಲದಿರುವ ರತ್ನಮಯವಾದ ಶಿಖರವನ್ನು ಹೊಂದಿದ್ದ ದೇವಾಲಯದಲ್ಲಿ ಸನ್ನಿಹಿತಳಾಗಿದ್ದಳು. ಕಾಂತಿಪುಂಜವಾದ ಮುಖದಿಂದ ಕೂಡಿ ತನ್ನನ್ನು ನಮಿಸುವ ಭಕ್ತರನ್ನು ದಯಾಮಯಳಾಗಿ ಕಾಪಾಡುತ್ತಿದ್ದಳು. ಇಂತಹಾ ಲಕ್ಷ್ಮೀದೇವಿಯನ್ನು ಮಮತಾರಹಿತವಾದ ಸಂಗರಹಿತರಾದ ಶ್ರೀರಾಘವೇಂದ್ರತೀರ್ಥರು ವಂದಿಸಿದರು.

**ಅವತಾರಿಕೆ** : ಶ್ರೀರಾಘವೇಂದ್ರತೀರ್ಥರು ಪ್ರಮಾಣಪದ್ಧತಿ ಮೊದಲಾದ ಎಲ್ಲ ಗ್ರಂಥಗಳನ್ನೂ ಪ್ರವಚನ ಮಾಡಿದರು ಎಂದು ಕವಿಗಳು ಈಗ ವರ್ಣಿಸುತ್ತಾರೆ

**ಗುರುಪೂರ್ಣಬೋಧಮತಸಿಂಧುಚಂದ್ರಮಾ ಯತಿರಾಡುಪಾದಿಶದಗಾಧಮೇಧಸಾಮ್ ।**
**ಅಥ ಮಾನಪದ್ಧತಿಪುರಸ್ಸರಂ ಕೃತೀ ನಿಜದರ್ಶನಂ ನಿಖಿಲಸಂಪದಾಂ ಪದಮ್ ॥೪॥**

**ತಾತ್ಪರ್ಯ** : ಮಹಾತ್ಮರೂ, ಹರಿಸರ್ವೋತ್ತಮತ್ವ ಸಿದ್ಧಾಂತವನ್ನು ಉಪದೇಶಿಸಿದವರೂ, ಆದ ಜಗದ್ಗುರು ಶ್ರೀಮತ್ ಆನಂದತೀರ್ಥ ಭಗವತ್ಪಾದಾಚಾರ್ಯರ ಸಿದ್ಧಾಂತವೆಂಬ ಸಮುದ್ರವನ್ನು ವೃದ್ಧಿಗೊಳಿಸುವ ವಿಷಯದಲ್ಲಿ ಶ್ರೀರಾಘವೇಂದ್ರತೀರ್ಥರು ಚಂದ್ರನಿಗೆ ಸಮನಾಗಿದ್ದರು. ಚಂದ್ರೋದಯವಾದಾಗ ಸಮುದ್ರವು ಉಕ್ಕಿ ಬರುವಂತೆ ಶ್ರೀರಾಘವೇಂದ್ರತೀರ್ಥರಿಂದ ಆಚಾರ್ಯರ ಸಿದ್ಧಾಂತವು ಅಭಿವೃದ್ಧಿಗೊಂಡಿತ್ತು. ಅಭಿವೃದ್ಧಿಯಾಗುತ್ತಾ ಇತ್ತು. ಶ್ರೀಜಯತೀರ್ಥರು

ಪ್ರಮಾಣಪದ್ಧತಿ ಎಂಬ ಆಚಾರ್ಯರ ಸಿದ್ಧಾಂತಸಾರ ಸಂಗ್ರಹ ರೂಪವಾದ ಪ್ರಕರಣ ಗ್ರಂಥವನ್ನು ರಚಿಸಿದ್ದರು. ಯತಿಚಕ್ರವರ್ತಿಗಳಾದ ಶ್ರೀರಾಘವೇಂದ್ರತೀರ್ಥ ಗುರುಗಳು ಆ ಪ್ರಮಾಣ ಪದ್ಧತಿಯನ್ನು ಆರಂಭಿಸಿ ಆಚಾರ್ಯರ ಎಲ್ಲ ಗ್ರಂಥಗಳನ್ನು ಗಂಭೀರವಾದ ಪ್ರಜ್ಞಾಶಕ್ತಿಯೂ, ಧಾರಣಶಕ್ತಿಯನ್ನೂ ಉಳ್ಳ ಅನೇಕ ಶಿಷ್ಯರಿಗೆ ಉಪದೇಶ ಮಾಡಿದರು. ಈ ಗ್ರಂಥಗಳ ಪ್ರವಚನವು ಮೋಕ್ಷಾದಿ ಪುರುಷಾರ್ಥಗಳಿಗೆ ಕಾರಣವು. ಆದುದರಿಂದಲೇ ಆಚಾರ್ಯರ ಗ್ರಂಥಗಳ ನಿರಂತರ ಪ್ರವಚನವನ್ನು ಶ್ರೀರಾಘವೇಂದ್ರತೀರ್ಥ ಗುರುಸಾರ್ವಭೌಮರು ಮಾಡಿದರು.

**ಅವತಾರಿಕೆ :** ಶ್ರೀರಾಘವೇಂದ್ರ ಗುರುವರ್ಯರು ಕಮಲಾಲಯ ಪುಷ್ಕರಣೀ ಯಾತ್ರೆಯನ್ನು ಮಾಡಿದುದನ್ನು ಈಗ ಕವಿಗಳು ವರ್ಣಿಸುತ್ತಾರೆ.

**ಕಮಲಾಲಯೇ ಕಮಲಯಾ ಕಟಾಕ್ಷಿತೋ ಯಮಿರಾಡವಾಪ**
**ಯಮರಾಡಪಾಯದಮ್ ।**
**ಪ್ರಣಿನಂಸುರರ್ಧಮಹಿಲಂ ಕೃಪೋರ್ಮಿಲಂ**
**ಸರಲಂ ಶ್ರಿತೇಷು ಗರಲಂ ಖಲೇಽಖಿಲೇ ॥೫॥**

**ತಾತ್ಪರ್ಯ :** ಶ್ರೀರಾಘವೇಂದ್ರತೀರ್ಥರು ಕಮಲಾಲಯ ಪುಷ್ಕರಣೀ ಎಂಬ ಸ್ಥಳದಲ್ಲಿ ಶ್ರೀಲಕ್ಷ್ಮೀದೇವಿಯ ದರ್ಶನ ಮಾಡಿ ಆ ಮಹಾತಾಯಿಯ ಕೃಪಾಕಟಾಕ್ಷ ಭಾಜನರಾದರು. ಮಹೇಶ್ವರನು ಮಾರ್ಕಂಡೇಯನನ್ನು ರಕ್ಷಿಸುವ ಸಂದರ್ಭದಲ್ಲಿ ಯಮನನ್ನೂ ಹೆದರಿಸಿ ಓಡಿಸಿದ್ದನು. ಪ್ರಳಯಕಾಲದಲ್ಲಿ ಯಮನನ್ನೂ ಸಂಹರಿಸುವನು. ತನ್ನನ್ನು ಆಶ್ರಯಿಸಿದ ಭಕ್ತರಿಗೆ ಉದಾರವಾಗಿ ವರಗಳನ್ನು ಕೊಡುವನು. ತನ್ನ ಭಕ್ತರನ್ನು, ಹರಿಭಕ್ತರನ್ನು ದ್ವೇಷ ಮಾಡುವವರಿಗೆ ವಿಷದಂತೆ ಭಯಂಕರನಾಗಿರುವನು. ಕೃಪಾಸಮುದ್ರನಾದ ಆ ಮಹೇಶ್ವರನು ತನ್ನ ದೇಹದ ಎಡಾರ್ಧಭಾಗವನ್ನೇ ಪಾರ್ವತೀ ದೇವಿಯವರಿಗೆ ನೀಡಿ ತಾನು ಅರ್ಧನಾರೀಶ್ವರ ಎಂಬುದಾಗಿ ಜಗತ್ತಿನಲ್ಲಿ ಪ್ರಸಿದ್ಧನಾಗಿದ್ದಾನೆ. ಇಂತಹಾ ಮಹಾರುದ್ರದೇವರನ್ನು ನಮಸ್ಕರಿಸಲು ಶ್ರೀರಾಘವೇಂದ್ರತೀರ್ಥ ಗುರುರಾಜರು ಶ್ರೀಮಹೇಶ್ವರ ಸನ್ನಿಧಾನವುಳ್ಳ ಕ್ಷೇತ್ರಕ್ಕೆ ಬಂದರು.

**ಅವತಾರಿಕೆ :** ಈಗ ಕವಿಗಳು ಶ್ರೀರಾಘವೇಂದ್ರತೀರ್ಥರು ಕಾವೇರಿ ನದಿಯು ಸಮುದ್ರವನ್ನು ಸೇರುವ ಸ್ಥಳಕ್ಕೆ ಬಂದುದನ್ನು ವರ್ಣಿಸುತ್ತಾರೆ.

**ಸ ತತಃ ಪ್ರಣಮ್ಯ ಸತತಾದಿನಿಸ್ಸ್ವನೋ ಧಿಷಣಾಭಿನಂದಿಧಿಷಣೋ ಧುತೇಷಣಃ ।**
**ಸಮಗಾದಗಾಧಪಯಸಾ ಪಯೋಧಿನಾ ಸಹ ಸಂಗಮಂ ಸಪದಿ ಸಹ್ಯಜನ್ಮನಃ ॥೬॥**

**ತಾತ್ಪರ್ಯ :** ಗುರುರಾಜರು ಕಮಲಾಲಯ ಕ್ಷೇತ್ರದಿಂದ ಮಹೇಶ್ವರನ ಕ್ಷೇತ್ರಕ್ಕೆ ಬಂದರು. ಅಲ್ಲಿ ಈಶ್ವರನನ್ನು ಸಂದರ್ಶಿಸಿ ನಮಿಸಿ ಅಲ್ಲಿಂದ ಮುಂದೆ ಪ್ರಯಾಣ ಬೆಳೆಸಿದರು. ಅವರು ಪ್ರಯಾಣ (ಸಂಚಾರ) ಮಾಡುವಾಗ ವೀಣೆ, ನಗಾರಿ, ಕಹಳೆ, ಢಕ್ಕಾ ಮುಂತಾದ ಒಂಬತ್ತು

ವಾದ್ಯಗಳು ಮೊಳಗುತ್ತಿದ್ದವು. ಗುರುಗಳು ಯಾವಾಗಲೂ ಶಾಸ್ತ್ರದಲ್ಲಿ ಉಕ್ತವಾದ ಭಗವಂತನ ಅನಂತ ಗುಣಗಳನ್ನು ಚಿಂತಿಸುತ್ತಿದ್ದರು. ವೇದ ಗುರುಗಳಾದ ಬೃಹಸ್ಪತ್ಯಾಚಾರ್ಯರೂ ಅವರ ಬುದ್ಧಿಯನ್ನು ಕಂಡು ಅಭಿನಂದಿಸಿ ಸಂತೋಷಿಸುತ್ತಿದ್ದರು.

ಈ ರೀತಿಯಾಗಿ ಶ್ರೀರಾಘವೇಂದ್ರತೀರ್ಥರು ಬೃಹಸ್ಪತಿ ಸಮಾನವಾದ ಬುದ್ಧಿಯುಳ್ಳವರೂ ಆಗಿದ್ದರು. ಅವರು ಪುತ್ರೇಷಣಾ (ಮಕ್ಕಳ ಮೇಲಿನ ಮೋಹ) ವಿತ್ತೇಷಣಾ (ಹಣದ ಮೇಲಿನ ಮೋಹ) ಲೋಕೇಷಣಾ (ನಶ್ವರವಾದ ಸ್ವರ್ಗಾದಿ ಲೋಕಗಳ ಮೇಲಿನ ಆಸೆ) ಎಂಬ ಈಷಣಾತ್ರಯಗಳನ್ನೂ ರಾಗದ್ವೇಷಾದಿಗಳನ್ನೂ ತ್ಯಜಿಸಿದ್ದರು. ಇಂತಹಾ ಗುರುವರ್ಯರು ಆಳವಾದ ನೀರುಳ್ಳ ಸಮುದ್ರದೊಡನೆ ಕಾವೇರಿ ನದಿಯು ಮಿಳಿತವಾಗುವ ಸ್ಥಳಕ್ಕೆ ಸಂಚಾರಕ್ರಮದಲ್ಲಿ ಬೇಗ ಬಂದು ಸೇರಿದರು.

**ಅವತಾರಿಕೆ :** ಸಮುದ್ರಸಂಗಮ ಸ್ಥಳದಲ್ಲಿ ಕಾವೇರಿ ನದಿಯು ಭೂಮಿಯ ಗುಹೆಯಂತಿರುವ ಒಂದು ರಂಧ್ರವನ್ನು ಪ್ರವೇಶಿಸುವುದರ ಕಾರಣವನ್ನು ಈಗ ಕವಿಗಳು ಉತ್ಪ್ರೇಕ್ಷಿಸುತ್ತಾರೆ.

**ಇಹ ದಾತುಮಸ್ಯ ಯತಿಪುಂಗವಸ್ಯ ಸಾ ಮಹನೀಯರತ್ನಮಥ ರತ್ನಗರ್ಭಯಾ ।**
**ಧೃತಮಂತರಾಪ್ತುಮುದಿತಾದರಾ ಭುವೋ ವಿವರಂ**
**ವಿವೇಶ ವಿವಶೇವ ಸಂಭ್ರಮಾತ್ ॥೭॥**

**ತಾತ್ಪರ್ಯ :** ಕಾವೇರಿ ನದಿಯು ಸಮುದ್ರವನ್ನು ಸೇರುವ ಸ್ಥಳಕ್ಕೆ ಶ್ರೀರಾಘವೇಂದ್ರತೀರ್ಥರು ದಯಮಾಡಿಸಿದ ಕೂಡಲೇ ಕಾವೇರಿಯು ಯತಿಶ್ರೇಷ್ಠರಾದ ಶ್ರೀರಾಘವೇಂದ್ರತೀರ್ಥರಿಗೆ ಬಹಳ ಬೆಲೆ ಬಾಳುವ ಅತ್ಯುತ್ತಮವಾದ ಒಂದು ರತ್ನವನ್ನು ಕಾಣಿಕೆಯಾಗಿ ಅರ್ಪಿಸಬೇಕೆಂದು ಮನಸ್ಸಿನಲ್ಲಿ ಬಹಳ ಶ್ರದ್ಧೆಯಿಂದ ಸಂಕಲ್ಪಿಸಿದಳು. ರತ್ನಗಳನ್ನು ಸಮುದ್ರವು ತನ್ನ ಉದರದಲ್ಲಿ ಇಟ್ಟುಕೊಂಡಿರುವುದರಿಂದ ರತ್ನಗರ್ಭಾ ಎಂದು ಪ್ರಸಿದ್ಧಳಾದ ಭೂದೇವಿಯ ಉದರದಿಂದ ಅಂತಹಾ ಒಂದು ರತ್ನವನ್ನು ತರಬೇಕೆಂದು ಕಾವೇರಿ ನದಿಯು ಸಂತೋಷ ಸಂಭ್ರಮಗಳಿಂದ ಬಹಳ ಬೇಗನೇ ಭೂಮಿಯ ಒಂದು ರಂಧ್ರವನ್ನು ಹೊಕ್ಕಳೋ (ಪ್ರವೇಶಿಸಿದಳೋ) ಎಂಬಂತೆ ತಾವು ಸಮುದ್ರದೊಡನೆ ಸಂಗಮಿಸುವ ಸ್ಥಳದಲ್ಲಿ ಕಾವೇರಿಯು ಭೂಮಿಯ ವಿವರವನ್ನು ಹೊಕ್ಕು ಮಾಯವಾಗಿದ್ದಾಳೆ.

**ಕಾವೇರಿ ಬಹಿಃ ಸ್ಫುಟಂ ಸ್ವಪ್ರವಾಹಜಲೇನಸಮುದ್ರಂ ನ ಪ್ರವಿಶತಿ, ಕಿಂತು ಗುಪ್ತತಯಾ**
**ತಥಾ ಪ್ರವೇಶಸ್ಯ ಭೂಮ್ಯಂತರ್ಗತರತ್ನಾಹರಣ**
**ನಿಮಿತ್ತತ್ವೋತ್ಪ್ರೇಕ್ಷಣಾತ್ ಉತ್ಪ್ರೇಕ್ಷಾಲಂಕಾರಃ**

ಕಾವೇರಿಯು ಸಂಗಮ ಪ್ರದೇಶದಲ್ಲಿ ಹೊರಗಡೆ ಸ್ಪಷ್ಟವಾಗಿ ತನ್ನ ಪ್ರವಾಹ ಜಲವನ್ನೆಲ್ಲಾ ಸಮುದ್ರಕ್ಕೆ ಒಪ್ಪಿಸುತ್ತಾ ಸಮುದ್ರವನ್ನು ಪ್ರವೇಶಿಸುವುದಿಲ್ಲ. ಗುಪ್ತಗಾಮಿನಿಯಾಗಿ ಸಮುದ್ರವನ್ನು

ಪ್ರವೇಶಿಸುತ್ತಾಳೆ. ಹಾಗೆ ಗುಟ್ಟಾಗಿ ಸಮುದ್ರವನ್ನು ಪ್ರವೇಶಿಸುವುದು ಭೂಮಿಯ ಒಳಗಿರುವ ರತ್ನವನ್ನು ತರುವುದಕ್ಕಾಗಿ ಎಂದು ಉತ್ಪ್ರೇಕ್ಷಿಸಿರುವುದರಿಂದ ಉತ್ಪ್ರೇಕ್ಷಾಲಂಕಾರ.

**ಅವತಾರಿಕೆ :** ಈಗ ಕವಿಗಳು ಕಾವೇರಿ ನದಿಯು ಸಮುದ್ರದೊಡನೆ ಸಂಗಮವಾಗುವ ಸ್ಥಳದಲ್ಲಿ ಶ್ರೀರಾಘವೇಂದ್ರತೀರ್ಥರು ಸ್ನಾನ ಮಾಡಿದುದನ್ನು ವರ್ಣಿಸುತ್ತಾರೆ.

**ಅವಗಾಹ್ಯ ಸಹ್ಯತನಯಾಸರಸ್ವತೋರ್ವಿಮಲೇ ಚಿರಂ ವ್ಯತಿಕರೇ ವ್ಯರಾಜತ ।**
**ಹೃದಿ ಭಾವಿತೋ ಹರಿರಿವೋದಿತಸ್ತಯಾ ಸರಿದೀಶದರ್ಶನಧೃತಾನುಸಂಮದಃ ॥೮॥**

**ತಾತ್ಪರ್ಯ :** ಸಮುದ್ರ ರಾಜನನ್ನು ನೋಡಿದಾಗ ಶ್ರೀರಾಘವೇಂದ್ರತೀರ್ಥ ಗುರುವರ್ಯರಿಗೆ ಬಹಳ ಆನಂದ ಉಂಟಾಯಿತು. ಅವರು ಕಾವೇರಿ ಮತ್ತು ಸಮುದ್ರದ ಪವಿತ್ರ ಸಂಗಮ ಸ್ಥಳದಲ್ಲಿ ಬಹುಕಾಲ (ಬಹಳ ಹೊತ್ತು) ಸ್ನಾನ ಮಾಡಿದರು. ಅನಂತರ ಮೇಲಕ್ಕೆ ಬಂದರು. ಆಗ ಅವರು ಆ ಕಾವೇರಿಯು ತನ್ನ ಹೃದಯದಲ್ಲಿ ಇಟ್ಟುಕೊಂಡು ಬಹುಕಾಲ ಧ್ಯಾನಮಾಡಿದ (ಶ್ರೀರಂಗನಾಥಸ್ವಾಮಿಯೇ ಮೊದಲಾದ ರೂಪವುಳ್ಳ) ಶ್ರೀಮನ್ನಾರಾಯಣನೇ ಕಾವೇರಿಯಿಂದ ಮೇಲಕ್ಕೆ ಎದ್ದು ಬಂದನೋ ಎಂಬುವ ರೀತಿಯಲ್ಲಿ ಶೋಭಿಸಿದರು. (ಭಕ್ತರಿಗೆ ಪರಮಾತ್ಮನ ಸಾರೂಪ್ಯವನ್ನು ವರ್ಣಿಸುತ್ತಾರೆ. ಇದು ಶಾಸ್ತ್ರಸಮ್ಮತವಾಗಿದೆ.)

**ಅವತಾರಿಕೆ :** ಈಗ ಕವಿಗಳು ಶ್ರೀಗುರು ಶ್ರೀರಾಘವೇಂದ್ರತೀರ್ಥರು ಕಾವೇರಿ ಸಮುದ್ರ ಸಂಗಮ ಸ್ಥಳದಲ್ಲಿ ಸ್ನಾನ ಮಾಡಿದ ನಂತರ ಭಗವಂತನ ಧ್ಯಾನ ಮಾಡಿದುದನ್ನು ವರ್ಣಿಸುತ್ತಾರೆ.

**ಅಧಿರುಹ್ಯ ತೀರಮವಿಷಹ್ಯತೇಜಸಾಂ ನಿಲಯಂ ಕೃತಾಘವಿಲಯಂ ಕೃಪಾಲಯಮ್ ।**
**ಕಲಯನ್ನುವಾಸ ದಲಯಂತಮಾಪದಂ**
**ಮುರಹಾರಿಣಂ ಮುನಿವರೋ ಹೃದಂತರೇ ॥೯॥**

**ತಾತ್ಪರ್ಯ :** ಸಮುದ್ರ ಸ್ನಾನವನ್ನು ಮಾಡಿದ ನಂತರ ಮುನಿಶ್ರೇಷ್ಠರಾದ ಶ್ರೀರಾಘವೇಂದ್ರ ಗುರುವರ್ಯರು ಸಮುದ್ರದಡದಲ್ಲಿ ಆಹ್ನಿಕ ಮಾಡುತ್ತಾ ಕುಳಿತರು. "ಪರಮಾತ್ಮನು ಸಹಿಸಲು ಅಸಾಧ್ಯವಾದ ಕಾಂತಿಪುಂಜಗಳಿಗೆ ಆಶ್ರಯನು. ತನ್ನನ್ನು ಸ್ಮರಿಸುವ ಎಲ್ಲರ ಪಾಪಗಳನ್ನು ಸಂಪೂರ್ಣವಾಗಿ ಸುಟ್ಟು ನಾಶಮಾಡುವನು. ಮಹಾದಯಾ ವಂತನು. ಭಕ್ತರ ಸಂಕಟಗಳನ್ನೆಲ್ಲಾ ಪರಿಹರಿಸುವವನು. ಹಿಂದೆ ಮುರನೆಂಬ ದೈತ್ಯನನ್ನು ಸಂಹರಿಸಿರುವನು. ಇಂತಹಾ ಪರಮಾತ್ಮನನ್ನೂ ಅವನ ಇನ್ನೂ ಅನೇಕ ಗುಣಗಳನ್ನೂ ಅನುಸಂಧಾನ ಮಾಡುತ್ತಾ ಹೃದಯದಲ್ಲಿ ಧ್ಯಾನಮಾಡುತ್ತಾ, ಶ್ರೀಗುರುವರ್ಯರು ಸಮುದ್ರ ತೀರದಲ್ಲಿ ಕುಳಿತಿದ್ದರು. ಈ ರೀತಿಯಾಗಿ ಅವರು ಅಲ್ಲಿಯೇ ವಾಸ ಮಾಡಿದರು.

**ಅವತಾರಿಕೆ :** ಈಗ ಕವಿಗಳು ಶ್ರೀರಾಘವೇಂದ್ರತೀರ್ಥರು ಮನ್ನಾರುಗುಡಿ ಯಾತ್ರೆ ಮಾಡಿದುದನ್ನು ವರ್ಣಿಸುತ್ತಾರೆ.

**ಹೃದಿ ಬದ್ಧಶುದ್ಧಿಭಿರುದಾರಬುದ್ಧಿಭಿಃ ಪ್ರತಿಷಿದ್ಧಸಿದ್ಧಜನಗರ್ವಸಿದ್ಧಿಭಿಃ ।**
**ಪರಿತೋ ವೃತಃ ಪರಿಜನೈರುಪೇಯಿವಾನ್ ಸ ತು**
**ಚಂಪಕಾಧಿಪಪುರಂ ತತಃ ಪರಮ್ ॥೧೦॥**

**ತಾತ್ಪರ್ಯ :** ಈ ರೀತಿಯಾಗಿ ಶ್ರೀರಾಘವೇಂದ್ರತೀರ್ಥ ಗುರುಗಳು ಕಾವೇರಿ ಸಮುದ್ರ ಸಂಗಮ ಸ್ನಾನಮಾಡಿ ಭಗವಂತನನ್ನು ಅನನ್ಯ ಭಕ್ತಿಯಿಂದ ಧ್ಯಾನಿಸಿ ಅಲ್ಲಿಂದ ಹೊರಟರು.

ಅವರ ಜೊತೆಗೆ ಅನೇಕ ಸೇವಕರೂ ಇದ್ದರು. "ಆ ಸೇವಕರೆಲ್ಲರೂ ಹೃದಯದಲ್ಲಿ ಸ್ಥಿರವಾಗಿ ನೆಲಸಿರುವ ಪವಿತ್ರತೆಯುಳ್ಳವರು. ಅವರೆಲ್ಲರೂ ಉತ್ತಮವಾದ ಜ್ಞಾನವನ್ನು ಸಂಪಾದಿಸಿದ್ದರು. ಶ್ರೀರಾಘವೇಂದ್ರತೀರ್ಥ ಗುರುಗಳ ಅನುಗ್ರಹದಿಂದ ಅವರುಗಳಿಗೆ ಸಿದ್ಧರಪುರುಷರನ್ನು ನಾಚಿಸಿ, ತಿರಸ್ಕರಿಸುವಂತಹಾ ಸಿದ್ಧಿಗಳು ಕೈಗೂಡಿದ್ದವು. ಇಂತಹಾ ಪರಿವಾರ ಜನರಿಂದ ಸಹಿತರಾಗಿ ಶ್ರೀಗುರು ರಾಘವೇಂದ್ರರು ಚಂಪಕಾರಣ್ಯದ ಅಧಿಪತಿಯಾದ ಶ್ರೀರಾಜಗೋಪಾಲ ಸ್ವಾಮಿಯ ಸ್ಥಾನವಾದ ಮನ್ನಾರುಗುಡಿ ಎಂಬ ಉತ್ತಮ ಕ್ಷೇತ್ರವನ್ನು ತಲುಪಿದರು.

**ಅವತಾರಿಕೆ :** ಈಗ ಕವಿಗಳು ಶ್ರೀ ರಾಘವೇಂದ್ರ ಗುರುಗಳು ಮನ್ನಾರುಗುಡಿಯಲ್ಲಿ ಶ್ರೀರಾಜಗೋಪಾಲಸ್ವಾಮಿಯ ದರ್ಶನ ಮಾಡಿದುದನ್ನು ವರ್ಣಿಸುತ್ತಾರೆ.

**ಸ ದದರ್ಶ ದೇವಮುನಿದರ್ಶನಶ್ರಿಯಂ ಹರಿಭಕ್ತಿದರ್ಶನವಿರೋಧಿಕರ್ಶನಃ ।**
**ಚಿರಮಾಸ್ತ ತತ್ರ ಪರಮಾಸ್ತಿಕಾಗ್ರಣೀರ್ಹೃದಿ ಮಸ್ತುಲೋಲಮತಿ ವಸ್ತು ಸಂಸ್ತುವನ್ ॥೧೧॥**

**ತಾತ್ಪರ್ಯ :** ಶ್ರೀಹರಿಪರಮಾತ್ಮನೇ ಸರ್ವೋತ್ತಮನೆಂಬ ತತ್ವಜ್ಞಾನವನ್ನು ಸಂಪಾದಿಸಿ ಅವನಲ್ಲಿ ಮಾಹಾತ್ಮ್ಯಜ್ಞಾನಪೂರ್ವಕವಾದ ಸುದೃಢ ಸ್ನೇಹವೆಂಬ ಭಕ್ತಿಯಿಂದ ಅವನನ್ನು ಉಪಾಸನೆ ಮಾಡುವುದರಿಂದ ಆ ಶ್ರೀಹರಿಪರಮಾತ್ಮನು ಒಲಿದು ಅನುಗ್ರಹಿಸುವನು ಎಂಬುದೇ ಶ್ರೀಮನ್ಮಧ್ವಾಚಾರ್ಯರ ಸಿದ್ಧಾಂತವು! ಈ ಸಿದ್ಧಾಂತವನ್ನು ಅವಲಂಬಿಸಿ, ಹಾಗೆಯೇ ಉಪಾಸನೆ ಮಾಡುತ್ತಿರುವ ಶ್ರೀರಾಘವೇಂದ್ರ ಗುರುಸಾರ್ವಭೌಮರು ಈ ಸಿದ್ಧಾಂತಕ್ಕೆ ವಿರೋಧಿಗಳಾಗಿರುವ ಬ್ರಹ್ಮಾತ್ಮೈಕ್ಯ ಸಿದ್ಧಾಂತ, ಮುಕ್ತಿಯಲ್ಲಿ ಎಲ್ಲರೂ ಸಮರು ಎಂಬ ಸಿದ್ಧಾಂತ ಮುಂತಾದವುಗಳನ್ನು ಶತಶಃ ಖಂಡಿಸಿ ನಿರಾಕರಿಸುತ್ತಿದ್ದರು. ಇಂತಹಾ ಗುರುವರೇಣ್ಯರು ಚಂಪಕಾರಣ್ಯ ಕ್ಷೇತ್ರಕ್ಕೆ ಬಂದರು. ಶ್ರೀರಾಜಗೋಪಾಲಸ್ವಾಮಿಯು ಆ ಕ್ಷೇತ್ರದ ಅಧಿಪತಿಯು! ಆ ರಾಜಗೋಪಾಲಸ್ವಾಮಿಯ ಸೌಂದರ್ಯ, ಲಾವಣ್ಯ, ಶೋಭೆ, ಕಾಂತಿ, ಸಂಪತ್ತುಗಳಾದರೋ ಎಣೆಯಿಲ್ಲದವುಗಳಾಗಿದ್ದವು. ಅವನಂತಹಾ ಸುಂದರ ಕಾಂತಿಪೂರ್ಣರು ಯಾರೂ ಇಲ್ಲ. ಯಾವಾಗಲೂ ಆನಂದವಿಹಾರ ಮಾಡುತ್ತಿರುವ ಆ ಶ್ರೀರಾಜಗೋಪಾಲಸ್ವಾಮಿಯನ್ನು ಗುರು ರಾಘವೇಂದ್ರರು ನೋಡಿದರು. ಭಗವಂತನಲ್ಲಿ ನಿಷ್ಠೆ, ಶ್ರದ್ಧೆ, ಭಕ್ತಿ ಉಳ್ಳವರಲ್ಲಿ ಶ್ರೇಷ್ಠರಾದ

ಗುರು ರಾಘವೇಂದ್ರರು ಕೆನೆ ಮೊಸರು ಬೆಣ್ಣೆ ಮುಂತಾದ ಗವ್ಯ ವಸ್ತುಗಳನ್ನು ಭಕ್ತರು ಸಮರ್ಪಿಸಿದಾಗ ಪ್ರೀತಿಯಿಂದ ಅವುಗಳನ್ನು ಸ್ವೀಕರಿಸಿ ಅವರಿಗೆ ಪರಮಾನುಗ್ರಹ ಮಾಡುವ ಲೋಕೈಕ ವಂದ್ಯನಾದ ಆ ಶ್ರೀರಾಜಗೋಪಾಲಸ್ವಾಮಿಯನ್ನು ಅತಿಶಯವಾದ ಭಕ್ತಿಯಿಂದ ವಿವಿಧ ರೀತಿಯಲ್ಲಿ ಸ್ತೋತ್ರ ಮಾಡುತ್ತಾ ತಮ್ಮ ಹೃದಯದಲ್ಲಿ ವಿಶೇಷವಾಗಿ ಧ್ಯಾನಮಾಡುತ್ತಾ ಆ ಚಂಪಕಾರಣ್ಯದಲ್ಲಿ ಬಹು ಕಾಲ ವಾಸ ಮಾಡಿದರು.

**ಅವತಾರಿಕೆ :** ಶ್ರೀರಾಘವೇಂದ್ರ ಗುರುವರೇಣ್ಯರು ಉಪನಿಷದರ್ಥಗರ್ಭಿತವಾದ ಮಾತುಗಳಿಂದ ಶ್ರೀರಾಜಗೋಪಾಲಕೃಷ್ಣನನ್ನು ಸ್ತೋತ್ರ ಮಾಡಿದುದನ್ನು ಈಗ ಕವಿಗಳು ವರ್ಣಿಸುತ್ತಾರೆ.

**ನ್ಯನವೀದಥೈನಮನವೀನವಾಗ್ಧುರೀಶಿರಸಾಂ ವಿಕಲ್ಪವಚಸಾಂ ನಿಗುಂಫನೈಃ ।**
**ಪರಿಭಕ್ತಿಪೂರಪರಿವಾಹಮೋಹದೈಃ ಪರಿಣದ್ಧಭಕ್ತಜನಚಿತ್ತಸಮ್ಮದೈಃ ॥೧೨॥**

**ತಾತ್ಪರ್ಯ :** ಶ್ರೀರಾಘವೇಂದ್ರ ಗುರುವರೇಣ್ಯರು ಶ್ರೀರಾಜಗೋಪಾಲನ ದರ್ಶನ ಮಾಡಿದರು. ಅನಂತರ ಉಪನಿಷತ್ತುಗಳಂತೆ ತೋರುವ ಭಕ್ತಿರಸ ಪ್ರವಾಹದ ಕಾಲುವೆಯಂತೆ ಇರುವ, ಪರಿಣತ ಮತಿಗಳಾದ ಭಕ್ತರ ಮನಸ್ಸಿಗೆ ಸಂತೋಷವನ್ನು ಉಂಟುಮಾಡುವ ಸ್ತೋತ್ರಗಳನ್ನು ಜೋಡಿಸಿ ಆ ರಾಜಗೋಪಾಲಸ್ವಾಮಿಯನ್ನು ಹೃದಯತುಂಬಿ ಸ್ತೋತ್ರ ಮಾಡಿದರು.

**ಅವತಾರಿಕೆ :** ಕವಿಗಳು ಈಗ ಶ್ರೀರಾಘವೇಂದ್ರಸ್ವಾಮಿಗಳು ಶ್ರೀರಾಜಗೋಪಾಲಸ್ವಾಮಿಯ ಪಾದಗಳನ್ನು ವರ್ಣಿಸಿದುದನ್ನು ತಿಳಿಸುತ್ತಾರೆ.

**ಹೃದಿ ಬೋಧದುಗ್ಧರಸವಾಸನಾಕೃತೇ ಪರಿನಿರ್ಮಿತಾವಿವ ಪಯೋಜತಲ್ಲಜೌ ।**
**ಅಪವರ್ಗಮಾರ್ಗಪರಿಬೋಧನಾಯ ಮೇ ಚರಣೌ ತವೇಶ ಕಿಮು ಚಿನ್ಹಪಲ್ಲವೌ ॥೧೩॥**

**ತಾತ್ಪರ್ಯ :** ಎಲೈ ಶ್ರೀರಾಜಗೋಪಾಲಸ್ವಾಮಿಯೇ! ನನ್ನ ಹೃದಯದಲ್ಲಿರುವ ಧ್ಯಾನ (ಜ್ಞಾನ) ಎಂಬ ತುಂಬಿದ ನೀರನ್ನು ಸುವಾಸನಾಗೊಳಿಸುವುದಕ್ಕಾಗಿಯೇ ನಿನ್ನ ಶ್ರೇಷ್ಠವಾದ ಎರಡು ಪಾದಕಮಲಗಳು ಅವಿರ್ಭಾವ ಹೊಂದಿವೆ. ಮೋಕ್ಷಮಾರ್ಗವನ್ನು ಕ್ರಮಿಸಲಿರುವ ನನಗೆ ನಿನ್ನ ಪಾದಗಳೆಂಬ ಎರಡು ಚಿಗುರೆಲೆಗಳ ತೊಂಪಲುಗಳು, ಮೋಕ್ಷದ ದಾರಿಯ ಗುರುತಿಗಾಗಿ ಇರುವ ಚಿಗುರೆಲೆಗಳ ಗೊಂಚಲುಗಳಂತೆ ಕಾಣಿಸುತ್ತಿದೆ. (ಹೃದಯದಲ್ಲಿ ಜ್ಞಾನ ಧ್ಯಾನಗಳೆಂಬ ಜಲವು ತುಂಬಿರುತ್ತದೆ.) ಅದನ್ನು ಸುವಾಸನೆಗೊಳಿಸುವುದಕ್ಕೋಸ್ಕರ ನಿನ್ನ ಎರಡು ಪಾದಕಮಲಗಳು ಆವಿರ್ಭಾವ ಹೊಂದಿವೆ. ಅಂದರೆ ನೀರಿನಿಂದ ಹುಟ್ಟಿದ ಕಮಲದಿಂದ ನೀರು ಸುವಾಸನೆಗೊಳ್ಳುವಂತೆ ಧ್ಯಾನದಿಂದ ಆವಿರ್ಭಾವ ಹೊಂದಿದ ಪರಮಾತ್ಮನ ಪಾದಕಮಲಗಳಿಂದ ಧ್ಯಾನಜಲವು ಸುವಾಸಿತವಾಗುತ್ತದೆ. ದಾರಿಯಲ್ಲಿ ಮೊದಲು ನಡೆಯುವವರು, ತಮ್ಮ ಹಿಂದಿನಿಂದ ಬರುವವರಿಗೆ ದಾರಿ ತಿಳಿಯಲೆಂದು ನಡೆಯುವ ದಾರಿಯಲ್ಲಿ ಅಲ್ಲಲ್ಲಿ ಗುರುತಿಗೋಸ್ಕರ ಚಿಗುರೆಲೆ ಮುಂತಾದ ವಸ್ತುಗಳನ್ನು ಇಟ್ಟು ಈ ದಾರಿಯಲ್ಲೇ ಬರಬೇಕೆಂದು

ಸೂಚಿಸುವಂತೆ ನನಗೂ (ಶ್ರೀರಾಘವೇಂದ್ರ ಸ್ವಾಮಿಗಳವರಿಗೂ) ಮೋಕ್ಷಮಾರ್ಗವನ್ನು ಕ್ರಮಿಸಲು ಗುರುತಿಗಾಗಿ ಇಟ್ಟಿರುವ ಚಿಗುರೆಲೆಯ ಗೊಂಚಲುಗಳಂತೆ ನಿನ್ನ ಎರಡು ಪಾದಕಮಲಗಳು ಇವೆ ಎಂಬುದಾಗಿ ಅಭಿಪ್ರಾಯ.) ನಿನ್ನ ಪಾದಗಳು ಮೋಕ್ಷಪ್ರದಗಳು, ಜ್ಞಾನಕ್ಕೆ ಧ್ಯಾನವೇ ಫಲ, ಜ್ಞಾನರಸಕ್ಕೆ ನಿನ್ನ ಪಾದಧ್ಯಾನವೇ ವಾಸನೆಯು ಎಂದು ತಾತ್ಪರ್ಯ.

**ಅವತಾರಿಕೆ** : ಶ್ರೀರಾಘವೇಂದ್ರಸ್ವಾಮಿಗಳು ಈಗ ಶ್ರೀರಾಜಗೋಪಾಲಸ್ವಾಮಿಯ ಎರಡು ಪಾದಗಳಲ್ಲಿರುವ ಗೆಜ್ಜೆ(ನೂಪುರ)ಗಳನ್ನು ವರ್ಣಿಸಿದುದನ್ನು ಕವಿಗಳು ತಿಳಿಸುತ್ತಾರೆ.

**ಉಪರಿ ಶ್ರಿತೇನ ಪುರತಶ್ಚ ನಶ್ವರವ್ಯವಹಾರದೂರಗಗಿರಾಮನಾರತಮ್ ।**
**ಪ್ರಣವದ್ವಯೇನ ಮಣಿನೂಪುರಾತ್ಮನಾ ಪರಿಕರ್ಮಿತೇ**
**ತವ ಪದೇ ಪದೇ ಮುದಾಮ್ ॥೧೪॥**

**ತಾತ್ಪರ್ಯ** : ಸ್ಮೃತಿ ಪುರಾಣಾದಿಗಳು ಅನಿತ್ಯಗಳು. ಅಂದರೆ ಪೌರುಷೇಯಗಳು. ವೇದಗಳು ನಿತ್ಯ ಅಂದರೆ ಅಪೌರುಷೇಯಗಳು. ಯಾರೂ ವೇದಗಳನ್ನು ಮಾಡಿಲ್ಲ. ಅವು ಶ್ರೇಷ್ಠವಾದ ಪ್ರಮಾಣಗಳು. ಇಂತಹಾ ವೇದಗಳ ಆದಿಯಲ್ಲಿಯೂ ಅಂತ್ಯದಲ್ಲಿಯೂ ಓಂಕಾರವನ್ನು ಉಚ್ಚರಿಸಿ ಅವುಗಳ ಪಠಣ ಮಾಡುತ್ತಾರೆ. ಈ ರೀತಿಯಾಗಿ ವೇದಗಳ ಆದ್ಯಂತಗಳಲ್ಲಿ ನಿರಂತರವಾಗಿ ಸೇರಿಕೊಂಡಿರುವ ಎರಡು ಓಂಕಾರಗಳು ಎಲೈ! ಶ್ರೀರಾಜಗೋಪಾಲ ಸ್ವಾಮಿಯೇ! ನಿನ್ನ ಪಾದಗಳೆರಡರಲ್ಲಿ ರತ್ನಖಚಿತವಾದ ಕಾಲ್ಗೆಜ್ಜೆಯ ರೂಪದಲ್ಲಿದ್ದು ಅಲಂಕಾರವಾಗಿವೆ. ಅಂತಹಾ ನಿನ್ನ ಪಾದಗಳೆರಡೂ ಸಚ್ಚಿದಾನಂದಾತ್ಮಕವಾಗಿವೆ. ಎರಡು ಓಂಕಾರಗಳಂತಿರುವ ಕಾಲ್ಗೆಜ್ಜೆಗಳಿಂದ ಕೂಡಿದ ನಿನ್ನ ವೇದ ಪ್ರತಿಪಾದ್ಯವಾದ ಎರಡು ಪಾದಗಳು ಓಂಕಾರ ಪ್ರತಿಪಾದ್ಯನಾದ ಸಚ್ಚಿದಾನಂದಸ್ವರೂಪನಾದ ನಿನಗಿಂತ ಅಭಿನ್ನವಾಗಿವೆ. ಪರಮಾತ್ಮನು ಓಂಕಾರ ಪ್ರತಿಪಾದ್ಯನು. ಅವನ ಪಾದಾದಿ ಸಕಲ ಅವಯವಗಳೂ ಸಚ್ಚಿದಾನಂದ ಸ್ವರೂಪಗಳು ಎಂಬ ವಿಷಯವನ್ನು ಶ್ರೀರಾಜಗೋಪಾಲಸ್ವಾಮಿಯ ನೂಪುರಗಳು ಸೂಚಿಸುತ್ತಿವೆ ಎಂಬುದಾಗಿ ಅಭಿಪ್ರಾಯ.

**ಅವತಾರಿಕೆ** : ಈಗ ಶ್ರೀರಾಘವೇಂದ್ರಸ್ವಾಮಿಗಳು ಶ್ರೀರಾಜಗೋಪಾಲಸ್ವಾಮಿಯ ವಕ್ಷಸ್ಥಲವನ್ನು ವರ್ಣಿಸಿದುದನ್ನು ಕವಿಗಳು ತಿಳಿಸುತ್ತಾರೆ.

**ರುಚಿವಾರಿಪೂರರುಚಿರಂ ಭುಜಾಂತರಂ ಶಿಶಿರಂ ತಟಾಕಮವಗಾಹ್ಯ ತಾವಕಮ್ ।**
**ತ್ಯಜತಿ ಶ್ರಮಂ ವ್ರಜತಿ ಹರ್ಷಮದ್ಯ ಮೇ ಭವಘರ್ಮತಾಪಮಪನೀಯ ದೃಗ್ಗವೀ ॥೧೫॥**

**ತಾತ್ಪರ್ಯ** : ಗೋವು ಅಥವಾ ಯಾವುದಾದರೊಂದು ಪ್ರಾಣಿಯು ಅಥವಾ ಆನೆಯು ಜಲಪ್ರವಾಹದಿಂದ ತುಂಬಿ ಮನೋಹರವಾದ ಹಾಗೂ ತಂಪಾದ ಕೊಳವನ್ನು ನೋಡಿ ಅದರಲ್ಲಿ ಇಳಿದು ಸೆಕೆಯಿಂದ ಉಂಟಾದ ಸಂತಾಪವನ್ನು ಪರಿಹರಿಸಿಕೊಂಡು ಆಯಾಸವನ್ನು ಕಳೆದುಕೊಂಡು ಸಂತೋಷಪಡುತ್ತದೆ. ಅದರಂತೆ ನನ್ನ ಕಣ್ಣೆಂಬ (ಗೋ) ಪ್ರಾಣಿಯ ಅಥವಾ

ಕಣ್ಣೆಂಬ ಹೆಣ್ಣಾನೆಯು ಕಾಂತಿಗಳೆಂಬ ಜಲಗಳ ಪ್ರವಾಹದಿಂದ ಮನೋಹರವಾದ ಮತ್ತು ತಂಪಾದ ನಿನ್ನ ಎದೆಯ ಮಧ್ಯಸ್ಥಳವೆಂಬ ಕೊಳವನ್ನು ಕಂಡು, ಅದರಲ್ಲಿ ಇಳಿದು ಸ್ನಾನ ಮಾಡಿ ಸಂಸಾರವೆಂಬ ಬಿಸಿಲುಗಾಲದ ಸೆಕೆಯ ತಾಪವನ್ನು ಪರಿಹರಿಸಿಕೊಂಡು ತನ್ನ ಆಯಾಸವನ್ನೆಲ್ಲಾ ಕಳೆದುಕೊಳ್ಳುತ್ತದೆ. ಸಂತೋಷವನ್ನು ಪಡೆಯುತ್ತದೆ.

ಕಾಡಿನಲ್ಲಿ ಓಡಾಡುವ ಪ್ರಾಣಿಯು ಆನೆ ಮುಂತಾದ್ದು ಬೇಸಿಗೆಯ ಬಿಸಿಲಿನಿಂದ ಬಳಲಿದಾಗ ಯಾವುದಾದರೊಂದು ಕೊಳವನ್ನು ಕಂಡು ಅದರಲ್ಲಿ ಇಳಿದು ಶ್ರಮ ಪರಿಹಾರ ಮಾಡಿಕೊಳ್ಳುವಂತೆ ನನ್ನ ಕಣ್ಣುಗಳು ವಿಶಾಲವೂ ಸುಂದರವೂ ಆದ ನಿನ್ನ ವಕ್ಷಸ್ಥಳವನ್ನು ನೋಡಿ ಸಂಸಾರದ ದುಃಖವನ್ನೆಲ್ಲಾ ಕಳೆದುಕೊಂಡು ಆನಂದವನ್ನು ಪಡೆಯುತ್ತದೆ ಎಂಬುದಾಗಿ ತಾತ್ಪರ್ಯ.

**ಅವತಾರಿಕೆ :** ಈಗ ಕವಿಗಳು ಶ್ರೀರಾಘವೇಂದ್ರಸ್ವಾಮಿಗಳು ಶ್ರೀರಾಜಗೋಪಾಲಸ್ವಾಮಿಯ ಮುಖವನ್ನು ಸ್ತುತಿಸಿದುದನ್ನು ವರ್ಣಿಸುತ್ತಾರೆ.

**ಅರುಣಾಧರಂ ತರುಣಚಂದ್ರಸುಂದರಂ ಕರುಣಾಧರಂ ವದನಮೀಶ ತಾವಕಮ್ ।**
**ಸ್ಮಿತಾಕಾಂತಿಪೂರನವಚಂದ್ರಿಕಾಭರೈರ್ಭವಶಾರ್ವರಂ ಕ್ಷಿಪತಿ ಭವ್ಯಚೇತಸಾಮ್ ॥೧೬॥**

**ತಾತ್ಪರ್ಯ :** ಎಲೈ ರಾಜಗೋಪಾಲಸ್ವಾಮಿಯೇ! ನಿನ್ನ ತುಟಿಯು ಕೆಂಪಾಗಿದೆ. ನಿನ್ನ ಮುಖವು ಎಳೆಯ ಪೂರ್ಣಚಂದ್ರನಂತೆ ಸುಂದರವಾಗಿದೆ. ಭಕ್ತರ ವಿಷಯದಲ್ಲಿ ದಯಾಪೂರ್ಣವಾಗಿದೆ. ಇಂತಹ ನಿನ್ನ ಮುಖದ ಮಂದಹಾಸದ ಕಾಂತಿಗಳ ಪ್ರವಾಹವೆಂಬ ಬೆಳದಿಂಗಳಿನ ಸಮೂಹಗಳಿಂದ, ಆ ನಿನ್ನ ಮುಖವು ಮೋಕ್ಷವನ್ನು ಬಯಸುವ ಭಕ್ತರ ಸಂಸಾರವೆಂಬ ಕತ್ತಲನ್ನು ಪರಿಹರಿಸುತ್ತದೆ. ಕೌಮುದೀ ಯಥಾ ತಮಃ ಪರಿಹರತಿ ತಥಾ ಮಂದಸ್ಮಿತಚಂದ್ರಿಕಾ ಸಂಸಾರಾಖ್ಯಾಂಧಕಾರಂ ಪರಿಹರತಿ ಇವ = ಬೆಳದಿಂಗಳು ಹೇಗೆ ಕತ್ತಲೆಯನ್ನು ನಾಶಗೊಳಿಸುತ್ತದೆಯೋ ಹಾಗೆಯೇ ನಿನ್ನ ಮಂದಹಾಸವೆಂಬ ಮುಖಚಂದ್ರನ ಬೆಳದಿಂಗಳು ಸಂಸಾರವೆಂಬ ಕತ್ತಲೆಯನ್ನು ಪರಿಹರಿಸುತ್ತದೆ ಎಂಬುದಾಗಿ ಅಭಿಪ್ರಾಯವು.

**ಅವತಾರಿಕೆ :** ಈಗ ಕವಿಗಳು ಶ್ರೀಗುರುಸಾರ್ವಭೌಮರು ಶ್ರೀರಾಜಗೋಪಾಲಸ್ವಾಮಿಯ ಮುಖವರ್ಣನೆಯನ್ನು ಮುಂದುವರೆಸಿದರು ಎಂದು ತಿಳಿಸುತ್ತಾರೆ.

**ಪರಿತಃ ಸ್ಥಿತೇಽಪಿ ಚಿಕುರೌಘಶಾರ್ವರೈರ್ವಿಲುಠದ್ಭಿರಾನನವಿಧೌ ವಿಭಾವಿತೇ ।**
**ತಿಲಕೇನ ನದ್ಧಕುಲಕೇನ ಸಾ ದರಂ ನ ಹಿ ವೇತ್ತಿ ಬಾಲತಮಮುತ್ಯುದಾರಗೀಃ ॥೧೭॥**

**ತಾತ್ಪರ್ಯ :** ಎಲೈ ರಾಜಗೋಪಾಲಸ್ವಾಮಿಯೇ! ನಿನ್ನ ಮುಖ ಚಂದ್ರನ ಸುತ್ತಲೂ ಚಂಚಲವಾದ ಗುಂಗುರು ಕೂದಲುಗಳು ಹಾರಾಡುತ್ತಾ ನಿನ್ನ ಮುಖವನ್ನು ಮುಚ್ಚಿಬಿಟ್ಟಿವೆ. ಆದರೆ ನಿನ್ನ ಮುಖಚಂದ್ರನನ್ನು ಗುರುತಿಸಲು ಹಣೆಯ ತಿಲಕವೆಂಬ ಗುರುತನ್ನು (ಅಭಿಜ್ಞಾನವನ್ನು) ಇಟ್ಟಾಗ "ಇದೇ ನಮ್ಮ ಸ್ವಾಮಿಯ ಮುಖಚಂದ್ರ" ನೆಂದು ಸ್ವಲ್ಪಮಟ್ಟಿಗೆ ನಿನ್ನ ಮುಖಚಂದ್ರನು

ಸೂಚಿಸುವಂತೆ ನನಗೂ (ಶ್ರೀರಾಘವೇಂದ್ರ ಸ್ವಾಮಿಗಳವರಿಗೂ) ಮೋಕ್ಷಮಾರ್ಗವನ್ನು ಕ್ರಮಿಸಲು ಗುರುತಿಗಾಗಿ ಇಟ್ಟಿರುವ ಚಿಗುರೆಲೆಯ ಗೊಂಚಲುಗಳಂತೆ ನಿನ್ನ ಎರಡು ಪಾದಕಮಲಗಳು ಇವೆ ಎಂಬುದಾಗಿ ಅಭಿಪ್ರಾಯ.) ನಿನ್ನ ಪಾದಗಳು ಮೋಕ್ಷಪ್ರದಗಳು, ಜ್ಞಾನಕ್ಕೆ ಧ್ಯಾನವೇ ಫಲ, ಜ್ಞಾನರಸಕ್ಕೆ ನಿನ್ನ ಪಾದಧ್ಯಾನವೇ ವಾಸನೆಯು ಎಂದು ತಾತ್ಪರ್ಯ.

**ಅವತಾರಿಕೆ :** ಶ್ರೀರಾಘವೇಂದ್ರಸ್ವಾಮಿಗಳು ಈಗ ಶ್ರೀರಾಜಗೋಪಾಲಸ್ವಾಮಿಯ ಎರಡು ಪಾದಗಳಲ್ಲಿರುವ ಗೆಜ್ಜೆ(ನೂಪುರ)ಗಳನ್ನು ವರ್ಣಿಸಿದುದನ್ನು ಕವಿಗಳು ತಿಳಿಸುತ್ತಾರೆ.

**ಉಪರಿ ಶ್ರಿತೇನ ಪುರತಶ್ಚ ನಶ್ವರವ್ಯವಹಾರದೂರಗಗಿರಾಮನಾರತಮ್ ।**
**ಪ್ರಣವದ್ವಯೇನ ಮಣಿನೂಪುರಾತ್ಮನಾ ಪರಿಕರ್ಮಿತೇ**
**ತವ ಪದೇ ಪದೇ ಮುದಾಮ್ ॥೧೪॥**

**ತಾತ್ಪರ್ಯ :** ಸ್ಮೃತಿ ಪುರಾಣಾದಿಗಳು ಅನಿತ್ಯಗಳು. ಅಂದರೆ ಪೌರುಷೇಯಗಳು. ವೇದಗಳು ನಿತ್ಯ ಅಂದರೆ ಅಪೌರುಷೇಯಗಳು. ಯಾರೂ ವೇದಗಳನ್ನು ಮಾಡಿಲ್ಲ. ಅವು ಶ್ರೇಷ್ಠವಾದ ಪ್ರಮಾಣಗಳು. ಇಂತಹಾ ವೇದಗಳ ಆದಿಯಲ್ಲಿಯೂ ಅಂತ್ಯದಲ್ಲಿಯೂ ಓಂಕಾರವನ್ನು ಉಚ್ಚರಿಸಿ ಅವುಗಳ ಪಠಣ ಮಾಡುತ್ತಾರೆ. ಈ ರೀತಿಯಾಗಿ ವೇದಗಳ ಆದ್ಯಂತಗಳಲ್ಲಿ ನಿರಂತರವಾಗಿ ಸೇರಿಕೊಂಡಿರುವ ಎರಡು ಓಂಕಾರಗಳು ಎಲೈ! ಶ್ರೀರಾಜಗೋಪಾಲ ಸ್ವಾಮಿಯೇ! ನಿನ್ನ ಪಾದಗಳೆರಡರಲ್ಲಿ ರತ್ನಖಚಿತವಾದ ಕಾಲ್ಗೆಜ್ಜೆಯ ರೂಪದಲ್ಲಿದ್ದು ಅಲಂಕಾರವಾಗಿವೆ. ಅಂತಹಾ ನಿನ್ನ ಪಾದಗಳೆರಡೂ ಸಚ್ಚಿದಾನಂದಾತ್ಮಕವಾಗಿವೆ. ಎರಡು ಓಂಕಾರಗಳಂತಿರುವ ಕಾಲ್ಗೆಜ್ಜೆಗಳಿಂದ ಕೂಡಿದ ನಿನ್ನ ವೇದ ಪ್ರತಿಪಾದ್ಯವಾದ ಎರಡು ಪಾದಗಳು ಓಂಕಾರ ಪ್ರತಿಪಾದ್ಯನಾದ ಸಚ್ಚಿದಾನಂದಸ್ವರೂಪನಾದ ನಿನಗಿಂತ ಅಭಿನ್ನವಾಗಿವೆ. ಪರಮಾತ್ಮನು ಓಂಕಾರ ಪ್ರತಿಪಾದ್ಯನು. ಅವನ ಪಾದಾದಿ ಸಕಲ ಅವಯವಗಳೂ ಸಚ್ಚಿದಾನಂದ ಸ್ವರೂಪಗಳು ಎಂಬ ವಿಷಯವನ್ನು ಶ್ರೀರಾಜಗೋಪಾಲಸ್ವಾಮಿಯ ನೂಪುರಗಳು ಸೂಚಿಸುತ್ತಿವೆ ಎಂಬುದಾಗಿ ಅಭಿಪ್ರಾಯ.

**ಅವತಾರಿಕೆ :** ಈಗ ಶ್ರೀರಾಘವೇಂದ್ರಸ್ವಾಮಿಗಳು ಶ್ರೀರಾಜಗೋಪಾಲಸ್ವಾಮಿಯ ವಕ್ಷಸ್ಥಲವನ್ನು ವರ್ಣಿಸಿದುದನ್ನು ಕವಿಗಳು ತಿಳಿಸುತ್ತಾರೆ.

**ರುಚಿವಾರಿಪೂರರುಚಿರಂ ಭುಜಾಂತರಂ ಶಿಶಿರಂ ತಟಾಕಮವಗಾಹ್ಯ ತಾವಕಮ್ ।**
**ತ್ಯಜತಿ ಶ್ರಮಂ ವ್ರಜತಿ ಹರ್ಷಮದ್ಯ ಮೇ ಭವಘರ್ಮತಾಪಮಪನೀಯ ದೃಗ್ಗವೀ ॥೧೫॥**

**ತಾತ್ಪರ್ಯ :** ಗೋವು ಅಥವಾ ಯಾವುದಾದರೊಂದು ಪ್ರಾಣಿಯು ಅಥವಾ ಆನೆಯು ಜಲಪ್ರವಾಹದಿಂದ ತುಂಬಿ ಮನೋಹರವಾದ ಹಾಗೂ ತಂಪಾದ ಕೊಳವನ್ನು ನೋಡಿ ಅದರಲ್ಲಿ ಇಳಿದು ಸೆಕೆಯಿಂದ ಉಂಟಾದ ಸಂತಾಪವನ್ನು ಪರಿಹರಿಸಿಕೊಂಡು ಆಯಾಸವನ್ನು ಕಳೆದುಕೊಂಡು ಸಂತೋಷಪಡುತ್ತದೆ. ಅದರಂತೆ ನನ್ನ ಕಣ್ಣೆಂಬ (ಗೋ) ಪ್ರಾಣಿಯ ಅಥವಾ

ಕಣ್ಣೆಂಬ ಹೆಣ್ಣಾನೆಯು ಕಾಂತಿಗಳೆಂಬ ಜಲಗಳ ಪ್ರವಾಹದಿಂದ ಮನೋಹರವಾದ ಮತ್ತು ತಂಪಾದ ನಿನ್ನ ಎದೆಯ ಮಧ್ಯಸ್ಥಳವೆಂಬ ಕೊಳವನ್ನು ಕಂಡು, ಅದರಲ್ಲಿ ಇಳಿದು ಸ್ನಾನ ಮಾಡಿ ಸಂಸಾರವೆಂಬ ಬಿಸಿಲುಗಾಲದ ಸೆಕೆಯ ತಾಪವನ್ನು ಪರಿಹರಿಸಿಕೊಂಡು ತನ್ನ ಆಯಾಸವನ್ನೆಲ್ಲಾ ಕಳೆದುಕೊಳ್ಳುತ್ತದೆ. ಸಂತೋಷವನ್ನು ಪಡೆಯುತ್ತದೆ.

ಕಾಡಿನಲ್ಲಿ ಓಡಾಡುವ ಪ್ರಾಣಿಯು ಆನೆ ಮುಂತಾದ್ದು ಬೇಸಿಗೆಯ ಬಿಸಿಲಿನಿಂದ ಬಳಲಿದಾಗ ಯಾವುದಾದರೊಂದು ಕೊಳವನ್ನು ಕಂಡು ಅದರಲ್ಲಿ ಇಳಿದು ಶ್ರಮ ಪರಿಹಾರ ಮಾಡಿಕೊಳ್ಳುವಂತೆ ನನ್ನ ಕಣ್ಣುಗಳು ವಿಶಾಲವೂ ಸುಂದರವೂ ಆದ ನಿನ್ನ ವಕ್ಷಸ್ಥಳವನ್ನು ನೋಡಿ ಸಂಸಾರದ ದುಃಖವನ್ನೆಲ್ಲಾ ಕಳೆದುಕೊಂಡು ಆನಂದವನ್ನು ಪಡೆಯುತ್ತದೆ ಎಂಬುದಾಗಿ ತಾತ್ಪರ್ಯ.

**ಅವತಾರಿಕೆ :** ಈಗ ಕವಿಗಳು ಶ್ರೀರಾಘವೇಂದ್ರಸ್ವಾಮಿಗಳು ಶ್ರೀರಾಜಗೋಪಾಲಸ್ವಾಮಿಯ ಮುಖವನ್ನು ಸ್ತುತಿಸಿದುದನ್ನು ವರ್ಣಿಸುತ್ತಾರೆ.

**ಅರುಣಾಧರಂ ತರುಣಚಂದ್ರಸುಂದರಂ ಕರುಣಾಧರಂ ವದನಮೀಶ ತಾವಕಮ್ ।**
**ಸ್ಮಿತಾಕಾಂತಿಪೂರನವಚಂದ್ರಿಕಾಭರೈರ್ಭವಶಾರ್ವರಂ ಕ್ಷಿಪತಿ ಭವ್ಯಚೇತಸಾಮ್ ॥೧೬॥**

**ತಾತ್ಪರ್ಯ :** ಎಲೈ ರಾಜಗೋಪಾಲಸ್ವಾಮಿಯೇ! ನಿನ್ನ ತುಟಿಯು ಕೆಂಪಾಗಿದೆ. ನಿನ್ನ ಮುಖವು ಎಳೆಯ ಪೂರ್ಣಚಂದ್ರನಂತೆ ಸುಂದರವಾಗಿದೆ. ಭಕ್ತರ ವಿಷಯದಲ್ಲಿ ದಯಾಪೂರ್ಣವಾಗಿದೆ. ಇಂತಹ ನಿನ್ನ ಮುಖದ ಮಂದಹಾಸದ ಕಾಂತಿಗಳ ಪ್ರವಾಹವೆಂಬ ಬೆಳದಿಂಗಳಿನ ಸಮೂಹಗಳಿಂದ, ಆ ನಿನ್ನ ಮುಖವು ಮೋಕ್ಷವನ್ನು ಬಯಸುವ ಭಕ್ತರ ಸಂಸಾರವೆಂಬ ಕತ್ತಲನ್ನು ಪರಿಹರಿಸುತ್ತದೆ. ಕೌಮುದೀ ಯಥಾ ತಮಃ ಪರಿಹರತಿ ತಥಾ ಮಂದಸ್ಮಿತಚಂದ್ರಿಕಾ ಸಂಸಾರಾಖ್ಯಾಂಧಕಾರಂ ಪರಿಹರತಿ ಇವ = ಬೆಳದಿಂಗಳು ಹೇಗೆ ಕತ್ತಲೆಯನ್ನು ನಾಶಗೊಳಿಸುತ್ತದೆಯೋ ಹಾಗೆಯೇ ನಿನ್ನ ಮಂದಹಾಸವೆಂಬ ಮುಖಚಂದ್ರನ ಬೆಳದಿಂಗಳು ಸಂಸಾರವೆಂಬ ಕತ್ತಲೆಯನ್ನು ಪರಿಹರಿಸುತ್ತದೆ ಎಂಬುದಾಗಿ ಅಭಿಪ್ರಾಯವು.

**ಅವತಾರಿಕೆ :** ಈಗ ಕವಿಗಳು ಶ್ರೀಗುರುಸಾರ್ವಭೌಮರು ಶ್ರೀರಾಜಗೋಪಾಲಸ್ವಾಮಿಯ ಮುಖವರ್ಣನೆಯನ್ನು ಮುಂದುವರೆಸಿದರು ಎಂದು ತಿಳಿಸುತ್ತಾರೆ.

**ಪರಿತಃ ಸ್ಥಿತೇಽಪಿ ಚಿಕುರೌಘಶಾರ್ವರೈರ್ವಿಲುಠದ್ಭಿರಾನನವಿಧೌ ವಿಭಾವಿತೇ ।**
**ತಿಲಕೇನ ನದ್ಧಕುಲಕೇನ ಸಾ ದರಂ ನ ಹಿ ವೇತ್ತಿ ಬಾಲತಮಮತ್ಯುದಾರಗೀಃ ॥೧೭॥**

**ತಾತ್ಪರ್ಯ :** ಎಲೈ ರಾಜಗೋಪಾಲಸ್ವಾಮಿಯೇ! ನಿನ್ನ ಮುಖ ಚಂದ್ರನ ಸುತ್ತಲೂ ಚಂಚಲವಾದ ಗುಂಗುರು ಕೂದಲುಗಳು ಹಾರಾಡುತ್ತಾ ನಿನ್ನ ಮುಖವನ್ನು ಮುಚ್ಚಿಬಿಟ್ಟಿವೆ. ಆದರೆ ನಿನ್ನ ಮುಖಚಂದ್ರನನ್ನು ಗುರುತಿಸಲು ಹಣೆಯ ತಿಲಕವೆಂಬ ಗುರುತನ್ನು (ಅಭಿಜ್ಞಾನವನ್ನು) ಇಟ್ಟಾಗ "ಇದೇ ನಮ್ಮ ಸ್ವಾಮಿಯ ಮುಖಚಂದ್ರ" ನೆಂದು ಸ್ವಲ್ಪಮಟ್ಟಿಗೆ ನಿನ್ನ ಮುಖಚಂದ್ರನು

ಪ್ರಕಟವಾದರೂ ಅತ್ಯಂತ ಶ್ರೇಷ್ಠವಾದ ಅಪೌರುಷೇಯವಾದ ವೇದವಾಕ್ಯವು ನಿನ್ನ ಮುಖಚಂದ್ರನು ಅತ್ಯಂತ ಬಾಲಕನೆಂದೂ, ಅತಿ ಸುಂದರನೆಂದೂ ತಿಳಿಯುವುದು ಕಷ್ಟವಲ್ಲವೇ?

**"ಲೋಕೇ ಮುಖೇ ದೃಷ್ಟೇ ವ್ಯಕ್ತಿ ಜ್ಞಾನಂ ಭವತಿ!**
**ಅತ್ರ ತು ಅಂಧಕಾರಾಚ್ಛಾದಿತೇऽಪಿ ತಿಲಕರೂಪಚಿಹ್ನೇನ ಮುಖಚಂದ್ರೇ**
**ಪ್ರಕಾಶಮಾನೇ ಸತ್ಯಪಿ ಮಹತೀ ವೇದವಾಕ್ ನ ಜಾನಾತಿ**
**ಇತ್ಯನೇನ" ಯತೋ ವಾಚೋ ನಿವರ್ತಂತೇ ।**
**ಇತ್ಯಾದಿನಾ ಶೃತಯಃ ಅನಂತಕಲ್ಯಾಣಗುಣಗಂಭೀರಂ**
**ಶ್ರೀಪರಮಾತ್ಮನಂ ನ ವಿಜಾನಂತಿ । ಇತಿ ಭಾವಃ ॥**

ಲೋಕದಲ್ಲಿ ಮುಖವನ್ನು ನೋಡಿದಾಗ ವ್ಯಕ್ತಿಜ್ಞಾನ ಉಂಟಾಗುತ್ತದೆ. ಇಲ್ಲಿಯಾದರೋ ಮುಖಚಂದ್ರನಿಗೆ ಗುಂಗುರು ಕೂದಲುಗಳೆಂಬ ಕಗ್ಗತ್ತಲೆಯ ಆವರಣವಿದ್ದರೂ, ತಿಲಕವೆಂಬ ಚಿಹ್ನೆಯಿಂದ ಇವನು ಮುಖಚಂದ್ರನು ಎಂದು ಪ್ರಕಟವಾಗಿ ತಿಳಿಯುತ್ತಿದ್ದರೂ ಕೂಡಾ ಅಪೌರುಷೇಯ ವೇದವು (ಮಹತ್ತಾದ ವೇದವಾಕ್ಯವು) ನಿನ್ನನ್ನು ತಿಳಿಯುತ್ತಿಲ್ಲ ಎಂಬುದಾಗಿ ಹೇಳಿದ್ದರಿಂದ ಯಾವನನ್ನು ಸಂಪೂರ್ಣವಾಗಿ ಹೇಳಲಾಗದೇ ವೇದವಾಕ್ಯಗಳು ಹಿಂದಕ್ಕೆ ಬರುತ್ತವೆ ಎಂಬ ಅರ್ಥವುಳ್ಳ ಯತೋ ವಾಚೋ ನಿವರ್ತಂತೇ ಇವೇ ಮೊದಲಾದ ವೇದ ವಾಕ್ಯಗಳು ಅನಂತಕಲ್ಯಾಣ ಗುಣಗಳಿಂದ ಮಹೋತ್ಕೃಷ್ಟನಾಗಿರುವ ಶ್ರೀಪರಮಾತ್ಮನನ್ನು ತಿಳಿಯುತ್ತಿಲ್ಲ ಎಂದು ತಾತ್ಪರ್ಯ.

**ಅವತಾರಿಕೆ :** ಈಗ ಕವಿಗಳು ಶ್ರೀ ರಾಘವೇಂದ್ರಸ್ವಾಮಿಗಳು ಶ್ರೀರಾಜಗೋಪಾಲಸ್ವಾಮಿಯ ಮುಖಚಂದ್ರವರ್ಣನೆಯನ್ನು ಉಪಸಂಹರಿಸುತ್ತಾ ಆ ಪರಮಾತ್ಮನ ಮುಖಕಮಲವನ್ನು ತಮ್ಮ ಹೃದಯವು ಎಂದೂ ಮರೆಯದಿರಲಿ ಎಂಬುದಾಗಿ ಪ್ರಾರ್ಥನೆ ಮಾಡಿದುದನ್ನು ತಿಳಿಸುತ್ತಾರೆ.

**ಅಲಕಾವೃತಾಲಿಕಮುದಾರಮುನ್ನಸಂ ಸ್ಮಿತಫುಲ್ಲಗಂಡತಲಮುಲ್ಲಸನ್ಮುಖಮ್ ।**
**ದರವಾಮಭಾಗನತಮೌಲಿಮೋಹನಂ ತವ ದೇವ**
**ನೈವ ಹೃದಯಂ ಜಹಾತು ಮೇ ॥೧೮॥**

**ತಾತ್ಪರ್ಯ :** ಎಲೈ ಶ್ರೀರಾಜಗೋಪಾಲಸ್ವಾಮಿಯೇ! ನಿನ್ನ ಮುಖದ ಸುತ್ತಲೂ ಗುಂಗುರು ಕೂದಲುಗಳು ಹಾರಾಡುತ್ತಿವೆ. ಮಂದಹಾಸದಿಂದ ನಿನ್ನ ಕಪೋಲ ಪ್ರದೇಶವು ಅರಳಿ ಶೋಭಿಸುತ್ತಿದೆ. ಎತ್ತರವಾದ ಮೂಗು ಮುಖಕ್ಕೆ ಅಲಂಕಾರವಾಗಿದೆ. ನಿನ್ನ ತಲೆಯು ಎಡಕ್ಕೆ ಸ್ವಲ್ಪ ವಾಲಿ ನೋಡುವವರಿಗೆ ತುಂಬಾ ಪ್ರೀತಿಯನ್ನು ಉಂಟುಮಾಡುತ್ತಾ ಪರಮ ಸುಂದರವಾಗಿದೆ. ಇಂತಹಾ ನಿನ್ನ ಶ್ರೇಷ್ಠವಾದ ಮುಖವನ್ನು ನನ್ನ ಹೃದಯವು ಯಾವಾಗಲೂ ಮರೆಯದಿರಲಿ ಹಾಗೂ ಸದಾ ಸ್ಮರಿಸುತ್ತಾ ಸ್ತುತಿಸುತ್ತಿರಲಿ.

## ರಾಮಸೇತು ಯಾತ್ರಾ

**ಅವತಾರಿಕೆ :** ಶ್ರೀ ಗುರು ರಾಘವೇಂದ್ರರು ಶ್ರೀರಾಜಗೋಪಾಲಸ್ವಾಮಿಯನ್ನು ಸ್ತೋತ್ರ ಮಾಡಿದ ಅನಂತರ ರಾಮಸೇತು ಯಾತ್ರೆಯನ್ನು ಮಾಡಿದರೆಂದು ಕವಿಗಳು ವರ್ಣಿಸುತ್ತಾರೆ.

**ಇತಿ ಬಾಷ್ಪಗದ್ಗದತಯಾऽತಿಮಂಥರಂ ಪ್ರಮದಪ್ರವಾಹಕೃತಕಾಂತಿಕಂಧರಮ್ ।**
**ರಚಿತಸ್ತುತಿಃ ಕೃತನತಿಸ್ಸಮೇಯಿವಾನ್ ಸ ತು**
**ರಾಮಸೇತುಮವಲೋಕನೋತ್ಸುಕಃ ॥೧೯॥**

**ತಾತ್ಪರ್ಯ :** ಶ್ರೀರಾಘವೇಂದ್ರತೀರ್ಥರು ಶ್ರೀರಾಜಗೋಪಾಲಸ್ವಾಮಿಯನ್ನು ಸ್ತೋತ್ರ ಮಾಡುವಾಗ ಅವರ ಕಣ್ಣುಗಳಲ್ಲಿ ಆನಂದದ ಕಣ್ಣೀರು ತುಂಬಿಕೊಂಡಿತು. ಅದರಿಂದಾಗಿ ಅವರ ಕಂಠವು ಬಿಗಿದು ಬಂದಿತು ಅವರ ಬಾಯಿಯಿಂದ ಅಕ್ಷರಗಳು ತೊದಲಲು ಆರಂಭಿಸಿದವು. ಮಧ್ಯದಲ್ಲಿ ಅಕ್ಷರಗಳು ಸ್ಖಲಿತವಾದುವು. (ಭಕ್ತಿಯಿಂದ ಸ್ತೋತ್ರ ಮಾಡುವಾಗ ಇವೆಲ್ಲವೂ ದೂಷಣವಲ್ಲ. ಭೂಷಣವೇ ಆಗಿರುತ್ತದೆ. ಭಾಗವತದಲ್ಲಿ ಶ್ರೀಪ್ರಹ್ಲಾದರಾಜರು ಶ್ರೀಲಕ್ಷ್ಮೀನೃಸಿಂಹದೇವರ ಸ್ತೋತ್ರ ಮಾಡುವಾಗಲೂ ಈ ರೀತಿಯೇ ಆಯಿತೆಂದು ವರ್ಣಿಸಲಾಗಿದೆ.) ಶ್ರೀಗುರುರಾಜರ ಮಾತುಗಳು ನಿಧಾನವಾಗಿಯೂ ಗಂಭೀರವಾಗಿಯೂ ಇದ್ದವು. ಸ್ತೋತ್ರ ಮಾಡುವಾಗ ಉಬ್ಬಿದ ಅವರ ಕಂಠವು ಸಂತೋಷದ ಪರಂಪರೆಯಿಂದ ಉತ್ತಮವಾದ ಕಾಂತಿಯಿಂದ ಶೋಭಿಸುತ್ತಿತ್ತು. ಶ್ರೀ ರಾಘವೇಂದ್ರಗುರುಗಳು ಶ್ರೀರಾಜಗೋಪಾಲಸ್ವಾಮಿಯನ್ನು ಈ ರೀತಿಯಾಗಿ ಸ್ತೋತ್ರ ಮಾಡಿ ಅಲ್ಲಿಂದ ಶ್ರೀರಾಮಸೇತುವನ್ನು ನೋಡಬೇಕೆಂದು ಕ್ರಮೇಣ ಪ್ರಯಾಣ ಮಾಡುತ್ತ ಅಲ್ಲಿಗೆ ತಲುಪಿದರು.

**ಅವತಾರಿಕೆ :** ಈಗ ಕವಿಗಳು ಶೀಗುರುಸಾರ್ವಭೌಮ ಶ್ರೀರಾಘವೇಂದ್ರತೀರ್ಥರು ರಾಮಸೇತುವಿಗೆ ಹೋಗಿ ಅಲ್ಲಿ ಸಮುದ್ರವನ್ನು ವೀಕ್ಷಿಸಿದರು (ನೋಡಿದರು) ಎಂದು ತಿಳಿಸುತ್ತಾರೆ.

**ಅಥ ಲೋಚನಾತಿಥಿಮಸಾವಪಾಂ ನಿಧಿಂ ನಿಧಿರರ್ಹಣೀಯಮಹಸಾಮುದಾರಧೀಃ ।**
**ಅಕರೋದಪಾರಮಕರೋದಪಾಕುಲಂ ಸುಕರಂ ಶ್ರಮಾಪನಯಶಕ್ತಿಶೀಕರಮ್ ॥೨೦॥**

**ತಾತ್ಪರ್ಯ :** ಸಮುದ್ರವು ಅಸಂಖ್ಯವಾದ ಮೊಸಳೆ ಮತ್ತು ಇತರ ಜಲಚರಗಳಿಂದ ವ್ಯಾಪ್ತವಾಗಿದೆ (ಆವೃತವಾಗಿದೆ). ಅದು ಮಂಗಳಪ್ರದವೂ ಆಗಿದೆ. ತನ್ನ ನೀರಿನ ತುಂತುರು ಹನಿಗಳಿಂದ ಅಲ್ಲಿಗೆ ಬಂದವರ ಶ್ರಮವನ್ನು ಪರಿಹರಿಸುತ್ತದೆ. ಮಹಾತೇಜಸ್ವಿಗಳೂ, ಪ್ರಜ್ಞಾನಿಧಿಗಳೂ, ಆದ ಶ್ರೀರಾಘವೇಂದ್ರ ಗುರುಸಾರ್ವಭೌಮರು ಸೇತುಯಾತ್ರೆಗೆ ಹೊರಟು ರಾಮಸೇತುವನ್ನು ತಲುಪಿ ಅಲ್ಲಿ ಇಂತಹ ಸಮುದ್ರವನ್ನು ನೋಡಿದರು.

**ಅವತಾರಿಕೆ :** ಸಮುದ್ರದ ಅಲೆಗಳು ವೇಗವಾಗಿ ಬಂದು ದಡದಲ್ಲಿ ವಿಶ್ರಾಂತಿ ಹೊಂದುವುದನ್ನು ಈಗ ಕವಿಗಳು ಉತ್ಪ್ರೇಕ್ಷಿಸುತ್ತಾರೆ.

**ಮುನಿಧುರ್ಯದರ್ಶನಕುತೂಹಲಾದಿವ ಪ್ರಥಮಂ ಪ್ರಧಾವಿತಮಹೋರ್ಮಿಮುತ್ಸುಕಾಃ ।**
**ಅನುಧಾವಿತಸ್ಸರಭಸಂ ಯದೂರ್ಮಯಃ ಪುರತೋಽಭಿಗಂತುಮಲಸಾ ವಿಚುಕ್ರುಶುಃ ॥೨೧॥**

**ತಾತ್ಪರ್ಯ :** ಶ್ರೀರಾಘವೇಂದ್ರತೀರ್ಥರು ಸಮುದ್ರದ ಬಳಿ ಹೋದಾಗ ಕೆಲವು ದೊಡ್ಡ ಅಲೆಗಳು ಅವರ ದರ್ಶನಮಾಡುವ ಉದ್ದೇಶದಿಂದಲೋ ಎಂಬಂತೆ ದಡದತ್ತ ಓಡಿ ಬರುತ್ತಿದ್ದವು. ಆಗ ಆ ಅಲೆಗಳ ಹಿಂದಿನಿಂದ ಶ್ರೀಗುರುರಾಜರ ದರ್ಶನಕ್ಕಾಗಿಯೋ ಎಂಬಂತೆ ಬೇರೇ ಕೆಲವು ಅಲೆಗಳು ಮೊದಲು ಬಂದ ಅಲೆಗಳ ಹಿಂಭಾಗದಲ್ಲಿ ಅವುಗಳನ್ನು ಅನುಸರಿಸಿ ಮೊದಲು ಬಂದ ಅಲೆಗಳ ಸಮೂಹದ ಹಿಂದೆಯೇ ಓಡಿ ಬಂದವು. ಶ್ರೀರಾಘವೇಂದ್ರರ ದರ್ಶನಾಭಿಲಾಷೆಯಿಂದ ಕೂಡಿ ಓಡಿ ಬರುತ್ತಿದ್ದರೂ ದಡದ ಹತ್ತಿರಕ್ಕೆ ಬರುವ ಸಮಯಕ್ಕೆ ಅಲೆಗಳು ಸೋತುಹೋಗಿ ರಾಯರ ಪಾದವನ್ನು ಮುಟ್ಟಲು ಆಗಲಿಲ್ಲವಲ್ಲ ಎಂದು ಕಿರುಚುತ್ತಾ ದಡಕ್ಕೆ ಸ್ವಲ್ಪ ದೂರದಲ್ಲಿಯೇ ನಿಂತುಬಿಟ್ಟವು. (ಸಮುದ್ರದ ಅಲೆಗಳು ಒಂದರ ಹಿಂದೆ ಒಂದು ಬರುತ್ತಾ ಇರುತ್ತವೆ. ಅವುಗಳಲ್ಲಿ ದೊಡ್ಡ ಅಲೆಗಳನ್ನು ಹಿಂಬಾಲಿಸಿ ಬಂದ ಅಲೆಗಳು ನಾವು ಮೊದಲು ಶ್ರೀಗುರುರಾಜರ ಪಾದಸ್ಪರ್ಷ ಮಾಡಬೇಕೆಂದು ಕುತೂಹಲದಿಂದ ಓಡಿ ಬರುತ್ತಿರುವಂತೆ ಕಾಣಿಸುತ್ತಿತ್ತು. ಅಲೆಗಳು ದಡದ ಹತ್ತಿರಕ್ಕೆ ಬಂದು ಮತ್ತೆ ಬಂದ ದಾರಿಯಲ್ಲಿಯೇ ಹಿಂತಿರುಗುತ್ತವೆ. ಇದನ್ನು ಕವಿಗಳು ನಮಗೆ ಶ್ರೀರಾಯರ ಪಾದಸ್ಪರ್ಷ ಮಾಡಲಾಗಲಿಲ್ಲವಲ್ಲ ಎಂಬುದಾಗಿ ಅಲೆಗಳು ದುಃಖದಿಂದ ಹಿಂತಿರುಗಿದಂತೆ ಕಾಣಿಸುತ್ತವೆ ಎಂದು ವರ್ಣಿಸಿದ್ದಾರೆ. ಅಲೆಗಳು ಭೋರ್ಗರೆಯುತ್ತಿರುವುದನ್ನು ಅವುಗಳು ನಿರಾಶೆಯಿಂದ ಕಿರುಚುತ್ತಿರುವಂತೆ ಕಾಣಿಸುತ್ತಿದೆ ಎಂದು ಉತ್ಪ್ರೇಕ್ಷಿಸಿದ್ದಾರೆ.)

**ಅವತಾರಿಕೆ :** ಸಮುದ್ರದ ದಡವೆಂಬ ವನಿತೆಯು ಸುಮಂಗಲೀ ಸ್ತ್ರೀಯರು ಆರತಿಯನ್ನು ಮಾಡಿ ಪರಮಹಂಸ ಸನ್ನ್ಯಾಸಿಗಳನ್ನು ಎದುರುಗೊಳ್ಳುವಂತೆ, ಸ್ವಾಗತಿಸುವಂತೆ ಶ್ರೀರಾಘವೇಂದ್ರತೀರ್ಥರನ್ನು ಎದುರುಗೊಂಡು ಸ್ವಾಗತಿಸಿದಳು ಎಂದು ಕವಿಗಳು ವರ್ಣಿಸುತ್ತಾರೆ.

**ಪುರತಸ್ಸಮುದ್ಯತತರಂಗಹಸ್ತಯಾ ಸಮುದೀತಪನ್ನಗಫಣಾಮಣಿಗಣೈಃ ।**
**ಧೃತಮಂಗಲಾರ್ಥಮಣಿದೀಪಮಾಲಯಾ ಯತಿರಾಡಸೇವ್ಯತ ಯದೀಯವೇಲಯಾ ॥೨೨॥**

**ತಾತ್ಪರ್ಯ :** ಪರಮಹಂಸಾಶ್ರಮ ಸ್ವೀಕರಿಸಿದ ಸನ್ನ್ಯಾಸಿಗಳು ಬಂದಾಗ ಸುಮಂಗಲಿಯರು ತಮ್ಮ ಎರಡು ಕೈಗಳಿಂದ ಹರಿವಾಣವನ್ನು ಎತ್ತಿ ಹಿಡಿದು ರತ್ನದ ಆರತಿಯನ್ನು ಮಾಡುತ್ತಾರೆ. ಇಲ್ಲಿ ಶ್ರೀರಾಘವೇಂದ್ರತೀರ್ಥರಿಗೆ ಸಮುದ್ರದ ದಡವೆಂಬ ಸುಮಂಗಲಿಯು ಅದೇ ರೀತಿಯಲ್ಲಿ ಆರತಿ ಮಾಡಿದಳು ಎಂದು ಕವಿಗಳು ವರ್ಣಿಸುತ್ತಿದ್ದಾರೆ. ಮುಂಭಾಗಕ್ಕೆ ಮೇಲಕ್ಕೆ ಚಾಚಿದ

ಎರಡು ದೊಡ್ಡ ತರಂಗಗಳೆಂಬ ಕೈಗಳನ್ನುಳ್ಳ ಸಮುದ್ರದ ತಟೀ (ದಡ) ಎಂಬ ಸ್ತ್ರೀಯು, ಸಮುದ್ರದ ನೀರಿನಿಂದ ಮೇಲಕ್ಕೆ ತಲೆ ಎತ್ತಿ ಬಂದಿರುವ, ಸರ್ಪಗಳ ಹೆಡೆಯಲ್ಲಿರುವ ರತ್ನಗಳ ಸಮೂಹದಿಂದ, ರತ್ನ ದೀಪಗಳ ಸಾಲುಗಳಿಂದ ಕೂಡಿದ ಹರಿವಾಣವನ್ನು ಕೈಗಳಲ್ಲಿ ಹಿಡಿದುಕೊಂಡಿರುವವಳಂತೆ ಕಾಣಿಸುತ್ತಾ ಶ್ರೀರಾಘವೇಂದ್ರ ಗುರುಗಳನ್ನು ಸೇವಿಸಿದಳು. ಇಲ್ಲಿ ಸಮುದ್ರದ ಎರಡು ತರಂಗಗಳೇ ಕೈಗಳು, ಸರ್ಪಗಳ ಹೆಡೆಯ ಮಣಿಗಳ ಸಾಲುಗಳೇ ಆರತಿಯು, ಸಮುದ್ರದ ದಡವೇ ಆರತಿ ಮಾಡುವ ಸುಮಂಗಲೀ ಸ್ತ್ರೀಯು ಎಂಬುದಾಗಿ ವರ್ಣಿಸಿದ್ದಾರೆ.

**ಅವತಾರಿಕೆ :** ಶ್ರೀರಾಘವೇಂದ್ರ ಗುರುಸಾರ್ವಭೌಮರು "ತನ್ನ ಸಂತತಿಯಾದ ಚಂದ್ರ, ಕಲ್ಪವೃಕ್ಷ, ಅಮೃತ, ಲಕ್ಷ್ಮೀ ಇವುಗಳನ್ನು ಧರಿಸಿರುವುದನ್ನು ನೋಡಿ ಸಂತೋಷದಿಂದ ಸಮುದ್ರರಾಜನು ಕುಣಿಯುತ್ತಿರುವನೋ ಎಂಬಂತೆ ಇತ್ತು ಎಂಬುದಾಗಿ ಕವಿಗಳು ವರ್ಣಿಸುತ್ತಿದ್ದಾರೆ.

**ವದನೇ ವಿಧುಂ ಕರತಲೇ ಸುರದ್ರುಮಂ**
**ನಯನೇ ಸುಧಾಮಧಿಮನಃ ಶ್ರೀಯಂ ಚ ಯಃ ।**
**ನಿಜಸಂತತಿಂ ಯತಿವರೇಽನುಸಂದಧನ್**
**ಮುದಿತೋ ನನರ್ತ ಸ ತರಂಗರಿಂಖಣೈಃ ॥೨೩॥**

**ತಾತ್ಪರ್ಯ :** ಶ್ರೀರಾಘವೇಂದ್ರಸ್ವಾಮಿಗಳವರ ಮುಖವು ಚಂದ್ರನಂತೆ ಇತ್ತು. ಕೈಯಲ್ಲಿ ಕಲ್ಪವೃಕ್ಷದ ಚಿಹ್ನೆ ಇತ್ತು. ಕೈಗಳೆರಡೂ ಕಲ್ಪವೃಕ್ಷದಂತೆ ಇದ್ದವು. ಅವುಗಳು ಕಲ್ಪವೃಕ್ಷದಂತೆ ದಾನ ಮಾಡುವುದರಲ್ಲಿ, ಕೇಳಿದ್ದನ್ನು ಕೊಡುವುದರಲ್ಲಿ ಎಲ್ಲರನ್ನೂ ಮೀರಿಸಿದ್ದವು. ಅವರ ದೃಷ್ಟಿಯು ತಂಪಾಗಿಯೂ, ದೃಷ್ಟಿಗೆ ಗೋಚರರಾಗಿರುವವರನ್ನು ಅಮೃತದಂತೆ ಉಜ್ಜೀವಿಸುತ್ತಲೂ ಇತ್ತು. ಆದ್ದರಿಂದ ಅವರು ಕಣ್ಣಿನಲ್ಲಿ ಅಮೃತವನ್ನು ಧರಿಸಿದ್ದರು. ಅವರ ಮನಸ್ಸಿನಲ್ಲಿ ಲಕ್ಷ್ಮೀಯು ಸನ್ನಿಹಿತಳಾಗಿದ್ದುದರಿಂದ ಅವರು ಮನಸ್ಸಿನಲ್ಲಿ ಲಕ್ಷ್ಮೀಯನ್ನು ಧರಿಸಿದ್ದರು. ಚಂದ್ರ, ಕಲ್ಪವೃಕ್ಷ, ಅಮೃತ, ಲಕ್ಷ್ಮೀ ಇವುಗಳೆಲ್ಲವೂ ಸಮುದ್ರದಲ್ಲಿ ಹುಟ್ಟಿದ್ದರಿಂದ ಸಮುದ್ರದ ಮಕ್ಕಳು. ಈ ತನ್ನ ಮಕ್ಕಳನ್ನೆಲ್ಲಾ ಶ್ರೀರಾಘವೇಂದ್ರತೀರ್ಥರು ತಮ್ಮ ದೇಹದಲ್ಲಿ ಧರಿಸಿ, ಆಟವಾಡಿಸುತ್ತಿರುವುದನ್ನು ಕಂಡು ಸಮುದ್ರರಾಜನು ಸಂತೋಷಪಡುತ್ತಿದ್ದನು. ಆದುದರಿಂದ ಸಮುದ್ರರಾಜನು ಶ್ರೀರಾಘವೇಂದ್ರಸ್ವಾಮಿಗಳನ್ನು ನೋಡಿ ಎಡವುತ್ತಾ, ಮುಗ್ಗರಿಸುತ್ತಾ, ಕುಪ್ಪಳಿಸುತ್ತಾ ಸಂತೋಷದಿಂದ ಮುಂದೆ ಬರುತ್ತಾ ಕುಣಿಯುತ್ತಿದ್ದಾನೋ ಎಂಬಂತೆ ಕಾಣಿಸುತ್ತಿತ್ತು. (ಸಮುದ್ರದ ಅಲೆಗಳ ಏರಿಳಿತವನ್ನು ನೋಡಿ ಸಮುದ್ರರಾಜನು ತನ್ನ ಮಕ್ಕಳನ್ನು ಶ್ರೀರಾಘವೇಂದ್ರರು ಆಟವಾಡಿಸುತ್ತಿರುವುದನ್ನು ನೋಡಿ ಸಂತೋಷದಿಂದ ಕುಣಿದನೋ ಎಂಬಂತೆ ಇತ್ತು ಎಂಬುದಾಗಿ ಕವಿಗಳು ಉತ್ಪ್ರೇಕ್ಷಿಸಿ ವರ್ಣಿಸುತ್ತಿದ್ದಾರೆ. ಶ್ರೀರಾಘವೇಂದ್ರರ ಮುಖವು ಚಂದ್ರನಂತೆ ಸುಂದರವಾಗಿತ್ತು. ಕೈಗಳು ಕಲ್ಪವೃಕ್ಷದಂತೆ ದಾನ ಮಾಡುವುದರಲ್ಲಿ ಮುಂದಾಗಿದ್ದವು. ಕಣ್ಣುಗಳು ಅಮೃತದಂತೆ ಭಕ್ತರನ್ನು ಸಂಜೀವನಗೊಳಿಸುವ ಶಕ್ತಿಯಿಂದ ಕೂಡಿತ್ತು. ಮನಸ್ಸಿನಲ್ಲಿ ವಾಕ್ ಮನಸ್ಸುಗಳಿಗೆ ದೇವತೆಯಾದ ಲಕ್ಷ್ಮೀಯ ಸನ್ನಿಧಾನವಿತ್ತು. ಆದುದರಿಂದ ಶಾಸ್ತ್ರಾರ್ಥ ವಿಚಾರ ಮತ್ತು ಪ್ರವಚನಗಳಲ್ಲಿ

ಅವರಿಗೆ ಅತಿಯಾದ ಪಾಟವವಿತ್ತು (ಸಾಮರ್ಥ್ಯವಿತ್ತು). ಮತ್ತು ಲಕ್ಷ್ಮಿಯ ಸನ್ನಿಧಾನವಿದ್ದುದರಿಂದ ಭಕ್ತರುಗಳಿಗೆ ಯಥೇಚ್ಛವಾದ ಸಂಪತ್ತನ್ನು ಕೊಡುವ ಸಾಮರ್ಥ್ಯವು ಅವರಲ್ಲಿತ್ತು ಎಂಬುದು ಗೂಢಾಭಿಪ್ರಾಯವು.)

**ಅವತಾರಿಕೆ** : ಈಗ ಕವಿಗಳು ಸಮುದ್ರದ ತರಂಗಗಳನ್ನೂ, ನೀಲವರ್ಣವನ್ನೂ ವರ್ಣಿಸುತ್ತಾರೆ.

**ಅಪಿ ಸೈಕತಂ ಬಹುತರಂಗಸಂಕುಲಂ ತಟಮಕ್ಷಮಸ್ಸ ತು ಕಿಲಾತಿಲಂಘಿತುಮ್ ।**
**ಅತ ಏವ ಭಂಗಮತಿನೈಲ್ಯಮಪ್ಯಗಾದಯಶೋಭರೇಣ ಸುಯಶೋಹರೇಣ ಯಃ ॥೨೪॥**

**ತಾತ್ಪರ್ಯ** : ಸಮುದ್ರದ ದಡವು ಮರಳುಮಯವಾದುದು. ಗಟ್ಟಿಯಾದ ಕಲ್ಲು ಬಂಡೆಗಳಿಂದ ಕೂಡಿದುದಲ್ಲ. ಬಹಳ ಅಲೆಗಳು ಬಂದು ದಡವನ್ನು ಕ್ಷೋಭೆಗೊಳಿಸಿ, ಸೀಳಿ, ಕೆದರಿ ಚದರಿಬಿಟ್ಟಿದೆ. ಹೀಗಿದ್ದರೂ ಸಮುದ್ರನು ಇಂತಹ ದಡವನ್ನು ದಾಟಿ ಮುಂದಕ್ಕೆ ಮುಂದಕ್ಕೆ ಹೋಗಲಾಗದವನಂತೆ ಇದ್ದಾನೆ. ಇದರಿಂದಾಗಿ ಸಮುದ್ರನಿಗೆ ಭಂಗವುಂಟಾಯಿತು. ಅದುವರೆಗೆ ಅವನಿಗೆ ಇದ್ದ ಒಳ್ಳೆಯ ಕೀರ್ತಿಯು ನಾಶವಾಯಿತು. ಸಮುದ್ರನು ಗಂಭೀರನು ಮಹಾಸಮರ್ಥಶಾಲಿಯು ಎಂಬ ಒಳ್ಳೆಯ ಕೀರ್ತಿಯು ಹೋಗಿ ಅಪಕೀರ್ತಿಯ ರಾಶಿಯೇ ಉಂಟಾಯಿತು. ಇದರಿಂದ ಸಮುದ್ರನು ಅತಿಯಾದ ನೀಲಿಬಣ್ಣವನ್ನು ಹೊಂದಿದನು. (ಬಹಳ ಶಿಥಿಲವಾದ ತರಂಗಗಳಿಂದ ಸಂಕುಲವಾದ ತನ್ನ ದಡವನ್ನು ದಾಟಲಾರದವನಂತೆ ಸಮುದ್ರನು ಪದೇ ಪದೇ ಹಿಂತಿರುಗಿ ಹೋಗುತ್ತಿದ್ದಾನೆ. ಇದರಿಂದ ಅವನಿಗೆ ಪರಾಜಯವೆಂಬ ಭಂಗವು ಉಂಟಾಯಿತು. (ಭಂಗವೆಂದರೆ ತರಂಗವೆಂಬ ಅರ್ಥವೂ ಉಂಟು.) ಆಗ ಅವನು ಸೋತವರು ಮುಖದಲ್ಲಿ ಕಪ್ಪು ಬಣ್ಣ ಹೊಂದುವಂತೆ ಕಪ್ಪು ಬಣ್ಣವನ್ನು ಹೊಂದಿದನು. "ತನ್ನ ಮನೆಯಲ್ಲಿಯೇ ಸಣ್ಣ ಕೆಲಸವನ್ನು ಮಾಡಲಾರದೆ ಸೋತು ಹೋದವನು ಮುಖ ಕಪ್ಪು ಮಾಡಿಕೊಂಡು ಅಪಮಾನಿತನಾಗಿ ಕುಳಿತಿರುತ್ತಾನೆ" ಎಂಬ ಧ್ವನಿತಾರ್ಥವೂ ಇಲ್ಲಿ ಕಂಡುಬರುತ್ತಿದೆ.)

"ನನ್ನ ದಡವು ಕಲ್ಲುಮಯವಲ್ಲ. ಗಟ್ಟಿಯಾಗಿಲ್ಲ. ಮರಳುಮಯವಾದುದು. ಅನೇಕ ತರಂಗಗಳಿಂದ ನಾಶವನ್ನು ಹೊಂದಿದೆ. ಅದನ್ನೂ ನಾನು ದಾಟಲಾರದೇ ಹೋದೆನು. ನನ್ನ ಪೌರುಷವು ವ್ಯರ್ಥ" ಎಂದು ತಿಳಿಯುತ್ತಿರುವ ಸಮುದ್ರನು ಅಪಕೀರ್ತಿಯಿಂದ ತರಂಗವೆಂಬ ಭಂಗವನ್ನೂ, ಅತಿನೈಲ್ಯವನ್ನೂ ಹೊಂದಿದನು ಎಂಬುದು ಪ್ರಕೃತದಲ್ಲಿ ತೋರುವ ಪರಮ ತಾತ್ಪರ್ಯ.

**ಅವತಾರಿಕೆ** : ಈಗ ಕವಿಗಳು ಸಮುದ್ರವು ಒಂದು ಕೃಷಿ ಕ್ಷೇತ್ರದಂತೆ ಇದೆಯೆಂದು ವರ್ಣಿಸುತ್ತಾರೆ.

**ಹೃತಕಲ್ಪಭೂರುಹತಯಾ ಪುನಶ್ಚ ಭಾಜಿತಕಲ್ಪಕಲ್ಪತರುರೋಹಣಾಯ ಯಃ ।**
**ಹಲಸಂಸ್ಕೃತೋ ಲಹರಿಭಿಃಸ್ಸಮಂತತಃ ಸಕರೀಷರಾಶಿರಪಿ ಸಾಂದ್ರಶೈವಲೈಃ ॥೨೫॥**

**ತಾತ್ಪರ್ಯ** : ರೈತರು ಒಂದು ಬಾರಿ ಬೆಳೆದ ಮರವು (ಬೆಳೆಯು) ಬಿದ್ದು ನಾಶವಾಗಿ ಹೋದರೆ ಪುನಃ ಗಿಡ ಮರ ಬೆಳೆಸುವುದಕ್ಕೋಸ್ಕರ ನೇಗಿಲುಗಳಿಂದ ಅನೇಕ ಬಾರಿ ನೆಲವನ್ನು ಚೆನ್ನಾಗಿ ಉತ್ತು ಒಣಸೆಗಣಿ ಮುಂತಾದ ಗೊಬ್ಬರಗಳಿಂದ ನೆಲಕ್ಕೆ ಸಾರವನ್ನುಂಟು ಮಾಡಿ ಬೀಜವನ್ನು ಬಿತ್ತುತ್ತಾರೆ ಅಥವಾ ಗಿಡವನ್ನು ನೆಡುತ್ತಾರೆ. ಹಾಗೆಯೇ ಸಮುದ್ರವೂ ಕೂಡ ತನ್ನಲ್ಲಿದ್ದ ಕಲ್ಪವೃಕ್ಷವನ್ನು ದೇವತೆಗಳು ಕಿತ್ತುಕೊಂಡು ಹೋದದ್ದರಿಂದ ತಿರುಗಿ (ಮತ್ತೆ) ಹಿಂದಿನ ಕಲ್ಪವೃಕ್ಷದಂತಹಾ ಕಲ್ಪವೃಕ್ಷದ ಬೆಳೆಯನ್ನು ಬೆಳೆಯಬೇಕೆಂದು ಸಂಕಲ್ಪಿಸಿ ಅಲೆಗಳೆಂಬ ನೇಗಿಲುಗಳಿಂದ ತನ್ನ ಒಡಲೆಂಬ ಕ್ಷೇತ್ರವನ್ನು ಚೆನ್ನಾಗಿ ಉತ್ತಿತು. ಬೆಳೆಗೆ ಗೊಬ್ಬರಕ್ಕೋಸ್ಕರವಾಗಿ ಪಾಚಿಗಳ ರಾಶಿಯೆಂಬ ಸಗಣಿ ರಾಶಿಯನ್ನು ಸಂಗ್ರಹಿಸಿದನು. ಹೀಗೆ ಪುನಃ ಕಲ್ಪವೃಕ್ಷದ ಕೃಷಿಯನ್ನು ಮಾಡಲು ತಯಾರಿಸಿದ ಹೊಲದಂತೆ ಸಮುದ್ರರಾಜನ ಜಲರಾಶಿಯ ವಿಸ್ತಾರವು ಕಾಣಿಸುತ್ತಿತ್ತು ಎಂಬುದಾಗಿ ಕವಿಗಳು ಉತ್ಪ್ರೇಕ್ಷಿಸುತ್ತಿದ್ದಾರೆ.

**ಅವತಾರಿಕೆ** : ಸಮುದ್ರದ ಸುಳಿಗಳಲ್ಲಿ ಅಸ್ಪಷ್ಟವಾಗಿ ಬೀಳುತ್ತಿರುವ ಹವಳಗಳ ಪ್ರಕಾಶವನ್ನು ವರುಣನ ಮನೆಯ ದೀಪಗಳ ಮಂದವಾದ ಬೆಳಕೆಂದು ಕವಿಗಳು ವರ್ಣಿಸುತ್ತಾರೆ.

**ಪರಿವೃತ್ತ್ಯಪೂರಿತಜಲಾಮಪಾಂ ಭ್ರಮಿಂ ಸ್ಫುರಿತಾಸ್ಫುರದ್ರುಚಿರವಿದ್ರುಮಾಂ ಪ್ರಗೇ ।**
**ಕವಯೋ ಹಿ ಯತ್ರ ವರುಣಾಲಯೇ ನಿಶಾಕೃತದೀಪಶಾಂತಿಮಭಿತಃ ಶಶಂಕಿರೇ ॥೨೬॥**

**ತಾತ್ಪರ್ಯ** : ಸಮುದ್ರದಲ್ಲಿ ಅಲ್ಲಲ್ಲಿ ಬಹಳ ಆಳವಾದ ಸುಳಿಗಳು ಸುತ್ತುತ್ತಿದ್ದವು. ಹಾಗೆ ಸುತ್ತುವುದರಿಂದ ಸುತ್ತಲಿನ ನೀರು ಎಷ್ಟು ತುಂಬಿದರೂ ಸುಳಿಗಳ ಆಳವು ತುಂಬುತ್ತಿರಲಿಲ್ಲ. ಆ ಸುಳಿಗಳ ಆಳದಲ್ಲಿದ್ದ ಹವಳಗಳ ಪ್ರಕಾಶವು ಅಂತಹಾ ಸಮಯದಲ್ಲಿ ಸ್ಪಷ್ಟವಾಗಿಯೂ ಅಸ್ಪಷ್ಟವಾಗಿಯೂ ಕಾಣಿಸುತ್ತಿದ್ದವು. ಈ ಕಾರ್ಯವೆಲ್ಲಾ ಪ್ರಾತಃಕಾಲದಲ್ಲಿ ನಡೆಯುತ್ತಿರುವುದರಿಂದ ಸಮುದ್ರದ ಕೆಳಗಿರುವ ವರುಣನ ಭವನದಲ್ಲಿರುವ ದೀಪಗಳಲ್ಲಿ ಬೆಳಿಗ್ಗೆ ಎಣ್ಣೆ ಕಡಿಮೆಯಾಗಿ ಬತ್ತಿಯು ಸಣ್ಣದಾಗಿರುವುದರಿಂದ ಮಿಣಮಿಣನೆ ಉರಿದು ಆರಿಹೋಗಲಿರುವ ದೀಪಗಳ ಪ್ರಕಾಶವಿದು ಮತ್ತು ದೀಪಗಳ ನಂದುವಿಕೆ ಇದು ಎಂದು ಕವಿಗಳು ಸಂದೇಹಿಸಿದರು ಎಂಬುದಾಗಿ ಸಮುದ್ರದ ಸುಳಿಗಳನ್ನೂ ಸಮುದ್ರವನ್ನೂ ಕವಿಗಳು ವರ್ಣಿಸಿದ್ದಾರೆ.

**ಅವತಾರಿಕೆ** : ಈಗ ಕವಿಗಳು ಸಮುದ್ರದ ಕಪ್ಪು ಬಣ್ಣವನ್ನು ವರ್ಣಿಸುತ್ತಾರೆ.

**ಯತಿನೇತೃವಾದರಣಧುರ್ಯಭಾಸ್ಕರೇ ಪ್ರಕಟೀಕೃತೇಽಹಿಪತಿನಾ ರಸಾತಲಾತ್ ।**
**ತಮಸಾಂ ತತಿರ್ಬಹಿರಯಾತ್ (ರ್ಯದಭಿಯಾ) ಭಿಯೋದ್ಗತಾ**
**ಬಹಿರಪ್ಯದೀಕ್ಷಿತುಮಭೂಜ್ಜಡೀಕೃತಾ ॥೨೭॥**

**ತಾತ್ಪರ್ಯ** : ಶ್ರೀರಾಘವೇಂದ್ರ ಗುರುಸಾರ್ವಭೌಮರ ವಾದಕಥಾ ಸೂರ್ಯನನ್ನು ಪಾತಾಳದಲ್ಲಿ ಶೇಷದೇವರು ಪ್ರಕಟಗೊಳಿಸಿದರು. ಆಗ ಪಾತಾಳದಲ್ಲಿರುವ ಅಂಧಕಾರ ರಾಶಿಯು

ಹೆದರಿ ಬೇರೆಲ್ಲಾದರೂ ಏಕಾಂತ ಪ್ರದೇಶದಲ್ಲಿ ವಾಸಮಾಡುವೆನೆಂದು ಹೊರಗೆ ಬಂದಾಗ ಹೊರಗಡೆಯೂ ಶ್ರೀರಾಘವೇಂದ್ರರ ವಾದಯುದ್ಧವೆಂಬ ಸೂರ್ಯನ ಪ್ರಖರವಾದ ತೇಜಸ್ಸನ್ನು ನೋಡಿ ಜಡವಾಗಿಹೋಯಿತು; ಸ್ತಂಭೀಭೂತವಾಯಿತು; ಹಾಗೂ ಜಲವಾಗಿಹೋಯಿತು. ಹೆದರಿಕೆಯಿಂದ ನೀರಾಗಿಹೋಯಿತು. (ಕತ್ತಲೆಯು ಸೂರ್ಯನಿಗೆ ಹೆದರುತ್ತದೆ. ಎಲ್ಲಾದರೂ ಹೋಗಿ ಏಕಾಂತ ಪ್ರದೇಶದಲ್ಲಿರಲು ಬಯಸುತ್ತದೆ. ಅಲ್ಲಿಯೂ ಸೂರ್ಯನ ತೇಜಸ್ಸು ಬಂದರೆ ಕರಗಿ ನೀರಾಗಿಹೋಗುತ್ತದೆ. ಶ್ರೀಗುರುರಾಜರ ವಾದಯುದ್ಧವೆಂಬ ಸೂರ್ಯನನ್ನು ಪಾತಾಳದಲ್ಲಿರುವ ಶೇಷದೇವರು ಪ್ರಕಟಗೊಳಿಸಿದರು. ಗುರುಗಳು ಈ ರೀತಿಯಾಗಿ ವಾದ ಮಾಡಿದರು; ಈ ರೀತಿಯಾಗಿ ವಾದಿಸಿದರು ಎಂದು ಅನುಮಾನ ಎಂಬ ಸೂರ್ಯನನ್ನು ಪ್ರಕಟಗೊಳಿಸಿದರು. ಕತ್ತಲೆಯು ಹೆದರಿ ಅಲ್ಲಿಂದ ಹೊರಟು ಹೊರಗೆ ಬಂದು ವಾಸ ಮಾಡುವೆನೆಂದು ತೀರ್ಮಾನಿಸಿ ಹೊರಗೆ ಬಂದಾಗ ಅಲ್ಲಿಯೂ ಶ್ರೀರಾಘವೇಂದ್ರರ ವಾದಯುದ್ಧ ಸೂರ್ಯನ ಪ್ರಖರವಾದ ತೇಜಸ್ಸು ವ್ಯಾಪಿಸಿರುವುದನ್ನು ಕಂಡು ಅದು (ಕತ್ತಲೆಯು) ಜಡೀಕೃತವಾಯಿತು. (ಲಡಯೋರಭೇದಃ = ಲ ಮತ್ತು ಡ ಗಳನ್ನು ಒಂದಾಗಿ ಪರಿಗಣಿಸಬಹುದು ಎಂಬ ನ್ಯಾಯದಿಂದ) ಜಲೀಕೃತವಾಯಿತು. ಅಂದರೆ ಕತ್ತಲೆಯು ಹೆದರಿ ಸಮುದ್ರದ ನೀರಾಗಿ ಮಾರ್ಪಟ್ಟಿತು. ಸಮುದ್ರದ ನೀರು ಶ್ರೀಗುರುಗಳ ವಾದಸೂರ್ಯನ ಹೆದರಿಕೆಯಿಂದ ಪಾತಾಳದಿಂದ ಹೊರಗೆ ಬಂದು ನೀರಿನ ರೂಪವನ್ನು ಹೊಂದಿದ ಕತ್ತಲೆಯೇ ಸರಿ; ಬೇರೇ ನೀರಲ್ಲ; ಎಂಬುದಾಗಿ ಅತಿಶಯೋಕ್ತಿಗರ್ಭಿತವಾದ ರೀತಿಯಿಂದ ಉತ್ಪ್ರೇಕ್ಷಿಸಿ ಕವಿಗಳು ವರ್ಣಿಸಿದ್ದಾರೆ.

**ಅವತಾರಿಕೆ** : ಈಗ ಕವಿಗಳು ಸಮುದ್ರದ ಅಲೆಗಳನ್ನು ಜಲಾಧಿಪತಿಯಾದ ವರುಣನ ಅರಮನೆಯ ಉದ್ಯಾನವನದ ಮರಗಳ ಕೊಂಬೆಗಳೆಂದು ವರ್ಣಿಸುತ್ತಾರೆ.

**ಮುಖರಾಂಡಜಾ ಮಣಿಮರೀಚಿಮೌಕ್ತಿಕೈಃ ಪ್ರಕಟಪ್ರವಾಲಮುಕುಲಾ ಯದೂರ್ಮಯಃ ।**
**ಮರುತಾ ನತೋನ್ನತಿಭೃತೋ ವಿರೇಜಿರೇ ವರುಣಾಲಯೋಪವನಶಾಖಿಕಾ ಇವ ॥೨೮॥**

**ತಾತ್ಪರ್ಯ** : ವರುಣಲೋಕದ ಮರದ ಕೊಂಬೆಗಳಲ್ಲಿ ಪಕ್ಷಿಗಳು (ಅಂಡಜಗಳು) ಸದ್ದು ಮಾಡುತ್ತಾ ಇರುತ್ತವೆ. ಆ ಮರದ ಕೊಂಬೆಗಳಲ್ಲಿ ರತ್ನಗಳೂ, ಮುತ್ತುಗಳೂ ಇರುವುದರಿಂದ ರತ್ನಗಳ ಕಾಂತಿಕಿರಣಗಳು ಮತ್ತು ಮುತ್ತುಗಳು, ಚಿಗುರೆಲೆ ಮತ್ತು ಮೊಗ್ಗುಗಳಂತೆ ಅಲ್ಲಿ ಶೋಭಿಸುತ್ತಿರುತ್ತವೆ. ಗಾಳಿಯಿಂದ ಆ ಕೊಂಬೆಗಳು ಮೇಲೆ ಕೆಳಗೆ ಓಲಾಡುತ್ತಾ ಇರುತ್ತವೆ. ಸಮುದ್ರದ ಅಲೆಗಳಲ್ಲಿಯೂ ಮೀನು ಮುಂತಾದ ಅಂಡಜ (ಮೊಟ್ಟೆಯಿಂದ ಹುಟ್ಟಿದಂತಹಾ) ಜಲಚರ ಪ್ರಾಣಿಗಳು ಸದ್ದು ಮಾಡುತ್ತಾ ಇರುತ್ತವೆ. ರತ್ನಕಿರಣಗಳು ಮತ್ತು ಮುತ್ತುಗಳಿಂದ ಅಲ್ಲಿರುವ ಹವಳಗಳ ಮೊಗ್ಗುಗಳು ಚೆನ್ನಾಗಿ ಕಾಣಿಸುತ್ತವೆ. ಗಾಳಿಯಿಂದ ಆ ಅಲೆಗಳು ಒಂದು ಬಾರಿ ಮೇಲಕ್ಕೆಗರಿ ಪುನಃ ಕೆಳಕ್ಕೆ ಬರುತ್ತವೆ. ಹೀಗೆ ಸಮುದ್ರದ ಆ ಅಲೆಗಳು ಸಮುದ್ರರಾಜನಾದ ವರುಣನ ಅರಮನೆಯ ತೋಟದ ವೃಕ್ಷಗಳ ಕೊಂಬೆಗಳಂತೆ ಶೋಭಿಸಿದವು. (ಸದ್ದು ಮಾಡುತ್ತಿರುವ ಅಂಡಜ = ಮೀನು ಮತ್ತು ಹಕ್ಕಿಗಳು) ಉಳ್ಳತನ ರತ್ನಕಿರಣಗಳು ಮತ್ತು ಮುತ್ತುಗಳಿಂದ

ಸ್ಪಷ್ಟವಾಗಿ ಕಾಣಿಸುತ್ತಿರುವ ಪ್ರವಾಲಮಕುಲ (ಹವಳಗಳ ಮೊಗ್ಗುಗಳು ಚಿಗುರೆಲೆ ಮತ್ತು ಮೊಗ್ಗುಗಳು) ಉಳ್ಳತನ, ಗಾಳಿಯಿಂದ ಮೇಲಕ್ಕೆಗರಿ ಕೆಳಕ್ಕೆ ಬೀಳುವುದು ಎಂಬ ಸಾಮ್ಯದಿಂದ ಸಮುದ್ರದ ಅಲೆಗಳು ವರುಣನ ಅರಮನೆಯ ಉಪವನದ ಮರಗಳ ಕೊಂಬೆಗಳಂತೆ ಕಂಗೊಳಿಸಿದವು ಎಂಬುದಾಗಿ ಶ್ಲೇಷೋಜ್ಜೀವಿತವಾದ ಉತ್ಪ್ರೇಕ್ಷಾ ಅಥವಾ ಉಪಮಾಲಂಕಾರದಿಂದ ಸಮುದ್ರದ ಅಲೆಗಳನ್ನು ವರ್ಣಿಸಿದ್ದಾರೆ.

**ಅವತಾರಿಕೆ :** ಸಮುದ್ರದ ಅಲೆಗಳು ದಡದಲ್ಲಿ ಬಂದು ಹೊರಳಾಡುವುದನ್ನು ಕವಿಗಳು ಉತ್ಪ್ರೇಕ್ಷಿಸಿ ವರ್ಣಿಸುತ್ತಾರೆ.

**ಅಮುಮೇತ್ಯ ಮುಖ್ಯತಮಮಾಶ್ರಯಂ ನಿಜಂ ಹರಿರೇಷ ಮಾಂ ಪ್ರತಿನಿಧಿಂ ತ್ಯಜೇದಿತಿ।**
**ಲುಠತಿ ಸ್ಮ ಯಃ ಸಭಯಮೂರ್ಮಿಭಿಶ್ಶ್ವಸನ್ ನಿಜರೋಧಸಿ ಕ್ಷಿತಿಗವೀವ ರೋಧಸಿ ॥೨೯॥**

**ತಾತ್ಪರ್ಯ :** ಸಮುದ್ರದ ಉದರದಲ್ಲಿ ಶ್ರೀಮನ್ನಾರಾಯಣನು ಮಲಗಿರುತ್ತಾನೆ. ಆದರೆ ಸಮುದ್ರಶಯನನಾದ ಹರಿಗೆ ಸಮುದ್ರನು ಮುಖ್ಯ ವಾಸಸ್ಥಾನನಲ್ಲ. ಶ್ರೀರಾಘವೇಂದ್ರ ಗುರುಸಾರ್ವಭೌಮರೇ ಶ್ರೀಮಹಾವಿಷ್ಣುವಿಗೆ ಮುಖ್ಯ ಆಶ್ರಯಸ್ಥಾನರು. ಅವರ ಹೃದಯದಲ್ಲಿ ಶ್ರೀಹರಿಯು ನಿರಂತರವಾಗಿ ನೆಲಸಿರುತ್ತಾನೆ. ಈಗ ಬಹಳ ಪ್ರಧಾನವಾದ ತನ್ನದೇ ಆದ ಶ್ರೀರಾಘವೇಂದ್ರ ಗುರುಗಳೆಂಬ ನಿವಾಸ ಸ್ಥಾನವನ್ನು ಪಡೆದ ಮೇಲೆ ಶ್ರೀಹರಿಯು ಅಮುಖ್ಯಾಶ್ರಯನಾದ ನನ್ನನ್ನು ಬಿಟ್ಟುಬಿಡುತ್ತಾನೆ ಎಂಬುದಾಗಿ ಹೆದರಿ ನಿಟ್ಟುಸಿರು ಬಿಡುತ್ತಾ ಅಲೆಗಳ ರೂಪದಲ್ಲಿ ತನ್ನ ದಡಕ್ಕೆ ಬಂದು ಕೊಟ್ಟಿಗೆಯಲ್ಲಿ ತಡೆಯಲ್ಪಟ್ಟ ಎತ್ತು ಅಲ್ಲಿಯೇ ಹೊರಳಾಡುವಂತೆ ಸಮುದ್ರರಾಜನು ಹೊರಳಾಡುತ್ತಿದ್ದಾನೆ. ಬಡಕಲಾದ ಹಸುವು ಬೇರೆ ಕಡೆ ಹೋಗಲಾರದೆ ತನ್ನ ಕೊಟ್ಟಿಗೆಯಲ್ಲಿಯೇ ಅತ್ತ ಇತ್ತ ಚಲಿಸುತ್ತಾ, ಹೊರಳಾಡುತ್ತಾ, ಬುಸುಗುಟ್ಟುತ್ತಾ ಇರುತ್ತದೆ. ಅದರಂತೆ ಸಮುದ್ರರಾಜನೂ ಅಲೆಗಳ ಘೋಷವೆಂಬ ನಿಟ್ಟುಸಿರನ್ನು ಬಿಡುತ್ತಾ ದಡದಲ್ಲಿ ಹೊರಳಾಡುತ್ತಾ ಇದ್ದನು ಎಂದು ಅಭಿಪ್ರಾಯ.

**ಅವತಾರಿಕೆ :** ಚಿಕ್ಕ ಶಿಂಶುಮಾರ ಎಂಬ ಮೀನುಗಳ ಓಡಾಟದಿಂದ ಉಂಟಾದ ಸುಳಿಗಳನ್ನು ಬಾಲಕರು ಸೊನ್ನೆ ಸುತ್ತುವುದೇ ಮೊದಲಾದ ಅಕ್ಷರಗಳನ್ನು ಬರೆಯುವ ಕಾರ್ಯವೆಂದು ಕವಿಗಳು ಈಗ ವರ್ಣಿಸುತ್ತಾರೆ.

**ಸರಿದೀಶಿತುಃ ಪ್ರತಿ ಸರಿತ್ಕೃತೋದಯಾಃ ಪುರತೋಽಸ್ಯ ಮಾರಪೃಥುಕಾ ವಿತನ್ವತೇ ।**
**ರಭಸೇನ ಯಸ್ಯ ಲಹರೀಕಶಾಹತಾ ಭ್ರಮಿಕೈತವೇನ ಲಿಪಿಲೇಖನಕ್ರಿಯಾಃ ॥೩೦॥**

**ತಾತ್ಪರ್ಯ :** ಸಮುದ್ರದಲ್ಲಿ ಶಿಂಶುಮಾರ ಎಂಬ ಒಂದು ಜಾತಿಯ ಮೀನುಗಳಿರುತ್ತವೆ. ಅವುಗಳು ನದಿಯಲ್ಲಿ ಹುಟ್ಟಿ ನಂತರ ಸಮುದ್ರವನ್ನು ಸೇರುತ್ತವೆ. ಈ ಶಿಂಶುಮಾರ ಜಾತಿಯ ಮೀನುಗಳು ಸುಳಿಯ ಸುತ್ತಲೂ ಓಡಾಡುತ್ತಿರುವಾಗ ಅವುಗಳು ಸಮುದ್ರರಾಜನ ಅಲೆಗಳೆಂಬ

ಚಾವಟಿಗಳಿಂದ ಹೊಡೆಯಲ್ಪಟ್ಟು ಸುಳಿಗಳ ರೂಪದಲ್ಲಿ ಸೊನ್ನೆ ಮುಂತಾದ ಅಕ್ಷರಗಳನ್ನು ಬರೆಯುತ್ತಿರುವಂತೆ ಕಾಣಿಸುತ್ತದೆ. ತಾಯಿ ತಂದೆಯರು ಮಕ್ಕಳನ್ನು ಹೆತ್ತು ಹೊತ್ತು ಸಾಕಿ ಸಲಹುತ್ತಾರೆ. ತಂದೆಯು ಮಕ್ಕಳಿಗೆ ವಿದ್ಯಾಭ್ಯಾಸ ಮಾಡಿಸುತ್ತಾನೆ. ಮಕ್ಕಳು ಸರಿಯಾಗಿ ಬರೆಯದಿದ್ದರೆ ಅವರನ್ನು ಚಾವಟಿ ಏಟಿನಿಂದ ಹೆದರಿಸುತ್ತಾನೆ. ಆಗ ಮಕ್ಕಳು ಬಹಳ ಬೇಗನೇ ಬರೆಯುತ್ತಾ ಇರುತ್ತಾರೆ. ಇಲ್ಲಿ ನದಿ ಮತ್ತು ಸಮುದ್ರರಾಜ ಎಂಬ ತಾಯಿ ತಂದೆಗಳು ಶಿಂಶುಮಾರ ಎಂಬ ಮೀನುಗಳನ್ನು ಹೆತ್ತು ಬೆಳಸಿದರು. ಆ ಮಕ್ಕಳಿಗೆ ಸಮುದ್ರರಾಜನು ಪಾಠ ಹೇಳಿಕೊಡಲು ಪ್ರಾರಂಭಿಸಿದನು. ಆ ಮಕ್ಕಳು ಸರಿಯಾಗಿ ಬರೆಯದಿದ್ದಾಗ ತನ್ನ ತರಂಗಗಳೆಂಬ ಚಾವಟಿಗಳಿಂದ ಏಟಿನ ರುಚಿಯನ್ನು ತೋರಿಸಿದಾಗ ಶಿಂಶುಮಾರ ಶಿಶುಗಳು ಸುಳಿಯ ನೆಪದಿಂದ ಬೇಗ ಬೇಗನೇ ಬರೆಯುತ್ತಿವೆಯೋ ಎಂಬಂತೆ ಕಾಣಿಸುತ್ತಿತ್ತು. ಸುಳಿಗಳು ಗುಂಡಗೆ ಸುತ್ತುವುದರಿಂದ ಸೊನ್ನೆ, ಆ ಮುಂತಾದ ಅಕ್ಷರಗಳಂತೆ ಕಾಣಿಸುತ್ತವೆ. ಅವುಗಳನ್ನು ನೋಡಿ ಇವು ಶಿಂಶುಮಾರ ಶಿಶುಗಳು ಬರೆಯುವ ಅಕ್ಷರಗಳು ಎಂಬುದಾಗಿ ಕವಿಗಳು ಉತ್ಪ್ರೇಕ್ಷಿಸಿದ್ದಾರೆ. ಭ್ರಮಿಕೈತವೇನ ಎಂಬ ಅಪಹ್ನವಾಲಂಕಾರದಿಂದ ಉಜ್ಜೀವಿತವಾದ ಲಿಪಿಲೇಖನಕ್ರಿಯಾ (ಅಕ್ಷರಗಳನ್ನು ಬರೆಯುವ ಕೆಲಸ) ಉತ್ಪ್ರೇಕ್ಷಾ (ಅದೂ ಗಮ್ಯವಾಗಿದೆ.)

**ಯಥಾ ಬಾಲಾಃ ಕಶಯಾ ತಾಡಿತಾಃ ಶೀಘ್ರಂ ಲಿಪಿಲೇಖನಂ**
**ಕುರ್ವಂತಿ ತಥಾ ಶಿಂಶುಮಾರನಾಮಕಜಲಜಂತುವಿಶೇಷಾಃ**
**ಬಾಲಾಃ ತರಂಗಾತ್ಮಕಕಶಯಾ ತಾಡಿತಾಃ**
**ಜಲಾವರ್ತರೂಪಲಿಪಿಂ ಕುರ್ವಂತಿ ಇತಿ ಉತ್ಪ್ರೇಕ್ಷಾ ॥**

ಹೇಗೆ ಮಕ್ಕಳು ಚಾವಟಿಯಿಂದ ಹೊಡೆದಾಗ ಬೇಗನೇ ಬರವಣಿಗೆಯನ್ನು ಮಾಡುತ್ತಾರೋ ಅದೇ ರೀತಿ ಶಿಂಶುಮಾರ ಎಂಬ ಜಲಪ್ರಾಣಿಗಳ ಮರಿಗಳು ಅಲೆಗಳೆಂಬ ಚಾಟಿಯ ಹೊಡೆತ ಬಿದ್ದಾಗ ನೀರಿನ ಸುಳಿಯೆಂಬ ಅಕ್ಷರವನ್ನು ಬರೆಯುತ್ತಿವೆಯೋ ಎಂಬಂತಿದೆ ಎಂದು ಉತ್ಪ್ರೇಕ್ಷ ಗಮ್ಯವಾಗಿದೆ.

**ಅವತಾರಿಕೆ :** ಈಗ ಕವಿಗಳು ದೇವದೇವನಾದ ಶ್ರೀ ರಾಮಚಂದ್ರ ಪ್ರಭುವಿನಿಂದ ನಿರ್ಮಿತವಾದ ರಾಮಸೇತುವನ್ನು ವರ್ಣಿಸುತ್ತಾರೆ.

**ಅಪಿ ಶೇಷಪೂರ್ವಕಪುನಸ್ಸ್ಮೃತಿಸ್ಥಿತಾವಪಿ ಪೂರ್ವಪಶ್ಚಿಮದಿಶೋರುದನ್ವತಿ ।**
**ನ ಕಥಂ ಭಿದೇತಿ ವಿಭುನಾ ಭಿದಾಕೃತೇ ಕೃತಸೇತುನಾ**
**ಲಸತಿ ಯಃ ಪಯೋಽಂತತಃ ॥೩೧॥**

**ತಾತ್ಪರ್ಯ :** ಭಾರತದೇಶದ ದಕ್ಷಿಣದ ಕೊನೆಯಲ್ಲಿರುವ ಮಹಾಸಾಗರದ ತಳದಿಂದ ಒಂದು ಜಲಪ್ರವಾಹವು ಮೇಲೆ ಬಂದು ಆರು ತಿಂಗಳು ಪೂರ್ವದಿಂದ ಪಶ್ಚಿಮ ಮುಖವಾಗಿಯೂ

ಇನ್ನಾರು ತಿಂಗಳು ಪಶ್ಚಿಮದಿಂದ ಪೂರ್ವ ಮುಖವಾಗಿಯೂ ಹರಿಯುತ್ತದೆ. (ಇದೇ ಶೇಷನದಿ) ಆದರೆ ಇದರಿಂದಾಗಿ ದಿಕ್ಕಿನ ಪರಿಜ್ಞಾನವು ಸರಿಯಾಗಿ ತಿಳಿಯುವುದಿಲ್ಲ. ಸಮರ್ಥನಾದ ಶ್ರೀರಾಮಚಂದ್ರನು ಪೂರ್ವ ಪಶ್ಚಿಮ ದಿಕ್ಕುಗಳ ಸರಿಯಾದ ಜ್ಞಾನಕ್ಕೋಸ್ಕರ ನೀರಿನ ಮಧ್ಯ ಪ್ರದೇಶದಲ್ಲಿ ಒಂದು ಸೇತುವನ್ನು ನಿರ್ಮಿಸಿದ್ದಾನೆ. ಆ ಸೇತುವಿನಿಂದ ಶೋಭಿತವಾದ ಸಮುದ್ರವನ್ನು ಶ್ರೀರಾಘವೇಂದ್ರತೀರ್ಥ ಗುರುಗಳು ನೋಡಿದರು ಎಂಬುದಾಗಿ ತಾತ್ಪರ್ಯ.

**ಅವತಾರಿಕೆ :** ರಾಮಸೇತುವು ಭೂಮಿಯೆಂಬ ಹರಿದುಹೋದ ಸೀರೆಯನ್ನು ಮಧ್ಯದಲ್ಲಿ ಹೊಲಿಯುವ ದಾರದ ಉದ್ದವಾದ ಗುರುತಿನಂತೆ ಕಾಣಿಸುತ್ತಿದೆ ಎಂಬುದಾಗಿ ಕವಿಗಳು ವರ್ಣಿಸುತ್ತಾರೆ.

**ಭಿದುರಸ್ಯ ಯಸ್ಯ ರಘುವೀರಸಾಯಕೈರ್ವಸುಧಾಪಟಸ್ಯ ವಿವರಂ ನಿಷೀವ್ಯತಾ ।**
**ವಿಧಿನಾ ಕೃತಾ ನು ನವತಂತುಸಂತತಿರ್ನಲಸೇತುನಾऽನವಮನನ್ಯದಿಚ್ಛತಾ ॥೩೨॥**

**ತಾತ್ಪರ್ಯ :** ಸಮುದ್ರದಲ್ಲಿ ಸೇತುವೆ ಕಟ್ಟಲು ಅನುಮತಿ ಕೇಳುತ್ತಾ ಮೂರು ದಿನ ಶ್ರೀರಾಮನು ದರ್ಭೆಯ ಮೇಲೆ ಮಲಗಿದ್ದನು. ಆಗಲೂ ಸಮುದ್ರರಾಜನು ಬಾರದಿರಲು, ಶ್ರೀರಾಮನು ಸಮುದ್ರದ ಮೇಲೆ ಬಾಣ ಪ್ರಯೋಗ ಮಾಡಿದನು. ಆಗ ಸಮುದ್ರರಾಜನು ಬಂದು ಸೇತುವನ್ನು ಕಟ್ಟುವಂತೆ ಪ್ರಾರ್ಥಿಸಿದ್ದನು. ಅಲ್ಲಿ ಕಟ್ಟಿದ ಸೇತುವು ಭೂಮಿಯೆಂಬ ಬಟ್ಟೆಯು ಶ್ರೀರಾಮನ ಬಾಣಪ್ರಯೋಗದಿಂದ ಸೀಳಿ ಹೋದಾಗ ಅದನ್ನು ಹೊಲಿದು ತೇಪೆ ಹಾಕಲು ಹಾಸು ಹೊಕ್ಕಾಗಿ ಜೋಡಿಸಿರುವ ದಾರದಿಂದ ಮಾಡಿದ ಬಟ್ಟೆಯ ಉದ್ದವಾದ ಚೂರಿನಂತೆ ಕಾಣಿಸುತ್ತದೆ. ಇಂತಹಾ ಸೇತುವಿನಿಂದ ಕೂಡಿದ ಸಮುದ್ರವನ್ನು ಶ್ರೀರಾಘವೇಂದ್ರ ಗುರುವರ್ಯರು ನೋಡಿದರು.

**ಅವತಾರಿಕೆ :** ಈಗ ಕವಿಗಳು ರಾಮಸೇತುವನ್ನು ಇನ್ನೊಂದು ರೀತಿಯಿಂದ ವರ್ಣಿಸುತ್ತಾರೆ.

**ಮರುದುಲ್ಲಸಲ್ಲಹರಿನೀವಿಸಂತತೇರ್ಗುರುಪೂರನಾಮವರುಣಾಲಯಚ್ಛದೇಃ ।**
**ಯದಿ ಯಾತಿ ಯತ್ರ ದೃಢಮಧ್ಯವಂಶತಾಂ ನಲಸೇತುರೇತು ಭವಘರ್ಮಭಂಜನಃ ॥೩೩॥**

**ತಾತ್ಪರ್ಯ :** ನಾಲ್ಕು ಸುತ್ತಲೂ ಗೋಡೆಗಳನ್ನು ಕಟ್ಟಿ ಅದರ ಮೇಲೆ ತೊಲೆಗಳ ಅಧಾರದ ಮೇಲೆ ಮೇಲ್ಛಾವಣಿಯ ಮಾಡನ್ನು ನಿಲ್ಲಿಸುತ್ತಾರೆ. ಈ ಮೇಲ್ಛಾವಣಿಯು ಎಡಬಲಗಳಲ್ಲಿ ಇಳಿಜಾರಾಗಿ ಹೋಗುತ್ತದೆ. ಮೇಲ್ಛಾವಣಿಯ ಮೇಲ್ಭಾಗದ ಎರಡೂ ಅಂಚುಗಳು ಕೂಡುವ ಸ್ಥಳಗಳಲ್ಲಿ ಮೇಲ್ಭಾಗದಲ್ಲಿ ದಪ್ಪವಾದ ಬಿದರಿನ ಗಳವನ್ನು ಕಟ್ಟಿರುತ್ತಾರೆ. ಅದರ ಆಧಾರದ ಮೇಲೆ ಎಡಬಲಗಳಲ್ಲಿ ಗಳಗಳನ್ನು ಬಲವಾದ ಹಗ್ಗಗಳಿಂದ ಕಟ್ಟಿರುತ್ತಾರೆ. ಅದರ ಮೇಲೆ ಹುಲ್ಲು ಇತ್ಯಾದಿಗಳನ್ನು ಹೊದಿಸುತ್ತಾರೆ. ಬೇಸಿಗೆಯಲ್ಲಿ ಸಂತಾಪವನ್ನು ಹೊಂದಿದ ಮನುಷ್ಯರು. ಇಂತಹಾ ಮನೆಯ ಮಧ್ಯದಲ್ಲಿ ಒಳಗಡೆ ಕುಳಿತು, ಸೆಖೆಯ ಆಯಾಸವನ್ನು ಪರಿಹರಿಸಿಕೊಳ್ಳುತ್ತಾರೆ.

ಸಮುದ್ರದಲ್ಲಿ ಉಕ್ಕಿ ಉಬ್ಬಿ ಬರುವ ಅಲೆಗಳು ಮಧ್ಯದ ಉದ್ದವಾದ ಬಿದಿರಿಗೆ (ಬೆನ್ನುದೂಲ) ಅಡ್ಡ ತೊಲೆಗಳನ್ನು ಬಿಗಿದಿರುವ ಹಗ್ಗದ ಗಂಟುಗಳಂತೆ ಕಾಣಿಸುತ್ತಿದೆ. ನೀರಿನ ಪ್ರವಾಹವು ಸಮುದ್ರದಲ್ಲಿರುವ ವರುಣನ ಮನೆಯ ಮೇಲ್ಛಾವಣಿಯಂತೆ ಕಾಣಿಸುತ್ತಿದೆ. ಆ ಎರಡು ಪಾರ್ಶ್ವದ ಮೇಲ್ಛಾವಣಿಗಳಿಗೆ ಆಧಾರವಾದ ಗಟ್ಟಿಯಾದ ಬಿದರಿನ ನೀಟಾವಾಗಿರುವ ಬೆನ್ನು ತೊಲೆಯಂತೆ ನಲನು ಮಾಡಿರುವ ಸೇತುವು ಶೋಭಿಸುತ್ತದೆ. ಹೀಗೆ ಸಮುದ್ರವು ವರುಣನ ಮನೆಯ ಸಾಮ್ಯವನ್ನು ಯಾವಾಗ ಹೊಂದುತ್ತದೆಯೋ ಅಲ್ಲಿಗೆ ಯಾತ್ರೆಗಾಗಿ ಬರುವ ಮಾನವನಿಗೆ ಸಮುದ್ರದ ಈ ಸನ್ನಿವೇಶವು ಯಾವಾಗ ವರುಣನ ಮನೆಯಂತೆ ಕಾಣಿಸುತ್ತದೆಯೋ, ಆಗಲೇ ಅಲ್ಲಿಗೆ ಬಂದು ಯಾತ್ರೆಯ ವಿಧಿಗಳನ್ನು ಪೂರೈಸಲಿ. ಸಂಸಾರವೆಂಬ ಬೇಸಿಗೆಯ ತಾಪವು ಇಂತಹವರಿಗೆ ಉಂಟಾಗುವುದಿಲ್ಲ. ಮನೆಯ ಮಧ್ಯದಲ್ಲಿ ಮೇಲಿನ ಆಧಾರವಾದ ಬಿದರಿನ ಕೆಳಗೆ ಕುಳಿತವನಿಗೆ ತಾಪವು ಹೇಗೆ ಶಾಂತ (ಕಡಿಮೆ) ವಾಗುತ್ತದೆಯೋ ಅದೇ ರೀತಿ ವರುಣನ ಮನೆಯ ಮೇಲ್ಛಾವಣಿಯ ಆಧಾರವಾದ ಬಿದರಿನ ಬಲವಾದ ನೀಟ ತೊಲೆಯಂತಿರುವ ನಲಸೇತುವಿನ ಆಶ್ರಯ ಪಡೆದವನಿಗೂ ಸಂಸಾರದ ತಾಪವು ಹಿಂಗುವುದು, ಭಂಗವಾಗುವುದು, ಎಂದು ತಾತ್ಪರ್ಯ.

**ಅವತಾರಿಕೆ :** ಸಮುದ್ರದ ದಡದವರೆಗೂ ಉದ್ದವಾಗಿರುವ ಸೇತುವನ್ನು ವಿಲಾಸೀಪುರುಷನು ತನ್ನ ಸುಂದರಿಯಾದ ಪತ್ನಿಯ ಮುಖದ ಸುವಾಸನೆಯನ್ನು ಆಘ್ರಾಣಿಸಲು ಚಾಚಿರುವ ಮೂಗು ಎಂದು ಕವಿಗಳು ವರ್ಣಿಸುತ್ತಾರೆ.

**ಸುಮಸೌರಭೇಣ ಜನರಂಜನೋನ್ಮುಖೇ ತಟನಾಮಕೇ ಧರಣಿಸುಂದರೀಮುಖೇ ।**
**ನಿದಧಾತ್ಯುದಗ್ರನಲಸೇತುನಾಸಿಕಂ ಮುಖಮಾತ್ಮನಶ್ಚಲಿತಸರ್ವತೋಮುಖಃ ॥೩೪॥**

**ತಾತ್ಪರ್ಯ :** ಸಮುದ್ರದ ದಡವು ಅರಳಿದ ಹೂವುಗಳಿಂದ ಘಮಘಮಿಸುತ್ತಿತ್ತು. ಜನರು ಸಮುದ್ರ ತೀರದ ಹೂವುಗಳ ಸುವಾಸನೆಯನ್ನು ಆಘ್ರಾಣಿಸಿ ಸಂತೋಷಪಡಲು ಹವಣಿಸುತ್ತಿದ್ದರು (ಯತ್ನಿಸುತ್ತಿದ್ದರು) ಭೂಮಿ ಸುಂದರಿಯ ಮುಖದಂತಿರುವ ಆ ದಡದ ಅಗ್ರಭಾಗದಲ್ಲಿ ಸರ್ವತೋಮುಖನಾದ ಸಮುದ್ರರಾಜನು ತನ್ನಲ್ಲಿರುವ ಸರ್ವತೋಮುಖವೆಂಬ ಜಲವನ್ನು ಚಲನೆಗೊಳಿಸುತ್ತಾ ಎತ್ತರವಾದ ನಲಸೇತುವೆಂಬ ಮೂಗಿನಿಂದ ಕೂಡಿದ ತನ್ನ ಮುಖವನ್ನು (ಅಗ್ರಭಾಗವನ್ನು) ಇಡುತ್ತಿದ್ದನು. ಒಬ್ಬ ನಾಯಕನು ಸುಂದರಿಯಾದ ನಾಯಿಕೆಯ ತಾಂಬೂಲ ಸುವಾಸಿತವಾದ ಮುಖದಲ್ಲಿ ತನ್ನ ಮುಖವನ್ನಿಟ್ಟು ಚುಂಬಿಸುವಂತೆ ಸಮುದ್ರನು ಭುವಿಸುಂದರಿಯ ದಡವೆಂಬ ಮುಖದಲ್ಲಿ ತನ್ನ ರಾಮಸೇತುವೆಂಬ ಉದ್ದ ಮೂಗಿನಿಂದ ಕೂಡಿದ ಅಲೆಗಳಿಂದ ತುಂಬಿದ ನೀರಿನ ಅಗ್ರಭಾಗವೆಂಬ ಮುಖವನ್ನು ಇಟ್ಟು ಚುಂಬಿಸುತ್ತಿದ್ದಾನೆ. ಭೂಮಿಯು ಸಮುದ್ರಪರ್ಯಂತ ಚಾಚಿದೆ. ಸಮುದ್ರವು ಭೂಮಿಯವರೆಗೆ ಚಾಚಿದೆ. ಎರಡರ ಸೇರುವಿಕೆಯು ಮುಖಕ್ಕೆ ಮುಖ ತಗುಲಿ ಚುಂಬಿಸುವಂತಿದೆ ಎಂದು ತಾತ್ಪರ್ಯ. ಇಲ್ಲಿ ಶೃಂಗಾರ ರಸವು ತೋರುತ್ತದೆ.

**ಅವತಾರಿಕೆ :** ಈಗ ಕವಿಗಳು ರಾಮಸೇತುವನ್ನು ಸಮುದ್ರರಾಜನ ಉದ್ದವಾದ ಬೆನ್ನೆಲುಬಿನ ಪೃಷ್ಠದಂಡ ಎಂದು ವರ್ಣಿಸುತ್ತಾರೆ.

**ರಘುವೀರದುಸ್ತರಶರಾಗ್ರಶೋಷಿತೇ ಯದಗಾಧತಾಪಲಲಸಂಚಯೇಽಖಿಲೇ ।**
**ಅತನಿಷ್ಠ ಸೇತುರದಸೀಯಪೃಷ್ಠತಃ ಸ್ಫುರದಸ್ಥಿವಂಶ ಇತಿ ಸಂಶಯಂ ಮುಹುಃ ॥೩೫॥**

**ತಾತ್ಪರ್ಯ :** ಮನುಷ್ಯನ ದೇಹದ ಮಾಂಸವೆಲ್ಲವೂ ಒಣಗಿ ಹೋದಾಗ, ಚರ್ಮವೂ ನಾಶವಾದಾಗ ಬೆನ್ನೆಲುಬು ಸ್ಪಷ್ಟವಾಗಿ ಕಾಣಿಸುತ್ತದೆ. ಈ ಸಮುದ್ರರಾಜನಲ್ಲಿ ಅಗಾಧವಾದ ಜಲರಾಶಿಯೆಂಬ ಮಾಂಸದ ರಾಶಿಯಿದ್ದಿತು. ಅದೆಲ್ಲವನ್ನೂ ಶ್ರೀರಾಮನು ಬಾಣಪ್ರಯೋಗ ಮಾಡಿ ಒಣಗಿಸಿ ನಾಶಮಾಡಿದನು. ಆಗ ಸಮುದ್ರದ ದೇಹದ ಬೆನ್ನಿನ ಭಾಗದಿಂದ ಮೇಲೆದ್ದು ಕಾಣಿಸುತ್ತಿರುವ ಕತ್ತಿನಿಂದ ಸೊಂಟದ ಹಿಂಭಾಗದವರೆಗೆ ಉದ್ದವಾಗಿರುವ ಎಲುಬಿನ ಕೋಲು ಎಂಬ ಸಂಶಯವನ್ನು ಶ್ರೀರಾಮನ ಸೇತುವು ನೋಡುವವರ ಮನಸ್ಸಿನಲ್ಲಿ ಮತ್ತೂ ಮತ್ತೂ ಉಂಟುಮಾಡುತ್ತಿತ್ತು. (ಸಂದೇಹಾಲಂಕಾರ).

**ಅವತಾರಿಕೆ :** ವೃಷಭರೂಪಿಯಾದ ಧರ್ಮದೇವತೆಗೆ ಕಲಿಯುಗದಲ್ಲಿ ಉಳಿದಿರುವ ಒಂದು ಧರ್ಮಪಾದದಂತೆ ಸೇತುವು ಶೋಭಿಸುತ್ತಿದೆ ಎಂದು ಕವಿಗಳು ಈಗ ವರ್ಣಿಸುತ್ತಾರೆ.

**ಪರಿಶೇಷಿತಂ ಕಲಿಬಲೇನ ಯತ್ಪದಂ ಸುಕೃತಸ್ಯ ಯತ್ಕೃತಭಯಂ ಯದಂತರೇ ।**
**ಜಲದುರ್ಗಮೇತ್ಯ ಕಲಿತಾಪದುರ್ಗಮಂ**
**ವಿಧುನೋತಿ ಸೇತುವಪುಷಾ ವಿರೋಧಿನಾಮ್ ॥೩೬॥**

**ತಾತ್ಪರ್ಯ :** ಧರ್ಮದೇವತೆಗೆ ನಾಲ್ಕು ಪಾದಗಳು. ಅವುಗಳಲ್ಲಿ ಮೂರುಪಾದಗಳು ಕಲಿಯಿಂದ ಕತ್ತರಿಸಲ್ಪಟ್ಟಿವೆ. ಒಂದೇ ಪಾದವು ಉಳಿದಿದೆ. ಧರ್ಮದೇವತೆಯು ಈ ರೀತಿಯಾಗಿ ಆಲೋಚಿಸಿತು. "ನಾನು ಭೂಮಿಯ ಮೇಲೆಯೇ ಓಡಾಡುತ್ತಿದ್ದರೆ ನನ್ನ ಉಳಿದಿರುವ ಒಂದು ಪಾದವೂ ಕಲಿಯಿಂದ ಭಿನ್ನವಾದೀತು? ಈ ರೀತಿಯಾಗಿ ಆಲೋಚಿಸಿ ಧರ್ಮದೇವತೆಯು ಭಯದಿಂದ ಸಮುದ್ರವನ್ನು ಪ್ರವೇಶಿಸಿ, ಸಮುದ್ರವೆಂಬ ಜಲದುರ್ಗದಲ್ಲಿ ಆಶ್ರಯವನ್ನು ಪಡೆಯಿತು. ಅಲ್ಲಿ ಸುಗ್ರೀವನ ಸೇವಕನಾದ ಶ್ರೀರಾಮನ ಭಕ್ತನಾದ ನಲನೆಂಬ ಕಪಿಶ್ರೇಷ್ಠನು ರಚಿಸಿರುವ ಸೇತುವಿನ ರೂಪವನ್ನು ಈ ಧರ್ಮದೇವತೆಯು ಧರಿಸಿ ಧೈರ್ಯದಿಂದ ಇದೆ. ಅಲ್ಲಿಗೆ ಹೋಗಿ ಯಾರೂ ಕಲಿಯುಗದಲ್ಲಿ ಅವಶಿಷ್ಟವಾದ ಧರ್ಮದೇವತೆಯ ಒಂದು ಪಾದದಂತಿರುವ ಸೇತುವನ್ನು ಸಂದರ್ಶಿಸುತ್ತಾರೋ ಅಂತಹವರ ಎಲ್ಲಾ ಪಾಪಗಳನ್ನು ನಡುಗಿಸಿ, ಅಲ್ಲಾಡಿಸಿ, ಉದುರಿಸಿ ನಾಶ ಮಾಡುವ ಉತ್ತಮವಾದ ಕಾರ್ಯಭಾರವನ್ನು ನಲಸೇತುವೆಂಬ ಧರ್ಮಪಾದವು ವಹಿಸಿಕೊಂಡಿದೆ ಎಂಬುದಾಗಿ ಅಭಿಪ್ರಾಯ.

ಸೇತುಂದೃಷ್ಟ್ವಾ ಸಮುದ್ರಸ್ಯ ಬ್ರಹ್ಮಹತ್ಯಾಂ ವ್ಯಪೋಹತಿ ಸಮುದ್ರದಲ್ಲಿರುವ ರಾಮಸೇತುವನ್ನು

ನೋಡಿ, ಹರಿಭಕ್ತನಾದ ಮಾನವನು ಬ್ರಹ್ಮಹತ್ಯೆಯನ್ನು ಕಳೆದುಕೊಳ್ಳುತ್ತಾನೆ ಎಂಬ ಪ್ರಮಾಣದಿಂದ ಸೇತುದರ್ಶನ ಸರ್ವಪಾಪ ಪರಿಹಾರಕವಾಗಿದೆ ಎಂದು ಅಭಿಪ್ರಾಯ.

ಇಲ್ಲಿ ರಾಘವೇಂದ್ರಾಚಾರ್ಯರು ಮಾಡಿರುವ ಶ್ರೀರಾಘವೇಂದ್ರವಿಜಯದ ವ್ಯಾಖ್ಯಾನದ ಕೆಳಗಿನ ವಾಕ್ಯಗಳು ಬಹಳ ಸುಲಭವಾಗಿದೆ. ಅವುಗಳ ತಾತ್ಪರ್ಯವನ್ನೇ ಮೇಲೆ ಕೊಟ್ಟಿದೆ. ಈಗ ಆ ವಾಕ್ಯಗಳನ್ನು ಓದುಗರಿಗಾಗಿ ಕೆಳಗೆ ನೀಡುತ್ತಿದ್ದೇವೆ.

**ಧರ್ಮದೇವತಾಯಾಃ ಚತ್ವಾರಃ ಪಾದಾಃ! ತೇಷು ತ್ರಯಃ**
**ಪಾದಾಃ ಕಲಿನಾ ಛಿನ್ನಾಃ! ಏಕಃ ಪಾದಃ ಉರ್ವರಿತಃ!**

**ಭೂಮ್ಯಾಂ ಅವಸ್ಥಾನೇ ಉರ್ವರಿತೈಕಪಾದಸ್ಯಾಪಿ ನಾಶಃ ಭವತೀತೀ ಭಿಯಾ**
**ಸಮುದ್ರಂ ಗತ್ವಾ ಜಲದುರ್ಗಂ ಪ್ರಾಪ್ಯ ಸ್ಥಿತಃ ಧರ್ಮಃ ನಲಸೇತುರೂಪೇಣ**
**ಸ್ವವಿರೋಧೀನಿ ಪಾಪಾನಿ ಪರಿಹರತೀತಿ ಭಾವಃ!**

**"ಸೇತುಂ ದೃಷ್ಟ್ವಾ ಸಮುದ್ರಸ್ಯ ಬ್ರಹ್ಮಹತ್ಯಾಂ ವ್ಯಪೋಹತಿ"**
**ಇತಿ ಪ್ರಮಾಣಾತ್ ಸರ್ವಪಾಪಪರಿಹಾರಕಂ ಸೇತುದರ್ಶನಮಿತಿ ಭಾವಃ.**

**ಅವತಾರಿಕೆ :** ಭೂದೇವಿಯು ಲಂಕೆಯಲ್ಲಿರುವ ತನ್ನ ಮಗಳಾದ ಸೀತೆಯ ಕಣ್ಣೀರನ್ನು ಒರೆಸಲು ಚಾಚಿದ ಭುಜವೇ ಸೇತುವು, ಅದು ನಲನಿಂದ ರಚಿತವಾದುದಲ್ಲ ಎಂದು ಈಗ ಕವಿಗಳು ವರ್ಣಿಸುತ್ತಾರೆ.

**ಪರಿಮಾರ್ಷ್ಟುಮಾತ್ಮತನಯಾಶ್ರು ಶೋಕಜಂ ಸಘೃಣಂ ಭುವಾ ಭುಜಲತಾ ಪ್ರಸಾರಿತಾ ।**
**ಕ್ಷಿತಿಸುಂದರೀ ನ ಕಿರತೀತಿ ಯಜ್ಜಲೇ ನಲಸೇತುರಸ್ತು ಕೃತಚೂರ್ಣಪದ್ಧತಿಃ ॥೩೭॥**

**ತಾತ್ಪರ್ಯ :** "ಲೋಕೇ ಮಾತಾ ಪುತ್ರ್ಯಾ ಅಶ್ರುಕರೇಣ ಮಾರ್ಷ್ಟಿ ತಥೈವ ಭೂಮಿಃ ಸ್ವಪುತ್ರ್ಯಾಃ ಲಂಕಸ್ಥಾಯಾಃ ಸೀತಾಯಾಃ ಪತಿವಿರಹಶೋಕಸಮುದ್ಭವಂ ಅಶ್ರುಮಾರ್ಷ್ಟುಂ ಸ್ವಭುಜಂ ಪ್ರಸಾರಿತವತೀ. ಏವಂ ತಯಾ ಪ್ರಸಾರಿತಃ ಭುಜ ಏವ ಸೇತುಃ, ನೈವ ನಲಕೃತಃ ಸೇತುಃ ಯದಿ ಸ್ಯಾತ್ ತರ್ಹಿ ಅಸಂಖ್ಯಾಕ ಸುಗ್ರಿವಸೈನ್ಯೈಃ ಚೂರ್ಣೀಕೃತಃ ಸ್ಯಾತ್"

ಲೋಕದಲ್ಲಿ ತಾಯಿಯು ಮಗಳ ಕಣ್ಣೀರನ್ನು ಕೈಯಿಂದ ಒರೆಸುತ್ತಾಳೆ. ಅದೇ ರೀತಿಯಾಗಿ ಭೂದೇವಿಯು ರಾವಣನಿಂದ ಅಪಹೃತಳಾಗಿ ಲಂಕೆಯಲ್ಲಿದ್ದುಕೊಂಡು, ಪತಿವಿರಹದಿಂದ ಕಣ್ಣೀರು ಸುರಿಸುತ್ತಿರುವ ಮಗಳಾದ ಸೀತೆಯ ಕಣ್ಣೀರನ್ನು ಒರೆಸಲು ತನ್ನ ಕೈಗಳನ್ನು ಲಂಕೆಯವರೆಗೆ ಉದ್ದವಾಗಿ ಚಾಚಿದಳು. ಹೀಗೆ ಭೂದೇವಿಯು ಚಾಚಿರುವ ಉದ್ದವಾದ ಅವಳ ಭುಜವೇ ಸೇತುವು. ಇದು ನಲನು ಮಾಡಿದ ಸೇತುವಲ್ಲ. ಇದು ನಲನೆಂಬ ವಿಶ್ವಕರ್ಮ ಪುತ್ರನು

ಮಾಡಿದ ಸೇತುವೇ ಆಗಿದ್ದರೆ ಸುಗ್ರೀವನ ಅಸಂಖ್ಯಾಕರಾದ ಕಪಿಗಳ ಪಾದಾಘಾತಗಳಿಂದ, ಒಡೆದು ಚೂರುಚೂರಾಗಿ ಪುಡಿಪುಡಿಯಾಗುತ್ತಿತ್ತು. ಹಾಗೆ ಆಗಿಲ್ಲವಾದುದರಿಂದ ಇದು ದೃಢವಾದ ವಿಶ್ವಂಭರೆಯಾದ ಭೂದೇವಿಯ ಭುಜವೇ ಸರಿ ಎಂಬುದಾಗಿ ಸೇತುವನ್ನು ವರ್ಣಿಸುತ್ತಾರೆ. ಇಲ್ಲಿ ಹೇತ್ವಪಹ್ನುತಿ ಅಲಂಕಾರವಿದೆ.

**ಸ ಏವ ಯುಕ್ತಿಪೂರ್ವಶ್ಚೇತ್ ಉಚ್ಯತೇ ಹೇತ್ವಪಹ್ನುತಿಃ । ನೇಂದುಸ್ತೀವ್ರೋ ನ ನಿಶ್ಯರ್ಕಃ ಸಿಂಧೂರೌರ್ವೋಽಯಮುತ್ಥಿತಃ ॥**
**ಎಂಬುದು ಆ ಅಲಂಕಾರದ ಲಕ್ಷಣ ಮತ್ತು ಉದಾಹರಣೆಗಳು.**

## ಸಮುದ್ರ ಸ್ನಾನ

**ಅವತಾರಿಕೆ :** ಶ್ರೀರಾಘವೇಂದ್ರ ಗುರುಸಾರ್ವಭೌಮರು ಸಮುದ್ರಸ್ನಾನ ಮಾಡಿದುದನ್ನು ಈಗ ಕವಿಗಳು ವರ್ಣಿಸುತ್ತಾರೆ.

**ಅವಲೋಕ್ಯ ಸೇತುಮವಲೋಕ್ಯವೈಭವಂ ಕಮಲೇಶಕಾಂತಿರಮಲಾಶಯಸ್ತತಃ ।**
**ಪರಪೂರ್ವಸಿಂಧುಪರಿಣೀಸಮಾಗಮೇ ಸ ಮಮಜ್ಜ ಪಾಥಸಿ ನಮಜ್ಜನಾವನಃ ॥೩೮॥**

**ತಾತ್ಪರ್ಯ :** ಶ್ರೀರಾಘವೇಂದ್ರ ಗುರುಸಾರ್ವಭೌಮರ ಕಾಂತಿಯು ಪದ್ಮೇಶನಾದ ಸೂರ್ಯನ ಕಾಂತಿಯಂತಿತ್ತು. ಅವರು ನಿರ್ಮಲಾಂತಃಕರಣರಾಗಿದ್ದು, ತಮ್ಮ ಪಾದಗಳಿಗೆ ಬಿದ್ದು ರಕ್ಷಣೆಯನ್ನು ಬೇಡುವವರನ್ನು ಚೆನ್ನಾಗಿ ಕಾಪಾಡುತ್ತಿದ್ದರು. ಅಂತಹಾ ಗುರುಸಾರ್ವಭೌಮರು ನೋಡಲು ಯೋಗ್ಯವಾದ ಮಹಿಮೆಯಿಂದ ತುಂಬಿದ ಶ್ರೀರಾಮಸೇತುವನ್ನು ನೋಡಿದರು. ಅನಂತರ ಪೂರ್ವ ಪಶ್ಚಿಮ ಸಮುದ್ರಗಳ ಸಂಗಮ ಸ್ಥಳದಲ್ಲಿ ನೀರಿನಲ್ಲಿ ಅವಗಾಹನ ಸ್ನಾನ ಮಾಡಿದರು.

**ವಿಶೇಷಾಂಶ :** ಇಲ್ಲಿ ವ್ಯಾಖ್ಯಾನದಲ್ಲಿ "ಪರಶ್ಚಾಸೌ ಪೂರ್ವಶ್ಚ ಪರಪೂರ್ವಃ, ಪರಪೂರ್ವಃ ಯಃ ಸಿಂಧು ಪರಿನೀಃ ತಸ್ಯ ಸಮಾಗಮೇ" ಎಂದು ಪರಪೂರ್ವ ಶಬ್ದಗಳಿಗೆ ಕರ್ಮಧಾರಯ ಸಮಾಸ ಮಾಡಿದೆ. ಆಗ ಪಶ್ಚಿಮ ಸಮುದ್ರವೂ ಪೂರ್ವ ಸಮುದ್ರವೂ ಒಂದೇ ಎಂದು ಹೇಳಿದಂತಾಗುತ್ತದೆ. ಎಲ್ಲಾ ಸಮುದ್ರಗಳಿಗೂ ವರುಣನೊಬ್ಬನೇ ಅಧಿಪತಿ ಆಗಿರುವುದರಿಂದ ಅಧಿಪತಿಯಾದ ದೇವತೆಯ ಐಕ್ಯವಿವಕ್ಷೆಯಿಂದ ಹೀಗೆ ಕರ್ಮಧಾರಯ ಸಮಾಸದ ವಿಗ್ರಹವನ್ನು ಇಟ್ಟುಕೊಂಡಿದ್ದಾರೆಂದು ತಿಳಿಯಬಹುದು. ಆದರೂ ಈ ಅರ್ಥದಲ್ಲಿ ಸಮಾಗಮಶಬ್ದಾರ್ಥಸ್ವಾರಸ್ಯವು ಬರುವುದಿಲ್ಲ ಎಂದು ತೋರುತ್ತದೆ.

**ಅವತಾರಿಕೆ :** ಶ್ರೀರಾಘವೇಂದ್ರ ಗುರುರಾಜರು ಸಮುದ್ರಸ್ನಾನ ಮಾಡಿ, ಅನಂತರ ಯಮಾದಿ

ಅಷ್ಟಾಂಗ ಯೋಗಾನುಷ್ಠಾನ ಮಾಡುತ್ತಾ ಸಮುದ್ರತೀರದಲ್ಲಿ ಶ್ರೀರಾಮಚಂದ್ರನನ್ನು ಹೃದಯದಲ್ಲಿ ಧ್ಯಾನಮಾಡುತ್ತಾ ವಾಸ ಮಾಡಿದರು ಎಂಬುದಾಗಿ ಈಗ ಕವಿಗಳು ವರ್ಣಿಸುತ್ತಾರೆ.

**ಉಪಸಾದ್ಯ ತೀರಮವಸದ್ಯಮಾದಿಮೈಸ್ಸ ನಿಯಮ್ಯ ಚಿತ್ತಮನಿಯಮ್ಯಸಂಪದಮ್ ।**
**ರಘುವಂಶದೀಪಮಘದಂಶಭಂಜನಂ ಸದಯಂ ವಿಧಾಯ ಹೃದಯಂ ಪ್ರವೇಶಿತಮ್ ॥೩೯॥**

**ತಾತ್ಪರ್ಯ :** ಶ್ರೀರಾಘವೇಂದ್ರ ಗುರುಸಾರ್ವಭೌಮರು ಸಮುದ್ರಸ್ನಾನ ಮಾಡಿ ದಡವನ್ನು ಸೇರಿದರು. ತದನಂತರ ಯಮ-ನಿಯಮಾದಿ ಅಷ್ಟಾಂಗ ಯೋಗಗಳಿಂದ ತಮ್ಮ ಚಿತ್ತವನ್ನು ನಿಗ್ರಹಿಸಿ ಶುದ್ಧವನ್ನಾಗಿ ಮಾಡಿಕೊಂಡರು. ನಂತರ ಪರಾಧೀನವಲ್ಲದ ತನ್ನ ಸ್ವರೂಪವೇ ಆಗಿರುವ ಸಮಸ್ತವಾದ ಐಶ್ವರ್ಯಗಳನ್ನುಳ್ಳವನೂ, ಭಕ್ತರ ಪಾಪಗಳೆಂಬ ಕವಚಗಳನ್ನು ಭೇದಿಸುವವನೂ, ದಯಾಲುವೂ, ರಘುವಂಶ ಶ್ರೇಷ್ಠನೂ ಆದ ಶ್ರೀರಾಮಚಂದ್ರನನ್ನು ತಮ್ಮ ಹೃತ್ಕಮಲದಲ್ಲಿ ಧ್ಯಾನ ಮಾಡಿದರು. ಈ ರೀತಿಯಾಗಿ ಧ್ಯಾನಾದಿಗಳನ್ನು ಮಾಡುತ್ತಾ ಸ್ವಲ್ಪ ಸಮಯದವರೆಗೆ ಅಲ್ಲಿಯೇ ವಾಸಮಾಡಿದರು.

## ವನಶೈಲಯಾತ್ರಾ (ತೋತಾದ್ರಿಯಾತ್ರಾ)

**ಅವತಾರಿಕೆ :** ಶ್ರೀರಾಘವೇಂದ್ರ ಗುರುಸಾರ್ವಭೌಮರು ಸಮುದ್ರ ದಡದಿಂದ ಸಂಚಾರತ್ವೇನ ತೋತಾದ್ರಿ (ವಾನಮಾಮಲೈ)ಗೆ ಬಂದುದನ್ನು ಕವಿಗಳು ಈಗ ವರ್ಣಿಸುತ್ತಾರೆ.

**ಅವನೀಸುಧಾಶಸವನಾಶಭೂರುಹೋ ವನಶೈಲಮಾಪ ವನರಾಶಿತಸ್ತತಃ ।**
**ಭವನಾಶನಂ ಸ ಪವನಾಶಶಾಯಿನಂ ನಮನೈರುಪೇತಮವನೇ ಕೃತಾದರಮ್ ॥೪೦॥**

**ತಾತ್ಪರ್ಯ :** ಶ್ರೀರಾಘವೇಂದ್ರ ಗುರುವರೇಣ್ಯರು ಭೂಸುರರುಗಳಾದ ಬ್ರಾಹ್ಮಣರಿಗೆ ದೇವಲೋಕದ ಕಲ್ಪವೃಕ್ಷದ ರೂಪವೇ ಆಗಿದ್ದರು. ಅವರು ಸಮುದ್ರ ತೀರದಿಂದ ಹೊರಟು ಸಂಚಾರತ್ವೇನ ವನಶೈಲಕ್ಷೇತ್ರವನ್ನು ಬಂದು ಸೇರಿದರು. ಅಲ್ಲಿ ಭಕ್ತರ ಭವವನ್ನು ನಾಶಗೊಳಿಸುವ, ಶೇಷಶಯನನಾಗಿದ್ದರೂ ಭಕ್ತರನ್ನು ಕಾಪಾಡುವ ವಿಷಯದಲ್ಲಿ ಎಚ್ಚರವಾಗಿದ್ದು, ಆದರದಿಂದ ಭಕ್ತರನ್ನು ಕಾಪಾಡುವ ಸುಂದರ ವರ ಎಂಬ ಹೆಸರಿನಿಂದ ಪರಮಾತ್ಮನು ಸನ್ನಿಹಿತನಾಗಿದ್ದಾನೆ. ಆ ಪರಮಾತ್ಮನನ್ನು ಸ್ತೋತ್ರ ನಮಸ್ಕಾರಗಳಿಂದ ಪ್ರಸನ್ನೀಕರಿಸಿಕೊಳ್ಳಲು ಶ್ರೀರಾಘವೇಂದ್ರ ಗುರುಸಾರ್ವಭೌಮರು ತೋತಾದ್ರಿ (ವಾನಮಾಮಲೈ) ಎಂಬ ಕ್ಷೇತ್ರವನ್ನು ಸಂಚಾರ ಮಾಡುತ್ತಾ ತಲುಪಿದರು. "ಸಮುದ್ರಾತ್ ನಿರ್ಗತ್ಯ ಪರಮಾತ್ಮನಂ ವಂದಿತುಂ ತೋಯಾದ್ರಿಂ ಪ್ರಾಪ್ತಃ ಇತಿ ಭಾವಃ = ಸಮುದ್ರ ತೀರದಿಂದ ಹೊರಟು ಪರಮಾತ್ಮನನ್ನು ನಮಸ್ಕರಿಸಲು ತೋತಾದ್ರಿಗೆ ಬಂದರು ಎಂಬುದಾಗಿ ಭಾವ. ತೋಯಾದ್ರಿ = ವನಶೈಲ ತೋಯ ಎಂಬ ಪದದಲ್ಲಿ ಯ ಎಂಬಲ್ಲಿ ತ ಸೇರಿಸಿ ಭಾಷೆಯಲ್ಲಿ ತೋತಾದ್ರಿ ಎಂದಾಗಿದೆ.

**ಅವತಾರಿಕೆ :** ಈಗ ಕವಿಗಳು ಈ ಪರ್ವತಕ್ಕೆ "ತೋಯಾದ್ರಿ" ಎಂಬ ಹೆಸರು ಸಾರ್ಥಕವಾಗಿದೆಯೆಂದು ವರ್ಣಿಸುತ್ತಾರೆ.

**ಪ್ರಥಿತೇ ಯದೀಯಶಿರಸಿ ಪ್ರಸೇದಿವಾನ್ ಸತತಂ ವಿಧುರ್ಯದಿ ಸಮಗ್ರತೇಜಸಾ ।**
**ಕಲಯೇತ ಕೋ ನು ಕಥಮಿತ್ಯಸನ್ಮತಿಂ ಸ ತು**
**ರಮ್ಯಪರ್ವತ ಇತಿ ಶ್ರುತೋ ಯತಃ ॥೪೧॥**

**ತಾತ್ಪರ್ಯ :** ಪರಮಾತ್ಮನ ಸನ್ನಿಧಾನ ಪಾತ್ರವಾದ ಈ ಪರ್ವತಕ್ಕೆ ತೋಯಾದ್ರಿಯೆಂಬ ಹೆಸರು ಹೇಗೆ ಅನ್ವರ್ಥಕವಾಗಬಹುದು? ಈ ಪರ್ವತವು ಜಲರೂಪವೂ ಅಲ್ಲ; ಜಲಮಧ್ಯದಲ್ಲಿಯೂ ಇಲ್ಲ; ಆದುದರಿಂದ ಈ ಪರ್ವತಕ್ಕೆ ತೋಯಾದ್ರಿ ಎಂಬ ಹೆಸರು ಸೂಕ್ತವಲ್ಲ ಎಂದು ತೋರುತ್ತದೆ. ಆದರೆ ಈ ಪರ್ವತ ಶಿಖರದಲ್ಲಿ ಯಾವಾಗಲೂ ಪೂರ್ಣ ಸಾಮರ್ಥ್ಯವಂತನಾದ ವಿಧು ಎಂಬ ಹೆಸರುಳ್ಳ ಶ್ರೀಮನ್ನಾರಾಯಣನೂ, ಹದಿನಾರು ಕಲೆಗಳಿಂದ ತುಂಬಿದ ವಿಧು ಎಂಬ ಹೆಸರುಳ್ಳ ಚಂದ್ರನು ಯಾವಾಗಲೂ ಪ್ರಸನ್ನರಾಗಿದ್ದಾರೆ. ಈ ಕಾರಣದಿಂದಲೇ ಈ ಪರ್ವತಕ್ಕೆ ರಮ್ಯ ಪರ್ವತವೆಂಬ ಹೆಸರು ಪ್ರಸಿದ್ಧವಾಗಿದೆ. ಆದುದರಿಂದ ಈ ಪರ್ವತಕ್ಕೆ ತೋಯಾದ್ರಿ ಎಂಬ ಹೆಸರು ಯುಕ್ತವೇ ಆಗಿದೆ. ಇದು 'ತೋಯ' ಅದ್ರಿ ಅಲ್ಲ ಎಂಬ ದುರ್ಬುದ್ಧಿಯನ್ನು ಯಾರೂ ಮಾಡಬಾರದು. 'ತೋಯ' ಎಂಬ ಎರಡಕ್ಷರಗಳನ್ನು ವಿಪರೀತವಾಗಿ ಮಾಡಿದರೆ 'ಯತೋ' ಎಂದಾಗುತ್ತದೆ. 'ಯತೋ' ಯಾವ ಕಾರಣದಿಂದ ಈ ಪರ್ವತಕ್ಕೆ ಈ ಹೆಸರು ಅಸನ್ಮತಿ ಎಂದರೆ ವಿಪರೀತ ಬುದ್ಧಿಯು ಯುಕ್ತವಲ್ಲ. 'ತೋಯ' ಎಂಬ ಎರಡಕ್ಷರಗಳನ್ನು ವಿಪರೀತವಾಗಿ 'ಯತೋ' ಎಂದು ಮಾಡಬಾರದು. ಹಿಂದೆ ಹೇಳಿದಂತೆ ಜಲಾಭಿಮಾನಿಯಾದ ಚಂದ್ರನೂ, ಜಲಶಯನನಾದ ನಾರಾಯಣನೂ ಇಲ್ಲಿ ಸೇರಿದ್ದು ಈ ಪರ್ವತಕ್ಕೆ 'ಸುಂದರ' ಪರ್ವತವೆಂಬ ಹೆಸರನ್ನುಂಟುಮಾಡಿ ಇದಕ್ಕೆ "ತೋಯ ಪರ್ವತ" ತೋಯಾದ್ರಿ (ತೋತಾದ್ರಿ) ಎಂಬ ಹೆಸರನ್ನು ಸಾರ್ಥಕವನ್ನಾಗಿ ಮಾಡಿದ್ದಾರೆ. ಈ ರೀತಿಯಾಗಿ ತೋತಾದ್ರಿಯ ಮಹಿಮೆಯನ್ನು ವರ್ಣಿಸಿದ್ದಾರೆ.

**ಅವತಾರಿಕೆ :** ಈಗ ಕವಿಗಳು ಈ ಪರ್ವತದ ಔನ್ನತ್ಯವನ್ನು ತಮ್ಮ ಕಾವ್ಯ ಶೈಲಿಯಲ್ಲಿ ವರ್ಣಿಸುತ್ತಾರೆ.

**ಯದುದಗ್ರಶೃಂಗತರುಸಂಘಸೇಚನೇ ನ ಘನಾಘನೋ ನ ಚ ವಿಯನ್ನದೀ ಪ್ರಭುಃ ।**
**ಶಬರಾಂಗನಾಚತುರಗೀತಿಕಾದ್ರವದ್ದೃಷದಾಂ ಶಿರಸ್ಸುನಿಪಪಾತ ತದ್ಘರಃ ॥೪೨॥**

**ತಾತ್ಪರ್ಯ :** ತೋತಾದ್ರಿಯು ಬಹಳ ಎತ್ತರವಾಗಿತ್ತು. ಅದರ ಶಿಖರಗಳಲ್ಲಿ ಅನೇಕ ಮರಗಳು ಬೆಳೆದಿದ್ದವು. ಅವುಗಳಿಗೆ ನೀರು ಚುಮುಕಿಸುವುದು ಅತ್ಯಂತ ಕಷ್ಟಕರವಾದ ಕೆಲಸವಾಗಿತ್ತು. ಈ ವೃಕ್ಷಗಳ ಗುಂಪು ಮೇಘಮಂಡಲಕ್ಕಿಂತಲೂ ಉನ್ನತವಾಗಿದ್ದರಿಂದ ಮಳೆ ಸುರಿಯುತ್ತಿರುವ

ಭಾರಿ ಮೋಡಗಳ ನೀರಿನ ಹನಿಗಳಿಂದಲೂ ಆ ಮರಗಳಿಗೆ ನೀರು ಚುಮುಕಿಸಲು ಸಾಧ್ಯವಾಗುತ್ತಿರಲಿಲ್ಲ. ಹಾಗೆಯೇ ಆ ಮರಗಳು ಆಕಾಶಗಂಗಾ ನದಿಗಿಂತಲೂ ಎತ್ತರವಾಗಿದ್ದುದರಿಂದ ಆಕಾಶಗಂಗಾ ನದಿಯ ತುಂತುರು. ತುಂತುರು ಹನಿಗಳಿಂದಲೂ ಆ ಮರಗಳಿಗೆ ನೀರು ಚುಮುಕಿಸಲು ಸಾಧ್ಯವಾಗುತ್ತಿರಲಿಲ್ಲ. ಆದರೆ ಮತ್ತೊಂದು ರೀತಿಯಿಂದ ಆ ಮರಗಳಿಗೆ ನೀರನ್ನು ಚುಮುಕಿಸಲು ಸಾಧ್ಯವಾಯಿತು. ಆ ಪರ್ವತದ ಶಿಖರಗಳಲ್ಲಿ ಬೇಡರ ಹೆಂಗಸರು ಸಂತೋಷದಿಂದ ಬಹಳ ಸೊಗಸಾಗಿ ಹಾಡುತ್ತಿದ್ದರು. ಆಗ ಆ ಸಂಗೀತ ಮಾಧುರ್ಯಕ್ಕೆ ಅಲ್ಲಿದ್ದ ಶಿಲೆಗಳು ಕೂಡಾ ಕರಗಿ ನೀರಾಗುತ್ತಿದ್ದವು. ಆ ನೀರಿನ ಪ್ರವಾಹವು ಶಿಖರಗಳ ಮೇಲೆ ಬಿದ್ದಾಗ ಅಲ್ಲಿ ಬೆಳದಿದ್ದ ಮರಗಳಿಗೆ ನೀರನ್ನು ಚುಮುಕಿಸಲು ಸಾಧ್ಯವಾಯಿತು. "ಮೇಘಮಂಡಲಾತ್, ವಿಯನ್ನದ್ಯಾಃ ಅಪಿ ಉನ್ನತತ್ವಾತ್ ತದ್ಗಿರಿಶಿಖರ ವೃಕ್ಷಾಣಾಂ ಸೇಚನಂ ದುಶ್ಶಕಮಾಸೀತ್. ಕಿಂತು ಶಬರಾಂಗನಾ ಗೀತಿಮಾಧುರ್ಯಾತ್ ಶಿಲಾ ಅಪಿ ದ್ರವಂತಿ, ಜಲರೂಪೇನ ಸ್ರವಣಾತ್ ಜಲಸಮೂಹಃ ಶಿಖರೇಷು ಪತತಿ, ತೇನ ವೃಕ್ಷಾಣಾಂ ಜಲಸೇಚನಂ ಭವತೀತಿ ಭಾವಃ" = ಮೇಘಮಂಡಲಕ್ಕಿಂತಲೂ, ಆಕಾಶಗಂಗಾ ನದಿಗಿಂತಲೂ, ಎತ್ತರವಾಗಿರುವುದರಿಂದ ಆ ಗಿರಿಶಿಖರದಲ್ಲಿರುವ ಮರಗಳ ಸೇಚನವು ಬಹಳ ಕಷ್ಟವಾಗಿತ್ತು. ಆದರೆ ಬೇಡರ ಹೆಂಗಸರ ಇಂಪಾದ ಹಾಡುಗಳ ಮಾಧುರ್ಯದಿಂದ ಕಲ್ಲುಗಳೂ ಕರಗುತ್ತಿದ್ದವು. ನೀರಾಗಿ ಹರಿದ ಆ ಜಲಸಮೂಹವು ಶಿಖರಗಳ ಮೇಲೆ ಬೀಳುತ್ತಿತ್ತು. ಅದರಿಂದ ಮರಗಳಿಗೆ ಜಲಸೇಚನವಾಗುತ್ತಿತ್ತು ಎಂಬುದಾಗಿ ಅಭಿಪ್ರಾಯ. "ಶಬರಾಂಗನಾನಾಂ ಚತುರಗೀತಿಕಾದ್ರವದ್ ದೃಷದಾಂ ಶಿರಸ್ಸು ನಿಪಪಾತಿ ತದ್ಭರಃ" ಎಂಬ ಉತ್ತರಾರ್ಧಕ್ಕೆ ಇನ್ನೊಂದು ರೀತಿಯಿಂದಲೂ ಅರ್ಥವನ್ನು ಹೇಳಬಹುದು. ಬೇಡರ ಹೆಂಗಸರ ಇಂಪಾದ ಹಾಡುಗಳಿಂದ ಕರಗಿದ ಶಿಲೆಗಳ ತಲೆಗಳಲ್ಲಿ (ಆ ಶಿಲೆಗಳ ಮೇಲೆ) (ತದ್ಭವಃ = ಎತ್ತರವಾದ ಶಿಖರದಲ್ಲಿ ಬೆಳದಿರುವ ಮರಗಳಿಗೆ ಚುಮುಕಿಸುವ ಭಾರವು) ನಿಪಪಾತ = ಬಿದ್ದಿತು. ಬೇಡರ ಹೆಂಗಸರ ಸಂಗೀತದ ಮಾಧುರ್ಯಕ್ಕೆ ಕರಗುವ ಶಿಲೆಗಳೇ ಆ ವೃಕ್ಷಗಳಿಗೆ ನೀರನ್ನು ಚುಮುಕಿಸಬೇಕಾಗಿತ್ತು. ಮೋಡಗಳಿಂದಲೂ, ಆಕಾಶಗಂಗಾ ನದಿಯಿಂದಲೂ ಆ ಮರಗಳಿಗೆ ಚುಮುಕಿಸಲು ಸಾಧ್ಯವಾಗುತ್ತಿರಲಿಲ್ಲ ಎಂದು ಅಭಿಪ್ರಾಯ. ತದ್ ಭವಃ ಎಂಬಲ್ಲಿರುವ ತದ್ ಶಬ್ದದಿಂದ ಹಿಂದೆ ಪ್ರಸಕ್ತವಾದ ಸೇಚನವನ್ನು ಇಟ್ಟುಕೊಳ್ಳುವುದು ಸುಲಭವಾಗುತ್ತದೆ. ತತ್ = ಜಲದ, ಭ್ರಃ = ಸಮೂಹವು ಎಂಬ ಅರ್ಥದಲ್ಲಿ ತದ್ ಶಬ್ದದಿಂದ ಜಲವನ್ನು ತೆಗೆದುಕೊಳ್ಳುವಾಗ ಜಲವು ಹಿಂದೆ ಶಬ್ದತಃ ಪ್ರಸಕ್ತವಾಗಿರುವುದರಿಂದ, ಸ್ವಲ್ಪ ಕ್ಲೇಶವುಂಟಾಗುತ್ತದೆ ಎಂಬುದಾಗಿ ತೋರುತ್ತದೆ. ಕೊನೆಯ ತಾತ್ಪರ್ಯವು ಎರಡರಲ್ಲಿಯೂ ಸಮಾನವು. (ಅತಿಶಯೋಕ್ತಿ ಅಲಂಕಾರ).

**ಅವತಾರಿಕೆ :** ಈಗ ಕವಿಗಳು ತೋಯಾದ್ರಿಯನ್ನು ಮುಕ್ತಿಕ್ಷೇತ್ರವೆಂದು ವರ್ಣಿಸುತ್ತಾರೆ.

**ಮಧುರೇ ಯದೀಯಶಿಖರೇಽತಿಭಾಸ್ವರೇ ಮುನಯೋ ವಿಮುಕ್ತಿಗತಯೇ ಸಮುದ್ಗತಾಃ।**
**ಅನವೇಕ್ಷ್ಯ ಹಂತ ಸೃತಿಮಚ್ಚರಾದಿಕಾನ್ ನ ಭವಂ ವ್ರಜಂತಿ ಹರಿಭಕ್ತಿಗೌರವಾತ್ ॥೪೩॥**

**ತಾತ್ಪರ್ಯ** : ರಮ್ಯಪರ್ವತವೆಂಬ ಹೆಸರುಳ್ಳ ಈ ತೋಯಾದ್ರಿಯ ಶಿಖರಗಳು ಮನೋಹರವಾಗಿವೆ. ಮತ್ತು ಬಹಳ ಪ್ರಕಾಶಮಾನವಾಗಿದೆ. ಈ ಶಿಖರಗಳಲ್ಲಿ ಅನೇಕ ಋಷಿಮುನಿಗಳು ಮೋಕ್ಷಪ್ರಾಪ್ತಿಗಾಗಿ ಪ್ರಯತ್ನಪಡುತ್ತಾ ವಾಸಮಾಡುತ್ತಾರೆ. ಅವರು ಸಂಸಾರಿಗಳಾದ ತಮ್ಮ ಹೆಂಡತಿ ಮಕ್ಕಳು ಮುಂತಾದ ಜಂಗಮ ವಸ್ತುಗಳಲ್ಲಿಯೂ, ಮನೆ ಹೊಲ ಮುಂತಾದ ಸ್ಥಾವರ ವಸ್ತುಗಳಲ್ಲಿಯೂ ಉಪೇಕ್ಷೆಯನ್ನು ಮಾಡಿರುತ್ತಾರೆ. ಉತ್ತಮವಾದ ವೈರಾಗ್ಯವನ್ನು ಹೊಂದಿರುತ್ತಾರೆ. ಹರಿಭಕ್ತಿಯ ಮಹಿಮೆಯಿಂದ ಅವರು ಪುನಃ ಎಂದೆಂದೂ ಸಂಸಾರವನ್ನು ಹೊಂದುವುದಿಲ್ಲ. ಆಹಾ! ಈ ಪರ್ವತವು ಎಂತಹಾ ಸಿದ್ಧಿಕ್ಷೇತ್ರವಾಗಿದೆ! ಮುಕ್ತಿಕ್ಷೇತ್ರವಾಗಿದೆ! ಈ ವಿಷಯವು ಬಹಳ ಸಂತೋಷಕರವಾಗಿದೆ. (ಇಲ್ಲಿ ಶಬ್ದಮಹಿಮೆಯಿಂದ ಇನ್ನೊಂದು ಅರ್ಥವೂ ಧ್ವನಿತವಾಗುತ್ತದೆ. ಭೂಮಿಯು ಈ ಸಂಸಾರದ ಗುರುತ್ವಾಕರ್ಷಣ ಶಕ್ತಿಯಿಂದ ಬಿಡುಗಡೆ ಹೊಂದಿ ಮೋಕ್ಷಸ್ಥಾನವನ್ನು ಪಡೆಯಬೇಕೆಂದು ಬಯಸುವ ಮುನಿಗಳು ಪರ್ವತ ಶಿಖರವನ್ನೇರಿ ಮೇಲಕ್ಕೆ ಹೋಗುತ್ತಾ, ಸಂಸಾರ, ಸ್ಥಾವರ ಜಂಗಮ ವಸ್ತುಗಳ ಆಕರ್ಷಣೆಗೆ ಒಳಗಾಗದೆ, ಇಲ್ಲಿಯ ಆಕರ್ಷಣೆಯನ್ನು ಕಳೆದುಕೊಂಡು, ವೈಕುಂಠದಲ್ಲಿ ನೆಲಸಿರುವ ಶ್ರೀಹರಿಯ ಭಕ್ತಿಯ ಗುರುತ್ವಾಕರ್ಷಣದಿಂದ ಮೇಲೇರಿ, ಹರಿಯನ್ನು ಸೇರಿ, ಮತ್ತೆಂದೂ ಸಂಸಾರದ ಆಕರ್ಷಣೆಗೆ ಒಳಗಾಗುವುದಿಲ್ಲ.)

**ಅವತಾರಿಕೆ** : ಈಗ ಕವಿಗಳು ರಮ್ಯಪರ್ವತದ ಎತ್ತರವನ್ನು ಚಮತ್ಕಾರವಾದ ರೀತಿಯಲ್ಲಿ ವರ್ಣಿಸುತ್ತಾರೆ.

**ವಿದಧಾತಿ ಸಿದ್ಧಮಹಿಲಾಜನೋ ವಿಧುಂ ರಜನೀಷು ಯಸ್ಯ ಶಿಖರೇ ತಿರೋಹಿತಮ್ ।**
**ಸ್ತನವಾಸಸೋಽಪರಿ ವಿಧೂಪಲಸ್ರವಜ್ಜಲವರ್ಷಶಾಂತಿಮಭಿಲಕ್ಷ್ಯ ಕುತ್ರಚಿತ್ ॥೪೪॥**

**ತಾತ್ಪರ್ಯ** : ವಿಧುಕಿರಣಸಂಬಂಧೇ ಸತಿ ಚಂದ್ರಕಾಂತಾ ಸ್ರವಂತಿ = ಚಂದ್ರನ ಕಿರಣಗಳ ಸಂಪರ್ಕವುಂಟಾದಾಗ, ಚಂದ್ರಕಾಂತ ಶಿಲೆಗಳು ನೀರು ಸುರಿಸುತ್ತವೆ. ತಜ್ಜಲ ಪ್ರವಾಹೇಣ ನ ಸ್ಥಾತುಂ ಶಕ್ಯತೇ = ಆ ಜಲಪ್ರವಾಹದಿಂದ ನಿಲ್ಲಲು ಆಗುವುದಿಲ್ಲ. ಅತೋಽಸ್ಮಾಕಂ ಸ್ಥಾತುಂ ಕಶ್ಚನಪ್ರದೇಶಃ ಜಲರಹಿತಂ ಅವಶ್ಯಕ! ಇತಿ ರಮ್ಯಪರ್ವತಶಿಖರೇ (ಸಿದ್ಧಾಂಗನಾಃ) ಚಂದ್ರಂ ಸ್ತನವಾಸಸಾ ಸ್ಥಗಯಂತಿ = ಆದುದರಿಂದ ನಮಗೆ ನಿಲ್ಲಲು ಜಲವಿಲ್ಲದಿರುವ ಯಾವುದಾದರೂ ಒಂದು ಪ್ರದೇಶವು ಅವಶ್ಯಕವೆಂದು ಸಿದ್ಧ ತರುಣಿಯರು ರಮ್ಯಪರ್ವತ ಶಿಖರದಲ್ಲಿರುವ ಚಂದ್ರನನ್ನು ತಮ್ಮ ಸ್ತನವಸ್ತ್ರಗಳಿಂದ ಮುಚ್ಚುತ್ತಾರೆ. ತಾವತ್ ಉನ್ನತಃ ಪರ್ವತಃ ಇತಿ ಭಾವಃ = ತೋಯಾದ್ರಿ ಪರ್ವತವು ಅಷ್ಟು ಎತ್ತರವಿದೆಯೆಂದು ಅಭಿಪ್ರಾಯವು. (ಇದು ಸಂಸ್ಕೃತ ವ್ಯಾಖ್ಯಾನದಲ್ಲಿ ತಿಳಿಸಿರುವ ಅಭಿಪ್ರಾಯವು) ಆ ರಮ್ಯಪರ್ವತದ ತುದಿಯ ಶಿಖರಗಳಲ್ಲಿರುವ ಚಂದ್ರಕಾಂತ ಶಿಲೆಗಳು ಚಂದ್ರಕಿರಣಗಳ ಸಂಪರ್ಕದಿಂದ ನೀರು ಸುರಿಸುತ್ತಾ ಇರುತ್ತವೆ. ಶಿಖರಗಳಲ್ಲಿ ಓಡಾಡುವ ಸಿದ್ಧಾಂಗನೆಯರಿಗೆ ನೀರಿನಿಂದ ತಮ್ಮ ದೇಹವು ಒದ್ದೆಯಾಗದಿರುವ ಸ್ಥಳಗಳೇ ಸಿಗದಿದ್ದಾಗ ಅವರುಗಳು ತಮ್ಮ ಸ್ಥನಗಳಿಗೆ ಆಚ್ಛಾದಕವಾಗಿ ಕಟ್ಟಿಕೊಂಡಿರುವ ಬಟ್ಟೆಗಳನ್ನು

ತೆಗೆದು ಚಂದ್ರನನ್ನು ಮುಚ್ಚಿಬಿಡುತ್ತಾರೆ. ಆಗ ಚಂದ್ರಕಿರಣಗಳು ಹೊರಗೆ ಹೊರಡದೇ ಇರುವುದರಿಂದ ಚಂದ್ರಕಾಂತ ಶಿಲೆಗಳು ನೀರನ್ನು ಸುರಿಸಲು ಸಾಧ್ಯವಾಗುವುದಿಲ್ಲ. ಸಿದ್ಧಾಂಗನೆಯರ ವಿಹಾರಕ್ಕೆ ತಕ್ಕ ಸ್ಥಳವೂ ಸಿಗುತ್ತದೆ, ಎಂಬುದಾಗಿ ಕವಿಗಳು ಅತಿಶಯೋಕ್ತಿಯಿಂದ ರಮ್ಯಪರ್ವತವನ್ನು ವರ್ಣಿಸಿರುತ್ತಾರೆ. ಇದರಿಂದ ರಮ್ಯಪರ್ವತವು (ತೋಯಾದ್ರಿ ಪರ್ವತವು) ಬಹಳ ಎತ್ತರವಾಗಿದೆ ಎಂಬುದು ಸೂಚಿತವಾಗುತ್ತದೆ. (ಇಲ್ಲಿ ಅಭಿಲಕ್ಷ್ಯ ಎಂಬಲ್ಲಿ ಅಭಿಲಷ್ಯ ಎಂಬ ಪಾಠ ಇರಬೇಕೆಂದು ತೋರುತ್ತದೆ).

**ಅವತಾರಿಕೆ :** ಈಗ ಕವಿಗಳು ಶ್ರೀರಾಘವೇಂದ್ರಸ್ವಾಮಿಗಳು ರಮ್ಯಪರ್ವತದಲ್ಲಿ (ತೋತಾದ್ರಿ ಪರ್ವತದಲ್ಲಿ) ಸುಂದರವರನೆಂಬ ಶ್ರೀಹರಿಯನ್ನು ನಮಿಸಿ, ಅಲ್ಲಿಂದ ಅನಂತಶಯನ ಮತ್ತು ಜನಾರ್ಧನ ಕ್ಷೇತ್ರಗಳಿಗೆ ಸಂಚಾರತ್ವೇನ ಹೊರಟಿದ್ದನ್ನು ವರ್ಣಿಸುತ್ತಾರೆ.

**ಪ್ರಣಿಪತ್ಯ ತತ್ರ ಪುರುಷಂ ಪುರಾತನಂ ಲಸಿತಂ ಸ ಸುಂದರವರಾಭಿಧಂ ಹರಿಮ್ ।**
**ನಿರಗಾದನಂತಶಯನಂ ತತೋ ಗುರುಃ ಪ್ರಣಿಪತ್ಯ ತಂ ಚ ಸಮಗಾಜ್ಜನಾರ್ದನಮ್ ॥೪೫॥**

**ತಾತ್ಪರ್ಯ :** ಶ್ರೀರಾಘವೇಂದ್ರ ಗುರುಸಾರ್ವಭೌಮರು ರಮ್ಯಪರ್ವತದಲ್ಲಿ ಶೋಭಿಸುತ್ತಿರುವ ಪುರಾಣ ಪುರುಷನಾದ ಸುಂದರ ವರನೆಂಬ ಹೆಸರಿನ (ಸುಂದರರಾಜನೆಂಬ) ಶ್ರೀಹರಿಯನ್ನು ನಮಸ್ಕರಿಸಿ, ಅಲ್ಲಿಂದ ಸಂಚಾರ ಕ್ರಮದಲ್ಲಿ ಅನಂತಶಯನಕ್ಕೆ ಬಂದು ಅಲ್ಲಿ ಶ್ರೀಮದನಂತಪದ್ಮನಾಭಸ್ವಾಮಿಯನ್ನು ಭಕ್ತಿಯಿಂದ ನಮಸ್ಕಾರಪೂರ್ವಕವಾಗಿ ವಂದಿಸಿ, ಅಲ್ಲಿಂದ ಮುಂದೆ ಹೊರಟು ವಲ್ಕಲ ಕ್ಷೇತ್ರಕ್ಕೆ ಬಂದು ಅಲ್ಲಿಯ ಕ್ಷೇತ್ರಸ್ವಾಮಿಯಾದ ಶ್ರೀಜನಾರ್ದನನನ್ನು ಭಕ್ತಿಪೂರ್ವಕವಾಗಿ ನಮಸ್ಕರಿಸಿದರು.

**ಅವತಾರಿಕೆ :** ಈಗ ಕವಿಗಳು ಶ್ರೀಗುರು ರಾಘವೇಂದ್ರರು ತಾಮ್ರಪರ್ಣೀ ಮತ್ತು ಮಧುರಾ ಯಾತ್ರೆ ಮಾಡಿದುದನ್ನು ವರ್ಣಿಸುತ್ತಾರೆ.

**ಅಧಿತಾಮ್ರಪರ್ಣಿ ಸ ನಿಮಜ್ಜ್ಯ ತತ್ತಟೇ ಲಸಿತಾಃ ಪ್ರಣಮ್ಯ ನವ ದೇವತಾಃ ಪರಾಃ ।**
**ಕೃತಮಾಲಿಕಸರಿದಲಂಕೃತಾಮಗಾತ್**
**ಮಧುರಾಭಿಧಾಂ ಮಧುರವಾಜ್ ಮಹಾಪುರೀಮ್ ॥೪೬॥**

**ತಾತ್ಪರ್ಯ :** ಇಂಪಾಗಿ ಮಾತನಾಡುವ ಸ್ವಭಾವವನ್ನುಳ್ಳ ಶ್ರೀಗುರುರಾಜರು ತಾಮ್ರಪರ್ಣೀ ನದಿಯಲ್ಲಿ ಸ್ನಾನ ಮಾಡಿದರು. ಈ ನದಿಯ ದಡದಲ್ಲಿ ಶೋಭಿಸುತ್ತಿರುವ ವಿಗ್ರಹದಲ್ಲಿ ಅಧಿಷ್ಠಿತರಾಗಿರುವ ಒಂಬತ್ತು ದೇವತೆಗಳನ್ನು ನಮಿಸಿದರು. ನಂತರ ಅಲ್ಲಿಂದ ಮುಂದಕ್ಕೆ ಹೋಗಿ ಕೃತಮಾಲಾ ನದಿಯಿಂದ ಅಲಂಕೃತವಾದ ಮಧುರಾ ಎಂಬ ಮಹಾಪುರಿಯನ್ನು ಪ್ರವೇಶಿಸಿದರು.

**ಅವತಾರಿಕೆ :** ಈಗ ಕವಿಗಳು ಮಧುರೆಯ ರಾಜನ ಆಸ್ಥಾನದಲ್ಲಿ ಪಂಡಿತರುಗಳನ್ನು ವಾದದಲ್ಲಿ ಜಯಿಸಿ ಸುಂದರ ವರನೆಂಬ ಹರನನ್ನು ವಂದಿಸಿ ಅಲ್ಲಿಂದ ಶ್ರೀರಂಗಕ್ಕೆ ಸಂಚಾರ ಮಾಡುತ್ತಾ ಬಂದುದನ್ನು ವರ್ಣಿಸುತ್ತಾರೆ.

**ತದಧೀಶಸಂಸದಿ ವಿಜಿತ್ಯ ಪಂಡಿತಾನ್**
**ಬಹುಮಾನಿತೋ ಯತಿವರೋ ಮಹೀಭೃತಾ ।**
**ಅಭಿವಂದ್ಯ ಸುಂದರವರಂ ಹರಂ ಶನೈರಥ**
**ರಂಗವಲ್ಲಭಮುಪೇಯಿವಾನಯಮ್ ॥೪೭॥**

**ತಾತ್ಪರ್ಯ :** ಮಧುರೆಯ ರಾಜನ ಆಸ್ಥಾನದಲ್ಲಿ ಶ್ರೀರಾಘವೇಂದ್ರತೀರ್ಥರು ಅನೇಕ ಪಂಡಿತರುಗಳನ್ನು ವಾದದಲ್ಲಿ ಜಯಿಸಿದರು. ಆ ರಾಜನಿಂದ ಮನ್ನಣೆಯನ್ನು ಪಡೆದರು. ಅನಂತರ ಅಲ್ಲಿಂದ ವೃಷಭಾಚಲಕ್ಕೆ ಬಂದು ಸುಂದರ ವರನೆಂಬ ಹೆಸರನ್ನುಳ್ಳ ಪರಮೇಶ್ವರನನ್ನು ವಂದಿಸಿ, ಅನಂತರ ಮೆಲ್ಲನೆ ಸಂಚಾರ ಮಾಡುತ್ತಾ ಶ್ರೀರಂಗ ಕ್ಷೇತ್ರಕ್ಕೆ ಬಂದು ಶ್ರೀರಂಗನಾಥನ ದರ್ಶನ ಮಾಡಿದರು.

**ಅವತಾರಿಕೆ :** ಈಗ ಕವಿಗಳು ಶ್ರೀರಾಘವೇಂದ್ರತೀರ್ಥರು ಶ್ರೀರಂಗ ಕ್ಷೇತ್ರದಲ್ಲಿ ಶ್ರೀರಂಗನಾಥನನ್ನು ಸಂದರ್ಶಿಸಿ, ನಮಸ್ಕರಿಸಿ, ಆ ರಾತ್ರಿಯನ್ನು ಅಲ್ಲಿಯೇ ಕಳೆದುದನ್ನು ವರ್ಣಿಸುತ್ತಾರೆ.

**ತತ್ರ ಶ್ರೀರಂಗನಾಥಂ ತರುಣತರುಣಿರುಗ್ವೇದರೂಪೇ ವಿಮಾನೇ**
**ಕಾವೇರೀವಾರಿಪೂರಪ್ರಸೃಮರಪವನಾನಂದಿತಾನಂತಭೋಗೇ ।**
**ವಂದ್ಯಂ ದೇವೈಶ್ಶಯಾನಂ ದ್ರುಹಿಣಭವಮುಖೈರಿಷ್ಟದಂ ರಾಘವೇಂದ್ರಃ**
**ಸಾನಂದಂ ತಂ ಪ್ರಣಮ್ಯ ಪ್ರಕಟಿತವಿಭವಂ ತಾಂ ನಿಶಾಮತ್ಯನೈಷೀತ್ ॥೪೮॥**

**ತಾತ್ಪರ್ಯ :** ಶ್ರೀರಂಗ ಕ್ಷೇತ್ರದಲ್ಲಿರುವ ದೇವಾಲಯದಲ್ಲಿ ಎಳೆಯ ಸೂರ್ಯನಂತೆ ಥಳಥಳಿಸುವ ಸುಂದರವಾದ ವೇದರೂಪವಾದ ಮಂಟಪವಿದೆ. ಅದರಲ್ಲಿ ಕಾವೇರಿಯ ತಂಪಾದ ಗಾಳಿಯಿಂದ ಆನಂದದಿಂದ ಶೇಷದೇವನು ಮಲಗಿದ್ದಾನೆ. ಅವನ ಶರೀರದ ಮೇಲೆ ಶ್ರೀರಂಗನಾಥಸ್ವಾಮಿಯು ಮಲಗಿದ್ದಾನೆ. ಬ್ರಹ್ಮ, ರುದ್ರ ಮೊದಲಾದ ದೇವತೆಗಳು ಶ್ರೀರಂಗನಾಥಸ್ವಾಮಿಯನ್ನು ಸ್ತುತಿಸುತ್ತಾ ನಮಸ್ಕರಿಸುತ್ತಿದ್ದಾರೆ. ಆ ಸ್ವಾಮಿಯು ತನ್ನ ಐಶ್ವರ್ಯವನ್ನು ಪ್ರಕಟಗೊಳಿಸಿ ಅಲ್ಲಿ ವಿರಾಜಮಾನನಾಗಿದ್ದು ತನ್ನನ್ನು ಭಕ್ತಿಯಿಂದ ಸೇವಿಸುವ ಭಕ್ತರುಗಳಿಗೆ ಅವರುಗಳ ಇಷ್ಟಾರ್ಥಗಳನ್ನು ನೆರವೇರಿಸಿ ಕಾಪಾಡುತ್ತಾನೆ. ಇಂತಹಾ ಶ್ರೀರಂಗದ ಕ್ಷೇತ್ರಾಧಿಪತಿಯಾದ ಪರಮಾತ್ಮನಾದ ಶ್ರೀರಂಗನಾಥ ಸ್ವಾಮಿಯನ್ನು ಶ್ರೀರಾಘವೇಂದ್ರ ಸ್ವಾಮಿಗಳು ಭಕ್ತಿಯಿಂದ ಸ್ತುತಿಸಿ ನಮಸ್ಕರಿಸಿದರು. ಸಂತೋಷದಿಂದ ಆ ರಾತ್ರಿಯನ್ನು ಅಲ್ಲಿಯೇ ಕಳೆದರು.

ಶ್ರೀಮತ್ಕಶ್ಯಪವಂಶವಾರ್ಧಿಶಶಿನಃ ಷಡ್ದರ್ಶನೀವಲ್ಲಭ-
ಶ್ರೀಲಕ್ಷ್ಮೀನರಸಿಂಹವಿತ್ತವಿದುಷಃ ಶ್ರೀವೇಂಕಟಾಂಬಾಮಣೌ ।
ಜಾತೇನಾರ್ಯದಯಾಸುಧಾಮಯಗಿರಾ ನಾರಾಯಣೇನೋದಿತೇ
ಕಾವ್ಯೇ ಚಾರುಣಿ ರಾಘವೇಂದ್ರವಿಜಯೇ ಸರ್ಗೋಽಭವತ್ ಸಪ್ತಮಃ ॥

ಈ ಶ್ಲೋಕದ ವ್ಯಾಖ್ಯಾನವನ್ನು ಹಿಂದೆಯೇ ನೀಡಲಾಗಿದೆ.

# ಏಳನೆಯ ಸರ್ಗದ ಕಥಾಸಾರ

**ಶ್ರೀರಾಘವೇಂದ್ರತೀರ್ಥರ ಪುಣ್ಯಕ್ಷೇತ್ರಯಾತ್ರಾ** — ಹೀಗೆ ಸಂನ್ಯಾಸಸ್ವೀಕಾರ ಮಾಡಿದ ಮೇಲೆ ಸಂನ್ಯಾಸಿಗಳು ಎಲ್ಲಾ ವಿಷ್ಣುಕ್ಷೇತ್ರತೀರ್ಥಗಳನ್ನೂ ಮತ್ತು ತೀರ್ಥಜಲಗಳನ್ನೂ ಸೇವಿಸಬೇಕು ಎಂಬ ಶಾಸ್ತ್ರಮರ್ಯಾದೆಯನ್ನು ಅನುಸರಿಸಿ ಶ್ರೀರಾಘವೇಂದ್ರಯತಿವರ್ಯರು ಅನೇಕ ವಿಧವಾದ ಯಾತ್ರಾನಿಯಮಗಳನ್ನು ಅನುಸರಿಸಿ ಮೊದಲು ಪೂರ್ವದಿಕ್ಕಿಗೆ ತೀರ್ಥಯಾತ್ರೆಗಾಗಿ ಹೊರಟರು. ಮೊದಲು, ನಮಿಸುವ ಭಕ್ತಜನರ ಮನಸ್ಸಿನ ಖೇದವನ್ನು ಕಳೆಯುವ ಪಾಪಗಳನ್ನೆಲ್ಲಾ ನಾಶಮಾಡುವ 'ದ್ಯುಪುರೀ' ಎಂಬ ನಗರಕ್ಕೆ ಸ್ವಾಮಿಯಾದ, ದ್ಯುಪುರೀಶನೆಂಬ ಹೆಸರುಳ್ಳ ವಿಷ್ಣುವನ್ನು ನಮಿಸಿದರು. ಅನಂತರ ಸಂಪತ್ಪರಿಪೂರ್ಣವಾದ ದೇವನಗರಕ್ಕೆ ಹೋದರು. ಅನಂತರ ಎಲ್ಲಾ ವಿಧವಾದ ಮಮಕಾರವನ್ನೂ ತ್ಯಜಿಸಿದ ಯತಿಶ್ರೇಷ್ಠರಾದ ಶ್ರೀರಾಘವೇಂದ್ರತೀರ್ಥರು ನಿರ್ದೋಷ ಮತ್ತು ಮನೋಹರವಾದ ರತ್ನಶಿಖರಗಳಿಂದ ಅಲಂಕೃತವಾದ ಮಣಿಶೃಂಗಪರ್ವತದಲ್ಲಿ ವಿರಾಜಿಸುತ್ತಿರುವ ಕಾಂತಿಪೂರ್ಣವಾದ ಮುಖದಿಂದ ನಮಿಸಿದ ಜನರಿಗೆ ಆನಂದಾಭಿವೃದ್ಧಿಯನ್ನುಂಟುಮಾಡುವ ಲೋಕಮಾತೆಯಾದ ಇಂದಿರೆಯನ್ನು ವಂದಿಸಿದರು. ಈ ಕ್ಷೇತ್ರದಲ್ಲಿಯೇ ಶ್ರೀಮದ್ವಮತಚಂದ್ರರಾದ ಯತಿಶ್ರೇಷ್ಠರಾದ ಈ ಶ್ರೀರಾಘವೇಂದ್ರತೀರ್ಥರು ಪ್ರಮಾಣಪದ್ಧತಿ ಮೊದಲಾದ ಎಲ್ಲಾ ಶ್ರೀಪೂರ್ಣಪ್ರಜ್ಞದರ್ಶನದ ಗ್ರಂಥಗಳನ್ನು ಶಿಷ್ಯರಿಗೆ ಉಪದೇಶಿಸಿದರು. ಅಲ್ಲಿಂದ ಹೊರಟು ಕಮಲಾಲಯಪುಷ್ಕರಿಣಿಯಲ್ಲಿ ಸನ್ನಿಹಿತಳಾದ ಶ್ರೀಲಕ್ಷ್ಮೀದೇವಿಯನ್ನು ಸೇವಿಸಿದರು. ಅನಂತರ ಯಮನಿಗೂ ಹೆದರಿಕೆಯನ್ನುಂಟುಮಾಡಿದವನಾದರೂ ಕೃಪಾಪೂರ್ಣನಾದ, ಕಂಠದಲ್ಲಿ ಗರಲವನ್ನು (ವಿಷವನ್ನು) ಹೊತ್ತ ಆಶ್ರಿತರಲ್ಲಿ ಸರಲನಾದ, ಅರ್ಧನಾರೀಶ್ವರನಾದ ಮಹೇಶ್ವರನನ್ನು ವಂದಿಸಬೇಕೆಂಬ ಇಚ್ಛೆಯಿಂದ ಮತ್ತೊಂದು ಕ್ಷೇತ್ರಕ್ಕೆ ಹೋದರು. ಬೃಹಸ್ಪತಿಯೂ ಅಭಿನಂದಿಸಬೇಕಾಗಿರುವ ಬುದ್ಧಿವೈಭವವುಳ್ಳ ಲೌಕಿಕವಾದ ಎಲ್ಲಾ ಆಸೆಗಳನ್ನೂ ತ್ಯಜಿಸಿದ ಈ ಶ್ರೀರಾಘವೇಂದ್ರತೀರ್ಥರು ವಾದ್ಯವೈಭವಸಹಿತರಾಗಿ ಅಲ್ಲಿ ಶಿವನನ್ನು ನೋಡಿ ಅಲ್ಲಿಂದ ಹೊರಟು ಕಾವೇರಿಯು ಸಮುದ್ರವನ್ನು ಸೇರುವಲ್ಲಿಗೆ ಬಂದರು. ಅಲ್ಲಿ ಸಮುದ್ರದಲ್ಲಿ ಸ್ನಾನಮಾಡಿ ಮುರಮಥನನಾದ ಶ್ರೀಹರಿಯನ್ನು ಹೃದಯದಲ್ಲಿ ಧರಿಸಿ ಧ್ಯಾನಿಸಿದರು. ಅನಂತರ ಉದಾರಬುದ್ಧಿಯುಳ್ಳ ಪಂಡಿತರೇ ಮೊದಲಾದ ಪರಿಜನರಿಂದ ಕೂಡಿಕೊಂಡು ಚಂಪಕಾರಣ್ಯ ಎಂಬ ಹೆಸರುಳ್ಳ ಮನ್ನಾರುಗುಡಿಕ್ಷೇತ್ರಕ್ಕೆ ಹೋದರು.

**ಶ್ರೀರಾಘವೇಂದ್ರತೀರ್ಥರು ಮಾಡಿದ ಶ್ರೀರಾಜಗೋಪಾಲಸ್ತುತಿ** — ಮನ್ನಾರುಗುಡಿಕ್ಷೇತ್ರದಲ್ಲಿ ಸನ್ನಿಹಿತನಾದ ಶ್ರೀರಾಜಗೋಪಾಲನ ದರ್ಶನ ಮಾಡಿದ ಕೂಡಲೇ ಶ್ರೀರಾಘವೇಂದ್ರತೀರ್ಥರು ಭಕ್ತಿಯಭಾರದಿಂದ ಪೂರ್ಣರಾಗಿ ಆ ದೇವರನ್ನು ಬಹುಕಾಲ ರೆಪ್ಪೆಮುಚ್ಚದೆ ನೋಡುತ್ತಾ ಸ್ತುತಿಸಿದರು.

''ರಾಜಗೋಪಾಲಸ್ವಾಮಿಯೇ ! ಹೃದಯವೆಂಬ ಬಂಗಾರದ ಕಟಾಹದಲ್ಲಿ ತುಂಬಿದ ಜ್ಞಾನವೆಂಬ ಜಲವನ್ನು ನಿನ್ನ ಚರಣಕಮಲಧ್ಯಾನವು ಮಾತ್ರವೇ ಪರಿಮಳಭರಿತವಾಗಿ ಮಾಡಬಲ್ಲದು. ಆದ್ದರಿಂದ ನಾನೂ ಕೂಡ ನಿನ್ನ ಚರಣಕಮಲಗಳನ್ನು ನಿರಂತರ ಧ್ಯಾನಿಸುತ್ತಾ ನನ್ನ ಜ್ಞಾನಜಲವನ್ನು ಪರಿಮಳಭರಿತವಾಗಿ ಮಾಡಿಕೊಳ್ಳುತ್ತೇನೆ. ದಾರಿಯೇ ಇಲ್ಲದ ಮಾರ್ಗದಲ್ಲಿ ಹೊಸದಾಗಿ ದಾರಿ ಮಾಡಿಕೊಂಡು ಹೋಗುವವರು ತಾವು ಹೋದ ದಾರಿಯ ಪರಿಚಯವಾಗಲೆಂದು ಅಲ್ಲಲ್ಲಿ ಮರಗಳ ಚಿಗುರೆಲೆಗಳನ್ನು ಗುರುತಿಗಾಗಿ ಇಡುತ್ತಾರೆ. ಅವರ ಹಿಂದೆ ಅನಂತರ ಆ ಕಾಡುದಾರಿಯಲ್ಲಿ ಹೋಗುವವರಿಗೆ ಆ ಎಲೆಗಳು ಮಾರ್ಗದರ್ಶಕವಾಗುತ್ತವೆ. ಅಂತೆಯೇ ನಮ್ಮ ಪೂರ್ವಾ-ಚಾರ್ಯರು ಮೋಕ್ಷಮಾರ್ಗದಲ್ಲಿ ಹೋಗುತ್ತಾ, ನಮ್ಮ ನಂತರ ಮೋಕ್ಷಮಾರ್ಗವನ್ನು ಕ್ರಮಿಸುವ ನಮ್ಮ ವಂಶ-

ದವರಿಗೂ ದಾರಿ ಗೊತ್ತಾಗಲೆಂದು ಇಟ್ಟಿರುವ ಕೆಂಪಾದ ಚಿಗುರೆಲೆಗಳಂತಿರುವ ನಿನ್ನ ಪಾದಗಳನ್ನು ನಾನು ಭಕ್ತಿಯಿಂದ ಸೇವಿಸುತ್ತೇನೆ. ಬ್ರಹ್ಮಸೂತ್ರಗಳ ಆದ್ಯಂತಗಳಲ್ಲಿರುವ ಎರಡು ಓಂಕಾರಗಳಂತಿರುವ ರತ್ನಖಚಿತವಾದ ಎರಡು ಕಾಲ್ಕಡಗಗಳಿಂದ ಅಲಂಕೃತವಾದ ನಿನ್ನ ಪಾದದ್ವಂದ್ವವು ನನಗೆ ನಿರಂತರವೂ ಸಂತೋಷವನ್ನುಂಟುಮಾಡಲಿ. ಬಿಸಿಲಿನಲ್ಲಿ ಬಳಲಿ ಬಾಯಾರಿದ ಎಳೆಯ ಹಸುವು ತಂಪಾದ ನೀರಿನಿಂದ ತುಂಬಿದ ಕೆರೆಯ ಬಳಿಗೆ ಬಂದು ತನ್ನ ಆಯಾಸವನ್ನೂ ತಾಪವನ್ನೂ ಪರಿಹರಿಸಿಕೊಂಡು ಸಂತೋಷಪಡುತ್ತದೆ. ಅದರಂತೆ ಕಾಂತಿಯೆಂಬ ದಳದಿಂದ ತುಂಬಿದ ನಿನ್ನ ವಕ್ಷಃಸ್ಥಳವೆಂಬ ತಟಾಕವು ನಿರಂತರ ದರ್ಶನವೆಂಬ ಸ್ನಾನದಿಂದ ನನ್ನೆರಡು ಕಣ್ಣುಗಳ ಬಳಲಿಕೆಯನ್ನು ಕಳೆಯುತ್ತದೆ. ಸಂತೋಷವನ್ನುಂಟುಮಾಡುತ್ತದೆ, ನನ್ನ ಸಂಸಾರದ ಬೇಗೆಯ ಬೇನೆಯನ್ನು ಕಡಿಮೆ ಮಾಡುತ್ತದೆ. ಸ್ವಾಮಿಯೇ ! ಚಂದ್ರನು ಬೆಳದಿಂಗಳ ರಾಶಿಗಳಿಂದ ಕತ್ತಲೆಯನ್ನು ಕತ್ತರಿಸುವಂತೆ, ನಿನ್ನ ಕೆಂಪಡರಿದ ತುಟಿಯಿಂದ ಕೂಡಿದ ಎಳೆಯಚಂದ್ರನಂತೆ ಲಲಿತವಾದ, ಕರುಣೆಯ ಆಗರವಾದ ಮುಖವು ಮಂದಹಾಸದಕಾಂತಿಯ ಪ್ರವಾಹದ ರಾಶಿಗಳಿಂದ, ಮಂಗಳಸ್ವರೂಪರೇ ಆದ ಚೇತನರ ಸಂಸಾರವನ್ನು ದೂರಕ್ಕೆ ಎಸೆಯುತ್ತದೆಯಷ್ಟೆ ! ಗುಂಗುರು ಕೂದಲುಗಳೆಂಬ ಅಂಧಕಾರದಿಂದ ಆವರಿಸಲ್ಪಟ್ಟಿದ್ದರೂ ನಿನ್ನ ಮುಖವು ಹಣೆಯ ತಿಲಕದಿಂದ ಸ್ವಲ್ಪ ಪ್ರಕಾಶ-ಮಾನವಾಗಿದೆ. ಮುಖವನ್ನು ಕಂಡರೆ ಕತ್ತಲೆಯಲ್ಲಿಯೂ ವ್ಯಕ್ತಿಪರಿಚಯವಾಗುತ್ತದೆ. ಆದರೂ ವೇದಗಳು ನಿನ್ನನ್ನು ತಿಳಿಯಲಾರವಂತೆ, ವೇದಗಳಿಂದಲೂ ತಿಳಿಯಲಾಗದವನನ್ನು ನನ್ನಂತಹವರು ಹೇಗೆ ತಿಳಿದಾರು? ಎಲೈ ದೇವನೇ ! ಗುಂಗುರು ಕೂದಲುಗಳಿಂದ ಆವರಿಸಲ್ಪಟ್ಟ ಹಣೆಯುಳ್ಳ, ಮಂದಹಾಸದಿಂದ ಉಬ್ಬಿದ ಗಂಡಸ್ಥಳವುಳ್ಳ ಉತ್ತಮ-ವಾದ ಎತ್ತರವಾದ ಮೂಗುಳ್ಳ ಎಡಭಾಗಕ್ಕೆ ಸ್ವಲ್ಪ ವಾಲಿದ ನಿನ್ನ ಮುಖವು ನನ್ನ ಹೃದಯವನ್ನು ಬಿಟ್ಟು ಎಂದೂ ಅಗಲದಿರಲಿ.

**ಸಮುದ್ರವರ್ಣನೆ** — ಸಮುದ್ರವು ಅಸಂಖ್ಯವಾದ ಮೊಸಳೆ ಮುಂತಾದ ಜಲಜಂತುಗಳಿಂದ ಭಯಂಕರ-ವಾದುದು, ಆಯಾಸವನ್ನು ದೂರಮಾಡುವ ತುಂತುರು ಹನಿಗಳಿಂದ ಕೂಡಿದುದು. ಪರಮಮಂಗಳಕರ-ವಾದುದು. ಅಲ್ಲಿ ಶ್ರೀ ರಾಘವೇಂದ್ರತೀರ್ಥಗುರುವರ್ಯರನ್ನು ನೋಡುವ ಕುತೂಹಲದಿಂದ ನಾನು ಮುಂದೆ ನಾನು ಮುಂದೆ ಎಂದು ದಡದೆಡೆಗೆ ಓಡಿ ಬರುತ್ತಿರುವ ಅಲೆಗಳು ಸಮುದ್ರರಾಜನ ಸೇವಕರೋ ಎಂಬಂತೆ ಶೋಭಿಸುತ್ತಿದ್ದವು. ಅಲೆಗಳ ಮೇಲೆ ಬಿದ್ದಿರುವ ಹಾವುಗಳ ತಲೆಯ ಮೇಲಿನ ರತ್ನಗಳೆಂಬ ದೀಪಮಾಲೆಯನ್ನು ಅಲೆಗಳೆಂಬ ಕೈಗಳಿಂದ ಹಿಡಿದಿರುವ ವೇಲಾ (ದಡವೆಂಬ) ನಾರಿಯು ಗುರುಗಳಿಗೆ ಆರತಿಯನ್ನು ಮಾಡುತ್ತಾಳೋ ಎಂಬಂತೆ ತೋರುತ್ತಿತ್ತು. ಗುರುಗಳ ಮುಖದಲ್ಲಿ ಚಂದ್ರನನ್ನೂ ಕೈಯಲ್ಲಿ ಕಲ್ಪವೃಕ್ಷವನ್ನೂ , ಕಣ್ಣಿನಲ್ಲಿ ಅಮೃತವನ್ನೂ , ಮನಸ್ಸಿನಲ್ಲಿ ಲಕ್ಷ್ಮಿಯನ್ನೂ ನೋಡಿದ ಸಮುದ್ರನು ನನ್ನ ಸಂತತಿಯೆಲ್ಲವೂ ಈ ಗುರುರಾಜರಲ್ಲಿ ಒಟ್ಟಿಗೇ ಸೇರಿದೆ-ಯೆಂದು ಸಂತೋಷಾತಿಶಯದಿಂದ ಅಲೆಗಳ ಉರುಳಾಟದಿಂದ ಕುಣಿಯುವಂತೆ ಕಾಣಿಸುತ್ತಿದ್ದನು. ಬೆಳ್ಳಗಿರುವ ಮರಳುರಾಶಿಯಿಂದ ಪೂರ್ಣವಾದ, ತನ್ನ ಅನೇಕ ತರಂಗಗಳಿಂದ ಬಾರಿಬಾರಿಗೂ ಸೀಳುಸೀಳಾಗುತ್ತಿರುವ ದಡವನ್ನು ದಾಟಲಾರದೆ ಹೋದ ಸಮುದ್ರನು ತನ್ನ ಉತ್ತಮ ಕೀರ್ತಿಯನ್ನು ನಾಶಮಾಡುವ ಅಪಕೀರ್ತಿರಾಶಿಯಿಂದ ಕಪ್ಪಾಗಿದ್ದಾನೋ ಎಂಬಂತೆ, ಕಪ್ಪಾದ ನೀರಿನ ರಾಶಿಯನ್ನು ಧರಿಸಿದ್ದನು. ತನ್ನಲ್ಲಿದ್ದ ಕಲ್ಪವೃಕ್ಷವನ್ನು ದೇವತೆಗಳು ಅಪಹರಿಸಿದ್ದರಿಂದ, ಮತ್ತೊಂದು ಕಲ್ಪವೃಕ್ಷವನ್ನು ಉತ್ಪಾದಿಸಬೇಕೆಂದು ಸಮುದ್ರರಾಜನು ರೈತನಂತೆ ಅಲೆಗಳೆಂಬ ನೇಗಿಲುಗಳಿಂದ ಉತ್ತು, ಪಾಚಿಗಳೆಂಬ ಒಣ ಸೆಗಣಿ, ಗೊಬ್ಬರವನ್ನು ಹಾಕಿ, ಕಲ್ಪವೃಕ್ಷದ ಕೃಷಿ ಮಾಡುತ್ತಾನೋ ಎಂಬಂತಿದ್ದನು. ಶೇಷನು ಪಾತಾಳದಲ್ಲಿ ಶ್ರೀರಾಘವೇಂದ್ರಗುರುವರ್ಯರ ಮಹಿಮೆಯೆಂಬ ಸೂರ್ಯನನ್ನು ಪ್ರಕಟಗೊಳಿಸಿದಾಗ ಅಲ್ಲಿದ್ದ ಅಂಧಕಾರಸಮೂಹವು ಅಲ್ಲಿಂದ ಹೊರಬಂದು ಜಡವಾಗಿ ಮಾಡಲ್ಪಟ್ಟಂತೆ ಕಪ್ಪಾದ ಜಲರಾಶಿಯ ಸಮುದ್ರವು ತೋರುತ್ತಿತ್ತು. ಶ್ರೀಮನ್ನಾರಾಯಣನು ಶ್ರೀ ರಾಘವೇಂದ್ರಗುರುಗಳೆಂಬ ಅತಿಮುಖ್ಯವಾದ

ಆಶ್ರಯದಲ್ಲಿ ಅವರ ಹೃದಯಕಮಲದಲ್ಲಿ ಸ್ಥಿರವಾಗಿ ನೆಲೆಸಿ, ಅಮುಖ್ಯಾಶ್ರಯನಾದ ನನ್ನನ್ನು ಬಿಟ್ಟುಬಿಡುತ್ತಾನೋ ಏನೋ ಎಂಬ ಹೆದರಿಕೆಯಿಂದ ಸಮುದ್ರರಾಜನು ಅಲೆಗಳ ಸಮ್ಮುಗಳಿಂದ ನಿಟ್ಟುಸಿರು ಬಿಡುವಂತೆ ಕಾಣಸುತ್ತಾ ಇದ್ದನು. ಸಮುದ್ರರಾಜನು ಬೆತ್ತ ಹಿಡಿದ ಉಪಾಧ್ಯಾಯನಂತೆ ಅಲೆಗಳೆಂಬ ಚಾವಟಿಗಳಿಂದ ಶಿಶುಗಳಂತಿರುವ ಶಿಂಶುಮಾರ ಎಂಬ ಜಲಚರ ಪ್ರಾಣಿಗಳನ್ನು ಫಟ್ ಫಟ್ ಫಟೀರೆಂದು ಹೊಡೆದಾಗ ಅವುಗಳು ಸುತ್ತುಸುತ್ತಾಗಿ ಸುತ್ತಿ ಸುಳಿಯನ್ನುಂಟುಮಾಡುತ್ತಾ ಉಪಾಧ್ಯಾಯರ ಏಟಿಗೆ ಹೆದರಿ ಹುಡುಗರು ಬರೆಯುವಂತ ಅಕಾರಾದಿ ವರ್ಣ-ಮಾಲೆಯನ್ನೂ ಕಾಗುಣಿತವನ್ನೂ ಸಮುದ್ರದಲ್ಲಿ ಬರೆಯುತ್ತಿವೆಯೋ ಎಂಬಂತೆ ಕಾಣಸುತ್ತಿತ್ತು.

**ರಾಮಸೇತುವರ್ಣನೆ** — ಅಲ್ಲಿಂದ ಶ್ರೀರಾಘವೇಂದ್ರತೀರ್ಥಗುರುವರ್ಯರು ರಾಮಸೇತುವಿಗೆ ಬಂದು ಅದನ್ನು ನೋಡಿದರು. ಆ ಸೇತುವು ಸಮುದ್ರದಲ್ಲಿ ಪೂರ್ವಪಶ್ಚಿಮದಿಕ್ಕುಗಳಿಗೆ ಭೇದವನ್ನು ತಿಳಿಸಿಕೊಡುತ್ತದೆಯೋ ಎಂಬಂತೆ ಉತ್ತರದಕ್ಷಿಣವಾಗಿ ಚಾಚಿತ್ತು. ರಘುವೀರಶ್ರೀರಾಮಚಂದ್ರನ ಬಾಣಗಳಿಂದ ಹರಿದುಹೋದ ಭೂಮಿಯೆಂಬ ವಸ್ತ್ರವನ್ನು ಪುನಃ ಹೊಲಿಯುವಾಗ ಹಾಕಿದ ಹೊಸದಾದ ದಾರದ ಸಾಲಿನಂತೆಯೂ ಆ ಸೇತುವು ಕಾಣಸುತ್ತಿತ್ತು. ಆ ಸಮುದ್ರಸೇತುವು ಜಲಪ್ರವಾಹವೆಂಬ ವರುಣನ ಮನೆಯ ಮಾಡಿನ ಮಧ್ಯದಲ್ಲಿ ಅಡ್ಡಲಾಗಿ ಆಧಾರವಾಗಿರುವ ಬಿದಿರಿನ ಗಳದಂತೆ ಇದ್ದು ಬಿದಿರಿನ ಬೆನ್ನುಮರವು ಕಂಭಗಳ ಆಧಾರದಿಂದ ಅಡ್ಡಲಾಗಿ ನಿಂತು ಮಾಡನ್ನು ಧರಿಸಿ ಮನೆಯಲ್ಲಿರುವವರ ತಾಪವನ್ನು ಪರಿಹರಿಸುವಂತೆ ತನ್ನನ್ನು ಸೇವಿಸುವವರ ತಾಪವನ್ನು ಪರಿಹರಿಸುತ್ತದೆ. ಆ ರಾಮಸೇತುವು ಹೂವುಗಳ ಸುವಾಸನೆಯಿಂದ ಜನರನ್ನು ಆನಂದಗೊಳಿಸಿ ಆಕರ್ಷಿಸುವುದೆಂಬ ಧರಣೀಸುಂದರಿಯ ಮುಖವನ್ನು ಚುಂಬಿಸುವ ಸಮುದ್ರರಾಜನ ಮೂಗಿನಂತೆಯೂ, ಶ್ರೀರಾಮಚಂದ್ರನ ಬಾಣದ ತುದಿಯಿಂದ ಒಣಗಿದ ಸಮುದ್ರರಾಜನ ಉದ್ದವಾದ ಬೆನ್ನೆಲುಬಿನಂತೆಯೂ, ಧರ್ಮಪಾದವು ತ್ರೇತಾಯುಗ-ಕ್ರಮದಿಂದ ನಶಿಸಿ ಕಲಿಯುಗದಲ್ಲಿ ಉಳಿದಿರುವ ಒಂದು ಧರ್ಮಪಾದವೂ ತಾನೂ ಪೂರ್ತಿಯಾಗಿ ನಶಿಸಿ ಹೋದೇನು ಎಂಬ ಭಯದಿಂದ ಕಲಿಗೆ ಹೋಗಲು ಅಸಾಧ್ಯವಾದ ಸಮುದ್ರದ ಜಲದುರ್ಗವನ್ನು ಸೇರಿಕೊಂಡು ಇದೆಯೋ ಎಂಬಂತೆ ಆ ರಾಮಸೇತುವು ಕಾಣಸುತ್ತಿತ್ತು. ಲಂಕೆಯಲ್ಲಿರುವ ತನ್ನ ಮಗಳಾದ ಸೀತೆಯ ಕಣ್ಣೀರನ್ನು ಒರೆಸುವುದಕ್ಕಾಗಿ ಭೂದೇವಿಯು ಚಾಚಿದ ಉದ್ದವಾದ ಭುಜಲತೆಯಂತೆಯೂ ಆ ಸೇತುವು ವಿರಾಜಿಸುತ್ತಿತ್ತು.

**ಸೇತುಸ್ನಾನವರ್ಣನೆ** — ಶ್ರೀರಾಘವೇಂದ್ರತೀರ್ಥರು ನಿರ್ಮಲಾಂತಃಕರಣರು. ನಮಿಸಿದ ಜನರನ್ನು, ಕೈಹಿಡಿದು ಮೇಲಕ್ಕೆತ್ತುವವರು, ಸೂರ್ಯನಂತೆ ಮಹಾತೇಜಸ್ವಿಗಳು. ಕಣ್ಣು ಮನಗಳು ದಣಿಯುವಂತೆ ಅವರು ಸೇತುವಿನ ಮತ್ತು ಸೇತುಪತಿ ಶ್ರೀರಾಮನ ವೈಭವವನ್ನು ಅನುಭವಿಸಿದರು. ಪೂರ್ವಪಶ್ಚಿಮಸಮುದ್ರಗಳು ಸೇರುವ ಸ್ಥಳದಲ್ಲಿ ಅಲ್ಲಿ ಸ್ನಾನಮಾಡಿದರು. ಸ್ನಾನಾನಂತರ ಯಮನಿಯಮಾದಿಧಾರಣಾಂತವಾದ ಯೋಗಾಂಗಗಳನ್ನು ಅನುಷ್ಠಾನ ಮಾಡಿ ಮನಸ್ಸನ್ನು ದೃಢವಾಗಿ ಒಂದೆಡೆ ನಿಲ್ಲಿಸಿ ಅಗಣಿತ ಮಹಿಮಾಸಂಪತ್ತುಗಳಿಂದ ಪೂರ್ಣನಾದ, ಪಾಪಪಂಜರವನ್ನು ಭೇದಿಸಿ ಜೀವನ ಸ್ವರೂಪವನ್ನು ಪ್ರಕಾಶಗೊಳಿಸುವ, ರಘುವಂಶದೀಪನಾದ ಶ್ರೀಮೂಲರಾಮ-ಚಂದ್ರನನ್ನು ಹೃದಯದಲ್ಲಿ ಸ್ಥಿರೀಕರಿಸಿ ಧ್ಯಾನ ಮಾಡಿದರು.

**ವನಶೈಲಾದಿಯಾತ್ರೆ** — (ವಾನಮಾಮಲೈ ಮುಂತಾದ ಕ್ಷೇತ್ರಗಳ ಯಾತ್ರೆ). ಬ್ರಹ್ಮಜ್ಞಾನಿಗಳಾದ ದ್ವಿಜರಿಗೆ ಕಲ್ಪವೃಕ್ಷದಂತಿರುವ ಗುರುವರೇಣ್ಯರಾದ ಶ್ರೀರಾಘವೇಂದ್ರತೀರ್ಥರು ಅನಂತರ ಅಲ್ಲಿಂದ ಹೊರಟು ವನಶೈಲವೆಂಬ (ವಾನಮಾಮಲೈ-ತೋತಾದ್ರಿ) ಕ್ಷೇತ್ರವನ್ನು ತಲುಪಿದರು. ಭಕ್ತರ ಸಂಸಾರನಾಶಕನಾದ, ಸಜ್ಜನ ಜಗತ್ತನ್ನು ರಕ್ಷಿಸುವುದರಲ್ಲಿ ದೀಕ್ಷಿತನಾದ, ಶೇಷಶಯನನಾದ ಸುಂದರವರ (ಸುಂದರರಾಜನೆಂಬ) ಶ್ರೀಹರಿಯನ್ನು ಅಲ್ಲಿ ಕಂಡು

ನಮಿಸಿದರು. ಅನಂತರ ಅನಂತಶಯನಕ್ಷೇತ್ರ, ಜನಾರ್ದನಕ್ಷೇತ್ರಗಳನ್ನು ಸಂದರ್ಶಿಸಿ, ತಾಮ್ರಪರ್ಣೀ ನದೀತೀರದಲ್ಲಿ ಶೋಭಿತರಾದ ಒಂಭತ್ತುಮಂದಿ ಪರದೇವತೆಗಳನ್ನು ನಮಿಸಿ 'ಕೃತಮಾಲಿಕಾ' ಎಂಬ ನದಿಯಿಂದ ಅಲಂಕೃತವಾದ 'ಮಧುರಾ' ಪಟ್ಟಣಕ್ಕೆ ಬಂದರು. ಮಧುರೆಯ ರಾಜನ ಸಭೆಯಲ್ಲಿ ಎಲ್ಲಾ ವಿದ್ವಾಂಸರನ್ನೂ ಜಯಿಸಿ ರಾಜನಿಂದ ಬಹುಮಾನಿತರಾದ ಯತಿಶೇಖರರು ವೃಷಭಾಚಲದಲ್ಲಿರುವ ಸುಂದರವರನೆಂಬ ಹರನನ್ನು ನಮಿಸಿ ನಿಧಾನವಾಗಿ ಪ್ರಯಾಣ ಮಾಡುತ್ತಾ ಶ್ರೀರಂಗಕ್ಷೇತ್ರವನ್ನು ತಲುಪಿದರು.



ವಿದ್ವತ್ಕುಲಾವತಂಸ,
ಮಹಾಕವಿ ಶ್ರೀಮನ್ನಾರಾಯಣಾಚಾರ್ಯೇಣ ರಚಿತಂ

# ಶ್ರೀಮದ್ರಾಘವೇಂದ್ರವಿಜಯ ಮಹಾಕಾವ್ಯಂ

## ಅಷ್ಟಮ ಸರ್ಗ

**ಅವತಾರಿಕೆ :** ಈಗ ಕವಿಗಳು ಶ್ರೀಗುರುರಾಘವೇಂದ್ರತೀರ್ಥರು ಶ್ರೀರಂಗ ಕ್ಷೇತ್ರದಲ್ಲಿ ವಾಸ ಮಾಡುತ್ತಾ ಪ್ರಮಾಣಪದ್ಧತಿಯಿಂದ ಆರಂಭಿಸಿ ಚಂದ್ರಿಕಾ ಗ್ರಂಥದವರೆಗಿನ ಎಲ್ಲ ಗ್ರಂಥಗಳನ್ನು ಅನೇಕ ಬಾರಿ ಶಿಷ್ಯರಿಗೆ ಪಾಠ ಹೇಳಿದುದನ್ನು ವರ್ಣಿಸುತ್ತಾರೆ.

**ಶ್ರೀಶಪಾದಸರಸೀರುಹಭೃಂಗೋ ಮಧ್ವಮೌನಿಮತಸಿಂಧುಮೃಗಾಂಕಃ ।**
**ಮಾನಪದ್ಧತಿಮುಖಂ ಮತಮಾಖ್ಯಾಚ್ಚಂದ್ರಿಕಾಂತಮಸಕೃಚ್ಚತುರೋಽಸೌ ॥೧॥**

**ತಾತ್ಪರ್ಯ :** ಶ್ರೀರಾಘವೇಂದ್ರತೀರ್ಥರು ಶ್ರೀಪತಿಯಾದ ಶ್ರೀಹರಿಯ ಪಾದಕಮಲಗಳಲ್ಲಿ ಕಮಲದಲ್ಲಿ ದುಂಬಿಯಂತೆ ಆಸಕ್ತರಾಗಿದ್ದರು. ಚಂದ್ರನು ಉದಯಿಸಿ ಸಮುದ್ರವನ್ನು ಉಕ್ಕಿಸುವಂತೆ ಶ್ರೀಗುರುರಾಘವೇಂದ್ರರು ಶ್ರೀಮನ್ಮಧ್ವಾಚಾರ್ಯರ ಸಿದ್ಧಾಂತವೆಂಬ ಸಮುದ್ರವನ್ನು ಅಭಿವೃದ್ಧಿಗೊಳಿಸುವ ಚಂದ್ರನಂತೆ ಇದ್ದರು. ಪ್ರವಚನದಲ್ಲಿ ಕುಶಲರಾದ ಅವರು ಶ್ರೀರಂಗಕ್ಷೇತ್ರದಲ್ಲಿ ಶ್ರೀಮಟ್ಟೀಕಾಕೃತ್ಪಾದರಿಂದ ರಚಿತವಾದ ಪ್ರಮಾಣಪದ್ಧತಿ ಗ್ರಂಥವನ್ನು ಆರಂಭಿಸಿ ಶ್ರೀಮದ್ ವ್ಯಾಸರಾಜ ಗುರುಸಾರ್ವಭೌಮರಿಂದ ರಚಿತವಾದ ತಾತ್ಪರ್ಯಚಂದ್ರಿಕಾ ಗ್ರಂಥದವರೆಗಿನ ಎಲ್ಲಾ ಮಧ್ವಸಿದ್ಧಾಂತ ಗ್ರಂಥಗಳ ಪ್ರವಚನವನ್ನು ಶ್ರೀರಂಗಕ್ಷೇತ್ರದಲ್ಲಿ ಅನೇಕ ಬಾರಿ ಮಾಡಿದರು. ಶ್ರೀಗುರುವರ್ಯರು ಶ್ರೀರಂಗಕ್ಷೇತ್ರದಲ್ಲಿ ಪ್ರಮಾಣಪದ್ಧತಿಯನ್ನು ಆರಂಭಿಸಿ ಚಂದ್ರಿಕಾಂತವಾದ ಮಧ್ವಶಾಸ್ತ್ರ ಪ್ರವಚನವನ್ನು ಮಾಡಿ ಶ್ರೀರಂಗನಾಥನ ಅಪ್ಪಣೆಯಿಂದ ಅಲ್ಲಿಂದ ಹೊರಟು ನಾಮಗಿರಿ ಮೊದಲಾದ ಪುಣ್ಯ ಕ್ಷೇತ್ರಗಳಿಗೆ ಹೋಗಿ ಬಾಣಪುರದಲ್ಲಿ ವಿದ್ವಾಂಸರುಗಳನ್ನು ಜಯಿಸಿ ಆ ಗ್ರಾಮದ ಅಧಿಪತಿಯಿಂದ ಗ್ರಂಥವನ್ನು ಉಂಬಳಿಯಾಗಿ ಪಡೆದು ಸುಬ್ರಹ್ಮಣ್ಯಕ್ಕೆ ಹೋಗಿ, ಅನಂತರ ಉಡುಪಿಯಲ್ಲಿ ಶ್ರೀಕೃಷ್ಣನ ಸನ್ನಿಧಿಯಲ್ಲಿ ಹತ್ತು ಬಾರಿ ಚಂದ್ರಿಕಾ ಪ್ರವಚನವನ್ನು ಮಾಡಿ ಚಂದ್ರಿಕಾಪ್ರಕಾಶವೆಂಬ ಚಂದ್ರಿಕಾ ಟಿಪ್ಪಣೀ ಗ್ರಂಥವನ್ನು ಪ್ರಾರಂಭಿಸಿ ತಂತ್ರದೀಪಿಕಾ, ಮತ್ತು ನ್ಯಾಯಮುಕ್ತಾವಲಿಗಳನ್ನು ವಿರಚಿಸಿ ಶ್ರೀರಾಮದೇವರನ್ನು ಪೂಜಿಸಿ, ದೇವರ ದರ್ಶನದಿಂದ

ಜನರನ್ನು ಸಂತೋಷಗೊಳಿಸಿದರು. ಶ್ರೀರಾಮೋತ್ಸವವು ಪ್ರಾರಂಭವಾದಾಗ ಕ್ರಮವಾಗಿ ಒಂದರ ಹಿಂದೆ ಒಂದು ವರ್ಷದ ಋತುಗಳು ಶ್ರೀರಾಮನ ದರ್ಶನಕ್ಕಾಗಿ ಬಂದಿವೆಯೆಂಬುವ ಹಾಗಿರುವ ಆರು ಋತುಗಳನ್ನು ಕವಿಗಳು ವರ್ಣಿಸಿದ್ದಾರೆ. ಶ್ರೀರಾಘವೇಂದ್ರ ಯತಿಗಳು ಪಾಂಡುರಂಗ ಕ್ಷೇತ್ರದಲ್ಲಿ ಶ್ರೀಪಾಂಡುರಂಗ ವಿಠಲನ ದರ್ಶನ ಮಾಡಿ, ಅನಂತರದಲ್ಲಿ ಕೊಲ್ಹಾಪುರದಲ್ಲಿ ಬಹುಕಾಲ ವಾಸ್ತವ್ಯ ಮಾಡಿದರು. ತುಲಾ ಮಾಸದಲ್ಲಿ ರಾಮನಾಥಪುರಕ್ಕೆ ದಿಗ್ವಿಜಯ ಮಾಡಿ, ಗೋದಾವರೀ ನದಿಯಲ್ಲಿ ಸ್ನಾನ ಮಾಡಿ, ನಂತರ ವಿಜಯನಗರವನ್ನು ಪ್ರವೇಶಿಸಿ, ಅಲ್ಲಿದ್ದ ಶಿಷ್ಯರುಗಳಿಗೆ ತಪ್ತಮುದ್ರಾಧಾರಣವನ್ನು ಮಾಡಿ, ಅಲ್ಲಿದ್ದ ಎಲ್ಲ ವಾದಿಗಳನ್ನೂ ಜಯಿಸಿ, ಅಲ್ಲಿಯ ರಾಜನಿಂದ ಶ್ವೇತಚ್ಛತ್ರ ಮೊದಲಾದ ರಾಜಮರ್ಯಾದೆಗಳನ್ನು, ಬಿರುದುಗಳನ್ನು ಪಡೆದು, ಕೃಷ್ಣವೇಣೀ ನದಿಯಲ್ಲಿ ಮಿಂದು ಸ್ನಾನ ಮಾಡಿ, ನದೀ ತೀರದಲ್ಲಿ ತತ್ವಪ್ರಕಾಶಿಕಾ ಗ್ರಂಥದ ಪ್ರವಚನ ನೀಡಿ, ಅಣುಭಾಷ್ಯಕ್ಕೆ ವ್ಯಾಖ್ಯಾನವನ್ನು ಬರೆದರು. ಮುಂದೆ ಶ್ರೀಶೈಲಕ್ಕೆ ವಿಜಯಯಾತ್ರೆ ಕೈಗೊಂಡು, ಅಲ್ಲಿಂದ ಕುಲದೇವ ಶ್ರೀನಿವಾಸನ ಆವಾಸಸ್ಥಾನವಾದ ತಿರುಪತಿಗೆ ಬಂದು, ಅಲ್ಲಿಯೇ ಕೆಲವು ದಿನಗಳ ಕಾಲ ವಾಸ ಮಾಡಿ, ಅನಂತರದಲ್ಲಿ ಕಾಂಚೀ, ಅರುಣಾಚಲ, ವೃದ್ಧಾಚಲ ಕ್ಷೇತ್ರಗಳನ್ನು ಸಂದರ್ಶಿಸಿ, ಶ್ರೀಮುಷ್ಣ ಕ್ಷೇತ್ರದಲ್ಲಿ ಶ್ರೀವರಾಹದೇವರನ್ನು ದರ್ಶನ ಮಾಡಿ, ನಮಿಸಿ, ಶ್ರೀಗುರುರಾಘವೇಂದ್ರರು ಮತ್ತೆ ಕುಂಭಕೋಣ ನಗರಿಯನ್ನು ಪ್ರವೇಶಿಸಿದುದನ್ನು ಈ ಸರ್ಗದಲ್ಲಿ ಕವಿಗಳು ತಿಳಿಸುತ್ತಾರೆ. ಮೊದಲು ಗುರುಗಳು ಶ್ರೀರಂಗ ಕ್ಷೇತ್ರವಾಸ, ಮತ್ತು ಅಲ್ಲಿಂದ ಉತ್ತರ ದಿಕ್ಕಿಗೆ ಪ್ರಯಾಣ ಬೆಳೆಸಿದ ವೃತ್ತಾಂತವನ್ನು ವರ್ಣಿಸುತ್ತಾರೆ.

## ಶ್ರೀರಂಗದಿಂದ ಉತ್ತರ ದಿಕ್ಕಿಗೆ ಯಾತ್ರೆ

**ಅವತಾರಿಕೆ :** ಈಗ ಕವಿಗಳು, ಶ್ರೀರಾಘವೇಂದ್ರ ಗುರುಸಾರ್ವಭೌಮರು ಶ್ರೀರಂಗನಾಥಸ್ವಾಮಿಯ ಅಪ್ಪಣೆ ಪಡೆದು, ಅಲ್ಲಿಂದ ಉತ್ತರ ದಿಕ್ಕಿನ ಕ್ಷೇತ್ರಗಳಿಗೆ ದಿಗ್ವಿಜಯ ಪ್ರಯಾಣ ಬೆಳೆಸಿದುದನ್ನು ವರ್ಣಿಸುತ್ತಾರೆ.

**ಪ್ರಾಪ್ಯ ರಂಗಪರಿಣೇತುರನುಜ್ಞಾಂ ತನ್ನಿಯುಕ್ತಸಕಲರ್ತುಸಹಾಯಃ ।**
**ತತ್ಕೃಪಾಕವಚಮಾತ್ಮನಿ ಕುರ್ವನ್ ಉತ್ತರಾಂ ದಿಶಮಗಾದುರುತೇಜಾಃ ॥೨॥**

**ತಾತ್ಪರ್ಯ :** ಶ್ರೀರಾಘವೇಂದ್ರತೀರ್ಥರು ಅತಿಶಯ ಕಾಂತಿಸಂಪನ್ನರು. ಅವರು ಶ್ರೀರಂಗದಲ್ಲಿ ಕೆಲವು ದಿನಗಳವರೆಗೆ ವಾಸ ಮಾಡಿ, ಅನಂತರದಲ್ಲಿ ಕ್ಷೇತ್ರಸ್ವಾಮಿಯಾದ ಶ್ರೀರಂಗನಾಥನ ಅಪ್ಪಣೆಯನ್ನು ಪಡೆದು, ಅಲ್ಲಿಂದ ದಿಗ್ವಿಜಯ ಯಾತ್ರೆ ಹೊರಟರು. ಶ್ರೀರಂಗನಾಥಸ್ವಾಮಿಯ ಆಜ್ಞೆಗೆ ಒಳಪಟ್ಟಿರುವುದರಿಂದ ವರ್ಷದ ಆರೂ ಋತುಗಳು ಗುರುಗಳಿಗೆ ಅನುಕೂಲಕರವಾಗಿಯೇ ಇದ್ದವು. ಋತುಭೇದದಿಂದ ಗುರುಗಳಿಗೆ ಯಾವ ತೊಂದರೆಯೂ ಉಂಟಾಗಲಿಲ್ಲ.

ಶ್ರೀರಂಗನಾಥಸ್ವಾಮಿಯ ಕೃಪಾವಲೋಕನವೇ ಶ್ರೀರಾಘವೇಂದ್ರರಿಗೆ ದೇಹರಕ್ಷಕ ಕವಚವಾಗಿತ್ತು. ಗುರುಗಳು ಶ್ರೀರಂಗದಿಂದ ಉತ್ತರ ದಿಕ್ಕಿನೆಡೆಗೆ ದಿಗ್ವಿಜಯ ಯಾತ್ರೆ ಬೆಳೆಸಿದರು.

## ನಾಮಗಿರಿ ಯಾತ್ರೆ

**ಅವತಾರಿಕೆ :** ಶ್ರೀರಾಘವೇಂದ್ರ ಗುರುಗಳು ನಾಮಗಿರಿ ಕ್ಷೇತ್ರದಲ್ಲಿ ನರಸಿಂಹನನ್ನು ನಮಿಸಿ ಅಲ್ಲಿ ಒಂದು ರಾತ್ರಿಯ ವಾಸ್ತವ್ಯ ಮಾಡಿದುದನ್ನು ವರ್ಣಿಸುತ್ತಾರೆ.

**ನಾಮಪರ್ವತಮುಪೇತ್ಯ ನೃಸಿಂಹಂ ನಾಮಸಂಸ್ಕೃತಿಧುತಾಘಜನೌಘಮ್ ।**
**ತಂ ಪ್ರಣಮ್ಯ ತರುಣಾರ್ಕಸಮಾಭಂ ತಾಂ ನಿಶಾಮಿಹ ಗುರುರ್ವಸತಿ ಸ್ಮ ॥೩॥**

**ತಾತ್ಪರ್ಯ :** ಶ್ರೀರಾಘವೇಂದ್ರತೀರ್ಥರು ನರಸಿಂಹದೇವರ ಸನ್ನಿಧಾನವುಳ್ಳ ನಾಮಕಲ್ಲು ಎಂದು ಭಾಷೆಯಲ್ಲಿ ಪ್ರಸಿದ್ಧವಾದ (ನಾಮಗಿರಿಯನ್ನು) ತಲುಪಿದರು. ಅಲ್ಲಿ ತನ್ನ ನಾಮಸ್ಮರಣ ಮಾತ್ರದಿಂದ ಜನ ಸಮೂಹದ ಪಾಪಗಳನ್ನು ನಾಶ ಮಾಡುವವನಾದ, ಎಳೆಯ ಸೂರ್ಯನ ಕಾಂತಿಯಂತೆ ಕಾಂತಿಯಿಂದ ಶೋಭಿಸುತ್ತಿರುವ ಶ್ರೀನರಸಿಂಹದೇವರನ್ನು ನಮಸ್ಕರಿಸಿದರು. ಆ ರಾತ್ರಿಯನ್ನು ಆ ಕ್ಷೇತ್ರದಲ್ಲಿಯೇ ಕಳೆದರು.

## ಬಾಣಪುರದಲ್ಲಿ ವಾದಿನಿಗ್ರಹ

**ಅವತಾರಿಕೆ :** ಶ್ರೀರಾಘವೇಂದ್ರ ಗುರುವರ್ಯರು ಭಲ್ಲಪುರ (ಬಾಣಾಪುರ) ಎಂಬ ಸ್ಥಳದಲ್ಲಿ (ಗ್ರಾಮದಲ್ಲಿ) ವಾದಿಗಳನ್ನು ಜಯಿಸಿದುದನ್ನು ಕವಿಗಳು ವರ್ಣಿಸುತ್ತಾರೆ.

**ಸೋಽಥ ಭಲ್ಲಪುರಿ ಭೈರವಭಟ್ಟೋ ವೀರಭದ್ರ ಇತಿ ವಿಶ್ರುತವಿತ್ತೌ ।**
**ನರ್ಮಣೈವ ಪರಿಭೂಯ ನರೇಂದ್ರಾತ್ ಗ್ರಾಮರತ್ನಮಚಿರಾತ್ ಸಮಗೃಹ್ಣಾತ್ ॥೪॥**

**ತಾತ್ಪರ್ಯ :** ಶ್ರೀರಾಘವೇಂದ್ರ ಗುರುಸಾರ್ವಭೌಮರು ಸಂಚಾರದಲ್ಲಿ ದಿಗ್ವಿಜಯ ಮಾಡುತ್ತಿದ್ದ ದಾರಿಯಲ್ಲಿ ಭಲ್ಲಪುರ (ಬಾಣಾವರ) ಎಂಬ ಗ್ರಾಮವಿತ್ತು. ಆ ಊರಿನಲ್ಲಿ ಭೈರವಭಟ್ಟ ಮತ್ತು ವೀರಭದ್ರ ಎಂಬ ಇಬ್ಬರು ಪ್ರಸಿದ್ಧರಾದ ಪಂಡಿತರುಗಳಿದ್ದರು. ಗುರುರಾಘವೇಂದ್ರರು ಆ ಇಬ್ಬರು ಪಂಡಿತರನ್ನೂ ವಾದದಲ್ಲಿ ಸೋಲಿಸಿದರು. ಅದನ್ನು ಕಂಡು ಸಂತೋಷಭರಿತನಾದ ಆ ಗ್ರಾಮದ ಒಡೆಯನಿಂದ (ಗ್ರಾಮಾಧೀಶನಿಂದ) ಆ ಕ್ಷಣದಲ್ಲಿಯೇ ಒಂದು ಸುಂದರವಾದ ಗ್ರಾಮವನ್ನೇ ಉಂಬಳಿಯಾಗಿ ಪಡೆದರು. (ಶ್ರೀಗುರು ರಾಘವೇಂದ್ರರ ವಾದವೈಭವವನ್ನು (ವಾದಕೌಶಲವನ್ನು) ವೀಕ್ಷಿಸಿದ ಆ ಗ್ರಾಮಾಧಿಪತಿಯು ಸಂತೋಷಭರಿತನಾಗಿ ಒಂದು ಶ್ರೇಷ್ಠವಾದ ಗ್ರಾಮವನ್ನು ಕೂಡಲೇ ಗುರುಗಳಿಗೆ ಕಾಣಿಕೆಯಾಗಿ ಸಮರ್ಪಿಸಿದನು.

## ವಿಷ್ಣುಮಂಗಲ ಮತ್ತು ಸುಬ್ರಹ್ಮಣ್ಯ ಕ್ಷೇತ್ರಗಳ ಸಂಚಾರ

**ಅವತಾರಿಕೆ :** ಶ್ರೀಗುರುಸಾರ್ವಭೌಮರು ವಿಷ್ಣುಮಂಗಲ ಮತ್ತು ಸುಬ್ರಹ್ಮಣ್ಯ ಕ್ಷೇತ್ರಗಳ ಯಾತ್ರೆಯನ್ನು ಮಾಡಿದರು ಎಂಬುದಾಗಿ ಕವಿಗಳು ಈಗ ವರ್ಣಿಸುತ್ತಾರೆ.

**ವಿಷ್ಣುಮಂಗಲಪುರೇ ವಿಲಸಂತಂ ದೇವಮೀಕ್ಷ ವಿಪುಲಶ್ರಿಯಮಸ್ಮಾತ್ ।**
**ಸಂವೃತಃ ಪರಿಜನೈಃ ಸ ಕುಮಾರಕ್ಷೇತ್ರಮೇತ್ಯ ನಮತಿ ಸ್ಮ ಕುಮಾರಮ್ ॥೫॥**

**ತಾತ್ಪರ್ಯ :** ಶ್ರೀರಾಘವೇಂದ್ರ ಗುರುಗಳು ವಿಷ್ಣುಮಂಗಲವೆಂಬ ಕ್ಷೇತ್ರಕ್ಕೆ ಸಂಚಾರತ್ವೇನ ಬಂದರು. ಅಲ್ಲಿ ಕಾಂತಿಪುಂಜದಿಂದ ಅಲಂಕೃತನಾದ ಶ್ರೀಮಹಾವಿಷ್ಣುವಿನ ಸಂದರ್ಶನವನ್ನು ಮಾಡಿದರು. ಅಲ್ಲಿಂದ ಹೊರಟು ಪರಿವಾರದೊಂದಿಗೆ ಶ್ರೀಸುಬ್ರಹ್ಮಣ್ಯ ಕ್ಷೇತ್ರವನ್ನು ತಲುಪಿದರು. ಅಲ್ಲಿ ಶ್ರೀಸುಬ್ರಹ್ಮಣ್ಯ ಸ್ವಾಮಿಯನ್ನು ವಂದಿಸಿದರು. (ವಿಷ್ಣುಮಂಗಲವು ಈಗ ಕೇರಳ ರಾಜ್ಯದ ಕಾಸರಗೋಡು ಜಿಲ್ಲೆಯಲ್ಲಿದೆ. ಸುಬ್ರಹ್ಮಣ್ಯವು ಅಲ್ಲಿಂದ ಕೆಲವು ಮೈಲಿಗಳ ದೂರದಲ್ಲಿ ಕರ್ನಾಟಕ ರಾಜ್ಯದ ದಕ್ಷಿಣಕನ್ನಡ ಜಿಲ್ಲೆಯ ಸುಳ್ಯ ತಾಲೂಕಿನಲ್ಲಿದೆ.)

**ಅವತಾರಿಕೆ :** ಕವಿಗಳು ಈಗ ಸುಬ್ರಹ್ಮಣ್ಯ ಕ್ಷೇತ್ರದ ಮಹಿಮೆಯನ್ನು ತಿಳಿಸುತ್ತಾ ಆ ಸ್ಥಳದಲ್ಲಿ ಶ್ರೀಗುರುವರ್ಯರು ಕೆಲವು ಕಾಲ ವಾಸ್ತವ್ಯ ಮಾಡಿದುದನ್ನು ವರ್ಣಿಸುತ್ತಾರೆ.

**ಶ್ವಿತ್ರಿಣೋಽಪಿ ಯದುಪೇತ್ಯ ವಿಮುಕ್ತಾಃ ಸದ್ಯ ಏವ ನಿಜಪಾತಕಸಂಘಾತ್ ।**
**ಸರ್ವಸಂಪದಭಿವೃದ್ಧಿಕರೋಽಸ್ಮಿನ್ ವಾಸರಾನ್ ಕತಿಪಯಾನ್ ವಸತಿ ಸ್ಮ ॥೬॥**

**ತಾತ್ಪರ್ಯ :** ಈ ಕುಮಾರ ಕ್ಷೇತ್ರವಾದರೋ ಬಹಳ ಮಹಿಮೆಯಿಂದ ಕೂಡಿದ್ದಾಗಿದೆ. ಕುಷ್ಠರೋಗಿಗಳೂ ಇಲ್ಲಿಗೆ ಬಂದು ಭಕ್ತಿಯಿಂದ ಪ್ರದಕ್ಷಿಣ ನಮಸ್ಕಾರಗಳನ್ನು ಮಾಡಿದರೆ ಅವರ ರೋಗವು ಕೂಡಲೇ ಪರಿಹಾರವಾಗುತ್ತದೆ. ಇಂತಹಾ ಪರಮ ಪುಣ್ಯ ಕ್ಷೇತ್ರದಲ್ಲಿ ಭಕ್ತರ ಸರ್ವ ಸಂಪತ್ತುಗಳನ್ನೂ ಅಭಿವೃದ್ಧಿಗೊಳಿಸುವ ಶ್ರೀಗುರುರಾಘವೇಂದ್ರ ಯತಿಗಳು ಕೆಲವು ದಿನಗಳ ವರೆಗೆ ವಾಸವಾಗಿದ್ದರು. ವಿಶೇಷಾಂಶ : "ಸುಬ್ರಹ್ಮಣ್ಯಸ್ಯ ಮಹಿಮಾವರ್ಣಿತುಂ ಕೇನ ಶಕ್ಯತೇ! ಯತ್ರೋಚ್ಚಿಷ್ಟಮಪಿ ಸ್ಪಷ್ಟಂ ಶ್ವಿತ್ರಿಣಂ ಶೋಧಯತ್ಯಹೋ ॥" (ಶ್ರೀವಾದಿರಾಜ ಗುರುಸಾರ್ವಭೌಮ ವಿರಚಿತ ತೀರ್ಥಪ್ರಬಂಧ) 'ಎಲ್ಲಿ ಉಚ್ಚಿಷ್ಟ ಪ್ರದಕ್ಷಿಣ ಮಾಡಿದರೂ (ಬ್ರಾಹ್ಮಣರ ಎಂಜಲು ಎಲೆಯ ಮೇಲೆ ಅಂಗ ಪ್ರದಕ್ಷಿಣೆ ಮಾಡಿದರೂ) ಕುಷ್ಠಾದಿ ರೋಗಗಳು ಪರಿಹಾರವಾಗುತ್ತದೆಯೋ, ಅಂತಹಾ ಸುಬ್ರಹ್ಮಣ್ಯ ಕ್ಷೇತ್ರದ, ಶ್ರೀಸುಬ್ರಹ್ಮಣ್ಯನ ಮಹಿಮೆಯನ್ನು ಯಾರಿಗೆ ವರ್ಣಿಸಲು ಸಾಧ್ಯ. ಈ ತೀರ್ಥಪ್ರಬಂಧ ಶ್ಲೋಕದ ಅಭಿಪ್ರಾಯವು ಮೇಲಿನ ಶ್ರೀರಾಘವೇಂದ್ರ ವಿಜಯದ ಶ್ಲೋಕವನ್ನು ಓದುವಾಗ ಸ್ಮರಣೆಗೆ ಬರುತ್ತದೆ.

## ಉಡುಪಿಕ್ಷೇತ್ರ ಯಾತ್ರೆ

**ಅವತಾರಿಕೆ :** ಈಗ ಕವಿಗಳು ಶ್ರೀಗುರುಸಾರ್ವಭೌಮರ ಉಡುಪಿ ಯಾತ್ರಾ ವೈಭವವನ್ನು ವರ್ಣಿಸುತ್ತಾರೆ.

**ರೌಪ್ಯಪೀಠಪುರಗಂ ರುಚಿರಾಂಗಂ ರುಕ್ಮಿಣೀಪತಿಮಪಶ್ಯದುದಾರಮ್ ।**
**ಪೂರ್ಣಬೋಧಗುರುಭಿಃ ಸಕಲಜ್ಞೈಃ ಸನ್ನಿಧಾಪಿತಮಘೌಘವಿದೂರಮ್ ॥೭॥**

**ತಾತ್ಪರ್ಯ :** ಶ್ರೀಕೃಷ್ಣನ ಬಾಲರೂಪವು ನಖಶಿಖಾಂತ ಸುಂದರಮಯವಾದುದು. ಶ್ರೀಕೃಷ್ಣನ ಪ್ರತಿಯೊಂದು ಅಂಗವೂ ಪರಮ ಶೋಭಾಯಮಾನವಾಗಿ ಸುಂದರವಾಗಿದೆ. ಶ್ರೀಕೃಷ್ಣನು ಸಕಲ ಗುಣಪೂರ್ಣನು, ಸಮಸ್ತ ದೋಷದೂರನು. ಸರ್ವಜ್ಞರಾದ ಶ್ರೀಮದಾನಂದತೀರ್ಥ ಭಗವತ್ಪಾದರು ಇಂತಹಾ ಶ್ರೀಕೃಷ್ಣನನ್ನು ಉಡುಪಿಯಲ್ಲಿ ಪ್ರತಿಷ್ಠಾಪಿಸಿದ್ದಾರೆ. ಅಲ್ಲಿ ಹರಿಸಾನ್ನಿಧ್ಯವನ್ನು ಹೆಚ್ಚಿಸಿದ್ದಾರೆ. ಶ್ರೀರಾಘವೇಂದ್ರತೀರ್ಥ ಗುರುಸಾರ್ವಭೌಮರು ಉಡುಪಿಗೆ ಹೋಗಿ ಇಂತಹಾ ಸರ್ವಾಂಗ ಸುಂದರನಾದ ಶ್ರೀಕೃಷ್ಣಪರಮಾತ್ಮನನ್ನು ನೋಡಿದರು.

## ಚಂದ್ರಿಕಾಪ್ರಕಾಶ ನಿರ್ಮಾಣಾರಂಭ

**ಅವತಾರಿಕೆ :** ಶ್ರೀರಾಘವೇಂದ್ರ ಯತಿವರ್ಯರು ತೀರ್ಥಕ್ಷೇತ್ರ ಸಂಚಾರ ಮಾಡುತ್ತಿದ್ದಂತೆಯೇ ಬ್ರಹ್ಮಸೂತ್ರಭಾಷ್ಯ ತತ್ವಪ್ರಕಾಶಿಕಾ ತಾತ್ಪರ್ಯಚಂದ್ರಿಕಾ ಎಂಬ ಶ್ರೀಮದ್ವ್ಯಾಸರಾಜ ಗುರುಸಾರ್ವಭೌಮ ಪೂಜ್ಯ ಚರಣ ವಿರಚಿತ ಗ್ರಂಥಕ್ಕೆ ಪ್ರಕಾಶ ಎಂಬ ವಿವರಣ ಗ್ರಂಥವನ್ನು ರಚಿಸಿದರು ಎಂಬುದಾಗಿ ವರ್ಣಿಸುತ್ತಾರೆ.

**ಚಂದ್ರಿಕಾವಿವರಣಂ ಸಮತಾನೀತ್ ಸಂಚರನ್ನಪಿ ಸ ಪುಣ್ಯಮಹೀಷು ।**
**ವೇತ್ತಿ ವರ್ಣನಿಚಯಂ ಸಮಯಾನಾಂ ಸಂಖ್ಯಯಾ ಸಹ ಧಿಯೈಷ ಸಹಾರ್ಥೈಃ ॥೮॥**

**ತಾತ್ಪರ್ಯ :** ಶ್ರೀರಾಘವೇಂದ್ರತೀರ್ಥರು ಶ್ರೀಮನ್ಮಧ್ವ ಸಿದ್ಧಾಂತದ ಗ್ರಂಥಗಳಲ್ಲಿ ಇಷ್ಟೇ ಅಕ್ಷರಗಳಿವೆ, ಆ ಗ್ರಂಥಗಳ ಅರ್ಥವು ಹೀಗೆಯೇ ಇದೆ ಎಂದೂ ಮತ್ತು ಸಮಯಾನಾಂ ಎಂಬ ಗ್ರಂಥಕಾರರು ಬಳಸಿರುವ ಪದದ ಸ್ವಾರಸ್ಯದಿಂದ ಎಲ್ಲಾ ಸಿದ್ಧಾಂತಗಳಲ್ಲಿಯೂ ಅಥ ಎಂಬುವುದರಿಂದ ಇತಿ ಎಂಬುವವರೆಗೆ ಅಮೂಲಾಗ್ರವಾಗಿ ಎಲ್ಲವನ್ನೂ ತಮ್ಮ ಪ್ರಜ್ಞಾಬಲದಿಂದ ಸರಿಯಾಗಿ ತಿಳಿದಿದ್ದರು. ಅಂತಹಾ ಮಹನೀಯರು ತೀರ್ಥಕ್ಷೇತ್ರಗಳಲ್ಲಿ ಸಂಚಾರ ಮಾಡುತ್ತಿದ್ದರೂ ಅವಕಾಶವನ್ನು ಕಲ್ಪಿಸಿಕೊಂಡು ಶ್ರೀಮದ್ವ್ಯಾಸರಾಜ ಗುರುಸಾರ್ವಭೌಮರಿಂದ ವಿರಚಿತವಾದ ತಾತ್ಪರ್ಯಚಂದ್ರಿಕಾ ಗ್ರಂಥಕ್ಕೆ ಪ್ರಕಾಶ ಎಂಬ ವ್ಯಾಖ್ಯಾನವನ್ನು ಬರೆದರು (ರಚಿಸಿದರು).

## ಹತ್ತು ಬಾರಿ ಚಂದ್ರಿಕಾ ಪ್ರವಚನ

**ಅವತಾರಿಕೆ :** ಈಗ ಕವಿಗಳು ಶ್ರೀರಾಘವೇಂದ್ರತೀರ್ಥರು ಉಡುಪಿಯಲ್ಲಿ ಹತ್ತು ಬಾರಿ ಚಂದ್ರಿಕಾ ಪ್ರವಚನ ಮಾಡಿದುದನ್ನು ವರ್ಣಿಸುತ್ತಾರೆ.

**ಚಂದ್ರಿಕಾಪ್ರವಚನಂ ದಶಕೃತ್ವಃ ಸೋಽಕೃತಾತಿಶಯಮಾತ್ಮನಿ ವಾಂಛನ್ ।**
**ಪೂರ್ಣಮಾಸ ಇವ ಕರ್ಮಣಿ ಭೂಯೋಽಭ್ಯಾಸಮಭ್ಯಧಿಕತತ್ಫಲಕಾಂಕ್ಷೀ ॥೯॥**

**ತಾತ್ಪರ್ಯ :** ಪೂರ್ಣಮಾಸವೆಂಬ ಯಾಗದ ಫಲವನ್ನು ಬಹಳ ಹೆಚ್ಚಾಗಿ ಪಡೆಯಬೇಕೆಂದು ಆಶಿಸುವ ಪುರುಷನು, ಆ ಯಾಗವನ್ನು ಮತ್ತೆ ಮತ್ತೆ ಆವರ್ತಿಸಿ ಮಾಡುತ್ತಾನೆ. ಅದರಂತೆ ತನ್ನಲ್ಲಿ ಚಂದ್ರಿಕಾ ವ್ಯಾಖ್ಯಾನ ಮಾಡಲು ಬೇಕಾಗುವ ಪುಣ್ಯ ವಿಶೇಷವು ಮತ್ತು ಹೆಚ್ಚಾಗಿ ಆಗಬೇಕೆಂದು ಬಯಸುತ್ತಾ ಶ್ರೀರಾಘವೇಂದ್ರತೀರ್ಥರು ಹತ್ತು ಬಾರಿ ಚಂದ್ರಿಕಾ ಗ್ರಂಥವನ್ನು ಪ್ರವಚನ ಮಾಡಿದರು.

## ತಂತ್ರದೀಪಿಕಾ ಎಂಬ ಬ್ರಹ್ಮಸೂತ್ರ ವಿವರಣ ನಿರ್ಮಾಣ

**ಅವತಾರಿಕೆ :** ಶ್ರೀ ಮಂತ್ರಾಲಯ ಪ್ರಭುಗಳು (ಶ್ರೀಗುರು ರಾಘವೇಂದ್ರರು) ತಂತ್ರದೀಪವೆಂಬ ಬ್ರಹ್ಮಸೂತ್ರಗಳ ವಿವರಣಾತ್ಮಕವಾದ ವ್ಯಾಖ್ಯಾನವನ್ನು ಮಾಡಿದರು (ರಚಿಸಿದರು) ಎಂಬುದಾಗಿ ಕವಿಗಳು ವರ್ಣಿಸುತ್ತಾರೆ.

**ಸೂತ್ರಪಾತ್ರರುಚಿರಂ ಕಲಿತರ್ಧಿಂ (ರ್ಧಿ) ನ್ಯಾಯಪೂರ್ವಕಸುಧಾಜ್ಯಭರೇಣ ।**
**ತಂತ್ರದೀಪಮನುಬೋಧಯದರ್ಥಂ ಭಾಷ್ಯವರ್ತಿಕಮಯಂ ತನುತೇ ಸ್ಮ ॥೧೦॥**

**ತಾತ್ಪರ್ಯ :** ಒಳ್ಳೆಯ ದೀಪದ ಪಾತ್ರೆಯಲ್ಲಿ ತುಪ್ಪವನ್ನು ಸುರಿದು ಹತ್ತಿಯ ಬತ್ತಿಯನ್ನು ತುಪ್ಪದಲ್ಲಿ ಅದ್ದಿ ದೀಪದಲ್ಲಿ ಸೇರಿಸಿ ದೀಪವನ್ನು ಉರಿಸಿದರೆ ಅದು ದೇವರ ಮನೆಯಲ್ಲಿರುವ ಎಲ್ಲ ವಸ್ತುಗಳನ್ನು ತನ್ನ ಬೆಳಕಿನಲ್ಲಿ ತೋರಿಸುತ್ತದೆ. ದೇವರ ಪೂಜೆಯನ್ನು ಮಾಡಲು ಅನುಕೂಲವಾಗುತ್ತದೆ. ಪರಮಾತ್ಮನ ಧ್ಯಾನಾದಿಗಳನ್ನು ಮಾಡಿ ಅವನ ಅನಂತ ಗುಣಗಳನ್ನು ತಿಳಿಯಲೂ ಅನುಕೂಲ ಮಾಡಿ ಸಹಕಾರಿಯಾಗುತ್ತದೆ. ಅದರಂತೆ ಪೂಜ್ಯ ಶ್ರೀರಾಘವೇಂದ್ರ ಗುರುಗಳು, ಬ್ರಹ್ಮಸೂತ್ರಗಳೆಂಬ ಪಾತ್ರೆಯಲ್ಲಿ ನ್ಯಾಯಸುಧಾ ಗ್ರಂಥಸ್ಥವಾದ ವಿಷಯಗಳೆಂಬ ತುಪ್ಪವನ್ನು ಸುರಿದು, ಶ್ರೀಮದ್ಬ್ರಹ್ಮಸೂತ್ರ ಭಾಷ್ಯವೆಂಬ ಬತ್ತಿಯ ತುದಿಯಲ್ಲಿ ತಂತ್ರದೀಪ ಗ್ರಂಥವೆಂಬ ದೀಪವನ್ನು ಹಚ್ಚಿದರು. ಆ ದೀಪವು ಸೂತ್ರಗಳ ಎಲ್ಲ ವಿಷಯಗಳನ್ನೂ ತಿಳಿಸಿ ಕೊಡುತ್ತಾ ಸಜ್ಜನರಿಗೆ ದಾರಿದೀಪದಂತೆ ಬಹಳ ಉಪಕಾರವನ್ನು ಮಾಡಿತು ಎಂದು ಭಾವ.

**ವಿಶೇಷಾಂಶ :** ತಂತ್ರದೀಪವೆಂಬ ಈ ಗ್ರಂಥವು ವಾಚ್ಯವಾಗಿ ತಿಳಿದು ಬರುವ ಅರ್ಥಗಳನ್ನು ಮಾತ್ರವೇ ತಿಳಿಸುವುದಿಲ್ಲ! ಬ್ರಹ್ಮಸೂತ್ರಗಳಿಂದ ಆರ್ಥಿಕವಾಗಿ, ತಾತ್ಪರ್ಯತಃ ತಿಳಿದು ಬರುವ ಅನೇಕ ಅರ್ಥಗಳನ್ನು ತಿಳಿಸಿಕೊಡುತ್ತದೆ ಎಂಬ ಅಭಿಪ್ರಾಯದಿಂದ ಅವಬೋಧಯದರ್ಥಂ ಎಂದು ಕವಿಗಳು ಹೇಳಿರುತ್ತಾರೆ. "ಅವಬೋಧಯಂತಂ ಸೂತ್ರಾರ್ಥಿಕಾರ್ಥಃ ವಿಷಯಕಜ್ಞಾನಮುತ್ಪಾದಯಂತಃ ಅರ್ಥಾಃ ಸೂತ್ರಾರ್ಥಾಃ ಯಸ್ಮಿನ್ ತಂ ಅವಬೋಧಯದರ್ಥಂ ಇತಿ ತದರ್ಥಃ" ಅವಬೋಧಯಂತಃ ಅಂದರೆ ಸೂತ್ರಗಳ ಆರ್ಥಿಕಾರ್ಥಗಳ ಜ್ಞಾನವನ್ನುಂಟು ಮಾಡುವ ಸೂತ್ರಾರ್ಥಗಳು ಎಲ್ಲಿವೆಯೋ, ಅಂತಹಾ ಗ್ರಂಥವನ್ನು ಇಲ್ಲಿ ಅವಬೋದಯದರ್ಥಂ ಎಂದು ಹೇಳಿದ್ದಾರೆ.

ಅಥವಾ ಇಲ್ಲಿ ಅವಬೋಧಯತ್ ಅರ್ಥಂ ಎಂದು ಎರಡು ಪದಗಳನ್ನಿಟ್ಟುಕೊಳ್ಳಬೇಕು. ಅರ್ಥಂ ಅಂದರೆ ಸೂತ್ರಾರ್ಥವನ್ನು ಅವಬೋಧಯತ್ ಅಂದರೆ ತಿಳಿಸಿ ಕೊಡುವ ತಂತ್ರದೀಪ ಎಂಬ ವಿವರಣವನ್ನು ರಚಿಸಿದರು ಎಂದು ಅರ್ಥ. ಇಲ್ಲಿ ಬೇರೆ ವಿಶೇಷಣಗಳನ್ನು ನಪುಂಸಕ ಲಿಂಗವಾಗಿ ಯೋಚಿಸಿಕೊಳ್ಳಬೇಕು. ಈ ಎರಡನೇ ವ್ಯಾಖ್ಯಾನದಲ್ಲಿ 'ಕಲಿತರ್ಧಿಂ' ಎಂಬಲ್ಲಿ ಕಲಿತರ್ಧಿ ಎಂದು ರೂಪವನ್ನಿಟ್ಟುಕೊಳ್ಳಬೇಕು. ಅರ್ಥಗಳು ಅನುಬೋಧ್ಯಮಾನಗಳೇ, ತಿಳಿಸಲ್ಪಡುವುವುಗಳೇ, ಹೊರತು "ತಿಳಿಸುವುವು"ಗಳು (ಅನುಬೋಧಯತ್ = ಅನುಬೋಧಕಗಳು ಅಲ್ಲ ಎಂಬ ಆಕ್ಷೇಪವೂ ಇದರಿಂದ ಪರಿಹೃತವಾಗುತ್ತದೆ.) ಇಲ್ಲಿ ತಂತ್ರದೀಪವನ್ನು ದೀಪವೆಂದು ವರ್ಣಿಸಿದ್ದರಿಂದ ರೂಪಕಾಲಂಕಾರ. ಸೂತ್ರಗಳೇ ಪಾತ್ರ. ನ್ಯಾಯಸುಧೆಯೇ ಆಜ್ಯ (ತುಪ್ಪ) ಸೂತ್ರಭಾಷ್ಯವೇ ಬತ್ತಿ. ಈ ಮೂರು ರೂಪಕಗಳು ಪ್ರಧಾನರೂಪಕಕ್ಕೆ ಸಹಕಾರಿಯಾಗಿವೆ.

## ನ್ಯಾಯಮುಕ್ತಾವಲೀ ಗ್ರಂಥ ರಚನೆ

**ಅವತಾರಿಕೆ :** ಈಗ ಕವಿಗಳು ಶ್ರೀ ರಾಘವೇಂದ್ರ ಗುರುಸಾರ್ವಭೌಮರು ಪೂರ್ವಪಕ್ಷ ಸಿದ್ಧಾಂತ ಪ್ರದರ್ಶನಪೂರ್ವಕವಾಗಿ ಬ್ರಹ್ಮಸೂತ್ರಗಳ ಅಧಿಕರಣಾರ್ಥಗಳನ್ನು ವಿಷದಪಡಿಸುವ ನ್ಯಾಯಮುಕ್ತಾವಲೀ ಎಂಬ ಗ್ರಂಥವನ್ನು ರಚಿಸಿದುದನ್ನು ತಿಳಿಸುತ್ತಾರೆ.

**ಬ್ರಹ್ಮಸೂತ್ರಗಣಕಾಂಚನಸೂತ್ರಾಂ ಕಂಠಭೂಷಹಣಮಶೇಷಬುಧಾನಾಮ್ ।**
**ಬುದ್ಧಿಶಾಣಪರಿಶಾಣವಿದೀಪ್ತಾಂ ನ್ಯಾಯಮೌಕ್ತಿಕತತೀಮತನಿಷ್ಟ ॥೧೧॥**

**ತಾತ್ಪರ್ಯ :** ಬ್ರಹ್ಮಸೂತ್ರ ಸಮೂಹಗಳೆಂಬ ಭಂಗಾರದ ತಂತಿಯಲ್ಲಿ ಪೋಣಿಸಿ, ಶ್ರೀರಾಘವೇಂದ್ರರ ಬುದ್ಧಿಯೆಂಬ ಒರೆಗಲ್ಲಿನಲ್ಲಿ ತಿಕ್ಕಿದ್ದರಿಂದ ಮತ್ತಷ್ಟು ಪ್ರಕಾಶಿಸುತ್ತಿರುವ, ಎಲ್ಲಾ ಪಂಡಿತರ ಕಂಠಗಳಿಗೆ ಅಲಂಕಾರ ಪ್ರಾಯವಾಗಿರುವ ನ್ಯಾಯಮೌಕ್ತಿಕಮಾಲಾ ಎಂಬ ಗ್ರಂಥವನ್ನು ಶ್ರೀರಾಘವೇಂದ್ರ ಯತಿಗಳು ರಚಿಸಿದರು ಎಂಬುದಾಗಿ ಭಾವ.

## ಚಂದ್ರಿಕಾಪ್ರಕಾಶ ನಿರ್ಮಾಣದ ಸಮಾಪ್ತಿ

**ಅವತಾರಿಕೆ :** ಈಗ ಕವಿಗಳು ಶ್ರೀರಾಘವೇಂದ್ರತೀರ್ಥರು ಚಂದ್ರಿಕಾಪ್ರಕಾಶವನ್ನು ಪ್ರಾರಂಭಿಸಿ ಅದು ಮುಗಿಯುವದಕ್ಕಿಂತ ಮುಂಚೆಯೇ ಹಿಂದೆ ಹೇಳಿದಂತೆ ತಂತ್ರದೀಪಿಕಾ, ನ್ಯಾಯಮುಕ್ತಾವಲೀ ಎಂಬ ಎರಡು ಗ್ರಂಥಗಳನ್ನು ರಚಿಸಿ ತದನಂತರದಲ್ಲಿ ಚಂದ್ರಿಕಾಪ್ರಕಾಶವನ್ನು ಸಮಾಪ್ತಿಗೊಳಿಸಿದರು ಎಂದು ವರ್ಣಿಸುತ್ತಾರೆ.

**ಚಂದ್ರಿಕಾವಿವರಣಂ ನ ಸಮಾಪ್ತಂ ಯಾವದೇತದುಭಯಂ ವಿರಚಯ್ಯ ।**
**ನ್ಯಾಯಗರ್ಭನಯವನ್ನಯಶಾಲೀ ತತ್ಸಮಾಪಯದನಂತರಮಾರ್ಯಃ ॥೧೨॥**

**ತಾತ್ಪರ್ಯ :** ಶ್ರೀರಾಘವೇಂದ್ರ ಗುರುಸಾರ್ವಭೌಮರು ಶಾಸ್ತ್ರಮರ್ಯಾದೆಯನ್ನು ಬಹುವಾಗಿ ಅರಿತವರಾಗಿದ್ದರು. ಅವರು ಶ್ರೀಮದ್ ವ್ಯಾಸರಾಜ ಗುರುಸಾರ್ವಭೌಮರಿಂದ ವಿರಚಿತವಾದ ತಾತ್ಪರ್ಯಚಂದ್ರಿಕಾ ಗ್ರಂಥಕ್ಕೆ ವಿವರಣಾತ್ಮಕವಾದ ವ್ಯಾಖ್ಯಾನ ಗ್ರಂಥವನ್ನು ಬರೆಯಲು ಪ್ರಾರಂಭ ಮಾಡಿದ್ದರು. ಆದರೆ ಅದರ ಟಿಪ್ಪಣಿಯನ್ನು ಬರೆಯುತ್ತಿರುವಾಗಲೇ ಗುರುಗಳು ತಂತ್ರದೀಪಿಕಾ ಮತ್ತು ನ್ಯಾಯಮುಕ್ತಾವಲೀ ಎಂಬ ಎರಡು ಗ್ರಂಥಗಳನ್ನು ಬರೆದು ಮುಗಿಸಿದರು. ಅನಂತರದಲ್ಲಿ ಶಾಸ್ತ್ರಮರ್ಯಾದೆಯನ್ನು ಅನುಸರಿಸುವ ಅಧಿಕರಣಗಳ ಪೂರ್ವಪಕ್ಷ ಮತ್ತು ಸಿದ್ಧಾಂತ ಯುಕ್ತಿಗಳಿಂದ ಕೂಡಿರುವ ತಾತ್ಪರ್ಯಚಂದ್ರಿಕೆಗೆ ತಾತ್ಪರ್ಯಚಂದ್ರಿಕಾ ಪ್ರಕಾಶವೆಂಬ ವಿವರಣಾತ್ಮಕ ಟಿಪ್ಪಣೀ ಗ್ರಂಥವನ್ನು ಸಮಾಪ್ತಿಗೊಳಿಸಿದರು.

## ಶ್ರೀರಾಘವೇಂದ್ರ ಗುರುಗಳು ಬಹಳ ಗ್ರಂಥಗಳನ್ನು ರಚಿಸಲು ಕಾರಣ

**ಅವತಾರಿಕೆ :** ಈಗ ಕವಿಗಳು ಅನೇಕ ಗ್ರಂಥಗಳನ್ನು ರಚಿಸಲು ಕಾರಣವನ್ನು ತಿಳಿಸುತ್ತಾರೆ.

**ಭಾವ್ಯಸಂಶಯಮಹೋ ಗುರುವಂಶೇ ದರ್ಶನಶ್ರುತಿಪರಸ್ಸುಮತೀಂದ್ರಃ ।**
**ತಸ್ಯ ಸಾರ್ಥಕಮಿದಂ ಸಕಲಂ ಸ್ಯಾದಿತ್ಯವೇತ್ಯ ಕೃತವಾನ್ ಕೃತಿಸಾರ್ಥಮ್ ॥೧೩॥**

**ತಾತ್ಪರ್ಯ :** ಶ್ರೀರಾಘವೇಂದ್ರತೀರ್ಥರು ಇಷ್ಟೊಂದು ಗ್ರಂಥಗಳನ್ನು ಏಕೆ ರಚಿಸಿದರು ಎಂಬುವ ಪ್ರಶ್ನೆಗೆ ಉತ್ತರವನ್ನು ನೀಡುತ್ತಾ ಕವಿಗಳು ಈ ರೀತಿಯಾಗಿ ಹೇಳುತ್ತಾರೆ. "ಮುಂದೆ ತಮ್ಮ ವಂಶದಲ್ಲಿ ಶ್ರೀಸುಮತೀಂದ್ರತೀರ್ಥರೆಂಬುವರು ಬರುವವರಿದ್ದಾರೆ. ಅವರು ಮಧ್ವಶಾಸ್ತ್ರ ಗ್ರಂಥಗಳ ಅವಲೋಕನ, ಶ್ರವಣಾದಿಗಳಲ್ಲೇ ಆಸಕ್ತರಾಗಿರುತ್ತಾರೆ. ಅವರಿಗೆ ಈ ಎಲ್ಲ ಗ್ರಂಥಗಳ ರಚನೆಯು ಸಾರ್ಥಕವಾಗುತ್ತದೆ. ಶ್ರೀಸುಮತೀಂದ್ರ ತೀರ್ಥರು ತಮ್ಮ ಪೂರ್ವಾಶ್ರಮ ಸದ್ವಂಶದಲ್ಲಿ ಜನಿಸಿ, ತಮ್ಮ ಸಂಸ್ಥಾನ ಪರಂಪರೆಯಲ್ಲಿ ಬರಲಿರುವರೆಂಬ ವಿಷಯದಲ್ಲಿಯೂ, ಆ

ಮಹಾಮಹಿಮರು ಶ್ರೀರಾಘವೇಂದ್ರ ತೀರ್ಥರ ಎಲ್ಲ ಸ್ವತಂತ್ರ ಕೃತಿಗಳು, ವ್ಯಾಖ್ಯಾನಗಳು, ಟಿಪ್ಪಣಿಗಳನ್ನು ಅವಲೋಕನ ಮಾಡಿ, ಶ್ರವಣ ಮಾಡಿ, ತಿಳಿದು ಧನ್ಯರಾಗುವರು" ಎಂಬ ಭವಿಷ್ಯದ ದೃಷ್ಟಿಯಿಂದ ಶ್ರೀರಾಘವೇಂದ್ರ ಗುರುಸಾರ್ವಭೌಮರು ಇಷ್ಟೊಂದು ಕೃತಿಗಳನ್ನು ರಚಿಸಿರುವರು. ಸರ್ವಜ್ಞರಾದ ಶ್ರೀರಾಘವೇಂದ್ರ ಗುರುವರ್ಯರಿಗೆ ಈ ರೀತಿಯಾದ ನಿಶ್ಚಿತವಾದ ಭವಿಷ್ಯದ ಜ್ಞಾನವು ಇತ್ತು. ಈ ರೀತಿಯಾಗಿ ಗುರು ರಾಘವೇಂದ್ರರ ಮಹಿಮೆಯು ಅದ್ಭುತವು. "ಅಪರೋಕ್ಷೀಕೃತಶ್ರೀಶಃ" ಎಂಬುದಾಗಿ ಶ್ರೀಗುರುರಾಜರ ಸ್ತೋತ್ರದಲ್ಲಿ ಶ್ರೀಮದಪ್ಪಣಾಚಾರ್ಯರು ಸ್ತುತಿಸಿರುವಂತೆ ಅಪರೋಕ್ಷ ಜ್ಞಾನಿವರೇಣ್ಯರಾದ ಶ್ರೀರಾಘವೇಂದ್ರ ಗುರುಸಾರ್ವಭೌಮರಿಗೆ ಭೂತ, ಭವಿಷ್ಯತ್, ಕಾಲಗಳ ದಿವ್ಯಜ್ಞಾನವು ಇತ್ತು ಎಂಬುದಕ್ಕೆ ಇದು ಒಂದು ಉದಾಹರಣೆಯಾಗಿದೆ. ಇಂದಿಗೂ ಸಹಾ ಅಸಂಖ್ಯಾತ ಭಕ್ತರ ಪಾಪರಾಶಿಗಳನ್ನೆಲ್ಲಾ ಪರಿಶೀಲಿಸಿ ಅವರವರ ಭಕ್ತಿಗೆ ತಕ್ಕುದಾದ ಪರಿಹಾರವನ್ನು ನೀಡಿ, ಅನುಗ್ರಹಿಸುತ್ತಿರುವುದು ಎಲ್ಲರಿಗೂ ವೇದ್ಯವಾದ ವಿಷಯವೇ ಆಗಿದೆ.

## ಶಿಷ್ಯರು ಮಾಡಿಸಿದ ಉತ್ಸವ

**ಅವತಾರಿಕೆ :** ಈಗ ಕವಿಗಳು ವರ್ಷದ ಆರು ಋತುಗಳಲ್ಲಿಯೂ ಶಿಷ್ಯರುಗಳು ತಮಗೆ ಮಾಡಿಸಿದ ಉತ್ಸವಗಳನ್ನು ಭಗವಂತನಿಗೆ ಅರ್ಪಿಸಿ ಜನರನ್ನು ಸಂತೋಷಪಡಿಸಿದುದನ್ನು ವರ್ಣಿಸಿದರು.

**ರಾಘವೇಂದ್ರಯತಿರಾಡಸಮಾನೈರುತ್ಸವೈರ್ಬಹುವಿಧೈರುಚಿತಜ್ಞಃ ।**
**ಕಾರಿತೈ ಋತುಷು ಷಟ್ಸ್ವಪಿ ಶಿಷ್ಯೈರ್ಲೋಕಮಂಡಲಮನಂದಯದೇಷಃ ॥೧೪॥**

**ತಾತ್ಪರ್ಯ :** ಶ್ರೀರಾಘವೇಂದ್ರ ಯತಿಗಳು ಆಯಾ ಸಮಯಗಳಲ್ಲಿ ಮಾಡಬೇಕಾದ ಕರ್ತವ್ಯಗಳನ್ನೆಲ್ಲಾ ಅರಿತವರಾಗಿದ್ದರು. ಅವರಿಗೆ ಅಸಾಧಾರಣವಾದ ಅನೇಕ ಮಂದಿ ಶಿಷ್ಯರುಗಳಿದ್ದರು. ಅವರುಗಳು ಆಯಾ ಋತುಗಳ ಸಮಯದಲ್ಲಿ ಅಸಾಧಾರಣವಾದ ರೀತಿಯಿಂದ ಅನೇಕ ರೀತಿಯ ಉತ್ಸವಗಳನ್ನು ಶ್ರೀರಾಘವೇಂದ್ರತೀರ್ಥರ ಮೂಲಕ ನಡೆಸಿದರು. ಶ್ರೀಗುರುರಾಜರು ಆಯಾ ಋತುಗಳ ಆರಂಭದ ಉತ್ಸವಗಳನ್ನು ಶಿಷ್ಯರಿಂದ ಸೇವಿತರಾಗಿ ಮಾಡುತ್ತಾ ಅವೆಲ್ಲವನ್ನೂ ಶ್ರೀಹರಿಗೆ ಸಮರ್ಪಿಸಿ ಜನರನ್ನು ಆನಂದಪಡಿಸಿದರು.

## ವಸಂತ ಋತುವರ್ಣನೆ

**ಅವತಾರಿಕೆ :** ಚೈತ್ರಮಾಸದಲ್ಲಿ ಶ್ರೀರಾಮನವಮೀ ಮಹೋತ್ಸವದಲ್ಲಿ ವಸಂತ ಋತುವಿನ ಆಗಮನವನ್ನು ಹದಿನಾಲ್ಕು ಶ್ಲೋಕಗಳಿಂದ ವರ್ಣಿಸುತ್ತಾರೆ.

**ಶ್ರೀರಾಮದೇವಸ್ಯ ಮಹೋತ್ಸವೇ ಹರಿಂ ವಿಲೋಕ್ಯ ತಂ ಸೇವಿತುಮಾದರಾದಿವ ।**
**ಮನೋಜ್ಞಮಾಕಂದಮರಂದಧಾರಯಾ ಕೃತಾಭಿಷೇಕಃ ಸುರಭಿಃ ಸಮಾಯಾಯೌ ॥೧೫॥**

**ತಾತ್ಪರ್ಯ :** ಭಗವಂತನ ಸೇವೆಗಾಗಿ ಬರುವವರು ಸ್ನಾನ ಮಾಡಿ ಶುಚಿಯಾಗಿ ಬಂದು ಪೂಜಿಸುತ್ತಾರೆ. ಅದರಂತೆ ಶ್ರೀಮೂಲರಾಮಚಂದ್ರದೇವರ ರಾಮನವಮಿ ಮಹೋತ್ಸವವು ಸಮೀಪಿಸಿದಾಗ, ಆ ಮಹಾಮಹಿಮೋಪೇತ ಪರಮಾತ್ಮನನ್ನು ನೋಡಿ ಭಕ್ತಿಯಿಂದ ಸೇವೆ ಮಾಡುವುದಕ್ಕೋಸ್ಕರವಾಗಿಯೇ ಎಂಬಂತೆ ವಸಂತಋತುವು ಆಗ ತಾನೆ ಅರಳಿರುವ ಮಾವಿನ ಹೂವುಗಳ ಮಕರಂದ ರಸಪ್ರವಾಹದಲ್ಲಿ ಸ್ನಾನ ಮಾಡಿ, ಹೂವಿನ ರಸದ ಸುವಾಸನೆಯನ್ನು ಹೊಂದಿ ತಂಪಾಗಿ ಬೀಸುತ್ತಿರುವ ಗಾಳಿಯಿಂದ ಸಹಿತವಾಗಿ ಬಂದಿತು. (ವಸಂತ ಋತುವು ಆರಂಭವಾಯಿತು). ಉತ್ಪ್ರೇಕ್ಷಾಲಂಕಾರ.

**ಅವತಾರಿಕೆ :** ವಸಂತ ಋತುವಿನಲ್ಲಿ ಬೀದಿಯ ಮಾರ್ಗಗಳು ಧೂಳಿಲ್ಲದೆ ಸ್ವಚ್ಛವಾಗಿರುವುದನ್ನು ಕವಿಗಳು ಈಗ ವರ್ಣಿಸುತ್ತಾರೆ.

**ಮಧುಸ್ತದಾ ಮನ್ಮಥಸಾರ್ವಭೌಮೇ ವಿನಿರ್ಗತೇ ಮಾನಭೃತಾಂ ಜಯಾಯ ।**
**ಪ್ರಸೂನಮಾಧ್ವೀಕಕಣಸೇಕತೋಽಸಾವರಣ್ಯವೀಥೀರಕರೋದಪಾಂಸೂಃ ॥೧೬॥**

**ತಾತ್ಪರ್ಯ :** ರಾಜ್ಯದ ಪ್ರಭುವು ಹೊರಗೆ ಹೊರಟಾಗ ಪ್ರಜೆಗಳು (ಪಟ್ಟಣಿಗರು) ಮನೆಯ ಮುಂದಿನ ರಸ್ತೆಗಳನ್ನು ಗುಡಿಸಿ, ನೀರು ಚುಮುಕಿಸಿ, ಧೂಳು ಹಾರದಂತೆ ಸ್ವಚ್ಛವಾಗಿಡುತ್ತಾರೋ, ಅದೇ ರೀತಿಯಲ್ಲಿ ವಸಂತ ಋತುವಿನಲ್ಲಿ ಮನ್ಮಥನೆಂಬ ಚಕ್ರವರ್ತಿಯು ಮಾನಿನಿಯರ ಪ್ರಣಯ ಕೋಪವನ್ನು ಶಾಂತಗೊಳಿಸಿ ಅವರುಗಳು ತಮ್ಮ ತಮ್ಮ ವಲ್ಲಭರ ಜೊತೆಯಾಗಲು ಉತ್ಸಾಹವನ್ನು ಉಂಟುಮಾಡಲು ಹೊರಗೆ ಹೊರಟನು. ಆಗ ಮನ್ಮಥನ ಸೇವಕನಾದ ವಸಂತನು ತನ್ನ ರಾಜನು ಹೋಗುವ ಕಾಡು ದಾರಿಗಳನ್ನೆಲ್ಲಾ ಹೂವುಗಳ ಮಕರಂದವನ್ನು ಚುಮುಕಿಸಿ ಆ ಮಾರ್ಗದಲ್ಲಿ ಧೂಳು ಇಲ್ಲದಂತೆ ಮಾಡಿ ಸ್ವಚ್ಛಗೊಳಿಸಿದನು.

**ಅವತಾರಿಕೆ :** ಈಗ ಕವಿಗಳು ವಸಂತ ಋತುವಿನಲ್ಲಿ ಗಾಳಿಯು ಅಂಬೆಗಾಲಿಡುವ ಮಗುವಿನ ನಡಿಗೆಯಂತೆ ಇರುತ್ತದೆ ಎಂಬುದಾಗಿ ವರ್ಣಿಸುತ್ತಾರೆ.

**ಶನೈಃಶ್ಚಂದನಭೂಧರಾಗ್ರಾನ್ಮರುತ್ಕುಮಾರಸ್ತರುಪಲ್ಲವೇಷು ।**
**ವಿನ್ಯಸ್ಯ ಪಾದಂ ಕುಸುಮೈಃ ಸಹಾಸಃ ಸಚಂಕ್ರಮೋಽಭೂತ್ ಭ್ರಮರಪ್ರಣಾದಃ ॥೧೭॥**

**ತಾತ್ಪರ್ಯ :** ಚಿಕ್ಕ ಮಗುವು ನೆಲದ ಮೇಲೆ ಹೆಜ್ಜೆಯನ್ನಿಟ್ಟು ನಗುತ್ತಾ ಸದ್ದು ಮಾಡುತ್ತಾ ತೊದಲು ನುಡಿಗಳನ್ನು ಆಡುತ್ತಾ ಅಂಬೆಗಾಲಿನಿಂದ ನಡೆಯುತ್ತಾ ಬರುತ್ತದೆ. ಅದೇ ರೀತಿಯಲ್ಲಿ ವಸಂತ ಋತುವಿನ ಎಳೆಯ ಗಾಳಿಯು ಚಂದನಭರಿತವಾದ ಮಲಯಪರ್ವತದಿಂದ

ಸುವಾಸನೆಯನ್ನು ಹೊತ್ತು ಮೆಲ್ಲಮೆಲ್ಲನೆ ಸಂಚರಿಸುತ್ತಾ ಬರುತ್ತದೆ. ಮರಗಳ ಚಿಗುರೆಲೆಗಳ ಮೇಲೆ ಕಾಲಿಟ್ಟುಕೊಂಡು ಬರುವ ರೀತಿಯಲ್ಲಿ ಮೃದುವಾಗಿ ಬೀಸುತ್ತದೆ. ಹೂವುಗಳ ಮೇಲೆ ಬೀಳಿಸಿಕೊಂಡು ಸುವಾಸನೆಯನ್ನು ಹೊತ್ತು ಬರುತ್ತಿರುವಾಗ ನಗುತ್ತಿರುವಂತೆ ಕಾಣಿಸುತ್ತದೆ. ವಸಂತ ಕಾಲದಲ್ಲಿ ದುಂಬಿಗಳು ಧ್ವನಿಗೈಯ್ಯುತ್ತಿರುವಾಗ ಮಂದಮಾರುತವು ಧ್ವನಿಮಾಡುತ್ತಿರುವಂತೆ ತೋರುತ್ತದೆ. ಮರುತ ಕುಮಾರನು ನಿಂತು ನಿಂತು ಬರುತ್ತಿರುವಾಗ ಮಗುವು ಅಂಬೆಗಾಲಿಡುತ್ತಾ ಬರುತ್ತಿರುವಂತೆ ಭಾಸವಾಗುತ್ತದೆ. (ವಸಂತ ಋತುವಿನಲ್ಲಿ ಮೆಲ್ಲಗೆ ನವಿರಾಗಿ ಗಾಳಿ ಬೀಸುತ್ತದೆ. ಹೂವುಗಳು ಅರಳುತ್ತವೆ. ದುಂಬಿಗಳು ಝೇಂಕರಿಸುತ್ತವೆ ಎಂಬುದಾಗಿ ಭಾವ.) ಇಲ್ಲಿ ರೂಪಾಲಂಕಾರ, ಚಿಕ್ಕ ಮಗುವಿನ ಸ್ವಭಾವದ ಧ್ವನಿ ಎರಡೂ ಇವೆ.

**ಅವತಾರಿಕೆ** : ಈಗ ಕವಿಗಳು ವಸಂತ ಋತುವಿನ ಹೆಣ್ಣು ಕೋಗಿಲೆಯ ಇಂಚರವನ್ನು ವರ್ಣಿಸುತ್ತಾರೆ.

**ವಲ್ಲರೀಷು ಮಲಯಾಚಲಾನಿಲಸ್ಪಂದಿತಾಸು ಪರಪುಷ್ಟಭಾಮಿನೀ ।**
**ಕಾಮದಿಗ್ವಿಜಯಕಾಹಲನಾದಭ್ರಾಂತಿದಂ ನಿನದಮಾತನುತೇ ಸ್ಮ ॥೧೮॥**

**ತಾತ್ಪರ್ಯ** : ವಸಂತ ಋತುವಿನಲ್ಲಿ ಮಲಯ ಮಾರುತವು ಬೀಸುವಾಗ ಅರಳಿದ ಹೂವುಗಳಿಂದ ಬಾಗಿರುವ ಹೂವಿನ ಗೊಂಚಲುಗಳು ಅತ್ತಿತ್ತ ಓಲಾಡುತ್ತಾ ಇರುತ್ತಿದ್ದವು. ಹೆಣ್ಣು ಕೋಗಿಲೆಗಳು ಅಲ್ಲಿಯೇ ಕುಳಿತು "ಕಾಮನು ದಿಗ್ವಿಜಯಕ್ಕಾಗಿ ಹೊರಟ್ಟಿದ್ದಾನೆ' ಎಂಬ ಸಂಭ್ರಮದ ಉತ್ಸವದ ಸಮಯದಲ್ಲಿ ಊದುವ ಕಹಳೆಯ ಧ್ವನಿಯೇ ಇದಾಗಿರಬೇಕು ಎಂಬ ರೀತಿಯ ಭ್ರಾಂತಿಯನ್ನು ಉಂಟುಮಾಡುವ ರೀತಿಯಲ್ಲಿ ಕುಹೂ ಕುಹೂ ಎಂಬ ಪಂಚಮ ರಾಗವನ್ನು ಹಾಡುತ್ತಿದ್ದವು.

**ಅವತಾರಿಕೆ** : ಕವಿಗಳು ವಸಂತ ಋತುವಿನಲ್ಲಿ ಪ್ರಾದುರ್ಭವಿಸುವ ಚೈತ್ರಮಾಸದ ವರ್ಣನೆಯನ್ನು ಮಾಡುತ್ತಾರೆ.

**ಮಲ್ಲಿಕಾಸುಮಸಮುತ್ಥರಜೋಭಿರ್ವಲ್ಲಿಕಾಭಿರಭಿತಃ ಕೃತಭೂಷಃ ।**
**ಮಾರವೀರಶರಧಿರ್ಮಧುಮಾಸಃ ಪ್ರಾದುರಾಸ ಪಥಿಕಾಸುದುರಾಸಃ ॥೧೯॥**

**ತಾತ್ಪರ್ಯ** : ಮಲ್ಲಿಗೆ ಹೂವಿನ ಧೂಳುಗಳಿಂದ ಕೂಡಿದ ಬಳ್ಳಿಗಳಿಂದ ಅಲಂಕೃತವಾದ, ಅದೇ ರೀತಿಯಲ್ಲಿ ಪ್ರಿಯರಾದವರನ್ನು ಅಗಲಿ ಪ್ರವಾಸದಲ್ಲಿರುವ ವಿರಹಿಗಳನ್ನು ದುಃಖಪಡಿಸುವ, ಮನ್ಮಥನ ಬತ್ತಳಿಕೆಯಂತೆ ಇರುವ ಚೈತ್ರಮಾಸವು ಆಗ ಪ್ರಾರಂಭವಾಯಿತು. ಮನ್ಮಥನ ಬಾಣಗಳಾದ ಹೂವುಗಳಿಂದ ಕೂಡಿರುವ ಚೈತ್ರಮಾಸವು ವಿರಹಿಗಳಿಗೆ ಉದ್ದೀಪಕವಾಗಿತ್ತು ಎಂದು ತಾತ್ಪರ್ಯ.

**ಅವತಾರಿಕೆ** : ವಸಂತ ಋತುವಿನ ಆಗಮನ ಆಯಿತೆಂದು ಕೋಗಿಲೆಗಳು ಘೋಷಿಸುತ್ತಿರುವುದನ್ನು ಕವಿಗಳು ಈಗ ವರ್ಣಿಸುತ್ತಾರೆ.

**ಆಗತೋऽಜನಿ ಮಧುರ್ಮಧುರಶ್ರೀರ್ಮಾನಮಾತ್ರ ನನು ಮಂದಸಮೀರಃ ।**
**ಹಂತ! ಪಾಂಥಜನ! ನ ತ್ಯಜ ಕಾಂತಾಮಿತ್ಯಘುಷ್ಯದಧಿಕಂ ಕಲಕಂಠಃ ॥೨೦॥**

**ತಾತ್ಪರ್ಯ :** "ಮನವನ್ನು ಸೂರೆಗೊಳ್ಳುವ ಕಾಂತಿಭರಿತನಾದ ವಸಂತನು ಬಂದನು. ಎಳೆಯ ತಂಗಾಳಿ ಸುವಾಸನೆ ಭರಿತವಾಗಿ ಬೀಸುತ್ತಿರುವುದೇ ಇದಕ್ಕೆ ಸಾಕ್ಷಿಯಾಗಿದೆ. ಅಯ್ಯೋ ಪಾಪ ! ಬಡಪಾಯಿಯಾದ ವಿರಹಿಗಳೇ! ನೀವೆಲ್ಲರೂ ನಿಮಗೆ ಅತ್ಯಂತ ಮನಃಪ್ರಿಯಳಾದ ಕಾಂತೆಯರನ್ನು ಅಗಲಿ ದೂರಪ್ರವಾಸವನ್ನು ಮಾಡುತ್ತಾ ಇರಬೇಡಿರಿ." ಈ ರೀತಿಯಾಗಿ ಕೋಗಿಲೆಯು ವಸಂತಋತುವಿನಲ್ಲಿ ಹಾಡುತ್ತಾ ಘೋಷಿಸುತ್ತಿರುವಂತೆ ಭಾಸವಾಗುತ್ತಿತ್ತು ಎಂದು ಕಾವ್ಯಲಿಂಗ ಮತ್ತು ಉತ್ಪ್ರೇಕ್ಷಾಲಂಕಾರದಿಂದ ವರ್ಣಿಸಿದ್ದಾರೆ.

**ಅವತಾರಿಕೆ :** ಈಗ ಕವಿಗಳು ವಸಂತ ಋತುವಿನಲ್ಲಿ ಹೂವುಗಳಲ್ಲಿ ಮಕರಂದದ ಸಮೃದ್ಧಿಯನ್ನು ವರ್ಣಿಸುತ್ತಾರೆ.

**ಚಂಚಲದ್ಯುತಿಸಮದ್ಯುತಿಚಂಚತ್‌ಪಲ್ಲವಾವಲಿಪರೀತವನೇಷು ।**
**ಸ್ಯಂದಮಾನಮಧುವರ್ಷಿಷು ಕಾಮಂ ವರ್ಷವಾಸರಮಹಾನ್ಯನುಚಕ್ರುಃ ॥೨೧॥**

**ತಾತ್ಪರ್ಯ :** ವಸಂತ ಋತುವಿನಲ್ಲಿ ಎಲ್ಲ ಮರಗಳಲ್ಲಿ ಚಿಗುರುಗಳು ಕೊನರಿದ್ದವು. ಅವುಗಳು ಮಿಂಚಿನಂತೆ ಥಳಥಳನೆ ಹೊಳೆಯುತ್ತಾ ಗಾಳಿಯಿಂದ ಚಲಿಸುತ್ತಿದ್ದವು. ಮೋಡಗಳಂತಿರುವ ಮರಗಳಲ್ಲಿ ಹೂವುಗಳು ಅರಳಿದ್ದು, ಅವುಗಳಲ್ಲಿರುವ ಮಕರಂದವು ಮಳೆಯ ಧಾರೆಯಂತೆ ಸುರಿಯುತ್ತಿತ್ತು. ಈ ರೀತಿಯಾಗಿ ಆ ವಸಂತ ಋತುವಿನ ಹಗಲುಗಳು ಮಿಂಚು ಮತ್ತು ಧಾರಕಾರ ಮಳೆಯಿಂದ ಕೂಡಿದ ಹಗಲುಗಳಂತೆ ಕಾಣಿಸುತ್ತಿದ್ದವು. (ಇಲ್ಲಿ ಮಿಂಚಿನ ಸ್ಥಾನದಲ್ಲಿ ಚಲಿಸುತ್ತಿರುವ ಚಿಗುರೆಲೆಗಳ ಸಾಲು, ಮೋಡಗಳ ಸ್ಥಾನದಲ್ಲಿ ಕಾಡುಗಳು, ನೀರಿನಸ್ಥಾನದಲ್ಲಿ ಮಕರಂದ ರಸಗಳು ಇವುಗಳನ್ನು ಇಟ್ಟುಕೊಳ್ಳಬೇಕು. ಹೀಗೆ ಮಳೆಗಾಲದ ಗುಣಗಳು ಕಂಡು ಬರುವುದರಿಂದ ವಸಂತಕಾಲದ ಹಗಲುಗಳು ಮಳೆಗಾಲದ ಹಗಲಿನಂತಿದ್ದವು ಎಂಬುದಾಗಿ ವರ್ಣಿಸಿದ್ದಾರೆ. ಅತಿಶಯೋಕ್ತಿ ಅಲಂಕಾರ = ಅತ್ರ ವಿದ್ಯುತ್ ಸ್ಥಾನೇ ಪಲ್ಲವಾವಲೀ, ಮೇಘಸ್ಥಾನೇ ವನಾನಿ, ಜಲಸ್ಥಾನೇ ಪುಷ್ಪರಸಃ, ಇತಿ ವರ್ಷಾಕಾಲಧರ್ಮವತ್ವಾತ್ ವರ್ಷಕಾಲದಿವಸಾನ್ ಅನುಚಕ್ರುಃ–ಇತಿಭಾವಃ–ಸಂಸ್ಕೃತವ್ಯಾಖ್ಯಾ)

**ಅವತಾರಿಕೆ :** ಈಗ ವಸಂತ ಋತುವಿನಲ್ಲಿ ದುಂಬಿಗಳ ಸಾಲನ್ನು ಮನ್ಮಥನು ಕಳುಹಿಸಿರುವ ಕಾಳಸರ್ಪಕ್ಕೆ ಸಮಾನವಾಗಿ ವರ್ಣಿಸುತ್ತಾರೆ.

**ಮಾರುತಾಭಿಮುಖಷಟ್‌ಪದಮಂಡಲ್ಯಾಕೃತಿಃ ಸ್ಮೃತಿಭುವಾ ಪಥಿಕೇಷು ।**
**ಅಂತಕಂ ಮುಧುಯತಾऽದಿದಿಶೇ ಕಿಂ ಕುಂಡಲೀ ಕೃತಿವಹಃ ಕುಟಿಲೇನ ॥೨೨॥**

**ತಾತ್ಪರ್ಯ :** ವಸಂತಋತುವಿನಲ್ಲಿ ಗಾಳಿಗೆ ಎದುರಾಗಿ ದುಂಬಿಗಳು ಮಂಡಲಾಕಾರವಾಗಿ ಬರುತ್ತಿದ್ದವು. ದುಂಬಿಗಳ ಕುಂಡಲಾಕಾರವಾದ ಸಮೂಹವನ್ನು ನೋಡಿದಾಗ ಮನ್ಮಥನು ವಿರಹಿಗಳಾದ ಪುರುಷರನ್ನು ಒಮ್ಮೆಲೇ ಕೊಲ್ಲುವುದಕ್ಕಾಗಿ, ಅಪ್ಪಣೆ ಮಾಡಿರುವ ಕರಿಯ ಬಣ್ಣದ ಕುಂಡಲಾಕಾರವಾದ ಸರ್ಪವು ಇದು, ಇದು ಮುಂದೆ ಬರುತ್ತಿದೆ ಎಂಬ ಸಂದೇಹವುಂಟಾಗುತ್ತಿತ್ತು. ಈ ಮನ್ಮಥನಾದರೋ ಯಮನಂತೆ ನಿಧಾನವಾಗಿ ಕೊಲ್ಲುವವನಲ್ಲ. ಆದುದರಿಂದ ಪಥಿಕರ ಪ್ರಾಣಹರಣ ವಿಷಯದಲ್ಲಿ ಇವನು ನಿಧಾನವಾಗಿ ಕೊಲ್ಲುವ ಯಮನನ್ನು ಅಪ್ರಯೋಜಕನನ್ನಾಗಿ ಮಾಡಿದ್ದಾನೆ. ಇವನು ಯಮನಿಗಿಂತ ಕುಟಿಲ, ಕ್ರೂರ. ಅವನು ಕಳುಹಿಸಿರುವ ಕಾಳಸರ್ಪವೇ ಇದು ಎಂಬುದಾಗಿ ದುಂಬಿಗಳ ಸಮೂಹವು ಕಾಣಿಸುತ್ತಿತ್ತು. ದುಂಬಿಗಳ ಸಮೂಹವು ವಿರಹಿಗಳಿಗೆ ಉದ್ದೀಪಕವಾಗಿತ್ತು ಎಂದು ಅಭಿಪ್ರಾಯ. ಇಲ್ಲಿ ಮನ್ಮಥನು ಯಮನಿಗಿಂತ ಕ್ರೂರ–ಕುಟಿಲ ಎಂಬುದನ್ನು ಸಮರ್ಥಿಸಲು "ಅಂತಕಂ ಮಧುಯುತಾ" ಎಂಬ ಸಾಭಿಪ್ರಾಯ ವಿಶೇಷಣವನ್ನು ಕೊಟ್ಟಿರುವುದರಿಂದ ಪರಿಕರಾಲಂಕಾರ. "ಅಲಂಕಾರಃ ಪರಿಕರಃ ಸಾಭಿಪ್ರಾಯೆ, ವಿಶೇಷಣೇ" ಎಂಬುದಾಗಿ ಅದರ ಲಕ್ಷಣ.

**ಅವತಾರಿಕೆ :** ಶ್ರೀರಾಘವೇಂದ್ರ ಗುರುಸಾರ್ವಭೌಮರಂತಹ ಮಹಾಪುರುಷರ ಸೇವೆ ಮಾಡಿದ್ದರಿಂದಲೇ ವಸಂತಸಮಯಕ್ಕೆ ಅಂತಹಾ ಸಂಪತ್ತು ಮತ್ತು ಶೋಭೆ ಉಂಟಾಯಿತೆಂದು ಈಗ ಕವಿಗಳು ವರ್ಣಿಸುತ್ತಿದ್ದಾರೆ.

**ಪುಷ್ಪಪಲ್ಲವಮುಖೇನ ಮಹಾಂತಂ ಪರ್ಯುಪಾಸ್ತ ಸಮಯಃ ಪುರುಷಂ ಯತ್ ।**
**ಮಾಧವ ಶ್ರೀಯಮಗಾನ್ಮಹನೀಯಾಮಪ್ರಿಯಾಮಯಮಯೋಗಿಜನಸ್ಯ ॥೨೩॥**

**ತಾತ್ಪರ್ಯ :** ವಸಂತ ಋತುವಿನಲ್ಲಿ ಒದಗಿದ ಹೂವು ಚಿಗುರೆಲೆ ಹಣ್ಣು ಮುಂತಾದವುಗಳಿಂದ ಶ್ರೀರಾಘವೇಂದ್ರ ಗುರುವರ್ಯರು ದೇವರನ್ನು ಪೂಜಿಸಿದರು. ಹೀಗೆ ಗುರುರಾಜರಿಗೆ ಪೂಜೆಗೆ ಬೇಕಾದ ಪುಷ್ಪಾದಿಗಳನ್ನು ಒದಗಿಸಿ ವಸಂತ ಋತುವು ಮಹಾಪುರುಷರೊಬ್ಬರನ್ನು ಸೇವಿಸಿತು. ಪಾಪಕ್ಕೆ ಹೇಗೋ ಹಾಗೇ ಅತ್ಯುತ್ಕಟವಾದ ಪುಣ್ಯಕ್ಕೆ ಈಗಲೇ ಫಲ ಸಿಗುತ್ತದೆಯೆಂದು ಪ್ರಸಿದ್ಧವಾಗಿದೆ. ಮಹಾಪುರುಷರಾದ ಶ್ರೀರಾಘವೇಂದ್ರ ಗುರುಗಳನ್ನು ಸೇವಿಸಿದ್ದಕ್ಕಾಗಿ ಕೂಡಲೇ ಫಲವು ಸಿಗಬೇಕಷ್ಟೆ! ವಸಂತ ಋತುವಿನ ಈ ಸಮಯವು ಗುರುರಾಜರ ಸೇವೆಯನ್ನು ಮಾಡಿದುದರಿಂದ ಶ್ರೇಷ್ಠವಾದ ಸಂಪತ್ತನ್ನೂ ಶೋಭೆಯನ್ನೂ ಪಡೆಯಿತು. ಈ ಶೋಭೆಯು ಯೋಗಿಗಳಲ್ಲದವರಿಗೆ ಅಹಿತವೂ ಆಗಿತ್ತು. ಶ್ರೀರಾಘವೇಂದ್ರ ಗುರುಗಳಂತಹ ಯೋಗಿಗಳಿಗೆ ಮಾತ್ರ ಈ ಸಾತ್ವಿಕವಾದ ವಸಂತನ ಪುಷ್ಪಾದಿ ಸಂಪತ್ತು ಮತ್ತು ಶೋಭೆಯು ಪ್ರಿಯವಾಗಿತ್ತು. ಕಾಂತಾಯೋಗಿಗಳಲ್ಲದ, ಪ್ರಿಯೆಯರನ್ನು ದೂರದಲ್ಲಿ ಬಿಟ್ಟು ಪ್ರವಾಸ ಮಾಡುತ್ತಿರುವ ವಿರಹಿಗಳಾದ ಅಯೋಗಿ ಜನರಿಗೂ ಮಾಧವನ ಸಂಪತ್ತು ಹಿತವಾಗಿರಲಿಲ್ಲ. (ಶ್ರೀಹರಿಯ ಅನುಗ್ರಹಸಂಪತ್ತು ಯೋಗಿಗಳಲ್ಲದವರಿಗೆ ಒದಗುವುದಿಲ್ಲ ಎಂಬ ಧ್ವನಿಯೂ ಇದೆ.)

**ಅವತಾರಿಕೆ :** ವಸಂತನ ವೇಷವು ಅಭಿಚಾರ ಹೋಮ ಮಾಡುವ ಪುರುಷನ ವೇಷದಂತಿತ್ತು ಎಂಬುದಾಗಿ ಕವಿಗಳು ವರ್ಣಿಸುತ್ತಾರೆ.

**ಶಾಖಿನಃ ಕಿಸಲಲೋಹಿತಮೌಲಿಪ್ರಾವೃತಿಂ ವ್ಯರಚಯನ್ ಋತುಪುಂಸಃ ।**
**ಬಾಣಮೇವ ಮದನೋಽಕೃತ ಬರ್ಹಿರ್ಯಷ್ಟುಮಧ್ವಗವಧಾಯ ವನೇಷು ॥೨೪॥**

**ತಾತ್ಪರ್ಯ :** ಶತ್ರುವಾದ ಪುರುಷನ ವಧಕ್ಕಾಗಿ ಅಭಿಚಾರ ಯಾಗ ಮಾಡುವಾಗ ದೀಕ್ಷಿತರು ಕೆಂಪು ಪೇಟ ಧರಿಸಬೇಕು. ಯಜ್ಞವೇದಿಕೆಗೆ ಖಡ್ಗ ಮೊದಲಾದ ಆಯುಧಗಳೇ ಪರಿಸ್ತರಣ (ಅಗ್ನಿಕುಂಡದ ಸುತ್ತಲೂ ಹಾಕುವ ದರ್ಭೆಗೆ ಬದಲಾಗಿ) ಆಗಿರಬೇಕು. ಪ್ರಕೃತದಲ್ಲಿ ವಸಂತನು ಪ್ರಿಯಾವಿಯುಕ್ತರಾಗಿ ನಿರ್ಜನವಾದ ಅರಣ್ಯ ಮಾರ್ಗಗಳ ಮುಖಾಂತರ ಪ್ರವಾಸ ಮಾಡುತ್ತಿರುವ ಪುರುಷರನ್ನು ಕೊಲ್ಲುವುದಕ್ಕೋಸ್ಕರ, ಅವರಿಗೆ ಮರಣ ಸಮಾನ ದುಃಖವನ್ನು ಉಂಟುಮಾಡುವ ದೀಕ್ಷಿತನಾದನು. ಅವನಿಗೆ ವೃಕ್ಷಗಳು ಕೆಂಪಾದ ಚಿಗುರೆಲೆಗಳೆಂಬ ಕೆಂಪಾದ ಪೇಟವನ್ನು ತಯಾರಿಸಿ ಕೊಟ್ಟವು. ಮನ್ಮಥನು ತನ್ನ ಅರವಿಂದ ಅಶೋಕ ಮುಂತಾದ ಪುಷ್ಪಬಾಣಗಳನ್ನೆ ದರ್ಭೆಗಳನ್ನಾಗಿ ಮಾಡಿಕೊಟ್ಟನು. ಅದರಿಂದ ಮರಣ ಹೋಮದ ಕುಂಡಕ್ಕೆ ಸುತ್ತಲೂ ಪರಿಸ್ತರಣ ಮಾಡಿ ವಿರಹಿ ಪುರುಷನನ್ನು ಸಂಹರಿಸುವ ದೊಡ್ಡ ಉದ್ಯಮವನ್ನು (ಕೆಲಸವನ್ನು) ಕೈಗೊಂಡನು. ರೂಪಾಲಂಕಾರ : (ವಿರಹಿಗಳಿಗೆ ವಸಂತಋತುವು ಉದ್ದೀಪಕವೆಂದು ಭಾವ.)

**ಅವತಾರಿಕೆ :** ವಸಂತಋತುವಿನಲ್ಲಿ ಅಶೋಕ ವೃಕ್ಷವು ಮೊಗ್ಗುಗಳಿಂದ ಕೂಡಿರುವುದನ್ನು ಅದರ ರೋಮಾಂಚಕತೆ ಎಂದು ಕವಿಗಳು ವರ್ಣಿಸುತ್ತಾರೆ.

**ಶಾತಕುಂಭಮಯಕುಂಭಕುಚಾನಾಮಂಘ್ರಿಪಾತಮತಿದುರ್ಲಭಮೇತ್ಯ ।**
**ಸಂಮದೇನ ಸಹಸಾ ಕಿಮಶೋಕಃ ಕುಡ್ಮಲೈರಭವದುತ್ಪುಲಕಾಂಗಃ ॥೨೫॥**

**ತಾತ್ಪರ್ಯ :** ಚಿನ್ನದ ಕೊಡದಂತೆ ಸುಂದರವಾಗಿಯೂ ಪ್ರಕಾಶಮಾನವಾಗಿಯೂ ಇರುವ ಸ್ತನಗಳುಳ್ಳ ಸುಂದರಿಯರು ತಮ್ಮ ಕಾಲುಗಳಿಂದ ಅಶೋಕ ವೃಕ್ಷವನ್ನು ವಿಲಾಸಪೂರ್ವಕವಾಗಿ ಒದ್ದರು. ಅವರುಗಳ ಅತ್ಯಂತ ದುರ್ಲಭವಾದ ಕಾಲಿನ ಒದೆತವನ್ನು ಪಡೆದು ಅಶೋಕವೃಕ್ಷವು ಸಂತೋಷಪಟ್ಟು ಪುಷ್ಪ ಸಮೃದ್ಧಿಯಿಂದ ಕಂಗೊಳಿಸಿತು. ಅಶೋಕವೃಕ್ಷದ ಮೈಮೇಲೆ ಹೂವಿನ ಮೊಗ್ಗುಗಳು ಸುಂದರವಾಗಿ ಪ್ರಕಾಶಿಸಿದವು. ಅವುಗಳನ್ನು ನೋಡಿದರೆ ಅಶೋಕವೃಕ್ಷವು ರಮಣಿಯರ ಪಾದಾಘಾತದಿಂದ ರೋಮಾಂಚನಗೊಂಡಿದೆಯೋ ಎಂಬಂತೆ ಕಾಣಿಸುತ್ತಿತ್ತು.

**ಅವತಾರಿಕೆ :** ಈಗ ಕವಿಗಳು ಅಶ್ವತ್ಥವೃಕ್ಷ ಮತ್ತು ಮನ್ಮಥ ಇವರಿಬ್ಬರೂ ವಿರಹಿಗಳಿಗೆ ಉದ್ದೀಪಕರಾದರು ಎಂಬುದಾಗಿ ವರ್ಣಿಸುತ್ತಾರೆ.

**ಸ್ವೀಕೃತಂ ವಿದಧಿರೇ ಸುಮನೋಭಿಃ ಸ್ವಾಂಘ್ರಿಸೇವನಮಶೋಕಮನಂಗಮ್ ।**
**ಧಾರ್ಮಿಕಂ ಚ ಸುದೃಶಃ ಸತತಂ ತೌ ಹಂತ ಪಾಂಥಜನಹಂತೃಪದೇ ಸ್ತಃ ॥೨೬॥**

**ತಾತ್ಪರ್ಯ :** ಸುಂದರವಾದ ಕಣ್ಣುಗಳುಳ್ಳ ಸ್ತ್ರೀಯರು ಅಶೋಕ ವೃಕ್ಷವನ್ನು ತಮ್ಮ ಕಾಲಿನಿಂದ ಒದ್ದರು. ಆಗ ಅದು ಸಂತೋಷದಿಂದ ಸ್ತ್ರೀಯರ ಪಾದತಾಡನವನ್ನು ಸ್ವೀಕರಿಸಿತು ಮತ್ತು ತನ್ನ ಬಯಕೆಯನ್ನು ತೀರಿಸಿಕೊಂಡು ಸಂತೋಷಪಟ್ಟು ಹೂವುಗಳಿಂದ ಕಂಗೊಳಿಸಿತು. ಧರ್ಮದಿಂದ (ಬಿಲ್ಲಿನಿಂದ) ಜೀವಿಸುವ ಧಾರ್ಮಿಕನಾದ (ಧಾನುಷ್ಕನಾದ) ಮನ್ಮಥನನ್ನು ಅವರು ಅಶೋಕದ ಹೂವುಗಳಿಂದ ಪೂಜಿಸಿದರು. ಅಶೋಕನ ಹೂವುಗಳಿಂದ ಮನ್ಮಥನ ಪಾದಸೇವೆಯನ್ನು ಮಾಡಿದರು. ಹೀಗೆ ಸ್ತ್ರೀಯರಿಂದ ಪಾದತಾಡನ ಮಾಡಿಸಿಕೊಂಡ ಅಶೋಕವೂ, ಅಶೋಕದ ಹೂವುಗಳಿಂದ ಪೂಜೆ ಮಾಡಿಸಿಕೊಂಡ ಮನ್ಮಥನೂ ವಿರಹಿಗಳಾದ ಜನರಿಗೆ ಮರಣ ಸಮಾನವಾದ ದುಃಖವನ್ನು ಕೊಟ್ಟರು. ಪಾದತಾಡನದಿಂದ ಪುಷ್ಪಿತವಾದ ಅಶೋಕವೂ ಸ್ತ್ರೀಯರಿಂದ ಪೂಜಿತನಾದ ಧನುರ್ಧಾರಿಯಾದ ಮನ್ಮಥನೂ ವಿರಹಿಗಳಿಗೆ ಉದ್ದೀಪಕರಾದರು ಎಂದು ತಾತ್ಪರ್ಯ.

ಇಲ್ಲಿ ಸ್ತ್ರೀಯರಿಂದ ಕಾಲಿನ ಏಟು ತಿಂದ ಅಶೋಕವು ವಿರಹಿಗಳಿಗೆ ಉದ್ದೀಪಕವಾಗಿ ತೊಂದರೆ ಕೊಡುವುದು ಯುಕ್ತವೇ. ಏಕೆಂದರೆ ಕಾಲಿನ ಏಟು ತಿಂದಿದ್ದರಿಂದ ಅದು ಕೆಟ್ಟ ಗುಣವುಳ್ಳದ್ದೇ ಆಗಿರಬೇಕೆಂದು ಕಾಣುತ್ತದೆ (ತೋರುತ್ತದೆ). ಆದರೆ ಅಶೋಕ ಪುಷ್ಪಗಳಿಂದ ಪೂಜಿತನಾದ ಧಾರ್ಮಿಕನಾದ ಮನ್ಮಥನು ವಿರಹಿಗಳಿಗೆ ದುಃಖವನ್ನುಂಟು ಮಾಡುವುದು ಅತ್ಯಂತ ಅಯುಕ್ತವೆಂದು ತೋರುತ್ತದೆ. ಧಾರ್ಮಿಕ ಎಂದರೆ ಧರ್ಮಾಚರಣೆ ಮಾಡುವವನು ಮತ್ತು ಬಿಲ್ಲುಗಾರ ಎಂಬ ಎರಡು ಅರ್ಥಗಳೂ ಇಲ್ಲಿ ವಿವಕ್ಷಿತವಾಗಿದೆ. ಆದುದರಿಂದ ವಿರೋಧವಿಲ್ಲ.

**ಅವತಾರಿಕೆ :** ಸ್ತ್ರೀಯರು ಬಾಯಿಯಿಂದ ಉಗುಳುವ ಮದ್ಯದ ಸೇವನೆಯಿಂದ ಹೂವು ಬಿಟ್ಟಿರುವ ಬಕುಳ ವೃಕ್ಷಗಳನ್ನು ಕವಿಗಳು ವರ್ಣಿಸುತ್ತಾರೆ.

**ಪುಷ್ಪಿತಸ್ಯ ಬಕುಲಸ್ಯ ಸಮಂತಾದುದ್ಗತಾಸ್ಸುಮನಸ್ಸುಮನೋಭ್ಯಃ ।**
**ಅಂಗನಾಸ್ಯಮಧುನಾಽಧ್ವಗಯೂನಾಮಾಪದಾಗಮನಮತ್ರ ಶಶಂಸುಃ ॥೨೭॥**

**ತಾತ್ಪರ್ಯ :** ಹೂವುಗಳಂತೆ ಕೋಮಲೆಯರಾದ ಸ್ತ್ರೀಯರು ಮದ್ಯವನ್ನು ತಮ್ಮ ಬಾಯಿಯಲ್ಲಿ ಇಟ್ಟುಕೊಂಡು ಮುಕ್ಕಳಿಸಿ ಬಕುಳ ವೃಕ್ಷಗಳ ಮೇಲೆ ಉಗುಳಿದರು. ಆಗ ಆ ಮರದಲ್ಲಿ ಹೂವುಗಳು ಹುಟ್ಟಿದವು. ವಸಂತ ಋತುವಿನಲ್ಲಿ ಕಾಡಿನಲ್ಲಿ ಉಂಟಾದ ಈ ಪುಷ್ಪೋತ್ಪತ್ತಿಯು ಪ್ರವಾಸದಲ್ಲಿರುವ ವಿರಹಿಗಳಾದ ತರುಣರಿಗೆ ದೊಡ್ಡ ಆಪತ್ತು ಉಂಟಾಗುತ್ತದೆ ಎಂದು ಸೂಚಿಸಿತು.

ವಿಶೇಷಾಂಶ : *ಪುಷ್ಪೇಭ್ಯಃ ಪುಷ್ಪೋತ್ಪತ್ತಿಃ ಧ್ವನ್ಯತೇ । ಪುಷ್ಪೇಷು ಪುಷ್ಪೋತ್ಪತ್ತಿರುತ್ಪಾತಃ । ಸ ಆಪದಾಂ ಹೇತುರಿತಿ ಲೋಕಪ್ರಸಿದ್ಧಮ್ । ತಥಾ ಚ ಪುಷ್ಪೋತ್ಪನ್ನಾನಿ ಬಕುಲಪುಷ್ಪಾಣಿ ಯೂನಾಂ ಆಪದಾಗಮನಂ ಶಶಂಸುಃ ಇತ್ಯನೇನ (ಬಕುಲಪುಷ್ಪಸಂಘಾಃ) ಪಾಂಥಾನಾಂ ಉದ್ದೀಪಕಾಃ ಬಭೂವುರಿತಿ ಭಾವಃ.*

ಈ ಪದ್ಯದಲ್ಲಿ "ಸುಮನೋಭ್ಯಃ ಉದ್ಗತಾಃ ಸುಮನಸಃ" ಎಂದು ಹೇಳಿರುವುದರಿಂದ ಹೂವುಗಳಿಂದ ಹೂವುಗಳು ಹುಟ್ಟಿದವು ಎಂದು ಧ್ವನಿತವಾಗುತ್ತದೆ. ಹೂವುಗಳಲ್ಲಿ ಹೂವುಗಳು ಹುಟ್ಟುವುದೆ ಉತ್ಪಾತವು (ಅಪಶಕುನವು). ಈ ಉತ್ಪಾತವು ಆಪತ್ತುಗಳಿಗೆ ಕಾರಣವೆಂದು ಲೋಕದಲ್ಲಿ ಪ್ರಸಿದ್ಧಿಯಿದೆ. ಆದುದರಿಂದ ಇಲ್ಲಿ ಪುಷ್ಪಗಳಿಂದ ಬಕುಲ ಪುಷ್ಪಗಳು (ಸುಮನೋಭ್ಯಃ ಉದ್ಗತಾಃ ಸುಮನಸಃ) ಕಾಂತಾವಿರಹಿಗಳಾದ ತರುಣರಿಗೆ ಆಪತ್ತುಗಳು ಬರುತ್ತವೆ ಎಂದು ಸೂಚಿಸುತ್ತಿದ್ದವು ಎಂದು ಹೇಳಿದಂತೆ ಆಯಿತು. ವಸಂತ ಕಾಲದಲ್ಲಿ ಒಳ್ಳೆಯ ಮನಸ್ಸುಳ್ಳ ಸುಂದರಿಯರ ಗಂಡೂಷದಿಂದ ಬಕುಲ ವೃಕ್ಷಗಳಲ್ಲಿ ಹುಟ್ಟಿರುವ ಹೂವಿನ ರಾಶಿಗಳು ವಿರಹಿಗಳಾದ ತರುಣರಿಗೆ ಉದ್ದೀಪಕಗಳಾದವು ಎಂದು ಅಭಿಪ್ರಾಯವು.

**ಅವತಾರಿಕೆ :** ಶ್ರೀರಾಮನವಮೀ ಉತ್ಸವದಲ್ಲಿ ಶ್ರೀರಾಘವೇಂದ್ರ ಗುರುವರ್ಯರು ಉಪಾಸ್ಯಮೂರ್ತಿಯಾದ ಶ್ರೀಮೂಲರಾಮಚಂದ್ರನ ಮಹಾಭಿಷೇಕವನ್ನು ಭಕ್ತಿಯಿಂದ ವೈಭವವಾಗಿ ನೆರವೇರಿಸಿದುದನ್ನು ಕವಿಗಳು ವರ್ಣಿಸುತ್ತಾರೆ.

**ರಾಮಚಂದ್ರಮಥ ರಾಮನವಮ್ಯಾಮಿಷ್ಟದೈವಮಮೃತೈರುಪಕ್ಲೃಪ್ತೈಃ ।**
**ಪಂಚಭಿಃ ಪರಮರಾಘವಯೋಗೀ ಭಕ್ತಿಪೂರ್ವಕಮಭಿಷಿಂಚತಿ ತತ್ರ ॥೨೮॥**

**ತಾತ್ಪರ್ಯ :** ಈ ರೀತಿಯಾಗಿ ವಸಂತಋತುವು ಪ್ರಾಪ್ತವಾಯಿತು. ನಂತರ ಶ್ರೀರಾಮನವಮಿಯು ಪ್ರಾಪ್ತವಾಯಿತು. ಆ ಸಮಯದಲ್ಲಿ ಯೋಗಿಶ್ರೇಷ್ಠರಾದ ಶ್ರೀರಾಘವೇಂದ್ರ ಗುರುಗಳು ಪಂಚಾಮೃತದ ಪದಾರ್ಥಗಳನ್ನು ವಿಶೇಷ ರೀತಿಯಿಂದ ಸಂಗ್ರಹಿಸಿ ತಮ್ಮ ಉಪಾಸ್ಯಮೂರ್ತಿಯೂ, ಅಭೀಷ್ಟದೇವನೂ ಆದ ಶ್ರೀಮೂಲರಾಮಚಂದ್ರನನ್ನು, ಪಂಚಾಮೃತಗಳಿಂದ ಭಕ್ತಿಪೂರ್ವಕವಾಗಿ ಅಭಿಷಿಂಚಿಸಿದರು.

**ವಿಶೇಷಾಂಶ :** ಇಲ್ಲಿ ಅಭಿಷಿಂಚತಿ ತತ್ರ ಎಂದು ಶ್ಲೋಕ ಪಾಠವಿದೆ. ಆದರೆ ಶ್ರೀಮೂಲರಾಮದೇವರ ಮಹಾಭಿಷೇಕವು ಕಳೆದು ಹೋದುದರಿಂದ ಅಭಿಷೇಕಿಸುತ್ತಾರೆಂಬ ವರ್ತಮಾನಕಾಲ ನಿರ್ದೇಶ ಮಾಡಿದುದು ಅಯುಕ್ತವೆಂದು ತೋರುತ್ತದೆ. ಆದುದರಿಂದ ಈ ಪಾಠವು ಸರಿಯಲ್ಲವೆಂದು ತೋರುತ್ತದೆ. ಆದರೆ ವರ್ತಮಾನ ಸಾಮೀಪ್ಯೇ ವರ್ತಮಾನವದ್ವಾ (3–31–131) ಎಂಬ ಸೂತ್ರದಿಂದ ಗ್ರಂಥಕಾರರಿಗೆ ಶ್ರೀಗುರುಸಾರ್ವಭೌಮರು ಪ್ರತ್ಯಕ್ಷರಾದುದರಿಂದ (ಕವಿಗಳು ಶ್ರೀರಾಘವೇಂದ್ರಸ್ವಾಮಿಗಳವರ ಸಮಕಾಲೀನರಾದುದರಿಂದ) ಆಗ ಗುರುಗಳು ಮಾಡಲಿದ್ದ ಅಭಿಷೇಕವು ಸನ್ನಿಹಿತವಾದಾಗ ಮುಂದೆ ಆಗಬೇಕಾದುದನ್ನು ಈಗಲೇ ಆಗುತ್ತಾ ಇದೆಯೆಂದು ವರ್ಣಿಸಿದ್ದಾರೆ ಎಂದು ಭಾವಿಸಬಹುದು. ಅಥವಾ ಗುರುಗಳ ಕಾಲದಲ್ಲಿಯೇ ಇದ್ದ ಕವಿಗಳು ಮಾಡಿದ ಮಹಾಭಿಷೇಕ ಕಾರ್ಯವನ್ನು ಪ್ರತ್ಯಕ್ಷವಾಗಿ ನೋಡಿದಾಗ, ಆ ಮಹಾಭಿಷೇಕವನ್ನು ಗುರುಗಳು ಶ್ರೀಮೂಲರಾಮನಿಗೆ ಮಹಾಭಿಷೇಕವನ್ನು ಮಾಡುತ್ತಾರೆ ಎಂದು ವರ್ತಮಾನಕಾಲದಲ್ಲಿ ನಿರ್ದೇಶ ಮಾಡಿದುದು ಸರಿಯೆಂದು ಹೇಳಬಹುದು. ಅಥವಾ ಕವಿಗಳ

ಕಾಲದಲ್ಲಿಯೇ ನಡೆದ ಮಹಾಭಿಷೇಕವನ್ನು ಎದುರಿಗೆ ನಡೆಯುತ್ತಿರುವಂತೆ ಭಾವಿಸಿ ಅಭಿಷಿಂಚತಿ = ಈಗ ಅಭಿಷೇಕ ಮಾಡುತ್ತಿದ್ದಾರೆ ಎಂದು ಹೇಳಿದರೆಂದೂ ಭಾವಿಸಬಹುದು. ಅಭಿಷಿಂಚತಿ ತಂ ಸ್ಮ ಎಂಬ ಪಾಠವನ್ನು ಇಟ್ಟುಕೊಂಡರೆ ಈ ಯಾವ ತೊಂದರೆಯೂ ಇಲ್ಲ. ಆದರೂ ಅಭಿಷಿಂಚತಿ ತತ್ರ ಎಂಬ ಪಾಠದಲ್ಲಿ ಇನ್ನೂ ಹೆಚ್ಚಿನ ಸ್ವಾರಸ್ಯ ಇರುವುದರಿಂದ ಆ ಪಾಠವು ಸರಿಯಾಗಿಯೇ ಇದೆ ಎಂದು ಹೇಳಬಹುದು. ಇಂದಿಗೂ ಸಹಾ ಶ್ರೀರಾಘವೇಂದ್ರ ಗುರುಗಳು ತಮ್ಮ ಪರಂಪರೆಯಲ್ಲಿ ಪೀಠಸ್ಥರಾದ ಯತಿಗಳಲ್ಲಿ ಸನ್ನಿಹಿತರಾಗಿದ್ದು ಶ್ರೀರಾಮನವಮೀ – ದೀಪಾವಳಿ ಮುಂತಾದ ವಿಶೇಷ ಹಬ್ಬಗಳನ್ನು ತಾವೇ ಮಾಡುತ್ತಾರೆ ಮತ್ತು ತಮ್ಮ ಹಂಸನಾಮಕ ಪರಂಪರೆಯ ಮೂಲ ಸಂಸ್ಥಾನದ ಪೀಠಾಧಿಪತಿಗಳೂ ತಮ್ಮ ಶಿಷ್ಯರೂ ಆದ ಯತಿವರೇಣ್ಯರುಗಳಿಂದ ಮಾಡಿಸುತ್ತಾರೆ. ಆದುದರಿಂದ ಗುರುರಾಜರು ಮಾಡುವ ಮಹಾಭಿಷೇಕವು ಈಗಲೂ ಅವರ ಮೂಲಕವೇ ನಡೆಯುತ್ತಿರುವುದರಿಂದ ವರ್ತಮಾನಕಾಲ ನಿರ್ದೇಶ ಮಾಡಿದುದು ಯುಕ್ತವೇ ಆಗಿದೆ. ಅಭಿಷಿಂಚತಿ ಸ್ಮ ಎಂಬ ಪಾಠವನ್ನು ಇಟ್ಟುಕೊಂಡಾಗ ಲಟ್ ಸ್ಮೇ (3–2–118) ಎಂಬ ಸೂತ್ರದಿಂದ ಭೂತಾರ್ಥದಲ್ಲಿ ಬಂದಿದೆ ಎಂದು ಇಟ್ಟುಕೊಳ್ಳಬೇಕು.

**ಅವತಾರಿಕೆ :** ಇನ್ನು ಮುಂದೆ ಕವಿಗಳು ಗ್ರೀಷ್ಮಋತುವನ್ನು ವರ್ಣಿಸುತ್ತಾರೆ. ಪ್ರಾರಂಭದಲ್ಲಿ ಗ್ರೀಷ್ಮ ಋತುವಿನ ದಿವಸಗಳ ಗುಣಗಳನ್ನು ತಿಳಿಸುತ್ತಾರೆ.

**ಮಲ್ಲಿಕಾಯುವತಿಯೌವನಧಾತಾ ಮನ್ಮಥಪ್ರಭುಪರೀಭವಧಾತಾ ।**
**ಕಾನನಜ್ವಲನಬಾಲಕಮಾತಾ ವಾಸರೋಽಜನಿ ಸರೋಜಲಪಾತಾ ॥೨೯॥**

**ತಾತ್ಪರ್ಯ :** ಬೇಸಿಗೆಯ ದಿನಗಳಲ್ಲಿ ಮಲ್ಲಿಗೆಯ ಬಳ್ಳಿಗಳು ಚೆನ್ನಾಗಿ ಬೆಳೆಯುತ್ತವೆ, ಮತ್ತು ಹೂವುಗಳು ಬಿಡುತ್ತವೆ. ಆ ಮಲ್ಲಿಗೆಯ ಬಳ್ಳಿಗಳು ಬೇಸಿಗೆಯಿಂದ ಪೋಷಣೆ ಹೊಂದುತ್ತವೆ. ವಸಂತ ಋತುವಿನಲ್ಲಿ ಮನ್ಮಥನು ರಾಜನಂತೆ ಮೆರೆಯುತ್ತಿದ್ದನು. ಆದರೆ ಬೇಸಿಗೆಯ ದಿನಗಳು ಮನ್ಮಥನಿಗೆ ಅವಮಾನವನ್ನುಂಟುಮಾಡಲು ಆರಂಭಿಸಿದವು. ಬೇಸಿಗೆಯಲ್ಲಿ ಮನ್ಮಥನ ಶಕ್ತಿಯು ಕುಗ್ಗಿತು. ಕಾಡ್ಗಿಚ್ಚಿನ ಚಿಕ್ಕ ಚಿಕ್ಕ ಮರಿಗಳಂತಿರುವ ಬೆಂಕಿಯ ಚುಟುಕಗಳನ್ನು ಬೇಸಿಗೆಯ ದಿವಸವು ತಾಯಿಯಂತೆ ಪೋಷಿಸಿತು. ಚಿಕ್ಕದಾಗಿದ್ದ ಕಾಡ್ಗಿಚ್ಚು ಬೇಸಿಗೆಯಲ್ಲಿ ದೊಡ್ಡ ರೂಪವನ್ನು ತಾಳಿತು. ಬೇಸಿಗೆಯ ದಿವಸವು ಬಾಯಾರಿದವರಂತೆ ಸರೋವರಗಳ, ಹಳ್ಳಗಳ ಜಲವನ್ನೆಲ್ಲಾ ಕುಡಿಯಿತು. ಬೇಸಿಗೆಯಲ್ಲಿ ಜಲಾಶಯಗಳು ಬತ್ತಿಹೋದವು. ಈ ರೀತಿಯಾಗಿ ಬೇಸಿಗೆಯ ದಿನವು ಪ್ರಕಟವಾಯಿತು ಎಂಬುದಾಗಿ ಭಾವ.

**ಅವತಾರಿಕೆ :** ಕವಿಗಳು ಈಗ ಬೇಸಿಗೆಯಲ್ಲಿ ಚಳಿಯು ಬಹಳ ಕಡಿಮೆಯಾಗಿ ಬೇರೆ ಸ್ಥಳವನ್ನು ಆಶ್ರಯಿಸಿತು ಎಂದು ವರ್ಣಿಸುತ್ತಾರೆ.

**ಜೃಂಭಿತೇ ಚ ಮಿಹಿರೇ ಭುವಿ ಶೈತ್ಯಂ ಕೂಪಮಾಪ ತರುಣೀಕುಚದುರ್ಗಮ್ ।**
**ಕಿಂಚಿದನ್ಯದಿನಸಂಧಿಮವಾಪ್ತುಂ ಛಾಯಯಾ ಸಹ ಪರಂ ಚರತಿ ಸ್ಮ ॥೩೦॥**

**ತಾತ್ಪರ್ಯ** : ಗ್ರೀಷ್ಮಋತುವಿನಲ್ಲಿ ಸೂರ್ಯನು ಬಹಳ ತಾಪವನ್ನು ಉಂಟು ಮಾಡಲಾರಂಭಿಸಿದನು. ಆಗ ಛಳಿಯು ಭಾವಿಯ ನೀರಿನಲ್ಲಿ ಅಡಗಿಕೊಂಡಿತು. (ಬೇಸಿಗೆಯಲ್ಲಿ ಭಾವಿಯ ನೀರು ತಂಪಾಗಿರುತ್ತದೆ. ಹೆದರಿದವರು ಕೋಟೆಯ ಒಳಗೆ ಅಡಗಿಕೊಳ್ಳುವಂತೆ ಸ್ವಲ್ಪ ಛಳಿಯು (ತಂಪು) ತರುಣಿಯರ ಸ್ತನಗಳೆಂಬ ಕೋಟೆಯಲ್ಲಿ ಅಡಗಿಕೊಂಡಿತು. (ಬೇಸಿಗೆಯಲ್ಲಿ ತರುಣಿಯರ ಸ್ತನಗಳು ತಂಪಾಗಿರುತ್ತವೆ.) ಇನ್ನೂ ಸ್ವಲ್ಪ ಛಳಿಯು ಮುಂದೆ ಬರುವ ದಿನಗಳಲ್ಲಿ ತಾನು ಉಳಿಯಬೇಕೆಂದು ಆ ದಿನಗಳ ಜೊತೆ ಬೆರೆತು ಬಲಶಾಲಿಯಾಗಬೇಕೆಂದು ಆಲೋಚಿಸಿ ಮರಗಳ ನೆರಳಿನ ಜೊತೆ ಸಂಬಂಧವನ್ನು ಬೆಳೆಸಿತು, ಸ್ನೇಹವನ್ನು ಮಾಡಿಕೊಂಡಿತು. (ಬೇಸಿಗೆಯಲ್ಲಿ ಆಲ ಮುಂದಾದ ಮರಗಳ ನೆರಳು ತಂಪಾಗಿರುತ್ತದೆ.) ಈ ರೀತಿಯಾಗಿ ಬೇಸಿಗೆಯಲ್ಲಿ ಛಳಿಯು ಬಹಳ ಕಡಿಮೆಯಾಯಿತು, ಎಲ್ಲೆಲ್ಲೋ ಹೋಗಿ ಅಡಗಿಕೊಂಡಿತು. ಇತರರನ್ನು ಆಶ್ರಯಿಸಿತು.

**ಕೂಪೋದಕಂ ವಟಚ್ಛಾಯಾ ತಾಂಬೂಲಂ ತರುಣೀಸ್ತನೌ । ಶೀತಕಾಲೇ ಭವೇದುಷ್ಣಮುಷ್ಣಕಾಲೇ ತು ಶೀತಲಂ ॥** ಎಂಬುದಾಗಿ ಶಾಸ್ತ್ರ ಪ್ರಸಿದ್ಧಿಯಿದೆ. ಭಾವಿಯ ನೀರು, ಆಲದ ಮರದ ನೆರಳು, ತಾಂಬೂಲ, ತರುಣಿಯರ ಸ್ತನಗಳು, ಇವುಗಳು ಛಳಿಗಾಲದಲ್ಲಿ ಬಿಸಿಯಾಗಿಯೂ, ಬೇಸಿಗೆಯಲ್ಲಿ ತಂಪಾಗಿಯೂ ಇರುತ್ತವೆ ಎಂಬ ಶಾಸ್ತ್ರಪ್ರಸಿದ್ಧಿಯನ್ನು ಇಟ್ಟುಕೊಂಡು ಕವಿಗಳು ಹೀಗೆ ವರ್ಣಿಸಿದ್ದಾರೆ.

ರಾಜನು ತನ್ನ ಪ್ರತಾಪವನ್ನು ಮೆರೆಸುತ್ತಾ ಶತ್ರುಗಳನ್ನು ಆಕ್ರಮಿಸಿದಾಗ ಅವರಲ್ಲಿ ಕೆಲವರು ಅವಮಾನ ತಡೆಯಲಾಗದೇ ಅಥವಾ ಓಡುತ್ತಾ ಗಾಬರಿಯಿಂದ ಭಾವಿಗೆ ಬಿದ್ದು ಪ್ರಾಣ ಕಳೆದುಕೊಳ್ಳುತ್ತಾರೆ. ಕೆಲವರು ಕೋಟೆಯಲ್ಲಿ ಅಡಗಿ ಕುಳಿತುಕೊಳ್ಳುತ್ತಾರೆ. ಕೆಲವರು ರಾಣಿಯನ್ನು ಆಶ್ರಯಿಸಿ ಅವಳ ಮೂಲಕ ಸಂಧಿ ಮಾಡಿಕೊಂಡು ಮುಂದೆಯೂ ಬದುಕಬೇಕೆಂಬ ಆಸೆಯಿಂದ ಜೀವ ಇಟ್ಟುಕೊಂಡಿರುತ್ತಾರೆ. ಸೂರ್ಯನ ಹೆಂಡತಿಗೆ ಛಾಯಾ ಎಂಬ ಹೆಸರೂ ಇದೆ. ತನ್ನ ಹೆಂಡತಿಯ ಸಂಬಂಧಿಕರಿಗೆ ಕ್ರೂರನಾದವನು ತೊಂದರೆ ಕೊಡುವುದಿಲ್ಲ ಎಂಬ ಲೋಕನೀತಿಯಿದೆ. ಈ ವಿಚಾರವು ಇಲ್ಲಿ ಶಬ್ದಸಾಮರ್ಥ್ಯದಿಂದ ಧ್ವನಿತವಾಗುತ್ತದೆ.

**ಅವತಾರಿಕೆ** : ಈಗ ಕವಿಗಳು ಬೇಸಿಗೆಯಲ್ಲಿ ನೀರಿಗಾಗಿ ಕಾತರಿಸುತ್ತಿರುವ ಜಾತಕಪಕ್ಷಿಗಳ ಕೂಗುವಿಕೆಯ ಅಂತರಾರ್ಥವನ್ನು ಉತ್ಪ್ರೇಕ್ಷೆಯಿಂದ ವರ್ಣಿಸುತ್ತಾರೆ.

**ತಾಪಯತ್ಯತಿತರಾಂ ತರುಣಿರ್ಯಲ್ಲೋಕಬಂಧುರಿತಿ ನಾಮ ಕಥಂ ವಾ ।**
**ತತ್ಸಖಸ್ಯ ಶುಚಿತಾ ಶುಚಿಮಾಸಶ್ಚಾತಕಾ ಭುವಿ ವಿಚುಕ್ರುಶುರಿತ್ಥಮ್ ॥೩೧॥**

**ತಾತ್ಪರ್ಯ** : ಸೂರ್ಯದೇವನು ಗ್ರೀಷ್ಮಕಾಲದಲ್ಲಿ ಎಲ್ಲಾ ಜನರಿಗೂ, ಎಲ್ಲ ಭೂಮಿಗೂ ಬಹಳ ತಾಪವನ್ನು ಉಂಟುಮಾಡುತ್ತಾನೆ. ಜ್ಯೇಷ್ಠ ಆಷಾಢ ಎಂಬ ಎರಡು ತಿಂಗಳುಗಳು ಗ್ರೀಷ್ಮಋತುವಿಗೆ ಸೇರುತ್ತದೆ. ಆಷಾಢಮಾಸದಲ್ಲಿಯೂ ಸೂರ್ಯನು ತುಂಬಾ ತಾಪವನ್ನು

ಉಂಟುಮಾಡುತ್ತಾನೆ. ಈ ರೀತಿಯಾಗಿ ಎಲ್ಲ ಲೋಕಕ್ಕೂ ತಾಪವನ್ನು ಉಂಟುಮಾಡುವ ಸೂರ್ಯದೇವನಿಗೆ ಲೋಕಬಂಧು ಎಂಬ ಹೆಸರು ಹೇಗೆ ಸಲ್ಲುತ್ತದೆ? "ಪ್ರದ್ಯೋತನೋ ದಿನಮಣಿಃ ಖದ್ಯೋತೋ ಲೋಕಬಾಂಧವಃ", 'ಲೋಕಬಂಧು ಸ್ತ್ರಯೀತನುಃ' ಎಂದು ಮುಂತಾಗಿ ಕೋಶಗಳಲ್ಲಿ ಸೂರ್ಯದೇವರಿಗೆ ಲೋಕಬಂಧು ಎಂಬ ಹೆಸರಿದೆ. ಅದು ಅಯುಕ್ತವಾಗಿದೆ. ಸೂರ್ಯನ ಸ್ನೇಹಿತನಾದ ಆಷಾಢಮಾಸಕ್ಕೆ ಶುಚಿಮಾಸ ಎಂಬ ಹೆಸರಿದೆ. "ಶುಚಿಸ್ತ್ವಯಂ! ಆಷಾಢೇ" ಎಂಬ ಕೋಶದಲ್ಲಿ ಆಷಾಢಮಾಸಕ್ಕೆ 'ಶುಚಿ' ಎಂಬ ಹೆಸರಿದೆ. ಜನರುಗಳಿಗೆ ತಾಪವನ್ನು ಉಂಟುಮಾಡುವ ಸೂರ್ಯದೇವನಿಗೆ ಸಹಕಾರಿಯಾಗಿದ್ದು ಸ್ನೇಹಿತನಾದ, ತಾನೂ ತಾಪವನ್ನು ಉಂಟುಮಾಡುವ ಈ ಕ್ರೂರವಾದ ಆಷಾಢಮಾಸಕ್ಕೆ 'ಶುಚಿ' ಶುದ್ಧವಾದ ಮಾಸ ಎಂಬ ಹೆಸರು ಹೇಗೆ ಕೂಡುತ್ತದೆ? ಎಂದು ಜಾತಕ ಪಕ್ಷಿಗಳು ಭೂಮಿಯಲ್ಲಿ ಕೂಗಿದವು. ಗ್ರೀಷ್ಮ ಕಾಲದಲ್ಲಿ ಮಳೆ ಇಲ್ಲದಿರುವುದರಿಂದ, ಮೋಡದ ನೀರಿನ ಹನಿಯಿಂದಲೇ ತಮ್ಮ ಬಾಯಾರಿಕೆಯನ್ನು ಹಿಂಗಿಸಿಕೊಂಡು ಬದುಕುವ ಜಾತಕಪಕ್ಷಿಗಳು ಅಂತಹಾ ಕಾಲದಲ್ಲಿ ಕಿರಿಚಿಕೊಳ್ಳುತ್ತಿದ್ದರೆ ಅವುಗಳ ಕಿರುಚುವಿಕೆಯ ಅರ್ಥವು (ಅಭಿಪ್ರಾಯವು) ಮೇಲೆ ವರ್ಣಿಸಿದಂತೆ ತೋರುತ್ತಿದ್ದಿತು ಎಂಬುದಾಗಿ ಕವಿಗಳು ಉತ್ಪ್ರೇಕ್ಷಿಸಿದ್ದಾರೆ. ಇಲ್ಲಿ ಶ್ಲೇಷದ ಮೂಲಕ ಉತ್ಪ್ರೇಕ್ಷಾಲಂಕಾರವಿದೆ.

**ಅವತಾರಿಕೆ :** ಈಗ ಕವಿಗಳು ಸೂರ್ಯದೇವನು ಗ್ರೀಷ್ಮಋತುವಿನಲ್ಲಿ ನೀರನ್ನು ಶೋಷಣೆ ಮಾಡುವುದನ್ನು ಉತ್ಪ್ರೇಕ್ಷಿಸುತ್ತಾರೆ.

**ಛಾಯಯಾ ಸಹ ದಿವೈವ ಕರಾಗ್ರೈಃ ಶಂಬರಾಂಬರಹರೇಽಂಬರರತ್ನೇ ।**
**ಜ್ಯೇಷ್ಠಪೂರ್ವಮಭಿಯಾಯಿನಿ ನೂನಂ ಕೋಪತಾಮ್ರನಯನಾ ನಲಿನೀತಿ ॥೩೨॥**

**ತಾತ್ಪರ್ಯ :** ಸೂರ್ಯದೇವನು ಆಕಾಶದಲ್ಲಿ ರತ್ನದಂತೆ ಬೆಳಗುವ ಮಹಾಪುರುಷನು. ಆದರೆ ಅವನು ತನ್ನ ಕಿರಣಗಳಿಂದ ನೀರೆಂಬ ಬಟ್ಟೆಯನ್ನು ಅಪಹರಿಸುತ್ತಿರುವಾಗ, ಅಂದರೆ ಶೋಷಿಸುತ್ತಿರುವಾಗ, ಮಹಾಪುರುಷನೊಬ್ಬನು ಪರಸ್ತ್ರೀಯ ವಸ್ತ್ರಾಪಹಾರ ಮಾಡುವಂತೆ ತೋರುತ್ತಿರುವುದು. ಸೂರ್ಯದೇವನು ತನ್ನ ಕಾಂತಿ ಮತ್ತು ನೆರಳಿನ ಜೊತೆಗೆ ಹಗಲಿನಲ್ಲಿಯೇ ಜಲಶೋಷಣ ಮಾಡುತ್ತಾನೆ. ಜ್ಯೇಷ್ಠವನ್ನು (ಜ್ಯೇಷ್ಠ ಮಾಸವನ್ನು) ಕವಚವಾಗಿಸಿಕೊಂಡು (ಮುಂದಿಟ್ಟುಕೊಂಡು) ಬರುತ್ತಾನೆ. ಇದನ್ನು ನೋಡಿದರೆ ಹಗಲು ಸಮಯದಲ್ಲಿಯೇ ತನ್ನ ಛಾಯಾ ಎಂಬ ಪತ್ನಿಯ ಜೊತೆಗೆ ಇರುವಾಗಲೇ ಜ್ಯೇಷ್ಠನನ್ನು (ಹಿರಿಯನಾದವನನ್ನು) ಮುಂದಿಟ್ಟುಕೊಂಡೇ ಈ ಕೆಲಸವನ್ನು ಮಾಡುತ್ತಾನೆ ಎಂದು ತೋರುತ್ತದೆ. ಆಗ ಸೂರ್ಯನ ಹಿತೈಷಿಣಿಯಾದ ಪದ್ಮಿನಿಯು ಕೋಪದಿಂದ ಕೆಂಪಾಗಿದ್ದಾಳೆ. ಇದು ನಿಜ ಎಂದು ಉತ್ಪ್ರೇಕ್ಷಾ. ತಾವರೆಯ ರಾಶಿಯು ನೀರಿನಲ್ಲಿ ಕೆಂಪಾಗಿರುವುದನ್ನು ನೋಡಿದರೆ ಗಂಡನು ತನ್ನ ಜೊತೆಯಲ್ಲಿರುವಾಗಲೇ ಹಗಲಿನಲ್ಲಿಯೇ ಹಿರಿಯರ ಎದುರಿನಲ್ಲಿಯೇ ಕೈ ತುದಿಗಳಿಂದ ವಸ್ತ್ರಾಪಹಾರ ಮಾಡುತ್ತಿರುವಾಗ ಕಣ್ಣುಗಳನ್ನು (ಮುಖವನ್ನು) ಕೆಂಪಾಗಿ ಮಾಡಿಕೊಂಡಿರುವ

ನಾಯಕಿಯಂತೆ ಪದ್ಮಿನಿಯ (ಪದ್ಮಗಳ ವನವು) ಕಾಣಿಸುತ್ತಿತ್ತು ಎಂಬುದಾಗಿ ಶ್ಲೇಷದ ಮೂಲಕವಾದ ಉತ್ಪ್ರೇಕ್ಷೆ. (ಇಲ್ಲಿ ಕಾಮಿನಿಯ ವ್ಯವಹಾರವು ಧ್ವನಿತವಾಗುತ್ತದೆ.)

**ಅವತಾರಿಕೆ :** ಈಗ ಕವಿಗಳು ವಸಂತ–ಗ್ರೀಷ್ಮ ಋತುಗಳ ಕಾಲದಲ್ಲಿ ಕಾಮಿನಿಯರ ವಕ್ಷಸ್ಥಲವು ಬಹಳ ತಂಪಾಗಿರುವುದನ್ನು ಉತ್ಪ್ರೇಕ್ಷಿಸುತ್ತಾರೆ.

**ಭಾವಿ ಶೋಷಣಮವೇತ್ಯ ದುರಂತಂ ಪದ್ಮಸಾಯಕಹಿತಾಯ ಪಯಾಂಸಿ ।**
**ಕಾಮಿನೀಕುಚಘಟೇಷು ವಸಂತೋ ವಿನ್ಯಧತ್ತ ಯದಿಮಾವತಿಶೀತೌ ॥೩೩॥**

**ತಾತ್ಪರ್ಯ :** *ಕೂಪೋದಕಂ ವಟಚ್ಛಾಯಾ ತಾಂಬೂಲಂ ತರುಣೀಸ್ತನೌ! ಶೀತಕಾಲೇ ಭವೇದುಷ್ಣಮುಷ್ಣಕಾಲೇ ತು ಶೀತಲಂ ॥*

ಭಾವಿಯ ನೀರು, ಆಲದ ಮರದ ನೆರಳು, ತಾಂಬೂಲ, ತರುಣಿಯರ ವಕ್ಷಸ್ಥಳ, ಇವುಗಳೆಲ್ಲವೂ ಚಳಿಗಾಲದಲ್ಲಿ ಬೆಚ್ಚಗಿರುತ್ತದೆ. ಬೇಸಿಗೆಯಲ್ಲಿ ತಂಪಾಗಿರುತ್ತವೆ ಎಂಬ ಸೂಕ್ತಿಯಿದೆ. ಆ ಸೂಕ್ತಿಯ ಆಧಾರದ ಮೇಲೆ ಕವಿಗಳು ಈ ರೀತಿಯಾಗಿ ವರ್ಣಿಸುತ್ತಿದ್ದಾರೆ. ಮುಂದೆ ಬೇಸಿಗೆಯಲ್ಲಿ ಗ್ರೀಷ್ಮಋತುವಿನಲ್ಲಿ ನೀರೆಲ್ಲವೂ ಒಣಗಿ ಎಲ್ಲೆಲ್ಲಿಯೂ ಅತಿ ಕಷ್ಟಕರವಾದ ಜಲ ದುರ್ಭಿಕ್ಷವು ಉಂಟಾಗಲಿದೆ ಎಂಬ ವಿಷಯವನ್ನು ತಿಳಿದ ವಸಂತನು, ಜನರುಗಳು ನೀರನ್ನು ಸಂಗ್ರಹಿಸಿ ಇಟ್ಟುಕೊಳ್ಳುವಂತೆ, ಕಾಮಿನಿಯ ಸ್ತನಗಳೆಂಬ ಕೊಡಗಳಲ್ಲಿ ತಂಪಾದ ನೀರನ್ನು ಸಂಗ್ರಹಿಸಿ ಇಟ್ಟುಕೊಂಡನು. (ಕಾಮಿನಿಯರ ಸ್ತನಗಳು ಬೇಸಿಗೆಯಲ್ಲಿ ತಂಪಾಗಿರುವುದೇ ಈ ರೀತಿಯಾಗಿ ಊಹಿಸಲು ಕಾರಣವು). ವಸಂತನು ಕಾಮಿನಿಯರ ಸ್ತನಗಳಲ್ಲಿ ತಂಪಾದ ನೀರನ್ನು ಸಂಗ್ರಹಿಸದಿದ್ದರೆ ಕಾಮಿನಿಯರ ಸ್ತನಗಳು ತಂಪಾಗಿರಲು ಬೇರಿನ್ನ್ಯಾವ ಕಾರಣವಿದೆ? (ಉತ್ಪ್ರೇಕ್ಷಾ) (ಅನುಮಾನಾಲಂಕಾರ).

**ಅವತಾರಿಕೆ :** ಈಗ ಕವಿಗಳು ಗ್ರೀಷ್ಮ ಋತುವಿನಲ್ಲಿ ಸರೋವರಗಳಲ್ಲಿ ಬಿಸಿಯಾದ ನೀರು ಸ್ತ್ರೀಯರ ಸ್ತನ ಸಂಪರ್ಕದಿಂದಾಗಿ ತಂಪಾಯಿತೆಂದು ವರ್ಣಿಸುತ್ತಾರೆ.

**ವಾರಿನರ್ಮಪರಯೌವತವಕ್ಷೋಜಾತಸಂಗಮವಶಾತ್ ಸರಸೀನಾಮ್ ।**
**ಶೈತ್ಯಮಾಪ ಪರಿತಪ್ತಜಡಾನಾಂ ಕಿಂ ನ ಯಚ್ಛತಿ ಸುವೃತ್ತಸಮಾಜಃ ॥೩೪॥**

**ತಾತ್ಪರ್ಯ :** ಗ್ರೀಷ್ಮಋತುವಿನಲ್ಲಿ ತರುಣೀ ಸ್ತ್ರೀಯರು ಗುಂಪು ಗುಂಪಾಗಿ ಜಲವಿಹಾರವನ್ನು ಮಾಡುತ್ತಿದ್ದರು. ಬಿಸಿಲಿನಿಂದ ತಪ್ತವಾದ ಕೊಳಗಳ ನೀರೂ ಸಹಾ ಅವರ ತಂಪಾದ ಸ್ತನಗಳ ಸಂಪರ್ಕದಿಂದ ಏರಿದ ಕಾವನ್ನು ಕಳೆದುಕೊಂಡು ತಂಪಾಯಿತು. ಒಳ್ಳೆಯ ನಡತೆಯುಳ್ಳವರ ಸಮಾಜವು (ಸುವೃತ್ತರ ಸಮಾಜವು) ಬಡತನದಿಂದ ಪೀಡಿತರಾಗಿ ಕಷ್ಟ ಪಡುತ್ತಿರುವ ದಡ್ಡರಿಗೂ ಎಲ್ಲ ವಿಧವಾದ ಸಹಾಯವನ್ನು ಮಾಡುತ್ತದೆ. ಅದೇ ರೀತಿಯಲ್ಲಿ ಸುವೃತ್ತಗಳಾದ ಸ್ತನಗಳ ಸಮಾಜವೂ (ಚೆನ್ನಾಗಿ ದುಂಡಗಿರುವ ಸ್ತನಗಳ ಸಮೂಹವೂ) ಕಾಮಿನೀ ವಿರಹ ಸಂತಪ್ತರಾಗಿ

ಬೇರೆ ಎಲ್ಲಾ ವ್ಯಾಪಾರಗಳನ್ನು ಬಿಟ್ಟು ಕುಳಿತಿರುವ ಕಾಮಿನಿಗಳಿಗೂ ಏನನ್ನು ತಾನೇ ಕೊಡುವುದಿಲ್ಲ? ಅವರ ವಿರಹ ಸಂತಾಪವನ್ನು ತಮ್ಮ ಆಲಿಂಗನದಿಂದ ಹೋಗಲಾಡಿಸುತ್ತದೆ. ಈ ಸುವೃತ್ತ (ಸ್ತನ) ಸಮಾಜವು ಪರಿತಪ್ತ ಜಡ (ಜಲ)ಗಳುಳ್ಳ ತಾವರೆ ಹೂವುಗಳಿಗೆ ತಂಪನ್ನು ಉಂಟುಮಾಡಲು ಪರಿತಪ್ತರಾದ ಜಡರಿಗೆ (ಮೂರ್ಖರಿಗೆ) ಸುವೃತ್ತ ಸಮಾಜವು (ಒಳ್ಳೆಯ ಸಮಾಜವು) ಸಹಾಯ ಮಾಡುತ್ತದೆ. ಸುವೃತ್ತ (ಸ್ತನಗಳ) ಸಮಾಜವು ಪರಿತಪ್ತ ಜಡರಿಗೆ, ವಿರಹ ಪೀಡಿತರಾಗಿ ಸ್ತಬ್ಧರಾಗಿರುವವರಿಗೂ ತಾಪವನ್ನು ಹೋಗಲಾಡಿಸಿ ತಂಪನ್ನೆರೆದು ಸುಖಪಡಿಸುತ್ತದೆ. ಇಲ್ಲಿ ಅರ್ಥಾಂತರನ್ಯಾಸಾಲಂಕಾರವಿದೆ. ಕಿಂ ನ ಯಚ್ಛತಿ ಸುವೃತ್ತ ಸಮಾಜಃ? ಎಂಬಲ್ಲಿ ಸುವೃತ್ತಸಮಾಜಃ ಎಂಬಲ್ಲಿರುವ ಶ್ಲೇಷದ ಮೂಲಕವಾಗಿ ಅರ್ಥಾಂತರನ್ಯಾಸದ ಧ್ವನಿಯೂ ಇದೆ.

**ಅವತಾರಿಕೆ :** ಈಗ ಕವಿಗಳು ಬೇಸಿಗೆಯಲ್ಲಿ ಹಗಲು ಹೆಚ್ಚಾಗಿರುವುದಕ್ಕೆ ಚಕ್ರವಾಕ ದಂಪತಿಗಳ ಆಶೀರ್ವಾದವೇ ಕಾರಣ ಎಂಬುದಾಗಿ ವರ್ಣಿಸುತ್ತಾರೆ.

**ವೈರಿಚಂದ್ರಗುಣಪಕ್ಕಣಭೀತ್ಯಾ ಚಕ್ರವಾಕಮಿಥುನಂ ಪರಿಶುಷ್ಯತ್ ।**
**ಆತಪರ್ತುವಿಲಸದ್ದಿವಸೇಭ್ಯಃ ಪಾರಿತೋಷಿಕಮದಾತ್ ಪರಿಣಾಹಮ್ ॥೩೫॥**

**ತಾತ್ಪರ್ಯ :** ರಾತ್ರಿಯಾಗುತ್ತಲೇ ಚಕ್ರವಾಕ ಪಕ್ಷಿಗಳ ಜೋಡಿಗೆ ವಿಯೋಗ ಉಂಟಾಗುತ್ತದೆ. ಆದುದರಿಂದ ರಾತ್ರಿಯ ಅಧಿಪತಿಯಾದ ಚಂದ್ರನು ಚಕ್ರವಾಕ ದಂಪತಿಗಳಿಗೆ ಶತ್ರುವು. ಅವನ ಬೆಳದಿಂಗಳು ಬೇಡರ ಮನೆಯ ಕಸಾಯಿಖಾನೆಯಂತೆ ಆ ಪಕ್ಷಿಯುಗಳಕ್ಕೆ ಹೆದರಿಕೆಯನ್ನು ಉಂಟುಮಾಡುತ್ತದೆ. ಹೀಗೆ ರಾತ್ರಿ, ರಾತ್ರಿಯ ಚಂದ್ರ ಮತ್ತು ಅವನ ಬೆಳದಿಂಗಳಿನಿಂದ ಚಕ್ರವಾಕ ಪಕ್ಷಿಯುಗಳವು ಹೆದರಿ ಒಣಗಿಹೋಗುತ್ತಿದ್ದವು. ಆದರೆ ಬೇಸಿಗೆಯು ಪ್ರಾರಂಭವಾದಾಗ ಹಗಲುಗಳು ದೀರ್ಘವಾದವು. ರಾತ್ರಿಯು ಚಿಕ್ಕದಾಯಿತು. ಆಗ ಚಕ್ರವಾಕ ಪಕ್ಷಿಗಳ ಜೋಡಿಯು ರಾತ್ರಿಯು ಕ್ಷೀಣವಾಗಲೀ, ಹಗಲು ದೀರ್ಘವಾಗಲೀ ಎಂದು ಹಂಬಲಿಸುತ್ತಾ ಆಶೀರ್ವಾದವೆಂಬ ಬಹುಮಾನವನ್ನು ಗ್ರೀಷ್ಮಋತುವಿನ ದಿನಗಳಿಗೆ ಕೊಟ್ಟಿತೋ ಎಂಬಂತ್ತಿತ್ತು ಎಂದು ಕವಿಗಳು ಉತ್ಪ್ರೇಕ್ಷಿಸಿದ್ದಾರೆ.

**ಅವತಾರಿಕೆ :** ಈಗ ಕವಿಗಳು ಸೂರ್ಯದೇವನು ಉತ್ತರಾಯಣದಿಂದ ದಕ್ಷಿಣಾಯಣಕ್ಕೆ ಬಂದುದನ್ನು ವರ್ಣಿಸುತ್ತಾರೆ.

**ಸಾಮವರ್ತಿಹರಿತಂ ಸಸುತೇತಿ ಪ್ರಾಪ್ಯ ತಾಂ ಹೃತವಸುರ್ದಿಶಯಾಽರ್ಕಃ ।**
**ದೂರತಃ ಪರಿಹರನ್ನಥ ಪಶ್ಚಾತ್ತಾಪತಃ ಪ್ರತಿಯಯೌ ಧನದಾಶಾಮ್ ॥೩೬॥**

**ತಾತ್ಪರ್ಯ :** ಯಥಾ ಲೋಕೇ ಕಶ್ಚನ ಧನವಾನ್ ಪುರುಷಃ ಪುತ್ರ ಸಹಿತ ಸ್ತ್ರೀ (ಭಾರ್ಯಾ) ಸಮೀಪಂ ಗತ್ವಾ ತಯಾ ಹೃತಧನೇ ಪಶ್ಚಾತ್ತಪ್ತಃ ಧನದಾಶಾಂ ಧನಪ್ರದಸ್ಯ ರಾಜಾದೇರಾಶಾಂ

ತತ್ ಸ್ಥಿತದಿಶಂ ಗಚ್ಛತಿ ಏವಮರ್ಕೋ ದಕ್ಷಿಣಾಶಾಂ ದಕ್ಷಿಣಾಯನೇ ಗತ್ವಾ ಹೃತವಸುಃ ಕಾಂತಿವಿಹೀನಃ ಅನಂತರಂ ಉತ್ತರಾಯಣೇ ಕುಬೇರದಿಶಂ ಉತ್ತರದಿಶೌ ಯಯೌ!

ಒಬ್ಬ ಧನವಂತನಾದ ಪುರುಷನು ತನ್ನ ಮಗನೊಡನೆ ಹೆಂಡತಿ ಇದ್ದಾಳೆ, ಅಲ್ಲಿ ಸುಖವಾಗಿರಬಹುದು ಎಂದು ಭಾವಿಸಿ ಅಲ್ಲಿಗೆ ಹೋಗುತ್ತಾನೆ. ಆ ಹೆಂಡತಿಯು ಮಧುರವಾದ ಮಾತುಗಳನ್ನು ಆಡುವಳು, ಬಹಳ ಒಳ್ಳೆಯವಳೆಂದು ಭಾವಿಸಿರುತ್ತಾನೆ. ಆದರೆ ಆ ಹೆಂಡತಿಯು ಗಂಡನ ಸರ್ವಸ್ವವನ್ನೂ ಅಪಹರಿಸಿದಾಗ ಆ ಪುರುಷನು ಪಶ್ಚಾತ್ತಾಪಪಡುತ್ತಾ, ಹಣ ಕೊಡುವ ಒಬ್ಬ ರಾಜನು ಅಥವಾ ಧನಿಕನು ಇರುವ ದಿಕ್ಕಿಗೆ ಹೋಗುತ್ತಾನೆ. ಅದೇ ರೀತಿಯಲ್ಲಿ ಸೂರ್ಯನು ಸಾಂತ್ವನ ವಚನವನ್ನು ಆಡುವ 'ದಕ್ಷಿಣ' ಎಂಬ ನಾಯಿಕೆಯಂತೆ ಇರುವ ದಿಕ್ಕನ್ನು ಕುರಿತು ಹೊರಟನು. ಸೂರ್ಯನು ದಕ್ಷಿಣಾಯನಕ್ಕೆ ಹೋದನು. ಅಲ್ಲಿ ತನ್ನ ಮಗನಾದ ದಕ್ಷಿಣ ದಿಕ್ಕಿಗೆ ಅಧಿಪತಿಯಾದ ಯಮನು ಇದ್ದಾನೆ. ಅವನಿಂದ ಕೂಡಾ ದಕ್ಷಿಣಾ ನನಗೆ ಅನುಕೂಲವಾಗಿರುತ್ತಾಳೆ ಎಂದು ಭಾವಿಸಿ ಅಲ್ಲಿಗೆ ಹೊರಟನು. ಆದರೆ ಆ ದಕ್ಷಿಣ (ದಿಕ್ಕು) ಸೂರ್ಯನ ಕಾಂತಿಯನ್ನೆಲ್ಲಾ ಅಪಹರಿಸಿದಳು. (ದಕ್ಷಿಣಾಯನದಲ್ಲಿ ಸೂರ್ಯನ ಪ್ರಕಾಶವು ಮಂದವಾಗುತ್ತದೆ.) ಆಗ ಆಹಾ! ನನ್ನ ವಸು (ಕಾಂತಿ – ಹಣ) ಎಲ್ಲವೂ ಕಳೆದುಹೋಯಿತಲ್ಲಾ ಎಂದು ಪಶ್ಚಾತ್ತಾಪಪಡುತ್ತಾ, ಪುನಃ (ವಸುವನ್ನು – ಹಣ ಕಾಂತಿ) ಗಳಿಸಿಕೊಳ್ಳಲು ಧನದನಾದ ಕುಬೇರನಿಗೆ ಸಂಬಂಧಪಟ್ಟ ಉತ್ತರ ದಿಕ್ಕನ್ನು ಕುರಿತು ಹೊರಟನು. ಉತ್ತರಾಯಣಕ್ಕೆ ಹೋದನು. ಇದು ಧ್ವನಿಗೆ ಒಳ್ಳೆಯ ಉದಾಹರಣ ರೂಪವಾದ ಪದ್ಯವಾಗಿದೆ. "ಸಾಮವರ್ತಹರಿತಾಂ" ಎಂಬುದು ದಕ್ಷಿಣ ದಿಕ್ಕು ಎಂಬ ಅರ್ಥವನ್ನು ಕೊಡುವಾಗ ಸ್ವಲ್ಪ ಕ್ಲೇಶವಿದ್ದರೂ ಅದು ಧ್ವನಿಗೆ ಪೋಷಕವಾಗಿದೆ. "ಧನದಾಶಾಂ" ಎಂಬ ಪದವೂ ಧನದ = ಕುಬೇರನ, ಆಶಾ = ದಿಕ್ಕು, ಧನದ = ಹಣವನ್ನು ಕೊಡುವ ಧನಿಕನ, ಆಶಾ = ದಿಕ್ಕು ಎಂಬ ಅರ್ಥವನ್ನು ಕೊಡುತ್ತದೆ. ಧ್ವನಿಗೆ ಪೋಷಕವಾಗಿದೆ.

**ಅವತಾರಿಕೆ :** ಈಗ ಕವಿಗಳು ಶ್ರೀರಾಘವೇಂದ್ರ ಗುರುವರ್ಯರು ಗ್ರೀಷ್ಮ ಋತುವಿನಲ್ಲಿ ಶ್ರೀರಾಮಚಂದ್ರ ದೇವರಿಗೆ ತೆಪ್ಪೋತ್ಸವವನ್ನು ಮಾಡಿದುದನ್ನು ವರ್ಣಿಸುತ್ತಾರೆ.

**ತತ್ರ ತತ್ರಭವತಾ ಯತಿನೇತ್ರಾ ರಾಘವೇಂದ್ರಗುರುಣಾ ಕ್ರಿಯತೇಽನ್ಯೈಃ ।**
**ಪುಲ್ಲತಲ್ಲಜಸರೋಜಸರಸ್ಯಾಂ ಜಾನಕೀಪರಿವೃಢಪ್ಲವಕೇಲೀ ॥೩೭॥**

**ತಾತ್ಪರ್ಯ :** ಪರಮ ಪೂಜ್ಯರಾದ ಶ್ರೀರಾಘವೇಂದ್ರ ಗುರುಸಾರ್ವಭೌಮರು ಯತಿನಾಯಕರು. ಅವರು ಗ್ರೀಷ್ಮಋತುವಿನಲ್ಲಿ ಅರಳಿದ ಕೋಮಲವಾದ ತಾವರೆಗಳಿಂದ ಭರಿತವಾದ ಕೊಳದಲ್ಲಿ ಸೀತಾಪತಿ ಶ್ರೀರಾಮಚಂದ್ರ ದೇವರಿಗೆ ತೆಪ್ಪೋತ್ಸವದ ವಿಹಾರವನ್ನು ಶಿಷ್ಯರುಗಳ ಮೂಲಕ ಏರ್ಪಡಿಸಿದರು.

**ವಿಶೇಷಾಂಶ :** ಈ ಶ್ಲೋಕದಲ್ಲಿ ಅಕ್ರಿಯತಾನ್ಯೈಃ ಎಂದು ಒಂದ ಪಾಠ; ಕ್ರಿಯತೇಽನ್ಯೈಃ ಎಂಬುದಾಗಿ ಮತ್ತೊಂದು ಪಾಠವು. ಎರಡನೆಯ ಪಾಠದಲ್ಲಿ ಗತಕಾಲದ ತೆಪ್ಪೋತ್ಸವವನ್ನು

ವರ್ತಮಾನ ಕಾಲದಂತೆ ನಿರ್ದೇಶ ಮಾಡಿರುವುದು ಸರಿಯಲ್ಲ ಎಂದು ಹೇಳುವುದಾದರೆ, ರಾಘವೇಂದ್ರ ಗುರುಣಾಕ್ರಿಯತೇ ಸ್ಮ ಎಂದು ಪಾಠವನ್ನು ಇಟ್ಟುಕೊಂಡು ತೆಪ್ಪೋತ್ಸವವು ಮಾಡಲ್ಪಟ್ಟಿತು ಎಂದು ಅರ್ಥವನ್ನು ಇಟ್ಟುಕೊಳ್ಳಬೇಕು. ಅಥವಾ ಈಗಲೂ ಶ್ರೀರಾಘವೇಂದ್ರತೀರ್ಥರ ಪೀಠಸ್ಥರಾದ ಯತಿಗಳಲ್ಲಿ ಅವರೇ ಸನ್ನಿಹಿತರಾಗಿದ್ದು ತಾವೇ ಆ ನೌಕೋತ್ಸವವನ್ನು ಮಾಡುತ್ತಾರೆ ; ಮಾಡಿಸುತ್ತಾರೆ. ಆದುದರಿಂದ ಗುರುಗಳು ಮಾಡಿದ ತೆಪ್ಪೋತ್ಸವವನ್ನು ವರ್ತಮಾನ ಕಾಲದ ಉತ್ಸವದಂತೆ ವರ್ಣಿಸಿರುವುದು ಯುಕ್ತವೆಂದೇ ತಿಳಿಯಬೇಕು. ಅಥವಾ ಶ್ರೀರಾಘವೇಂದ್ರಗುರುಗಳ ಕಾಲದವರೇ ಆದ ಕವಿಗಳು ತಾವು ಪ್ರತ್ಯಕ್ಷವಾಗಿ ಕಂಡ ತೆಪ್ಪೋತ್ಸವವು ನಡೆಸಲ್ಪಡುತ್ತದೆ ಎಂಬುದಾಗಿ ವರ್ಣಿಸಿದ್ದಾರೆ ಎಂದು ತಿಳಿಯಬೇಕು.

ಕ್ರಿಯತೇಽನ್ಯೈಃ ಎಂಬ ಪಾಠದಲ್ಲಿ ಸಹ ಒಂದು ಅಧ್ಯಾಹಾರ. ಅನ್ಯೈಃ ಶಿಷ್ಯೈಃ ಸಹ ರಾಘವೇಂದ್ರಗುರುಣಾ ಕ್ರಿಯತೇ ಎಂದು ಯೋಜನೆ.

ಇತರ ಶಿಷ್ಯರಿಂದ ಕೂಡಿಕೊಂಡು ರಾಘವೇಂದ್ರ ಗುರುಗಳಿಂದ ನೌಕಾವಿಹಾರೋತ್ಸವವು ಮಾಡಲ್ಪಡುತ್ತದೆ ಎಂದು ಅರ್ಥ.

ಅಥವಾ ಶ್ರೀರಾಘವೇಂದ್ರ ಗುರುಣಾ ತದಾಜ್ಞಾನುವರ್ತಿಭಿರನ್ಯೈರ್ಜನೈಶ್ಚ ಕ್ರಿಯತೇ ಎಂದು ಚಕಾರಾಧ್ಯಾಹಾರ ಮಾಡಿಕೊಂಡು ಯೋಜನೆ ಮಾಡಿದಾಗ ಶ್ರೀರಾಘವೇಂದ್ರ ಗುರುಗಳಿಂದಲೂ, ಅವರ ಆಜ್ಞಾನುವರ್ತಿಗಳಾದ ಇತರರಿಂದಲೂ ಉತ್ಸವವು ಮಾಡಲ್ಪಡುತ್ತದೆ ಎಂದು ಅರ್ಥ.

ಅಥವಾ ಶ್ರೀರಾಘವೇಂದ್ರಗುರುಣಾ ಅನ್ಯೈಃ ದ್ವಾರಭೂತೈಃ ಕ್ರಿಯತೇ ಎಂದು ಯೋಜನೆ. ಇತರರು ನಿಮಿತ್ತಮಾತ್ರ! ಗುರುಗಳು ಪ್ರಧಾನರು; ಅವರಿಗೆ ಪ್ರೇರಕರಾದ ಗುರುಗಳಿಗೇ ಪ್ರಧಾನವಾಗಿ ಉತ್ಸವಕರ್ತೃತ್ವವಿದೆ ಎಂದು ಈ ಯೋಜನೆಯಿಂದ ತಿಳಿದುಬರುತ್ತದೆ.

## ವರ್ಷಋತುವರ್ಣನಂ – ಮಳೆಗಾಲದ ವರ್ಣನೆ

**ಅವತಾರಿಕೆ :** ಈಗ ಕವಿಗಳು ಮಳೆಗಾಲದ ದಿನಗಳು ಚೆನ್ನಾಗಿ ವಿರಾಜಿಸುತ್ತಿದ್ದವು ಎಂದು ವರ್ಣಿಸುತ್ತಾರೆ.

**ವಾರಿದಾವಲಿತಿರೋಹಿತಮಿತ್ರಂ ಮಾನಸಾಭಿಮುಖಪಾಂಡುರಪತ್ರಮ್ ।**
**ನೃತ್ಯದದ್ರಿತನಯಾಸುತಪತ್ರಂ ದೀವ್ಯತಿ ಸ್ಮ ದಿನಮಂಗಜಮಿತ್ರಮ್ ॥೩೮॥**

**ತಾತ್ಪರ್ಯ :** ಸೂರ್ಯನು ಮೋಡಗಳ ಸಾಲಿನಿಂದ ಮುಚ್ಚಿಹೋದನು. ಹಂಸಗಳು ಮಾನಸ ಸರೋವರಕ್ಕೆ ಅಭಿಮುಖವಾಗಿ ಹೊರಟವು. ಹಿಮವಂತನ ಮಗಳಾದ ಪಾರ್ವತಿಯ ಪ್ರಿಯ ಪುತ್ರನಾದ ಸುಬ್ರಹ್ಮಣ್ಯನ ವಾಹನವಾದ ನವಿಲು ಕುಣಿಯಲಾರಂಭಿಸಿತು. ಮನ್ಮಥನಿಗೆ

ಸ್ನೇಹಿತನಾಗಿರುವ, ವಿರಹಿಗಳಿಗೆ ಉದ್ದೀಪಕವಾದ ಇಂತಹಾ ದಿನವು ಆಟವಾಡಲಾರಂಭಿಸಿತು. ವಿರಾಜಿಸಿತು. ಮಳೆಗಾಲವು ಆರಂಭವಾಯಿತು ಎಂದು ತಾತ್ಪರ್ಯ. ಮೋಡಮುಚ್ಚಿದ ಸೂರ್ಯಮಂಡಲವುಳ್ಳ, ಮಾನಸಸರೋವರಕ್ಕೆ ಅಭಿಮುಖವಾದ ಹಂಸಗಳುಳ್ಳ, ಕುಣಿಯುವ ನವಿಲುಗಳುಳ್ಳ, ಮನ್ಮಥನ ಸ್ನೇಹಿತನಾದ ದಿನವು ಬಂದಿತು. ಎಂದು ಈ ವಿಶೇಷಣಗಳಿಂದಲೇ ವಿಶೇಷ್ಯವಾದ ವರ್ಷಋತುವನ್ನು ಪರಿಚಯ ಮಾಡಿಕೊಟ್ಟ ಕವಿಗಳು ಇಲ್ಲಿ ಚಮತ್ಕಾರವನ್ನು ತೋರಿದ್ದಾರೆ.

**ಅವತಾರಿಕೆ :** ಈಗ ಕವಿಗಳು ಮಳೆಗಾಲದ ಕಾಮನ (ಇಂದ್ರನ) ಬಿಲ್ಲನ್ನು ವರ್ಣಿಸುತ್ತಾರೆ.

**ಪ್ರಾವೃಡಿಂದುಸಹಜಾಂ ಪರಿಣೇತುಃ ಶಬ್ದಮಂಡಲಸಮಾಶ್ರಯಶೌರೇಃ ।**
**ಕುಂಕುಮಾಕ್ತಮಚಿರಾದುಪವೀತಂ ಪಾಕಶಾಸನಶರಾಸಮಿಷಾಭಾತ್ ॥೩೯॥**

**ತಾತ್ಪರ್ಯ :** ಮದುವಣಿಗನು ಮದುವೆಯಾಗುವುದಕ್ಕೆ ಮೊದಲು ಕುಂಕುಮದಲ್ಲಿ ಅದ್ದಿದ ಕೆಂಪಾದ ಜನಿವಾರವನ್ನು ಹಾಕಿಕೊಂಡು ಅನಂತರ ಮದುವೆಯಾಗಲು ಹೋಗುತ್ತಾನೆ. ಆ ಪ್ರಸಿದ್ಧಿಯನ್ನು ಇಟ್ಟುಕೊಂಡು ಕೆಂಪಾದ ಕಾಮನಬಿಲ್ಲನ್ನು ಕವಿಗಳು ವರ್ಣಿಸುತ್ತಾರೆ. ಮಳೆಗಾಲವೆಂಬ ಚಂದ್ರಸಹೋದರಿಯಾದ ಲಕ್ಷ್ಮಿಯನ್ನು ಮದುವೆಯಾಗಲಿರುವ ಆಕಾಶವೆಂಬ ನಾರಾಯಣನ ಯಜ್ಞೋಪವೀತವು ಕುಂಕುಮದಲ್ಲಿ ಅದ್ದಿದ್ದರಿಂದ ಕೆಂಪಾಗಿ ಕಾಣಿಸುತ್ತಿದೆಯೋ ಎಂಬಂತೆ ಆಗ ತಾನೇ ಉದಯಿಸಿದ ಕಾಮನಬಿಲ್ಲು ಕಾಣಿಸಿತು. ಕಾಮನ ಬಿಲ್ಲಿನ ನೆಪದಿಂದ ನಾರಾಯಣನೆಂಬ ಮದುವಣಿಗನ ಜನಿವಾರವೇ ಶೋಭಿಸಿತು ಎಂದು ಕವಿಗಳು ಮಳೆಗಾಲದಲ್ಲಿ ಹೆಚ್ಚಾಗಿ ಕೆಂಪಾಗಿ ಕಾಣಿಸುವ ಇಂದ್ರಧನುಸ್ಸನ್ನು ವರ್ಣಿಸಿದ್ದಾರೆ.

**ವಿಶೇಷಾಂಶ :** ಪಾಕಶಾಸನಶರಾಸಮಿಷಾ ಎಂಬಲ್ಲಿ, ಮಿಷ್ ಎಂದು ಹಲಂತವಾಗಿಟ್ಟುಕೊಂಡು ತೃತೀಯಾ ವಿಭಕ್ತ್ಯಂತವಾಗಿ ಉಪಯೋಗಿಸಿದಂತೆ ಕಾಣುತ್ತದೆ. ಆದರೆ ಮಿಷ್ ಎಂದು ಹಲಂತವಾದ ನೆಪ ಎಂಬ ಅರ್ಥದ ಶಬ್ದವು ಕೋಶಗಳಲ್ಲಿ ಕಾಣಿಸುವುದಿಲ್ಲ. ಆದ್ದರಿಂದ ಇಲ್ಲಿ ಪಾಕಶಾಸನಶರಾಸ ಇವಾಭಾತ್ ಎಂದು ಪಾಠಾಂತರವನ್ನು ಮಾಡಿಕೊಳ್ಳಬಹುದು. ಪಾಕಶಾಸನಶರಾಸಮಿವಾಭಾತ್ ಎಂದು ಇದ್ದ ಪಾಠವು ಲೇಖಕರ ಪ್ರಮಾದದಿಂದ ಮಿಷಾ ಎಂದು ಬಿದ್ದಿರಬಹುದು ಎಂಬುದಾಗಿಯೂ ಸಮಾಧಾನ ಹೇಳಬಹುದು. ಅಥವಾ ಮಿಷ್ ಧಾತುವಿಗೆ ಭಾವಾರ್ಥದಲ್ಲಿ ಕ್ವಿಪ್ ಪ್ರತ್ಯಯ ಬಂದು ಮಿಷ್ ಎಂದು ಷಕಾರಾಂತ ಶಬ್ದವನ್ನು ಇಟ್ಟುಕೊಂಡು ಅಥವಾ ತೃತೀಯಾ ವಿಭಕ್ತಿಯಲ್ಲಿ ಮಿಷಾ ಎಂದಾಗಿದೆ ಎಂದೂ ಇಟ್ಟುಕೊಳ್ಳಬಹುದು. "ರತ್ನಮುಷ್" ಶಬ್ದದ ರತ್ನಮುಷಾ ತೃತೀಯದಂತೆ ಮಿಷಾ ಎಂಬುದೂ ತೃತೀಯಾಂತ ಎಂದಿಟ್ಟುಕೊಳ್ಳಬಹುದು.

**ಅವತಾರಿಕೆ :** ಈಗ ಕವಿಗಳು ಮಳೆಗಾಲದಲ್ಲಿ ಕೆಂಪಾದ ಕೀಟಗಳು ಓಡಾಡುವುದನ್ನು ವರ್ಣಿಸುತ್ತಾರೆ.

**ಪೀತಪುಷ್ಕರಕಲಾಪಪಯೋಭ್ಯೋ ನಿರ್ಗತ್ತೈರಿವ ಜಲೈರ್ಜಲದೇಭ್ಯಃ ।**
**ಪದ್ಮರಾಗಮಣಿವಿದ್ರುಮಭಂಗೈರಿಂದ್ರಗೋಪನಿಕರೈಃ ಸ್ಥಗಿತಾ ಭೂಃ ॥೪೦॥**

**ತಾತ್ಪರ್ಯ :** ಮೋಡಗಳು ಬೇಸಿಗೆ ಕಾಲದಲ್ಲಿ ನೀರನ್ನು ಹೀರುವಾಗ ಕೆಂಪಾದ ಕಮಲದ ರಾಶಿಯನ್ನೂ ನೀರಿನ ಜೊತೆಗೆ ನುಂಗಿದವು. ಕುಡಿದ ನೀರನ್ನು ಮಳೆಗಾಲದಲ್ಲಿ ಸುರಿಸುವಾಗ ಹಿಂದೆ ನೀರಿನ ಜೊತೆಗೆ ಕುಡಿದಿದ್ದ ಕಮಲಗಳನ್ನು ನೀರಿನ ರೂಪದಲ್ಲಿ ಹೊರಗೆ ಸುರಿಸಿದವೋ ಎಂಬಂತೆ, ಕೆಂಪಾದ ಇಂದ್ರಗೋಪವೆಂಬ ಕೀಟಗಳು ಮಳೆಗಾಲದಲ್ಲಿ ಕಾಣಿಸುತ್ತಿದ್ದವು. ಅವು ಪದ್ಮರಾಗ ಮಣಿಗಳಂತೆಯೂ, ಹವಳಗಳ ತುಂಡುಗಳಂತೆಯೂ, ಕೆಂಪಾಗಿ ಇದ್ದು, ಪದ್ಮರಾಗ ಮತ್ತು ಹವಳಗಳನ್ನು ತಮ್ಮ ಬಣ್ಣದಿಂದ ಸೋಲಿಸುತ್ತಿದ್ದವು. ಇಂತಹಾ ಹುಳುಗಳಿಂದ ಮಳೆಗಾಲದಲ್ಲಿ ಭೂಮಿಯು ಮುಚ್ಚಿಹೋಯಿತು ಎಂದು ಮಳೆಗಾಲವನ್ನು ವರ್ಣಿಸಿದ್ದಾರೆ.

"ಜಲಪಾನಸಮಯೇ ಕಮಲಸಹಿತ ಜಲಪಾನಂ ಕೃತವದ್ಭಿಃ ಮೇಘೈಃ ವೃಷ್ಟಜಲಾನ್ಯಪಿ ಕಮಲೋಪೇತಾನಿ । ತೈರಿವ ಸ್ಥಿತೈಃ ಪದ್ಮರಾಗಮಣಿವಿದ್ರುಮಕಾಂತಿಭಿಃ ಕೀಟೈರ್ಭೂಮಿರಾಸ್ತೃತಾ । ವರ್ಷಾಕಾಲೇ ತಾದೃಶಕೀಟಾನಾಮುತ್ಪತ್ತಿರಿತಿ ಭಾವಃ ।

ನೀರು ಕುಡಿಯುವಾಗ ಕಮಲಸಹಿತ ಜಲಪಾನ ಮಾಡಿರುವ ಮೋಡಗಳಿಂದ ಸುರಿಸಲ್ಪಟ್ಟ ಜಲಗಳೂ ಕಮಲದಿಂದ ಕೂಡಿವೆ. ಹೀಗೆ ಕಮಲದಂತಿರುವ ಪದ್ಮರಾಗ ಮತ್ತು ಹವಳದ ಕಾಂತಿಯುಳ್ಳ ಹುಳಗಳಿಂದ ಭೂಮಿಯು ಆಚ್ಛಾದಿತವಾಯಿತು. ಮಳೆಗಾಲದಲ್ಲಿ ಅಂತಹಾ ಕೀಟಗಳ ಉತ್ಪತ್ತಿಯಾಗುತ್ತದೆ ಎಂದು ಭಾವ. (ಗುರುಪಾದಸೇವಾ ವ್ಯಾಖ್ಯಾನ).

**ಅವತಾರಿಕೆ :** ಈಗ ಕವಿಗಳು ಮಳೆಗಾಲದ ಮೋಡಗಳ ಮಧ್ಯದಲ್ಲಿ ಬೆಳಗುವ ಮಿಂಚನ್ನು ವರ್ಣಿಸುತ್ತಾರೆ.

**ಇಂದ್ರನೀಲಕುಲನೀಲಘನಾಲೀಮಧ್ಯವೃತ್ತಿಚಪಲೇವ ಚಕಾಶೇ ।**
**ಪ್ರಾವೃಡಜ್ಞನಯನಾಚಿಕುರಾಲೀಯಲ್ಲಕೋಲ್ಲಸಿತಕುಂಕುಮರೇಖಾ ॥೪೧॥**

**ತಾತ್ಪರ್ಯ :** ಸ್ತ್ರೀಯರು ಕಪ್ಪಾದ ತಮ್ಮ ತಲೆಕೂದಲನ್ನು ಬಾಚಿ ಅದರ ಮಧ್ಯದಲ್ಲಿ ಬೈತಲೆಯನ್ನು ಮಾಡಿಕೊಳ್ಳುತ್ತಾರೆ. ಆ ಬೈತಲೆಯ ಉದ್ದಕ್ಕೂ ಕುಂಕುಮವನ್ನು ಹಚ್ಚಿಕೊಳ್ಳುತ್ತಾರೆ. ಮಳೆಗಾಲದಲ್ಲಿ ಇಂದ್ರನೀಲಮಣಿ ಸಮೂಹದಂತೆ ಕಪ್ಪಾದ ಮೋಡಗಳ ಸಾಲುಗಳ ಮಧ್ಯದಲ್ಲಿ ಮಿಂಚು ಪ್ರಕಾಶಿಸುತ್ತಿತ್ತು. ಅದು ಮಳೆಗಾಲವೆಂಬ ಸುಂದರಳಾದ ಸ್ತ್ರೀಯ ಬಾಚಿದ ತಲೆಗೂದಲಿನ ಮಧ್ಯದಲ್ಲಿರುವ ಬೈತಲೆಯಲ್ಲಿರುವ ಕುಂಕುಮರೇಖೆಯಂತೆ ಶೋಭಿಸಿತು ಎಂದು ಕವಿಗಳು ಉಪಮಾಲಂಕಾರದಿಂದ ವರ್ಣಿಸುತ್ತಾರೆ.

**ಅವತಾರಿಕೆ :** ಈಗ ಕವಿಗಳು ಮಳೆಗಾಲದಲ್ಲಿ ಮೋಡಗಳು ದಕ್ಷಿಣ ದಿಕ್ಕಿಗೆ ಹೋಗುವುದನ್ನು ವರ್ಣಿಸುತ್ತಾರೆ.

**ಕುಂಭಸಂಭವಗುರೋರುಪದೇಶಂ ಪ್ರಾಪ್ತುಕಾಮ ಇವ ದಕ್ಷಿಣದೇಶಮ್ ।**
**ಜೃಂಭಮಾಣಜಲಧೌ ಜಲಪಾನೇ ಪಾರಿವಾಹನಿವಹೋ ವಿಶತಿ ಸ್ಮ ॥೪೨॥**

**ತಾತ್ಪರ್ಯ :** ಮಳೆಗಾಲದಲ್ಲಿ ಮೋಡಗಳು ದಕ್ಷಿಣ ದಿಕ್ಕಿನೆಡೆಗೆ ಚಲಿಸುತ್ತವೆ. (ವರ್ಷಕಾಲೇ ಮೇಘಾಃ ದಕ್ಷಿಣಾಂ ದಿಶಂ ಯಾಂತಿ) ದಕ್ಷಿಣ ದಿಕ್ಕಿನಲ್ಲಿ ಮಲಯಾಚಲದಲ್ಲಿ ಅಗಸ್ತ್ಯರು ವಾಸಿಸುತ್ತಾರೆ ಎಂದು ಪುರಾಣ ಪ್ರಸಿದ್ಧವಾಗಿದೆ. (ದಕ್ಷಿಣಾದಿಶಿ ಮಲಯಾಚಲೇ ಅಗಸ್ತ್ಯೋ ವಸತೀತಿ ಪುರಾಣಪ್ರಸಿದ್ಧಂ) ಈ ಪ್ರಸಿದ್ಧಿಯನ್ನು ಉಪಯೋಗಿಸಿಕೊಂಡು ಮೋಡಗಳು ಮಳೆಗಾಲದಲ್ಲಿ ದಕ್ಷಿಣ ದಿಕ್ಕಿಗೆ ಸಂಚರಿಸುವುದನ್ನು ಉತ್ಪ್ರೇಕ್ಷಿಸುತ್ತಾರೆ. ಮಳೆಗಾಲದಲ್ಲಿ ಉಕ್ಕಿ ಅಬ್ಬರಿಸುತ್ತಿರುವ ಸಮುದ್ರದಲ್ಲಿ ನೀರು ಕುಡಿಯಬೇಕೆಂಬ ಅಪೇಕ್ಷೆಯುಳ್ಳ ಮೋಡಗಳ ಸಮೂಹವು ಸಮುದ್ರದ ನೀರನ್ನು ಕುಡಿದು ಅದನ್ನು ಒಣಗಿಸಿದ (ಬರಿದು ಮಾಡಿದ) ಅಗಸ್ತ್ಯರಿಂದ ನೀರು ಕುಡಿಯುವ ಸಾಮರ್ಥ್ಯವನ್ನು ತಂದುಕೊಡುವ ಮಂತ್ರೋಪದೇಶವನ್ನು ಪಡೆಯಲೋ ಎಂಬಂತೆ ದಕ್ಷಿಣ ದಿಕ್ಕನ್ನು ಕುರಿತು ಪ್ರಯಾಣ ಬೆಳೆಸಿತು ಎಂಬುದಾಗಿ ತಾತ್ಪರ್ಯ.

**ಅವತಾರಿಕೆ :** ಈಗ ಮತ್ತೆ ಮಿಂಚನ್ನು ಮತ್ತೊಂದು ರೀತಿಯಲ್ಲಿ ವರ್ಣಿಸುತ್ತಾರೆ.

**ಪಾಕವೈರಿವನಸಿಂಧುತರಂಗಾಕೃಷ್ಟರೂಢತರುಮೂಲಕಲಾಪಾ ।**
**ವ್ಯೋಮ್ನಿ ವಿದ್ಯುದಿವ ಕಾಂಚನವಲ್ಲೀ ಕಾಮಮಭ್ರಸರಿತಾ ನಿಪತಂತೀ ॥೪೩॥**

**ತಾತ್ಪರ್ಯ :** ಇಂದ್ರನ ನಂದನವನದಲ್ಲಿ ಸುರಲೋಕಗಂಗೆಯು ಹರಿಯುತ್ತದೆ. ಅದು ಹರಿಯುತ್ತಾ ಬರುವಾಗ ಅದರ ಅಲೆಗಳು ದಡದಲ್ಲಿರುವ ಮರಗಳ ಬೇರುಗಳ ಸಮೇತವಾಗಿ, ಆ ಮರದಲ್ಲಿ ಹಬ್ಬಿದ ಚಿನ್ನದ ಬಳ್ಳಿಗಳನ್ನು ಕಿತ್ತು ತಂದವು. ತನಗೆ ಆಶ್ರಯವಾದ ಮರದ ಬುಡದ ಬೇರುಗಳ ಸಮೇತ ಕೆಳಗೆ ಬೀಳುತ್ತಿರುವ ಬಂಗಾರದ ಬಳ್ಳಿಯಂತೆ ಆಕಾಶದಲ್ಲಿ ಮಿಂಚು ಪ್ರಕಾಶಿಸಿತು ಎಂದು ತಾತ್ಪರ್ಯ. (ಮಿಂಚೇ ಬಂಗಾರದ ಬಳ್ಳಿ, ಅದರ ಸುತ್ತಲೂ ಹರಡಿರುವ ಪ್ರಕಾಶ ರೇಖೆಗಳು ಮರದ ಬೇರುಗಳು ಎಂಬುದಾಗಿ ತಿಳಿಯಬೇಕು).

**ಅವತಾರಿಕೆ :** ಮಳೆಗಾಲದಲ್ಲಿ ಸೂರ್ಯೋದಯ ಮತ್ತು ಚಂದ್ರೋದಯಗಳನ್ನು ಯಾವ ರೀತಿ ಗುರುತಿಸಬೇಕು ಎಂಬುದನ್ನು ಕವಿಗಳು ಜಾಣ್ಮೆಯಿಂದ ವರ್ಣಿಸುತ್ತಾರೆ.

**ವ್ಯೋಮ್ನಿಸಾಂದ್ರತರವಾರಿದವೃಂದೇ ವಿದ್ಯುತಾಸು ವಿತತಾಸು ಸಮಂತಾತ್ ।**
**ಫುಲ್ಲಮೀಲಿತಪಯೋರುಹಪಂಕ್ತ್ಯಾ ಪುಷ್ಪವತ್ ಸಮುದಯಾವನುಮೇಯೌ ॥೪೪॥**

**ತಾತ್ಪರ್ಯ :** ಮಳೆಗಾಲದಲ್ಲಿ ಆಕಾಶದಲ್ಲಿ ಮೋಡಗಳು ನಿಬಿಡವಾಗಿರುತ್ತವೆ. ಆದುದರಿಂದ ಸೂರ್ಯೋದಯ ಅಥವಾ ಚಂದ್ರೋದಯ ಆದರೂ ಸೂರ್ಯನ ಅಥವಾ ಚಂದ್ರನ ಕಿರಣ ಪ್ರಕಾಶಗಳು ನೆಲದ ಮೇಲೆ ಬೀಳುವುದಿಲ್ಲ. ಮೋಡಗಳಲ್ಲಿ ಮಿಂಚುಗಳ ಪ್ರಕಾಶವೂ

ಮಿಳಿತವಾಗಿರುವುದರಿಂದ ಸೂರ್ಯನ – ಚಂದ್ರನ ಪ್ರಕಾಶಗಳು ಭೂಮಿಯ ಮೇಲೆ ಸರಿಯಾಗಿ ಕಾಣಿಸುವುದಿಲ್ಲ (ಬೀಳುವುದಿಲ್ಲ) ಹೀಗಿರುವಾಗ ಮಳೆಗಾಲದಲ್ಲಿ ಸೂರ್ಯೋದಯ ಮತ್ತು ಚಂದ್ರೋದಯಗಳನ್ನು ಯಾವ ರೀತಿ ತಿಳಿಯಬೇಕು? ತಿಳಿಯಲು ಸಾಧ್ಯ ಇಲ್ಲವೇ? ತಿಳಿಯಬಹುದು! ಸೂರ್ಯೋದಯವಾದಾಗ ತಾವರೆಗಳು ಅರಳುತ್ತವೆ. ತಾವರೆಗಳು ಅರಳಿರುವುದನ್ನು ನೋಡಿ ಸೂರ್ಯೋದಯವಾಗಿದೆ ಎಂದು ಊಹಿಸಬೇಕು. ಚಂದ್ರೋದಯವಾದಾಗ ನೈದಿಲೆಗಳು (ಕುಮುದಗಳು) ಅರಳುತ್ತವೆ. ಕುಮುದಗಳು ಅರಳಿರುವುದನ್ನು ನೋಡಿ ಈಗ ಚಂದ್ರೋದಯವಾಗಿದೆ ಎಂದು ತಿಳಿಯಬೇಕು. ತಾವರೆಗಳು ಮತ್ತು ಕುಮುದಗಳಿಗೆ ಸೂರ್ಯ ಚಂದ್ರರು ಸ್ನೇಹಿತರು. ಅವರುಗಳ ಉದಯವಾದರೆ ಸರಿಯಾದ ಪ್ರಕಾಶ ಬೀಳದಿದ್ದರೂ, ಸ್ವಲ್ಪ ಮಟ್ಟಿಗೆ ಕಿರಣಗಳ ಸಂಪರ್ಕವಾದರೂ, ಕ್ರಮವಾಗಿ ತಾವರೆಗಳು, ಕುಮುದಗಳು ಅರಳುತ್ತವೆ. ಈ ರೀತಿಯಾಗಿ ಮಳೆಗಾಲದಲ್ಲಿ ಸೂರ್ಯಚಂದ್ರರ ಉದಯವನ್ನು ತಿಳಿಯಬೇಕಾಗಿದೆ. ಮಳೆಗಾಲದಲ್ಲಿ ಮೋಡಗಳಿಂದ ಆಕಾಶವು ಪೂರ್ತಿಯಾಗಿ ಆಚ್ಛಾದಿತವಾಗಿರುತ್ತದೆ ಎಂದು ತಾತ್ಪರ್ಯ.

**ಅವತಾರಿಕೆ :** ಇಂದ್ರಗೋಪ ಎಂಬ ಕೆಂಪಾದ ಕೀಟಗಳಿಂದ ಸಹಿತವಾದ ಆಲಿಕಲ್ಲುಗಳನ್ನು ಕವಿಗಳು ವರ್ಣಿಸುತ್ತಾರೆ.

**ನಿರ್ಗತಾನಿ ದಿವಿ ಸೂರ್ಯವಿಭಿನ್ನಗ್ರೀಷ್ಮವಾಸರಮದಾವಲಕುಂಭಾತ್ ।**
**ಮೌಕ್ತಿಕಾನಿ ಸಹ ಮಸ್ತಕಮಾಂಸೈಃ ಸೇಂದ್ರಗೋಪಕರಕಾ ಅನುಚಕ್ರುಃ ॥೪೫॥**

**ತಾತ್ಪರ್ಯ :** ಬೇಸಿಗೆಯ (ಮೋಡ ಮುಚ್ಚಿದ) ಹಗಲುಗಳೇ ಆನೆಗಳು. ಅವುಗಳ ಕುಂಭಸ್ಥಳವನ್ನು ಆಕಾಶದಲ್ಲಿ ಸಿಂಹದಂತಿರುವ ಸೂರ್ಯನು ಸೀಳಿದನು. (ಬೇಸಿಗೆಯ ಹಗಲಿನಲ್ಲಿರುವ ಮೋಡಗಳಿಂದ ಮಳೆಯು ಪ್ರಾರಂಭವಾಯಿತು). ಆಗ ಬೇಸಿಗೆಯ ಹಗಲುಗಳೆಂಬ ಆನೆಗಳ ಕುಂಭಸ್ಥಳದಿಂದ (ಮೋಡಗಳಿಂದ) ಇಂದ್ರಗೋಪವೆಂಬ ಕೆಂಪಾದ ಹುಳುಗಳಿಂದ ಸಹಿತವಾದ ಬೆಳ್ಳಗಿರುವ ಆಲಿಕಲ್ಲುಗಳು ಬಿದ್ದವು. ಅವುಗಳು ಗ್ರೀಷ್ಮಕಾಲದ ದಿವಸಗಳೆಂಬ ಆನೆಗಳ ಸೀಳಿದ ಕುಂಭಸ್ಥಳದಿಂದ ಕೆಳಗೆ ಉದುರಿದ ತಲೆಯ ಮಾಂಸದಿಂದ ಸಹಿತವಾದ ಮುತ್ತುಗಳಂತೆ ಕಾಣಿಸಿದವು.

ಇಂದ್ರಗೋಪ ಕೀಟಗಳು ಬಹಳ ಕೆಂಪಾಗಿರುತ್ತವೆ. ಆಲಿಕಲ್ಲುಗಳು ಬೆಳ್ಳಗಿರುತ್ತವೆ. ಕೆಂಪಾದ ಇಂದ್ರಗೋಪ ಕೀಟಗಳಿಂದ ಸಹಿತವಾದ ಆಲಿಕಲ್ಲುಗಳು ನೆಲದ ಮೇಲೆ ಬಿದ್ದಾಗ ಅವುಗಳು ಮಳೆಗಾಲದ ಆರಂಭದಲ್ಲಿ ಬೇಸಿಗೆಯ ದಿವಸಗಳ ಮೋಡಗಳೆಂಬ ಆನೆಗಳನ್ನು ಸೂರ್ಯನೆಂಬ ಸಿಂಹವು ಕುಂಭಸ್ಥಳದಲ್ಲಿ ಸೀಳಿದಾಗ, ಉದುರಿದ ರಕ್ತಸಿಕ್ತವಾದ ಮುತ್ತುಗಳಂತೆ ಕಂಡವು ಎಂಬುದಾಗಿ ತಾತ್ಪರ್ಯ. (ಆನೆಯ ಕುಂಭಸ್ಥಳದಲ್ಲಿ ಮುತ್ತು ಇರುತ್ತದೆ ಎಂಬುದಾಗಿ ಕವಿಗಳು ವರ್ಣಿಸುತ್ತಾರೆ.)

**ಅವತಾರಿಕೆ :** ಈಗ ಕವಿಗಳು ಮಳೆಗಾಲದಲ್ಲಿ ಸೂರ್ಯ ಮತ್ತು ಚಂದ್ರರ ಕಾಂತಿಯು ಕಡಿಮೆಯಾಗುವುದಕ್ಕೆ ಕಾರಣವನ್ನು ವಿವರಿಸುತ್ತಾರೆ.

**ದುಗ್ಧವಾರಿಧಿಪಯಸ್ಯಧಿವರ್ಷಂ ಶಾರ್ಙ್ಗಿಣಿ ಸ್ವಪತಿ ಶೇಷಶರೀರೇ ।**
**ಮೀಲನಾನ್ನಯನಯೋಸ್ತನುಲಕ್ಷ್ಮ್ಯೌ ಮೇಘಪೂರ್ಣಗಗನೇ ದ್ಯುಮಣೀಂದೂ ॥೪೬॥**

**ತಾತ್ಪರ್ಯ :** ಚಂದ್ರ ಸೂರ್ಯರಿಬ್ಬರೂ ಪರಮಾತ್ಮನ ಎರಡು ಕಣ್ಣುಗಳೆಂದು ಪ್ರಸಿದ್ಧಿಯಿದೆ. ಪರಮಾತ್ಮನು ಮಳೆಗಾಲದಲ್ಲಿ ಚಾತುರ್ಮಾಸ್ಯ ಸಮಯದಲ್ಲಿ ಕ್ಷೀರಸಮುದ್ರದಲ್ಲಿ ಶೇಷನ ಶರೀರದ ಮೇಲೆ ಮಲಗಿ ಯೋಗನಿದ್ರೆಯನ್ನು ಮಾಡುವಾಗ ತನ್ನ ಎರಡು ಕಣ್ಣುಗಳನ್ನು ಮುಚ್ಚಿಕೊಳ್ಳುತ್ತಾನೆ. ಆಗ ಸೂರ್ಯ ಚಂದ್ರರಿಬ್ಬರೂ ಪರಮಾತ್ಮನ ಕಣ್ಣುಗಳಿಂದ ದೂರವಾಗಿ ಮರೆಯಾಗಿ ಹೋಗುವುದರಿಂದ ಅವರುಗಳ ಕಾಂತಿಯು ಕಡಿಮೆಯಾಗುತ್ತದೆ. ಹೀಗೆ ಮಳೆಗಾಲದಲ್ಲಿ ಸೂರ್ಯ ಚಂದ್ರರ ಕಾಂತಿಯು ಕಡಿಮೆಯಾಗಲು ಶ್ರೀಮನ್ನಾರಾಯಣನು ತನ್ನ ಎರಡು ಕಣ್ಣುಗಳನ್ನು ಮುಚ್ಚಿಕೊಳ್ಳುವುದೇ ಕಾರಣ ಎಂದು ಕವಿಗಳು ವರ್ಣಿಸಿದ್ದಾರೆ. ಮಳೆಗಾಲದಲ್ಲಿ ಮೋಡ ಮುಚ್ಚಿರುವುದರಿಂದ ಸೂರ್ಯ ಚಂದ್ರರ ಪ್ರಕಾಶವು ಕಡಿಮೆಯಾಗಿರುತ್ತದೆ. ಪರಮಾತ್ಮನು ಕಣ್ಣುಗಳನ್ನು ಮುಚ್ಚಿಕೊಂಡಿದ್ದರಿಂದ ಪ್ರಕಾಶವು ಕಡಿಮೆಯಾಯಿತು ಎಂದು ಬೇರೆ ಕಾರಣವನ್ನು ಊಹಿಸಿದ್ದರಿಂದ ಉತ್ಪ್ರೇಕ್ಷಾಲಂಕಾರ.

**ಅವತಾರಿಕೆ :** ಮಳೆಗಾಲದಲ್ಲಿಯೂ ಹಗಲುಗಳು ದೀರ್ಘವಾಗಿರುವುದನ್ನು ಕವಿಗಳು ವರ್ಣಿಸುತ್ತಾರೆ.

**ಸ್ವಾಮಿನಿ ಕ್ಷತವಸೌ ದಿನನಾಥೇ ಯತ್ಪುರಾಽಜನಿ ದಿನೇಷ್ವತಿಕಾರ್ಶ್ಯಮ್ ।**
**ತದ್ವಿಮರ್ಶಮಧಿಗಮ್ಯ ದಿನಾನಾಮದ್ಯ ಹೃದ್ಯಯತಿ ವಾಸರವೃದ್ಧಿಮ್ ॥೪೭॥**

**ತಾತ್ಪರ್ಯ :** ಹಗಲಿಗೆ ಸ್ವಾಮಿಯಾದ ಸೂರ್ಯನು ಹಿಂದೆ ದಕ್ಷಿಣಾಯನದ ಕೊನೆಯಲ್ಲಿ ಬಹಳವಾಗಿ ತನ್ನ ಕಿರಣಗಳನ್ನು, ಕಾಂತಿಯನ್ನೂ ಕಳೆದುಕೊಂಡು ಹೀನಸ್ಥಿತಿಯಲ್ಲಿ ಇದ್ದನು. ಯಜಮಾನನು ಸಂಪತ್ತನ್ನು ಕಳೆದುಕೊಂಡು ಕಾಂತಿಹೀನನಾಗಿದ್ದಾಗ ಸ್ವಾಮಿಭಕ್ತರೂ ಸೇವಕರೂ ದೀನರಾಗಿ ಕೃಶರಾಗುವಂತೆ ದಕ್ಷಿಣಾಯನದ ಕೊನೆಯಲ್ಲಿ ಹಗಲುಗಳು ಬಹಳ ಕೃಶವಾದವು. (ದಕ್ಷಿಣಾಯನದಲ್ಲಿ ಹಗಲು ಕ್ಷೀಣಿಸುತ್ತ ಬರುತ್ತದೆ). ಆದರೆ ಈಗ ಮಳೆಗಾಲದಲ್ಲಿ ಉತ್ತರಾಯಣವೇ ಇರುವುದರಿಂದ ಮತ್ತು ಸೂರ್ಯನ ಕಾಂತಿ ಪೂರ್ಣವಾಗಿರಲು ಕಾರಣವಿರುವುದರಿಂದ, ಈ ವಿಷಯವನ್ನೆಲ್ಲಾ ಮನಸ್ಸಿನಲ್ಲಿ ವಿಚಾರ ಮಾಡಿ ಈ ಕ್ಷೀಣತೆಯು ದಿನಗಳ ಅಭಿವೃದ್ಧಿಯ ರೂಪವನ್ನು ಹೊಂದುತ್ತಿತ್ತು. (ಯಜಮಾನನು ಅನುಕೂಲ ಸ್ಥಿತಿಗೆ ಬಂದಾಗ ಸೇವಕರೂ ಪುಷ್ಟರಾಗುತ್ತಾರೆ ಎಂದು ಧ್ವನಿ.)

**ಅವತಾರಿಕೆ :** ಈಗ ಕವಿಗಳು ಮಳೆಗಾಲದಲ್ಲಿ ಕಮಲಗಳ ಅಭಿವೃದ್ಧಿಯನ್ನು ವರ್ಣಿಸುತ್ತಾರೆ.

**ಸ್ವಪ್ರಿಯಾಂ ಜಲಜಿನೀಂ ಪರಿಭೂಯ ಪ್ರೋರ್ಮ್ಯಯತ್ತುಹಿನಹಂತೃದಿನೇಭ್ಯಃ ।**
**ತಾದೃಶೀ ದಿನಕರೋದಿತವೃದ್ಧಿರ್ಯಾ ನಿಶಾ ಕ್ಷಯವಿಧಾವಪಿ ದಕ್ಷಾ ॥೪೮॥**

**ತಾತ್ಪರ್ಯ :** ಹೇಮಂತ ಶಿಶಿರ ಋತುಗಳು, ಚಳಿಗಾಲವಾಗಿರುತ್ತವೆ. ಆಗ ಸಮರ್ಥವಾದ ರಾತ್ರಿಗಳು ಸೂರ್ಯನಿಗೆ ಅತ್ಯಂತ ಪ್ರಿಯವಾದ ಕಮಲಿನಿಯನ್ನು ಅವಮಾನಗೊಳಿಸಿ ನಾಶಪಡಿಸಿತು. ಆದರೆ ಅಂತಹಾ ರಾತ್ರಿಯು ಸೂರ್ಯನಿಂದ ತಾನು ಹಿಂದೆ ಅಭಿವೃದ್ಧಿ ಹೊಂದಿರುವುದರಿಂದಲೂ, ಮಳೆಗಾಲದಲ್ಲಿಯೂ ಮೋಡ ಮುಚ್ಚಿದ ದಿನಗಳಿಂದಾಗಿಯೂ ಮತ್ತು ಹಗಲು ಕಡಿಮೆಯಾಗುತ್ತಾ ಬರುವುದರಿಂದಲೂ, ರಾತ್ರಿಯು ಅಭಿವೃದ್ಧಿಯಾಗು ವುದರಿಂದಲೂ, ತನಗೆ ಹೀಗೆ ಬೆಳವಣಿಗೆಯನ್ನು ಕೊಟ್ಟಿರುವ ಸೂರ್ಯನಿಗೆ ಅತ್ಯಂತ ಪ್ರೀತಿಪಾತ್ರವಾದ ಕಮಲಿನಿಯನ್ನು ಅಭಿವೃದ್ಧಿಗೊಳಿಸಿತು. (ಮಳೆಗಾಲದ ರಾತ್ರಿಯು "ನಾನು ಕಮಲಿನೀನಾಥನಾದ ಸೂರ್ಯನಿಂದ ಅಭಿವೃದ್ಧಿ ಹೊಂದಿದ್ದರಿಂದ ಅವನಿಗೆ ಪ್ರಿಯಳಾದ ಕಮಲಿನಿಯನ್ನು ಅಭಿವೃದ್ಧಿಗೊಳಿಸುತ್ತೇನೆ" ಎಂಬ ಅಭಿಪ್ರಾಯದಿಂದ ಪೋಷಕವಾಯಿತೋ ಎಂಬಂತಿತ್ತು ಎಂಬುದಾಗಿ ಅಭಿಪ್ರಾಯವು. ಕಮಲಿನೀನಾಥೇನ ವೃದ್ಧಿಂ ಗಮಿತಾ ಅಹಂ ತಸ್ಯ ದಯಿತಾಂ ಕಮಲಿನೀಂ ಅಭಿವೃದ್ಧಾಂ ಕರೋಮಿ ಇತಿ ಭಾವೇನ ಪೋಷಿಕಾ ಭವತೀವ ಇತಿ ಅಭಿಪ್ರಾಯಃ – ಗುರುಪಾದಸೇವಾ ವ್ಯಾಖ್ಯಾನ)

**ಅವತಾರಿಕೆ :** ಈಗ ಕವಿಗಳು ಶ್ರೀರಾಘವೇಂದ್ರ ಗುರುಸಾರ್ವಭೌಮರು ಚಾತುರ್ಮಾಸ್ಯ ನಿಯಮನವನ್ನು ಸ್ವೀಕರಿಸಿದುದನ್ನು ವರ್ಣಿಸುತ್ತಾರೆ.

**ಪೂರ್ಣಿಮಾಹನಿ ಸ ಪೂಷಣಿ ಮಧ್ಯೇಪುಷ್ಕರಂ ಲಸತಿ ಪುಷ್ಕರನೇತ್ರಮ್ ।**
**ಪೂಜಯನ್ ಯತಿವರ್ಯೈರಿಹ ಚಾತುರ್ಮಾಸ್ಯನಾಮನಿಯಮಂ ವಿದಧಾತಿ ॥೪೯॥**

**ತಾತ್ಪರ್ಯ :** ಆಷಾಢಮಾಸದ ಹುಣ್ಣಿಮೆಯು ಬಂದಿತು. ಸೂರ್ಯನು ನಡುನೆತ್ತಿಗೇರಿದನು. ಆಗ ಶ್ರೀರಾಘವೇಂದ್ರತೀರ್ಥರು ಪುಂಡರೀಕಾಕ್ಷನಾದ ಪುರುಷೋತ್ತಮನನ್ನು ಪೂಜಿಸಿದರು. ಅಲ್ಲಿದ್ದ ಇತರ ಶ್ರೇಷ್ಠ ಸನ್ನ್ಯಾಸಿಗಳ ಜೊತೆಗೆ ಮಧ್ಯಾಹ್ನದಲ್ಲಿ ಚಾತುರ್ಮಾಸ್ಯ ವ್ರತಸಂಕಲ್ಪವನ್ನು ಮಾಡಿದರು.

**ಅವತಾರಿಕೆ :** ಶ್ರೀಗುರುಸಾರ್ವಭೌಮರು ಚಾತುರ್ಮಾಸ್ಯ ವ್ರತಸಂಕಲ್ಪವನ್ನು ಸ್ವೀಕರಿಸಿದ್ದನ್ನು ಕವಿಗಳು ಈಗ ವಿವರವಾಗಿ ವರ್ಣಿಸುತ್ತಾರೆ.

**ಪೂರ್ಣರೋಚಿಷಿ ತುಷಾರಮರೀಚೌ ಭಾನುಮಾಲಿನಿ ಗತೇಽಂಬರಮಧ್ಯಮ್ ।**
**ಸೋಽಯಮಾರಭತ ಕರ್ಮ ಹಿ ಚಾತುರ್ಮಾಸ್ಯನಾಮ ರಚಯನ್ ಹರಿಪೂಜಾಮ್ ॥೫೦॥**

**ತಾತ್ಪರ್ಯ :** ಆಷಾಢ ಶುಕ್ಲಪಕ್ಷದ ಹುಣ್ಣಿಮೆ ದಿನ. ಚಂದ್ರನು ಹದಿನಾರು ಕಲೆಗಳಿಂದ

ತುಂಬಿ ಪ್ರಕಾಶಿಸುವ ದಿನ. ಆ ದಿನ ಮಧ್ಯಾಹ್ನ ಸೂರ್ಯನು ನಡುನೆತ್ತಿಗೆ ಬಂದಾಗ, ಮಹಾ ಮಹಿಮರಾದ ಶ್ರೀರಾಘವೇಂದ್ರರು ಹರಿಪೂಜೆಯನ್ನು ಮಾಡಿ, ಚಾತುರ್ಮಾಸ್ಯ ವ್ರತಸಂಕಲ್ಪವನ್ನು ಮಾಡಿ, ಚಾತುರ್ಮಾಸ್ಯದಲ್ಲಿ ದೀಕ್ಷಿತರಾದರು. (ಹಿಂದಿನ ಶ್ಲೋಕದಲ್ಲಿ ಹೇಳಿದ ವಿಷಯವನ್ನೇ ಇಲ್ಲಿ ವಿಷದಪಡಿಸಿದ್ದಾರೆ.)

**ಅವತಾರಿಕೆ :** ಶ್ರೀ ರಾಘವೇಂದ್ರ ಗುರುಸಾರ್ವಭೌಮರ ಚಾತುರ್ಮಾಸ್ಯ ವ್ರತದ ವೈಭವವನ್ನು ವರ್ಣಿಸಿದವರಿಗೆ ಉಂಟಾಗುವ ಶುಭಫಲವನ್ನು ವರ್ಣಿಸುತ್ತಾರೆ.

**ತದ್ಗತೈರನುದಿನಂ ಕ್ರಿಯಮಾಣೇಷ್ವೇಕವಾಸರಕೃತಂ ವಿಭವಂ ಯಃ ।**
**ಕಶ್ಚಿದಾಹ ಯದಿ ಹಂತ ನಿವೃತ್ತಿಂ ಬ್ರಾಹ್ಮಣಃ ಶ್ರುತಿತತಿಂ ಸ ಲಭೇತ ॥೫೧॥**

**ತಾತ್ಪರ್ಯ :** ಶ್ರೀರಾಘವೇಂದ್ರ ಗುರುಸಾರ್ವಭೌಮರು ಚಾತುರ್ಮಾಸ್ಯ ವ್ರತ ಸಂಕಲ್ಪವನ್ನು ಮಾಡಿ, ನಿಯಮವನ್ನು ಸ್ವೀಕರಿಸಿ ಪ್ರತಿ ದಿನವೂ ಕೂಡ ವಿಶೇಷವಾದ ಪೂಜೆ, ಪ್ರವಚನ, ಉತ್ಸವ ಇತ್ಯಾದಿ ವೈಭವಗಳಿಂದ ಶ್ರೀಹರಿಯನ್ನು ವಿಶೇಷವಾಗಿ ಆರಾಧಿಸಿ ಸಂತೋಷಪಡುತ್ತಿದ್ದರು. ಅವರು ಚಾತುರ್ಮಾಸ್ಯ ಸಮಯದಲ್ಲಿ ಒಂದು ದಿನ ಮಾಡಿದ ಪೂಜಾದಿ ವೈಭವಗಳನ್ನು ಯಾರಾದರೂ ಬ್ರಾಹ್ಮಣೋತ್ತಮರು ವರ್ಣಿಸಿದರೂ ಸಹಾ ಅವರು ವೇದ ವೇದಾಂಗ ಪಾರಂಗತರಾಗುತ್ತಾರೆ. ವೇದ ಪ್ರತಿಪಾದ್ಯವಾದ ವೈರಾಗ್ಯಭಾಗ್ಯವನ್ನು ಪಡೆಯುತ್ತಾರೆ. ಆಹಾ! ಇದೆಂತಹಾ ಭಾಗ್ಯ!! ಶ್ರೀ ರಾಘವೆಂದ್ರ ಗುರುಗಳ ಮಹಿಮೆಯನ್ನು ಏನೆಂದು ವರ್ಣಿಸಲಿ! ಈ ರೀತಿಯಾಗಿ ಕವಿಗಳು ಆನಂದ ಆಶ್ಚರ್ಯೋದ್ಗಾರವನ್ನು ಮಾಡುತ್ತಾರೆ.

**ಅವತಾರಿಕೆ :** ಮುಂದೆ ಕವಿಗಳು ಶರದೃತುವನ್ನು ವರ್ಣಿಸುತ್ತಾರೆ.

**ದುರ್ದಿನೇ ಹರಿಕಟಾಕ್ಷವಿಹೀನೇ ಪಂಕಿಲೇ ಚ ಸಮಯೇ ಸಮತೀತೇ ।**
**ಸಂಪ್ರಬುದ್ಧಹರಿವೀಕ್ಷಣಗೋಽಭೂದ್ವಾಸರೋಽಥ ವಿಶದೀಭವದಾಶಃ ॥೫೨॥**

**ತಾತ್ಪರ್ಯ :** ಮೋಡಗಳಿಂದ ಆಕಾಶವೆಲ್ಲವೂ ಮುಚ್ಚಿಹೋಗಿದೆ. ಸೂರ್ಯನ ದರ್ಶನವೇ ಇಲ್ಲ. ನೆಲದಲ್ಲಿ ಎಲ್ಲಿ ನೋಡಿದರಲ್ಲಿ ಕೆಸರು. ಇದು ಮಳೆಗಾಲದ ಲಕ್ಷಣ. ಆ ಕಾಲ ಕಳೆಯಿತು. ಚಾತುರ್ಮಾಸ್ಯದ ನಾಲ್ಕು ತಿಂಗಳು ಪವಡಿಸಿದ್ದ ಪರಮಾತ್ಮ ಶ್ರೀಮನ್ನಾರಾಯಣನು ಎದ್ದನು. ಅವನ ಕೃಪಾದೃಷ್ಟಿಯು ಆ ಸಮಯದ ಮೇಲೆ ಬಿದ್ದಿತು. ಮೋಡ ಮುಚ್ಚಿದ ಎಲ್ಲ ದಿಕ್ಕುಗಳೂ ಶುಭ್ರವಾದವು. ಆಕಾಶವು ಪ್ರಕಾಶಮಾನವಾಯಿತು. ಈ ರೀತಿಯಾಗಿ ಮಳೆಗಾಲವು ಮುಗಿದು ಶರತ್ಕಾಲವು ಪ್ರಾರಂಭವಾಯಿತು.

**ಅವತಾರಿಕೆ :** ಈಗ ಕವಿಗಳು ಶರತ್ಕಾಲದ ವಿಹಾರದ ಮಹಿಮೆಯನ್ನು ವರ್ಣಿಸುತ್ತಾರೆ.

**ಮಲ್ಲಿಕಾಕ್ಷನಿವಹೇಷು ಮನೋಜ್ಞೇಷ್ವಂಬುಜೇಷು ಮುದಿರೇಷು ಶರೇಷು ।**
**ತತ್ರ ತತ್ರ ವಿಶದಂ ಮಹಿಮಾನಂ ದರ್ಶಯನ್ ವಿಹರತಿ ಸ್ಮ ಸ ಕಾಲಃ ॥೫೩॥**

**ತಾತ್ಪರ್ಯ :** ಶರತ್ಕಾಲದಲ್ಲಿ ಎಲ್ಲ ಸ್ಥಳಗಳಲ್ಲಿಯೂ ಶುಭ್ರತೆ ಮತ್ತು ಬಿಳಿಯ ಬಣ್ಣವು ಎದ್ದು ಕಾಣುತ್ತ ಕುಣಿಯುವಂತಿತ್ತು. ಮಲ್ಲಿಕಾಕ್ಷ ಎಂಬ ಒಂದು ಜಾತಿಯ ಹಂಸಗಳೂ ಅವುಗಳ ಕೊಕ್ಕು ಕಾಲು ಮಲಿನವಾಗಿದ್ದರೂ ಶರತ್ಕಾಲದಲ್ಲಿ ಎಲ್ಲವೂ ಬಿಳುಪಾಗಿ ಕಾಣಿಸುತ್ತಿದ್ದವು. ಸುಂದರವಾದ ಬಿಳಿಯ ತಾವರೆಗಳು ಮತ್ತಷ್ಟು ಬಿಳುಪಾಗಿ ಕಾಣಿಸುತ್ತಿದ್ದವು. ಮೋಡಗಳೂ ನೀರಿಲ್ಲದೇ ಇರುವುದರಿಂದ ಶುಭ್ರವಾಗಿ ಕಾಣಿಸುತ್ತಿದ್ದವು. ಕಾಶವೆಂಬ ಹುಲ್ಲುಕಡ್ಡಿಯೂ ಹೂ ಬಿಟ್ಟು ಬಿಳಿಯಾಗಿ ಕಾಣಿಸುತ್ತಿತ್ತು. ಈ ರೀತಿಯಾಗಿ ಮೇಲೆ ಹೇಳಿದ ಎಲ್ಲ ವಸ್ತುಗಳಲ್ಲಿಯೂ ಇನ್ನೂ ಅಲ್ಲಲ್ಲಿಯೂ ಶರತ್ಕಾಲವು ತನ್ನ ಬಿಳಿಯ ಬಣ್ಣದ ಮಹಿಮೆಯನ್ನು ತೋರಿಸುತ್ತಾ ವಿಹರಿಸುತ್ತಿತ್ತು. ಶರತ್ಕಾಲದಲ್ಲಿ ಎಲ್ಲೆಡೆಯೂ ಬಿಳಿಯ ಬಣ್ಣವು ಹರಡಿ ಲೋಕವೆಲ್ಲಾ ಸುಂದರವಾಗಿ ಕಾಣಿಸುತ್ತಿತ್ತು ಎಂಬುದಾಗಿ ಅಭಿಪ್ರಾಯ.

**ಅವತಾರಿಕೆ :** ಈಗ ಕವಿಗಳು ಇನ್ನಷ್ಟು ಶರತ್ಕಾಲದ ಸೊಬಗನ್ನು ವರ್ಣಿಸುತ್ತಾರೆ.

**ದಿಗ್ಜಯೋನ್ಮುಖನೃಪವ್ರಜಕೀರ್ತ್ಯಾ ಗರ್ಭಿಣೀಕೃತಶರದ್ದಿನಲಕ್ಷ್ಮ್ಯಾಃ ।**
**ವ್ಯಕ್ತಕೀರತತಿರೋಮಲತಾಯಾಃ ಪಾಂಡಿಮಾಽಜನಿ ಪಯೋಧರದೃಶ್ಯಃ ॥೫೪॥**

**ತಾತ್ಪರ್ಯ :** ಶರಲ್ಲಕ್ಷ್ಮಿಯು ಗರ್ಭಿಣಿಯಾದ ಯುವತಿಯಂತೆ ಬಿಳಿಚಿಕೊಂಡು ಶೋಭಿಸಿದಳು. ಹಸುರಾದ ಗಿಣಿಗಳ ಸಾಲು ಶರತ್ಕಾಲದಲ್ಲಿ ಆಕಾಶದಲ್ಲಿ ಓಡಾಡುತ್ತಿತ್ತು. ಆ ಗಿಣಿಗಳ ಸಾಲು ಶರತ್ಕಾಲದ ಲಕ್ಷ್ಮಿಯೆಂಬ ವಿರಹಿಣಿಯ ರೋಮಗಳ ಸಾಲು. ರಾಜರು ಶರತ್ಕಾಲದಲ್ಲಿ ದಿಗ್ವಿಜಯಕ್ಕಾಗಿ ಹೊರಟು ಕೀರ್ತಿಯನ್ನು ಗಳಿಸುತ್ತಾರೆ. ಬಿಳಿಯ ಬಣ್ಣದ ಆ ಕೀರ್ತಿಯೇ ಶರಲ್ಲಕ್ಷ್ಮಿಯ ಗರ್ಭ. ಪಯೋಧರವೆಂಬ ಹೆಸರುಳ್ಳ ಮೋಡಗಳಲ್ಲಿ ಕಾಣಿಸುವ ಬಿಳಿಯ ಬಣ್ಣವೇ ಶರಲ್ಲಕ್ಷ್ಮಿಯೆಂಬ ಗರ್ಭಿಣೀ ಯುವತಿಯ ಪಯೋಧರವೆಂಬ ಹೆಸರುಳ್ಳ ಸ್ತನಗಳಲ್ಲಿ ಕಾಣಿಸುವ ಬಿಳಿಯ ಬಣ್ಣವು. ಈ ರೀತಿಯಾಗಿ ಶರದ್ದಿನಗಳ ಲಕ್ಷ್ಮಿಯು ಗರ್ಭಿಣೀ ಸ್ತ್ರೀಯಂತೆ ಶೋಭಿಸಿದಳು ಎಂದು ತಾತ್ಪರ್ಯ. (ಇಲ್ಲಿ ಗರ್ಭಿಣೀ ಸ್ತ್ರೀಯ ಹೋಲಿಕೆಯು ಧ್ವನಿಯಿಂದ ತೋರುತ್ತದೆ.)

ಶರತ್ಕಾಲದಲ್ಲಿ ವಿಜಯ ಯಾತ್ರೆಗೆ ಹೊರಟ ರಾಜರುಗಳು ಕೀರ್ತಿಭಾಜನರಾದರೆಂದೂ, ಹಸುರಾದ ಗಿಣಿಗಳು ಸ್ವೇಚ್ಛೆಯಿಂದ ಆಕಾಶದಲ್ಲಿ ಅತ್ತ ಇತ್ತ ಹಾರಾಡುತ್ತಿದ್ದವೆಂದೂ, ಮೋಡಗಳು ಬಿಳಿಯಾಗಿ ಕಾಣಿಸುತ್ತಿದ್ದವೆಂದೂ ಅಭಿಪ್ರಾಯ. ಶರತ್ಕಾಲದಲ್ಲಿ ಬಿಳಿಯಾದ ಮೋಡಗಳು ಇರುವುದನ್ನೇ ಆ ಮೋಡಗಳಿಂದ ಶರಲ್ಲಕ್ಷ್ಮಿಯು ಗರ್ಭಿಣಿಯಾಗಿದ್ದಳೆಂದು ವರ್ಣಿಸಿದ್ದಾರೆ. ಶರದ್ದಿನಲಕ್ಷ್ಮಿಯು ಕೀರ್ತಿಗೆ ಕಾರಣವಾದ್ದರಿಂದಲೂ ಕೀರ್ತಿಯಿಂದ ಗರ್ಭಿಣಿಯಾಗಿದ್ದಾಳೆ ಎಂಬುದಾಗಿ ವರ್ಣಿಸಿದ್ದಾರೆ.

**ಅವತಾರಿಕೆ :** ಈಗ ಕವಿಗಳು ಶರತ್ಕಾಲದಲ್ಲಿ ಮೇಘಗಳು ಮಳೆ ಸುರಿಸದೇ ಬೆಳ್ಳಗಿರುವುದಕ್ಕೆ ಮತ್ತು ಕೃಶವಾಗಿರುವುದಕ್ಕೆ ಕಾರಣವನ್ನು ವರ್ಣಿಸುತ್ತಾರೆ.

**ವೀಕ್ಷ್ಯ ಸಂಯಮಿವರಸ್ಯ ಪಯೋದಾ ದಾನಕೇಲಿಮತುಲಂ ಧನಲಕ್ಷ್ಮ್ಯಾಃ ।**
**ಹಂತ! ವರ್ಷವಿಮುಖಾಃ ಸಮಭೂವನ್ ಪಾಂಡುರಾ ಭೃಶಕೃಶಾಶ್ಚ ಶುಚೇವ ॥೫೫॥**

**ತಾತ್ಪರ್ಯ :** ಶ್ರೀರಾಘವೇಂದ್ರ ಗುರುವರ್ಯರು ಬಹಳ ಉದಾರವಾಗಿ ದಾನ ಮಾಡುತ್ತಿದ್ದರು. ಅವರ ಧನಲಕ್ಷ್ಮಿಯ ಈ ದಾನವಿಹಾರವನ್ನು ಕಂಡ ಮೋಡಗಳು ಮಳೆ ಸುರಿಸಲಿಲ್ಲ. ಅವಮಾನದಿಂದ ಬಿಳಿಚಿಕೊಂಡವು. ಚಿಂತೆಯಿಂದ ತುಂಬಾ ಸೊರಗಿದವು. ಶರತ್ಕಾಲದಲ್ಲಿ ಮೋಡಗಳು ಮಳೆ ಸುರಿಸುವುದಿಲ್ಲ. ನೀರಿನ ಅಂಶ ಇಲ್ಲದಿರುವುದರಿಂದ ಬಿಳಿಯಾಗಿ ಇರುತ್ತವೆ. ಮತ್ತು ತುಂಬಾ ವಿರಳವಾಗಿದ್ದು ಕೃಶವಾಗಿ ಸೊರಗಿದಂತೆ ಕಾಣಿಸುತ್ತವೆ. ಶ್ರೀರಾಘವೇಂದ್ರತೀರ್ಥರು ಮಾಡುವ ಔದಾರ್ಯದ ಸುವರ್ಣವೃಷ್ಟಿಯ ಎದುರು (ಮುಂದೆ) ನಮ್ಮ ಜಲವೃಷ್ಟಿಗೆ ಏನು ಬೆಲೆಯಿದೆ ಎಂದು ಭಾವಿಸಿ ಮೋಡಗಳು ಮಳೆ ಸುರಿಸುವುದನ್ನು ನಿಲ್ಲಿಸಿಬಿಟ್ಟವು. ಅವಮಾನದಿಂದ ಬಿಳಿಯಾದವು. ತುಂಬಾ ಸೊರಗಿದವು. ಯತಿಶ್ರೇಷ್ಠರಾದ ಶ್ರೀರಾಘವೇಂದ್ರ ಸ್ವಾಮಿಗಳ ಧನಲಕ್ಷ್ಮಿಯ ವಿಹಾರವನ್ನು ನೋಡಿ ಅವಮಾನಿತವಾದ ಮೋಡಗಳು ಈ ರೀತಿಯಾಗಿ ಮಾಡುತ್ತಿವೆಯೋ ಎಂಬಂತೆ ತೋರುತ್ತಿತ್ತು. (ಇಲ್ಲಿ ಉತ್ಪ್ರೇಕ್ಷಾಲಂಕಾರ ಇದೆ.)

**ಅವತಾರಿಕೆ :** ಉತ್ತರ ದಿಕ್ಕಿಗೆ ಸಂಚಾರ ಪ್ರಾರಂಭಿಸಿದ ಶ್ರೀಗುರುರಾಘವೇಂದ್ರತೀರ್ಥರನ್ನು, ಹಂಸಗಳು ಶರತ್ಕಾಲದಲ್ಲಿ ಮೋಡಗಳನ್ನು ಅನುಸರಿಸುವಂತೆ ಹಿಂಬಾಲಿಸಿ ಹೊರಟಿವೆಯೋ ಎಂಬಂತೆ ತೋರುತ್ತಿತ್ತು ಎಂಬುದಾಗಿ ಕವಿಗಳು ಈಗ ಉತ್ಪ್ರೇಕ್ಷಿಸುತ್ತಾರೆ.

**ಆತ್ಮನೋಽಭಿಮುಖಮಾಗತಮೇನಂ ವೀಕ್ಷ್ಯ ಸಂಯಮಿವರಂ ಧನದಾಶಾಮ್ ।**
**ಹರ್ಷತೋಽನುವಿಚಚಾರ ತದಗ್ರೇ ಹಂಸಪಾಲಿರಿವ ವಾರಿದಪುಂಜಃ ॥೫೬॥**

**ತಾತ್ಪರ್ಯ :** ಮೋಡಗಳಿಗೆ ಅಭಿಮುಖವಾಗಿ ಶ್ರೀಗುರುರಾಘವೇಂದ್ರರು ಉತ್ತರ ದಿಕ್ಕನ್ನು ಕುರಿತು ಸಂಚಾರವನ್ನು ಪ್ರಾರಂಭಿಸಿದರು. ಬಿಳಿಯ ಮೋಡಗಳು ಶ್ರೀಗುರುರಾಜರನ್ನು ನೋಡಿ, ಹಂಸಗಳ ಸಾಲುಗಳಂತೆ ಸಂತೋಷದಿಂದ ಅವರನ್ನು ಅನುಸರಿಸಿದವು. ಅವರ ಹಿಂದೆಯೇ ಹೊರಟವು. ಒಬ್ಬ ಪೂಜನೀಯರಾದ ಪರಮಹಂಸರ ಹಿಂದೆ ಅವರ ಶಿಷ್ಯರಂತಿರುವ ಕಿರಿಯ ಪರಮಹಂಸ ಸನ್ನ್ಯಾಸಿಗಳು ಅನುಸರಿಸಿ ನಡೆಯುವಂತೆ ಉತ್ತರಾಭಿಮುಖವಾಗಿ ಸಂಚಾರ ಕೈಗೊಂಡಿರುವ ಯತಿಕುಲತಿಲಕರಾದ ಶ್ರೀರಾಘವೇಂದ್ರರ ಹಿಂದೆ ಶರತ್ಕಾಲದ ಬಿಳಿಯ ಮೋಡಗಳು ಗುರುಗಳನ್ನು ಹಿಂಬಾಲಿಸುತ್ತಾ ಉತ್ತರದಿಕ್ಕಿಗೆ ಚಲಿಸಲಾರಂಭಿಸಿದವು. (ಮೋಡಗಳು ದಕ್ಷಿಣಕ್ಕೆ ಬಂದರೆ ಬಳೆ. ಉತ್ತರಕ್ಕೆ ಬಂದರೆ ಮಳೆಯ ಸಮಾಪ್ತಿ ಎಂದು ಲೋಕದಲ್ಲಿ ಪ್ರಸಿದ್ಧಿಯಿದೆ- ಉತ್ಪ್ರೇಕ್ಷಾಲಂಕಾರ)

**ಅವತಾರಿಕೆ :** ಈಗ ಕವಿಗಳು ಶರತ್ಕಾಲದಲ್ಲಿ ಸರೋವರಗಳಲ್ಲಿ ಅರಳಿದ ಕಮಲಗಳು ಮತ್ತು ಅವುಗಳ ರಸಗ್ರಹಣ ಮಾಡುತ್ತಿರುವ ದುಂಬಿಗಳನ್ನು ವರ್ಣಿಸುತ್ತಾರೆ.

**ವಾರಿದಾಗಮಯುಗಾಂತವಿರಾಮೇ ನೈಕರೂಪಸರಸೀಮಿಷಶೌರೇಃ ।**
**ನಾಭಿಪದ್ಮನಿವಹಾ ಇವ ಪದ್ಮಾಃ ವ್ಯಂಜಯಂತ್ಯಲಿವಿಧಿಂ ವಿಲಸಂತಃ ॥೫೭॥**

**ತಾತ್ಪರ್ಯ :** ಮಳೆಗಾಲವೆಂಬ ಪ್ರಳಯಕಾಲವು ಮುಗಿಯಿತು. ನೀರಿಗೆ ಆಶ್ರಯವೆಂಬ ಅನೇಕ ಸರೋವರಗಳೆಂಬ ನೆಪದಿಂದ ನಾರಾಯಣನು ಪ್ರಕಟನಾದನು. ನೀರಾಯಣವಾದ (ಜಲಕ್ಕೆ ಆಶ್ರಯವಾದ) ಅನೇಕ ಸರೋವರಗಳೆಂಬ ನೆಪದಿಂದ ನಾರಾಯಣನು ಪ್ರಕಟನಾದಾಗ ಅವನ ಹೊಕ್ಕುಳಿನ ಕಮಲಗಳ ಸಮೂಹದಂತೆ ಸರೋವರಗಳಲ್ಲಿ ಕಮಲಗಳು ಅರಳಿದವು. ಅರಳಿ ಶೋಭಿಸಲಾರಂಭಿಸಿದವು. ಆ ಕಮಲಗಳು ತಮ್ಮಲ್ಲಿ ಗುಂಯ್ ಗುಟ್ಟುತ್ತಿರುವ ದುಂಬಿಯೆಂಬ ಬ್ರಹ್ಮನನ್ನು ಪ್ರಕಟಗೊಳಿಸಲಾರಂಭಿಸಿದವು.

**"ನಾಭಿಕಮಲಸ್ಯ ಬ್ರಹ್ಮಾವಾಸಸ್ಥಾನತ್ವಾತ್ ತೇಷು ಬ್ರಹ್ಮಣಾ ಭಾವ್ಯಂ ತತ್ ಸ್ಥಾನೇ ಆಲಯಃ ಇತಿ ನಿರ್ಣೇತೋಽರ್ಥಃ ।**
**ಶರತ್ಕಾಲೇ ಕಮಲಾನಿ ಮನೋಹರಾಣಿ ಸರಸೀಷು ಶೋಭಂತೇ,**
**ತೇಷು ಭ್ರಮರಾಃ ಸಂಚರಂತೀತಿ ಭಾವಃ"**

ಶ್ರೀಮನ್ನಾರಾಯಣನ ನಾಭಿಕಮಲವು ಬ್ರಹ್ಮದೇವರಿಗೆ ಆವಾಸ ಸ್ಥಾನವಾಗಿದೆ. ಆದುದರಿಂದ ಪ್ರಕೃತ ಸರೋವರಗಳೆಂಬ ನಾರಾಯಣನ ನಾಭಿಯಲ್ಲಿ ಹುಟ್ಟಿದ ಕಮಲಗಳಂತೆ ಸರೋವರಗಳಲ್ಲಿ ಅರಳಿದ ಕಮಲಗಳಿವೆ. ಕಮಲಗಳು ಅರಳಿದಲ್ಲಿ ದುಂಬಿಗಳು ಇರುತ್ತವೆ ಎಂಬುದು ಲೋಕ ಪ್ರಸಿದ್ಧವಾಗಿದೆಯಷ್ಟೆ ಆ ದುಂಬಿಗಳೇ ಬ್ರಹ್ಮದೇವರು. ಶರತ್ಕಾಲದಲ್ಲಿ ಮನೋಹರವಾದ ಕಮಲಗಳು ಸರೋವರಗಳಲ್ಲಿ ಶೋಭಿಸುತ್ತವೆ. ಆ ಕಮಲಗಳಲ್ಲಿ ದುಂಬಿಗಳು ಸಂಚರಿಸುತ್ತವೆ ಎಂಬುದಾಗಿ ತಾತ್ಪರ್ಯ.

**ಅವತಾರಿಕೆ :** ಶರತ್ಕಾಲದಲ್ಲಿ ಸೂರ್ಯಚಂದ್ರರು ಅಧಿಕವಾಗಿ ಪ್ರಕಾಶಮಾನರಾಗಿರುವುದನ್ನು ಕವಿಗಳು ವರ್ಣಿಸುತ್ತಾರೆ.

**ಉತ್ಥಿತಸ್ಯ ಸರಸೀರುಹನಾಭೇಶ್ಚಂದ್ರಸೂರ್ಯನಯನಸ್ಯ ತದಾನೀಮ್ ।**
**ಶಂಸತಃ ಸ್ಮ ನಲಿನೀರಜನೀಶೌ ಸಂಪ್ರಬೋಧಮಧಿಕಂ ವಿಲಸಂತೌ ॥೫೮॥**

**ತಾತ್ಪರ್ಯ :** ಆಷಾಢ ಶುದ್ಧ ದ್ವಾದಶಿಯ ದಿನ ಶಯನ ಮಾಡಿದ ನಾರಾಯಣನು ಕಾರ್ತೀಕ ಶುದ್ಧ ಏಕಾದಶಿಯವರೆಗೆ ಯೋಗನಿದ್ರೆಯಲ್ಲಿರುತ್ತಾನೆ. ಕಾರ್ತೀಕ ಶುದ್ಧ ದ್ವಾದಶಿ ಎಚ್ಚರಗೊಳ್ಳುತ್ತಾನೆ. ಈ ನಾಲ್ಕು ತಿಂಗಳು (ಆಷಾಢ, ಶ್ರಾವಣ, ಭಾದ್ರಪದ, ಆಶ್ವಯುಜ)

ಚಾತುರ್ಮಾಸ್ಯವೆಂದು ಪ್ರಸಿದ್ಧವಾಗಿದೆ. ದೇವರು ಮಲಗಿರುವಾಗ ತನ್ನ ಎರಡೂ ಕಣ್ಣುಗಳನ್ನು ಮುಚ್ಚಿಕೊಳ್ಳುತ್ತಾನೆ. ಚಂದ್ರ ಸೂರ್ಯರು ಶ್ರೀಮನ್ನಾರಾಯಣನ ಕಣ್ಣುಗಳು. ಹೀಗೆ ಚಾತುರ್ಮಾಸ್ಯದ ಮಳೆಗಾಲದಲ್ಲಿ (ಆಷಾಢ–ಶ್ರಾವಣ– ಭಾದ್ರಪದ) ನಾರಾಯಣನು ಕಣ್ಣು ಮುಚ್ಚಿರುವುದರಿಂದ ಸೂರ್ಯ–ಚಂದ್ರರ ಪ್ರಕಾಶವು ಕಡಿಮೆಯಾಗುತ್ತದೆ. ಶರತ್ಕಾಲದಲ್ಲಿ (ಕಾರ್ತೀಕ ಮಾಸದಲ್ಲಿ) ಶ್ರೀಮನ್ನಾರಾಯಣನು ಯೋಗನಿದ್ರೆಯಿಂದ ಎಚ್ಚರಗೊಂಡಾಗ ಕಣ್ಣುಗಳನ್ನು ತೆರೆಯುತ್ತಾನೆ. ಆ ಪರಮಾತ್ಮನ ಕಣ್ಣುಗಳಾಗಿರುವ ಸೂರ್ಯ–ಚಂದ್ರರೂ ಆಗ ಚೆನ್ನಾಗಿ ಪ್ರಕಾಶಮಾನರಾಗುತ್ತಾರೆ. ಈ ರೀತಿಯಾಗಿ ಶರತ್ಕಾಲದಲ್ಲಿ ಚೆನ್ನಾಗಿ ಪ್ರಕಾಶಿಸುವ ಸೂರ್ಯ–ಚಂದ್ರರು ಈಗ ಶ್ರೀಹರಿಯು ಎಚ್ಚರಗೊಂಡಿದ್ದಾನೆ ಎಂಬ ವಿಚಾರವನ್ನು ಹೇಳುತ್ತಿರುವರೋ ಎಂಬಂತೆ ಪ್ರಕಾಶಿಸುತ್ತಿದ್ದಾರೆ ಎಂಬುದಾಗಿ ತಾತ್ಪರ್ಯ.

**ಭಗವಾನ್ ಚಾತುರ್ಮಾಸ್ಯೇ ನಿದ್ರಾಂ ಕೃತ್ವಾ ಉತ್ಥಿತಃ ಇತ್ಯಕಥಯತಾಮ್ ಇತ್ಯನ್ವಯಃ**
**ಚಂದ್ರಸೂರ್ಯನಯನಸ್ಯ ಇತ್ಯನೇನ ನಿದ್ರಾಕಾಲೇ ನೇತ್ರನಿಮೀಲನಾತ್,**
**ವರ್ಷಾಕಾಲೇ ರವಿಚಂದ್ರಯೋಃ ನ ಪ್ರಕಾಶಃ,**
**ಶರತ್ಕಾಲೇ ಉತ್ಥಿತಸ್ಯ ನೇತ್ರೋನ್ಮೀಲನಾತ್ ಪ್ರಕಾಶ**
**ಇತಿ ಪ್ರಕಾಶಮಾನೌ ರವಿಚಂದ್ರೌ ಭವತಃ ಇತಿ ಭಾವಃ ॥**

ಭಗವಂತನು ಚಾತುರ್ಮಾಸ್ಯದಲ್ಲಿ ನಿದ್ದೆ ಮಾಡಿ ಈಗ ಎದ್ದನು ಎಂದು ಸೂರ್ಯಚಂದ್ರರು ಹೇಳಿದರು. ಭಗವಂತನಿಗೆ ಚಂದ್ರ ಸೂರ್ಯರೇ ಕಣ್ಣುಗಳು. ಆದುದರಿಂದ ನಿದ್ರಿಸುವಾಗ ಕಣ್ಣನ್ನು ಮುಚ್ಚಿಕೊಳ್ಳುವುದರಿಂದ ಮಳೆಗಾಲದಲ್ಲಿ ಸೂರ್ಯ–ಚಂದ್ರರಿಗೆ ಪ್ರಕಾಶವಿರುವುದಿಲ್ಲ. ಶರತ್ಕಾಲದಲ್ಲಿ ನಾರಾಯಣನು ನಿದ್ರೆಯಿಂದ ಎಚ್ಚೆತ್ತು ಕಣ್ಣುಗಳನ್ನು ತೆರೆದಾಗ ಚಂದ್ರ–ಸೂರ್ಯರು ಚೆನ್ನಾಗಿ ಪ್ರಕಾಶಿಸುತ್ತಾರೆ ಎಂಬುದಾಗಿ ತಾತ್ಪರ್ಯ.

**ಅವತಾರಿಕೆ :** ಈಗ ಕವಿಗಳು ಶರತ್ಕಾಲದ ಬೆಳದಿಂಗಳನ್ನು ವರ್ಣಿಸುತ್ತಾರೆ.

**ಪ್ರಾವೃಡಾಗಮಯುಗಾಂತಸಮುದ್ಯದ್ವಾರಿವಾರಿವಾಹಜಲಧೌ ವಿನಿವೃತ್ತೇ ।**
**ಸೈಕತೋತ್ಕರ ಇವ ಕ್ಷಣದಾಯಾಂ ಚಂದ್ರಿಕಾ ಬುಧಜನೈರುದಲೇಖಿ ॥೫೯॥**

**ತಾತ್ಪರ್ಯ :** ಮಳೆಗಾಲವು ಪ್ರಳಯಕಾಲದಂತೆ ಇರುತ್ತದೆ. ಆಗ ಆಕಾಶದಲ್ಲೆಲ್ಲಾ ವ್ಯಾಪ್ತವಾದ (ಆಕಾಶವನ್ನೆಲ್ಲಾ ಆವರಿಸಿಕೊಂಡಿರುವ) ಕಪ್ಪಾದ ಮೋಡಗಳು ಪ್ರಳಯಕಾಲದ ಸಮುದ್ರವು. ಮಳೆಗಾಲ ಕಳೆದಾಗ ಆ ಮೋಡಗಳೆಂಬ ಪ್ರಳಯಕಾಲದ ಸಮುದ್ರವು ಹಿಮ್ಮುಖವಾಯಿತು. ಒಣಗಿಹೋಯಿತು. ಆಗ ರಾತ್ರಿಯಲ್ಲಿ ಬೆಳದಿಂಗಳು ವಿಶದವಾಗಿ ಬೆಳ್ಳಗೆ ಎಲ್ಲೆಡೆ ಹರಡಿದ್ದಾಗ ರಸಿಕರಾದ ವಿವೇಕೀ ಜನರು ಆ ಬೆಳದಿಂಗಳನ್ನು ಮೋಡಗಳೆಂಬ ಸಮುದ್ರ ತಳವು ಒಣಗಿದಾಗ ಕಾಣಿಸುವ ವಿಶಾಲವಾದ ಮರಳುರಾಶಿ ಎಂದು ಉತ್ಪ್ರೇಕ್ಷಿಸಿದರು.

ಸಮುದ್ರಜಲಸ್ಯ ಶೋಷಣೇ ಜಲಗತಪುಲಿನದರ್ಶನಸ್ಯ ಲೋಕಸಿದ್ಧತ್ವಾತ್, ಅತ್ರ ಮೇಘಾಖ್ಯಸಮುದ್ರೇ ನಿವೃತ್ತೇ ತತ್ ಸ್ಥಾನೇ ಪುಲಿನವೃಂದಮಿವ ಶುಭ್ರಾ ಕೌಮುದೀ ಶರದಿ ಪ್ರಕಾಶತೇ ಇತಿ ಭಾವಃ (ವ್ಯಾಖ್ಯಾನ).

ಸಮುದ್ರದ ನೀರು ಒಣಗಿಹೋದಾಗ ನೀರಿನ ತಳದಲ್ಲಿರುವ ಮರಳು ಕಾಣಿಸುವುದು ಲೋಕಸಿದ್ಧವಾದ ವಿಷಯವಾಗಿದೆ. ಇಲ್ಲಿ ಮಳೆಗಾಲದಲ್ಲಿ ಮೋಡವೆಂಬ ಸಮುದ್ರವು ಒಣಗಿದಾಗ ಅದರ ತಳಭಾಗದಲ್ಲಿ ಮರಳಿನ ರಾಶಿಯಂತೆ ಶುಭ್ರವಾದ ಬೆಳದಿಂಗಳು ಶರತ್ಕಾಲದಲ್ಲಿ ಪ್ರಕಾಶಿಸುತ್ತಿದೆ ಎಂಬುದಾಗಿ ಭಾವವು.

**ಅವತಾರಿಕೆ :** ಶರತ್ಕಾಲದಲ್ಲಿ ಭತ್ತದ ಗಿಡಗಳ ತೆನೆಗಳು ಭಾರದಿಂದ ಬಾಗಿರುವುದನ್ನು ಕವಿಗಳು ಉತ್ಪ್ರೇಕ್ಷಿಸುತ್ತಾರೆ.

**ಕಾಮ್ಯಕರ್ಮಚಯಭಂಜನಹೇತೂಭೂತದರ್ಶನಮಿಮಂ ಯಮಿಧುರ್ಯಮ್ ।**
**ವೀಕ್ಷ್ಯ ಬಿಭ್ಯದಿವ ತತ್ಫಲಭೂತಂ ಶಾಲಿವೃಂದಮಭವತ್ ಭಯನಮ್ರಮ್ ॥೬೦॥**

**ತಾತ್ಪರ್ಯ :** ಶ್ರೀರಾಘವೇಂದ್ರ ಗುರುವರ್ಯರು ಕಾಮ್ಯಕರ್ಮಗಳನ್ನು ನಾಶಮಾಡುವ ಶ್ರೀಹರಿ ವಿಷಯಕವಾದ ಉತ್ತಮವಾದ ತತ್ವಜ್ಞಾನ ಉಳ್ಳವರಾಗಿದ್ದಾರೆ. ಇಂತಹಾ ಮಹಾ ಮಹಿಮೋಪೇತ ಯತಿಶ್ರೇಷ್ಠರನ್ನು ನೋಡಿದಾಗ ಕೃಷೀ ಎಂಬ ಕಾಮ್ಯ ಕರ್ಮದ ಫಲವಾದ ಭತ್ತದ ತೆನೆಯನ್ನು ತಲೆಯಲ್ಲಿ ಹೊತ್ತಿದ್ದ ಭತ್ತದ ಗಿಡಗಳು ಹೆದರಿವೆಯೇನೋ ಎಂಬಂತೆ ಬಾಗಿದವು.

ಶರತ್ಕಾಲೇ ಪಕ್ವಶಾಲೀವೃಂದಸ್ಯ ಫಲಭರೇಣ ಸ್ವತೋ ನಮ್ರಸ್ಯ ಕಾಮ್ಯಕರ್ಮರೂಪಕೃಷಿಫಲಸ್ಯ ನಮ್ರತಯಾಃ ಕಾಮ್ಯಕರ್ಮಭಂಜಕಜ್ಞಾನವದ್ಯತಿವರದರ್ಶನಹೇತುಕತ್ವೋತ್ಪ್ರೇಕ್ಷಣಾತ್ ಉತ್ಪ್ರೇಕ್ಷಾಲಂಕಾರಃ ಶರತ್ಕಾಲೇ ಶಾಲಯಃ ಫಲಿತಾ ಇತಿ ಭಾವಃ (ವ್ಯಾಖ್ಯಾನ)

ಸುಗ್ಗಿಯ ಕಾಲವಾದ ಶರತ್ಕಾಲದಲ್ಲಿ ಭತ್ತದ ಗಿಡಗಳು ಚೆನ್ನಾಗಿ ಬೆಳೆದ ತೆನೆಯಿಂದ ತುಂಬಿ ತಾವಾಗಿಯೇ ಬಾಗುತ್ತವೆ. ಈ ಭತ್ತದ ತೆನೆಯಿಂದ ತುಂಬಿದ ಗಿಡಗಳು ಕಾಮ್ಯಕರ್ಮರೂಪವಾದ ಕೃಷಿಯ ಫಲವಾಗಿದೆಯಷ್ಟೇ! ಸಕಾಮಕರ್ಮವನ್ನು ನಾಶಮಾಡುವ ಭಗವಂತನ ವಿಷಯವಾದ ಉತ್ತಮ ಜ್ಞಾನವನ್ನು ಸಂಪಾದಿಸಿ ಬರುವ ಯತಿಶ್ರೇಷ್ಠರಾದ ಶ್ರೀರಾಘವೇಂದ್ರ ಗುರುಗಳನ್ನು ನೋಡಿದಾಗ "ಧಾನ್ಯಪ್ರಾಪ್ತಿ" ಎಂಬ ಐಹಿಕವಾದ ಕಾಮನೆಯಿಂದ ಮಾಡಿದ ಕೃಷಿಯ ಫಲವಾದ ಫಲವತ್ತಾದ ಭತ್ತದ ಗಿಡಗಳು ಹೆದರಿಕೆಯಿಂದಲೋ ಎಂಬಂತೆ ಬಾಗಿದವು. ಕಾಮ್ಯಕರ್ಮನಾಶಕವಾದ ಜ್ಞಾನವುಳ್ಳವರ ಎದುರು ಕಾಮ್ಯಕರ್ಮದ ಫಲವನ್ನು ಪ್ರದರ್ಶಿಸುವುದು ಸರಿಯಲ್ಲ! ಇದರಿಂದ ಗುರುವರ್ಯರು ಕುಪಿತರಾದಾರು ಎಂಬ ಹೆದರಿಕೆಯಿಂದ ತೆನೆಯ ಭಾರವನ್ನು ಬಾಗಿಸಿ ಭತ್ತದ ಗಿಡಗಳು ನಿಂತವು ಎಂಬುದಾಗಿ ಉತ್ಪ್ರೇಕ್ಷಿಸಿದ್ದಾರೆ.

**ಅವತಾರಿಕೆ :** ಈಗ ಕವಿಗಳು ಶರತ್ಕಾಲದಲ್ಲಿ ಕಾಡಿನ ಮರಗಳ ಸಾಲು ನಗುತ್ತಿರುವಂತೆ ಇತ್ತು ಎಂಬುದಾಗಿ ವರ್ಣಿಸುತ್ತಾರೆ.

**ಪ್ರಾವೃಡಾಹಿತಜಲಾಕ್ರಮಭಂಗಾಂ ಸಸ್ಯಮಂಜರಿವಿಭೂಷಿತಗಾತ್ರೀಮ್ ।**
**ಮಾತರಂ ಕ್ಷಿತಿಮವೇಕ್ಷ್ಯ ವನಾಲೀ ಪಕ್ವದಾಡಿಮಫಲೇನ ಜಹಾಸ ॥೬೧॥**

**ತಾತ್ಪರ್ಯ :** ಮಳೆಗಾಲದಲ್ಲಿ ತುಂಬಾ ಮಳೆ ಸುರಿದುದರಿಂದ ಭೂಮಿಯಲ್ಲಿ ಅಲ್ಲಲ್ಲಿ ಎತ್ತರ ತಗ್ಗುಗಳು ಉಂಟಾಗಿದ್ದವು. ಅಲ್ಲಲ್ಲಿ ಮಣ್ಣಿನ ದಿನ್ನೆಗಳು ಎದ್ದಿದ್ದವು. ಭೂದೇವಿಯು ಧಾನ್ಯಗಳ ತೆನೆಗಳಿಂದ ಮೈತುಂಬಿ ಅಲಂಕಾರಗೊಂಡಿದ್ದಳು. ಇಂತಹಾ ಭೂತಾಯಿಯನ್ನು ನೋಡಿ ಕಾಡಿನ ಸಾಲಿನಲ್ಲಿ ಮಾಗಿ ಬಿರಿದ ದಾಳಿಂಬೆ ಹಣ್ಣುಗಳಿಂದ ನಗುವಂತೆ ತೋರುತ್ತಿತ್ತು. ಮೈಬಿರಿದು ಹೋಗಿರುವ ತೆನೆಗಳಿಂದ ಅಲಂಕಾರ ಮಾಡಿಕೊಂಡಿರುವ ಭೂಮಿತಾಯಿಯನ್ನು ನೋಡಿ ವನ ಪಂಕ್ತಿಯು ಬಿರಿದ ದಾಳಿಂಬೆ ಹಣ್ಣುಗಳೆಂಬ ಹಲ್ಲುಗಳನ್ನು ತೋರಿಸುತ್ತಾ ನಗುತ್ತಿರುವಂತೆ ಇತ್ತು ಎಂಬುದಾಗಿ ಗಮ್ಯೋತ್ಪ್ರೇಕ್ಷಾಲಂಕಾರ.

ಮೈ ಬಿರಿದು, ವಿಚಿತ್ರ ಅಲಂಕಾರ ಮಾಡಿಕೊಂಡಿರುವ ಒಬ್ಬಳು ತಾಯಿಯನ್ನು ತಾಂಬೂಲದಿಂದ ಕೆಂಪಾದ ಹಲ್ಲುಗಳುಳ್ಳ ಮತ್ತೊಬ್ಬಳು ಹಾಸ್ಯ ಮಾಡುತ್ತಾ ನಗುತ್ತಿದ್ದಾಳೆ ಎಂಬ ಅರ್ಥಾಂತರ ಧ್ವನಿಯೂ ಇಲ್ಲಿ ಕಂಡುಬರುತ್ತದೆ. ಮಳೆಗಾಲದ ಜಲವೇಗದಿಂದ ಶರತ್ಕಾಲದಲ್ಲಿ ಭೂಮಿಯು ಎತ್ತರ ತಗ್ಗುಗಳಿಂದ ಕೂಡಿರುತ್ತದೆ. ಭತ್ತ ಮುಂತಾದ ಧಾನ್ಯದ ಗಿಡಗಳಲ್ಲಿ ತೆನೆಗಳು ಉಂಟಾಗುತ್ತವೆ. ದಾಳಿಂಬೆ ಹಣ್ಣುಗಳು ಮಾಗಿ ಬಿರಿಯುತ್ತವೆ. ಇವುಗಳು ಶರತ್ಕಾಲದ ಗುಣಗಳು.

**ಅವತಾರಿಕೆ :** ಕವಿಗಳು ಶರತ್ಕಾಲದ ಇನ್ನಷ್ಟು ಗುಣಗಳನ್ನು ವರ್ಣಿಸುತ್ತಾರೆ.

**ಮಾತುಲುಂಗಲತಿಕಾಮಿಹ ಚೂತೇ ಸ್ಪ್ರಷ್ಟುಮುದ್ಯತಿ ಫಲಸ್ತನಮಧ್ಯೇ ।**
**ಮೋಹಿತೇ ಚ ಮರುತಾ ವನರಾಜಿಃ ಪಕ್ವದಾಡಿಮಫಲೇನ ಜಹಾಸ ॥೬೨॥**

**ತಾತ್ಪರ್ಯ :** ಶರತ್ಕಾಲದಲ್ಲಿ ಹಿತವಾದ ಶೀತಲವಾದ ಸುಗಂಧಭರಿತವಾದ ಗಾಳಿ ಬೀಸಿದಾಗ ಮಾವಿನ ಮರವು ಶೃಂಗಾರಮದದಿಂದ ಮೂರ್ಛಿತವಾಯಿತು. ಇತ್ತ ಅತ್ತ ತೂಗಾಡಲಾರಂಭಿಸಿತು. ಅಲ್ಲೇ ಇದ್ದ ಮಾದಳದ ಗಿಡದ ಬಳ್ಳಿಯಂತಹಾ ಕೊಂಬೆಯಲ್ಲಿ ಸ್ತನದಂತಿರುವ ಮಾದಳದ ಹಣ್ಣು ನೋಡಲು ಬಹಳ ಆಕರ್ಷಕವಾಗಿತ್ತು. ಚೂತವು ಗಾಳಿಯಿಂದ ಬಾಗುತ್ತಾ ಮಾದಳದ ಬಳ್ಳಿಯೆಂಬ ತರುಣಿಯ ಫಲವೆಂಬ ಸ್ತನವನ್ನು ಸ್ಪರ್ಶಿಸಲು ಪ್ರಯತ್ನಿಸುತ್ತಾ ಇರುವಂತೆ ತೋರುತ್ತಿತ್ತು. ಆಗ ವನರಾಜಿಯು (ಕಾಡುಗಳ ಸಾಲು) ಮಾಗಿ ಬಿರಿದಿರುವ ದಾಳಿಂಬದ ಹಣ್ಣಿನ ಮೂಲಕ ಚೂತತರುಣನ ಈ ಶೃಂಗಾರವಿಲಾಸವನ್ನು ನೋಡಿ ನಗುತ್ತಿದೆಯೋ ಎಂಬಂತೆ ಕಾಣಿಸುತ್ತಿತ್ತು. (ಇಲ್ಲಿಯೂ ಗಮ್ಯೋತ್ಪ್ರೇಕ್ಷಾ) ಮಾವಿನ ಮರದ ಪಕ್ಕದಲ್ಲಿಯೇ ಇದ್ದ ಮಾದಳದ

ಗಿಡದ ಹಣ್ಣನ್ನು ಮಾವಿನ ಮರವು ಮುಟ್ಟುತ್ತಿರುವಂತೆ ತೋರುತ್ತಿತ್ತು. ಇದನ್ನು ಕವಿಗಳು ಈ ರೀತಿ ವರ್ಣಿಸಿದ್ದಾರೆ.

ಇಲ್ಲಿ "ತರುಣನೊಬ್ಬನು ತರುಣಿಯ ಸ್ತನಗಳನ್ನು ಸ್ಪರ್ಶಿಸಲು ಪ್ರಯತ್ನಿಸುತ್ತಿರುವುದನ್ನು ನೋಡಿ" ಅಲ್ಲೇ ಸಮೀಪದಲ್ಲಿದ್ದು ನೋಡುತ್ತಿರುವ ವೀಳ್ಯದೆಲೆ ಜಗಿದು ಕೆಂಪಾಗಿರುವ ಬಾಯಿಯನ್ನು ಉಳ್ಳ ಹೆಂಗಸು ನಗುತ್ತಿದ್ದಾಳೆ ಎಂಬುದಾಗಿ ಅರ್ಥಾಂತರವು ಧ್ವನಿತವಾಗುತ್ತದೆ. (ಮಾದಳದ ಹಣ್ಣುಗಳು ಮಾಗಿವೆ, ಮಂದಮಾರುತವು ಚಲಿಸುತ್ತಿದೆ, ದಾಳಿಂಬೆಹಣ್ಣುಗಳೂ ಪಕ್ವವಾಗಿವೆ" ಇವೆಲ್ಲವೂ ಶರತ್ಕಾಲದ ಗುಣಗಳು.

## ಹೇಮಂತಋತುವರ್ಣನಂ

**ಅವತಾರಿಕೆ :** ಈಗ ಕವಿಗಳು ಹೇಮಂತಋತುವನ್ನು ವರ್ಣಿಸುತ್ತಾರೆ.

**ಮಾನಿನೀಜನವಿಮೋಹನಚೂರ್ಣೈಃ ಸಾರಸೇಷು ನೃಪಸೈನ್ಯರಜೋಭಿಃ ।**
**ವ್ಯೋಮಮಂಡಪಕಮೌಕ್ತಿಕಗುಚ್ಛೈರಾವಿರಾಸ ಸಮಯೋ ಹಿಮಪೂರೈಃ ॥೬೩॥**

**ತಾತ್ಪರ್ಯ :** ಹೇಮಂತ ಋತುವಿನಲ್ಲಿ ಆಕಾಶದಿಂದ ಬೀಳುತ್ತಿರುವ ಮಂಜಿನ ಸಣ್ಣ ಸಣ್ಣ ತುಂತುರು ಕಣಗಳು ಪ್ರಿಯರಲ್ಲಿ ಮುನಿಸಿಕೊಂಡಿರುವ ಲಲನೆಯರಿಗೆ ಮೋಹವನ್ನು ಉಂಟುಮಾಡುವ ಚೂರ್ಣಗಳಂತೆ ಇದ್ದವು. (ಭಸ್ಮ ಪುಡಿ ಮುಂತಾದವನ್ನು ಎರಚಿ ವಶವಾಗದೇ ಇದ್ದವರನ್ನು ಮಾಂತ್ರಿಕರು ವಶಪಡಿಸಿಕೊಳ್ಳುವಂತೆ ಹೇಮಂತ ಋತುವಿನಲ್ಲಿ ಆಕಾಶದಿಂದ ಹಿಮದ ಕಣಗಳು ಕಮಲಗಳ ಮೇಲೆ ಬೀಳುತ್ತಿದ್ದವು. ಅವು ಕಮಲದ ವಿಷಯದಲ್ಲಿ ರಾಜನ ಸೈನ್ಯದ ಒತ್ತಡದಿಂದ ಮೇಲೆದ್ದ ಧೂಳುಗಳಂತಿದ್ದವು. ರಾಜನ ಸೇನೆಯ ಧೂಳುಗಳು ಶತ್ರು ಸೈನ್ಯದ ಧೃತಿಗೆಡಿಸಿ ಹೇಗೆ ಸೋಲಿಸುತ್ತವೆಯೋ ಅದರಂತೆ ಹೇಮಂತ ಋತುವಿನ ಹಿಮದ ಕಣಗಳು ಬಿದ್ದಾಗ ಕಮಲಗಳು ನಾಶವಾಗುತ್ತಿದ್ದವು. ಹೇಮಂತ ಋತುವಿನ ಮಂಜಿನ ಕಣಗಳು ಆಕಾಶವೆಂಬ ಮಂಟಪದ ಕುಚ್ಚುಗಳಂತೆ (ಗೊಂಚಲುಗಳಂತೆ) ಕಾಣಿಸುತ್ತಿದ್ದವು. ಇಂತಹ ಮಂಜಿನ ತುಂತುರು ಹನಿಗಳು ನಿರಂತರ ಪ್ರವಾಹಗಳಿಂದ ಕೂಡಿಕೊಂಡು ಹೇಮಂತ ಋತುವು ಆವಿರ್ಭೂತವಾಯಿತು. ಹೇಮಂತ ಋತುವಿನ ಮಂಜಿನ ತುಂತುರು ಹನಿಗಳ ಪ್ರವಾಹವು ಮಾನಿನಿಯರಿಗೆ ಉದ್ದೀಪನವಾಯಿತು. ಅದು ಕೊಳಗಳಲ್ಲಿ ಇದ್ದ ತಾವರೆ ಹೂವುಗಳ ವನವನ್ನೇ ನಾಶಮಾಡಿತು. ಆಕಾಶವೆಂಬ ಅಲಂಕರಿಸಿದ ಮಂಟಪದಲ್ಲಿ ಜೋಲಾಡಿಸಿದ ಮುತ್ತಿನ ಕುಚ್ಚುಗಳಂತೆ ಹೇಮಂತಋತುವಿನ ಮಂಜಿನ ಕಣಗಳ ಪ್ರವಾಹವು ಕೆಳಮುಖವಾಗಿ ಬೀಳುತ್ತಿತ್ತು ಎಂದು ತಾತ್ಪರ್ಯ. (ಹೇಮಂತಋತು ಸಂಬಂಧಿ ಹಿಮಪೂರಃ ಮಾನಿನೀಜನೋದ್ದೀಪಕಃ ಕಮಲವನನಾಶಕಃ ಆಕಾಶಾಖ್ಯಮಂಟಪಸ್ಯ ಮುಕ್ತಾಸರ ಸದೃಶಂ ಸಮಜನಿ ಇತಿ ಭಾವಃ– ಸಂಸ್ಕೃತ ವ್ಯಾಖ್ಯಾನ)

**ಅವತಾರಿಕೆ :** ಹೇಮಂತ ಋತುವಿನ ವರ್ಣನೆಯನ್ನು ಕವಿಗಳು ಮುಂದುವರೆಸುತ್ತಾರೆ.

**ಪದ್ಮಿನೀಮನವಲೋಕ್ಯ ಪತಂಗೋ ಮಂದದೀಧಿತಿರಿಹಾಸ ಹಿಮೌಘೈಃ ।**
**ರವ್ಯದರ್ಶನವಶಾದಿವ ಶೋಕಾದಬ್ಜಿನೀ ಚ ತುಹಿನೈಃ ಕಿಮು ಲೀನಾ ॥೬೪॥**

**ತಾತ್ಪರ್ಯ :** ಹೇಮಂತ ಋತುವಿನಲ್ಲಿ ಕೊಳದಲ್ಲಿರುವ ತಾವರೆಯ ವನವು (ಪದ್ಮಿನಿಯು) ಮಂಜಿನ ರಾಶಿಯಿಂದ ಮುಚ್ಚಿಹೋಗುವುದರಿಂದ ಕಾಣಿಸುವುದಿಲ್ಲ. ಆಗ ಸೂರ್ಯನೂ ಕೂಡಾ ಮಂಜಿನ ರಾಶಿಯಿಂದಾಗಿ ಮಂದಪ್ರಕಾಶವುಳ್ಳವನಾಗಿ ಕಾಂತಿಹೀನನೂ, ಉತ್ಸಾಹರಹಿತನೂ ಆಗಿರುತ್ತಾನೆ. ಕಮಲಿನಿಯಾದರೋ ಹಿಮದಿಂದ ಮುಚ್ಚಿಹೋಗಿ ಸೂರ್ಯನು ಕಾಣಿಸದೇ ಇರುವುದರಿಂದ ದುಃಖದಿಂದಲೋ ಎಂಬಂತೆ ಮಂಜಿನ ಮುಸುಕನ್ನು ಹಾಕಿಕೊಂಡು ಕಾಣಿಸದೇ ಇರುತ್ತಾಳೆ. ಮಂಜಿನಿಂದ ಮುಚ್ಚಿಹೋದ ತಾವರೆ ರಾಶಿಗಳು ಕಾಣಿಸುವುದಿಲ್ಲ. (ಇಲ್ಲಿ ಪ್ರಿಯೆಯನ್ನು ನೋಡದೇ ಇರುವ ಕಾಂತನು ಕಾಂತಿಹೀನನಾಗಿರುತ್ತಾನೆಂದೂ, ಕಾಂತನನ್ನು ನೋಡದೇ ಇರುವ ಪದ್ಮಿನೀ ಜಾತಿಯ ಕಾಂತೆಯು ಮುಖವನ್ನು ಮುಚ್ಚಿಕೊಂಡು ಬೇಸರದಿಂದ ಇರುತ್ತಾಳೆ ಎಂದು ಧ್ವನಿತಾರ್ಥವು. "ಪದ್ಮಿನೀಜಾತೇಃ ಪ್ರಿಯವಿಯೋಗಃ ದುಃಖಕಾರೀ" ಇತಿ ಧ್ವನಿಃ ಎಂದು ಸಂಸ್ಕೃತ ವ್ಯಾಖ್ಯಾನದಲ್ಲಿ ಪದ್ಮಿನೀ ಜಾತಿಯ ಸ್ತ್ರೀಯರಿಗೆ ಪ್ರಿಯನ ವಿರಹವು ಬಹಳ ದುಃಖಕರವಾಗಿರುತ್ತದೆ ಎಂದು ಧ್ವನಿತಾರ್ಥವನ್ನು ಬರೆದಿದ್ದಾರೆ.) (ಗಮ್ಯೋತ್ಪ್ರೇಕ್ಷಾ ಮತ್ತು ವಾಚ್ಯೋತ್ಪ್ರೇಕ್ಷಾ ಅಲಂಕಾರಗಳು.)

**ಅವತಾರಿಕೆ :** ಈಗ ಕವಿಗಳು ಒಂದು ಶ್ಲೋಕದಿಂದ ಶಿಶಿರಋತುವನ್ನು ವರ್ಣಿಸುತ್ತಾರೆ.

**ಉಷ್ಣರಶ್ಮಿರಧಿಕಂ ಹಿಮಭೀತೋ ಹವ್ಯವಾಹದಿಶಮಿಚ್ಛತಿ ಗಂತುಮ್ ।**
**ಅಗ್ನಿರಸ್ತ್ಯುತ ನ ವೇತಿ ವಿವೇಕ್ತುಂ ಪ್ರಾಗಯಾದಿವ ಸಮೀರಣಚಾರಃ ॥೬೫॥**

**ತಾತ್ಪರ್ಯ :** ಶಿಶಿರ ಋತುವಿನಲ್ಲಿ ಅಧಿಕವಾದ ಚಳಿಯು ಉಂಟಾಯಿತು. ಸೂರ್ಯನು ಚಳಿಯಿಂದ ತುಂಬಾ ಹೆದರಿ, ಬೆಂಕಿ ಕಾಯಿಸಿಕೊಳ್ಳುವುದಕ್ಕೋಸ್ಕರ ಆಗ್ನೇಯ ದಿಕ್ಕನ್ನು ಕುರಿತು ಹೋಗಬೇಕೆಂದು ಬಯಸಿದನು. (ಶಿಶಿರಋತೌ ರವಿರಗ್ನಿಕೋಣಂ ಗತಃ) ಶಿಶಿರ ಋತುವಿನಲ್ಲಿ ಸೂರ್ಯನು ಆಗ್ನೇಯ ದಿಕ್ಕಿಗೆ ಹೋದನು. ಸೂರ್ಯನು ಆಗ್ನೇಯ ದಿಕ್ಕಿಗೆ ಹೋಗಬಯಸಿದುದು ಛಳಿಯಿಂದ ಪಾರಾಗಲು ತನ್ನ ಮೈಯನ್ನು ಅಗ್ನಿಯಿಂದ ಕಾಯಿಸಿಕೊಳ್ಳುವುದಕ್ಕೋ ಎಂಬಂತೆ ತೋರುತ್ತಿತ್ತು ಎಂಬುದು ಗಮ್ಯೋತ್ಪ್ರೇಕ್ಷಾ. ಆಗ್ನೇಯ ದಿಕ್ಕಿನಲ್ಲಿ ಅಗ್ನಿಯು ಇರಬೇಕಷ್ಟೆ! ವಾಯುವು ಅಗ್ನಿಯ ಮತ್ತು ತೇಜಸ್ಸ್ವರೂಪನಾದ ಸೂರ್ಯನ ದೂತನು. ಅಗ್ನಿಯು ಚೆನ್ನಾಗಿ ಉರಿಯಲು ವಾಯುವಿನ ಸಹಕಾರ ಬೇಕಷ್ಟೇ! ಆದುದರಿಂದ ತೇಜೋದೂತನಾದ ವಾಯುವು ಸೂರ್ಯನು ಚಳಿಯಿಂದ ಪಾರಾಗಲು ಕಾಯಿಸಿಕೊಳ್ಳಲು ಬಯಸಿ ಹೋಗಬೇಕಾದ ದಿಕ್ಕಿನಲ್ಲಿ ಅಗ್ನಿಯು ಇರುವನೋ ಇಲ್ಲವೋ ಎಂಬುದನ್ನು ತಿಳಿದುಕೊಳ್ಳಲು ತಾನೇ ಮೊದಲು ಆಗ್ನೇಯ ದಿಕ್ಕಿಗೆ

ಹೊರಟನು. ಚಳಿಗಾಲದಲ್ಲಿ ಶೀತವಾದ ವಾಯುವು ಆಗ್ನೇಯ ದಿಕ್ಕಿನಿಂದ ಬೀಸುತ್ತದೆ. ಆದುದರಿಂದ ವಾಯುವು ಮೊದಲೇ ಆ ದಿಕ್ಕಿನಲ್ಲಿ ಚಳಿ ಕಾಯಿಸಿಕೊಳ್ಳಲು ಬೇಕಾದ ಬೆಂಕಿಯು ಅಲ್ಲಿ ಇದೆಯೋ ಇಲ್ಲವೋ ಎಂಬುದನ್ನು ಅರಿತು ಅಲ್ಲಿದ್ದ ಬೆಂಕಿಯನ್ನು ಪ್ರಜ್ವಲಗೊಳಿಸಿ ಸೂರ್ಯದೇವನಿಗೆ ಅನುಕೂಲ ಮಾಡಿಕೊಡಲು ಆಗ್ನೇಯ ದಿಕ್ಕಿಗೆ ಹೊರಟನು. ರಾಜರುಗಳು ಹೋಗಬೇಕಾದ ಸ್ಥಳಗಳಿಗೆ ಮೊದಲು ಅವನ ದೂತರು ಹೋಗಿ ಸ್ಥಳ ಪರೀಕ್ಷೆ ಮಾಡಿ ಅಣಿಗೊಳಿಸುವಂತೆ ಸೂರ್ಯನು ಹೋಗುವುದಕ್ಕೂ ಮೊದಲೇ ವಾಯುವು ಆ ದಿಕ್ಕಿಗೆ ಹೋದನು. ಇಲ್ಲಿ ಉತ್ಪ್ರೇಕ್ಷಾಲಂಕಾರವಿದೆ. ಶಿಶಿರ ಋತುವಿನಲ್ಲಿ ಸೂರ್ಯನು ಆಗ್ನೇಯ ದಿಕ್ಕಿನಲ್ಲಿರುತ್ತಾನೆ. ಮತ್ತು ಅದೇ ದಿಕ್ಕಿನಿಂದ ಶೀತವಾದ ಗಾಳಿಯು ಬೀಸುತ್ತದೆ ಎಂದು ಭಾವವು. ಸಮೀರಣಚಾರಃ ಎಂಬಲ್ಲಿ ರೂಪಾಲಂಕಾರವೂ ಇದೆ.

## ಪಂಢರಾಪುರ – ಕೊಲ್ಹಾಪುರ ಯಾತ್ರೆ

**ಅವತಾರಿಕೆ :** ಶ್ರೀರಾಘವೇಂದ್ರತೀರ್ಥಯತಿ ಚಕ್ರವರ್ತಿಗಳು ಪಂಢರಾಪುರಕ್ಕೆ ಹೋಗಿ ಅಲ್ಲಿ ಶ್ರೀಪಾಂಡುರಂಗವಿಠಲನ ದರ್ಶನ ಮಾಡಿ ಅಲ್ಲಿಂದ ಕೊಲ್ಹಾಪುರಕ್ಕೆ ದಿಗ್ವಿಜಯ ಮಾಡಿ ಅಲ್ಲಿ ಮಾತೆ ಮಹಾಲಕ್ಷ್ಮೀಯ ದರ್ಶನ ಮಾಡಿ ಅಲ್ಲಿಯೇ ಬಹುಕಾಲ ವಾಸಮಾಡಿದುದನ್ನು ಕವಿಗಳು ವರ್ಣಿಸುತ್ತಾರೆ.

**ಪಾಂಡುರಂಗಪುರವಿಟ್ಠಲಮೀಕ್ಷ್ಯ ಪ್ರಸ್ಥಿತಃ ಸ ಕರವೀರಪುರಾಖ್ಯಮ್ ।**
**ಪತ್ತನಂ ವಿರಚಯನ್ ಹರಿಪೂಜಾಂ ತತ್ರ ವಾಸಮಕರೋಚ್ಚಿರಕಾಲಮ್ ॥೬೬॥**

**ತಾತ್ಪರ್ಯ :** ಶ್ರೀರಾಘವೇಂದ್ರ ಗುರುವರ್ಯರು ಹಿಂದೆ ಹೇಳಿದಂತೆ ಉಡುಪಿಯಲ್ಲಿ ಬಹುಕಾಲ ವಾಸ ಮಾಡಿ ಆರು ಋತುಗಳಲ್ಲಿಯೂ ಶ್ರೀಮೂಲರಾಮದೇವರ ವಿಶೇಷ ಪೂಜೆಯನ್ನು ನೆರವೇರಿಸಿ ಅನಂತರ ಅಲ್ಲಿಂದ ಸಂಚಾರತ್ವೇನ ದಿಗ್ವಿಜಯ ತೀರ್ಥಯಾತ್ರೆ ಮಾಡುತ್ತಾ ಪಂಢರಾಪುರಕ್ಕೆ ಬಂದು ವಿಟ್ಠಲನೆಂಬ ಹೆಸರಿನಿಂದ ಖ್ಯಾತನಾದ ಶ್ರೀಕೃಷ್ಣನ ದರ್ಶನ ಮಾಡಿದರು. ಅನಂತರ ಅಲ್ಲಿಂದ ಹೊರಟು ಕರವೀರಪುರ ಎಂದು ಪ್ರಸಿದ್ಧವಾದ ಕೊಲ್ಹಾಪುರವೆಂಬ ಶ್ರೀಮಹಾಲಕ್ಷ್ಮೀ ಕ್ಷೇತ್ರಕ್ಕೆ ಬಂದು ಸೇರಿದರು. ಅಲ್ಲಿ ಶ್ರೀಮೂಲರಾಮನ ಪೂಜೆ ಮಾಡುತ್ತಾ ಶ್ರೀಲಕ್ಷ್ಮೀದೇವಿಯ ದರ್ಶನ ಮಾಡುತ್ತಾ ಬಹುಕಾಲ ವಾಸ್ತವ್ಯ ಮಾಡಿದರು.

## ರಾಮನಾಥಪುರ ಯಾತ್ರಾ

**ಅವತಾರಿಕೆ :** ಶ್ರೀ ರಾಘವೇಂದ್ರ ಯತಿಗಳು ಕಾವೇರಿ ತೀರದ ರಾಮನಾಥಪುರದ ಯಾತ್ರೆ ಮಾಡಿದುದನ್ನು ವರ್ಣಿಸುತ್ತಾರೆ.

**ಭಾನುಮಾಲಿನಿ ಗತೇಽಥ ತುಲಾಯಾಂ ರಾಮನಾಥಪುರಮೇತ್ಯ ಚಿರಾಯ ।**
**ಸಹ್ಯಭೂಧರಸುತಾಸಲಿಲೇಽಸ್ಮಿನ್ ಮಜ್ಜನೇನ ಮುದಿತೋಽಭವದೇಷಃ ॥೬೭॥**

**ತಾತ್ಪರ್ಯ :** ಪಂಢರಾಪುರ-ಕೊಲ್ಹಾಪುರ ಯಾತ್ರೆಯನ್ನು ಮುಗಿಸಿ ಶ್ರೀರಾಘವೇಂದ್ರ ಗುರುಸಾರ್ವಭೌಮರು ಸಂಚಾರತ್ವೇನ ಬೇರೆ ಬೇರೆ ಕ್ಷೇತ್ರಗಳನ್ನು ಸಂದರ್ಶಿಸುತ್ತಾ ಬಹುಕಾಲ ಸಂಚಾರ ಮಾಡಿ ಸೂರ್ಯನು ತುಲಾ ರಾಶಿಗೆ ಬಂದಾಗ ರಾಮನಾಥಪುರ ಎಂಬ ಊರಿಗೆ ಬಂದರು. ಸಹ್ಯಪರ್ವತದಿಂದ ಉದ್ಭವಿಸಿರುವ ಪವಿತ್ರಳಾದ ಕಾವೇರಿಯು ಆ ಊರಿನ ಬಳಿ ಹರಿಯುತ್ತಾಳೆ. ಅತಿಶಯವಾಗಿ ಪಾಪ ಪರಿಹಾರಕಳಾದ ಆ ಕಾವೇರಿಯ ಜಲದಲ್ಲಿ ಶ್ರೀರಾಘವೇಂದ್ರ ಸ್ವಾಮಿಗಳು ಅವಗಾಹನ ಸ್ನಾನ ಮಾಡಿ, ಆಹ್ನಿಕ ಪೂಜಾದಿಗಳನ್ನು ಮಾಡುತ್ತಾ ಸಂತೋಷದಿಂದ ವಾಸ ಮಾಡಿದರು.

## ಗೋದಾವರೀ ಯಾತ್ರಾ

**ಅವತಾರಿಕೆ:** ಶ್ರೀಗುರುರಾಘವೇಂದ್ರರು ಗೋದಾವರೀ ಸ್ನಾನವನ್ನು ಮಾಡಿ ವಿಜಯನಗರದ ಪ್ರವೇಶ ಮಾಡಿದುದನ್ನು ಕವಿಗಳು ವರ್ಣಿಸುತ್ತಾರೆ.

**ಗೌತಮಾಘಪರಿಹಾರಿಣಿ ತೋಯೇ ಸ್ನಾನಕರ್ಮ ವಿರಚಯ್ಯ ಸ ವಿದ್ವಾನ್ ।**
**ಪೂಜಿತಃ ಪ್ರತಿಪದಂ ಪ್ರತಿಧೀರೈಃ ಪ್ರಾವಿಶತ್ ಕಿಲ ಪುರೀಂ ವಿಜಯಾಖ್ಯಾಮ್ ॥೬೮॥**

**ತಾತ್ಪರ್ಯ :** ಗೌತಮ ಋಷಿಗಳಿಗೆ ಒಮ್ಮೆ ಗೋಹತ್ಯಾ ಪಾಪ ಬಂದಾಗ ಅವರು ಈಶ್ವರನ ಜಡೆಯಿಂದ ತರಿಸಿದ ವೃದ್ಧಗಂಗಾ ಎಂಬ ಹೆಸರಿನ ಗೋದಾವರಿಯು ಅವರಿಗೆ ಬಂದ ಪಾಪವನ್ನು ಪರಿಹಾರ ಮಾಡಿದ್ದಳು. ಪ್ರಾಜ್ಞರಾದ ಶ್ರೀರಾಘವೇಂದ್ರತೀರ್ಥರು ಪಾಪ ಪರಿಹಾರಕಳಾದ ಗೋದಾವರಿಯ ಇಂತಹ ಜಲದಲ್ಲಿ ಸ್ನಾನ ಮಾಡಿದರು. ಅಲ್ಲಲ್ಲಿ ಹೆಜ್ಜೆ ಹೆಜ್ಜೆಗೂ ಪ್ರತಿವಾದಿಗಳಾದ ವಿದ್ವಾಂಸರು ಶ್ರೀಗುರುವರ್ಯರನ್ನು ಭೇಟಿ ಮಾಡಿ ಅವರೊಂದಿಗೆ ವಾದಿಸಿ ಸೋತು ಗುರುಗಳನ್ನು ಗೌರವಿಸಿ ಪೂಜಿಸುತ್ತಿದ್ದರು. ಈ ರೀತಿಯಾಗಿ ವಾದಿದಿಗ್ವಿಜಯ ಮಾಡುತ್ತಾ ಅವರು ಗೋದಾವರೀ ನದಿಯ ಹತ್ತಿರವಿರುವ ವಿಜಯನಗರ ಎಂಬ ಪಟ್ಟಣವನ್ನು ಪ್ರವೇಶಿಸಿದರು.

## ಶಿಷ್ಯರಿಗೆ ತಪ್ತಮುದ್ರಾಧಾರಣ – ಶ್ರೀಗುರುರಾಜರಿಗೆ ಶ್ವೇತಛತ್ರ ಪ್ರಾಪ್ತಿ

**ಅವತಾರಿಕೆ :** ಶ್ರೀರಾಘವೇಂದ್ರಗುರುವರ್ಯರು ಅನೇಕ ಶಿಷ್ಯರಿಗೆ ತಪ್ತಮುದ್ರಾಧಾರಣ ಮಾಡಿ, ಪ್ರತಿವಾದಿಗಳನ್ನು ಸೋಲಿಸಿ ಶ್ವೇತಚ್ಛತ್ರದ ಗೌರವವನ್ನು ಪಡೆದುದನ್ನು ಈಗ ಕವಿಗಳು ವರ್ಣಿಸುತ್ತಾರೆ.

**ಮುದ್ರಯಾಽರಿದರಯೋರ್ಮಿಲಿತಾಗ್ನ್ಯೋರಂಕಿತಾನಕೃತ ಶಿಷ್ಯಸಮೂಹಾನ್ ।**
**ವಾದಿನೋಽಪಿ ಪರಿಭೂಯ ವಿಶಿಷ್ಯ ಶ್ವೇತಮಾತಪನಿವಾರಣಮಾಪ್ನೋತ್ ॥೯॥**

**ತಾತ್ಪರ್ಯ :** ಯತಿಸಾರ್ವಭೌಮರಾದ ಶ್ರೀರಾಘವೇಂದ್ರ ತೀರ್ಥರು ಚಕ್ರಶಂಖಗಳನ್ನು ಮಂತ್ರಾಗ್ನಿಯಿಂದ ತಪ್ತಗಳನ್ನಾಗಿ ಮಾಡಿ ಅನೇಕ ಶಿಷ್ಯರಿಗೆ ತಪ್ತಮುದ್ರಾಧಾರಣ ಮಾಡಿದರು ಮತ್ತು (ಆಂಧ್ರದಲ್ಲಿರುವ ಗೋದಾವರೀ ತೀರದ) ವಿಜಯನಗರದ ರಾಜಸಭೆಯಲ್ಲಿ ವಿಶೇಷ ರೀತಿಯಿಂದ ಪ್ರತಿವಾದಿಗಳನ್ನು ಜಯಿಸಿ ವಿಜಯದ ಚಿನ್ಹೆಯಾಗಿ ಶ್ವೇತಛತ್ರದ ಬಿರುದನ್ನು ಪಡೆದರು.

## ಕೃಷ್ಣಾಸ್ನಾನ ಮತ್ತು ತತ್ವಪ್ರಕಾಶಿಕಾ ಅಣುಭಾಷ್ಯಗಳ ವ್ಯಾಖ್ಯಾನ ನಿರ್ಮಾಣ

**ಅವತಾರಿಕೆ :** ಶ್ರೀರಾಘವೇಂದ್ರ ಗುರುರಾಜರು ಅನೇಕ ಮಂದಿ ಪಂಡಿತರೊಡನೆ ಕೃಷ್ಣಾಸ್ನಾನ ಮಾಡಿ ಅಲ್ಲಿಯೆ ತತ್ವಪ್ರಕಾಶಿಕಾ ಭಾವದೀಪ ವ್ಯಾಖ್ಯಾನವನ್ನೂ, ಅಣುಭಾಷ್ಯ ತತ್ವಮಂಜರಿಯನ್ನೂ ಬರೆದುದನ್ನು ವರ್ಣಿಸುತ್ತಾರೆ.

**ಸ್ನಾತವಾನಥ ಬುಧೈಃ ಸಹ ಕೃಷ್ಣಾನಿಮ್ನಗಾಪಯಸಿ ನಿರ್ಜಿತಮಾರಃ ।**
**ತತ್ತಟೇ ಜಯಗುರೂದಿತಟೀಕಾಂ ವ್ಯಾಕೃತಾಪಿ ಯತಿರಾಡಣುಭಾಷ್ಯಮ್ ॥೨೦॥**

**ತಾತ್ಪರ್ಯ :** ಹೀಗೆ ವಿಜಯನಗರದಲ್ಲಿ ವಾದಿನಿಗ್ರಹ ಶಿಷ್ಯಾನುಗ್ರಹಗಳನ್ನು ಮಾಡಿದ ತದನಂತರ ಸೌಂದರ್ಯದಲ್ಲಿ ಮನ್ಮಥನನ್ನೂ ಮೀರಿಸಿದ ಯತಿಕುಲಚಕ್ರವರ್ತಿಗಳಾದ ಶ್ರೀಗುರುರಾಘವೇಂದ್ರತೀರ್ಥರು ಅನೇಕ ಜನ ವಿದ್ವಾಂಸರುಗಳೊಂದಿಗೆ ಯಾತ್ರೆ ಮಾಡುತ್ತಾ ಕೃಷ್ಣಾ ನದಿಯಲ್ಲಿ ಸ್ನಾನ ಮಾಡಿದರು. ಆ ಕೃಷ್ಣಾನದಿಯ ತೀರದಲ್ಲಿಯೇ ವಾಸ ಮಾಡುತ್ತಾ ಗುರುರಾಜರು ಶ್ರೀಮದಾನಂದತೀರ್ಥ ಭಗವತ್ಪಾದರು ಬ್ರಹ್ಮಸೂತ್ರಗಳಿಗೆ ಮಾಡಿರುವ ಶ್ರೀಮದ್ಬ್ರಹ್ಮಸೂತ್ರಭಾಷ್ಯಕ್ಕೆ ಶ್ರೀಟೀಕಾಕೃತ್ಪಾದರು ರಚಿಸಿರುವ ತತ್ವಪ್ರಕಾಶಿಕಾ ಎಂಬ ಟೀಕೆಗೆ ಭಾವದೀಪ ಎಂಬ ಟಿಪ್ಪಣಿಯನ್ನು ರಚಿಸಿದರು. ಇದೇ ರೀತಿಯಲ್ಲಿ ಶ್ರೀಮದಾನಂದತೀರ್ಥರು ರಚಿಸಿರುವ ಅಣುಭಾಷ್ಯ ಎಂಬ ಗ್ರಂಥಕ್ಕೆ ತತ್ವಮಂಜರೀ ಎಂಬ ವ್ಯಾಖ್ಯಾನವನ್ನು ಬರೆದರು.

**ಅವತಾರಿಕೆ :** ಈಗ ಕವಿಗಳು ಶ್ರೀ ಗುರುಸಾರ್ವಭೌಮರು ಸಂಚಾರತ್ವೇನ ಶ್ರೀಶೈಲ ಮತ್ತು ತಿರುಪತಿ ಯಾತ್ರೆ ಮಾಡಿದುದನ್ನು ವರ್ಣಿಸುತ್ತಾರೆ.

**ತತ್ರ ತತ್ರ ವಿರಚಯ್ಯ ಸ ವಾಸಂ ಪುಣ್ಯಭೂಷು ಪುರುಷೋತ್ತಮಭಕ್ತಃ ।**
**ಶ್ರೀಮಹೀಧರಮುಪೇತ್ಯ ಚ ತುಂಗಂ ವೇಂಕಟೇಶಮವಲೋಕಿತುಮಾಗಾತ್ ॥೨೧॥**

**ತಾತ್ಪರ್ಯ :** ಕ್ಷರಾಕ್ಷರ ಪುರುಷರಿಗಿಂತ ಉತ್ತಮನಾದ ಶ್ರೀಹರಿಯ ಪರಮಭಕ್ತರಾದ ಶ್ರೀರಾಘವೇಂದ್ರ ಗುರುಗಳು ಇನ್ನೂ ಅನೇಕ ಪುಣ್ಯಕ್ಷೇತ್ರಗಳಲ್ಲಿ ವಾಸ ಮಾಡಿ ದೇವತಾದರ್ಶನ ಮಾಡಿದರು. ಅನಂತರ ಎತ್ತರವಾದ ಶ್ರೀಶೈಲವನ್ನು ತಲುಪಿ ಅಲ್ಲಿ ಶ್ರೀಶೈಲ ಮಲ್ಲಿಕಾರ್ಜುನನ ದರ್ಶನ ಮಾಡಿದರು. ಅಲ್ಲಿಂದ ಸರ್ವೋತ್ತಮನಾದ ಶ್ರೀವೇಂಕಟೇಶ್ವರನ ದರ್ಶನಾಕಾಂಕ್ಷಿಗಳಾಗಿ ತಿರುಪತಿ ಕ್ಷೇತ್ರಕ್ಕೆ ದಿಗ್ವಿಜಯ ಬೆಳೆಸಿದರು.

## ಕಾಂಚೀ ಯಾತ್ರೆ

**ಅವತಾರಿಕೆ :** ಶ್ರೀರಾಘವೇಂದ್ರತೀರ್ಥರು ತಿರುಪತಿ ಕ್ಷೇತ್ರದಲ್ಲಿ ಬ್ರಹ್ಮಾಂಡನಾಯಕನಾದ ಶ್ರೀ ಶ್ರೀನಿವಾಸನನ್ನು ಸಂದರ್ಶಿಸಿ ಕಾಂಚಿಕ್ಷೇತ್ರಕ್ಕೆ ಪ್ರಯಾಣ ಬೆಳೆಸಿದುದನ್ನು ಕವಿಗಳು ವರ್ಣಿಸುತ್ತಾರೆ.

**ನತ್ವಾ ದೇವಂ ವೇಂಕಟೇಶಂ ಯತೀಂದ್ರಃ ಕೃತ್ವಾ ವಾಸಂ ವಾಸರಾನ್ ಕಾಂಶ್ಚಿದತ್ರ ।**
**ಕಾಂಚೀಮಾಗಾತ್ ಕಾಂಚನಾಗಾರರಮ್ಯಾಂ ನತ್ವಾ ವಿಷ್ಣುಂ**
**ಚಾನಮತ್ ಪಾರ್ವತೀಶಮ್ ॥೭೨॥**

**ತಾತ್ಪರ್ಯ :** ಮುನಿಕುಲತಿಲಕರಾದ ಶ್ರೀರಾಘವೇಂದ್ರತೀರ್ಥರು ತಿರುಪತಿಯ ಶ್ರೀ ಶ್ರೀನಿವಾಸದೇವರನ್ನು ನಮಸ್ಕರಿಸಿ, ಅಲ್ಲಿಯೇ ಕೆಲ ದಿನಗಳು ವಾಸ ಮಾಡಿದರು. ಅಲ್ಲಿಂದ ಸುವರ್ಣಮಯವಾದ ಭವನಗಳಿಂದ ಅಲಂಕೃತವಾದ ಕಾಂಚೀಪುರಕ್ಕೆ ಬಂದರು. ಅಲ್ಲಿ ಮೊದಲು ಶ್ರೀವಿಷ್ಣುಕಂಚಿಯಲ್ಲಿರುವ ಶ್ರೀವರದರಾಜಸ್ವಾಮಿಗೆ ನಮಸ್ಕರಿಸಿ, ಅಲ್ಲಿಂದ ಶ್ರೀ ಶಿವಕಾಂಚಿಗೆ ಬಂದು ಏಕಾಂಬರೇಶ್ವರನೆಂದು ಪ್ರಖ್ಯಾತರಾದ ಪಾರ್ವತೀಪತಿಯಾದ ಮಹಾರುದ್ರದೇವರಿಗೆ ನಮಸ್ಕರಿಸಿದರು.

**ಅವತಾರಿಕೆ :** ಶ್ರೀರಾಘವೇಂದ್ರ ಸ್ವಾಮಿಗಳು ಅರುಣಾಚಲ. ವೃದ್ಧಾಚಲ, ಶ್ರೀಮುಷ್ಣಕ್ಷೇತ್ರಗಳ ಯಾತ್ರೆಯನ್ನು ಮಾಡಿದರೆಂದು ಕವಿಗಳು ವರ್ಣಿಸುತ್ತಾರೆ.

**ಶ್ರೋಣಾದ್ರಿಮಾಸಾದ್ಯ ನಿಷೇವ್ಯ ಶಂಭುಂ ವೃದ್ಧಾಚಲಂ ಪ್ರಾಪ್ಯ ವಿಲೋಕ್ಯ ರುದ್ರಮ್ ।**
**ಶ್ರೀಮುಷ್ಣಮಭ್ಯೇತ್ಯ ವರಾಹರೂಪಂ ವಿಷ್ಣುಂ ಪ್ರಣಮ್ಯೈಷ ನುತಿಂ ವ್ಯತಾನೀತ್ ॥೭೩॥**

**ತಾತ್ಪರ್ಯ :** ಶ್ರೀರಾಘವೇಂದ್ರಗುರುಗಳು ಅರುಣಾಚಲಕ್ಕೆ ಹೋಗಿ ಪರಮೇಶ್ವರನನ್ನು ಸೇವಿಸಿದರು. ಅಲ್ಲಿಂದ ವೃದ್ಧಾಚಲಕ್ಕೆ ಹೋಗಿ ಅಲ್ಲಿನ ಕ್ಷೇತ್ರಾಧಿಪತಿಯಾದ ಮಹಾರುದ್ರದೇವರ ದರ್ಶನ ಮಾಡಿದರು. ಅಲ್ಲಿಂದ ಶ್ರೀಮುಷ್ಣಕ್ಷೇತ್ರಕ್ಕೆ ದಯಮಾಡಿಸಿ ಅಲ್ಲಿ ವರಾಹರೂಪಿಯಾದ ಶ್ರೀಮನ್ಮಹಾವಿಷ್ಣುವನ್ನು ನಮಿಸಿ ಸ್ತೋತ್ರ ಮಾಡಿದರು.

**ಅವತಾರಿಕೆ :** ಶ್ರೀಗುರುರಾಘವೇಂದ್ರರು ಸಂಚಾರ ಮಾರ್ಗದಲ್ಲಿ ಕಾವೇರಿ ನದಿಯನ್ನು ವೀಕ್ಷಿಸಿದುದನ್ನು ಕವಿಗಳು ವರ್ಣಿಸುತ್ತಾರೆ.

**ಕೃತ್ವಾ ದಿಗ್ವಿಜಯಮುಪಾಗತಸ್ಯ ದೂರೇ ಕಾವೇರೀಶಿಶಿರಜಲಾವಲೋಕಮಾತ್ರಾತ್ ।**
**ಯತ್ ಸೌಖ್ಯಂ ಸಮಜನಿ ತತ್ ಸುಖಂ ಮುರಾರೇಃ**
**ಪ್ರಾಯಃ ಸ್ಯಾದಿತಿ ಯದಿ ಕಾ ಕಥೇತರೇಷಾಮ್ ॥೭೪॥**

**ತಾತ್ಪರ್ಯ :** ಅನೇಕ ದೂರ ದೇಶಗಳಲ್ಲಿ ದಿಗ್ವಿಜಯ ಸಂಚಾರ ಮಾಡಿ ಶ್ರೀರಾಘವೇಂದ್ರ ಗುರುಸಾರ್ವಭೌಮರು ಕಾವೇರೀ ನದಿಯ ಬಳಿಗೆ ಬಂದರು. ಅಲ್ಲಿ ಕಾವೇರಿಯ ತಂಪಾದ ಮತ್ತು ಆಹ್ಲಾದಕರವಾದ ನೀರನ್ನು ನೋಡಿದ ಕೂಡಲೇ ಗುರುಗಳಿಗೆ ಯಾವ ರೀತಿಯ ಆನಂದಾತಿಶಯವು ಉಂಟಾಯಿತೋ ಅದು ಪ್ರಾಯಶಃ ಶ್ರೀಹರಿಯೊಬ್ಬನಿಗೇ ಆಗಿರಬಹುದು ಎಂದು ತೋರುತ್ತದೆ. ಹೀಗಿರುವಾಗ ಇತರರಿಗೆ ಆ ಆನಂದ ಹೇಗಿರಬಹುದೆಂದು ಏನೆಂದು ಹೇಳಲಿ? ಹೇಗೆ ಹೇಳಲು ಸಾಧ್ಯ? ಕಾವೇರಿಯ ದರ್ಶನದಿಂದ ಉಂಟಾಗುವ ಆನಂದವು ಅಸಾಧಾರಣವಾದದ್ದು ಎಂದು ಭಾವ.

**ಅವತಾರಿಕೆ :** ಶ್ರೀರಾಘವೇಂದ್ರ ಗುರುವರ್ಯರು ಕುಂಭಕೋಣ ನಗರವನ್ನು ಪ್ರವೇಶ ಮಾಡಿದ್ದನ್ನು ವರ್ಣಿಸುತ್ತಾರೆ.

**ಶ್ರೀ ಕುಂಭಘೋಣನಗರೀಂ ಪ್ರವಿಶತ್ಯುದಾರಾಂ**
**ರಾಮಾರ್ಚಯೋರುತಪಸ್ಯೈವ ಕೃಶೇ ಯತೀಂದ್ರೇ ।**
**ಮನ್ಯೇ ಕಥಂ ನ ಜನತಾಮಹಿತಾಮಯೋಧ್ಯಾಂ**
**ರಾಮೇಣ ತೇನ ಭರತೇನ ಕೃತಪ್ರವೇಶಾಮ್ ॥೭೫॥**

**ತಾತ್ಪರ್ಯ :** ಶ್ರೀರಾಘವೇಂದ್ರತೀರ್ಥರು ಅನೇಕ ವ್ರತ ನಿಯಮಗಳಿಂದ ಕೃಶರಾಗಿದ್ದರು. ಅವರು ದಿಗ್ವಿಜಯವನ್ನು ಮಾಡಿ ಮಹತ್ತಾದ ಮತ್ತು ಸುಂದರವಾದ ಜನನಿಬಿಡವಾದ ಕುಂಭಕೋಣ ನಗರವನ್ನು ತಮ್ಮ ಉಪಾಸ್ಯಮೂರ್ತಿಯಾದ ಶ್ರೀಮೂಲರಾಮಚಂದ್ರ ದೇವರ ಸಮೇತರಾಗಿ ಪ್ರವೇಶಿಸಿದರು. ಶ್ರೀರಾಮನ ಅಗಲಿಕೆಯಿಂದ ದುಃಖಿತನಾಗಿ ತಪಸ್ಸು ಮಾಡುತ್ತಾ ಕೃಶನಾಗಿದ್ದ ಭರತನು ಶ್ರೀರಾಮನು ರಾವಣ ಸಂಹಾರ ಮಾಡಿ ನಂದೀಗ್ರಾಮಕ್ಕೆ ಬಂದ ಕೂಡಲೇ ಅವನೊಡನೆ ಜನಸಮೂಹ ಪೂರ್ಣವಾದ, ಸುಂದರವಾದ ದೊಡ್ಡ ಅಯೋಧ್ಯಾನಗರವನ್ನು ಪ್ರವೇಶಿಸಿತು. ತಪಃಕೃಶರಾದ ಶ್ರೀರಾಘವೇಂದ್ರ ಯತೀಂದ್ರರು ಶ್ರೀರಾಮನೊಡನೆ ಈ ನಗರವನ್ನು ಪ್ರವೇಶಿಸುತ್ತಿರುವಾಗ ಈ ನಗರಿಯನ್ನು ಅಯೋಧ್ಯೆಯೆಂದೇ ನಾವೇಕೆ ತಿಳಿಯಬಾರದು (ಉತ್ಪ್ರೇಕ್ಷೆ) ಕುಂಭಕೋಣಕ್ಕೆ ಅಯೋಧ್ಯೆಯ ಸಾಮ್ಯವು ಬಂದಿತು ಎಂದು ಭಾವ.

**ಅವತಾರಿಕೆ :** ಶ್ರೀರಾಘವೇಂದ್ರ ಗುರುವರ್ಯರು ಮಾರ್ಗದ ಮಧ್ಯದಲ್ಲಿದ್ದ ಶ್ರೀಹನುಮಂತ ದೇವರನ್ನು ಸ್ತೋತ್ರ ಮಾಡಿದುದನ್ನು ಕವಿಗಳು ವರ್ಣಿಸುತ್ತಾರೆ.

**ಪ್ರಹೃಷ್ಟೇನ ಚಿತ್ತೇನ ಮಧ್ಯೇ ಪ್ರತೋಲ್ಯಾಂ**
**ಮಹಾಧೀರ್ವಿಲಾಸೇನ ತಾತ್ಕಾಲಿಕೇನ ।**
**ಭುಜಂಗಪ್ರಯಾತೇನ ಭೂದೇವವಂದ್ಯೋ**
**ಹನೂಮಂತಮಿತ್ಥಂ (ಷ್ಟಂ) ಪ್ರಣೌತಿ ಸ್ಮ ದೇವಮ್ ॥೭೬॥**

**ತಾತ್ಪರ್ಯ :** ಶ್ರೀರಾಘವೇಂದ್ರ ಯತಿಗಳು ಕುಂಭಕೋಣ ನಗರ ಪ್ರವೇಶ ಮಾಡುವಾಗ ಆ ಸಮಯದಲ್ಲಿಯೇ ಉತ್ಪನ್ನವಾದ ಶೋಭೆಯಿಂದ ಮತ್ತು ಗಾಂಭೀರ್ಯದಿಂದ ಕಂಗೊಳಿಸುತ್ತಿದ್ದರು. ದಾರಿಯಲ್ಲಿ ಅನೇಕ ಮಂದಿ ಬ್ರಾಹ್ಮಣರು ಗುರುಗಳನ್ನು ಕಂಡು ಸ್ತೋತ್ರಮಾಡಿ ನಮಸ್ಕರಿಸುತ್ತಿದ್ದರು. ಜ್ಞಾನಿವರೇಣ್ಯರಾದ ಶ್ರೀಗುರು ರಾಘವೇಂದ್ರತೀರ್ಥರು ದೊಡ್ಡ ಬೀದಿಯಲ್ಲಿ ಬರುತ್ತಾ ಶ್ರೀಶಾರ್ಙ್ಗಪಾಣಿ ದೇವಾಲಯದ ಹತ್ತಿರವಿರುವ ಹೇಮ ಪುಷ್ಕರಣಿಯ ದಡದಲ್ಲಿರುವ ಶ್ರೀವ್ಯಾಸರಾಜ ಗುರುಸಾರ್ವಭೌಮರಿಂದ ಪ್ರತಿಷ್ಠಿತವಾದ ಶ್ರೀಹನುಮಂತ ದೇವರನ್ನು ನೋಡಿ, ತಮ್ಮ ಉಪಾಸ್ಯರಾದ, ಇಷ್ಟದೇವತೆಗಳಾದ ಹನೂಮಂತದೇವರನ್ನು ಭುಜಂಗಪ್ರಯಾತ ವೃತ್ತದಿಂದ ತಮ್ಮಿಂದಲೇ ರಚಿತವಾದ ಪದ್ಯದಿಂದ ಸ್ತೋತ್ರ ಮಾಡಿ ನಮಿಸಿದರು.

**ಅವತಾರಿಕೆ :** ತಮ್ಮ ಉಪಾಸ್ಯಮೂರ್ತಿಯಾದ ಶ್ರೀಮನ್ಮೂಲರಾಮಚಂದ್ರದೇವರನ್ನು ಮುಂದಿಟ್ಟುಕೊಂಡು ಕುಂಭಕೋಣದ ತಮ್ಮ ಮಠವನ್ನು ಪ್ರವೇಶಿಸಿದುದನ್ನು ಕವಿಗಳು ವರ್ಣಿಸುತ್ತಾರೆ.

**ವಾದ್ಯೈಶ್ಚಿತ್ರೈರ್ಮುಖರಿತದಿಶಃ ಶಂಖಭೇರೀಮೃದಂಗೈಃ**
**ಫುಲ್ಲೈಃ ಪುಷ್ಪೈರ್ವಿವಿಧಮನುಜೈಃ ಕೀರ್ಯಮಾಣಃ ಸಮಂತಾತ್ ।**
**ವೀಥ್ಯಾಂ ವೀಥ್ಯಾಂ ಯುವತಿಕರಗಾರಾರ್ತಿಕ್ಯೈ ರಾಘವೇಂದ್ರೋ**
**ರಾಮೇ ಪೂರ್ವಂ ಪ್ರವಿಶತಿ ಮಠಂ ಪ್ರಾವಿಶತ್ ಸಂಪದಾಢ್ಯಮ್ ॥೭೭॥**

**ತಾತ್ಪರ್ಯ :** ಶ್ರೀರಾಘವೇಂದ್ರತೀರ್ಥ ಗುರುಸಾರ್ವಭೌಮರು ಕುಂಭಕೋಣ ಪುರಪ್ರವೇಶ ಮಾಡುವಾಗ ಕಹಳೆ, ನಗಾರಿ, ಮೃದಂಗ, ಶಂಖ, ತಾಳ, ವೀಣೆ, ಕೊಳಲು ಮುಂತಾದ ನಾನಾ ವಾದ್ಯಗಳ ಧ್ವನಿಗಳಿಂದ ದಿಕ್ಕು ದಿಕ್ಕುಗಳೂ ಪ್ರತಿಧ್ವನಿತವಾಗುತ್ತಿದ್ದವು. ಗುರುಗಳ ಪುರಪ್ರವೇಶ ಮಹೋತ್ಸವಕ್ಕಾಗಿ ಎಲ್ಲಾ ವಿಧವಾದ ಮಂಗಳ ವಾದ್ಯಗಳನ್ನೂ ವಾದ್ಯ ನುಡಿಸುವುದರಲ್ಲಿ ನಿಪುಣರಾದವರು ನುಡಿಸುತ್ತಿದ್ದರು. ಅನೇಕ ಜಾತಿಯ ಭಕ್ತರುಗಳು ಮತ್ತು ಶಿಷ್ಯರುಗಳು ಅರಳಿದ ಹೂವುಗಳನ್ನು ಶ್ರೀರಾಘವೇಂದ್ರ ಗುರುಗಳ ಮೇಲೆ ವೃಷ್ಟಿಗೈಯುತ್ತಾ ಅವರನ್ನು ಭಕ್ತಿಯಿಂದ ಪೂಜಿಸುತ್ತಿದ್ದರು. ವಿವಿಧ ಬೀದಿಗಳಲ್ಲಿ ಅಲ್ಲಲ್ಲಿ ಸುಮಂಗಲಿ ಯುವತಿಯರು ಕುಂಕುಮದ ನೀರಾಜನ ಮಾಡಿ ಶ್ರೀಗುರುರಾಜರನ್ನು ಎದುರುಗೊಂಡು ಸೇವಿಸಿ ಪುರಪ್ರವೇಶಕ್ಕೆ ಅಣಿಮಾಡುತ್ತಿದ್ದರು. ಇಂತಹಾ ವೈಭವೋಪೇತವಾಗಿ ಶ್ರೀರಾಘವೇಂದ್ರ ಗುರುರಾಜರು ತಮ್ಮ

ಆರಾಧ್ಯಮೂರ್ತಿಯಾದ ಶ್ರೀಮನ್ಮೂಲರಾಮಚಂದ್ರ ದೇವರನ್ನು ಮುಂದಿಟ್ಟುಕೊಂಡು ಎಲ್ಲ ವಿಧವಾದ ಸಂಪತ್ತಿನಿಂದ ಪೂರ್ಣವಾದ ತಮ್ಮ ಮಠವನ್ನು ಪ್ರವೇಶಿಸಿದರು.

**ಅವತಾರಿಕೆ :** ಕವಿಕುಲತಿಲಕರಾದ ಶ್ರೀನಾರಾಯಣಾಚಾರ್ಯರು ಮಹಾಕವಿಗಳ ಪದ್ಧತಿಯಂತೆ ಸರ್ಗದ ಕೊನೆಯಲ್ಲಿ ತಮ್ಮ ವಂಶ, ತಮ್ಮ ಹೆಸರು, ತಮ್ಮ ಕಾವ್ಯನಾಮ, ಕಾವ್ಯದ ಅಂಕ ಇವುಗಳನ್ನು ಸೂಚಿಸುತ್ತಾ ಎಂಟನೆಯ ಸರ್ಗವನ್ನು ಸಮಾಪ್ತಿಗೊಳಿಸುತ್ತಾರೆ.

**ಶ್ರೀಮತ್ಕಶ್ಯಪವಂಶವಾರ್ಧಿಶಶಿನಃ ಷಡ್ದರ್ಶಿನೀವಲ್ಲಭ–**
**ಶ್ರೀಲಕ್ಷ್ಮೀನರಸಿಂಹವಿತ್ತವಿದುಷಃ ಶ್ರೀವೇಂಕಟಾಂಬಾಮಣೌ ।**
**ಜಾತೇನಾರ್ಯದಯಾಸುಧಾಮಯಗಿರಾ ನಾರಾಯಣೇನೋದಿತೇ**
**ಕಾವ್ಯೇ ಚಾರುಣಿ ರಾಘವೇಂದ್ರವಿಜಯೇ ಸರ್ಗೋ ಜಯತ್ಯಷ್ಟಮಃ ॥೭೮॥**

**ತಾತ್ಪರ್ಯ :** ಕಶ್ಯಪ ವಂಶದಲ್ಲಿ ಜನಿಸಿದವರಾದ, ಷಡ್ದರ್ಶನಗಳಲ್ಲಿ ವಲ್ಲಭರಾದ ಲಕ್ಷ್ಮೀನರಸಿಂಹಾಚಾರ್ಯರೆಂಬ ಪ್ರಸಿದ್ಧ ವಿದ್ವಾಂಸರ ಪತ್ನಿಯಾದ, ಶ್ರೀಮತಿ ವೇಂಕಟಾಂಬಾ ಎಂಬ ಜನನಿಯ ಗರ್ಭಾಂಬುಧಿಯಲ್ಲಿ ಜನಿಸಿದ ನಾರಾಯಣನೆಂಬುವವನು ಹಿರಿಯರ ಕೃಪೆಯಿಂದ ಗಳಿಸಿದ, ಅಮೃತಸದೃಶವಾದ ಮಾತುಗಳಿಂದ ಮನೋಹರವಾದ, ಶ್ರೀರಾಘವೇಂದ್ರ ವಿಜಯವೆಂಬ ಅಂಕಗಳುಳ್ಳ ಇಂತಹಾ ಮಹಾಕಾವ್ಯದಲ್ಲಿ ಎಂಟನೆಯ ಸರ್ಗವು ಸಮಾಪ್ತವಾಯಿತು. ಈ ಸರ್ಗವು ಉತ್ಕೃಷ್ಟವಾಗಿ ರಾಜಿಸುತ್ತಿದೆ ಎಂದು ತಾತ್ಪರ್ಯವು.

**। ಇತಿ ಕವಿಕುಲತಿಲಕೇನ ಶ್ರೀನಾರಾಯಣಾಚಾರ್ಯೇಣ ವಿರಚಿತೇ**
**ಶ್ರೀರಾಘವೇಂದ್ರವಿಜಯೇ ಅಷ್ಟಮಃಸರ್ಗಃ ।**

**ಈ ರೀತಿಯಾಗಿ ಕವಿಕುಲತಿಲಕರಾದ ಶ್ರೀನಾರಾಯಣಾಚಾರ್ಯರಿಂದ**
**ವಿರಚಿತವಾದ ಶ್ರೀರಾಘವೇಂದ್ರವಿಜಯದಲ್ಲಿ**
**ಎಂಟನೆಯ ಸರ್ಗವು ಸಮಾಪ್ತವಾಯಿತು.**

# ಎಂಟನೆಯ ಸರ್ಗದ ಕಥಾಸಾರ

## ಶ್ರೀರಂಗಕ್ಷೇತ್ರದಲ್ಲಿ ಚಂದ್ರಿಕಾಗ್ರಂಥಪ್ರವಚನ

ಶ್ರೀರಾಘವೇಂದ್ರಗುರುವರ್ಯರು ಶ್ರೀಹರಿಯ ಪಾದಕಮಲಗಳಲ್ಲಿ ದುಂಬಿಯಂತೆ ಆಸಕ್ತರಾಗಿರುತ್ತಿದ್ದರು. ಶ್ರೀಮಧ್ವಮತವೆಂಬ ಸಮುದ್ರವನ್ನು ಉಕ್ಕಿ ಹರಿಸುವ ಚಂದ್ರನಂತಿದ್ದರು. ಇವರು ಶ್ರೀರಂಗಕ್ಷೇತ್ರದಲ್ಲಿ ಪ್ರಮಾಣ ಪದ್ಧತಿಯನ್ನು ಆರಂಭಿಸಿ ಚಂದ್ರಿಕಾಂತವಾದ ಶ್ರೀಮನ್ಮಧ್ವಸಿದ್ಧಾಂತ ಗ್ರಂಥಸಮೂಹವನ್ನು ಅನೇಕಾವೃತ್ತಿ ಪಾಠ ಹೇಳಿದರು. (ಶ್ರೀರಂಗದಲ್ಲಿ ಬಹುಕಾಲ ವಾಸಿಸಿದ್ದರು.) ಅನಂತರ ಶ್ರೀರಂಗನಾಥಸ್ವಾಮಿಯ ಅಪ್ಪಣೆಯನ್ನು ಪಡೆದು ಅಲ್ಲಿಂದ ಹೊರಟರು. ಶ್ರೀರಂಗನಾಥಸ್ವಾಮಿಯಿಂದ ಆಜ್ಞಾಪಿಸಲ್ಪಟ್ಟ ಎಲ್ಲಾ ಋತುಗಳೂ ಇವರಿಗೆ ಸಹಾಯಕವಾದವು.

**ಶ್ರೀರಂಗಕ್ಷೇತ್ರದಿಂದ ಉತ್ತರ ದಿಕ್ಕಿನ ಯಾತ್ರೆ** — ಶ್ರೀರಂಗನಾಥನ ರಕ್ಷಾಕವಚವನ್ನು ತನಗೆ ತೊಡಿಸಿಕೊಂಡ ಮಹಾತೇಜಸ್ವಿಗಳಾದ ಗುರುವರ್ಯರು, ಶ್ರೀರಂಗಕ್ಷೇತ್ರದಿಂದ ಉತ್ತರದಿಕ್ಕಿಗೆ ಹೋದರು. ಅವರು 'ನಾಮಗಿರಿ' ಕ್ಷೇತ್ರವನ್ನು ತಲುಪಿದರು. ಅಲ್ಲಿ ತನ್ನ ನಾಮಸ್ಮರಣ ಮಾತ್ರದಿಂದ ಎಲ್ಲಾ ಜನರ ಎಲ್ಲಾ ಪಾಪರಾಶಿಗಳನ್ನು ನಾಶ ಮಾಡುವ ಬಾಲಸೂರ್ಯನಂತಹ ಕಾಂತಿಯುಳ್ಳ ಶ್ರೀನರಸಿಂಹದೇವರನ್ನು ನಮಸ್ಕರಿಸಿದರು. ಒಂದು ರಾತ್ರಿ ಅಲ್ಲಿಯೇ ವಾಸ ಮಾಡಿದರು. ಗುರುರಾಯರು ಅಲ್ಲಿಂದ 'ಬಾಣಾವರ'ವೆಂಬ ಗ್ರಾಮಕ್ಕೆ ಹೋದರು. ಅಲ್ಲಿ ಭೈರವ-ಭಟ್ಟ ಮತ್ತು ವೀರಭದ್ರ ಎಂಬ ಇಬ್ಬರು ಪ್ರಸಿದ್ಧರಾದ ಪಂಡಿತರಿದ್ದರು. ಶ್ರೀರಾಘವೇಂದ್ರಗುರುವರ್ಯರು ವಾದದಲ್ಲಿ ಅವರಿಬ್ಬರನ್ನು ಜಯಿಸಿ ಆ ಗ್ರಾಮದ ಅಧಿಪತಿಯಿಂದ ಉತ್ತಮವಾದ ಗ್ರಾಮವನ್ನೇ ಉಂಬಳಿಯಾಗಿ ಪಡೆದರು. ಅಲ್ಲಿಂದ ಶ್ರೀಗುರುರಾಜರು 'ವಿಷ್ಣುಮಂಗಲ' ದೇವಾಲಯಕ್ಕೆ ಬಂದು ಸಕಲ ಸಂಪತ್ತುಗಳಿಗೂ ಸ್ವಾಮಿಯಾದ ಹರಿಯನ್ನು ನೋಡಿದರು. ಅನೇಕ ಪರಿಜನರಿಂದ ಕೂಡಿದ ಶ್ರೀರಾಘವೇಂದ್ರತೀರ್ಥರು ಅಲ್ಲಿಂದ ಸುಬ್ರಹ್ಮಣ್ಯಕ್ಷೇತ್ರಕ್ಕೆ ಬಂದು ಕುಮಾರಸ್ವಾಮಿಯನ್ನು ನಮಸ್ಕರಿಸಿದರು. ಕುಷ್ಠರೋಗಿಗಳೂ ಕುಮಾರಸ್ವಾಮಿಯ ಸೇವೆಯಿಂದ ತಮ್ಮ ಪಾತಕಗಳಿಂದ ಕೂಡಲೇ ವಿಮುಕ್ತರಾಗಿ ರೋಗಪರಿಹಾರವನ್ನು ಹೊಂದುತ್ತಾರೆ. ಅಲ್ಲಿ ಅಂಗಪ್ರದಕ್ಷಿಣೆ ಮತ್ತು ಬ್ರಾಹ್ಮಣರ ಉಚ್ಛಿಷ್ಟದಲ್ಲಿ ಅಂಗಪ್ರದಕ್ಷಿಣೆಗಳನ್ನು ಮಾಡಿದವರಿಗೆ ಶ್ರೀಸುಬ್ರಹ್ಮಣ್ಯನ ಅನುಗ್ರಹದಿಂದ ಕುಷ್ಠಾದಿ ರೋಗ ಪರಿಹಾರವಾಗುವುದು ಅನುಭವವೇದ್ಯವಾಗಿದೆ. ಅಂತಹ ಕ್ಷೇತ್ರದಲ್ಲಿ ಸರ್ವಸಂಪತ್ತುಗಳನ್ನು ಅಭಿವೃದ್ಧಿ ಮಾಡುವ ಶ್ರೀಗುರುರಾಜರು ಕೆಲವು ದಿವಸಗಳವರೆಗೆ ವಾಸ ಮಾಡಿದರು.

**ಉಡುಪಿ ಕ್ಷೇತ್ರಯಾತ್ರೆ, ಅಲ್ಲಿ ಚಂದ್ರಿಕಾ ಪ್ರಕಾಶಾದಿ ಗ್ರಂಥನಿರ್ಮಾಣ** — ಸುಬ್ರಹ್ಮಣ್ಯ ಕ್ಷೇತ್ರದಿಂದ ಹೊರಟು ಶ್ರೀಗುರುರಾಯರು ಉಡುಪೀಕ್ಷೇತ್ರಕ್ಕೆ ಹೋದರು. ಅಲ್ಲಿ ಸರ್ವಜ್ಞರಾದ ಶ್ರೀಮಧ್ವಾಚಾರ್ಯರಿಂದ ಪ್ರತಿಷ್ಠಾಪಿತ-ನಾದ ಸಮಸ್ತದೋಷದೂರನೂ, ಅನಂತಕಲ್ಯಾಣಗುಣಗಳಿಂದ ಉತ್ಕೃಷ್ಟನೂ, ಪರಮ ಸುಂದರಾಂಗನೂ ಆದ ರುಕ್ಮಿಣೀಪತಿಯಾದ ಬಾಲಗೋಪಾಲಕೃಷ್ಣನನ್ನು ನೋಡಿದರು.

ಮಹಾನುಭಾವರಾದ ಶ್ರೀರಾಘವೇಂದ್ರಗುರುವರ್ಯರು ಎಲ್ಲಾ ಶಾಸ್ತ್ರಗಳಲ್ಲಿಯೂ ಯಾವ ಯಾವ ಗ್ರಂಥ-ಗಳಿರುತ್ತವೆಯೋ ಆ ಎಲ್ಲಾ ಗ್ರಂಥಗಳಲ್ಲಿ ಇಷ್ಟೇ ಅಕ್ಷರಗಳಿವೆ. ಆ ವರ್ಣಸಮುದಾಯ ರೂಪವಾದ ಗ್ರಂಥದ ಅರ್ಥವು ಇಷ್ಟೇ ಎಂದು ತಮ್ಮ ಪ್ರತಿಭೆಯಿಂದ ತಿಳಿದಿದ್ದರು. ಆದ್ದರಿಂದ ಅವರು ಪುಣ್ಯಕ್ಷೇತ್ರಗಳಿಗೆ ಹೋಗುವ ದಾರಿಯಲ್ಲಿ ಸಂಚಾರಮಾಡುತ್ತಿರುವಾಗಲೇ ಪುಸ್ತಕದ ಅಪೇಕ್ಷೆ ಇಲ್ಲದೆಯೇ ಶ್ರೀವ್ಯಾಸತೀರ್ಥರು ರಚಿಸಿದ 'ಚಂದ್ರಿಕಾ'

ಗ್ರಂಥಕ್ಕೆ 'ಪ್ರಕಾಶ'ವೆಂಬ ಹೆಸರಿನ ವ್ಯಾಖ್ಯಾನವನ್ನು ರಚಿಸಲು ಆರಂಭಿಸಿದರು. ಪೂರ್ಣಮಾಸ ಯಾಗವನ್ನು ಅನೇಕ ಬಾರಿ ಆವೃತ್ತಿಯಿಂದ ಮಾಡಿದರೆ ಆ ಯಾಗಕ್ಕೆ ಅತಿಶಯವಾದ ಫಲ ಉಂಟಾಗುತ್ತದೆ ಎಂದು ಹೇಳುತ್ತಾರೆ. ಅದರಂತೆ ಶ್ರೀರಾಘವೇಂದ್ರತೀರ್ಥರೂ ತಮಗೆ ಜ್ಞಾನಾತಿಶಯವುಂಟಾಗಬೇಕೆಂದು ಹತ್ತು ಬಾರಿ ಚಂದ್ರಿಕಾ ಗ್ರಂಥದ ಪ್ರವಚನವನ್ನು ಮಾಡಿದರು.

ಬ್ರಹ್ಮಸೂತ್ರಗಳೇ ದೀಪದ ಪಾತ್ರೆ, ನ್ಯಾಯಸುಧಾ ಗ್ರಂಥವೇ ತುಪ್ಪ, ಆಚಾರ್ಯರ ಬ್ರಹ್ಮಸೂತ್ರಭಾಷ್ಯವೇ ಬತ್ತಿ, ಶ್ರೀರಾಘವೇಂದ್ರತೀರ್ಥರು ಈ ಬತ್ತಿಯಲ್ಲಿ ತಂತ್ರದೀಪವೆಂಬ ದೀಪವನ್ನು ಉರಿಸಿ ಬ್ರಹ್ಮಸೂತ್ರಗಳು ಮತ್ತು ಅದರ ವ್ಯಾಖ್ಯಾನಗಳಿಗೆ ಸಂಬಂಧಪಟ್ಟ ಎಲ್ಲಾ ವಿಷಯಗಳನ್ನು ಪ್ರಕಾಶಗೊಳಿಸಿದರು. (ಬ್ರಹ್ಮಸೂತ್ರ ಮತ್ತು ಅದರ ವ್ಯಾಖ್ಯಾನಗಳಿಗೆ ಸಂಬಂಧಿಸಿರುವ ಎಲ್ಲಾ ವಿಷಯಗಳನ್ನೂ ಸ್ಪಷ್ಟವಾಗಿ ತಿಳಿಸಿಕೊಡುವ ತಂತ್ರದೀಪ ಗ್ರಂಥವನ್ನು ಶ್ರೀರಾಯರು ರಚಿಸಿದರು.) ಶ್ರೀರಾಘವೇಂದ್ರತೀರ್ಥರು ತಮ್ಮ ಬುದ್ಧಿಯೆಂಬ ಒರೆಗಲ್ಲಿನಲ್ಲಿ ಬ್ರಹ್ಮಸೂತ್ರ ಸಮೂಹವೆಂಬ ಚಿನ್ನವನ್ನು ಚೆನ್ನಾಗಿ ತಿಕ್ಕಿ ಪರಿಶೋಧಿಸಿ, ಬ್ರಹ್ಮಸೂತ್ರ ಸಮುದಾಯವೆಂಬ ಚಿನ್ನದ ತಂತಿಯಿಂದ ನ್ಯಾಯಗಳೆಂಬ ಮುತ್ತುಗಳನ್ನು ಪೋಣಿಸಿ 'ನ್ಯಾಯಮುಕ್ತಾವಲಿ' ಎಂಬ ಮುತ್ತಿನ ಸರವನ್ನು ರಚಿಸಿದರು. ಅದು ಎಲ್ಲಾ ಪಂಡಿತರಿಗೂ ಕಂಠಾಲಂಕಾರರೂಪವಾಗಿದೆ. ಹೀಗೆ ಶ್ರೀರಾಘವೇಂದ್ರತೀರ್ಥರು ಉಡುಪಿ ಕ್ಷೇತ್ರದಲ್ಲಿ ಚಂದ್ರಿಕಾಪ್ರಕಾಶ ಗ್ರಂಥದ ನಿರ್ಮಾಣವನ್ನು ಆರಂಭಿಸಿ, ಅದನ್ನು ಮಧ್ಯದಲ್ಲಿಯೇ ನಿಲ್ಲಿಸಿ 'ತಂತ್ರದೀಪ' ಮತ್ತು 'ನ್ಯಾಯಮುಕ್ತಾವಲೀ' ಗ್ರಂಥವನ್ನು ರಚಿಸಿದರು. ಅನಂತರ ಕೊನೆಯಲ್ಲಿ ಎಲ್ಲಾ ಶಾಸ್ತ್ರಾನುಸಾರಿಯಾದ ನ್ಯಾಯಗಳಿಂದ ಕೂಡಿದ ಚಂದ್ರಿಕಾಪ್ರಕಾಶ ಗ್ರಂಥವನ್ನು ಪೂರ್ಣಗೊಳಿಸಿದರು. ಹೀಗೆ ಗುರುಗಳು ಮಾಡಿದ ಗ್ರಂಥಗಳನ್ನು ಶತಾಯುಷಿಯಾದ ಮಾನವನೂ ಪೂರ್ತಿಯಾಗಿ ಓದಲಾರನು. ಹಾಗಾದರೆ ಈ ಗ್ರಂಥಗಳ ನಿರ್ಮಾಣವು ವ್ಯರ್ಥವೆಂದು ಶಂಕಿಸಬಾರದು. ಮುಂದೆ ಗುರುರಾಜರ ವಂಶದಲ್ಲಿ ಸುಮತೀಂದ್ರತೀರ್ಥರೆಂಬ ಸಕಲ ಶಾಸ್ತ್ರಾಭಿಜ್ಞರೂ ಅಪರೋಕ್ಷಜ್ಞಾನಿಗಳೂ ಆದ ಮಹಾತ್ಮರು ಬರಲಿರುವರು, ಅವರು ಈ ಗ್ರಂಥಗಳನ್ನೆಲ್ಲಾ ಓದುವರು ಮತ್ತು ಪಾಠ ಹೇಳುವರು. ಆದುದರಿಂದ ಇತರರು ಗುರುರಾಜರ ಗ್ರಂಥಗಳನ್ನು ಪೂರ್ತಿಯಾಗಿ ಓದದಿದ್ದರೂ ಶ್ರೀಸುಮತೀಂದ್ರತೀರ್ಥರು ಈ ಗ್ರಂಥಗಳನ್ನು ಓದುತ್ತಾರೆ. ಅವರಿಗೆ ಈ ಗ್ರಂಥಸಮುದಾಯವು ಉಪಯೋಗವಾಗುತ್ತದೆ ಎಂಬ ಭವಿಷ್ಯತ್‌ಕಾಲದ ದೃಷ್ಟಿಯಿಂದ ಶ್ರೀರಾಘವೇಂದ್ರತೀರ್ಥರು ಅನೇಕ ಗ್ರಂಥಗಳನ್ನು ರಚಿಸಿದರು. ಇದರಿಂದಾಗಿ ಶ್ರೀಗುರುರಾಜರು ಭವಿಷ್ಯತ್ಕಾಲದ ಜ್ಞಾನವುಳ್ಳವರೆಂದೂ ಸೂಚಿತವಾಗುತ್ತದೆ. ಶ್ರೀರಾಘವೇಂದ್ರತೀರ್ಥಗುರುಗಳು ವಸಂತಾದಿ ಆರು ಋತುಗಳಲ್ಲಿಯೂ ಶಿಷ್ಯರ ಪ್ರಾರ್ಥನೆಯಂತೆ ಶ್ರೀಮೂಲರಾಮದೇವರನ್ನು ಅನೇಕ ಉತ್ಸವಗಳಿಂದ ಪೂಜಿಸಿದರು. ಶಿಷ್ಯರೂ ಗುರುರಾಜರ ಆಜ್ಞೆಯಂತೆ ಅನೇಕ ಉತ್ಸವಗಳನ್ನು ಆಚರಿಸಿ ಗುರುಗಳ ಮೂಲಕ ಶ್ರೀಮೂಲರಾಮದೇವರ ಪೂಜೆಯನ್ನು ಮಾಡಿಸಿದರು. ಹೀಗೆ ಶ್ರೀಮೂಲರಾಮದೇವರ ಪೂಜೆ ಮಾಡುತ್ತಾ ಶ್ರೀರಾಘವೇಂದ್ರತೀರ್ಥರು ಎಲ್ಲಾ ಜನರನ್ನೂ ಆನಂದಗೊಳಿಸಿದರು.

**ವಸಂತ ಋತುವಿನ ವರ್ಣನೆ —** ಚೈತ್ರ ಶುಕ್ಲ ಪಾಡ್ಯದಿಂದ ಶ್ರೀರಾಮನವರಾತ್ರೋತ್ಸವವು ಆರಂಭವಾಗುತ್ತದೆ. ಆಗ ವಸಂತನು ಆ ಕಾಲದಲ್ಲಿಯೇ ಉತ್ಪನ್ನವಾದ ಮನೋಹರವಾದ ಮಾವಿನಹೂವಿನ ಮಕರಂದ ರಸಧಾರೆಯಿಂದ ಸ್ನಾನಮಾಡಿದ್ದಾನೋ ಎಂಬಂತೆ ಕಾಣಿಸುತ್ತಿದ್ದನು. ಮನ್ಮಥನೆಂಬ ತನ್ನ ಸಾರ್ವಭೌಮನು ಮಾನಿನಿಯರನ್ನು ಜಯಿಸಲು ಹೊರಟಾಗ ಈ ವಸಂತನು ಮನ್ಮಥಸಾರ್ವಭೌಮನ ಯೋಧನಂತೆ ಕಾಡಿನ ದಾರಿಯ ಧೂಳುಗಳನ್ನು ಹೂವುಗಳ ಮಕರಂದರಸದ ಸೇಚನದಿಂದ ಪರಿಹರಿಸಿ ತನ್ನ ರಾಜನ ದಾರಿಯನ್ನು ಸ್ವಚ್ಛಗೊಳಿಸುತ್ತಾನೋ ಎಂಬಂತಿದ್ದನು. ವಸಂತನು ಮಂದಮಾರುತವನ್ನು ಬೀಸುತ್ತಾ ಇದ್ದನು. ಹೂವುಗಳನ್ನು ಸೃಷ್ಟಿಸುತ್ತಿದ್ದನು. ದುಂಬಿಗಳನ್ನು 'ಝೇಂ' ಎಂಬ ನಾದದಿಂದ ಕುಣಿಸುತಿದ್ದನು. ಮಲಯಪರ್ವತದಲ್ಲಿ ಗಾಳಿಯಿಂದ ಒಲಾಡುವ

ಬಳುಕುವ ಬಳ್ಳಿಗಳಲ್ಲಿ ಕುಳಿತು ಕುಹೂ ಎಂದು ಧ್ವನಿಗೈಯ್ಯುತ್ತಿರುವ ಹೆಣ್ಣು ಕೋಗಿಲೆಗಳಿಂದ ಮನ್ಮಥನ ದಿಗ್ವಿಜಯದ ಕಹಳೆಗಳನ್ನು ಊದಿಸುತ್ತಿದ್ದನು. ವಸಂತನು ಮಲ್ಲಿಗೆಹೂವುಗಳ ಪರಾಗಗಳಿಂದ ಅಲಂಕರಿಸಿಕೊಂಡಿದ್ದನು. ಇಂತಹ ವಸಂತನು ಮನ್ಮಥವೀರನ ಬತ್ತಳಿಕೆಯಂತೆ ಶೋಭಿಸುತ್ತಾ ಇದ್ದನು, ಮಂಡಲಾಕಾರವಾದ ದುಂಬಿಗಳ ಸಾಲು ಸ್ತ್ರೀವಿಯೋಗಿಗಳ ಪ್ರಾಣಾಪಹಾರ ಮಾಡುವ ವಿಷಯದಲ್ಲಿ ಕರಿಯ ನಾಗರಹಾವಿನಂತೆ ವಸಂತನ ಸುತ್ತಲೂ ಓಡಾಡುತ್ತಾ ಜತೆಗೆ ಬರುತ್ತಲಿತ್ತು. ವಸಂತನು ಹೂವು ಚಿಗುರು ಮುಂತಾದವುಗಳಿಂದ ನಾರಾಯಣನನ್ನು ಸೇವಿಸಿ ಅವನ ಅನುಗ್ರಹದಿಂದ ಪ್ರಾಪ್ತವಾದ ಅಪಾರಸಂಪತ್ತಿನಿಂದ ಕೂಡಿದಂತಿದ್ದನು. ವಸಂತನು ಚಿಗುರೆಲೆಗಳೆಂಬ ಕೆಂಪಾದ ತಲೆಪಾಗನ್ನು (ಮುಂಡಾಸನ್ನು) ಧರಿಸಿ, ಮನ್ಮಥನು ಕೊಟ್ಟಿರುವ ಅವನ ಬಾಣಗಳಾದ ಅರವಿಂದ, ಅಶೋಕಾದಿ ಪುಷ್ಪಗಳೆಂಬ ದರ್ಭೆಗಳಿಂದ ರಮಣೀ ವಿರಹಿತರ ಮರಣಕ್ಕೋಸ್ಕರ ಅಭಿಚಾರಯಾಗವನ್ನು ಮಾಡುತ್ತಿರುವನೋ ಎಂಬಂತಿದ್ದನು. ನಾರಿಯರಪಾದಗಳ ಒದೆತಗಳಿಂದ ಹೂವುಬಿಟ್ಟಿರುವ ಅಶೋಕವೃಕ್ಷಗಳಿಂದ ವಸಂತನು ಶೋಭಿ- ಸುತ್ತಿದ್ದನು. ನಾರಿಯರು 'ಥೂ' ಎಂದು ತಾಂಬೂಲವನ್ನು ಅಗಿದು ಉಗಿದಾಗ ಹೂಬಿಟ್ಟಿರುವ ಬಕುಲವೃಕ್ಷಗಳು ವಸಂತನ ಶೋಭೆಯನ್ನು ಹೆಚ್ಚಿಸುತ್ತಿದ್ದವು. ಇಂತಹ ವಸಂತನು ಆಗ ಬಂದೊದಗಿದನು. ಆಗ ಶ್ರೀರಾಮನವಮಿಯ ಮಹೋತ್ಸವವನ್ನು ಆಚರಿಸಿದ ಶ್ರೀಗುರುಸಾರ್ವಭೌಮರು ಪಂಚಾಮೃತಾಭಿಷೇಕ ಮಾಡಿ ಶ್ರೀರಾಮಚಂದ್ರನನ್ನು ಪೂಜಿಸಿದರು.

**ಗ್ರೀಷ್ಮ ಋತುವಿನ ವರ್ಣನೆ** — ಮುಂದೆ ಗ್ರೀಷ್ಮ ಋತುವು ಬಂದಿತು. ಗ್ರೀಷ್ಮನು ಮಲ್ಲಿಗೆ ಬಳ್ಳಿಗಳೆಂಬ ಯುವತಿಯರ ತಾರುಣ್ಯವನ್ನು ಪೋಷಿಸಿದನು, (ಬೇಸಿಗೆಯಲ್ಲಿ ಹೆಚ್ಚಾಗಿ ಮಲ್ಲಿಗೆ ಹೂವು ಬಿಡುತ್ತದೆ.) ಇವನು ಮನ್ಮಥನನ್ನು ತಿರಸ್ಕರಿಸಿದನು. (ಬೇಸಿಗೆಯ ಸೆಕೆ ಬೆವರುಗಳಿಂದಾಗಿ ಕಾಮವಿಹಾರಕ್ಕೆ ಅಡ್ಡಿಯನ್ನುಂಟು ಮಾಡುತ್ತದೆ.) ಕಾಡ್ಗಿಚ್ಚನ್ನು ಗ್ರೀಷ್ಮನು ಕಾಪಾಡುತ್ತಾನೆ. ಬೇಸಿಗೆಯಲ್ಲಿ ಅಲ್ಲಲ್ಲಿ ಕಾಡ್ಗಿಚ್ಚು ಕಾಣಿಸಿಕೊಂಡು ಮಳೆಗಾಲ ಬರುವವರೆಗೂ ಸುರಕ್ಷಿತವಾಗಿಯೇ ಇರುತ್ತದೆ. ಗ್ರೀಷ್ಮವು ಕೆರೆ ಕೊಳಗಳ ನೀರನ್ನೆಲ್ಲಾ ಬತ್ತಿಸಿಬಿಡುತ್ತದೆ. ಗ್ರೀಷ್ಮನು ಸೂರ್ಯನ ಪ್ರಕಾಶವನ್ನು ಸೆಕೆಯನ್ನು ಹೆಚ್ಚಿಸಿ ಭೂಮಿಯಲ್ಲಿದ್ದ ಶೈತ್ಯವನ್ನು ಭಾವಿಯ ನೀರಿನಲ್ಲಿ, ತರುಣಿಯ ಸುರಕ್ಷಿತವಾದ ಕೋಟೆಯೊಳಗೆ ಇದ್ದಂತೆ ಇರುವ ಸ್ತನಗಳಲ್ಲಿ ಮತ್ತು ಮರಗಳ ನೆರಳುಗಳಲ್ಲಿ ಇಡುತ್ತಾನೆ. ಮೋಡದಿಂದ ಸುರಿದ ನೀರನ್ನು ಮಾತ್ರ ಮೇಲೆ ಬಾಯಿತೆರೆದು ಕುಡಿದು ಬದುಕುವ ಚಾತಕಪಕ್ಷಿಗಳನ್ನು ಗ್ರೀಷ್ಮನು ಉಪವಾಸ ಕೆಡವಿ ಸಾಯಿಸುತ್ತಾನೆ. ತರುಣಿಯರು ಬೇಸಿಗೆಯಲ್ಲಿ ನೀರಾಟವನ್ನು ಆಡುವಾಗ ಅವರ ಸ್ತನಗಳಲ್ಲಿರುವ ತಂಪನ್ನು ಗ್ರೀಷ್ಮನು ಕೊಳದ ನೀರಿನಲ್ಲಿ ಸೇರಿಸುತ್ತಾನೋ ಎಂಬಂತೆ ಕಾಣಿಸುತ್ತಾನೆ. ಕಡು ಬೇಸಿಗೆಯಲ್ಲಿಯೂ ಕೊಳ ಕೆರೆಗಳ ನೀರು ಸ್ವಲ್ಪ ತಂಪಾಗಿರುವುದನ್ನು ನೋಡಿದರೆ ಗ್ರೀಷ್ಮನು ಸುಂದರಿಯರು ಸ್ನಾನ ಮಾಡುವಾಗ ಅವರ ಸ್ತನಗಳ ತಂಪನ್ನು ನೀರಿಗೆ ಸೇರಿಸಿದ್ದಾನೋ ಎಂದು ತೋರುತ್ತದೆ. ಚಂದ್ರನೆಂಬ ಬೇಡನಿಂದ ಹೆದರಿದ ಚಕ್ರವಾಕಗಳ ಜೋಡಿಯು ಗ್ರೀಷ್ಮನಿಗೆ ಹಗಲುಗಳ ದೀರ್ಘತೆಯೆಂಬ ಬಹುಮಾನವನ್ನು ಕೊಟ್ಟು ತಮ್ಮನ್ನು ಚಂದ್ರನೆಂಬ ಬೇಡನಿಂದ ಸ್ವಲ್ಪಮಟ್ಟಿಗಾದರೂ ಕಾಪಾಡಬೇಕೆಂದು ಬೇಡಿಕೊಂಡಿತು. ದಿನದೀರ್ಘತೆಯೆಂಬ ಆ ಬಹುಮಾನವನ್ನು ಗ್ರೀಷ್ಮನು ಪಾರಿತೋಷಕವಾಗಿ ಕೊಟ್ಟಿರುವ ಶಲ್ಯವಸ್ತ್ರ ಶಾಲನ್ನು ಹೆಗಲಿಗೆ ಹಾಕಿಕೊಳ್ಳುವಂತೆ ಧರಿಸಿದ್ದಾನೆ. ಬೇಸಿಗೆಯಲ್ಲಿ ಹಗಲುಗಳು ಉದ್ದವಾಗಿರುತ್ತವೆ. ಚಕ್ರವಾಕ ಪಕ್ಷಿಗಳಿಗೆ ರಾತ್ರಿ ವಿಯೋಗವುಂಟಾಗುತ್ತದೆ. ಅದು ಆದಷ್ಟು ಕಡಿಮೆಯಾಗಲೆಂದು ಹಗಲನ್ನು ಹೆಚ್ಚು ಮಾಡಿ, ರಾತ್ರಿ ಕಡಿಮೆಯಾಗುವಂತೆ ಮಾಡಿ, ರಾತ್ರಿಯಲ್ಲಿ ಬೇಡನಂತೆ ಚಂದ್ರನು ವಿರಹಿಗಳಾದ ಚಕ್ರವಾಕದಂಪತಿಗಳಿಗೆ ಕೊಡುವ ತಾಪವನ್ನು ಕಡಿಮೆ ಮಾಡಲು, ಚಕ್ರವಾಕ ಪಕ್ಷಿ ದಂಪತಿಗಳೇ ಗ್ರೀಷ್ಮನಿಗೆ ಹಗಲಿನ ದೀರ್ಘತೆ ಎಂಬ ಬಹುಮಾನವನ್ನು ಕೊಟ್ಟವು ಎಂಬಂತೆ ಕಾಣಿಸುತ್ತದೆ. ಇಂತಹ ಗ್ರೀಷ್ಮ ಋತುವು ಆಗ ಪ್ರಾರಂಭವಾಯಿತು.

**ವರ್ಷ ಋತುವರ್ಣನೆ —** ಮುಂದೆ ಮಳೆಗಾಲವು ಪ್ರಾರಂಭವಾಯಿತು. ವರ್ಷ ಋತುವು ಮೋಡಗಳ ಸಾಲಿನಿಂದ ಸೂರ್ಯನನ್ನು ಮರೆ ಮಾಡಿತು. ಹಂಸಗಳನ್ನು ಮಾನಸ ಸರೋವರಕ್ಕೆ ಕಳುಹಿಸಿತು. ನವಿಲುಗಳನ್ನು ಕುಣಿಸಿತು. ಅದು ಮನ್ಮಥನನ್ನು ಹೆಚ್ಚಿಸಿ ಅವನಿಗೆ ಬಂಧುವಿನಂತಾಯಿತು. ಆಕಾಶವೆಂಬ ಕೃಷ್ಣನು ಪ್ರಾವೃಟ್ (ಮಳೆಗಾಲ) ಎಂಬ ಹೆಸರಿನ ಲಕ್ಷ್ಮಿಯನ್ನು ಮದುವೆಯಾಗಲಿದ್ದಾಗ ಮಳೆಗಾಲವು ಕಾಮನಬಿಲ್ಲು ಎಂಬ ಕುಂಕುಮದಲ್ಲಿ ಅದ್ದಿದ ಯಜ್ಞೋಪವೀತವನ್ನು ಕೊಟ್ಟಿತು. ಕಾಡಿನಂತೆ ಸೊಂಪಾಗಿ ಬೆಳೆದ ಕಮಲಗಳಿಂದ ವರ್ಷ ಋತುವು ಶೋಭಿಸುತ್ತಾ ಇತ್ತು. ಇಂದ್ರಗೋಪ ಎಂಬ ಕೆಂಪಾದ ಹುಳಗಳು ಸಾಲುಸಾಲಾಗಿ ಓಡಾಡಲು ಪ್ರಾರಂಭಿಸಿದವು. ಮಳೆಗಾಲದಲ್ಲಿ ಸೂರ್ಯೋದಯ ಮತ್ತು ಚಂದ್ರೋದಯಗಳು ಪ್ರತ್ಯಕ್ಷವಾಗಿ ಕಾಣುತ್ತಿರಲಿಲ್ಲ. ಕಮಲಗಳು ಅರಳಿದಾಗ ಸೂರ್ಯೋದಯವಾಯಿತೆಂದೂ, ಕಮಲಗಳು ಮುಚ್ಚಿಕೊಂಡಾಗ ಚಂದ್ರೋದಯ-ವಾಯಿತೆಂದೂ ಊಹಿಸಬೇಕಾಗುತ್ತಿತ್ತು. ವರ್ಷಋತುವು ಕ್ಷೀರಸಮುದ್ರದಲ್ಲಿ ಶ್ರೀಹರಿಯನ್ನು ಮಲಗಿಸಿತು. ಮಳೆಗಾಲದಲ್ಲಿ ಚಾತುರ್ಮಾಸ್ಯ ಸಮಯದಲ್ಲಿ ನಾರಾಯಣನು ಶೇಷನ ಮೇಲೆ ಮಲಗಿರುತ್ತಾನೆ ಎಂದು ಪ್ರಸಿದ್ಧಿ. ಆಗ ಶ್ರೀಹರಿಯು ಲೋಕರೂಢಿಯಂತೆ ಕಣ್ಣುಗಳನ್ನು ಮುಚ್ಚಿದಾಗ, ಹರಿಯ ಬಲಗಣ್ಣು ಸೂರ್ಯ, ಎಡಗಣ್ಣು ಚಂದ್ರನಾದುದರಿಂದ, ಅವರಿಬ್ಬರ ಶೋಭೆಯೂ ಮಳೆಗಾಲದಲ್ಲಿ ಕಡಿಮೆಯಾಗುತ್ತದೆ. ಹೀಗೆ ಸೂರ್ಯ ಚಂದ್ರರ ವಿಜೃಂಭಣೆ ವಿಕಾಸ ಪ್ರಕಾಶಗಳನ್ನು ಕಡಿಮೆ ಮಾಡುತ್ತಾ ವರ್ಷ ಋತುವು ವಿಜೃಂಭಿಸಿತು.

**ಗುರುವರ್ಯರು ಚಾತುರ್ಮಾಸ್ಯ ನಿಯಮವನ್ನು ಸ್ವೀಕರಿಸಿದರು —** ಹೀಗೆ ವರ್ಷಾಕಾಲವು ಬಂದು ಒದಗಿದಾಗ ಹುಣ್ಣಿಮೆ ದಿನ ಮಧ್ಯಾಹ್ನ ಶ್ರೀರಾಘವೇಂದ್ರತೀರ್ಥರು ಶ್ರೀಮೂಲರಾಮನ ಪೂಜೆಯನ್ನು ಮಾಡಿ, ತಮ್ಮೊಡನೆ ಇದ್ದ ಇತರ ಯತಿಶ್ರೇಷ್ಠರೊಡನೆ ಚಾತುರ್ಮಾಸ್ಯವ್ರತದ ಸಂಕಲ್ಪವನ್ನು ಮಾಡಿದರು. ಶ್ರೀರಾಘವೇಂದ್ರ-ತೀರ್ಥರು ಒಂದು ಬಾರಿ, ಒಂದು ದಿನದಲ್ಲಿ ಮಾಡಿದ ವ್ರತನಿಯಮಗಳನ್ನು ಭಕ್ತಿಶ್ರದ್ಧೆಗಳಿಂದ ನೋಡಿ, ಅನಂತರ ಸ್ಮರಿಸಿ, ಅದನ್ನು (ಇತರರಿಗೆ) ಹೇಳಿದರೆ, ಆ ಮಾನವನಿಗೆ ವೈರಾಗ್ಯವೂ, ಸಕಲ ವೇದಾರ್ಥಗಳ ಜ್ಞಾನವೂ ಹೆಚ್ಚುತ್ತದೆ.

**ಶರದೃತುವಿನ ವರ್ಣನೆ —** ಮಳೆಗಾಲದಲ್ಲಿ ಸೂರ್ಯ ದರ್ಶನವಿಲ್ಲದೆ ಮೋಡ ಮುಚ್ಚಿದ ನೆಲದಲ್ಲಿ ಕೆಸರು ತುಂಬಿದ ದುರ್ದಿನವಿತ್ತು. ಶರತ್ಕಾಲವು ಅಂತಹ ದುರ್ದಿನವನ್ನು ದೂರ ಮಾಡಿತು. ಚಾತುರ್ಮಾಸ್ಯದ ಶಯನ-ದಿಂದ ಮೇಲೆದ್ದ ಹರಿಯು ಶರತ್ಕಾಲವನ್ನು ಪ್ರಸನ್ನವಾದ ಕಣ್ಣುಗಳಿಂದ ನೋಡುತ್ತಿದ್ದನು. ದಿಕ್ಕುಗಳೆಲ್ಲಾ ನಿರ್ಮಲವಾದವು. ಹಂಸಗಳು ಸಂಚಾರ ಮಾಡಲಾರಂಭಿಸಿದವು. ಬಿಳಿಯ ತಾವರೆ ಹೂವುಗಳು ಅರಳಿದವು. ಮೋಡಗಳು ಬೆಳ್ಳಗಾದವು. ಕಾಶವೆಂಬ ಹುಲ್ಲುಗಳಲ್ಲಿ ಹೂವುಗಳು ಅರಳಿದವು. ಯುದ್ಧಯಾತ್ರೆಗೆ ಹೊರಡುವ ರಾಜರಿಗೆ ಶರತ್ಕಾಲವು ಜಯವನ್ನು ಕೊಡಲಾರಂಭಿಸಿತು. ಗಿಣಿಗಳು ಹಿಂಡುಹಿಂಡಾಗಿ ಆಕಾಶದಲ್ಲಿ ತೇಲುವಂತೆ ಓಡಾಡುತ್ತಿದ್ದವು. ಶ್ರೀರಾಘವೇಂದ್ರತೀರ್ಥರು ಜಲದಾನ ಪೂರ್ವಕವಾಗಿ ಮಾಡಿದ ದಾನವಿಹಾರವನ್ನು ನೋಡಿ ನಾಚಿಕೆಯಿಂದ ಮೋಡಗಳು ನೀರು ಸುರಿಸುವುದನ್ನು ಬಿಟ್ಟು ಕೃಶವಾದವು, ಬಿಳಿಚಿಕೊಂಡವು. ಬಿಳಿಯ ಮರಳಿನ ರಾಶಿಯಂತೆ ಎಲ್ಲೆಲ್ಲೂ ಬೆಳದಿಂಗಳು ಹರಡಿತು. ಕೃಷಿ ಎಂಬ ಕಾಮ್ಯ ಕರ್ಮದ ಫಲವಾದ ಭತ್ತದ ಗಿಡದ ತೆನೆಗಳು ಶ್ರೀಗುರುಗಳು ತಮ್ಮ ದರ್ಶನದಿಂದ ಕಾಮ್ಯ ಕರ್ಮಗಳ ಸಮೂಹವನ್ನು ನಾಶ ಮಾಡುವುದರಿಂದ, ನಾಚಿ ತಲೆ-ಬಾಗಿದವೋ ಎಂಬಂತೆ ಬಾಗಿದವು. (ಭತ್ತದ ತೆನೆಗಳು ಬಲಿತು, ಬಾಗಿದವು.) ಇಂತಹ ಶರದೃತುವು ವಿಜೃಂಭಿಸಿತು.

**ಹೇಮಂತ ಋತುವರ್ಣನೆ —** ಮಾನಿನಿಯರಿಗೆ ಮೋಹವನ್ನುಂಟು ಮಾಡುವ ಚೂರ್ಣಗಳಂತಿರುವ ಪರಾಗಗಳನ್ನು ದಿಕ್ಕು ದಿಕ್ಕುಗಳಿಗೆ ಚೆಲ್ಲುವ ಕಮಲಗಳು ಚಳಿಗಾಲದಲ್ಲಿ ಹಿಮದ ಸುರಿಮಳೆಯಿಂದ ನಾಶವಾದವು. ದಿನ ದಿನವೂ ಚಳಿ ಮಂಜು ಹೆಚ್ಚಾಗುತ್ತಾ ಸೂರ್ಯ ಕಿರಣಗಳ ಕಾವು ಕಡಿಮೆಯಾಗುತ್ತಾ ಬಂದಿತು. ಕಮಲಿನಿಯು

(ತಾವರೆ ಹೂವಿನ ರಾಶಿ) ಮಂಜಿನ ಮುಸುಕಿನೊಳಗೆ ಉಸಿರು ಕಟ್ಟಿ ಸತ್ತಂತೆ ಆದಳು. ಹೀಗೆ ಹೇಮಂತವು (ಚಳಿಗಾಲ) ತನ್ನ ವಿಲಾಸವನ್ನು ತೋರಿಸಿತು.

**ಶಿಶಿರ ಋತುವಿನ ವರ್ಣನೆ —** ಶಿಶಿರ ಕಾಲದಲ್ಲಿ ಸೂರ್ಯನೂ ಚಳಿ ತಡೆಯಲಾರದೆ, ಉದಯಿಸುವಾಗ ಆಗ್ನೇಯ ಮೂಲೆಯಿಂದ ಮೇಲೆ ಬರುತ್ತಾ ಸ್ವಲ್ಪ ಹೊತ್ತು ಬೆಂಕಿ ಕಾಯಿಸಿಕೊಂಡು ಆಮೇಲೆ, ಬರುತ್ತಿದ್ದನು. ಅರುಣೋದಯ ಕಾಲದಲ್ಲಿ ನಡುಕ ಹುಟ್ಟಿಸುವ ಚಳಿಗಾಳಿಯನ್ನು ಬೀಸಿ ಶಿಶಿರ ಋತುವು ತನ್ನ ಪರಾಕ್ರಮವನ್ನು ತೋರಿಸುತ್ತಿತ್ತು.

**ಶ್ರೀರಾಘವೇಂದ್ರತೀರ್ಥರು ಪಾಂಡುರಂಗಕ್ಷೇತ್ರಾದಿಗಳ ಯಾತ್ರೆಯನ್ನು ಮಾಡಿದರು —** ಅನಂತರ ಗುರುಗಳು ಪಂಢರಾಪುರದ ವಿಟ್ಠಲನನ್ನು ನೋಡಿದರು. ಅನಂತರ ಕರವೀರಪುರವೆಂದು ಪುರಾಣ ಪ್ರಸಿದ್ಧವಾದ ಕೊಲ್ಹಾಪುರಕ್ಕೆ ಹೋಗಿ ಅಲ್ಲಿ ಶ್ರೀಮಹಾಲಕ್ಷ್ಮಿಯನ್ನು ಸೇವಿಸಿದರು. ಆ ಕ್ಷೇತ್ರದಲ್ಲಿಯೇ ಶ್ರೀಮೂಲರಾಮದೇವರ ಪೂಜೆ ಮಾಡುತ್ತಾ ಬಹುಕಾಲ ವಾಸಿಸಿದರು. ಅನಂತರ ಇತರ ಅನೇಕ ಕ್ಷೇತ್ರಗಳ ಯಾತ್ರೆ ಮಾಡುತ್ತಾ ಬಹಳ ಸಮಯದ ನಂತರ ರಾಮನಾಥಪುರಕ್ಕೆ ಬಂದು ಕಾವೇರೀ ನದಿಯಲ್ಲಿ ಅವಗಾಹನ ಸ್ನಾನ ಮಾಡಿ ಸಂತೋಷಪಟ್ಟರು. ಗೌತಮರಿಗೆ ಪ್ರಾಪ್ತವಾದ ಗೋಹತ್ಯಾ ಪರಿಹಾರವನ್ನು ಮಾಡಿದ್ದರಿಂದ 'ಗೋದಾವರೀ' ಎಂದು ಪ್ರಸಿದ್ಧವಾದ ನದಿಯಲ್ಲಿ ಸ್ನಾನ ಮಾಡಿದರು. ಅಲ್ಲಿದ್ದ ಪಂಡಿತ ಶ್ರೇಷ್ಠರನ್ನು ವಾದದಲ್ಲಿ ಜಯಿಸಿದರು. ಆ ಪಂಡಿತರಿಂದ ಪೂಜಿತರಾಗಿ ಅಲ್ಲಿಂದ ಹೊರಟು ವಿಜಯನಗರಕ್ಕೆ ಬಂದರು. ಅಲ್ಲಿ ಅನೇಕ ಶಿಷ್ಯಸಮೂಹಗಳನ್ನು ತಪ್ತಮುದ್ರಾಂಕನದಿಂದ ಪವಿತ್ರ-ಗೊಳಿಸಿದರು. ಅಲ್ಲಿ ನಡೆದ ವಾದದಲ್ಲಿ ಅನೇಕ ಪ್ರತಿವಾದಿಗಳನ್ನು ಸೋಲಿಸಿಧರು. ಆಗ ರಾಜನು ವಿದ್ವ-ಚ್ಚಕ್ರವರ್ತಿಗಳಿಗೆ ಸಲ್ಲುವ ಗೌರವವನ್ನು ಗುರುಗಳಿಗೆ ಕೊಟ್ಟು ಬಿಳಿಯ ಛತ್ರಿಯನ್ನು ಕಾಣಿಕೆಯಾಗಿ ಅರ್ಪಿಸಿದನು. ಗುರುರಾಜರು ಕೃಷ್ಣಾನದಿಯಲ್ಲಿ ಸ್ನಾನ ಮಾಡಿ ಶ್ರೀಮಜ್ಜಯತೀರ್ಥವಿರಚಿತವಾದ ಬ್ರಹ್ಮಸೂತ್ರಭಾಷ್ಯ ವ್ಯಾಖ್ಯಾನ-ವಾದ 'ತತ್ತ್ವ ಪ್ರಕಾಶಿಕಾ' ಗ್ರಂಥದ ಪ್ರವಚನವನ್ನು ಮಾಡಿದರು. ಶ್ರೀಮಧ್ವಾಚಾರ್ಯರು ರಚಿಸಿದ ಅಣುಭಾಷ್ಯವನ್ನು ವ್ಯಾಖ್ಯಾನಿಸಿದರು. ಪುರುಷೋತ್ತಮನ ಭಕ್ತರಾದ ಶ್ರೀರಾಘವೇಂದ್ರತೀರ್ಥರು ಅಲ್ಲಲ್ಲಿ ಪುಣ್ಯಭೂಮಿಗಳಲ್ಲಿ ಸಂಚರಿಸಿ, ಅಲ್ಲಿ ವಾಸಿಸಿ ಮುಂದೆ ಬರುತ್ತಾ ಶ್ರೀಶೈಲದಲ್ಲಿ ಶಿವನ ಸಂದರ್ಶನ ಮಾಡಿದರು. ಅನಂತರ ವೆಂಕಟಾಚಲ-ವೆಂದು ಪ್ರಸಿದ್ಧವಾದ ತಿರುಪತಿಗೆ ಬಂದು ಶ್ರೀನಿವಾಸನನ್ನು ಸೇವಿಸುತ್ತಾ ಕೆಲವು ದಿವಸಗಳವರೆಗೆ ವಾಸಿಸಿದರು. ಅನಂತರ ಕಂಚಿಗೆ ಬಂದು ಶ್ರೀವರದರಾಜನನ್ನು ಏಕಾಮ್ರೇಶ್ವರನನ್ನು ಸೇವಿಸಿದರು. ಅಲ್ಲಿ ಅರುಣಾಚಲಕ್ಷೇತ್ರ, ವೃದ್ಧಾಚಲಕ್ಷೇತ್ರಗಳಿಗೆ ಹೋಗಿ ಶಿವನನ್ನು ನಮಿಸಿ ಶ್ರೀಮುಷ್ಣಕ್ಷೇತ್ರಕ್ಕೆ ಬಂದು ಶ್ರೀಭೂವರಾಹದೇವರನ್ನು ಕಂಡು ಸ್ತುತಿಸಿದರು. ಹೀಗೆ ದಿಗ್ವಿಜಯ ಯಾತ್ರೆಯನ್ನು ಪೂರೈಸಿ ಕುಂಭಘೋಣಕ್ಕೆ ಹಿಂತಿರುಗುತ್ತಾ ದೂರದಿಂದಲೇ ಕಾವೇರಿಯನ್ನು ನೋಡಿ ತುಂಬಾ ಸಂತೋಷಪಟ್ಟರು. ಶ್ರೀರಾಮಚಂದ್ರನು ವನವಾಸದಲ್ಲಿದ್ದಾಗ ಭರತನು ನಂದಿ-ಗ್ರಾಮದಲ್ಲಿದ್ದು ತಪಸ್ಸು ಮಾಡುತ್ತಾ ಕೃಶವಾಗಿದ್ದನು. ಶ್ರೀರಾಮನು ವನವಾಸದಿಂದ ಹಿಂದಿರುಗಿವಾಗ ಭರತನು ಭಕ್ತಿಭರಿತನಾಗಿ ಶ್ರೀರಾಮನನ್ನು ಅಯೋಧ್ಯಾನಗರ ಪ್ರವೇಶ ಮಾಡಿಸಿದ್ದನು. ಈಗ ಅದರಂತೆಯೇ ಅತಿಶಯವಾದ ತಪಸ್ಸಿನಿಂದ ಕೃಶರಾದ ಶ್ರೀರಾಘವೇಂದ್ರತೀರ್ಥರು ದಿಗ್ವಿಜಯ ಯಾತ್ರೆಯಿಂದ ಹಿಂತಿರುಗಿದಾಗ ಜನರು ಗುಂಪುಗುಂಪಾಗಿ ಶ್ರೀಗುರುಗಳನ್ನು ಸತ್ಕರಿಸಿ ಪೂಜಿಸುತ್ತಿರುವಾಗ ತಾವು ಶ್ರೀಮೂಲರಾಮಚಂದ್ರನನ್ನು ಕುಂಭಘೋಣನಗರಿಗೆ ಪ್ರವೇಶಮಾಡಿಸಿದರು. ಆದುದರಿಂದ ಕುಂಭಘೋಣ ನಗರಿಯು ಅಯೋಧ್ಯೆಯೆಂದು ನಾವು ತಿಳಿಯುತ್ತೇವೆ (ಎಂದು ನಾರಾಯಣಾಚಾರ್ಯರು ಹೇಳುತ್ತಾರೆ) ಕುಂಭಘೋಣ ಪುರಿಯನ್ನು ಪ್ರವೇಶಿಸುತ್ತಿದ್ದ ಶ್ರೀರಾಘವೇಂದ್ರತೀರ್ಥರು ಆಗ ಉಂಟಾದ ವಿಶೇಷವಾದ ಶೋಭೆಯಿಂದ ಕೂಡಿ ಸಂತುಷ್ಟ-ಚಿತ್ತರಾಗಿ ಬರುತ್ತಿದ್ದು ಅನೇಕ ಬ್ರಾಹ್ಮಣರಿಂದ ನಮಸ್ಕಾರವನ್ನು ಸ್ವೀಕರಿಸುತ್ತಾ, ಮಧ್ಯದಾರಿಯಲ್ಲಿ ಶ್ರೀಮದ್-

ವ್ಯಾಸರಾಜತೀರ್ಥ ಪ್ರತಿಷ್ಠಿತವಾದ ಹನುಮಂತದೇವರನ್ನು ಕಂಡು ಭುಜಂಗ ಪ್ರಯಾತವೃತ್ತದಿಂದ ಸ್ತೋತ್ರ ಮಾಡಿದರು. ಶಂಖಭೇರೀ ಮೃದಂಗ ಮುಂತಾದ ವಿಚಿತ್ರ ವಾದ್ಯಗಳ ಧ್ವನಿಗಳಿಂದ ದಿಕ್ಕುಗಳು ಪ್ರತಿಧ್ವನಿ-ಗೊಳ್ಳುತ್ತಿರುವಾಗ, ಸುತ್ತಲೂ ಅನೇಕ ಮನುಷ್ಯರು ಹೂವಿನ ಸುರಿಮಳೆ ಸುರಿಸುತ್ತಿರುವಾಗ, ಅಲ್ಲಲ್ಲಿ ಪ್ರತಿ ಮಾರ್ಗದಲ್ಲಿ ಸುವಾಸಿನಿಯರು ಆರತಿ ಮಾಡುತ್ತಿರುವಾಗ ಶ್ರೀರಾಮನು ಸಂಪದ್ಭರಿತವಾದ ಮಠವನ್ನು ಮೊದಲು ಪ್ರವೇಶಿಸುತ್ತಿರುವಾಗ ಶ್ರೀರಾಘವೇಂದ್ರ ಗುರುಸಾರ್ವಭೌಮರು ಹಿಂಭಾಗದಲ್ಲಿ, ಅನಂತರ ಕುಂಭಘೋಣದ ಮಠವನ್ನು ಪ್ರವೇಶಿಸಿದರು.



ವಿದ್ವತ್ಕುಲಾವತಂಸ,
ಮಹಾಕವಿ ಶ್ರೀಮನ್ನಾರಾಯಣಾಚಾರ್ಯೇಣ ರಚಿತಂ

# ಶ್ರೀಮದ್ರಾಘವೇಂದ್ರವಿಜಯ ಮಹಾಕಾವ್ಯಂ

## ನವಮ ಸರ್ಗ

**ಅವತಾರಿಕೆ :** ವಂದಿಮಾಧಗರ ಸ್ತುತಿಯು – ಮೊದಲು ಸ್ತುತಿಪಾಠಕರು ಸ್ತೋತ್ರಗಳಿಂದ ಶ್ರೀರಾಘವೇಂದ್ರ ಗುರುವರ್ಯರನ್ನು ಸಂಬೋಧಿಸುತ್ತಾರೆ. ಶ್ರೀರಾಘವೇಂದ್ರತೀರ್ಥರು ಅನಂತರ ಎದ್ದು ತುಲಸೀ ವಂದನವನ್ನು ಮಾಡಿ ಬಂದು, ತಮಗೆ ನಮಸ್ಕಾರ ಮಾಡಿದ ಬ್ರಾಹ್ಮಣರನ್ನು ಅನುಗ್ರಹಿಸಿದರು. ತದನಂತರ ಕಾವೇರಿ ತೀರಕ್ಕೆ ಹೋಗಿ ಮೃತ್ತಿಕಾ ಶೌಚವನ್ನು ಮಾಡಿ ಆಚಮನ ಮಾಡಿ ಪ್ರಾತಃಸ್ನಾನ ಜಪ ವ್ಯಾಸಪೂಜಾ ಇವುಗಳನ್ನು ಮುಗಿಸಿದ ಮೇಲೆ ಶ್ರೀವಿಜಯೀಂದ್ರತೀರ್ಥರನ್ನು ದರ್ಶನ ಮಾಡಿ, ಸೇವೆ ಮಾಡಿ, ಮಠಕ್ಕೆ ಬಂದು, ವೇದಾಂತ ಗ್ರಂಥಗಳಲ್ಲಿ ಮುಖ್ಯವಾದ ಬ್ರಹ್ಮಸೂತ್ರಭಾಷ್ಯದ ಪ್ರವಚನವನ್ನು ಮಾಡಿ, ಅನಂತರ ಮಧ್ಯಾಹ್ನ ಸ್ನಾನವನ್ನು ಮಾಡಿ, ಶ್ರೀಮೂಲರಾಮದೇವರನ್ನು ಪೂಜಿಸಿ, ನಮಸ್ಕರಿಸಿ, ಸ್ತೋತ್ರಮಾಡಿ, ತೀರ್ಥಪ್ರಾಶನ ಮಾಡಿ, ಬ್ರಾಹ್ಮಣರ ಜೊತೆಗೆ ಭಿಕ್ಷಾ ಸ್ವೀಕಾರ ಮಾಡಿ, ಸಂಜೆಯವರೆಗೂ ಶಾಸ್ತ್ರ ವಿಚಾರಗಳನ್ನು ಮಾಡುತ್ತಿದ್ದರು ಎಂಬುದಾಗಿ ಕವಿಗಳು ಈ ಸರ್ಗದಲ್ಲಿ ವಿವರಿಸುತ್ತಾರೆ.

**ಮಾಗಧಾ ಮಧುಭಿದಂಘ್ರಿಪಂಕಜೇ ಜಾಗರೂಕಮಪಿ ಸಂಯಮೀಶ್ವರಮ್ ।**
**ಬೋಧಯಂತಿ ವಚನೈರ್ಬುಧೋತ್ತಮಂ ಕಾವ್ಯವರ್ಣನವಿಧೌ ಕೃತಾದರೈಃ ॥೧॥**

**ತಾತ್ಪರ್ಯ :** ಶ್ರೀರಾಘವೇಂದ್ರತೀರ್ಥರು ಯಾವಾಗಲೂ ಎಚ್ಚರವಾಗಿಯೇ ಇರುತ್ತಾರೆ. ಶ್ರೀಹರಿಯ ಪಾದಕಮಲಗಳಲ್ಲಿ ಯಾವಾಗಲೂ ಆಸಕ್ತರಾಗಿರುತ್ತಾರೆ. ಅವರನ್ನು ಸಂಬೋಧಿಸಿ, ಸುಪ್ರಭಾತವನ್ನು ಹೇಳಿ ಎಚ್ಚರಿಸಬೇಕಾಗಿಲ್ಲ. ಶ್ರೀರಾಘವೇಂದ್ರತೀರ್ಥರು ಜ್ಞಾನಿಶ್ರೇಷ್ಠರು, ಸನ್ಯಾಸಿಗಳಲ್ಲಿ ಶ್ರೇಷ್ಠರು. ಇಂತಹ ಗುರುಗಳನ್ನು ಸಂಬೋಧಿಸಿ ಎಚ್ಚರಿಸಬೇಕಾಗಿಲ್ಲ. ಆದರೂ ಸ್ತುತಿಪಾಠಕರು ಸಂಪ್ರದಾಯದಂತೆ ಕಾವ್ಯದಲ್ಲಿ ಬರುವ ವರ್ಣನೆಯನ್ನು ಒಳಗೊಂಡ ಮಾತುಗಳಿಂದ ಸಂಬೋಧಿಸಿ ಹೇಳುತ್ತಾರೆ. (ಪ್ರಭಾತ ಕಾಲದಲ್ಲಿ ವಂದಿಮಾಗಧರು ಸ್ವಾಮಿಕಾರ್ಯದ ಸೂಚನೆ ಮಾಡಿದರು ಎಂಬುದಾಗಿ ಭಾವ.)

**ಅವತಾರಿಕೆ** : ಸ್ತುತಿಪಾಠಕರು ಮಾಡಿದ ಸ್ತೋತ್ರವನ್ನು ಕವಿಗಳು ವರ್ಣಿಸುತ್ತಾರೆ.

**ಮಂಗಲಾನಿ ಕುರು ಪದ್ಮಸೋದರೈಃ ಸಂಯಮೀಂದ್ರ ಜಗದಾದೃಗಂಚಲೈಃ ।**
**ಪಶ್ಯ ದೃಶ್ಯವಿಭವಂ ದಿನಾಗಮಂ ದಿಕ್ಷು ದಿಕ್ಷು ಮುಖರೀಕೃತಾಗಮಮ್ ॥೨॥**

**ತಾತ್ಪರ್ಯ** : ಎಲೈ ಮೌನಿಶ್ರೇಷ್ಠರಾದ ಶ್ರೀರಾಘವೇಂದ್ರ ಗುರುಸಾರ್ವಭೌಮರೇ! ಜಗತ್ತಿಗೆ ಕಲ್ಯಾಣವನ್ನುಂಟು ಮಾಡಿರಿ. ಕಮಲದಂತೆ ಸುಂದರವಾದ ಕಣ್ಣುಗಳ ನೋಟವನ್ನು ಬೀರಿ ವಿಶ್ವವನ್ನು ಅವಲೋಕಿಸಿರಿ. ಎಲ್ಲೆಡೆಯಲ್ಲೂ ಪ್ರಭಾತಕಾಲದ ಸಂಪತ್ತು ಮತ್ತು ಶೋಭೆಯು ಹರಡಿದೆ. ವೇದಘೋಷವು ಪ್ರತಿಧ್ವನಿಸುತ್ತಿದೆ. ಇಂತಹಾ ರಮಣೀಯವಾದ ಪ್ರಭಾತ ಕಾಲವನ್ನು ನೋಡಿರಿ ಎಂದು ವಂದಿಮಾಗಧರು ಗುರುವರ್ಯರನ್ನು ಸಂಬೋಧಿಸಿ ಎಚ್ಚರಗೊಳಿಸಿದರು.

**ಅವತಾರಿಕೆ** : ವಂದಿಮಾಗಧರು ಸ್ತುತಿಯ ನೆಪದಿಂದ ಉಷಃಕಾಲದ ವರ್ಣನೆ ಮಾಡಿದುದನ್ನು ಕವಿಗಳು ತಿಳಿಸುತ್ತಾರೆ.

**ಪಾಕಶಾಸನಪುರೇ ಗುರೂದಿತೈರ್ಹಂತ ವೇದವಚನೈರಪಾಕೃತೇ ।**
**ಅಂಧಕಾರದುರಪಹ್ನವಗೇಹೇ ಶಕ್ರದಿಙ್ಮುಖಮಿದಂ ಪ್ರಸೀದತಿ ॥೩॥**

**ತಾತ್ಪರ್ಯ** : ಪೂರ್ವ ದಿಕ್ಕು ಎಂಬ ಗರತಿಯಾದ ಹೆಂಗಸು (ಸೌಭಾಗ್ಯವತಿಯು) ಕತ್ತಲೆಯೆಂಬ ನೆಪವುಳ್ಳ ಮನೆಯಲ್ಲಿ ಸಿಕ್ಕಿಕೊಂಡಿದ್ದಳು. ಈಗ ಬೃಹಸ್ಪತ್ಯಾಚಾರ್ಯರು ವೇದಪಾರಾಯಣವನ್ನು ಮಾಡಿದಾಗ ಕತ್ತಲೆ ಮನೆಯ ಬಾಗಿಲು ತೆರೆಯಿತು. ಪೂರ್ವದಿಕ್ಕೆಂಬ ಸುಮಂಗಲಿಯು ಪ್ರಸನ್ನ ವದನಳಾದಳು.

ಪೂರ್ವದಿಗಂಗನೆಯು ರಾತ್ರಿ ಕತ್ತಲೆಯ ಮನೆಯಲ್ಲಿ ಬಿದ್ದು ತಾನು ವಾಸ ಮಾಡುವ ಪ್ರದೇಶವನ್ನೇ ತಿಳಿಯದೇ ಇದ್ದಳು. ಆದರೆ ಪೂರ್ವದಿಕ್ಕೆಂಬ ಸುಮಂಗಲೆಯ ಮುಖವು ಸ್ವರ್ಗಲೋಕದಲ್ಲಿರುವ ಬೃಹಸ್ಪತ್ಯಾಚಾರ್ಯರ ವೇದಪಾರಾಯಣದ ಧ್ವನಿಯನ್ನು ಕೇಳಿ "ನಾನು ದೇವೇಂದ್ರನ ನಗರದಲ್ಲಿ, ಸ್ವಸ್ಥಾನದಲ್ಲಿಯೇ ವಾಸ ಮಾಡುತ್ತಿದ್ದೇನೆ, ಎಂಬ ಆಲೋಚನೆಯಿಂದ ಪ್ರಸನ್ನವಾಗುತ್ತದೆ.

(ಅರ್ಧರಾತ್ರಿಯಲ್ಲಿ ವೇದೋಚ್ಚಾರಣವು ನಿಷಿದ್ಧವಾಗಿದೆ. ಆದ್ದರಿಂದ ಬೃಹಸ್ಪತ್ಯಾಚಾರ್ಯರು ವೇದೋಚ್ಚಾರಣಪಾರಾಯಣ ಪ್ರಾರಂಭಿಸಿದಾಗ ಪ್ರಭಾತಕಾಲವಾಗುತ್ತದೆ. ಮತ್ತು ಅವರ ವೇದೋಚ್ಚಾರಣದಿಂದ ದೇಶಜ್ಞಾನ ಉಂಟಾಗುತ್ತದೆ. ವೇದಪಾರಾಯಣ ಇಲ್ಲದಿದ್ದಾಗ ಅಂಧಕಾರದಲ್ಲಿ ದೇಶ ಜ್ಞಾನ ಉಂಟಾಗುವುದಿಲ್ಲ. ಈ ಕಾರಣದಿಂದ ಕತ್ತಲೆಯೆಂಬ ನೆಪದ ಮನೆಯಲ್ಲಿ ಪೂರ್ವದಿಗಂಗನೆಯ ಮುಖವು ಪ್ರಸನ್ನವಾಗುತ್ತದೆ ಎಂದು ಹೇಳಿದ್ದಾರೆ. ಉದಯಕಾಲವು ಸನ್ನಿಹಿತವಾಯಿತು ಎಂದು ಭಾವ.

**ಅವತಾರಿಕೆ :** ಈಗ ಕವಿಗಳು ಪ್ರಭಾತ ಕಾಲದಲ್ಲಿ ಪೂರ್ವ ದಿಕ್ಕಿನಲ್ಲಿ ಕಾಣಿಸುವ ಪ್ರಕಾಶವನ್ನು ವರ್ಣಿಸುತ್ತಾರೆ.

**ಶಾತಮನ್ಯವದಿಶಾ ನಿಜೇಶ್ವರೇ ಭಾನುಮಾಲಿನಿ ಸಮಾಗಮೋನ್ಮುಖೇ ।**
**ಪೂರ್ವಮೇವ ವಿತನೋತಿ ಪಾಂಡಿಮಕ್ಷೌಮನಿರ್ಮಲವಿತಾನಮಂಬರೇ ॥೪॥**

**ತಾತ್ಪರ್ಯ :** ಪೂರ್ವದಿಗಂಗನೆಯು ತನ್ನ ಪ್ರಿಯಕರನಾದ (ನಾಯಕನಾದ) ಸೂರ್ಯನು ತನ್ನನ್ನು ಸಮಾಗಮಿಸಲು (ಭೇಟಿಯಾಗಲು) ಬರುತ್ತಾನೆಂದು ತಿಳಿದಳು. ಅವನು ಬರುವುದಕ್ಕೆ ಮೊದಲೇ ಈ ನಾಯಿಕೆಯು ಶುಭ್ರವಾದ ಸೂರ್ಯಪ್ರಕಾಶವೆಂಬ ನಿರ್ಮಲವಾದ ಬಟ್ಟೆಯ ಮೇಲ್ಕಟ್ಟಿನ ಮಂಟಪವನ್ನು ರಚಿಸುತ್ತಿದ್ದಳು. ಪೂರ್ವದಿಕ್ಕಿನಲ್ಲಿ ಸೂರ್ಯನ ಪ್ರಕಾಶವು ಹರಡಿತು. ಅದು ಸೂರ್ಯನೆಂಬ ನಾಯಕನನ್ನು ಎದುರುಗೊಳ್ಳಲು ಪೂರ್ವದಿಗಂಗನೆಯೆಂಬ ನಾಯಿಕೆಯು ಬಟ್ಟೆಯ ಮಂಟಪವನ್ನು ಕಟ್ಟಿ ಸನ್ನದ್ಧಳಾಗಿದ್ದಂತೆ ತೋರುತ್ತಿತ್ತು ಎಂದು ಅಭಿಪ್ರಾಯ.

**ಅವತಾರಿಕೆ:** ಅರುಣೋದಯ ಕಾಲದಲ್ಲಿ ಪೂರ್ವದಿಕ್ಕಿನಲ್ಲಿ ಕೆಂಪು ಬಣ್ಣದಿಂದ ಕೂಡಿದ ನಕ್ಷತ್ರಗಳನ್ನು ಕವಿಗಳು ವರ್ಣಿಸುತ್ತಾರೆ.

**ಅಂಧಕಾರಭರವಾರಣವ್ರಜೇ ಕಲ್ಯಕೇಸರಿವಿದೀರ್ಣಮಸ್ತಕೇ ।**
**ಶೋಣಿತೌಘ ಇವ ಶಕ್ರದಿಙ್ಮುಖೇ ಶೋಣಿಮಾ ಲಸತಿ ತಾರಮೌಕ್ತಿಕೈಃ ॥೫॥**

**ತಾತ್ಪರ್ಯ :** ರಾತ್ರಿಯಲ್ಲಿ ಹರಡಿರುವ ಕತ್ತಲೆಯ ರಾಶಿಯು ಆನೆಗಳ ದೊಡ್ಡ ಹಿಂಡಿನಂತೆ ಇರುತ್ತದೆ. ಪ್ರಭಾತ ಕಾಲವೆಂಬ ಸಿಂಹವು ಕತ್ತಲೆಯ ರಾಶಿಯೆಂಬ ಆನೆಗಳ ಹಿಂಡಿನ ತಲೆಗಳನ್ನು ಸೀಳಿಬಿಡುತ್ತದೆ. (ಪ್ರಾತಃಕಾಲವು ಕತ್ತಲೆಯನ್ನು ನಾಶಮಾಡುತ್ತದೆ.) ಆಗ ಪೂರ್ವ ದಿಕ್ಕಿನ ಅಗ್ರಭಾಗದಲ್ಲಿ ಸೂರ್ಯೋದಯದ ಕೆಂಪು ಬಣ್ಣವು ಹರಡಿರುತ್ತದೆ. ಅದು ನಕ್ಷತ್ರಗಳೆಂಬ ಮುತ್ತುಗಳ ಜೊತೆಗೆ ಮೆತ್ತಿಕೊಂಡಿರುವ ಆನೆಗಳ ರಕ್ತದ ಒಂದೊಂದು ಗೆಡ್ಡೆಯಂತೆ (ಕರಣಿಯಂತೆ) ಕಾಣಿಸುತ್ತದೆ. ಪ್ರಭಾತ ಕಾಲದ ಕೆಂಪುಬಣ್ಣದಿಂದ ಒಡಗೂಡಿದ ನಕ್ಷತ್ರಗಳು ಅಂಧಕಾರ ಸಮೂಹವೆಂಬ ಆನೆಗಳ ಕುಂಭಸ್ಥಳವನ್ನು ಪ್ರಭಾತ ಕಾಲವೆಂಬ ಸಿಂಹವು ಸೀಳಿದಾಗ ಆನೆಗಳ ಕುಂಭಸ್ಥಳದಲ್ಲಿರುವ ರಕ್ತದ ಗಡ್ಡೆಗಳಲ್ಲಿ ಅಡಗಿರುವ ಮುತ್ತುಗಳಂತೆ ಕಾಣಿಸುತ್ತವೆ. ಅಂತಹಾ ನಕ್ಷತ್ರಗಳ ಸಮೂಹದಿಂದ ಕೂಡಿರುವ ಕೆಂಪು ಬಣ್ಣವು ಆನೆಗಳ ಕುಂಭಸ್ಥಳದ ಮುತ್ತುಗಳ ಸಮೂಹದಿಂದ ಕೂಡಿದ ರಕ್ತದ ಗಡ್ಡೆಗಳ ಸಮೂಹದಂತೆ ಕಾಣಿಸುತ್ತದೆ ಎಂಬುದಾಗಿ ಅಭಿಪ್ರಾಯ. (ಆನೆಗಳ ಕುಂಭಸ್ಥಳದಲ್ಲಿ ಮುತ್ತುಗಳಿವೆ ಎಂಬ ಪ್ರಸಿದ್ಧಿಯಿದೆ. ಆನೆಯ ತಲೆಯ ರಕ್ತವು ಮುತ್ತುಗಳಿಂದ ಕೂಡಿರುವುದರಿಂದ ಅಂತಹಾ ರಕ್ತದ ರಾಶಿಯೇ ಪ್ರಭಾತಕಾಲದಲ್ಲಿ ನಕ್ಷತ್ರ ಸಹಿತವಾದ ಕೆಂಪು ಬಣ್ಣದಂತೆ ಕಾಣಿಸುತ್ತದೆ ಎಂಬುದು ಪರಮಾಭಿಪ್ರಾಯ)

**ಅವತಾರಿಕೆ :** ಈಗ ಕವಿಗಳು ಅರುಣೋದಯವನ್ನು ವರ್ಣಿಸುತ್ತಾರೆ.

**ವ್ಯೋಮರಾಮಪರಿಭಾವಿಶಾರ್ವರವ್ಯಾಜಪನ್ನಗಮಯಾಸ್ತ್ರಸಂತತೇಃ ।**
**ಭಂಜನಾಯ ಪುರತೋಽರುಣಾನುಜಃ ಪ್ರಾದುರಸ್ತ್ಯುದಯರಾಗಕೈತವಾತ್ ॥೬॥**

**ತಾತ್ಪರ್ಯ :** (ಹಿಂದೆ ರಾಮಾವತಾರ ಕಾಲದಲ್ಲಿ ರಾಮ–ರಾವಣರ ಸೈನ್ಯಗಳ ನಡುವೆ ಭೀಕರ ಯುದ್ಧವು ನಡೆಯುತ್ತಿದ್ದ ಕಾಲದಲ್ಲಿ ಶ್ರೀರಾಮನನ್ನು ಬಂಧಿಸುವ ಸಲುವಾಗಿ ಇಂದ್ರಜಿತುವು ನಾಗಪಾಶಾಸ್ತ್ರವನ್ನು ಪ್ರಯೋಗ ಮಾಡಿದನು. ಆಗ ವಾನರ ಸೈನ್ಯವೂ ಶ್ರೀರಾಮನೂ ನಾಗಪಾಶಗಳಿಂದ ಬದ್ಧರಾದರು. ಆಗ ನಾಗಪಾಶವನ್ನು ಖಂಡಿಸಲು ಗರುಡನು ಪ್ರಾದುರ್ಭವಿಸಿದನು. ವೈನತೇಯನ ರೆಕ್ಕೆಯ ಗಾಳಿ ಸೋಕಿದ ತತ್ ಕ್ಷಣದಲ್ಲಿ ನಾಗಪಾಶಗಳೆಲ್ಲ ನಾಶವಾಯಿತು.) ಈ ಪ್ರಾಚೀನ ಕಥೆಯನ್ನು ಆಧಾರವಾಗಿಟ್ಟುಕೊಂಡು ಕವಿಗಳು ವರ್ಣಿಸುತ್ತಿದ್ದಾರೆ. ಆಕಾಶವೆಂಬ ರಾಮನಿಗೆ ತಿರಸ್ಕಾರವನ್ನು ಉಂಟುಮಾಡುವ ಕಗ್ಗತ್ತಲೆಯೆಂಬ ಸರ್ಪಮಯವಾದ ಅಸ್ತ್ರಗಳು ಪ್ರಾತಃ ಸಂಧ್ಯೆಯೆಂಬ ಗರುಡನ ಪ್ರದುರ್ಭಾವದಿಂದ ನಾಶವಾದವು. ಅರುಣೋದಯ ಕಾಲದಲ್ಲಿ ಸಂಧ್ಯಾರಾಗದ ಪ್ರಕಾಶದಿಂದ ಎಲ್ಲ ಕಗ್ಗತ್ತಲೆಗಳೂ ನಾಶ ಹೊಂದಿದವು ಎಂದು ಅಭಿಪ್ರಾಯ. (ಗರುಡನಲ್ಲಿ ಕೆಂಪುಬಣ್ಣವೂ ಇರುವುದರಿಂದ ಸಂಧ್ಯಾರಾಗವನ್ನು ಗರುಡ ಎಂದು ವರ್ಣಿಸುತ್ತಿದ್ದಾರೆ.

**ಅವತಾರಿಕೆ :** ಕವಿಗಳು ಅರುಣೋದಯದ ವರ್ಣನೆಯನ್ನು ಮುಂದುವರೆಸುತ್ತಾರೆ.

**ವ್ಯೋಮದಂಭಮಧುಗೋಲಸಂಚರದ್‌ಧ್ವಾಂತಸಂಘಸರಘಾನಿರಾಕೃತಿಮ್ ।**
**ಆತನೋತಿ ಸಮಯಃ ಪುರಾದಿಶಾಶೋಣಿಮಾಗ್ನಿಶಿಖಯಾ ವಿದೀಪ್ತಯಾ ॥೭॥**

**ತಾತ್ಪರ್ಯ :** ಜೇನುಗೂಡಿನಿಂದ ಜೇನನ್ನು ಸಂಗ್ರಹಿಸುವವರು. ಅಲ್ಲಿರುವ ಜೇನುನೊಣಗಳನ್ನು ಬೆಂಕಿಯ ಉರಿಯಿಂದ ಓಡಿಸುತ್ತಾರೆ. ಅನಂತರ ಜೇನನ್ನು ಸಂಗ್ರಹಿಸುತ್ತಾರೆ. ಪ್ರಕೃತದಲ್ಲಿ ಪ್ರಭಾತ ಕಾಲವೆಂಬ ಜೇನನ್ನು ಸಂಗ್ರಹಿಸುವ ವ್ಯಕ್ತಿಯು ಪೂರ್ವದಿಕ್ಕಿನಲ್ಲಿ ಹರಡಿರುವ ಉದಯರಾಗವೆಂಬ ಜ್ವಲಿಸುತ್ತಿರುವ ಅಗ್ನಿಯ ಶಿಖೆಯಿಂದ (ಕೊಳ್ಳಿಯಿಂದ) ಆಕಾಶವೆಂಬ ನೆಪವುಳ್ಳ ಜೇನುಗೂಡಿನಲ್ಲಿರುವ ಅಂಧಕಾರ ಸಮೂಹವೆಂಬ ಜೇನುನೊಣವನ್ನು ಓಡಿಸುತ್ತಿದ್ದಾನೆ. ಇಲ್ಲಿ ಪ್ರಾತಃಕಾಲದಲ್ಲಿ ಅರುಣೋದಯದ ಕೆಂಪು ಬಣ್ಣ ಬಂದ ಕೂಡಲೇ ಜೇನು ಹೊಟ್ಟಿನಂತೆ ಕಪ್ಪಾಗಿರುವ ಆಕಾಶದಲ್ಲಿ ದಟ್ಟವಾಗಿ ಹಬ್ಬಿರುವ ಜೇನು ನೊಣಗಳ ರಾಶಿಯಂತಿರುವ ಕತ್ತಲೆಯು ನಾಶವಾಗುವುದನ್ನು ಕಂಡ ಕವಿಗಳು ಈ ರೀತಿ ವರ್ಣಿಸಿದ್ದಾರೆ.

**ಅವತಾರಿಕೆ :** ಉಷಃಕಾಲದ ಕೆಂಪು ಬಣ್ಣವನ್ನು ಮತ್ತೆ ಬೇರೊಂದು ರೀತಿಯಿಂದ ವರ್ಣಿಸುತ್ತಾರೆ.

**ವ್ಯೋಮನಾಮಭೃತಿ ಕುಂಭಸಂಭವೇ ವಾರಿಧಿಂ ಪಿಬತಿ ಶಾರ್ವರಾಭಿಧಮ್ ।**
**ಔಷಸಾರುಣಿಮದಂಭತಃ ಶನೈಃ ಪದ್ಮರಾಗನಿಕರೋ ವ್ಯಜೃಂಭತ ॥೮॥**

**ತಾತ್ಪರ್ಯ :** ಸಮುದ್ರಕ್ಕೆ ರತ್ನಾಕರ ಎಂಬ ಹೆಸರುಂಟು. ಹಿಂದೆ ಅಗಸ್ತ್ಯರು ರತ್ನಾಕರ ಸಮುದ್ರವನ್ನು ಕುಡಿದಿದ್ದರು. ಆಗ ಅದರೊಳಗೆ ಇದ್ದ ಪದ್ಮರಾಗ ರತ್ನಗಳೆಲ್ಲಾ ಹೊರಗೆ ಪ್ರಕಾಶಿಸಿದ್ದುವು. ಈಗ ಆಕಾಶವೆಂಬ ಅಗಸ್ತ್ಯರು ಕಗ್ಗತ್ತಲೆಯೆಂಬ ಸಮುದ್ರವನ್ನು ಕುಡಿದಾಗ, ಉಷಃಕಾಲದ ಅರುಣವರ್ಣದ ನೆಪದಿಂದ ಕತ್ತಲೆಯೆಂಬ ಸಮುದ್ರದ ತಳದಲ್ಲಿದ್ದ ಪದ್ಮರಾಗಮಣಿಗಳು ಹೊಳೆಯುವಂತೆ ಆಕಾಶದಲ್ಲಿ ಉದಯಕಾಲದ ಅರುಣ ವರ್ಣವು ವಿಜೃಂಭಿಸಿತು. ಬಹಳ ಸುಂದರವಾಗಿ ಪ್ರಕಾಶಿಸಿತು ಎಂಬುದಾಗಿ ಅಭಿಪ್ರಾಯ.

**ಅವತಾರಿಕೆ :** ಉದಯಕಾಲದ ಅರುಣವರ್ಣವು ನೀಲಿಸೀರೆಯ ಭಂಗಾರದ ಬಣ್ಣದ ಅಂಚಿನಂತೆ ಇದೆಯೆಂದು ಕವಿಗಳು ವರ್ಣಿಸುತ್ತಾರೆ.

**ಅಂಬರಸ್ಯ ತಿಮಿರಾಲಿನೀಲಿಕಾನೀಲಿತಸ್ಯ ಹರಿದಿಙ್ಮುಖಾಂಚಲೇ ।**
**ಕಲ್ಯರಕ್ತಿಮನಿಭೇನ ಕಾಂಚನೀ ರೇಖಿಕಾಽತಿರುಚಿರಾ ವಿರಾಜತೇ ॥೯॥**

**ತಾತ್ಪರ್ಯ :** ಆಕಾಶವು ನೀಲಿಯಾಗಿರುತ್ತದೆ. ಅದು ದಟ್ಟ ಕತ್ತಲೆಯಿಂದಾಗಿ ಮತ್ತಷ್ಟು ಕಪ್ಪಾಗಿರುತ್ತದೆ. ಅಂಬರವೆಂಬ (ಆಕಾಶವೆಂಬ) ಅಂಬರ (ವಸ್ತ್ರ)ಕ್ಕೆ ನೀಲಿ ಹಾಕಿ ಮತ್ತಷ್ಟು ಕಪ್ಪು ಮಾಡಿದಾಗ, ಅದರ ಪೂರ್ವ ದಿಕ್ಕಿನ ಅಗ್ರಭಾಗವೆಂಬ ಅಂಚಿನಲ್ಲಿ ಅರುಣೋದಯದ ಹೊಂಬಣ್ಣವು ಅತ್ಯಂತ ಮನೋಹರವಾದ ಬಂಗಾರದ ರೇಖೆಯಂತೆ ಶೋಭಿಸಿತು. ಕಪ್ಪಾದ ಸೀರೆಗೆ ನೀಲಿ ಹಾಕಿ ಮತ್ತಷ್ಟು ಕಪ್ಪಾಗಿ ಮಾಡಿ ಅದಕ್ಕೆ ಬಂಗಾರದ ಅಂಚನ್ನು ಜೋಡಿಸಿದರೆ ಅದು ಯಾವ ರೀತಿ ಸುಂದರವಾಗಿ ಶೋಭಿಸುತ್ತದೆಯೋ ಅದರಂತೆ ಮೊದಲೇ ಕಪ್ಪಾದ ಆಕಾಶವು ಕತ್ತಲೆಯಿಂದ ಮತ್ತಷ್ಟು ಕಪ್ಪಾಗಿರುತ್ತದೆ. ಆಗ ಪೂರ್ವ ದಿಕ್ಕಿನಲ್ಲಿ ಅರುಣೋದಯವಾದಾಗ ಹೊಂಬಣ್ಣದ ಆಕಾಶದ ಪೂರ್ವಭಾಗವು ಕಪ್ಪಾದ ಸೀರೆಯ ಹೊಂಬಣ್ಣದ ಅಂಚಿನಂತೆ ಇರುತ್ತದೆ. ಅದರಿಂದ ಆಕಾಶವೆಂಬ ಸೀರೆಯು ಶೋಭಿಸುತ್ತದೆ ಎಂದು ತಾತ್ಪರ್ಯ. (ಇಲ್ಲಿ ಅಂಬರ ಏವ (ಆಕಾಶವೇ) ಅಂಬರಃ ಎಂದು ಅಭೇದ ರೂಪಾಲಂಕಾರವಿದೆ.)

**ಅವತಾರಿಕೆ :** ಈಗ ಕವಿಗಳು ಉದಯಿಸುತ್ತಿರುವ ಸೂರ್ಯನನ್ನು ವರ್ಣಿಸುತ್ತಾರೆ.

**ಕಲ್ಯಮಲ್ಲವರ ಏಷ ಶಾರ್ವರದ್ವೇಷಿಮಲ್ಲಮಭಿಹಂತಮುದ್ಯತಃ ।**
**ಕ್ಷಿಪ್ತರಕ್ತಿಮರಜಾ ವಿದರ್ಶಯತ್ಯರ್ಕಬಿಂಬನಿಭಮುಷ್ಟಿಮಗ್ರತಃ ॥೧೦॥**

**ತಾತ್ಪರ್ಯ :** ಒಬ್ಬ ಜಟ್ಟಿಯು ಮತ್ತೊಬ್ಬ ಜಟ್ಟಿಯನ್ನು ಸೋಲಿಸಬೇಕೆಂದು (ಅಥವಾ ಕೊಲ್ಲಬೇಕೆಂದು) ಬಯಸಿ ಮೊದಲು ನೆಲದ ಮೇಲಿರುವ ಧೂಳನ್ನು ಒಬ್ಬನ ಮೇಲೆ ಮತ್ತೊಬ್ಬನು ಎರಚುತ್ತಾನೆ. ಅನಂತರ ವಜ್ರಮುಷ್ಟಿ ಎಂಬ ಮಲ್ಲರ ಆಯುಧವನ್ನು ಹಿಡಿದು (ವಜ್ರದಂತೆ ಕಠಿಣವಾದ ಬಿಗಿ ಮುಷ್ಟಿಯನ್ನು ಬಿಗಿ ಹಿಡಿದು) ಕೊಂಡು ಇನ್ನೊಬ್ಬ ಜಟ್ಟಿಗೆ ತೋರಿಸುತ್ತಾನೆ. ಪ್ರಕೃತದಲ್ಲಿ ಪ್ರಭಾತ (ಪ್ರಾತಃಕಾಲವೆಂಬ) ಮಲ್ಲನು ಪ್ರಾತಃಸ್ಸಂಧ್ಯಾ ಕಾಲದ ಕೆಂಪು ಬಣ್ಣವೆಂಬ ಧೂಳನ್ನು ಮತ್ತೊಬ್ಬನ ಮೇಲೆ ಎರಚಿದನು. (ಬೆಳಗಿನ ಕೆಂಪು ಮಲ್ಲನು ಎಸೆದ ಧೂಳಿನಂತೆ

ಕಾಣುತ್ತದೆ.) ಅನಂತರ ಆ ಮಲ್ಲನು ಇನ್ನೊಬ್ಬ ಮಲ್ಲನನ್ನು ಕೊಲ್ಲುವುದಕ್ಕಾಗಿ (ಅಥವಾ ಬಲವಾಗಿ ಹೊಡೆಯುವುದಕ್ಕಾಗಿ) ತನ್ನ ಸೂರ್ಯ ಬಿಂಬದಂತೆ ಕೆಂಪಾಗಿಯೂ, ಕಠಿಣವಾಗಿಯೂ ಇರುವ ಮುಷ್ಟಿಯನ್ನು (ವಜ್ರಮುಷ್ಟಿ ಎಂಬ ಆಯುಧವನ್ನು) ಪ್ರತಿಮಲ್ಲನಿಗೆ ತೋರಿಸುತ್ತಾನೆ. ಉದಯ ಕಾಲದ ಸನ್ನಿವೇಶವು ಮಲ್ಲನ ಈ ಆಟದಂತೆ ಇದೆ ಎಂದು ಅಭಿಪ್ರಾಯ.

**ಅವತಾರಿಕೆ :** ಪ್ರಭಾತಕಾಲವೆಂಬ ವರನು ಪೂರ್ವದಿಕ್ಕು ಎಂಬ ವಧುವಿಗೆ ಮಾಂಗಲ್ಯವನ್ನು ಕಟ್ಟುತ್ತಿದ್ದಾನೆ ಎಂಬುದಾಗಿ ಕವಿಗಳು ವರ್ಣಿಸುತ್ತಾರೆ.

**ಉದ್ವಿವಕ್ಷುಹೃದಯೋ ನಿಶಾತ್ಯಯಃ ಪ್ರಾಗ್ದಿಶಂ ತದುಪಕಂಠಮಾದಧೇ ।**
**ಕಲ್ಯರಾಗಮಯಮಾದಿಭೂಷಣಂ ಭಾನುಬಿಂಬಮಣಿರಾಜಿತಾಂತರಮ್ ॥೧೧॥**

**ತಾತ್ಪರ್ಯ :** ಒಬ್ಬ ವರನು ಒಬ್ಬಳು ವಧುವನ್ನು ಮದುವೆಯಾಗಲು ಬಯಸಿ, ಬಂಗಾರದ ತಾಳಿ, ಇತರ ರತ್ನಗಳು ಮುಂತಾದ ಶ್ರೇಷ್ಠ ವಸ್ತುಗಳಿಂದ ಕರಿಮಣಿಯ ಮಾಂಗಲ್ಯದ ಸರವನ್ನು ಅಲಂಕರಿಸಿ, ಹೊಸದಾದುದರಿಂದ ಹೊಳೆಯುತ್ತಿರುವ, ವಧುವಿಗೆ ಪ್ರಥಮಾಲಂಕಾರವಾಗಿರುವ ಆ ಕರಿಮಣಿಯ ಸರವನ್ನು ವಧುವಿನ ಕುತ್ತಿಗೆಗೆ ಕಟ್ಟುತ್ತಾನೆ. ಅದರಂತೆ ಇಲ್ಲಿ ಪ್ರಾತಃಕಾಲವೆಂಬ ವರನು ಪೂರ್ವದಿಕ್ಕೆಂಬ ವಧುವನ್ನು ಉದ್ವಾಹವಾಗಲು (ಮದುವೆಯಾಗಲು) ಎಲ್ಲರಿಗೂ ಕಾಣುವಂತೆ ಎತ್ತಿ ಹಿಡಿಯಲು ಬಯಸಿ ಸೂರ್ಯಬಿಂಬ ಎಂಬ ರತ್ನದಿಂದ (ಬಂಗಾರದ ತಾಳಿ, ಗುಂಡು, ಇತರ ರತ್ನಗಳೆಂಬ ಶ್ರೇಷ್ಠ ವಸ್ತುಗಳಿಂದ) ಮಾಂಗಲ್ಯವನ್ನು ಅಲಂಕರಿಸಿ ಪ್ರಕಾಶಿಸುತ್ತಿರುವ, ವಧುವಿಗೆ ಮೊದಲನೆಯ ಮಂಗಳಾಲಂಕಾರವಾದ ಕರಿಮಣಿ ಸರವೆಂಬ ಮಾಂಗಲ್ಯವನ್ನು ವಧುವಿನ ಕಂಠದಲ್ಲಿ ಕಟ್ಟುತ್ತಾನೆ. ಕೆಂಪಾದ ಪ್ರಭಾತ ಕಾಲದಲ್ಲಿ ಸೂರ್ಯನು ಉದಯಿಸುತ್ತಿರುವಾಗ ವರನು ವಧುವಿಗೆ ಮಾಂಗಲ್ಯ ಬಂಧನ ಮಾಡುವಂತೆ ಕಾಣಿಸುತ್ತಿದೆ ಎಂಬುದಾಗಿ ಅಭಿಪ್ರಾಯ. ಇಲ್ಲಿ ಪ್ರಭಾತವೇ ವರನು! ಪೂರ್ವದಿಕ್ಕೇ ವಧುವು!! ಪ್ರಭಾತವು ತನ್ನ ಬೆಳಕಿನಿಂದ ಪೂರ್ವ ದಿಕ್ಕನ್ನು ಎಲ್ಲರಿಗೂ ಕಾಣುವಂತೆ ಮಾಡುವುದೇ ಮದುವೆಯಾಗುವ ಬಯಕೆ. ಪೂರ್ವ ದಿಕ್ಕಿನಲ್ಲಿ ಸೂರ್ಯಬಿಂಬ ಸಹಿತವಾದ ಚಿನ್ನದ ಕೆಂಪು ಬಣ್ಣವೇ ಮಾಂಗಲ್ಯ. ಇಲ್ಲಿ ಎರಡನೇ ಅರ್ಥವು ಸಮಾಸೋಕ್ತಿ ಎಂಬ ಅಲಂಕಾರದಿಂದ ತೋರುತ್ತಿದೆ.

**ಸಮಾಸೋಕ್ತಿ ಪರಿಸ್ಫೂರ್ತಿ ಪ್ರಸ್ತುತೇಽಪ್ರಸ್ತುತಸ್ಯ ಚೇತ್ ।**
**ಅಯಮೈಂದ್ರಿಯಮುಖಂ ಪಶ್ಯ ರಕ್ತಶ್ಚುಂಬತಿ ಚಂದ್ರಮಾ ॥**

ಪ್ರಸ್ತುತ ವೃತ್ತಾಂತವನ್ನು ವರ್ಣಿಸುವಾಗ ವಿಶೇಷಣ ಸಾಮ್ಯದಿಂದ ಅಪ್ರಸ್ತುತ ವೃತ್ತಾಂತವು ತೋರಿದರೆ ಸಮಾಸೋಕ್ತಿ ಅಲಂಕಾರವು. "ನೋಡು, (ಅನು)ರಕ್ತನಾದ (ಕೆಂಪಾದ) ಚಂದ್ರನು ಐಂದ್ರಿಯ (ಇಂದ್ರನಿಗೆ ಸಂಬಂಧಿಸಿದ ಪೂರ್ವದಿಕ್ಕಿನ) ಮುಖವನ್ನು (ಅಗ್ರಭಾಗವನ್ನು) ಚುಂಬಿಸುತ್ತಾನೆ. ಇಲ್ಲಿ ಐಂದ್ರೀ ಎಂಬ ಶಬ್ದದಿಂದ ಪರಪುರುಷನ ಪತ್ನೀ ಎಂದೂ, ರಕ್ತ ಎಂಬ

ವಿಶೇಷಣದಿಂದ ಅನುರಾಗ ಉಳ್ಳವನೆಂದೂ, ಚಂದ್ರಃ ಎಂಬ ಪುಲ್ಲಿಂಗದಿಂದ ಪರಪುರುಷನೆಂದೂ ಮುಖ ಎಂದರೆ ಅಗ್ರಭಾಗ ಎಂಬಂತೆ ಮುಖ (ತುಟೀ ಮುಂತಾದ ಭಾಗ) ಎಂದೂ, ಚುಂಬನ ಎಂಬುದರಿಂದ ಸಂಬಂಧಿಸುತ್ತಾನೆ ಎಂಬ ಅರ್ಥದಿಂದ ಮುದ್ದಿಸುತ್ತಾನೆ ಎಂಬ ಅರ್ಥವೂ ಸ್ಫುರಿಸುತ್ತದೆ. ಅದರಂತೆ ಪ್ರಸ್ತುತ ಶ್ಲೋಕದಲ್ಲಿಯೂ ಇದೆ.

**ಅವತಾರಿಕೆ :** ಪ್ರಾತಃಕಾಲದಲ್ಲಿ ಸೂರ್ಯನು ಕೆಂಪಾಗಿರುವುದಕ್ಕೆ ಕಾರಣವನ್ನು ಉತ್ಪ್ರೇಕ್ಷಿಸುತ್ತಾ ಪುನಃ ಕವಿಗಳು ಪ್ರಾತಃಕಾಲವನ್ನು ವರ್ಣಿಸುತ್ತಾರೆ.

**ಹಂತ! ಶಕ್ರಹರಿತಾ ದಿನಾಗಮೇ ಯಾವಕಾರಣಪದಾಭಿತಾಡನಾತ್ ।**
**ಛಾಯಯಾ ಸಹ ಸಮಾಗಮಾಸಹಾತ್ ಪಾಟಲೋಽಜನಿ ಪಯೋಜಿನೀಶಿತಾ ॥೧೨॥**

**ತಾತ್ಪರ್ಯ :** ಸವತಿಯು ಜೊತೆಯಲ್ಲಿ ಸಮಾಗಮ ಮಾಡಿಕೊಂಡು ಬಂದ ನಾಯಕನನ್ನು ಸಿಟ್ಟಾದ ನಾಯಕೆಯು ತನ್ನ ಅರಗಿನ ರಸದಿಂದ ಕೆಂಪಾದ ಕಾಲಿನಿಂದ ಹೇಗೆ ಪ್ರಹರಿಸುತ್ತಾಳೋ ಅದರಂತೆ ಬೆಳಗಾದ ಮೇಲೂ ಛಾಯಾ ದೇವಿಯೊಡನೆ (ನೆರಳಿನೊಡನೆ) ಸಮಾಗಮ ಮಾಡಿಕೊಂಡೇ ಬರುತ್ತಿರುವ ತನ್ನ ನಾಯಕನಂತಿರುವ ಸೂರ್ಯನನ್ನು ಪೂರ್ವದಿಕ್ಕು ಎಂಬ ನಾಯಿಕೆಯು ಅರಗಿನ ರಸ ಹಚ್ಚಿಕೊಂಡಿರುವುದರಿಂದ ಕೆಂಪಾಗಿದೆಯೋ ಎಂಬಂತಿರುವ ಪ್ರಾತಃಕಾಲದ ಕೆಂಪು ಬಣ್ಣದಿಂದ ಕೂಡಿದ ತನ್ನ ಕಾಲಿನಿಂದ (ರಕ್ತ ಕಿರಣಗಳಿಂದ) ಒದ್ದುದರಿಂದಲೋ ಎಂಬಂತೆ ಸೂರ್ಯನು ಪ್ರಾತಃಕಾಲದಲ್ಲಿ ಕೆಂಪಾಗಿ ಕಾಣಿಸುತ್ತಿದ್ದನು. ಪೂರ್ವದಿಗಂಗನೆಯು ತನ್ನ ಅರಗಿನ ರಸ ಹೊಚ್ಚಿಕೊಂಡಿರುವುದರಿಂದ ಕೆಂಪಾದ ಕಾಲಿನಿಂದ ಒದ್ದುದರಿಂದಲೋ ಎಂಬಂತೆ ಸೂರ್ಯನು ಕೆಂಪಾಗಿದ್ದಾನೆ ಎಂದು ಸೂರ್ಯನು ಕೆಂಪಾಗಿರುವುದಕ್ಕೆ ಕಾರಣವನ್ನು ಉತ್ಪ್ರೇಕ್ಷಿಸಿದ್ದಾರೆ. ಹಂತ ಎಂಬ ಪದದಿಂದ ನಾಯಕ ನಾಯಕೆಯರ ಈ ಕಲಹವು ರಸಿಕರಿಗೆ ಸಂತೋಷವನ್ನು ಉಂಟುಮಾಡುತ್ತಿದೆ ಎಂಬುದನ್ನು ಸೂಚಿಸಿದ್ದಾರೆ.

**ಅವತಾರಿಕೆ :** ಈಗ ವಂದಿಮಾಧಿಗರು ಸೂರ್ಯೋದಯವನ್ನು ವರ್ಣಿಸಿದುದನ್ನು ಕವಿಗಳು ತಿಳಿಸುತ್ತಾರೆ.

**ಪ್ರಾತರಂಬುನಿ ನಿಮಜ್ಯ ನೀರಧೇರುತ್ಥಿತೋ ಹರಿದಿಶಾನಿಜಾಲಿಕೇ ।**
**ಅರ್ಕಮಂಡಲಮಿಷೇಣ ವಾಸರಃ ಶೋಣಿಮಾಕ್ಷತಲಲಾಮಕಂ ದಧೇ ॥೧೩॥**

**ತಾತ್ಪರ್ಯ :** ಬ್ರಾಹ್ಮಣರು ಬೆಳಿಗ್ಗೆ ಎದ್ದು ಸ್ನಾನ ಮಾಡಿ ನಿತ್ಯಾಹ್ನೀಕ, ಪೂಜಾದಿಗಳನ್ನು ಮಾಡಿ ಹಣೆಯಲ್ಲಿ ಕೆಂಪಾದ ಅಕ್ಷತೆಯನ್ನು ಇಟ್ಟು (ಹಚ್ಚಿ) ಕೊಳ್ಳುತ್ತಾರೆ. ಅದರಂತೆ ದಿವಸವು (ದಿನವು) ಬೆಳಿಗ್ಗೆ ಎದ್ದು ಸಮುದ್ರದ ನೀರಿನಲ್ಲಿ ಅವಗಾಹನ ಸ್ನಾನ ಮಾಡಿ ಪೂರ್ವ ದಿಕ್ಕೆಂಬ ತನ್ನ ಹಣೆಯಲ್ಲಿ ಕೆಂಪು ಬಣ್ಣದ ಅಕ್ಷತೆಯ ಚಿನ್ಹೆಯನ್ನು ಧರಿಸಿತು. (ಸೂರ್ಯೋದಯವಾಯಿತು ಎಂಬುದಾಗಿ ಭಾವ) ಹಗಲು (ಪ್ರಾತಃಕಾಲದಲ್ಲಿ) ಪೂರ್ವದಿಕ್ಕಿನಲ್ಲಿ ಕೆಂಪಾದ ಸೂರ್ಯನು

ಕಾಣುತ್ತದೆ.) ಅನಂತರ ಆ ಮಲ್ಲನು ಇನ್ನೊಬ್ಬ ಮಲ್ಲನನ್ನು ಕೊಲ್ಲುವುದಕ್ಕಾಗಿ (ಅಥವಾ ಬಲವಾಗಿ ಹೊಡೆಯುವುದಕ್ಕಾಗಿ) ತನ್ನ ಸೂರ್ಯ ಬಿಂಬದಂತೆ ಕೆಂಪಾಗಿಯೂ, ಕಠಿಣವಾಗಿಯೂ ಇರುವ ಮುಷ್ಟಿಯನ್ನು (ವಜ್ರಮುಷ್ಟಿ ಎಂಬ ಆಯುಧವನ್ನು) ಪ್ರತಿಮಲ್ಲನಿಗೆ ತೋರಿಸುತ್ತಾನೆ. ಉದಯ ಕಾಲದ ಸನ್ನಿವೇಶವು ಮಲ್ಲನ ಈ ಆಟದಂತೆ ಇದೆ ಎಂದು ಅಭಿಪ್ರಾಯ.

**ಅವತಾರಿಕೆ :** ಪ್ರಭಾತಕಾಲವೆಂಬ ವರನು ಪೂರ್ವದಿಕ್ಕು ಎಂಬ ವಧುವಿಗೆ ಮಾಂಗಲ್ಯವನ್ನು ಕಟ್ಟುತ್ತಿದ್ದಾನೆ ಎಂಬುದಾಗಿ ಕವಿಗಳು ವರ್ಣಿಸುತ್ತಾರೆ.

**ಉದ್ವಿವಕ್ಷುಹೃದಯೋ ನಿಶಾತ್ಯಯಃ ಪ್ರಾಗ್ದಿಶಂ ತದುಪಕಂಠಮಾದಧೇ ।**
**ಕಲ್ಯರಾಗಮಯಮಾದಿಭೂಷಣಂ ಭಾನುಬಿಂಬಮಣಿರಾಜಿತಾಂತರಮ್ ॥೧೧॥**

**ತಾತ್ಪರ್ಯ :** ಒಬ್ಬ ವರನು ಒಬ್ಬಳು ವಧುವನ್ನು ಮದುವೆಯಾಗಲು ಬಯಸಿ, ಬಂಗಾರದ ತಾಳಿ, ಇತರ ರತ್ನಗಳು ಮುಂತಾದ ಶ್ರೇಷ್ಠ ವಸ್ತುಗಳಿಂದ ಕರಿಮಣಿಯ ಮಾಂಗಲ್ಯದ ಸರವನ್ನು ಅಲಂಕರಿಸಿ, ಹೊಸದಾದುದರಿಂದ ಹೊಳೆಯುತ್ತಿರುವ, ವಧುವಿಗೆ ಪ್ರಥಮಾಲಂಕಾರವಾಗಿರುವ ಆ ಕರಿಮಣಿಯ ಸರವನ್ನು ವಧುವಿನ ಕುತ್ತಿಗೆಗೆ ಕಟ್ಟುತ್ತಾನೆ. ಅದರಂತೆ ಇಲ್ಲಿ ಪ್ರಾತಃಕಾಲವೆಂಬ ವರನು ಪೂರ್ವದಿಕ್ಕೆಂಬ ವಧುವನ್ನು ಉದ್ವಾಹವಾಗಲು (ಮದುವೆಯಾಗಲು) ಎಲ್ಲರಿಗೂ ಕಾಣುವಂತೆ ಎತ್ತಿ ಹಿಡಿಯಲು ಬಯಸಿ ಸೂರ್ಯಬಿಂಬ ಎಂಬ ರತ್ನದಿಂದ (ಬಂಗಾರದ ತಾಳಿ, ಗುಂಡು, ಇತರ ರತ್ನಗಳೆಂಬ ಶ್ರೇಷ್ಠ ವಸ್ತುಗಳಿಂದ) ಮಾಂಗಲ್ಯವನ್ನು ಅಲಂಕರಿಸಿ ಪ್ರಕಾಶಿಸುತ್ತಿರುವ, ವಧುವಿಗೆ ಮೊದಲನೆಯ ಮಂಗಳಾಲಂಕಾರವಾದ ಕರಿಮಣಿ ಸರವೆಂಬ ಮಾಂಗಲ್ಯವನ್ನು ವಧುವಿನ ಕಂಠದಲ್ಲಿ ಕಟ್ಟುತ್ತಾನೆ. ಕೆಂಪಾದ ಪ್ರಭಾತ ಕಾಲದಲ್ಲಿ ಸೂರ್ಯನು ಉದಯಿಸುತ್ತಿರುವಾಗ ವರನು ವಧುವಿಗೆ ಮಾಂಗಲ್ಯ ಬಂಧನ ಮಾಡುವಂತೆ ಕಾಣಿಸುತ್ತಿದೆ ಎಂಬುದಾಗಿ ಅಭಿಪ್ರಾಯ. ಇಲ್ಲಿ ಪ್ರಭಾತವೇ ವರನು! ಪೂರ್ವದಿಕ್ಕೇ ವಧುವು!! ಪ್ರಭಾತವು ತನ್ನ ಬೆಳಕಿನಿಂದ ಪೂರ್ವ ದಿಕ್ಕನ್ನು ಎಲ್ಲರಿಗೂ ಕಾಣುವಂತೆ ಮಾಡುವುದೇ ಮದುವೆಯಾಗುವ ಬಯಕೆ. ಪೂರ್ವ ದಿಕ್ಕಿನಲ್ಲಿ ಸೂರ್ಯಬಿಂಬ ಸಹಿತವಾದ ಚಿನ್ನದ ಕೆಂಪು ಬಣ್ಣವೇ ಮಾಂಗಲ್ಯ. ಇಲ್ಲಿ ಎರಡನೇ ಅರ್ಥವು ಸಮಾಸೋಕ್ತಿ ಎಂಬ ಅಲಂಕಾರದಿಂದ ತೋರುತ್ತಿದೆ.

**ಸಮಾಸೋಕ್ತಿ ಪರಿಸ್ಫೂರ್ತಿ ಪ್ರಸ್ತುತೇಽಪ್ರಸ್ತುತಸ್ಯ ಚೇತ್ ।**
**ಅಯಮೈಂದ್ರಿಯಮುಖಂ ಪಶ್ಯ ರಕ್ತಶ್ಚುಂಬತಿ ಚಂದ್ರಮಾ ॥**

ಪ್ರಸ್ತುತ ವೃತ್ತಾಂತವನ್ನು ವರ್ಣಿಸುವಾಗ ವಿಶೇಷಣ ಸಾಮ್ಯದಿಂದ ಅಪ್ರಸ್ತುತ ವೃತ್ತಾಂತವು ತೋರಿದರೆ ಸಮಾಸೋಕ್ತಿ ಅಲಂಕಾರವು. "ನೋಡು, (ಅನು)ರಕ್ತನಾದ (ಕೆಂಪಾದ) ಚಂದ್ರನು ಐಂದ್ರಿಯ (ಇಂದ್ರನಿಗೆ ಸಂಬಂಧಿಸಿದ ಪೂರ್ವದಿಕ್ಕಿನ) ಮುಖವನ್ನು (ಅಗ್ರಭಾಗವನ್ನು) ಚುಂಬಿಸುತ್ತಾನೆ. ಇಲ್ಲಿ ಐಂದ್ರೀ ಎಂಬ ಶಬ್ದದಿಂದ ಪರಪುರುಷನ ಪತ್ನೀ ಎಂದೂ, ರಕ್ತ ಎಂಬ

ವಿಶೇಷಣದಿಂದ ಅನುರಾಗ ಉಳ್ಳವನೆಂದೂ, ಚಂದ್ರಃ ಎಂಬ ಪುಲ್ಲಿಂಗದಿಂದ ಪರಪುರುಷನೆಂದೂ ಮುಖ ಎಂದರೆ ಅಗ್ರಭಾಗ ಎಂಬಂತೆ ಮುಖ (ತುಟೀ ಮುಂತಾದ ಭಾಗ) ಎಂದೂ, ಚುಂಬನ ಎಂಬುದರಿಂದ ಸಂಬಂಧಿಸುತ್ತಾನೆ ಎಂಬ ಅರ್ಥದಿಂದ ಮುದ್ದಿಸುತ್ತಾನೆ ಎಂಬ ಅರ್ಥವೂ ಸ್ಫುರಿಸುತ್ತದೆ. ಅದರಂತೆ ಪ್ರಸ್ತುತ ಶ್ಲೋಕದಲ್ಲಿಯೂ ಇದೆ.

**ಅವತಾರಿಕೆ :** ಪ್ರಾತಃಕಾಲದಲ್ಲಿ ಸೂರ್ಯನು ಕೆಂಪಾಗಿರುವುದಕ್ಕೆ ಕಾರಣವನ್ನು ಉತ್ಪ್ರೇಕ್ಷಿಸುತ್ತಾ ಪುನಃ ಕವಿಗಳು ಪ್ರಾತಃಕಾಲವನ್ನು ವರ್ಣಿಸುತ್ತಾರೆ.

**ಹಂತ! ಶಕ್ರಹರಿತಾ ದಿನಾಗಮೇ ಯಾವಕಾರಣಪದಾಭಿತಾಡನಾತ್ ।**
**ಛಾಯಯಾ ಸಹ ಸಮಾಗಮಾಸಹಾತ್ ಪಾಟಲೋಽಜನಿ ಪಯೋಜಿನೀಶಿತಾ ॥೧೨॥**

**ತಾತ್ಪರ್ಯ :** ಸವತಿಯು ಜೊತೆಯಲ್ಲಿ ಸಮಾಗಮ ಮಾಡಿಕೊಂಡು ಬಂದ ನಾಯಕನನ್ನು ಸಿಟ್ಟಾದ ನಾಯಕೆಯು ತನ್ನ ಅರಗಿನ ರಸದಿಂದ ಕೆಂಪಾದ ಕಾಲಿನಿಂದ ಹೇಗೆ ಪ್ರಹರಿಸುತ್ತಾಳೋ ಅದರಂತೆ ಬೆಳಗಾದ ಮೇಲೂ ಛಾಯಾ ದೇವಿಯೊಡನೆ (ನೆರಳಿನೊಡನೆ) ಸಮಾಗಮ ಮಾಡಿಕೊಂಡೇ ಬರುತ್ತಿರುವ ತನ್ನ ನಾಯಕನಂತಿರುವ ಸೂರ್ಯನನ್ನು ಪೂರ್ವದಿಕ್ಕು ಎಂಬ ನಾಯಿಕೆಯು ಅರಗಿನ ರಸ ಹಚ್ಚಿಕೊಂಡಿರುವುದರಿಂದ ಕೆಂಪಾಗಿದೆಯೋ ಎಂಬಂತಿರುವ ಪ್ರಾತಃಕಾಲದ ಕೆಂಪು ಬಣ್ಣದಿಂದ ಕೂಡಿದ ತನ್ನ ಕಾಲಿನಿಂದ (ರಕ್ತ ಕಿರಣಗಳಿಂದ) ಒದ್ದುದರಿಂದಲೋ ಎಂಬಂತೆ ಸೂರ್ಯನು ಪ್ರಾತಃಕಾಲದಲ್ಲಿ ಕೆಂಪಾಗಿ ಕಾಣಿಸುತ್ತಿದ್ದನು. ಪೂರ್ವದಿಗಂಗನೆಯು ತನ್ನ ಅರಗಿನ ರಸ ಹೊಚ್ಚಿಕೊಂಡಿರುವುದರಿಂದ ಕೆಂಪಾದ ಕಾಲಿನಿಂದ ಒದ್ದುದರಿಂದಲೋ ಎಂಬಂತೆ ಸೂರ್ಯನು ಕೆಂಪಾಗಿದ್ದಾನೆ ಎಂದು ಸೂರ್ಯನು ಕೆಂಪಾಗಿರುವುದಕ್ಕೆ ಕಾರಣವನ್ನು ಉತ್ಪ್ರೇಕ್ಷಿಸಿದ್ದಾರೆ. ಹಂತ ಎಂಬ ಪದದಿಂದ ನಾಯಕ ನಾಯಕೆಯರ ಈ ಕಲಹವು ರಸಿಕರಿಗೆ ಸಂತೋಷವನ್ನು ಉಂಟುಮಾಡುತ್ತಿದೆ ಎಂಬುದನ್ನು ಸೂಚಿಸಿದ್ದಾರೆ.

**ಅವತಾರಿಕೆ :** ಈಗ ವಂದಿಮಾಧಿಗರು ಸೂರ್ಯೋದಯವನ್ನು ವರ್ಣಿಸಿದುದನ್ನು ಕವಿಗಳು ತಿಳಿಸುತ್ತಾರೆ.

**ಪ್ರಾತರಂಬುನಿ ನಿಮಜ್ಯ ನೀರಧೇರುತ್ಥಿತೋ ಹರಿದಿಶಾನಿಜಾಲಿಕೇ ।**
**ಅರ್ಕಮಂಡಲಮಿಷೇಣ ವಾಸರಃ ಶೋಣಿಮಾಕ್ಷತಲಲಾಮಕಂ ದಧೇ ॥೧೩॥**

**ತಾತ್ಪರ್ಯ :** ಬ್ರಾಹ್ಮಣರು ಬೆಳಿಗ್ಗೆ ಎದ್ದು ಸ್ನಾನ ಮಾಡಿ ನಿತ್ಯಾಹ್ನೀಕ, ಪೂಜಾದಿಗಳನ್ನು ಮಾಡಿ ಹಣೆಯಲ್ಲಿ ಕೆಂಪಾದ ಅಕ್ಷತೆಯನ್ನು ಇಟ್ಟು (ಹಚ್ಚಿ) ಕೊಳ್ಳುತ್ತಾರೆ. ಅದರಂತೆ ದಿವಸವು (ದಿನವು) ಬೆಳಿಗ್ಗೆ ಎದ್ದು ಸಮುದ್ರದ ನೀರಿನಲ್ಲಿ ಅವಗಾಹನ ಸ್ನಾನ ಮಾಡಿ ಪೂರ್ವ ದಿಕ್ಕೆಂಬ ತನ್ನ ಹಣೆಯಲ್ಲಿ ಕೆಂಪು ಬಣ್ಣದ ಅಕ್ಷತೆಯ ಚಿನ್ಹೆಯನ್ನು ಧರಿಸಿತು. (ಸೂರ್ಯೋದಯವಾಯಿತು ಎಂಬುದಾಗಿ ಭಾವ) ಹಗಲು (ಪ್ರಾತಃಕಾಲದಲ್ಲಿ) ಪೂರ್ವದಿಕ್ಕಿನಲ್ಲಿ ಕೆಂಪಾದ ಸೂರ್ಯನು

ಉದಯಿಸುತ್ತಿದ್ದರೆ ದಿವಸವು (ದಿನವು) ಸ್ನಾನ ಮಾಡಿ ಪೂರ್ವ ದಿಕ್ಕೆಂಬ ತನ್ನ ಹಣೆಯಲ್ಲಿ ಕೆಂಪಾದ ದೊಡ್ಡ ಅಕ್ಷತೆಯ ಬೊಟ್ಟನ್ನು ಇಟ್ಟುಕೊಂಡ ಹಾಗೆ ಕಾಣಿಸುತ್ತಿತ್ತು ಎಂದು ಭಾವ.

**ಅವತಾರಿಕೆ :** ಈಗ ಕವಿಗಳು ಸೂರ್ಯೋದಯ ಸಮಯದ ದಿವಸ (ದಿನ)ಲಕ್ಷ್ಮಿಯನ್ನು ವರ್ಣಿಸುತ್ತಾರೆ.

**ಅಂಧಕಾರಯವನೀಮಪಾಕೃತಾಮಾರಚಯ್ಯ ದಿವಸೇಂದಿರಾನಟೀ ।**
**ವ್ಯೋಮರಂಗಮಭಜತ್ ಪ್ರಭಾಂಚಿತಂ ಕುರ್ವತೀ ಖಗರವೇಣ ಶಿಂಜಿತಮ್ ॥೧೪॥**

**ತಾತ್ಪರ್ಯ :** ನರ್ತಕಿಯ ಕಪ್ಪಾದ ಪರದೆಯನ್ನು ಸರಿಸಿ ಕಾಲಿನ ಗೆಜ್ಜೆಯನ್ನು ಗಿಲ್ ಗಿಲ್ ಘಲ್ ಘಲ್ ಎಂದು ಶಬ್ದ ಮಾಡುತ್ತಾ, ನರ್ತನಕ್ಕಾಗಿ ಪ್ರಕಾಶ ಭರಿತವಾದ ರಂಗಸ್ಥಳವನ್ನು ಪ್ರವೇಶಿಸುತ್ತಾಳೆ. ಅದೇ ರೀತಿಯಲ್ಲಿ ದಿವಸ (ದಿನ) ಲಕ್ಷ್ಮಿಯು ಅಂಧಕಾರವೆಂಬ ಪರದೆಯನ್ನು ಸರಿಸಿ ಪಕ್ಷಿಗಳ ಚಿಲಿಪಿಲಿಗುಟ್ಟುವ ಸದ್ದೆಂಬ ಕಾಲ್ಗೆಜ್ಜೆಯ ಸದ್ದನ್ನು ಮಾಡುತ್ತಾ, ಆಕಾಶವೆಂಬ ರಂಗಸ್ಥಳವನ್ನು ನರ್ತನಕ್ಕಾಗಿ ಪ್ರವೇಶಿಸಿದಳು. ಹಗಲಿನ ಶೋಭೆಯೇ ನರ್ತಕಿ, ಕತ್ತಲೆಯು ಪರದೆ, ಪಕ್ಷಿಗಳ ಚಿಲಿಪಿಲಿಗುಟ್ಟುವಿಕೆಯೇ ನರ್ತಕಿಯ ಕಾಲ್ಗೆಜ್ಜೆಯ ಸದ್ದು. ಆಕಾಶವೇ ರಂಗಸ್ಥಳ, ಕತ್ತಲೆಯು ಹೋಗಿ ಹಗಲು ಆಗುತ್ತಿರುವುದೇ ದಿನಲಕ್ಷ್ಮಿಯ ರಂಗಸ್ಥಳ ಪ್ರವೇಶ. ಇಲ್ಲಿ ರೂಪಾಲಂಕಾರವಿದೆ.

**ಅವತಾರಿಕೆ :** ಉದಯಿಸುತ್ತಿರುವ ಸೂರ್ಯನನ್ನು ಪಕ್ಷಿಗಳು ವಂದಿಮಾಗಧರಂತೆ ಹೊಗಳುತ್ತಿವೆ ಎಂದು ಕವಿಗಳು ವರ್ಣಿಸುತ್ತಾರೆ.

**ಅಂಧಕಾರರಿಪುಭೂಮಿಭೃದ್ಗಣಂ ಜೇತುಮುತ್ಕಮನಸೋ ವಿಭಾವಸೋಃ ।**
**ಬಂದಿನೋ ನು ಬಿರುದಾಲಿವಾಚಕಾಃ ಪ್ರಾಗ್ವಿಶಂತಿ ಮುಖರಾ ವಿಹಂಗಮಾಃ ॥೧೫॥**

**ತಾತ್ಪರ್ಯ :** ಶತ್ರುರಾಜರನ್ನು ಜಯಿಸಲು ಹೊರಡುವ ಉತ್ಸಾಹಿಯಾದ ರಾಜನ ಮುಂದುಗಡೆ ವಂದಿಮಾಗಧರು ರಾಜನ ಪರಾಕ್ರಮ ಅತಿಶಯಗಳನ್ನು ಹಾಡಿನ ರೂಪದಲ್ಲಿ ಹೊಗಳುತ್ತಾ ಬರುತ್ತಾರೆ. ಪ್ರಕೃತ ಸೂರ್ಯೋದಯವಾಗುವ ಸಮಯದಲ್ಲಿ ಕತ್ತಲೆಯೆಂಬ ಶತ್ರುರಾಜರನ್ನು ಜಯಿಸಲು ಹೊರಡುವ ಸೂರ್ಯನ (ಸೂರ್ಯನೆಂಬ ರಾಜನ) ಕೀರ್ತಿ ಪರಾಕ್ರಮ ಅತಿಶಯಗಳನ್ನು ಪದ್ಯರೂಪದಲ್ಲಿ ಸೂರ್ಯನಿಗಿಂತಲೂ ಮೊದಲೇ ಗಗನರಂಗವನ್ನು ಚಿಲಿಪಿಲಿಗುಟ್ಟುತ್ತಾ ಪ್ರವೇಶಿಸುವ ಪಕ್ಷಿಗಳು ಸೂರ್ಯನಿಗಿಂತ ಮೊದಲೇ ಮುಂದೆ ಹೋಗುತ್ತಾ ಹೊಗಳುತ್ತಾ ಬರುವ ವಂದಿಗಳು ಮೊದಲು ಪ್ರವೇಶಿಸುತ್ತಾ ಇವೆಯೋ ಎಂಬಂತೆ ಕಾಣಿಸುತ್ತಿವೆ ಎಂದು ಅಭಿಪ್ರಾಯ.

**ಅವತಾರಿಕೆ :** ಈಗ ಕವಿಗಳು ಸೂರ್ಯೋದಯ ಕಾಲದಲ್ಲಿ ಕಮಲವು ಅರಳುವುದನ್ನು ವರ್ಣಿಸುತ್ತಾರೆ.

**ವಿಪ್ರಯುಕ್ತಸಖಿಹೃನ್ಮಲಿಮ್ಲುಚೇ ವಿದ್ರುತೇ ಸತಿ ವಿಧೌ ನಿಶಾತ್ಯಯೇ ।**
**ಪದ್ಮಿನೀ ವಿಗತಸಾಧ್ವಸಾ ಶನೈಃ ಫುಲ್ಲಮಾವಹತಿ ಪದ್ಮಲೋಚನಮ್ ॥೧೬॥**

**ತಾತ್ಪರ್ಯ :** ಸಹಚರರಾದವರ (ನಾಯಕರ) ವಿಯೋಗದಿಂದ ದುಃಖಿಸುತ್ತಿರುವ ವಿರಹಿಣಿಯರ ಮನಸ್ಸನ್ನು ರಾತ್ರಿಯಲ್ಲಿ ಅಪಹರಿಸುತ್ತಿರುವ ಚಂದ್ರನು ಪ್ರಾತಃಕಾಲವಾದ ಕೂಡಲೇ ಓಡಿಹೋದನು (ಅಸ್ತಂಗತನಾದನು, ಅದೃಶ್ಯನಾದನು). ಅದುವರೆಗೆ ಸೂರ್ಯನ ಅಗಲಿಕೆಯಿಂದ ಕೊರಗುತ್ತಿದ್ದ ಕಮಲಿನಿಯು (ತಾವರೆಯ ರಾಶಿಯು) ಚಂದ್ರನಿಗೆ ಹೆದರುತ್ತಾ ಸೂರ್ಯನ ಬರುವಿಕೆಯನ್ನು ಎದುರು ನೋಡುತ್ತಿತ್ತು. ಚಂದ್ರನು ಓಡಿಹೋದ (ಮರೆಯಾದ) ಕೂಡಲೆ ಕಮಲಿನಿಯು ತನ್ನ ಮುಖವನ್ನು ಅರಳಿಸಿ ನಗಲು (ಸಂತೋಷಪಡಲು) ಆರಂಭಿಸಿತು. (ವಿರಹಿಗಳಿಗೆ ಮನಃಕ್ಲೇಷವನ್ನು ಉಂಟುಮಾಡುವ ಚಂದ್ರನು ಅಸ್ತಂಗತನಾದನು. ಕಮಲಿನಿಯು ತನ್ನ ಪದ್ಮವೆಂಬ ಮುಖವನ್ನು ಅರಳಿಸಿತು. ಚಂದ್ರನು ಮರೆಯಾಗಿ ಬೆಳಗಾದಾಗ ತಾವರೆಗಳು ಅರಳಿದವು. (ಕಳ್ಳರು ಬೆಳಗಾದ ಕೂಡಲೇ ಓಡಿಹೋಗುವಂತೆ ಚಂದ್ರನು ಕಣ್ಮರೆಯಾದನು. ವಿರಹಿಣೀ ಸ್ತ್ರೀಯರಿಗೆ ಸ್ತ್ರೀಸಾಜಾತ್ಯದಿಂದ ಗೆಳತಿಯರಾದ ಕಮಲಿನಿಯು (ಸ್ತ್ರೀಲಿಂಗ) ರಾತ್ರಿ ದುಃಖಿಸುತ್ತಿದ್ದಳು. ಬೆಳಗಾದ ನಂತರ ಅವಳ ದುಃಖವು ಪರಿಹಾರವಾಯಿತು.

**ಅವತಾರಿಕೆ :** ಸೂರ್ಯೋದಯಕ್ಕಿಂತ ಮೊದಲು ಅಗಲಿದ್ದು ಸೂರ್ಯೋದಯವಾದ ನಂತರ ಪರಸ್ಪರ ಒಂದುಗೂಡಿದ ಚಕ್ರವಾಕ ಪಕ್ಷಿಗಳ ಜೋಡಿಯನ್ನು ಕಮಲಿನಿಯ ವರ್ಣನೆಯಿಂದ ಸಹಿತವಾಗಿ ಉತ್ಪ್ರೇಕ್ಷಾಲಂಕಾರದಿಂದ ಕವಿಗಳು ವರ್ಣಿಸುತ್ತಾರೆ.

**ಚಕ್ರವಾಕಮಿಥುನಾರ್ಧರೂಪಿಣೀಂ ಪೂರಯೇತಿ ವಿಹಿತಾ ಸಮಸ್ಯಕಾಮ್ ।**
**ಮೀಲಿತಾಬ್ಜನಯನಾ ಶುಚಿಸ್ಮಿತಾ ಪೂರಯತ್ಯಹಹ! ತಾಂ ಪಯೋಜಿನೀ ॥೧೭॥**

**ತಾತ್ಪರ್ಯ :** ಚಕ್ರವಾಕ ಪಕ್ಷಿಗಳಿಗೆ ರಾತ್ರಿಯಾದ ಕೂಡಲೇ ಕಣ್ಣು ಕಾಣಿಸುವುದಿಲ್ಲ. ರಾತ್ರಿಯಲ್ಲಿ ಅವೆರಡೂ ವಿಯೋಗ ಹೊಂದಿರುತ್ತವೆ. ಸೂರ್ಯೋದಯವಾದ ಕೂಡಲೇ ಪುನಃ ಒಂದಾಗುತ್ತವೆ. ಚಕ್ರವಾಕ ಪಕ್ಷಿಗಳ ಜೋಡಿ ಎಂದರೆ ಹೆಣ್ಣು ಮತ್ತು ಗಂಡು, ಇವೆರಡೂ ಅರ್ಧರೂಪವಾಗುತ್ತದೆ. ಹೆಣ್ಣು ಪ್ರತ್ಯೇಕವಾಗಿ ಇರುತ್ತದೆ. ಗಂಡು ಕೂಡ ಪ್ರತ್ಯೇಕವಾಗಿ ಇರುತ್ತದೆ. ಇದೊಂದು ಸಮಸ್ಯೆ. ಚಕ್ರವಾಕ ಮಿಥುನ ಎಂಬ ಹೆಸರಿದ್ದರೂ ಅವೆರಡೂ ಪ್ರತ್ಯೇಕವಾಗಿರುತ್ತದೆ. ಈ ಸಮಸ್ಯೆಯನ್ನು (ಬಿಕ್ಕಟ್ಟನ್ನು) ಪರಿಹಾರ ಮಾಡಲು ಸೂರ್ಯನು ಕಮಲಿನಿಗೆ ಆದೇಶ ಮಾಡಿದನು. ಕಮಲಿನಿಯು (ಕಮಲಗಳ ವನವು) ತನ್ನ ತಾವರೆ ಕಣ್ಣುಗಳನ್ನು ಮುಚ್ಚಿಕೊಂಡು ಬಹುಕಾಲ, ರಾತ್ರಿಯೆಲ್ಲಾ ಆಲೋಚನೆ ಮಾಡಿತು. ವಿಯುಕ್ತವಾದ ಈ ಹೆಣ್ಣು ಗಂಡುಗಳ ಸಮಸ್ಯೆಯನ್ನು ಯಾವ ರೀತಿ ಪರಿಹರಿಸಲಿ? ಎಂದು ಇಡೀ ರಾತ್ರಿ ಆಲೋಚಿಸಿ ಅನಂತರ ಈ ಸಮಸ್ಯೆಗೆ ಪರಿಹಾರ ದೊರಕಿತು ಎಂದು ಮುಗುಳುನಗೆ ನಕ್ಕ ಕಮಲಿನಿಯು, ಸಮಸ್ಯೆಯನ್ನು ಪರಿಹರಿಸಿತು. ಸೂರ್ಯೋದಯವಾದರೆ ಈ ಸಮಸ್ಯೆಯು ಬಗೆಹರಿಯುವುದು ಎಂಬುದಾಗಿ

ತೀರ್ಮಾನಿಸಿದ ಕಮಲಿನಿಯು ಸೂರ್ಯೋದಯವಾದ ಕೂಡಲೇ ಚಕ್ರವಾಕ ಪಕ್ಷಿಗಳು (ಗಂಡು-ಹೆಣ್ಣು) ಒಂದಾದದ್ದನ್ನು ನೋಡಿ ಸೂರ್ಯನು ನನಗೆ ನೀಡಿದ ಸಮಸ್ಯೆಯನ್ನು ಪರಿಹಾರ ಮಾಡಿದ್ದೇನೆ ಎಂದು ಸಂತೋಷಪಟ್ಟಿತು. ಕಮಲವು ಅರಳಿತು. ಅರ್ಧ ಅರ್ಧವಾದ ಚಕ್ರವಾಕ ಪಕ್ಷಿಗಳೆರಡು ಒಂದಾದದ್ದನ್ನು ಸೇರಿ ಚಕ್ರವಾಕ (ಚಕ್ರಾಕಾರ ಎಂಬ ಮಾತು) ಬಂದಿತು.

**ಅವತಾರಿಕೆ :** ಈಗ ಕವಿಗಳು ಸೂರ್ಯೋದಯವಾದ ಕೂಡಲೇ ಚಂದ್ರನು ಕಣ್ಮರೆಯಾಗುವ ಕಾರಣವನ್ನು ಉತ್ಪ್ರೇಕ್ಷಿಸುತ್ತಾರೆ.

**ನಿದ್ರಿತೇ ತ್ವಯಿ ಪುರಾ ದ್ವಿಜಾಧಿಪೇ ಸ್ವೈರಮೇವ ಚರತಿ ಸ್ಮ ಚಂದ್ರಮಾಃ ।**
**ಯಾತಿ ಬೋಧಮಧುನಾ ದ್ವಿಜಾಧಿಭೂನಾಮಮಾತ್ರಭೃದಪೈತಿ ಸಾಧ್ವಸಾತ್ ॥೧೮॥**

**ತಾತ್ಪರ್ಯ :** ಎಲೈ ಯತಿರಾಜರಾಜರೇ! ಬ್ರಾಹ್ಮಣರಿಗೆ ನಾಯಕರಾದುದರಿಂದ ದ್ವಿಜರಾಜ ಎಂಬ ಹೆಸರು ನಿಮಗೆ ಅನ್ವರ್ಥಕವಾಗಿದೆ. ಆದರೆ ರಾತ್ರಿಯಲ್ಲಿ ನೀವು ಯೋಗನಿದ್ರಾರೂಢರಾಗಿರುವಾಗ (ನಕ್ಷತ್ರಗಳ ರಾಜನಾಗಿರುವುದರಿಂದ) ದ್ವಿಜರಾಜ ಎಂಬ ಹೆಸರಿನಿಂದ ಗುರುತಿಸಲ್ಪಡುವ ಚಂದ್ರನು ಯಾವ ಹೆದರಿಕೆಯೂ ಇಲ್ಲದೇ ಸಂಚರಿಸುತ್ತಾನೆ. ಈಗ ನೀವು ಜಾಗ್ರದಾವಸ್ಥೆಯಲ್ಲಿರುವಾಗ ದ್ವಿಜರಾಜ ಎಂಬ ಹೆಸರನ್ನು ಮಾತ್ರ ಹೊಂದಿದವನಾಗಿ ಹೆದರಿಕೆಯಿಂದ ಕಣ್ಮರೆಯಾದನು.

ದ್ವಿಜ ಎಂದರೆ ಬ್ರಾಹ್ಮಣರು, ಅವರಿಗೆ ಅಧಿಪತಿಗಳಾದುದರಿಂದ ಮುಖ್ಯವಾಗಿ ದ್ವಿಜರಾಜರು ನೀವೇ ಆಗಿದ್ದೀರ. ನೀವು ಮಲಗಿದ್ದಾಗ ಚಂದ್ರನು ದ್ವಿಜರಾಜ ಎಂಬ ಹೆಸರಿನಿಂದ ಸ್ವೇಚ್ಛೆಯಾಗಿ ಸಂಚರಿಸಿದನು. ನೀವು ಎಚ್ಚರ ಹೊಂದಿದ ಕೂಡಲೇ ಶ್ರೀರಾಘವೇಂದ್ರ ಗುರುಸಾರ್ವಭೌಮರ ದ್ವಿಜರಾಜತ್ವವನ್ನು ನಾನು ರಾತ್ರಿಯಲ್ಲಿ ಕದ್ದಿದ್ದೆನು, ಈಗ ಯತಿರಾಜರು ಎಚ್ಚರವಾಗಿದ್ದಾರೆ. ಆದುದರಿಂದ ನಾನು ಇಲ್ಲಿ ಇರಲು ಸಾಧ್ಯವಿಲ್ಲ ಎಂಬುದಾಗಿ ಚಿಂತಿಸಿ ಚಂದ್ರನು ಅಸ್ತಂಗತನಾದನು ಎಂದು ಭಾವ.

**ಅವತಾರಿಕೆ :** ಕವಿಗಳು ಪ್ರಾತಃಕಾಲದಲ್ಲಿ ಮೆಲ್ಲಗೆ ತಂಗಾಳಿಯು ಬೀಸುತ್ತಿರುವುದನ್ನು ಉತ್ಪ್ರೇಕ್ಷಿಸಿ ವರ್ಣಿಸುತ್ತಾರೆ.

**ಚಕ್ರವಾಕವಿರಹಾಗ್ನಿಧೂಮ್ಯಯಾ ಶಾರ್ವರೇಣ ಜಗತೀ ನಿಪೀಡಿತಾ ।**
**ತನ್ನಿವೃತ್ತಿಸುಖಿತಾಽಧುನಾ ತತೋ ಮಂದಮುಚ್ಛ್ವಸಿತಿ ಮಾರುತಚ್ಛಲಾತ್ ॥೧೯॥**

**ತಾತ್ಪರ್ಯ :** ರಾತ್ರಿಯ ವೇಳೆಯಲ್ಲಿ ಎಲ್ಲ ಕಡೆಯಲ್ಲಿಯೂ ಗಾಢಾಂಧಕಾರವು ಹಬ್ಬಿರುವುದು. ಇದು ಚಕ್ರವಾಕ ಪಕ್ಷಿಗಳ ವಿರಹಾನಲದ ಹೊಗೆಯ ರಾಶಿಯಂತೆ ಇದೆ. ಈ ಹೊಗೆಯ ರಾಶಿಯಂತಹ ಕತ್ತಲೆಯಿಂದ ಭೂದೇವಿಗೆ ಉಸಿರು ಕಟ್ಟಿದಂತಾಗಿ ಬಹಳ ತೊಂದರೆಯಾಗಿತ್ತು.

ಈಗ ಕತ್ತಲೆಯ ನಾಶವಾದುದರಿಂದ ಭೂದೇವಿಯು ಆನಂದದಿಂದ ಮೆಲ್ಲನೆ ಬೆಳಗಿನ ಜಾವದ ಮಂದಮಾರುತದ ನೆಪದಿಂದ ಹಾಯಾಗಿ ಉಸಿರು ಬಿಡುತ್ತಿದ್ದಾಳೆ. ಕತ್ತಲೆಯ ಹೊಗೆಯಿಂದ ಭೂದೇವಿಗೆ ಉಸಿರು ಕಟ್ಟಿದಂತಾಗಿತ್ತು. ಈಗ ಸೂರ್ಯೋದಯವಾದ ಮೇಲೆ ಆ ಕತ್ತಲೆಯ ಹೊಗೆಯು ಇಲ್ಲವಾದುದರಿಂದ ಮೆಲ್ಲನೆ ಭೂದೇವಿಯ ಉಸಿರಿನ ಸಂಚಾರವಾಗುತ್ತಿದೆ ಎಂದು ಮಂದಮಾರುತವನ್ನು ವರ್ಣಿಸುತ್ತಿದ್ದಾರೆ.

**ಅವತಾರಿಕೆ :** ಶ್ರೀರಾಘವೇಂದ್ರ ಯತಿವರೇಣ್ಯರು ವಂದಿಮಾಗಧರ ಈ ಸ್ತೋತ್ರಾದಿಗಳನ್ನು ಕೇಳಿ ಶಯನದಿಂದ ಮೇಲೆದ್ದರು ಎಂದು ಕವಿಗಳು ಹೇಳುತ್ತಿದ್ದಾರೆ.

**ಏವಮಾದಿಮಗಧೋಕ್ತಿಮಾಧುರೀವಾರಿಪೂರಕೃತಸೇಚನಾದಿವ ।**
**ಬೋಧಮೇತ್ಯ ಯತಿರಾಟ್ ಸಮುತ್ಥಿತೋ ದ್ವೀಪಿಚರ್ಮಚಯತಲ್ಪತಲ್ಲಜಾತ್ ॥೨೦॥**

**ತಾತ್ಪರ್ಯ :** ಈ ಹಿಂದೆ ಹೇಳಿದ ಸ್ತುತಿಪಾಠಕರ ಮನೋಹರವಾದ ಮಾತಿನ ಮಧುರತೆಯಿಂದ ನೀರನ್ನು ಚುಮುಕಿಸಿದುದರಿಂದಲೋ ಎಂಬಂತೆ ಶ್ರೀರಾಘವೇಂದ್ರತೀರ್ಥರು ಹುಲಿಯ ಚರ್ಮದಿಂದ ರಚಿತವಾದ ಶ್ರೇಷ್ಠವಾದ ಹಾಸಿಗೆಯಿಂದ ಮೇಲಕ್ಕೆದ್ದರು. ಮಲಗಿದವರ ಮೇಲೆ ನೀರನ್ನು ಚುಮುಕಿಸಿದರೆ ಮೇಲಕ್ಕೇಳುತ್ತಾರೆ. ಇಲ್ಲಿ ಗುರುಗಳು ಸ್ವಾಭಾವಿಕವಾಗಿ ತಮ್ಮ ಇಚ್ಛೆಯಂತೆ ಸರಿಯಾದ ಸಮಯದಲ್ಲಿ ಎದ್ದವರೇ ಆಗಿದ್ದರೂ ವಂದಿಮಾಗಧರು ಸ್ತುತಿಮಾಧುರ್ಯವೆಂಬ ನೀರನ್ನು ಚುಮುಕಿಸಿದ್ದರಿಂದ ಹಾಸಿಗೆಯನ್ನು ಬಿಟ್ಟು ಮೇಲಕ್ಕೆ ಎದ್ದರೋ ಎಂಬಂತಿತ್ತು ಎಂದು ಉತ್ಪ್ರೇಕ್ಷೆಯಿಂದ ವರ್ಣಿಸಿದ್ದಾರೆ.

**ಅವತಾರಿಕೆ :** ಈಗ ಕವಿಗಳು ಜಾಗೃದಾವಸ್ಥೆಯ ಪ್ರವರ್ತಕನಾದ ವಿಶ್ವ ಎಂಬ ಹೆಸರಿನ ಪರಮಾತ್ಮನನ್ನೂ, ಆ ಪರಮಾತ್ಮನು ಶ್ರೀ ಗುರುರಾಘವೇಂದ್ರರಿಗೆ ಮಾಡಿದ ಅನುಗ್ರಹವನ್ನು ವರ್ಣಿಸುತ್ತಾರೆ.

**ದ್ವಾದಶಸ್ತುತಿಪುರಾಣಸಂತತೀ ಶ್ರೋತುಮಾನನಸಮೂಹಮೇಕದಾ ।**
**ಸ್ವಂ ದಶಾಧಿಕನವಾನನೋಽದದಾದ್ವಿಶ್ವಮೂರ್ತಿರಿವ ಚಕ್ಷುರಾಗತಃ ॥೨೧॥**

**ತಾತ್ಪರ್ಯ :** ಜಾಗ್ರತ್, ಸ್ವಪ್ನ, ಸುಷುಪ್ತಿ ಮತ್ತು ಮೋಕ್ಷ ಎಂಬುವ ನಾಲ್ಕು ಅವಸ್ಥೆಗಳಿಗೆ ಕ್ರಮವಾಗಿ ವಿಶ್ವ, ತೈಜಸ, ಪ್ರಾಜ್ಞ ಮತ್ತು ತುರೀಯ ಎಂಬುವ ನಾಲ್ಕು ಭಗವದ್ರೂಪಗಳು ನಿಯಾಮಕವಾಗಿವೆ. ಕಣ್ಣು, ಕಂಠ, ಹೃದಯ, ಮತ್ತು ಶಿರಸ್ಸು ಎಂಬ ನಾಲ್ಕು ಸ್ಥಳಗಳಲ್ಲಿ ಆ ನಾಲ್ಕು ಭಗವದ್ರೂಪಗಳ ಆಯಾ ದೇವತೆಗಳು ಆಯಾ ಕಾಲದಲ್ಲಿರುತ್ತಾರೆ. ಈ ನಾಲ್ಕು ಭಗವದ್ರೂಪಗಳಲ್ಲಿ ವಿಶ್ವನಾಮಕ ರೂಪವು ಬಲಗಡೆಯ ಕಣ್ಣಿನಲ್ಲಿ ಇರುತ್ತದೆ. ಈ ವಿಶ್ವಮೂರ್ತಿಗೆ ಹತ್ತೊಂಬತ್ತು ಮುಖಗಳಿವೆ. ಒಂದೇ ಸಮಯದಲ್ಲಿ ದ್ವಾದಶಸ್ತುತಿ ಎಂಬ ಒಂದು ಗ್ರಂಥ, ಹದಿನೆಂಟು ಪುರಾಣಗಳು, ಒಟ್ಟು ಹತ್ತೊಂಬತ್ತು ಗ್ರಂಥಗಳನ್ನು ಶ್ರೀರಾಘವೇಂದ್ರ

ಗುರುಸಾರ್ವಭೌಮರಿಂದ ಕೇಳಬೇಕೆಂದು ಶ್ರೀವಿಶ್ವನಾಮಕ ಪರಮಾತ್ಮನು ನಿರ್ಧರಿಸಿದನು. ಈ ಹತ್ತೊಂಭತ್ತು ಗ್ರಂಥಗಳನ್ನು ಹೇಳಬೇಕಾದ ಗುರುಗಳು ಏಕಕಾಲದಲ್ಲಿ ಅವುಗಳನ್ನು ಹೇಳಬೇಕಾದರೆ ಅವರಿಗೂ ಹತ್ತೊಂಭತ್ತು ಮುಖಗಳು ಇರಬೇಕಷ್ಟೆ? ಆದರೆ ಗುರುಗಳಿಗೆ ಒಂದೇ ಮುಖವಿದೆ. ಒಂದಕ್ಕಿಂತ ಹೆಚ್ಚಾಗಿ ಮುಖಗಳು ಇಲ್ಲವೇ ಇಲ್ಲ. ಆದುದರಿಂದ ಹತ್ತೊಂಭತ್ತು ಮುಖಗಳುಳ್ಳ ವಿಶ್ವನಾಮಕನಾದ ಪರಮಾತ್ಮನು ಗುರುಗಳ ಬಲಗಣ್ಣಿನಲ್ಲಿ ಬಂದು ನಿಂತು ತನ್ನ ಹತ್ತೊಂಭತ್ತು ಮುಖಗಳನ್ನು ಗುರುಗಳಿಗೆ ಕೊಟ್ಟು ಆ ಹತ್ತೊಂಭತ್ತು ಮುಖಗಳಿಂದ ಹಿಂದೆ ಹೇಳಿದ ದ್ವಾದಶಸ್ತೋತ್ರ ಒಂದು. ಹದಿನೆಂಟು ಪುರಾಣಗಳು ಒಟ್ಟು ಹತ್ತೊಂಭತ್ತು ಗ್ರಂಥಗಳನ್ನು ಶ್ರೀರಾಘವೇಂದ್ರ ಗುರುಗಳಿಂದ ಪಾರಾಯಣ ಮಾಡಿಸಿದನೋ ಎಂಬಂತಿತ್ತು ಎಂಬುದಾಗಿ ಕವಿಗಳು ಉತ್ಪ್ರೇಕ್ಷಿಸಿದ್ದಾರೆ. (ಗುರುಗಳು ಈ ಗ್ರಂಥಗಳನ್ನು ಕ್ರಮವಾಗಿ ಪಾರಾಯಣ ಮಾಡಿದರೂ ವಿಶ್ವನಾಮಕ ಪರಮಾತ್ಮನ ಹತ್ತೊಂಭತ್ತು ಮುಖಗಳಿಂದ ಪಾರಾಯಣ ಮಾಡಿದಂತೆ ಆಗುತ್ತದೆ ಎಂದು ಭಾವ.)

**ಅವತಾರಿಕೆ :** ಶ್ರೀ ರಾಘವೇಂದ್ರಗುರುಗಳು ಶ್ರೀಹರಿಯನ್ನು ವಂದಿಸಿ ಸ್ತೋತ್ತಮರಿಂದ ಆಶೀರ್ವಾದವನ್ನು ಪಡೆದುದನ್ನು ಕವಿಗಳು ವರ್ಣಿಸುತ್ತಾರೆ.

**ಆನತೋಽಭದನಂತಮಗ್ರತಃ ಸಂಯಮೀಂದುರವಲೋಕ್ಯ ಸಜ್ಜನಾನ್ ।**
**ಆದರೇಣ ಸುಜನೈಃ ಸಮರ್ಪಿತಾಃ ಶ್ರೇಯಸೇ ಸತತಮಾಶಿಷೋಽಗ್ರಹೀತ್ ॥೨೨॥**

**ತಾತ್ಪರ್ಯ :** ಯತಿಶ್ರೇಷ್ಠರಾದ ಶ್ರೀರಾಘವೇಂದ್ರ ಗುರುವರ್ಯರು ಪ್ರಾತಃಕಾಲ ಎದ್ದ ಕೂಡಲೇ ಶ್ರೀಹರಿಯನ್ನು ಭಕ್ತಿಯಿಂದ ನಮಿಸಿದರು. ನಿರಂತರವಾದ ಶ್ರೇಯಸ್ಸಿಗೋಸ್ಕರ ತಮಗಿಂತ ಹಿರಿಯರಾದ ಸಜ್ಜನರನ್ನು ನೋಡಿ, ಅವರಿಂದ ಉಕ್ತವಾದ ಆಶೀರ್ವಚನಗಳನ್ನು ಬಹಳ ಶ್ರದ್ಧೆಯಿಂದ ಸ್ವೀಕರಿಸಿದರು.

(ಮೊದಲು ಶ್ರೀಹರಿಯನ್ನು (ಆನತಃ) ನಮಸ್ಕರಿಸಿದರು. (ಆನತಃ ಎಂಬಲ್ಲಿ ಕರ್ತರಿ ಕ್ತಪ್ರತ್ಯಯ) ಅನಂತರ ತಮಗಿಂತ ಉತ್ತಮರಾದ ಸಜ್ಜನರನ್ನು ತಾರತಮ್ಯಾನುಸಾರವಾಗಿ ತಿಳಿದು ಭಕ್ತಿಯಿಂದ ಅವರಿಗೆ ನಮಸ್ಕರಿಸಿದರು. ತಮಗಿಂತ ಕೆಳಗಿನ ಸಜ್ಜನರಿಂದ ಭಕ್ತಿಯಿಂದ ನಮಸ್ಕರಿಸಲ್ಪಟ್ಟರು (ಆನತ = ನಮಸ್ಕರಿಸಲ್ಪಟ್ಟರು ಎಂಬಲ್ಲಿ ಈ ಪಕ್ಷದಲ್ಲಿ ಕರ್ಮಣಿಕ್ತ ಪ್ರತ್ಯಯ). ತಮಗಿಂತ ಉತ್ತಮರಾದ ಸಜ್ಜನರು ಹೇಳಿದ ಆಶೀರ್ವಾದವನ್ನು ಯಾವಾಗಲೂ ಸ್ವೀಕರಿಸಿದರು. (ಅಥವಾ ತಮಗಿಂತ ಕೆಳಗಿನ ಶಿಷ್ಯಾದಿಗಳು ಸಮರ್ಪಿಸಿದ ಇಷ್ಟವಾದ ವಸ್ತುಗಳನ್ನು ಸ್ವೀಕರಿಸಿದರು.

**ಅವತಾರಿಕೆ :** ಶ್ರೀರಾಘವೇಂದ್ರತೀರ್ಥರು ತುಳಸಿಯನ್ನು, ಹನುಮಂತನನ್ನು ನಮಸ್ಕರಿಸಿದುದನ್ನು ಕವಿಗಳು ವರ್ಣಿಸುತ್ತಾರೆ.

**ಸ ಪ್ರಣಮ್ಯ ತುಲಸೀವನಸ್ಥಿತಾಮಿಂದಿರಾಂ ತದನು ತತ್ಪದಾಶ್ರಿತಮ್ ।**

**ವಾಯುನಂದನಮವಂದತಾದರಾದಿಂದಿರೇಶಕರುಣೈಕಮಂದಿರಮ್ ॥೨೩॥**

**ತಾತ್ಪರ್ಯ :** ಶ್ರೀರಾಘವೇಂದ್ರ ಯತಿವರೇಣ್ಯರು ತುಲಸೀ ವನದಲ್ಲಿ ಸನ್ನಿಹಿತಳಾದ ಲಕ್ಷ್ಮೀದೇವಿಯನ್ನು ನಮಸ್ಕರಿಸಿದರು. ಅನಂತರ ಆ ತುಲಸೀವನ ಪ್ರದೇಶದಲ್ಲಿಯೇ ಇರುವ ಲಕ್ಷ್ಮೀಪತಿಯಾದ ಶ್ರೀಮನ್ನಾರಾಯಣನ ದಯೆಗೆ (ಕೃಪೆಗೆ) ಮುಖ್ಯಪಾತ್ರರಾದ ಶ್ರೀ ಆಂಜನೇಯ ದೇವರನ್ನು ಭಕ್ತಿಯಿಂದ ನಮಿಸಿದರು.

**ಅವತಾರಿಕೆ :** ಶ್ರೀ ರಾಘವೇಂದ್ರ ಗುರುಗಳು ಡೋಲಿಯಲ್ಲಿ (ಮೇನೆಯಲ್ಲಿ) ಕುಳಿತು ಕಾವೇರೀನದಿಗೆ ಸ್ನಾನಕ್ಕಾಗಿ ತೆರಳಿದುದನ್ನು ಕವಿಗಳು ವರ್ಣಿಸುತ್ತಾರೆ.

**ಸೋऽಧಿರುಹ್ಯ ಶಿಬಿಕಾಂ ಗಜೇಂದ್ರಮುಕ್ತ್ಯುಕ್ತಿಸಂಸ್ತುತಿಕೃತಾದರಃ ಶನೈಃ ।**
**ಸ್ನಾತುಮಭ್ಯುಪಗತಸ್ತರಂಗಿಣೀಂ ದಕ್ಷಿಣಾಪಥನಿಲಿಂಪನಿಮ್ನಗಾಮ್ ॥೨೪॥**

**ತಾತ್ಪರ್ಯ :** ಅನಂತರ ಶ್ರೀರಾಘವೇಂದ್ರರು ಡೋಲಿ (ಮೇನೆ) ಯನ್ನು ಹತ್ತಿದರು. ಅದರಲ್ಲಿ ಕುಳಿತು ಭಾಗವತದ ಗಜೇಂದ್ರಮೋಕ್ಷಾಧ್ಯಾಯದ ಪಾರಾಯಣವನ್ನು ಭಕ್ತಿಯಿಂದ ಮಾಡುತ್ತಾ, ದಕ್ಷಿಣ ದೇಶದ ಗಂಗೆಯೆಂದು ಪ್ರಸಿದ್ಧಿಯಾಗಿರುವ ಕಾವೇರಿ ನದಿಗೆ ಸ್ನಾನಕ್ಕಾಗಿ ಮೆಲ್ಲನೆ ಪಯಣಿಸಿದರು.

**ಅವತಾರಿಕೆ :** ಈಗ ಕವಿಗಳು ಕಾವೇರಿನದಿಯನ್ನು ವರ್ಣಿಸುತ್ತಾರೆ.

**ತೀರಭೂರುಹಸುಮಾನಿ ತಜ್ಜಲೇ ಸಂನಿಪತ್ಯ ಸುಮನಸ್ತ್ವಮಾಪ್ನುವನ್ ।**
**ಜಾತಿಮಾತ್ರ ಇತಿ ತದ್ಗತಾऽಭವತ್ ವ್ಯಾಕ್ರಿಯಾ ತದಿತರೇಷ್ವಪಿ ಸ್ಫುಟಮ್ ॥೨೫॥**

**ತಾತ್ಪರ್ಯ :** ಕಾವೇರೀ ನದಿಯ ತೀರದಲ್ಲಿರುವ ಮರಗಳ ಹೂವುಗಳು ಕಾವೇರಿನದಿಯ ನೀರಿನಲ್ಲಿ ಬಿದ್ದು "ಸುಮನಸ್ತ್ವ"ವನ್ನು ಅಂದರೆ ದೇವತ್ವವನ್ನು ಹೊಂದಿದವು. ಹೂವುಗಳಿಗೆ ಸುಮನಸ್ ಎಂಬ ಹೆಸರಿದೆ. ಸ್ತ್ರೀಯಃ ಸುಮನಸಃ ಪುಷ್ಪಂ–ಅಮರ ಸುಪರ್ವಾಣಃ ಎಂಬ ಅಮರಕೋಶಾನುಸಾರವಾಗಿ ದೇವತೆಗಳಿಗೂ ಸುಮನಸ್ ಎಂಬ ಹೆಸರಿದೆ. ಕಾವೇರಿ ತೀರದ ವೃಕ್ಷಗಳಲ್ಲಿರುವ ಸುಮನಸಗಳು (ಹೂವುಗಳು) ಕಾವೇರಿಯ ನೀರಿನಲ್ಲಿ ಬಿದ್ದುದರಿಂದ ಸುಮನಸಗಳಾದವು – ದೇವತೆಗಳಾದವು. ಕಾವೇರೀ ನದಿಯ ತೀರದಲ್ಲಿ ಇರುವ ಗಿಡದ ಹೂವುಗಳು ಕಾವೇರಿ ನದಿಯ ನೀರಿನಲ್ಲಿ ಬಿದ್ದು ಪವಿತ್ರವಾದ ಆ ನೀರಿನ ಸಂಪರ್ಕದಿಂದ 'ಸುಮನಸ್ತ್ವ'ವನ್ನು ಹೊಂದಲಿ ಲೋಕದಲ್ಲಿ ಬೇರೆ ಹೂವುಗಳನ್ನು ಸುಮನಸ ಎಂದು ಹೇಳುತ್ತಾರಷ್ಟೆ! ಅದು ಹೇಗೆ ಸರಿ! ಎಂಬುದಾಗಿ ತಿಳಿಸುತ್ತಾರೆ. ಕಾವೇರಿ ನದಿಯ ತೀರದಲ್ಲಿರುವ ಹೂವುಗಳಿಗೆ ಸುಮನಸ್ತ್ವವು ಹೇಗೆ ಬಂತು ಎಂಬ ನಿರ್ವಚನವು "ಸುಮನಸ್ತ್ವ" (ಪುಷ್ಪತ್ವ) ಎಂಬ ಜಾತಿಯಿಂದ ಕೂಡಿದ ಎಲ್ಲಾ ವಸ್ತುಗಳಿಗೂ ಸುಮನಸ್ ಎಂಬ ಹೆಸರು ಸ್ಪಷ್ಟವಾಯಿತು. ಕಾವೇರಿ ನದಿಯ

ತೀರದ ಹೂವುಗಳೆಲ್ಲ ಕಾವೇರಿಯ ಜಲಸ್ಪರ್ಷದಿಂದ ಪ್ರಾಪ್ತವಾದ ಸುಮನಸ್ತ್ವವು ಪುಷ್ಪ ಜಾತಿಯ ಎಲ್ಲ ಪುಷ್ಪಗಳಲ್ಲಿಯೂ 'ಪುಷ್ಪತ್ವ' ಎಂಬ ಜಾತಿಯಿರುವುದರಿಂದ ಸೇರಿಕೊಂಡಿತು. ಎಲ್ಲಾ ಹೂವುಗಳನ್ನೂ 'ಸುಮನಸ್' ಎಂದು ಕರೆಯಲು (ಹೇಳಲು) ಸಾಧ್ಯವಾಯಿತು. ಸು=ಒಳ್ಳೆಯ ಮನಸ್=ಮನಸ್ಸನ್ನು ಉಳ್ಳವರು. ದೇವತೆಗಳು ಎಂಬ ನಿರ್ವಚನವನ್ನಿಟ್ಟುಕೊಂಡು ಸುಮನಸ್ ಎಂಬ ಶಬ್ದಕ್ಕೆ ಬೇರೆ ಅರ್ಥವನ್ನೇ ಹೇಳಿದ್ದರಿಂದ ನಿರುಕ್ತಿ ಎಂಬ ಅಲಂಕಾರ. ನಿರುಕ್ತಿರ್ಯೋರ್ಗತೋ ನಾಮ್ನಾಂ ಸ್ಯಾದರ್ಥಾಂತರಕಲ್ಪನಂ । ಈದೃಶೈಶ್ಚರಿತ್ರೈರ್ಜಾನೇ ಸತ್ಯಂ ದೋಷಾಕರೋ ಭವಾನ್ ॥ ಎಂಬುದಾಗಿ ನಿರುಕ್ತಿ ಅಲಂಕಾರದ ಲಕ್ಷ್ಯ ಲಕ್ಷಣಗಳು.

**ಅವತಾರಿಕೆ :** ಈಗ ಕವಿಗಳು ಕಾವೇರಿ ನದಿಯನ್ನು ವರ್ಣಿಸುತ್ತಾರೆ.

**ಯಾಂ ಪ್ರವಾಲಲಹರೀಂ ಮನೋಹರಾಮ್ ಉದ್ವಹತ್ಯಧಿವಸಂತಮಂಬುಧೌ ।**
**ತೀರಚಂಪಕಸುಮೋತ್ಕರಾ ಲಸಂತ್ಯುತ್ಸವಾಯ ಕೃತದೀಪಿಕಾ ಇವ ॥೨೬॥**

**ತಾತ್ಪರ್ಯ :** ಚೈತ್ರ ವೈಶಾಖ ಮಾಸಗಳಲ್ಲಿ ವಸಂತ ಋತುವು ಬರುತ್ತದೆ. ಆಗ ಕಾವೇರೀ ನದಿಯು ಸಮುದ್ರಕ್ಕೆ ಸೇರುವ ಸ್ಥಳದಲ್ಲಿರುವ ಕೆಂಪಾದ ಹವಳಗಳಿಂದ ಕಾವೇರಿಯ ಅಲೆಗಳೂ ಹವಳದ ಬಣ್ಣದಿಂದ ಕಂಗೊಳಿಸುತ್ತವೆ. ಆಗ ವಿವಾಹ ಕಾಲದಲ್ಲಿ ಕುಂಕುಮ ಮುಂತಾದ ಮಂಗಳ ದ್ರವ್ಯಗಳಿಂದ ಅಲಂಕೃತಳಾದಂತೆ ಕಾಣುತ್ತಿರುವ ಮನೋಹರೆಯಾದ ಕಾವೇರಿಯನ್ನು ಸಮುದ್ರರಾಜನು ವಿವಾಹ ಮಾಡಿಕೊಳ್ಳುತ್ತಾನೆ. ತನ್ನ ಹತ್ತಿರಕ್ಕೆ ಸೇರಿಸಿಕೊಳ್ಳುತ್ತಾನೆ. ಈ ಮಹೋತ್ಸವ ಸಮಯದಲ್ಲಿ ಕಾವೇರಿಯ ಎರಡೂ ದಡಗಳಲ್ಲಿ ಬೆಳೆದಿರುವ ಸಂಪಿಗೆಯ ಮರಗಳಲ್ಲಿ ಅರಳಿರುವ ಬಂಗಾರದ ಬಣ್ಣದ ಸುವಾಸನೆಯಾದ ಸಂಪಿಗೆ ಹೂವುಗಳು ವಿವಾಹ ಮಹೋತ್ಸವಕ್ಕಾಗಿ ಹಚ್ಚಿರುವ ಸಾಲು ದೀಪಗಳಂತೆ ಶೋಭಿಸುತ್ತವೆ. ಇಲ್ಲಿ ಉತ್ಪ್ರೇಕ್ಷಾಲಂಕಾರವಿದೆ.

**ಅವತಾರಿಕೆ :** ಈಗ ಕವಿಗಳು ಕಾವೇರಿ ನದಿಗೆ ಮರುದ್ ವೃಧಾ ಎಂಬ ಹೆಸರು ಹೇಗೆ ಸಾರ್ಥಕವಾಗಿದೆಯೆಂದು ಸಮರ್ಥನಾಪೂರ್ವಕವಾಗಿ ವರ್ಣಿಸುತ್ತಾರೆ.

**ಶೋಷಕೇಣ ಮರುತಾ ಕಥಂ ನು ಯಾ ವರ್ಧಿತಾ ಚ ಕಥಮಿತ್ಯವಿಸ್ಮಯಃ ।**
**ಸಾ ಯದುಲ್ಲಸದನಂತರೂಪಿಣೀ ಯಾತಿ ರಂಗಪತಿಶೇಷತಾಂ ಸದಾ ॥೨೭॥**

**ತಾತ್ಪರ್ಯ :** ಕಾವೇರಿಗೆ ವೇದಗಳಲ್ಲಿ ಮರುದ್ವೃಧಾ ಎಂಬ ಹೆಸರಿದೆ. (ಇಮಂ ಮೇ ಗಂಗೇ ಯಮುನೇ ಸರಸ್ವತಿ ಶುತುದ್ರಿಸ್ತೋಮಂ ಸಚತಾ ಪರುಷ್ಣ್ಯಾ । ಅಸಿಕ್ನ್ಯಾ ಮರುದ್ವೃಧೇ ವಿತಸ್ತಯಾರ್ಜಿಕೀಯೇ ಶೃಣುಹ್ಯಾಸುಷೋಮಯಾ ॥ (ಋ 8–3–6) ಮರುತ್=ವಾಯುವಿನಿಂದ, ವೃಧಾ = ವೃದ್ಧಿ ಹೊಂದಿರುವವಳು, ಎಂದು ಆ ಶಬ್ದದ ಅರ್ಥವಾಗುತ್ತದೆ. ಆದರೆ ನೀರು ಮುಂತಾದ್ದರ ತೇವವನ್ನು ಅಪಹರಿಸಿ ಒಣಗಿಸುವ ಸ್ವಭಾವವುಳ್ಳವಾಯುವಿನಿಂದ ಕಾವೇರಿಯು

ಹೇಗೆ ವೃದ್ಧಿ ಹೊಂದಿದಳು? ಎಂದು ಆ ಶಬ್ದಾರ್ಥವನ್ನು ವಿಚಾರ ಮಾಡಿದವರಿಗೆ ಆಶ್ಚರ್ಯವಾಗಬಹುದು. ಆದರೆ ಆ ರೀತಿಯ ಆಶ್ಚರ್ಯವು ಬೇಕಾಗಿಲ್ಲ. ಆ ಕಾವೇರಿಯು ಪ್ರಕಾಶಿತವಾದ ಅನಂತರೂಪ ಉಳ್ಳವಳಾಗಿದ್ದಾಳೆ. ಒಬ್ಬಳೇ ಕಾವೇರಿಯು ಅನಂತ ರೂಪಗಳಿಂದ (ಅಸಂಖ್ಯ ಶಾಖೆಗಳಿಂದ) ಪ್ರವಹಿಸುತ್ತಾಳೆ. ಪ್ರಕಾಶಮಾನವಾದ ಅನಂತನೆಂಬ ಸರ್ಪನ ರೂಪವುಳ್ಳವಳು ಇವಳು ಎಂದು ಉಲ್ಲಸಿತಾನಂತ ರೂಪವುಳ್ಳ ಕಾವೇರಿಯು ಯಾವಾಗಲೂ ರಂಗನಾಥಸ್ವಾಮಿಯ ಸೇವಕತನವನ್ನೇ ಹೊಂದಿದ್ದಾಳೆ. ರಂಗನಾಥಸ್ವಾಮಿಗೆ ಶೇಷಭಾವವನ್ನು ಹೊಂದಿದ್ದಾಳೆ. ಹೀಗಿರುವಾಗ ಅವಳು ಮರುತನಿಂದ (ವಾಯುವಿನಿಂದ) ವೃಧಾ = ವೃದ್ಧಿ ಹೊಂದುವವಳು ಏಕೆ ಆಗಲಾರಳು? ಕಾವೇರಿಯು ಅನಂತ ರೂಪವುಳ್ಳವಳು. ಅನಂತನೇ ಶೇಷನು, ಅನಂತರೂಪವುಳ್ಳವಳು ಪರಮಾತ್ಮನ ಶೇಷಭಾವವನ್ನು ಹೊಂದಿದ ಮೇಲೆ ಗಳಿಕೆಯಿಂದ ವೃದ್ಧಿ ಹೊಂದುವುದು ಆಶ್ಚರ್ಯಕರವಲ್ಲ. ಸರ್ಪಗಳಿಗೆ ಮರುತನೇ (ವಾಯುವೇ) ಆಹಾರವಷ್ಟೇ! ಹೀಗೆ ಮಾರುತನು ಶೋಷಕನಾದರೂ ಕಾವೇರಿಯು ಅನಂತರೂಪಿಣಿಯಾಗಿ ಪರಮಾತ್ಮನ ಶೇಷಭಾವವನ್ನು ಮಾರುತ ರೂಪವಾದ ಆಹಾರದಿಂದ ವೃದ್ಧಿ ಹೊಂದುವುದು ಯುಕ್ತವೇ ಆಗಿದೆ. ಇಲ್ಲಿ ಶೋಷಕನಾದ ಮಾರುತನಿಂದ ಕಾವೇರಿಯು ವೃದ್ಧಿ ಹೊಂದುವುದಾದರೂ ಹೇಗೆ ಎಂಬ ವಿಷಯವನ್ನು ಉತ್ತರಾರ್ಧದಿಂದ ಸಮರ್ಥಿಸಿರುವುದರಿಂದ ಕಾವ್ಯಲಿಂಗಾಲಂಕಾರ.

**ಸಮರ್ಥನೀಯಸ್ಯಾರ್ಥಸ್ಯ ಕಾವ್ಯಲಿಂಗಂ ಸಮರ್ಥನಂ । ಜಿತೋಽಸಿ ಮಂದ ಕಂದರ್ಪ ಮಚ್ಚಿತ್ತೇಽಸ್ತಿ ತ್ರಿಲೋಚನಃ ॥** ಇವು ಲಕ್ಷಣ ಮತ್ತು ಲಕ್ಷ್ಯಗಳು. ಸಮರ್ಥನೀಯವಾದ ವಿಷಯವನ್ನು ಸಮರ್ಥಿಸಿದರೆ ಅದು ಕಾವ್ಯಲಿಂಗಾಲಂಕಾರವು "ದಡ್ಡನಾದ ಮನ್ಮಥನೇ ನೀನು ಸೋತೆ" ಎಂಬ ಅರ್ಥವನ್ನು ನನ್ನ ಮನಸ್ಸಿನಲ್ಲಿ ಮೂರು ಕಣ್ಣಿನವನು. (ಹಣೆಯ ಕಣ್ಣಿನಿಂದ (ನಿನ್ನನ್ನು) ಮನ್ಮಥನನ್ನು ಸುಟ್ಟವನು) ಇದ್ದಾನೆ ಎಂದು ಸಮರ್ಥಿಸಿದ್ದರಿಂದ ಕಾವ್ಯಲಿಂಗಾಕಾರವು. ಇದರಂತೆ ಪ್ರಕೃತ ಶ್ಲೋಕದಲ್ಲಿಯೂ ತಿಳಿಯಬೇಕು.

**ಅವತಾರಿಕೆ :** ಕವಿಗಳು ಶ್ರೀರಂಗನಾಥನು ಕಾವೇರಿಯ ಹೃದಯದಲ್ಲಿ ಪ್ರೇಮದಿಂದ ವಾಸಿಸಲು ಕಾರಣವೇನು? ಎಂಬುದನ್ನು ವರ್ಣಿಸುತ್ತಾರೆ.

**ಸಹ್ಯಭೂಧರಸರಸ್ಸರೋಜಿನೀಸಾರಸಶ್ರಿತಮರಂದಸಂತತಿಮ್ ।**
**ಯಾ ಬಿಭರ್ತಿ ಪರಥಾ ರಮೇತ ಕಿಂ ತತ್ರ ರಂಗಪತಿಭೃಂಗತಲ್ಲಜಃ ॥೨೮॥**

**ತಾತ್ಪರ್ಯ :** ಕಾವೇರಿಯು ಸಹ್ಯ ಪರ್ವತದಲ್ಲಿ ಹುಟ್ಟುತ್ತಾಳೆ. ಅಲ್ಲಿ ಅನೇಕ ಸರೋವರಗಳಿವೆ. ಅಲ್ಲಿ ತಾವರೆ ಹೂವುಗಳು ರಾಶಿ ರಾಶಿಯಾಗಿರುತ್ತವೆ. ಈ ತಾವರೆ ಹೂವುಗಳ ಸಿಹಿಯಾದ ಮಕರಂದ ರಸವನ್ನು ಕಾವೇರಿಯೂ ತನ್ನ ಜಲದಲ್ಲಿ ಬೆರೆಸಿ ಹೊತ್ತು ತರುತ್ತಾಳೆ. ಹೀಗೆ ಮಕರಂದ ಮಿಶ್ರಿವಾದ ಸಿಹಿಯಾದ ನೀರಿನ ಮಧ್ಯದಲ್ಲಿ ಮಕರಂದ ಪ್ರಿಯನಾದ ರಂಗನಾಥ ಭ್ರಮರನು(ದುಂಬಿಯಂತೆ ನೀಲವರ್ಣದ ರಂಗನಾಥನು) ವಿಹರಿಸುತ್ತಿದ್ದಾನೆ. ಹೀಗಲ್ಲದಿದ್ದರೆ

ಮಧುರ ಭಾವ ಪ್ರಿಯನಾದ ಆ ಮಧುಹರಿಯು ಅಲ್ಲೇಕೆ ವಾಸ ಮಾಡುತ್ತಿದ್ದಾನೆ? ದುಂಬಿಯು ಮಕರಂದವಿಲ್ಲವಾದಲ್ಲಿ ವಿಹರಿಸುವುದಿಲ್ಲವಷ್ಟೆ. ಕಾವೇರಿಯು ಜಲದ ಮೂಲಕ ಪರಮಾತ್ಮನನ್ನು ಆಕರ್ಷಿಸುವ ಮಧುರಭಾವ ಉಳ್ಳವಳು ಎಂದು ಅಭಿಪ್ರಾಯ.

**ಅವತಾರಿಕೆ :** ಶ್ರೀರಾಘವೇಂದ್ರತೀರ್ಥರು ಕಾವೇರೀತೀರದಲ್ಲಿ ಮೃತ್ತಿಕಾಶೌಚ ದಂತಧಾವನ ಕಾರ್ಯಗಳನ್ನು ಮಾಡಿದರೆಂದು ವಿವರಿಸುತ್ತಾರೆ.

**ತತ್ತಟೋಪವನಸೀಮ್ನಿ ವಾಹನಾತ್ ಸೋಽವರುಹ್ಯ ಯಮಿಧುರ್ಯಚಂದ್ರಮಾಃ ।**
**ಕ್ಷಾಲಯನ್ ಕರಪದಂ ಸಮೃಜ್ಜಲೈರ್ದಂತಪಂಕ್ತಿಪರಿಶೋಧನಂ ವ್ಯಧಾತ್ ॥೨೯॥**

**ತಾತ್ಪರ್ಯ :** ಯತಿಶ್ರೇಷ್ಠರಲ್ಲಿ ಶ್ರೇಷ್ಠರಾದ ಶ್ರೀರಾಘವೇಂದ್ರ ಗುರುಸಾರ್ವಭೌಮರು ಕಾವೇರಿ ನದಿಯ ತೀರದಲ್ಲಿರುವ ಉದ್ಯಾನವನ ಪ್ರದೇಶದಲ್ಲಿ ಡೋಲಿಯಿಂದ ಇಳಿದರು. ಅನಂತರ ಮಣ್ಣಿನಿಂದ ಸಹಿತವಾದ ನೀರಿನಿಂದ ಕೈಕಾಲುಗಳನ್ನು ತೊಳೆದುಕೊಂಡರು. ಆಮೇಲೆ (ಮಾವಿನ ಎಲೆಗಳಿಂದ) ಹಲ್ಲುಗಳ ಸಾಲುಗಳನ್ನು ಚೆನ್ನಾಗಿ ತೊಳೆದುಕೊಂಡರು.

**ಅವತಾರಿಕೆ :** ಶ್ರೀರಾಘವೇಂದ್ರಸ್ವಾಮಿಗಳು ಸ್ನಾನಾಂಗವಾದ ಮಂತ್ರಗಳ ಜಪ ಮಾಡಿದುದನ್ನು ವರ್ಣಿಸುತ್ತಾರೆ.

**ಕಲ್ಪಿತಾಚಮನಮತ್ರ ಸಾದರಂ ಸ್ನಾನಕರ್ಮ ಕುರುತೇ ಸ್ಮ ಶಾಸ್ತ್ರತಃ ।**
**ಅಷ್ಟಷಟ್ದ್ವಿಕಷಡಕ್ಷರೈರ್ಹರೇರ್ಮಾನಿತೈರ್ಮನುವರೈಸ್ತ್ರಿಧಾ ಕ್ರಮಾತ್ ॥೩೦॥**

**ತಾತ್ಪರ್ಯ :** ತದನಂತರ ಶ್ರೀರಾಘವೇಂದ್ರ ಗುರುವರ್ಯರು ಸ್ನಾನಾಂಗವಾದ ಆಚಮನವನ್ನು ಕಾವೇರಿಯಲ್ಲಿ ವಿಧಿವತ್ತಾಗಿ ಮಾಡಿದರು. ಅನಂತರ ಸಂಕಲ್ಪವನ್ನು ಮಾಡಿ ನಾರಾಯಣಾಷ್ಟಾಕ್ಷರ ಮಂತ್ರ, ವಾಸುದೇವ ದ್ವಾದಶಾಕ್ಷರ ಮಂತ್ರ, ವಿಷ್ಣುಷಡಕ್ಷರ ಮಂತ್ರ ಈ ಮೂರು ಶ್ರೇಷ್ಠವಾದ ಮಂತ್ರಗಳನ್ನು ಮೂರು ಆವೃತ್ತಿ ಜಪ ಮಾಡಿ ಸ್ನಾನವನ್ನು ಮಾಡಿದರು.

**ಅವತಾರಿಕೆ :** ಈಗ ಕವಿಗಳು ಶ್ರೀರಾಘವೇಂದ್ರ ಗುರುಸಾರ್ವಭೌಮರ ಸ್ನಾನ ಕ್ರಮದ ವರ್ಣನೆಯನ್ನು ಮುಂದುವರೆಸುತ್ತಾರೆ.

**ಜಪ್ಯಸೂಕ್ತಜಪಶುದ್ಧವಾರಿಣಾ ಪ್ರೋಕ್ಷಯನ್ ಯತಿವರಃ ಶಿರೋ ನಿಜಮ್ ।**
**ಸ್ನಾತವಾನ್ ವಿಹಿತಮೃದ್ವಿಲೇಪನೋಽನುಚ್ಛ್ವಸಂಸ್ತ್ರಿರಘಮರ್ಷಣಂ ಜಪನ್ ॥೩೧॥**

**ತಾತ್ಪರ್ಯ :** ಶ್ರೀರಾಘವೇಂದ್ರ ಗುರುಗಳು ಸ್ನಾನ ಕಾಲದಲ್ಲಿ ಜಪ ಮಾಡಬೇಕಾದ ಸೂಕ್ತಗಳನ್ನು ಜಪಿಸಿ, ನೀರನ್ನು ಪವಿತ್ರವನ್ನಾಗಿ ಮಾಡಿದರು. ಆ ನೀರನ್ನು ತಮ್ಮ ಶಿರಸ್ಸಿಗೆ ಪ್ರೋಕ್ಷಿಸಿಕೊಂಡರು. ನಂತರದಲ್ಲಿ ದೇಹದ ಆಯಾ ಭಾಗಕ್ಕೆ ಮೃತ್ತಿಕೆಯನ್ನು ಲೇಪಿಸಿಕೊಂಡರು.

ನೀರಿನಲ್ಲಿ ಮುಳುಗಿ ಶ್ವಾಸಬಂಧನ ಮಾಡಿ ಮೂರು ಬಾರಿ ಅಘಮರ್ಷಣ ಮಂತ್ರವನ್ನು ಜಪ ಮಾಡಿದರು. ಈ ರೀತಿಯಾದ ಕ್ರಮದಲ್ಲಿ ಸ್ನಾನ ಮಾಡಿದರು.

**ಅವತಾರಿಕೆ :** ಸ್ನಾನಾನಂತರದಲ್ಲಿ ಶ್ರೀರಾಘವೇಂದ್ರ ಗುರುಗಳು ಏನು ಮಾಡಿದರು ಎಂಬುದನ್ನು ಕವಿಗಳು ವರ್ಣಿಸುತ್ತಾರೆ.

**ಉಚ್ಚರನ್ ಪ್ರಣವಮುತ್ಥಿತೋಽಸಿಚತ್ ಸ್ವಾತ್ಮಗಂ ಪುರುಷಸೂಕ್ತತೋ ಹರಿಮ್ ।**
**ವಿಷ್ಣುಪಾದಸಲಿಲಂ ಪಿಬನ್ ಸುರಾಂಸ್ತರ್ಪಿತಾನಕೃತ ಮಂತ್ರವಾರಿಭಿಃ ॥೩೨॥**

**ತಾತ್ಪರ್ಯ :** ತದನಂತರದಲ್ಲಿ ಶ್ರೀರಾಘವೇಂದ್ರತೀರ್ಥರು "ಓಂ" ಎಂದು ಪ್ರಣವ ಮಂತ್ರವನ್ನು ಪಠಿಸುತ್ತಾ ನೀರಿನಿಂದ ಮೇಲಕ್ಕೆ ಎದ್ದು (ನೀರಿನಲ್ಲಿಯೇ ತಲೆ ಎತ್ತಿ) ತಮ್ಮಲ್ಲಿ ಅಂತರ್ಯಾಮಿಯಾಗಿರುವ ಶ್ರೀಮನ್ನಾರಾಯಣನನ್ನು ಪುರುಷಸೂಕ್ತ ಮಂತ್ರದಿಂದ ಅಭಿಷೇಕಿಸಿದರು. (ಸಿಂಚಯೇತ್ ಪುರುಷಸೂಕ್ತೇನ ಸ್ವದೇಹಸ್ಥಂ ಹರಿಂ ಸ್ಮರನ್ ಎಂಬುದಾಗಿ ಸದಾಚಾರಸ್ಮೃತಿಯಲ್ಲಿ ಹೇಳಿರುವಂತೆ ಪುರುಷಸೂಕ್ತದಿಂದ ತಮ್ಮ ಅಂತರ್ಯಾಮಿಯಾದ ಶ್ರೀಹರಿಗೆ ಅಭಿಷೇಕವನ್ನು ಮಾಡಿದರು ಎಂದು ಅಭಿಪ್ರಾಯ). ಅನಂತರ ಶಾಲಿಗ್ರಾಮ ತೀರ್ಥವನ್ನು (ನಿರ್ಮಾಲ್ಯ ತೀರ್ಥವನ್ನು) ತಾವು ಸ್ವೀಕರಿಸಿದರು. ಮಂತ್ರಯುಕ್ತವಾದ ಜಲದಿಂದ ದೇವತೆಗಳಿಗೆ ತರ್ಪಣವನ್ನು ಕೊಟ್ಟರು.

**ಅವತಾರಿಕೆ :** ಶ್ರೀರಾಘವೇಂದ್ರಸ್ವಾಮಿಗಳು ಕಾಷಾಯ ವಸ್ತ್ರವನ್ನು ಧರಿಸಿ ಗೋಪೀಚಂದನದಿಂದ ದ್ವಾದಶ ಊರ್ಧ್ವಪುಂಡ್ರಗಳನ್ನು, ಪಂಚಮುದ್ರೆಗಳನ್ನು ಧಾರಣೆ ಮಾಡಿದುದನ್ನು ಕವಿಗಳು ವರ್ಣಿಸುತ್ತಾರೆ.

**ಸಾಲಮಲ್ಲಕಮವಸ್ತ ಲೋಹಿತೇ ವಾಸಸೀ ತದನು ಸಂಯಮೀಶ್ವರಃ ।**
**ಊರ್ಧ್ವಪುಂಡ್ರಮತನಿಷ್ಟ ಗೋಪಿಕಾಚಂದನೇನ ಸಹಪಂಚಮುದ್ರಿಕಮ್ ॥೩೩॥**

**ತಾತ್ಪರ್ಯ :** ಯತಿಗಳಲ್ಲಿ ಶ್ರೇಷ್ಠರಾದ ಶ್ರೀರಾಘವೇಂದ್ರ ಗುರುಗಳು ಸ್ನಾನ ಮಾಡಿದ ನಂತರದಲ್ಲಿ ಕಾವಿ ಬಣ್ಣದ ಕೌಪೀನವನ್ನು ಧರಿಸಿ ನಂತರ ಕಾವಿ ಬಣ್ಣದ ಎರಡು ಬಟ್ಟೆಗಳನ್ನೂ ಉಟ್ಟುಕೊಂಡರು ಅನಂತರ ಗೋಪೀಚಂದನವನ್ನು ತೇದು ಹನ್ನೆರಡು ನಾಮಗಳನ್ನು ಹಣೆ ಮುಂತಾದ ಸ್ಥಳಗಳಲ್ಲಿ ಧರಿಸಿ, ಆ ಗೋಪೀಚಂದನದಿಂದಲೇ ಪಂಚಮುದ್ರೆಗಳನ್ನೂ ಆಯಾ ಸ್ಥಳಗಳಲ್ಲಿ ಹಾಕಿಕೊಂಡರು.

**ಅವತಾರಿಕೆ :** ಶ್ರೀ ರಾಘವೇಂದ್ರತೀರ್ಥರು ಅರ್ಘ್ಯಪ್ರದಾನ ಮಾಡಿ ಮಂತ್ರಗಳ ಜಪ ಮಾಡಿದುದನ್ನು ಕವಿಗಳು ವರ್ಣಿಸುತ್ತಾರೆ.

**ಅರ್ಘ್ಯದಾನವಿಧಿಮರ್ಘ್ಯವೈಭವಃ ಸಂವಿಧಾಯ ಹೃದಿ ವೇದಮಾತರಮ್ ।**
**ಸಾದರಂ ತದನು ತಾರಕಂ ತತೋ ಮಂತ್ರರತ್ನಮಪಿ ಮೌನತೋಽಜಪತ್ ॥೩೪॥**

**ತಾತ್ಪರ್ಯ :** ಅತ್ಯಂತ ಶ್ರೇಷ್ಠವಾದ ಮಹಿಮೆಯುಳ್ಳ ಶ್ರೀರಾಘವೇಂದ್ರ ಯತಿವರರು ತದನಂತರ ಅರ್ಘ್ಯಪ್ರದಾನ ಮಾಡಿದರು. ಅನಂತರದಲ್ಲಿ ಗಾಯತ್ರಿ ಮಂತ್ರವನ್ನೂ, ಮಂತ್ರಗಳಲ್ಲಿ ಶ್ರೇಷ್ಠವಾದ ಪ್ರಣವ ಮಂತ್ರವನ್ನೂ ಮೌನದಿಂದ ಜಪಿಸಿದರು.

**ಅವತಾರಿಕೆ :** ಶ್ರೀರಾಘವೇಂದ್ರ ಯತಿವರರು ಭಾಗವತಾದಿ ಕಥಾಶ್ರವಣ ಮಾಡುತ್ತಾ, ಶ್ರೀವೇದವ್ಯಾಸದೇವರ ಪೂಜೆ ಮಾಡಿದುದನ್ನು ಕವಿಗಳು ತಿಳಿಸುತ್ತಾರೆ.

**ತತ್ತಟೋಪವನಮೇತ್ಯ ಪಾವನೀಃ ಸೋಽಶೃಣೋದ್ ದ್ವಿಜಮುಖಾತ್ ಕಥಾ ಹರೇಃ ।**
**ಆದಿದೇಶಿಕಸಮರ್ಚಿತೋಪಲವ್ಯಾಸಮೂರ್ತಿಪರಿಪೂಜನೋತ್ಸುಕಃ ॥೩೫॥**

**ತಾತ್ಪರ್ಯ :** ಶ್ರೀರಾಘವೇಂದ್ರ ಸ್ವಾಮಿಗಳು ಕಾವೇರೀ ನದಿಯ ತೀರದ ಉಪವನಕ್ಕೆ ಬಂದರು. ಶ್ರೀಮದಾನಂದತೀರ್ಥ ಭಗವತ್ಪಾದರು ಪೂಜಿಸಿದ್ದ ಶ್ರೀವೇದವ್ಯಾಸದೇವರ ಶಿಲಾಮಯವಾದ ವ್ಯಾಸಮುಷ್ಟಿ ಎಂಬ ಹೆಸರಿನ ಪ್ರತಿಮೆಯನ್ನು ಪೂಜಿಸತೊಡಗಿದರು. ಆ ಸಮಯದಲ್ಲಿ ಬ್ರಾಹ್ಮಣ ಮುಖದಿಂದ ಪವಿತ್ರವಾದ ಭಾಗವತಾದಿ ಕಥೆಗಳನ್ನು ಶ್ರವಣ ಮಾಡುತ್ತಿದ್ದರು.

**ಅವತಾರಿಕೆ :** ಗುರುಗಳಾದ ಶ್ರೀರಾಘವೇಂದ್ರತೀರ್ಥರು ಪರಮಾತ್ಮನಿಗೆ ಕ್ಷೀರಾಭಿಷೇಕವನ್ನು ಮಾಡಿದುದನ್ನು ವರ್ಣಿಸುತ್ತಾರೆ.

**ಅಭ್ಯಷಿಂಚದಥ ಪಂಕಜೇಕ್ಷಣಂ ವಾರಿಮಧ್ಯಕೃತದುಗ್ಧಧಾರಯಾ ।**
**ಸಂನ್ಯವೇದಯದಯಂ ಮನೋಹರಂ ಮೌದ್ಗಮನ್ನಮುರುಧಾಽಧಿಕಂ ನವಮ್ ॥೩೬॥**

**ತಾತ್ಪರ್ಯ :** ಶ್ರೀರಾಘವೇಂದ್ರಸ್ವಾಮಿಗಳು ಭಾಗವತಾದಿ ಕಥಾಶ್ರವಣ ಮಾಡಿದ ನಂತರದಲ್ಲಿ ಕಮಲನಯನನಾದ ಶ್ರೀಹರಿಪರಮಾತ್ಮನಿಗೆ ಜಲದಿಂದ ಅಭಿಷೇಕ ಮಾಡಿ, ಅನಂತರ ಮಧ್ಯದಲ್ಲಿ ಕ್ಷೀರದಿಂದ ಅಭಿಷೇಕ ಮಾಡಿ ಪುನಃ ಜಲಾಭಿಷೇಕದಿಂದ ಪೂಜಿಸಿದರು. ತದನಂತರ ಪುಷ್ಪ ಗಂಧಾದಿಗಳನ್ನು ಸಮರ್ಪಿಸಿ ಆಗ ತಾನೇ ಸಿದ್ಧಪಡಿಸಿದ ಉತ್ತಮವಾದ, ಮನೋಹರವಾದ ಹೆಸರುಬೇಳೆಯ ಹುಗ್ಗಿಯನ್ನು ಶ್ರೀಹರಿಪರಮಾತ್ಮನಿಗೆ ನೈವೇದ್ಯವಾಗಿ ಅರ್ಪಿಸಿದರು.

**ಅವತಾರಿಕೆ :** ಶ್ರೀರಾಘವೇಂದ್ರತೀರ್ಥರು ಶ್ರೀವಿಜಯೀಂದ್ರತೀರ್ಥರ ಬೃಂದಾವನಕ್ಕೆ ವಂದಿಸಿ ಶ್ರೀಮಠದ ಕಡೆಗೆ ದಯಮಾಡಿಸಿದುದನ್ನು ಕವಿಗಳು ವರ್ಣಿಸುತ್ತಾರೆ.

**ಸಂಪ್ರಣಮ್ಯ ವಿಜಯೀಂದ್ರಯೋಗಿನಂ ತಾಪಸೋಪಮಬುಧವ್ರಜಾವೃತಃ ।**
**ಸೋಽಧಿರುಹ್ಯ ಮಣಿರಮ್ಯಪಾದುಕೇ ದೇಶಿಕೋ ಮಠಮಥ ಪ್ರತಸ್ಥಿವಾನ್ ॥೩೭॥**

**ತಾತ್ಪರ್ಯ :** ಶ್ರೀರಾಘವೇಂದ್ರ ಗುರುರಾಜರು ವೃಂದಾವನದಲ್ಲಿ ಸನ್ನಿಹಿತರಾಗಿರುವ ಶ್ರೀವಿಜಯೀಂದ್ರತೀರ್ಥ ಶ್ರೀಪಾದಂಗಳವರಿಗೆ ನಮಸ್ಕರಿಸಿದರು. ತಮ್ಮ ಸುತ್ತಲೂ ಮುನಿಗಳಂತಿರುವ ಅನೇಕ ಪಂಡಿತರುಗಳು ನಡೆದು ಬರುತ್ತಿರಲು ಶ್ರೀರಾಘವೇಂದ್ರಸ್ವಾಮಿಗಳು ರತ್ನಗಳಿಂದ ಶೋಭಿತವಾದ ಎರಡು ಪಾದುಕೆಗಳನ್ನು ಧರಿಸಿ ನಡೆದು ಬರುತ್ತಾ ಅಲ್ಲಿಂದ ತಮ್ಮ ಶ್ರೀಮಠದತ್ತ ಹೊರಟರು.

**ಅವತಾರಿಕೆ :** ಈಗ ಕವಿಗಳು ಶ್ರೀರಾಘವೇಂದ್ರಸ್ವಾಮಿಗಳು ಶ್ರೀಮಠದ ಕಡೆಗೆ ನಡೆದು ಬರುತ್ತಿರುವಾಗ ನಡೆದ ವೈಭವವನ್ನು ವರ್ಣಿಸುತ್ತಾರೆ.

**ಶಂಖದುಂಧುಭಿಮೃದಂಗಕಾಹಲೀಮಡ್ಡುದಿಂಡಿಮಸುಶೃಂಗಜರ್ಝರೈಃ ।**
**ಚಕ್ರವಾದ್ಯನಿನದೈಶ್ಚ ತಜ್ಜನಾಃ ಪೂರಯಂತಿ ಪುರತೋಽಸ್ಯ ದಿಙ್ಮುಕಮ್ ॥೩೮॥**

**ತಾತ್ಪರ್ಯ :** ಶ್ರೀರಾಘವೇಂದ್ರ ಗುರುಸಾರ್ವಭೌಮರು ಶ್ರೀಮಠದ ಕಡೆಗೆ ದಯಮಾಡಿಸುತ್ತಿರುವಾಗ, ಅವರ ಮುಂಭಾಗದಲ್ಲಿ ಸೇವಕಜನರು ಶಂಖ, ನಗಾರಿ, ಮೃದಂಗ, ಕಹಳೆ, ಢಿಕ್ಕಿ, ಡಿಮಕಿ, ಉತ್ತಮವಾದ ಕೊಂಬು, ಝಾಯಿ (ಝಲ್ಲರೀ) ಚಕ್ರ ಮುಂತಾದ ವಾದ್ಯಗಳನ್ನು ಬಾರಿಸುತ್ತಾ ಬರುತ್ತಿದ್ದರು. ಆ ವಾದ್ಯದ ಧ್ವನಿಗಳಿಂದ ಎಲ್ಲ ದಿಕ್ಕುಗಳೂ ತುಂಬಿ ಹೋಗುತ್ತಿದ್ದವು.

**ಅವತಾರಿಕೆ :** ಶ್ರೀ ರಾಘವೇಂದ್ರತೀರ್ಥರು ಶ್ರೀಮಠವನ್ನು ಪ್ರವೇಶಿಸಿದರು ಎಂದು ತಿಳಿಸುತ್ತಾರೆ.

**ಪಾವಯನ್ನಥ ಮಹೀಂ ಪದೇ ಪದೇ ಪಾರ್ವತೀಶಮಭಿವಂದ್ಯ ಪದ್ಧತೌ ।**
**ಪ್ರಾವಿಶತ್ಸ ಸುರವಿಷ್ಟಪಾಗಮೋ ಮೂರ್ತಿಮಾನಿವ ಮಠಂ ತಥಾಗಮಃ ॥೩೯॥**

**ತಾತ್ಪರ್ಯ :** ಶ್ರೀರಾಘವೇಂದ್ರ ಗುರುಗಳು ತಮ್ಮ ಮಠದ ಕಡೆಗೆ ವೈಭವದಿಂದ ಪಯಣಿಸುತ್ತಿದ್ದಾಗ ಶರೀರಧಾರಿಯಾದ ಸುರಲೋಕದ ಕಲ್ಪವೃಕ್ಷವು ನಡೆದು ಹೋಗುತ್ತಿದೆಯೋ ಎಂಬಂತೆ ಭಾಸವಾಗುತ್ತಿತ್ತು. ಅವರು ಒಂದೊಂದು ಹೆಜ್ಜೆ ಮುಂದಿಟ್ಟಾಗಲೂ ಭೂಮಿಯ ಆ ಭಾಗವು ಪವಿತ್ರವಾಗುತ್ತಿತ್ತು. ಶ್ರೀಗುರುರಾಜರು ಶ್ರೀಮಠಕ್ಕೆ ಹೋಗುವ ದಾರಿಯಲ್ಲಿ ಪಾರ್ವತೀಪತಿಯಾದ ಪುರದೇವತೆಯಾದ ಕುಂಭೇಶ್ವರನಿಗೆ ಹೊರಗಿನಿಂದಲೇ ವಂದನೆ ಮಾಡಿ ಈ ರೀತಿಯಾದ ವೈಭವದಿಂದ ನಡೆದು ಬರುತ್ತಾ ತಮ್ಮ ಶ್ರೀವಿಜಯೀಂದ್ರಮಠವನ್ನು ಪ್ರವೇಶಿಸಿದರು.

**ಅವತಾರಿಕೆ :** ಶ್ರೀರಾಘವೇಂದ್ರ ಗುರುಸಾರ್ವಭೌಮರು ಬ್ರಹ್ಮಸೂತ್ರಭಾಷ್ಯ ಪ್ರವಚನವನ್ನು ಪ್ರಾರಂಭಿಸಿದುದನ್ನು ಕವಿಗಳು ವರ್ಣಿಸುತ್ತಾರೆ.

**ಶಾಂತಿವಾಚನಪುರಸ್ಸರಂ ವರಂ ಭಾಷ್ಯಮೇವ ಸ ವಿಶಿಷ್ಯ ಸಂಸದಿ ।**
**ವ್ಯಾಕರೋತಿ ವಿದುಷಾಂ ನಿರಾಕರೋತ್ಯನ್ಯದರ್ಶನಕುಯುಕ್ತಿಸಂಹತಿಮ್ ॥೪೦॥**

**ತಾತ್ಪರ್ಯ :** ಶ್ರೀರಾಘವೇಂದ್ರ ಗುರುಸಾರ್ವಭೌಮರು ತಮ್ಮ ಶ್ರೀವಿಜಯೀಂದ್ರ ಮಠವನ್ನು ಪ್ರವೇಶಿಸಿ ಅಲ್ಲಿ ಯೋಗ್ಯವಾದ ತಮ್ಮ ಆಸನದಲ್ಲಿ ಕುಳಿತರು. ಅವರ ಸುತ್ತಲೂ ವೇದಾಂತಶ್ರವಣ ಮಾಡುವ ಅಪೇಕ್ಷೆಯುಳ್ಳ ಅನೇಕ ಪಂಡಿತರುಗಳು ವೃತ್ತಾಕಾರದಲ್ಲಿ ಕುಳಿತರು. ಶ್ರೀಗುರುವರ್ಯರು ಮೊದಲು "ಶನ್ನೋ ಮಿತ್ರಃ ಶಂ ವರುಣಃ" ಮುಂತಾದ ಶಾಂತಿಪಾಠ ಮಂತ್ರಗಳನ್ನು ತಾವು ಸ್ವಗತದಲ್ಲಿ ಹೇಳಿಕೊಂಡು ಅದನ್ನು ಶಿಷ್ಯರುಗಳಿಂದಲೂ ಪುನರಾವರ್ತನೆ ಮಾಡಿಸಿ ತದನಂತರದಲ್ಲಿ ಸಿದ್ಧಾಂತ ಪ್ರತಿಷ್ಠಾಪನಾಚಾರ್ಯರಾದ ಜಗದ್ಗುರುಗಳಾದ ಶ್ರೀಮನ್ಮಧ್ವಾಚಾರ್ಯರಿಂದ ರಚಿತವಾದ ಶ್ರೀಮದ್ಬ್ರಹ್ಮಸೂತ್ರಭಾಷ್ಯವನ್ನು ಮೊದಲು ಪ್ರವಚನ ಮಾಡಲು ಪ್ರಾರಂಭಿಸಿದರು. ಈ ಸಂದರ್ಭದಲ್ಲಿ ಪರವಾದಿಗಳ ವೇದಾಂತ ಭಾಷ್ಯಾದಿಗಳಲ್ಲಿ ಬರುವ ಮತ್ತು ದ್ವೈತಸಿದ್ಧಾಂತಕ್ಕೆ ವಿರೋಧವಾದ ಕುಯುಕ್ತಿಗಳ ಸಮೂಹವನ್ನು ಶತಶಃ ಖಂಡಿಸುತ್ತಿದ್ದರು.

**ಅವತಾರಿಕೆ :** ಶ್ರೀ ರಾಘವೇಂದ್ರ ಗುರುವರ್ಯರು ಪ್ರತಿಜ್ಞೆ ಮಾಡಿದುದನ್ನು ಕವಿಗಳು ವರ್ಣಿಸುತ್ತಾರೆ.

**ಬ್ರಹ್ಮಸದ್ಗುಣಮದೋಷಮೀಕ್ಷಿತಂ ಗಮ್ಯಮಾಹುರಿಹ ಲಕ್ಷಣೈಃ ಕ್ರಮಾತ್ ।**
**ಸೂತ್ರಭಾಷ್ಯ ಇತಿ ತೇನ ಭಾಷಿತೇ ತತ್ರ ಕಶ್ಚನ ಸುಧೀರಚೋದಯತ್ ॥೪೧॥**

**ತಾತ್ಪರ್ಯ :** ಪರಬ್ರಹ್ಮವು ಅನಂತಕಲ್ಯಾಣ ಗುಣಭರಿತವಾದುದು. ಹೀಗೆ ಗುಣಪೂರ್ಣವಾದುದರಿಂದಲೇ ಆ ಪರಬ್ರಹ್ಮವು ದೋಷರಹಿತವಾಗಿದೆ. ಆ ಪರಬ್ರಹ್ಮವು ಸಾಕ್ಷಾತ್ಕರಿಸಲು, ತಿಳಿಯಲು ಯೋಗ್ಯವಾದುದು. ಬ್ರಹ್ಮಸೂತ್ರದಲ್ಲಿ ಈ ವಿಷಯವನ್ನು ಹೇಳಿದ್ದಾರೆ ಎಂಬುದಾಗಿ ಶ್ರೀಮದಾನಂದತೀರ್ಥ ಭಗವತ್ಪಾದರು ತಾವು ರಚಿಸಿರುವ ಸೂತ್ರಭಾಷ್ಯದಲ್ಲಿ ತಿಳಿಸಿರುತ್ತಾರೆ ಎಂದು ಪ್ರವಚನದ ಪ್ರಾರಂಭದಲ್ಲಿ ಶ್ರೀರಾಘವೇಂದ್ರತೀರ್ಥರು ಹೇಳಿದಾಗ ಆ ಸಭೆಯಲ್ಲಿ ಕುಳಿತಿದ್ದ ಓರ್ವ ಪಂಡಿತನು ಈ ರೀತಿಯಾಗಿ ಪ್ರಶ್ನೆ ಮಾಡಿದನು.

ಬ್ರಹ್ಮಮೀಮಾಂಸಶಾಸ್ತ್ರದ ಮೊದಲನೆಯ ಅಧ್ಯಾಯದಲ್ಲಿ "ಪರಬ್ರಹ್ಮನಾದ ಶ್ರೀಮನ್ನಾರಾಯಣನು ಗುಣಪೂರ್ಣನೆಂದೂ, ಎರಡನೆಯ ಅಧ್ಯಾಯದಲ್ಲಿ ದೋಷರಹಿತನೆಂದೂ, ಮೂರನೆಯ ಅಧ್ಯಾಯದಲ್ಲಿ ಶ್ರೀಮನ್ನಾರಾಯಣನು ಜ್ಞಾನಿಗಳಿಂದ ಸಾಕ್ಷಾತ್ಕರಿಸಲ್ಪಟ್ಟವನು, ಧ್ಯಾನಿಗಳಿಂದ ಜ್ಞೇಯನೆಂದೂ, ನಾಲ್ಕನೆಯ ಅಧ್ಯಾಯದಲ್ಲಿ ಬ್ರಹ್ಮಸಾಕ್ಷಾತ್ಕಾರ ಮಾಡಿಕೊಂಡು, ಅವನ ಪರಮಪ್ರಸಾದವನ್ನು ಪಡೆದವರಿಂದ ಅವನೇ ಗಮ್ಯನೆಂದೂ (ಹೊಂದಲ್ಪಡುವವನೆಂದೂ) ಹೇಳಿದೆ.

ಬ್ರಹ್ಮಸೂತ್ರದಲ್ಲಿ "**ಓಂ ಅಥಾತೋ ಬ್ರಹ್ಮಜಿಜ್ಞಾಸಾ ಓಂ**" ಎಂಬುದು ಮೊದಲನೆಯ ಸೂತ್ರ ಅಲ್ಲಿ ಅಥಃ=ಅಧ್ಯಯನ ಶಮದಮಾದಿ ರೂಪ ಅಧಿಕಾರ ಸಂಪತ್ತಿಯ ಅನಂತರದಲ್ಲಿ.

ಅತಃ=ಬ್ರಹ್ಮನ ಜಿಜ್ಞಾಸಾಜನ್ಯವಾದ ಅಪರೋಕ್ಷಜ್ಞಾನಜನ್ಯವಾದ ಪ್ರಸಾದದಿಂದ ಉಂಟಾಗುವ ಮೋಕ್ಷವೆಂಬ ಫಲವಿರುವುದರಿಂದ, ಓಂ=ಗುಣಪೂರ್ಣ ನಾದ, ಬ್ರಹ್ಮ=ವಿಷ್ಣುವಿನ, ಜಿಜ್ಞಾಸಾ=ಶ್ರವಣ ಮನನ ಧ್ಯಾನರೂಪವಾದ ವಿಚಾರವು, ಕರ್ತವ್ಯಾ=ಮಾಡಲ್ಪಡಬೇಕು" ಎಂದು ಮೊದಲನೆಯ ಸೂತ್ರದಲ್ಲಿ ವಿಷ್ಣುವೇ ಬ್ರಹ್ಮನೆಂದೂ, ಅವನ ವಿಚಾರವನ್ನು ಮಾಡಬೇಕೆಂದು ಹೇಳಿದೆ.

"**ಓಂ ಜನ್ಮಾದ್ಯಸ್ಯಯತಃ ಓಂ**" ಎಂಬ ಎರಡನೆಯ ಸೂತ್ರದಲ್ಲಿ ಅಸ್ಯ=ಈ ಪ್ರಮಿತವಾದ ಚರಾಚರಾತ್ಮಕವಾದ ಪ್ರಪಂಚಕ್ಕೆ, ಜನ್ಮಾದಿ=ಯಥಾಯೋಗ್ಯವಾಗಿ ಉತ್ಪತ್ತಿಪಾಲನಸಂಹಾರ, ನಿಯಮನ, ಜ್ಞಾನ, ಅಜ್ಞಾನ, ಬಂಧ, ಮೋಕ್ಷಗಳು, ಯತಃ=ಯಾವನಿಂದ ಆಗುತ್ತದೆಯೋ ಅವನೇ ಬ್ರಹ್ಮನು ಎಂದು ಹೇಳಿದ್ದಾರೆ.

"**ಓಂ ಶಾಸ್ತ್ರಯೋನಿತ್ವಾತ್ ಓಂ**" ಎಂಬ ಮೂರನೆಯ ಸೂತ್ರದಲ್ಲಿ ಅನುಮಾನ ಮತ್ತು ದುರಾಗಮಗಳಿಂದ ರುದ್ರಾದಿಗಳನ್ನು ಜಗತ್ಕಾರಣರೆಂದು ತಿಳಿಯಬಾರದು. ಏಕೆಂದರೆ ಜಗಜ್ಜನ್ಮಾದಿಕಾರಣತ್ವವನ್ನು ಋಗಾದಿ ಸಚ್ಛಾಸ್ತ್ರಗಳಿಂದ ಮಾತ್ರವೇ ತಿಳಿಯಬೇಕಾಗಿದೆ. ಸಚ್ಛಾಸ್ತ್ರಗಳಲ್ಲಿ ವಿಷ್ಣುವಿನ ಜಗಜ್ಜನ್ಮಾದಿಕಾರಣತ್ವವನ್ನು ಹೇಳಿದ್ದಾರೆ.

"**ಓಂ ತತ್ತು ಸಮನ್ವಯಾತ್ ಓಂ**" ಎಂಬ ನಾಲ್ಕನೆಯ ಸೂತ್ರದಲ್ಲಿ ಉಪಕ್ರಮ ಉಪಸಂಹಾರಾದಿ ತಾತ್ಪರ್ಯ ಲಿಂಗಗಳನ್ನು ಚೆನ್ನಾಗಿ ಪರ್ಯಾಲೋಚನೆ ಮಾಡಿದಾಗ ವಿಷ್ಣುವೇ ಮುಖ್ಯತಃ ಸಕಲಶಾಸ್ತ್ರಗಮ್ಯನು ಎಂದು ತಿಳಿದುಬರುತ್ತದೆ.

"**ಓಂ ಈಕ್ಷತೇರ್ನಾಶಬ್ದಂ ಓಂ**" ಎಂಬ ಐದನೆಯ ಸೂತ್ರದಲ್ಲಿ ಪ್ರತ್ಯಕ್ಷಾನುಮಾನಗಳಿಂದ ಅವೇದ್ಯನಾದ ಬ್ರಹ್ಮನನ್ನು, 'ಪರಾತ್ಪರಂ ಪುರಾಶಯಂ ಪುರುಷಮೀಕ್ಷತೇ" ಎಂದು ಈಕ್ಷಣ–ಜ್ಞಾನಕ್ಕೆ ವಿಷಯನೆಂದು ಹೇಳಿದ್ದರಿಂದ ಅವನು ಶಬ್ದದಿಂದ ವಾಚ್ಯನೇ ಆಗುತ್ತಾನೆ, ಅವಾಚ್ಯನಲ್ಲ, ಅನಿರ್ವಚನೀಯನಲ್ಲ, ಹೀಗೆ ಸಕಲ ಶಬ್ದಗಳಿಂದ ಪರಮಮುಖ್ಯ ವೃತ್ತಿಯಿಂದ ವಾಚ್ಯನಾದ ಪರಬ್ರಹ್ಮನು ಸಕಲಗುಣಪೂರ್ಣನಾಗಿದ್ದಾನೆ ಎಂದು ಬ್ರಹ್ಮಮೀಮಾಂಸೆಯ ಮೊದಲ ಐದು ಅಧಿಕರಣಗಳಲ್ಲಿ ಹೇಳಿದ್ದಾರೆ.

ಇದರಿಂದ ಸಮಗ್ರ ಬ್ರಹ್ಮಮೀಮಾಂಸಾಶಾಸ್ತ್ರದ ಸಾರವನ್ನು ಸಂಕ್ಷೇಪವಾಗಿ ತಿಳಿಸಿದಂತಾಯಿತು. ಈ ವಿಷಯವನ್ನು ಶ್ರೀಮನ್ಮಧ್ವಾಚಾರ್ಯರು ತಮ್ಮ ಸೂತ್ರಭಾಷ್ಯದಲ್ಲಿ ವಿವರಿಸಿದ್ದಾರೆ ಎಂದು ಶ್ರೀರಾಘವೇಂದ್ರತೀರ್ಥರು ಹೇಳಿದ ಕೂಡಲೇ ಅಲ್ಲಿ ಕುಳಿತಿದ್ದ ಮತ್ತೊಬ್ಬ ಪಂಡಿತರು ಮುಂದೆ ಹೇಳಿದ ಪ್ರಶ್ನೆಯನ್ನು ಕೇಳಿದರು ಎಂದು ತಾತ್ಪರ್ಯ.

**ಅವತಾರಿಕೆ :** ಶ್ರೀರಾಘವೇಂದ್ರಸ್ವಾಮಿಗಳವರು ಹೇಳಿದ ಶಾಸ್ತ್ರಾರಂಭದ ಪೀಠಿಕಾ ವಚನದ ಮೇಲೆ ಓರ್ವ ಪಂಡಿತನು ಮಾಡಿದ ಆಕ್ಷೇಪವು ಯಾವುದು ಎಂಬುದಾಗಿ ತಿಳಿಸುತ್ತಾರೆ.

**ನಿತ್ಯವಾಗವಿಷಯಸ್ಯ ಸರ್ವಥಾऽऽರಂಭಣಂ ನ ವಿಷಯಸ್ಯ ಯುಜ್ಯತೇ ।**
**ನಾಮಧೇಯಮಿಹ ಯಜ್ಜಡಂ ಮೃಷಾ ಜಾತಮರ್ಥರಹಿತಂ ಸ್ವಚಿಂತನಮ್ ॥೪೨॥**

**ತಾತ್ಪರ್ಯ** : ಬ್ರಹ್ಮವು ವೇದಗಳಿಗೂ ಅಗೋಚರವಾದುದು. ಅದು ವೇದಗಳಿಗಿಂತ ಬೇರೆಯಾದ ಶಬ್ದಗಳಿಂದ ಪ್ರತಿಪಾದ್ಯವಂತೂ ಆಗುವುದೇ ಇಲ್ಲ. ಬ್ರಹ್ಮವನ್ನು ಹೇಳುವ ಶಬ್ದವೆಂದು (ಪರಬ್ರಹ್ಮ ನಾಮವೆಂದು) ತೋರುವ ಶಬ್ದವೂ ಬ್ರಹ್ಮ ಪ್ರತಿಪಾದಕವಾಗುವದಿಲ್ಲ. ಹೀಗಿರುವಾಗ ಬ್ರಹ್ಮವು ಗುಣಪೂರ್ಣವಾದುದು, ದೋಷರಹಿತವಾದುದು, ಈಕ್ಷಿತವಾದುದು ಶಬ್ದಗಳಿಂದ ಪ್ರತಿಪಾದ್ಯವಾದುದು, ಮತ್ತು ಅಪರೋಕ್ಷಜ್ಞಾನಕ್ಕೆ ವಿಷಯವಾದುದು, ಗಮ್ಯವು (ಮುಕ್ತಿಯಲ್ಲಿ ಹೊಂದಲು ಯೋಗ್ಯವಾದುದು) ಎಂಬ ನಿಮ್ಮ ಸಿದ್ಧಾಂತವು ಪ್ರಯೋಜನ ರಹಿತವಾಗಿದೆ ಎಂದು ಅಭಿಪ್ರಾಯ.

(ಈ ಶ್ಲೋಕವು ಇದರ ಮುಂದಿನ ಕೆಲವು ಶ್ಲೋಕಗಳು ಶಾಸ್ತ್ರಾರ್ಥ ವಿಚಾರಕ್ಕೆ ಸಂಬಂಧಪಟ್ಟಿದೆ, ಇದು ದುರ್ಗಮವಾಗಿದೆ. ಇವುಗಳ ವ್ಯಾಖ್ಯಾನವೂ ಕಠಿಣವಾಗಿದೆ. ಈ ಶ್ಲೋಕಗಳ ಅಭಿಪ್ರಾಯವನ್ನು ಮತ್ತಷ್ಟು ವಿವರವಾಗಿ ಇಲ್ಲಿ ನೀಡಲಾಗಿದೆ.)

ನಿತ್ಯವಾಗವಿಷಯಸ್ಯ ಎಂದರೆ ನಿತ್ಯಾ ಯಾ ವಾಕ್ ವೇದಃ, ನಿತ್ಯವಾದ ವಾಕ್ ಎಂದರೆ ಅದು ವೇದವು. ತಸ್ಯಾಃ ಅವಿಷಯಃ ಬ್ರಹ್ಮ ಆ ವೇದವಾಕ್ಕಿಗೆ ಬ್ರಹ್ಮವು ಅಗೋಚರವಾಗಿದೆ. ಅದು ವೇದಪ್ರತಿಪಾದ್ಯದಲ್ಲಿ, ವೇದಗಳಿಗೆ ಗೋಚರವಲ್ಲ. ಅಂತಹಾ ಬ್ರಹ್ಮನಿಗೆ, ಆರಂಭಣಂ ಇತ್ಯೇತತ್= ಈ ಶ್ಲೋಕದಲ್ಲಿರುವ ಆರಂಭಣಂ ಎಂಬ ಶಬ್ದವು ವಾಚಾರಂಭಣಂ ವಿಕಾರೋ ನಾಮಧೇಯಂ, ಇತಿ ಶ್ರುತಿಗತವಾದಾರಂಭಣಪದೋಪಲಕ್ಷಣಂ = "ವಾಚಾರಂಭಣಂ ವಿಕಾರೋ ನಾಮಧೇಯಂ" ಎಂಬ ಛಾಂದೋಗ್ಯ ಉಪನಿಷತ್ತಿನಲ್ಲಿರುವ ವಾಚಾರಂಭಣ ಎಂಬ ಪದವನ್ನು ತೆಗೆದುಕೊಳ್ಳಬೇಕು ಎಂಬುದಕ್ಕೆ ಸೂಚಕವು. ವಾಚಾ ಆರಂಭಣಂ ವಾಗೀಂದ್ರಿಯೇಣ ಆರಂಭಣಂ ಉಚ್ಚಾರಣಂ=ವಾಚಾ ಆರಂಭಣಂ ಎಂದರೆ ವಾಗಿಂದ್ರಿಯದ ಉಚ್ಚಾರಣೆಯು, ಸಂಸ್ಕೃತೇತರಶಬ್ದಾನಾಮುಚ್ಚಾರಣಮಿತಿ ಯಾವತ್=ಸಂಸ್ಕೃತ ಭಾಷೆಗಿಂತ ಬೇರೆಯಾದ ಭಾಷೆಗಳ ಉಚ್ಚಾರಣವು ಎಂದು ತಾತ್ಪರ್ಯ. ಸರ್ವಥಾ ಕಥಮಪಿ=ಸರ್ವಥಾ ಎಂದರೆ ಎಲ್ಲಾ ರೀತಿಯಿಂದಲೂ, ನ ಯುಜ್ಯತೇ ನ ಸಂಭವತಿ=ಹೊಂದುವುದಿಲ್ಲ. ನಿತ್ಯವಾಕ್ ಆಗಿರುವ ಅತ್ಯಂತ ಶ್ರೇಷ್ಠವಾದ ಯಾವ ವೇದವಿದೆಯೋ ಅದಕ್ಕೂ ಅವಿಷಯವಾದ, ಆ ವೇದದಿಂದಲೂ ಪ್ರತಿಪಾದಿಸಲ್ಪಡದಿರುವ ಬ್ರಹ್ಮವು ಸಂಸ್ಕೃತ ಭಾಷೆಗಿಂತ ಬೇರೆಯಾದ ದೇಶಭಾಷೆಗಳಲ್ಲಿರುವ ಬಹಳ ಸ್ವಲ್ಪ ಸಂಖ್ಯೆಯ ಶಬ್ದಗಳಿಂದ ಪ್ರತಿಪಾದಿಸಲ್ಪಡುತ್ತಿವೆ ಎಂಬುದು ಅತ್ಯಂತ ಸಂಭಾವಿತವಾಗಿದೆ ಎಂದು ಅಭಿಪ್ರಾಯ. ವೇದಗಳು ಅನಂತ ಅವುಗಳಲ್ಲಿರುವ ಶಬ್ದರಾಶಿಗಳೂ ಅನಂತ; ಅಂತಹ ಅನಂತ ಶಬ್ದರಾಶಿಗಳಿಗೂ ಬ್ರಹ್ಮವು ನಿಲುಕುವುದಿಲ್ಲ ಎಂದ ಮೇಲೆ, ಅತ್ಯಲ್ಪವಾದ, ಪ್ರಾಕೃತವಾದ, ಆಯಾ ದೇಶದ ಅಪಭ್ರಂಶ ಭಾಷೆಗಳ ಶಬ್ದಗಳಿಂದ ಬ್ರಹ್ಮವು ಪ್ರತಿಪಾದ್ಯವಾಗುತ್ತದೆಯೇ?

ವಾಚಾರಂಭಣಂ ಎಂಬ ಉಪನಿಷತ್ತಿನ ವಾಕ್ಯದಲ್ಲಿ ವಾಚಾ ಆರಂಭಣಂ ಎಂದು ಪದಚ್ಛೇದ. ವಿಕಾರ ಶಬ್ದಕ್ಕೆ ಯಕ್ತವಲ್ಲ ಎಂದು ಅರ್ಥ. ಹೀಗೆ ನೀವು ಬ್ರಹ್ಮಮೀಮಾಂಸಾಶಾಸ್ತ್ರಕ್ಕೆ ವಿಷಯವೆಂಬುದಾಗಿ ಹೇಳುವ ಬ್ರಹ್ಮಕ್ಕೆ ವೇದ ಮತ್ತು ವೇದೇತರ ಶಬ್ದಗೋಚರವಿಲ್ಲದುದರಿಂದ

ಆ ಬ್ರಹ್ಮವು ಬ್ರಹ್ಮಮೀಮಾಂಸಾಶಾಸ್ತ್ರಕ್ಕೆ ವಿಷಯವಲ್ಲ; ಎಂದು ಆಕ್ಷೇಪವು. ಶ್ರುತಿಯಲ್ಲಿರುವ ಆರಂಭಣಂ ಎಂಬ ಶಬ್ದವನ್ನು ನಾಮಧೇಯಂ ಎಂಬ ಶಬ್ದದ ಜೊತೆಗೂ ಜೋಡಿಸಬೇಕು. ವಿಷಯಸ್ಯ ಎಂದರೆ ವಿಷಯವೆಂದು ನಿಮ್ಮ ಮಾತಿನಂತೆ ಅಂಗೀಕೃತವಾಗಿರುವುದಕ್ಕೆ (ಬ್ರಹ್ಮನಿಗೆ) ಎಂದು ಅರ್ಥ. ವಾಚಾರಂಭಣಂ ಎಂದರೆ ವಾಚಯಾ ವಾಗಿಂದ್ರಿಯೇಣ=ವಾಚಯಾ ಎಂದರೆ ವಾಗಿಂದ್ರಿಯದಿಂದ ನಾಲಿಗೆಯಿಂದ ಆರಂಭಣಂ=ಉಚ್ಚಾರಣಂ, ಆರಂಭಣಂ ಎಂದರೆ ಉಚ್ಚಾರಣೆಯು, ಯಸ್ಯ ತತ್=ಯಾವುದಕ್ಕೆ ಇದೆಯೋ ಅದು (ವಾಚಾರಂಭಣವು, ಬಹುವ್ರೀಹಿಸಮಾಸ) ನಾಮಧೇಯಂ=ಬ್ರಹ್ಮವು ಸಗುಣವು ಇತ್ಯಾದಿ ನಾಮವು ಇಹ=ಈ ಬ್ರಹ್ಮನಲ್ಲಿ ಮೃಷಾ=ಸುಳ್ಳಾಗಿದೆ. ಅದಕ್ಕೆ ಕಾರಣವು ಯತ್ ಜಡಂ = ಯಾವುದು ಚೇತನವಲ್ಲವೋ, ತತ್ ಮಿಥ್ಯಾ=ಅದು ಸುಳ್ಳಾದುದು. ಯಾವುದು ಸುಳ್ಳಾದುದೋ ಅದು ಯಾವ ಪ್ರಯೋಜನವನ್ನೂ ಕ್ರಿಯೆಯನ್ನೂ ಉಂಟುಮಾಡುವುದಿಲ್ಲ. ಹೀಗೆ ಬ್ರಹ್ಮನನ್ನು ಪ್ರತಿಪಾದಿಸುತ್ತದೆಯೆಂದು ಭಾಸಮಾನವಾಗಿರುವ ಬ್ರಹ್ಮ ಮೊದಲಾದ ಎಲ್ಲ ಭಾಷಾ ಸಮೂಹವೂ ಜಡವಾದುದು. ಆದುದರಿಂದ ಅವೆಲ್ಲವೂ ಸುಳ್ಳಾಗಿದೆ. ಆದುದರಿಂದ ಯಾವ ಶಬ್ದವೂ ಬ್ರಹ್ಮ ಪ್ರತಿಪಾದಕವಲ್ಲ. ಆದುದರಿಂದ ಸ್ವಚಿಂತನಂ, ಸ್ವೇಷಾ=ನಿಮ್ಮ ಚಿಂತನಂ=ಅಭಿಪ್ರಾಯವು ಅರ್ಥರಹಿತಂ=ಪ್ರಯೋಜನ ಶೂನ್ಯವಾಗಿ, ಜಾತಂ=ಆಯಿತು. ಬ್ರಹ್ಮಸೂತ್ರರೂಪವನ್ನು ಪ್ರತಿಪಾದಿಸುವ ಸಲುವಾಗಿ ನೀವು "ಬ್ರಹ್ಮವು ಸದ್ಗುಣಪೂರ್ಣವು. ದೋಷರಹಿತವು, ಜ್ಞೇಯವು (ವಾಚ್ಯವು), ಗಮ್ಯವು ಎಂಬುದಾಗಿ ಆಚಾರ್ಯರು ಹೇಳುತ್ತಾರೆ" ಎಂದು ಹೇಳಿದರಲ್ಲವೇ! ಆ ಬ್ರಹ್ಮವಾದರೋ 'ಯದ್ವಾಚಾನಭ್ಯುದಿತಂ' (ಯಾವುದು ವಾಗಿಂದ್ರಿಯದಿಂದ, ಶಬ್ದೋಚ್ಚಾರಣೆಯಿಂದ, ಪ್ರತಿಪಾದ್ಯವಾಗುವುದಿಲ್ಲವೋ ಅದು ಬ್ರಹ್ಮವು) ಇತ್ಯಾದಿ ಶ್ರುತಿಗಳಿಂದ ವೇದಪ್ರತಿಪಾದ್ಯವಲ್ಲವೆಂದೇ ನಿರೂಪಿತವಾಗಿದೆ. ಆದುದರಿಂದಲೇ ವೇದಕ್ಕಿಂತ ಬೇರೆಯಾದ ಲೌಕಿಕ ಸಂಸ್ಕೃತ ಭಾಷೆಯ ಶಬ್ದಗಳಿಂದಾಗಲೀ, ಅಥವಾ ಇತರ ಭಾಷೆಯ ಶಬ್ದಗಳಿಂದಾಗಲೀ, ಪ್ರತಿಪಾದ್ಯವಲ್ಲವೆಂದು ಸಿದ್ಧಿಸುತ್ತದೆ. ಯಾವುದೋ ಒಂದು ರೀತಿಯಿಂದ ಬ್ರಹ್ಮವನ್ನು ಶಬ್ದಪ್ರತಿಪಾದ್ಯವೆಂದು ಒಪ್ಪಿದರೂ ಬ್ರಹ್ಮಭಿನ್ನವಾದ ಎಲ್ಲಾ ವಸ್ತುಸಮೂಹವೂ (ಸಮಸ್ತ ಪ್ರಪಂಚವೂ) ನೇಹನಾನಾಸ್ತಿ ಕಿಂಚನ ಮೊದಲಾದ ಸಾವಿರಾರು ವೇದಗಳಿಂದ ಸುಳ್ಳಾಗಿದೆ ಎಂದು ತಿಳಿದು ಬರುವುದರಿಂದ, ಬ್ರಹ್ಮ ಪ್ರತಿಪಾದಕವೆಂದು ನೀವು ಒಪ್ಪಿರುವ ಬ್ರಹ್ಮ, ಆತ್ಮ, ಸದ್ಗುಣಾ, (ಉತ್ಕೃಷ್ಟ ಧರ್ಮವುಳ್ಳವನು) ಇತ್ಯಾದಿ ಪದಗಳೂ ಕೂಡಾ ಮಿಥ್ಯಾ ಆದುದರಿಂದ ಮಿಥ್ಯಾ ಆಗಿರುವ ವಸ್ತುವು ಯಾವ ಪ್ರಯೋಜನ, ಕ್ರಿಯೆಗಳನ್ನು ಸಾಧಿಸದಿರುವುದರಿಂದ, ಬ್ರಹ್ಮನಿಗೆ ಬ್ರಹ್ಮ ಮುಂತಾದ ಶಬ್ದ ಪ್ರತಿಪಾದ್ಯತ್ವವೂ ಬರುವುದಿಲ್ಲ. ಆದುದರಿಂದ 'ಬ್ರಹ್ಮ ಸದ್ಗುಣಾ' ಮೊದಲಾದ ನಿಮ್ಮ ಮಾತು ಬ್ರಹ್ಮ ಪ್ರತಿಪಾದನ ಮಾಡುವ ಶಕ್ತಿ ಉಳ್ಳದ್ದಲ್ಲ. ಆದುದರಿಂದ ನಿಮ್ಮ ಉಪನ್ಯಾಸವು ವ್ಯರ್ಥ. ನಿಮ್ಮ ಉಪನ್ಯಾಸಕ್ಕೆ ಮೂಲವಾಗಿರುವ ಸಿದ್ಧಾಂತವೂ ವ್ಯರ್ಥ, ಎಂಬುದಾಗಿ ಶ್ರೀಗುರುರಾಘವೇಂದ್ರರ ಪ್ರವಚನದ ಉಪನ್ಯಾಸದ ಪ್ರಾರಂಭದಲ್ಲಿ ಓರ್ವ ಪಂಡಿತರು ಸಂದೇಹವನ್ನು ವ್ಯಕ್ತಪಡಿಸಿದರು ಎಂದು ತಾತ್ಪರ್ಯ.

**ಅವತಾರಿಕೆ** : ಬ್ರಹ್ಮವು ಶಾಸ್ತ್ರಕ್ಕೆ ವಿಷಯವಲ್ಲ; ಎಂಬುದನ್ನು ಸಮರ್ಥಿಸಿ ಈಗ ಸಾಧಾರಣವಾದ ಆತ್ಮ ಶಬ್ದವೂ ಶಾಸ್ತ್ರಕ್ಕೆ ವಿಷಯವಲ್ಲ ಎಂದು ಹೇಳುತ್ತಾರೆ.

**ನಾತ್ಮತತ್ವಮಪಿ ತತ್ರ ನಾಪರಶ್ಚೇಷ್ಟಿತಾದಿಬಹುಲಿಂಗಸಿದ್ಧಿತಃ ।**
**ಜೀವಭಿನ್ನಪರಮೋಽಪ್ಯಮಾನಕೋ ನ ಸ್ವಯಂ ಚ ಯದಹಂಧಿಯಾ ಮಿತಃ ॥೪೩॥**

**ತಾತ್ಪರ್ಯ** : ಹಿಂದಿನ ಶ್ಲೋಕದಲ್ಲಿ ಬ್ರಹ್ಮಸ್ವರೂಪವನ್ನು ಪರ್ಯಾಲೋಚನೆ ಮಾಡಿದಾಗಲೂ ಬ್ರಹ್ಮಾದಿ ಶಬ್ದಗಳ ಸ್ವರೂಪವನ್ನು ಪರ್ಯಾಲೋಚನೆ ಮಾಡಿದಾಗಲೂ ಬ್ರಹ್ಮನಿಗೆ ಬ್ರಹ್ಮಾದಿಶಬ್ದಗೋಚರತತ್ವವು ಇಲ್ಲದಿರುವುದರಿಂದ ಬ್ರಹ್ಮವು ಶಾಸ್ತ್ರಕ್ಕೆ ವಿಷಯವಲ್ಲ; ಆದುದರಿಂದ ಶಾಸ್ತ್ರವು ನಿರ್ವಿಷಯವಾಯಿತು ಎಂದು ಸಮರ್ಥಿಸಿದ್ದಾರೆ. ಈಗ ಆತ್ಮನ ವಿಷಯ ವಿಮರ್ಷಿಸಿದಾಗಲೂ ಶಾಸ್ತ್ರವು ನಿರ್ವಿಷಯವಾಗುತ್ತದೆ ಎಂದು ಸಮರ್ಥಿಸುತ್ತಾರೆ.

ಮೊಟ್ಟ ಮೊದಲು ಆತ್ಮವು ವಿಷಯವಲ್ಲ ಎಂದು ಹೇಳುತ್ತಾರೆ. ಏಕೆಂದರೆ ಆತ್ಮನು ಎರಡು ವಿಧವಾಗಿದ್ದಾನೆ. ಪರಾತ್ಮಾ ಮತ್ತು ಅಪರಾತ್ಮಾ ಎಂಬ ಎರಡು ವಿಭಾಗಗಳಲ್ಲಿ ಪರಾತ್ಮಾ ಎಂದರೆ ಪರಮಾತ್ಮನು–ಅಪರಾತ್ಮಾ ಎಂದರೆ ಜೀವನು. ಈ ಎರಡು ಆತ್ಮರಲ್ಲಿ ಅಪರಾತ್ಮನೆಂಥರೆ ಜೀವನು ಶಾಸ್ತ್ರಕ್ಕೆ ವಿಷಯವಲ್ಲ; ಏಕೆಂದರೆ ಜೀವನಲ್ಲಿ ಚೇಷ್ಟೆ ಮುಂತಾದವುಗಳಿವೆ. ಈ ಲಿಂಗಗಳಿಂದ ಇತರರ ಶರೀರಗಳಲ್ಲೂ ಆತ್ಮನು ಇದ್ದಾನೆ ಎಂದು ಅನುಮಾನದಿಂದ ಸಾಧಿಸಲು ಬರುತ್ತದೆ. ಚೇಷ್ಟಾ ಎಂದರೆ ಹಿತವನ್ನು ಹೊಂದಲು ಅನುಕೂಲವಾದ, ಅಹಿತದ ಪರಿಹಾರಕ್ಕೆ ಅನುಕೂಲವಾದ, ಕ್ರಿಯೆಯು. ಹಾಗೆಯೇ ಕಣ್ಣು ರೆಪ್ಪೆಗಳನ್ನು ಮುಚ್ಚಿ ತೆಗೆಯುವುದು (ನಿಮೇಷ ಉನ್ಮೇಷ) ಶ್ವಾಸವಾಯು ಸಂಚಾರ ಇವೇ ಮೊದಲಾದ ಅನೇಕ ಹೇತುಗಳಿಂದ ತನ್ನ ಶರೀರಕ್ಕಿಂತ ಬೇರೆಯಾದ ಶರೀರದಲ್ಲೂ ಆತ್ಮನಿದ್ದಾನೆಂದು ತಿಳಿಯಬಹುದು. ಇನ್ನೊಬ್ಬನ ಶರೀರದಲ್ಲಿ ಜೀವಾತ್ಮನಿದ್ದಾಗ ಚೇಷ್ಟೆ ಮುಂತಾದುವನ್ನು ನೋಡುತ್ತೇವೆ (ತಿಳಿಯುತ್ತೇವೆ). ಮರಣ ಉಂಟಾದಾಗ ಚೇಷ್ಟೆ ಮುಂತಾದವು ಇಲ್ಲವೆಂದು ತಿಳಿಯುತ್ತೇವೆ. ಆಗ ಚೇಷ್ಟಾ ಮುಂತಾದವುಗಳು ಎಲ್ಲಿದೆಯೋ ಅಲ್ಲಿ ಆತ್ಮನು ಇದ್ದಾನೆ ಎಂಬ ಒಂದು ಅವಿನಾಭಾವ ಸಂಬಂಧವನ್ನು ನಾವು ತಿಳಿಯುತ್ತೇವೆ. ಇದನ್ನೇ ವ್ಯಾಪ್ತಿ ಎಂದು ಹೇಳುತ್ತಾರೆ. ಅನಂತರ ಇನ್ನೊಬ್ಬನ ಶರೀರವು ಚೇಷ್ಟಾದಿಗಳಿಂದ ಕೂಡಿದ್ದಾಗಿ ನಮಗೆ ತಿಳಿದು ಬಂದಾಗ ಅಲ್ಲಿ ಆತ್ಮನಿದ್ದಾನೆ ಎಂದು ಊಹಿಸುತ್ತೇವೆ. ಅನುಮಾನದಿಂದ ತಿಳಿಯುತ್ತೇವೆ. ಬದುಕಿರುವ ಶರೀರವು ಆತ್ಮನಿಂದ ಕೂಡಿರುತ್ತದೆ. ಚೇಷ್ಟಾ ಮುಂತಾದವು ಇರುವುದರಿಂದ (ಜೀವಚ್ಛರೀರಂ ಸಾತ್ಮಕಂ ಚೇಷ್ಟಾದಿ ಮತ್ವಾತ್, ಯತ್ರ ಚೇಷ್ಟಾದಿಮತ್ವಂ ತತ್ರ ಸಾತ್ಮಕತ್ವಂ) ಹೀಗೆ ತನಗಿಂತ ಭಿನ್ನನಾದ ಆತ್ಮನು ಅನುಮಾನದಿಂದಲೇ ಸಿದ್ಧಿಸುತ್ತಾನೆ. ಹೀಗೆ ಅನುಮಾನದಿಂದ ಸಿದ್ಧನಾದ ಜೀವಾತ್ಮನು ಶಾಸ್ತ್ರದಲ್ಲಿ ವಿಚಾರಕ್ಕೆ ವಿಷಯುವಾಗುವುದಿಲ್ಲ. ಯಾವುದು ಅಜ್ಞಾತವೋ (ತಿಳಿಯಲ್ಪಟ್ಟಿಲ್ಲವೋ) ಅಂತಹಾ ಸಂದೇಹಾಸ್ಪದವಾಗಿದೆಯೋ (ಸಂದಿಗ್ಧವೋ) ಅಥವಾ ಭ್ರಮ ವಿಷಯವಾಗಿದೆಯೋ

(ವಿಪರ್ಯಾಸವೋ) ಅಂತಹಾ ವಿಷಯವೇ ಶಾಸ್ತ್ರದಲ್ಲಿ ವಿಚಾರಕ್ಕೆ ಯೋಗ್ಯವಾಗುತ್ತದೆ. ಹೀಗೆ ಹಿಂದೆ ಹೇಳಿದ ರೀತಿಯಿಂದ ಪರಜೀವನು ಅನುಮಾನ ಸಿದ್ಧನಾದುದರಿಂದ ಅವನ ವಿಷಯದಲ್ಲಿ ಸಂದೇಹಾದಿಗಳಿಗೆ ಅವಕಾಶ ಇಲ್ಲವಾದುದರಿಂದ ಶಾಸ್ತ್ರಕ್ಕೆ ಪರಜೀವನೂ ವಿಷಯನಲ್ಲ.

ಇನ್ನು ಜೀವಾತ್ಮರುಗಳಿಗಿಂತ ಭಿನ್ನನಾದ ಪರಮಾತ್ಮನು ಶಾಸ್ತ್ರದಲ್ಲಿ ವಿಚಾರಕ್ಕೆ ವಿಷಯನಾಗಿದ್ದಾನೆ ಎಂದೂ ಹೇಳಲು ಬರುವುದಿಲ್ಲ. ಏಕೆಂದರೆ ಜೀವಾತ್ಮರಿಗಿಂತ ಭಿನ್ನನಾದ ಪರಮಾತ್ಮನು ಇದ್ದಾನೆ ಎಂಬ ವಿಷಯದಲ್ಲಿ ಪ್ರಮಾಣವೇ ಇಲ್ಲ. "ಅಹಂ ಬ್ರಹ್ಮಾಸ್ಮಿ" 'ಅಹಂ' ನಾನು ಎಂದು ತಿಳುವಳಿಕೆಗೆ ವಿಷಯನಾದ ಜೀವನು 'ಬ್ರಹ್ಮಾಸ್ಮಿ' ಬ್ರಹ್ಮನೇ ಆಗಿದ್ದೇನೆ. 'ತತ್ವಮಸಿ' ಎಲೈ ಜೀವನೇ ತ್ವಂ=ನೀನು ತತ್=ಆ ಬ್ರಹ್ಮ, ಅಸಿ=ಆಗಿದ್ದೀಯೆ ಇವೇ ಮೊದಲಾದ ವೇದಾಂತ ಮಹಾ ವಾಕ್ಯಗಳಿಂದ ಜೀವಬ್ರಹ್ಮರಿಗೆ ಅಭೇದವಿದೆಯೆಂದು ತಿಳಿದುಬರುತ್ತದೆ. ಈ ಜೀವಬ್ರಹ್ಮ ಭೇದವು ಶ್ರುತಿಯೆಂಬ ಪತಿವ್ರತೆಯ ಹೃದಯದಲ್ಲಿ ಅಡಗಿರುವ ರಹಸ್ಯಾಭಿಪ್ರಾಯವಾಗಿದೆ. 'ದ್ವಾ ಸುಪರ್ಣಾ ಸಯುಜಾ ಸಖಾಯಾ' ಇತ್ಯಾದಿ ಅನೇಕ ಭೇದಪ್ರತಿಪಾದಕ ವಾಕ್ಯಗಳು ಇವೆಯಾದರೂ ಅವುಗಳು 'ಅಹಂ ಬ್ರಹ್ಮಾಸ್ಮಿ' ಮೊದಲಾದ ಮಹಾವಾಕ್ಯಗಳಿಗೆ ಪೂರಕವಾದ ಅವಾಂತರ ವಾಕ್ಯಗಳಾಗಿವೆ. ಅವುಗಳು ಲೋಕದಲ್ಲಿ ಪ್ರಸಿದ್ಧವಾದ ವ್ಯಾವಹಾರಿಕವಾದ ಭೇದವನ್ನು ಅನುವಾದ ಮಾಡುತ್ತದೆ. ಅಂತಹಾ ವ್ಯಾವಹಾರಿಕವಾದ ಭೇದವನ್ನು ನಿಷೇಧಿಸಿ, ಪಾರಮಾರ್ಥಿಕವಾದ ಜೀವಬ್ರಹ್ಮಾಭೇದವನ್ನು (ಅದ್ವೈತವನ್ನು) ಪ್ರತಿಪಾದಿಸುವ ಹಿಂದೆ ಹೇಳಿರುವ 'ಅಹಂ ಬ್ರಹ್ಮಾಸ್ಮಿ' ಇತ್ಯಾದಿ ಮಹಾವಾಕ್ಯಗಳಿಗೆ 'ದ್ವಾಸುಪರ್ಣಾ' ಮುಂತಾದ ಭೇದವಾಕ್ಯಗಳು ಸೇವಕರಂತಿದೆ. ಅವುಗಳು ನಿಷೇಧ ಮಾಡುವುದಕ್ಕಾಗಿ ಭೇದವನ್ನು ತಿಳಿಸುವುದರಿಂದ ಅವುಗಳಿಗೂ ಅದ್ವೈತದಲ್ಲಿಯೇ ಪರ್ಯವಸಾನವಾಗುತ್ತದೆ. ಆದುದರಿಂದ ಜೀವಭಿನ್ನನಾದ ಪರಮಾತ್ಮನು ಇಲ್ಲವೆಂದು ಸಿದ್ಧಿಸುತ್ತದೆ. ಹೀಗೆ ಜೀವಭಿನ್ನನಾದ ಪರಮಾತ್ಮನು ಶಾಸ್ತ್ರಕ್ಕೆ ವಿಷಯನೆಂದು ಹೇಳಲು ಬರುವುದಿಲ್ಲ. ಆದರೂ ಕೂಡಾ ಶಾಸ್ತ್ರವನ್ನು ವಿಚಾರ ಮಾಡುವ ತಾವೇ (ಸ್ವಾತ್ಮವೇ) ಪರಮಾತ್ಮನಾಗಲೀ ಅವನೇ ಶಾಸ್ತ್ರಕ್ಕೆ ವಿಷಯನಾಗಲಿ, ಶಾಸ್ತ್ರ ವಿಚಾರ ಮಾಡುತ್ತಿರುವ ಸ್ವಾತ್ಮನು (ತಾನು) ಪರಮಾತ್ಮನಲ್ಲವೆಂದು ಹೇಳುವುದಾದರೆ, ತಾನೇ (ಸ್ವಾತ್ಮನೇ) ಶಾಸ್ತ್ರಕ್ಕೆ ವಿಷಯನಾಗಲಿ ತನ್ನ ವಿಷಯದಲ್ಲಿಯೇ ಜಿಜ್ಞಾಸಾ ಮಾಡುವುದೇ ಶಾಸ್ತ್ರದ ಉದ್ದೇಶವೆಂದು ಹೇಳೋಣ ಎಂದರೆ ಅದೂ ಸರಿಹೊಂದುವುದಿಲ್ಲ. ಪರಮಾತ್ಮಾಭಿನ್ನನಾದ ಜೀವರೂಪನಾದ ತಾನು, ಅಥವಾ ಪರಮಾತ್ಮತ್ವ ರಹಿತನಾದ ಜೀವರೂಪನಾದ ತಾನು ಶಾಸ್ತ್ರಕ್ಕೆ ವಿಚಾರ ವಿಷಯನೆಂದು ಹೇಳಲು ಬರುವುದಿಲ್ಲ. ಏಕೆಂದರೆ ಇಂತಹಾ ಸ್ವಾತ್ಮನು 'ಅಹಂ' 'ಅಹಂ' ನಾನು ನಾನು ಎಂದು ಪ್ರತಿಕ್ಷಣದಲ್ಲಿಯೂ ತಮ್ಮ ಅನುಭವಕ್ಕೆ ದೃಢವಾಗಿ ಗೋಚರನಾಗುತ್ತಾನೆ. ಪ್ರತಿಯೊಬ್ಬ ವ್ಯಕ್ತಿಗೂ ಅಹಂ ಸುಖೀ=ನಾನು ಸುಖದಿಂದ ಇದ್ದೇನೆ ಅಹಂ ದುಃಖೀ=ನಾನು ದುಃಖದಿಂದ ಇದ್ದೇನೆ ಇದೇ ಮೊದಲಾದ ಅನುಭವವಿದೆ. ಈ ವಿಷಯದಲ್ಲಿ ಯಾರಿಗೂ ಸಂಶಯವಿಲ್ಲ. ಇಲ್ಲಿ ಅಹಂ ಎಂದರೆ ಅನುಭವಿಸುವ ಚೇತನನೇ ಆಗಿದ್ದಾನೆ. ಅಹಂ ಎಂಬ ಅನುಭವವು ಆತ್ಮಸಾಕ್ಷಿಯಾದ ಅನುಭವವಾದುದರಿಂದ ತನ್ನ ಸ್ವರೂಪದ ಆ ಅನುಭವ ವಿಷಯದಲ್ಲಿ

ಸಂಶಯ ಭ್ರಮೆಗಳಿಗೆ ಅವಕಾಶವಿಲ್ಲ. ಆದುದರಿಂದ ಸ್ವಾತ್ಮನು, ಇನ್ನೂ ಸ್ವಾತ್ಮರೂಪವೇ ಆದರೂ ಪರಮಾತ್ಮನಾಗಲೀ, ಶಾಸ್ತ್ರದಲ್ಲಿ ವಿಚಾರಕ್ಕೆ ವಿಷಯನಾಗುವುದಿಲ್ಲ. ಹೀಗೆ ಪರಾತ್ಮನು ಚೇಷ್ಟೆ ಮುಂತಾದವುಗಳಿಂದ ತಿಳಿದು ಬರುವುದರಿಂದಲೂ ತಾನು ಅಥವಾ ಸ್ವಸ್ವರೂಪನಾದ ಪರಮಾತ್ಮನು ಸಾಕ್ಷಿರೂಪವಾದ ಅನುಭವ ಪ್ರಮಾಣದಿಂದಲೇ ಸಿದ್ಧನಾಗಿರುವುದರಿಂದಲೂ, ಇನ್ನು ಜೀವಭಿನ್ನನಾದ ಪರಮಾತ್ಮನು ಇದ್ದಾನೆ ಎಂಬ ವಿಷಯದಲ್ಲಿ ಪ್ರಮಾಣ ಇಲ್ಲವಾದುದರಿಂದಲೂ ಬ್ರಹ್ಮಮೀಮಾಂಸಾಶಾಸ್ತ್ರಕ್ಕೆ ವಿಷಯುವೇ ಇಲ್ಲವೆಂದಾಯಿತು. ಆದ್ದರಿಂದ ಈ ಬ್ರಹ್ಮಮೀಮಾಂಸಾಶಾಸ್ತ್ರವು ಆರಂಭಿಸಲು ಯೋಗ್ಯವಲ್ಲ ಎಂದು ಫಲಿತಾರ್ಥವು ಸಿದ್ಧವಾಯಿತು.

**ಅವತಾರಿಕೆ :** ಬ್ರಹ್ಮ ಜಿಜ್ಞಾಸೆಗೆ ಫಲವಿಲ್ಲ ; ಆದುದರಿಂದ ಬ್ರಹ್ಮ ವಿಚಾರವನ್ನು ಮಾಡುವ ಅಗತ್ಯವಿಲ್ಲ ಎಂದು ಪಂಡಿತರು ವಾದಿಸಿದುದನ್ನು ಕವಿಗಳು ವರ್ಣಿಸುತ್ತಾರೆ.

**ಕಿಂ ಚ ಕಿಂ ಫಲಮಮುಷ್ಯ ವೇದನೇ ಕರ್ಮಣೈವ ಭವತಿ ಸ್ವರಾದಿಕಮ್ ।**
**ನಾಪಿ ಮುಕ್ತಿರಧುನೈವ ತದ್ವಿದಾಂ ದೃಶ್ಯತೇ ಸ ಯದಸಾವಪಿ ಕ್ವಚಿತ್ ॥೪೪॥**

**ತಾತ್ಪರ್ಯ :** ಬ್ರಹ್ಮಜ್ಞಾನೇನ ನ ಕಿಮಪಿ ಫಲಂ=ಬ್ರಹ್ಮಜ್ಞಾನದಿಂದ ಯಾವ ಪ್ರಯೋಜನವೂ ಇಲ್ಲ? ನಮಗೆಲ್ಲರಿಗೂ ಗುರುಗಳ ಮೂಲಕ ಗ್ರಂಥಾಭ್ಯಾಸದಿಂದ ಬ್ರಹ್ಮಜ್ಞಾನ ಉಂಟಾಗುತ್ತದೆ. ಆದರೆ ಅದರಿಂದ ಯಾವ ಪ್ರಯೋಜನವೂ ಕಂಡುಬರುವುದಿಲ್ಲ. ಇನ್ನು ಸ್ವರ್ಗಾದಿ ಫಲಗಳು ಉಂಟಾಗುತ್ತದೆ ಎಂದು ಹೇಳೋಣವೆಂದರೆ ಸ್ವರ್ಗಾದಿ ಎಲ್ಲ ಪುರುಷಾರ್ಥಗಳೂ ಜ್ಯೋತಿಷ್ಟೋಮಾದಿ ಕರ್ಮಾನುಷ್ಠಾನದಿಂದ ಬರುತ್ತದೆ. (ಸ್ವರ್ಗಾದಿ ಲೋಕಃ ಕರ್ಮಣಾ ಭವತಿ) ಲೋಕದಲ್ಲಿ ಅನೇಕ ಬ್ರಹ್ಮಜ್ಞಾನಿಗಳು ಇದ್ದಾರೆ ಎಂದು ಹೇಳುತ್ತಾರೆ. ಆದರೆ ಬ್ರಹ್ಮಜ್ಞಾನಿಗಳಲ್ಲಿ ಯಾರಿಗೂ ಈಗ ಈ ಸಂಸಾರದಲ್ಲಿ ಇರುವಷ್ಟು ದಿನಗಳಲ್ಲಿ ಮುಕ್ತಿಯಾದುದನ್ನು ಯಾರೂ ತಿಳಿದಿಲ್ಲ (ಕಂಡಿಲ್ಲ). ಯಾವ ದೇಶಕಾಲಗಳಲ್ಲಿಯೂ ಮುಕ್ತಿಸ್ಥಾನ ಮುಕ್ತರ ವ್ಯಾಪಾರಗಳನ್ನು ಯಾರೂ ಕಂಡವರಿಲ್ಲ. (ಬ್ರಹ್ಮವಿದಾಂ ಇದಾನೀಮೇವ ಮುಕ್ತಿರ್ನ ಭವತಿ ಕ್ವಾಪಿ ನ ದೃಷ್ಟಾ.....)

**ಅವತಾರಿಕೆ :** ಈ ರೀತಿಯಾಗಿ ಬ್ರಹ್ಮಮೀಮಾಂಸಾ ಶಾಸ್ತ್ರವು ಆರಂಭಿಸುವುದಕ್ಕೆ ಯೋಗ್ಯವಲ್ಲ ಎಂಬ ಪಂಡಿತರ ಪೂರ್ವಪಕ್ಷವನ್ನು ಮಾಯಾವಾದಿಗಳ ರೀತಿಯಿಂದ ಪರಿಹರಿಸುತ್ತಾರೆ.

**ಅತ್ರ ಕಶ್ಚಿದಮುಮಭ್ಯಚೋದಯಚ್ಛುದ್ಧಮಸ್ಯ ವಿಷಯಃ ಸ್ವಮಾನಸಮ್ ।**
**ಶುದ್ಧವೇದನಫಲಂ ವದೇನ್ನ ಚೇದ್ಬಂಧಭಂಗ ಇತಿ ಕಿಂ ತತೋ ವದ ॥೪೫॥**

**ತಾತ್ಪರ್ಯ :** ನಿರ್ಗುಣವಾದ, ನಿರಾಕಾರವಾದ, ಶುದ್ಧಬದ್ಧಮುಕ್ತ ಸ್ವಭಾವವುಳ್ಳ (ಯಾವ ಸಂಬಂಧವೂ ಇಲ್ಲದ, ಜ್ಞಾನಸ್ವರೂಪವಾದ, ಸಮಸ್ತಸಂಗವರ್ಜಿತವಾದಸ್ವಭಾವವುಳ್ಳ) ಬ್ರಹ್ಮವು ಒಂದೇ ಪಾರಮಾರ್ಥಿಕವಾದ ವಸ್ತುವು. ಆ ನಿರ್ಗುಣಬ್ರಹ್ಮವೇ ಮಾಯೆಯೆಂಬ ಉಪಾಧಿಗ್ರಸ್ತವಾಗಿ ಈಶ್ವರನೆಂದೂ, ಅವಿದ್ಯಾ ಎಂಬ ಉಪಾಧಿಗ್ರಸ್ತವಾಗಿ ಜೀವನೆಂದು ಹೇಳಲ್ಪಡುತ್ತದೆ. ಮಾಯಾ

ಅವಿದ್ಯಾ ಎಂದು ಎರಡು ಪ್ರಕಾರವಾದ ಅನಾದಿಯಾದ ಮಿಥ್ಯಾಭೂತವಾದ ಉಪಾಧಿಯಿಂದ ಕಲ್ಪಿಸಿಕೊಂಡ ಈ ಜೀವೇಶ್ವರರಿಬ್ಬರೂ ಪಾರಮಾರ್ಥಿಕರಲ್ಲ; ಕಲ್ಪಿತರು, ವ್ಯಾವಹಾರಿಕ ಸತ್ತಾ ಉಳ್ಳವರು, ಸುಳ್ಳಾದವರು. ಬ್ರಹ್ಮವು ನಿತ್ಯದಲ್ಲಿಯೂ ಸಿದ್ಧವಾದುದು, ಪ್ರಕಾಶಮಾನವಾದುದು. ಆದರೆ ಎಲ್ಲಿಯವರೆಗೆ ಮಾಯಾ, ಅವಿದ್ಯಾ ಎಂಬ ಉಪಾಧಿಗಳ ಸಂಬಂಧವು ಮುಂದುವರೆಯುತ್ತದೆಯೋ ಅಲ್ಲಿಯವರೆಗೆ ಅದು ಪ್ರಕಾಶಮಾನವಾಗುವುದಿಲ್ಲ (ತೋರುವುದಿಲ್ಲ). ನಿರಂತರದಲ್ಲಿಯೂ ವೇದಾಂತಾಭ್ಯಾಸವನ್ನು ಮಾಡಿ ಪಾರಮಾರ್ಥಿಕವಾದ ಬ್ರಹ್ಮಸ್ವರೂಪದ ಅನುಸಂಧಾನ ಮಾಡುತ್ತಾ ಇದ್ದರೆ ಅಂತಃಕರಣದಲ್ಲಿ ಶುದ್ಧಬ್ರಹ್ಮ ವಿಷಯದ ಸಂಸ್ಕಾರ ಉಂಟಾಗುತ್ತದೆ. ಅದರಿಂದ "ಅಹಂ ನಿರ್ಗುಣಃ=ನಾನು ನಿರ್ಗುಣನು; ಅಹಂ ನಿರಾಕಾರಃ=ನಾನು ನಿರಾಕಾರನು; ಅಹಂ ಬ್ರಹ್ಮ=ನಾನು ಬ್ರಹ್ಮನು ಇವೇ ಮೊದಲಾದ ಆಕಾರವುಳ್ಳ ಜ್ಞಾನಧಾರೆ ಉಂಟಾಗುತ್ತದೆ. ಈ ಜ್ಞಾನಧಾರೆಯು ಪರಿಪಕ್ವವಾಗುತ್ತಾ, ಕೊನೆಯ ಸಮಯದಲ್ಲಿ, (ಮುಕ್ತಿಯಾಗುವ ಕ್ಷಣಕ್ಕಿಂತ ಹಿಂದಿನ ಕ್ಷಣದಲ್ಲಿ) ಹಿಂದೆ ಹೇಳಿದಂತಹಾ ಜ್ಞಾನವು ಉಂಟಾದಾಗ ಮಾಯಾ ಮತ್ತು ಅವಿದ್ಯೆಗಳೆಂಬ ಉಪಾಧಿಗಳು ನಿವೃತ್ತಿಯಾಗುತ್ತವೆ. ಉಪಾಧಿಯು ನಿವೃತ್ತವಾದಾಗ ಶುದ್ಧಬ್ರಹ್ಮವು ಪ್ರತಿಭಾಸಿತವಾಗುತ್ತದೆ. ಈ ಶುದ್ಧಬ್ರಹ್ಮವು ಬ್ರಹ್ಮಮೀಮಾಂಸಾದಿ ಶಾಸ್ತ್ರಗಳಿಂದ ಉಂಟಾದ ಪರೋಕ್ಷಜ್ಞಾನಕ್ಕೆ ವಿಷಯವಾಗುವುದಿಲ್ಲ. ಆದರೂ ಬ್ರಹ್ಮಮೀಮಾಂಸಾ ಶಾಸ್ತ್ರವನ್ನು ಅಭ್ಯಾಸ ಮಾಡಿದಾಗ ಉಂಟಾಗುವ ತೀಕ್ಷ್ಣವಾದ ಉಪಾಸನೆಯಿಂದ ಮನಸ್ಸು ಶುದ್ಧವಾದಾಗ, ಆ ಮನಸ್ಸಿನಿಂದ ಜೀವಭಾವಪ್ರಾಪಕವಾದ ಉಪಾಧಿಯು ನಿವೃತ್ತವಾಗಿ ಸ್ವತಃ ಭಾಸಮಾನವಾಗಿರುವ ಪರಬ್ರಹ್ಮವು ಪ್ರತಿಬಂಧಕ ನಿವೃತ್ತಿಯಿಂದ ಭಾಸಮಾನವಾಯಿತು ಎಂದು ಔಪಚಾರಿಕವಾಗಿ ಹೇಳುತ್ತೇವೆ. ಬ್ರಹ್ಮಮೀಮಾಂಸ ಶಾಸ್ತ್ರ ಇಲ್ಲದಿದ್ದರೆ ಹಿಂದೆ ಹೇಳಿದ ರೀತಿಯಿಂದ ಜೀವಭಾವ ಪ್ರಾಪಕವಾದ ಉಪಾಧಿಯು ನಿವೃತ್ತವಾಗುವುದಿಲ್ಲ. ಶುದ್ಧಬ್ರಹ್ಮವು ಪ್ರತಿಬಂಧಕ ನಿವೃತ್ತಿ ಆಗದಿರುವುದರಿಂದ ವಿಷಯವಾಗುವುದಿಲ್ಲ. ಹೀಗೆ ಉಪಾಧಿ ನಿವೃತ್ತಿ ಆಗದಿರುವಾಗ ಬ್ರಹ್ಮವು ಅಜ್ಞಾನವಾಗಿರುವುದರಿಂದ ಅದು ವಿಷಯವಾಗುವುದಿಲ್ಲ. ಉಪಾಧಿ ನಿವೃತ್ತಿಯಾಗುವಾಗ ಬ್ರಹ್ಮವು ಭಾಸಮಾನ ಆಗುವುದರಿಂದ ಬ್ರಹ್ಮ ವಿಷಯವಾಗುತ್ತದೆ.

ಬ್ರಹ್ಮಮೀಮಾಂಸಾ ಶಾಸ್ತ್ರಕ್ಕೆ ಅಜ್ಞಾತವಾದ ಶುದ್ಧಬ್ರಹ್ಮ ವಿಷಯಕತ್ವವೂ ಯುಕ್ತವಾಗುತ್ತದೆ. ಆದುದರಿಂದ ಶಾಸ್ತ್ರಕ್ಕೆ ವಿಷಯವಿಲ್ಲದಿರುವುದರಿಂದ ಶಾಸ್ತ್ರಾರಂಭವು ಯುಕ್ತವಲ್ಲ ಎಂಬ ಆಕ್ಷೇಪಕ್ಕೆ ಅವಕಾಶವಿಲ್ಲ. ಬ್ರಹ್ಮಮೀಮಾಂಸಾ ಶಾಸ್ತ್ರದಿಂದ ಉತ್ಪನ್ನವಾದ ಜ್ಞಾನದಿಂದ ಮಾಯಾ ಮತ್ತು ಅವಿದ್ಯಾ ಎಂಬ ಹೆಸರಿನ ಉಪಾಧಿಯು ನಿವೃತ್ತವಾದಾಗ ಅವೆರಡರ ಪರಿಣಾಮರೂಪವಾದ ಸಮಸ್ತ ಪ್ರಪಂಚವೂ ಕೂಡಲೇ ನಿವೃತ್ತವಾಗುತ್ತದೆ. ಆ ಪ್ರಪಂಚವು ನಿವೃತ್ತವಾದರೆ ಕರ್ತೃತ್ವ, ಭೋಕ್ತೃತ್ವ (ನಾನು ಮಾಡುತ್ತೇನೆ=ನಾನು ಅನುಭವಿಸುತ್ತೇನೆ) ಎಂಬ ಸಂಸಾರವೂ ಸಂಪೂರ್ಣವಾಗಿ ನಿವೃತ್ತವಾಗುತ್ತದೆ. ಈ ಸಂಸಾರ ನಿವೃತ್ತಿಯು, ಅವಿದ್ಯಾಸ್ತಮಯ, ಅವಿದ್ಯಾಪ್ರಧ್ವಂಸ, ಎಂಬ ಹೆಸರಿನಿಂದ ಕರೆಯಲ್ಪಡುತ್ತದೆ. ಬ್ರಹ್ಮಮೀಮಾಂಸಶಾಸ್ತ್ರದ ಅಭ್ಯಾಸಕ್ಕೆ ಈ ಸಂಸಾರ ನಿವೃತ್ತಿಯೇ ಫಲವಾದುದರಿಂದ ಬ್ರಹ್ಮ ಜಿಜ್ಞಾಸೆಯು ನಿಷ್ಫಲವಾದುದು, ಬ್ರಹ್ಮಮೀಮಾಂಸಾಶಾಸ್ತ್ರವು

ಆರಂಭಿಸಲ್ಪಡಬೇಕಾಗಿಲ್ಲ ಎಂಬ ಆಕ್ಷೇಪಕ್ಕೂ ಅವಕಾಶವಿಲ್ಲ. ಶುದ್ಧಬ್ರಹ್ಮನ ಭಾನವು ಚರಮವೃತ್ತಿಜ್ಞಾನರೂಪವಾದುದು. ಅಂದರೆ ಜೀವಾಭಾವದಲ್ಲಿ ಬರುವ ಕೊನೆಯ ವೃತ್ತಿಜ್ಞಾನವು ಶುದ್ಧಬ್ರಹ್ಮ ವಿಷಯಕವಾಗಿರುತ್ತದೆ. ಅಥವಾ ಕೊನೆಯ ವೃತ್ತಿಜ್ಞಾನ ಉಂಟಾದ ಅವ್ಯವಹಿತ ಉತ್ತರಕ್ಷಣದಲ್ಲಿ ಶುದ್ಧಬ್ರಹ್ಮಭಾವ ಉಂಟಾಗುತ್ತದೆ. ಸಂಸಾರ ನಾಶವು ಚರಮವೃತ್ತಿಜ್ಞಾನದ ಫಲವಾಗಿದ್ದರೂ, ಶುದ್ಧಬ್ರಹ್ಮವಿಷಯಕವಾದ ವೃತ್ತಿಜ್ಞಾನದ ಅನಂತರ ಉಂಟಾಗಿರುವುದರಿಂದ, ಅಥವಾ ಚರಮವೃತ್ತಿಜ್ಞಾನ ವ್ಯವಹಿತೋತ್ತರಕ್ಷಣದಲ್ಲಿ ಉಂಟಾಗುವುದರಿಂದ ಸಂಸಾರನಿವೃತ್ತಿಯು ಬ್ರಹ್ಮಜ್ಞಾನದ ಫಲವೆಂದು ಹೇಳುವುದು ಉಚಿತವಾಗುತ್ತದೆ. ಶುದ್ಧಬ್ರಹ್ಮಭಾನರೂಪವಾದ ಚರಮ ವೃತ್ತಿಜ್ಞಾನಕ್ಕೆ ಸಂಸಾರಬಂಧನಿವೃತ್ತಿಯು ಫಲವೆಂದು ಒಪ್ಪದಿದ್ದರೆ ಚರಮವೃತ್ತಿಜ್ಞಾನಸಮಯದಲ್ಲಿ ಎಲ್ಲಾ ಪದಾರ್ಥಗಳೂ ನಾಶದ ಕೊನೆಯ ಅಂಚನ್ನು ತಲುಪಿರುವುದರಿಂದ ಉತ್ತರ ಕ್ಷಣದಲ್ಲಿ ಅವೆಲ್ಲವೂ ನಾಶವಾಗುವುದರಿಂದ ಸಂಸಾರ ನಿವೃತ್ತಿಯ ಹೊರತು ಬೇರೆ ಫಲವಿಲ್ಲದಿರುವುದರಿಂದ ಬ್ರಹ್ಮಜ್ಞಾನರೂಪವಾದ ಚರಮವೃತ್ತಿಜ್ಞಾನವನ್ನು ನಿಷ್ಫಲವೆಂದೇ ಹೇಳಬೇಕಾಗುತ್ತದೆ. ಆದುದರಿಂದ ಬಲಾತ್ಕಾರದಿಂದಲಾದರೂ ಬೇರೆ ಉಪಾಯವಿಲ್ಲದಿರುವುದರಿಂದ ಕೊನೆಯ ವೃತ್ತಿಜ್ಞಾನಕ್ಕೆ ಬಂಧನಿವೃತ್ತಿಯೇ ಫಲವೆಂದು ಹೇಳಬೇಕು.

ಹೀಗೆ ಬ್ರಹ್ಮಮೀಮಾಂಸಾಶಾಸ್ತ್ರಕ್ಕೆ ಶುದ್ಧಬ್ರಹ್ಮನೇ ವಿಷಯನೆಂದೂ, ಬಂಧನಿವೃತ್ತಿಯೇ ಪ್ರಯೋಜನವೆಂದೂ, ಬಂಧನಿವೃತ್ತಿ ಎಂಬ ಮೋಕ್ಷವನ್ನು ಅಪೇಕ್ಷಿಸುವವನೇ ಅಧಿಕಾರಿಯೆಂದೂ, ಯಥಾಯೋಗ್ಯವಾಗಿ ಸಂಬಂಧವಿದೆಯೆಂದು ಸಿದ್ಧವಾಯಿತು. ಅದುದರಿಂದ ಬ್ರಹ್ಮಮೀಮಾಂಸಾಶಾಸ್ತ್ರವನ್ನು ಆರಂಭಿಸಬೇಕಾಗಿಲ್ಲ. ಈ ಶಾಸ್ತ್ರವನ್ನು ಓದಬೇಕಾಗಿಲ್ಲ ಎಂಬ ಆಕ್ಷೇಪವು ಯುಕ್ತವಲ್ಲ. (ಬ್ರಹ್ಮವು ಎರಡು ವಿಧ–ಸಗುಣ ಮತ್ತು ನಿರ್ಗುಣವೆಂದು. ನಿರ್ಗುಣ ಬ್ರಹ್ಮೋಪಾಸನೆಯನ್ನು ಮಾಡಲಾಗದ ಅಜ್ಞಾನಿಗಳು ಸಗುಣಬ್ರಹ್ಮನನ್ನು ಉಪಾಸನೆ ಮಾಡಿ ಇತರ ಪುರುಷಾರ್ಥಗಳನ್ನು ಹೊಂದುತ್ತಾರೆ. ಮುಮುಕ್ಷುಗಳು ಮಾತ್ರ ನಿರ್ಗುಣ ಬ್ರಹ್ಮೋಪಾಸನೆಯನ್ನು ಮಾಡುತ್ತಾರೆ.

**ಅವತಾರಿಕೆ** : ಈ ರೀತಿಯಾಗಿ ಬ್ರಹ್ಮಮೀಮಾಂಸಾ ಶಾಸ್ತ್ರಕ್ಕೆ ಅನುಬಂಧ ಚತುಷ್ಟಯ ಶೂನ್ಯತ್ವವನ್ನು ಹೇಳಿರುವುದನ್ನು ಮತ್ತೊಬ್ಬ ಪಂಡಿತನು ಖಂಡಿಸಿ, ಬ್ರಹ್ಮಮೀಮಾಂಸಾಶಾಸ್ತ್ರಕ್ಕೆ ಅನುಬಂಧ ಚತುಷ್ಟಯವಿದೆ ಎಂದು ಹೇಳಿದಾಗ ಇನ್ನೂ ಒಬ್ಬ ಪಂಡಿತನು ಅವನು ಮಾಡಿದ ಪರಿಹಾರವನ್ನು ಖಂಡಿಸುತ್ತಾನೆ. ಇದನ್ನು ಕವಿಗಳು ತಿಳಿಸುತ್ತಾರೆ.

**ಇತ್ಯುದೀರಿತಗಿರಾಽತಿರೋಷಿತಸ್ತದ್ವಚಃಪ್ರತಿವಚೋಽನ್ಯ ಆದದೇ ।**
**ಯತ್ತು ಶುದ್ಧಮುದಿತಂ ನ ಮಾನಸಂ ತನ್ನ ಯುಕ್ತಮಿತಿ ಹಂತ ಚಿಂತ್ಯತೇ ॥೪೬॥**

**ತಾತ್ಪರ್ಯ** : ಹಿಂದೆ ಹೇಳಿದ ರೀತಿಯಿಂದ ಶ್ರೀಗುರುರಾಜರ ಎರಡನೇ ಶಿಷ್ಯನು ಹೇಳಿದ ಮಾತನ್ನು ಕೇಳಿ ತುಂಬಾ ಸಿಟ್ಟಾದ ಶ್ರೀಗುರುರಾಜರ ಮತ್ತೊಬ್ಬ ಶಿಷ್ಯನು ಎರಡನೆಯವನ

ಮಾತಿಗೆ ಪ್ರತ್ಯುತ್ತರವನ್ನು ಕೊಟ್ಟನು. "ಶುದ್ಧ ಬ್ರಹ್ಮ (ನಿರ್ಗುಣ ಬ್ರಹ್ಮ) ಎಂಬ ಯಾವ ವಸ್ತುವಿದೆಯೋ ಅದು ವಿಷಯವೆಂದೂ ಅದು ಮಾನಸ ಪ್ರತ್ಯಕ್ಷಕ್ಕೆ ವಿಷಯವೆಂದು ನೀವು ಹೇಳುವುದು ಯುಕ್ತವಲ್ಲ. ನೀವು ಹೇಳಿದ ಶುದ್ಧಬ್ರಹ್ಮವು ಯುಕ್ತಿರಹಿತವಾದುದು. ಯುಕ್ತಿಗಳಿಂದ ಅದನ್ನು ಸಿದ್ಧಪಡಿಸಲು ಸಾಧ್ಯವಿಲ್ಲ; ಮತ್ತು ಅದು ಯುಕ್ತಿ ವಿರುದ್ಧವೂ ಆಗಿದೆ ಎಂದು ನಾನು ಈಗ ವಿಮರ್ಶಿಸುತ್ತಿದ್ದೇನೆ. ವಿಚಾರ ಮಾಡಿ ನಿರ್ಧರಿಸುತ್ತೇನೆ. ಆಹಾ! ನಾನು ಖಂಡಿಸಬೇಕಾಗಿದೆಯೆಂದು ವ್ಯಸನವಾಗುತ್ತದೆ" ಎಂದು ಮತ್ತೊಬ್ಬನು ಪ್ರತ್ಯುತ್ತರ ನೀಡಿದನು.)

**ವಿಶೇಷ ವಿಚಾರ** : 46ನೇ ಶ್ಲೋಕದ ವಿಸ್ತಾರವಾದ ತಾತ್ಪರ್ಯವನ್ನು ಮನನ ಮಾಡಿ ತಿಳಿದುಕೊಳ್ಳಬೇಕು. ಪೂರ್ವಪಕ್ಷಿಯು (ಪೂರ್ವಪಕ್ಷವಾದ ಮಾಡುವವನು) ಶುದ್ಧ ಬ್ರಹ್ಮವೆಂಬ ಒಂದು ವಸ್ತುವಿದೆಯೆಂದೂ ಅದು ಮಾನಸ ಪ್ರತ್ಯಕ್ಷಕ್ಕೆ ಗೋಚರ ಆಗುತ್ತದೆಯೆಂದೂ ಹೇಳಿರುತ್ತಾನೆ. ಈ ಎರಡೂ ವಿಷಯಗಳೂ ಕೂಡಾ ಯುಕ್ತಿರಹಿತವೂ ಯುಕ್ತಿ ವಿರುದ್ಧವೂ ಆಗಿವೆ. ಯುಕ್ತಿ ಸಹಿತವಾದ ವಿಷಯ, ಯುಕ್ತಿ ರಹಿತವಾದ ವಿಷಯ, ಯುಕ್ತಿಗೆ ವಿರುದ್ಧವಾದ ವಿಷಯ, ಯುಕ್ತಿಗೆ ಅವಿರುದ್ಧವಾದ ವಿಷಯ ಈ ಎರಡರಲ್ಲಿ ಯುಕ್ತಿರಹಿತವಾದ ವಿಷಯದಲ್ಲಿಯೂ, ಯುಕ್ತಿವಿರುದ್ಧವಾದ ವಿಷಯದಲ್ಲಿಯೂ ಶ್ರುತಿಗೆ ಪ್ರಾಮಾಣ್ಯವನ್ನು ಹೇಳಲು ಸಾಧ್ಯವಿಲ್ಲ. ಹೀಗೆ ಯುಕ್ತಿರಹಿತವಾದ ಮತ್ತು ಯುಕ್ತಿವಿರುದ್ಧವಾದ, ಶ್ರುತಿಪ್ರಮಾಣರಹಿತವಾದ ಮತ್ತು ಶ್ರುತಿಪ್ರಮಾಣ ವಿರುದ್ಧವಾದ ಪ್ರಮೇಯ ರಾಶಿಯನ್ನು ಅವಲಂಬಿಸಿ ಶಾಸ್ತ್ರಾರಂಭವನ್ನು ಸಮರ್ಥಿಸುವುದು ಪ್ರಾಮಾಣಿಕರಾದ ಎಲ್ಲರಿಗೂ ಬಹಳ ಖೇದಕ್ಕೆ (ದುಃಖಕ್ಕೆ) ಕಾರಣವಾಗುತ್ತದೆ. ಶುದ್ಧಬ್ರಹ್ಮನಿಗೆ ಮಾನಸ ಪ್ರತ್ಯಕ್ಷವೇದ್ಯತ್ವವಿದೆಯೆಂದು ನೀವು ಹೇಳಿದುದಂತೂ ಅತ್ಯಂತ ಹಾಸ್ಯಾಸ್ಪದವಾಗಿದೆ. ಯಾವ ವಸ್ತುವಿಗೆ ಸ್ವರೂಪ, ಅಥವಾ ಆಕಾರವಿದೆಯೋ ಅದನ್ನು ಮಾತ್ರವೇ ಮಾನಸಪ್ರತ್ಯಕ್ಷ. ಅನುಮಿತಿ ಅಥವಾ ಶಾಬ್ದಪ್ರಮಿತಿಯಿಂದ ವಿಷಯೀಕರಿಸಿರಬಹುದು. ನೀವು ಹೇಳುವ ಶುದ್ಧಬ್ರಹ್ಮವಾದರೋ ಶಶವಿಷಾಣದಂತೆ (ಮೊಲದ ಕೋಡಿನಂತೆ), ರೂಪ ಆಕಾರ ರಹಿತವಾದುದು. ಅದನ್ನು ಯಾವ ಪ್ರಮಾಣದಿಂದ ವಿಷಯೀಕರಿಸಲು ಸಾಧ್ಯ! ಯಾವ ಸ್ವರೂಪ ಅಥವಾ ಆಕಾರವಿಲ್ಲದಿದ್ದರೂ ಪರಬ್ರಹ್ಮನನ್ನು ನಾವು ವಿಷಯೀಕರಿಸುತ್ತೇವೆ. ಎಂದು ಹೇಳುವುದಾದರೆ ಶಶವಿಷಾಣವೂ ಕೂಡಾ ಮಾನಸ ಪ್ರತ್ಯಕ್ಷ ಮುಂತಾದ ಪ್ರಮಾಣಗಳಿಗೆ (ನಿಮ್ಮ ಅಭಿಪ್ರಾಯದಂತೆ) ವಿಷಯವಾಗಿರುತ್ತದೆ. ಆದುದರಿಂದ ಶಾಸ್ತ್ರಕ್ಕೆ ಶಶವಿಷಾಣವೇ ಏಕೆ ವಿಷಯವಾಗಬಾರದು? ಬ್ರಹ್ಮಮೀಮಾಂಸಾಶಾಸ್ತ್ರಕ್ಕೆ ವಿಷಯವಲ್ಲವಾದುದರಿಂದ ಅದನ್ನು ಪ್ರಾರಂಭ ಮಾಡಬೇಕಾಗಿಲ್ಲ ಎಂಬ ಪೂರ್ವಪಕ್ಷ ಬಂದಾಗ ಆ ಶಾಸ್ತ್ರಕ್ಕೆ ಶಶವಿಷಾಣವೇ ವಿಷಯವಾಗಿರುವಾಗ ವಿಷಯವಿಲ್ಲವೆಂದು ಹೇಗೆ ಹೇಳುತ್ತೀರಿ? ಅದು ಸವಿಷಯಕವೇ ಆದುದರಿಂದ, ಆರಂಭ ಮಾಡಲು ಯೋಗ್ಯವಾಗಿದೆ ಎಂದು ನೀವು ಏಕೆ ಉತ್ತರ ಕೊಡಬಾರದಾಗಿತ್ತು? ಶುದ್ಧಬ್ರಹ್ಮವೇ ಶಾಸ್ತ್ರಕ್ಕೆ ವಿಷಯವಾಗಿರುವುದರಿಂದ ಶಾಸ್ತ್ರವು ಆರಂಭಣೀಯವಾಗಿದೆಯೆಂದು ಅನಾವಶ್ಯಕವಾಗಿ ಪ್ರಯಾಸಪಟ್ಟು ಶಾಸ್ತ್ರದ ಆರಂಭವನ್ನು ಏಕೆ ಸಮರ್ಥಿಸಬೇಕು?

**ಅವತಾರಿಕೆ :** ಅದ್ವೈತಿಗಳು ಹೇಳುವ ಬ್ರಹ್ಮವು ಶೂನ್ಯರೂಪವಾಗುತ್ತದೆ ಎಂದು ಹೇಳಿದುದನ್ನು ಕವಿಗಳು ತಿಳಿಸುತ್ತಾರೆ.

**ಯನ್ನ ಭಾತಿ (ಯತ್ರ ನಾಸ್ತಿ ) ಜಡಜೀವಭೇದನಂ ಕರ್ತೃತಾದಿವಿರಹೋಽದ್ವಿತೀಯತಾ।**
**ಏಕತಾಽಪಿ ತದಸಾರಮಾತ್ಮನೋಽಭಿನ್ನಮೇತದಿತಿ ಚೇದಸಂಶಯಃ ॥೪೭॥**

**ತಾತ್ಪರ್ಯ :** ನೀವು ಹೇಳುವ ಶುದ್ಧಬ್ರಹ್ಮವು ಪ್ರಕಾಶವಾಗುವುದಿಲ್ಲ. ಜ್ಞಾನವಿಷಯಕವಾಗುವುದಿಲ್ಲ. ಆ ಶುದ್ಧಬ್ರಹ್ಮನಲ್ಲಿ ಜ್ಞಾನ ವಿಷಯತ್ವವೆಂಬ ಧರ್ಮವಿರುವುದಿಲ್ಲ. ಆ ಶುದ್ಧಬ್ರಹ್ಮನಲ್ಲಿ ಜಡಜೀವಭೇದವಿಲ್ಲ. ಸಮಸ್ತ ಜಡಜೀವಾಭಿನ್ನವಾಗಿಯೇ ಅದು ಇದೆ. ಆ ಶುದ್ಧಬ್ರಹ್ಮನಲ್ಲಿ ಕರ್ತೃತ್ವಭೋಕ್ತೃತ್ವ ಮುಂತಾದ ಯಾವ ಧರ್ಮಗಳೂ ಇಲ್ಲ. ಅದು ಅದ್ವಿತೀಯವಾಗಿದೆ. ತನಗಿಂತ ಬೇರೆಯಾದ ಎರಡನೆಯ ವಸ್ತುವೇ ಇಲ್ಲದುದು. ಅದರಲ್ಲಿ ವಾಸ್ತವವಾಗಿ ಏಕತ್ವವೆಂಬ ಧರ್ಮವೂ ಇಲ್ಲ. ಏಕತ್ವವೂ ಆತ್ಮನಿಗಿಂತ ಅಭಿನ್ನವಾಗಿಯೇ ಇದೆ. ಇಂತಹಾ ವಸ್ತುವು ಶುದ್ಧಬ್ರಹ್ಮವೆಂದು ಹೇಳಿದರೆ ಆ ಬ್ರಹ್ಮವು ಶೂನ್ಯಸ್ವರೂಪವೆಂದೇ ಹೇಳಿದಂತಾಗುತ್ತದೆ. ಈ ವಿಷಯದಲ್ಲಿ ಯಾವ ಸಂಶಯವೂ ಇಲ್ಲ.

ಶುದ್ಧಬ್ರಹ್ಮನಲ್ಲಿ ಜಡಜೀವ ಭೇದವಿಲ್ಲ ಜಗತ್ ಕಾರಣತ್ವಾದಿ ಧರ್ಮಗಳೂ ಅಲ್ಲಿಲ್ಲ. ಅದು ಅದ್ವಿತೀಯ ಏಕವೆಂದು ಹೇಳಿದರೂ ಅದರಲ್ಲಿ ಅದ್ವಿತೀಯತ್ವ ಮತ್ತು ಏಕತ್ವಗಳೆಂಬ ಧರ್ಮಗಳಿಲ್ಲ. ಬ್ರಹ್ಮಾಭಿನ್ನವಾದ ಧರ್ಮಾಭಾವವೂ ಅಲ್ಲಿಲ್ಲ. ಒಟ್ಟಿನಲ್ಲಿ ಸರ್ವಧರ್ಮಶೂನ್ಯವಾದುದೇ ಶುದ್ಧಬ್ರಹ್ಮವೆಂದು ಹೇಳುವುದಾದರೆ ನಿಮ್ಮ ಅಶುದ್ಧಬ್ರಹ್ಮವು ಶೂನ್ಯಕ್ಕಿಂತ ಹೇಗೆ ಭಿನ್ನವೆಂದು ಹೇಳುತ್ತೀರಿ. ನಿಮ್ಮ ಶುದ್ಧಬ್ರಹ್ಮವು (ಶೂನ್ಯವೆಂದೇ ನಾವು ಹೇಳುತ್ತೇವೆ. ಅದು ಶೂನ್ಯಾತ್ಮಕವೆಂಬ ವಿಷಯದಲ್ಲಿ ಯಾವ ಸಂಶಯವೂ ಇಲ್ಲ.

**ವಿಶೇಷ ವಿಚಾರ :** 47ನೆಯ ಶ್ಲೋಕದ ವಿಸ್ತಾರವಾದ ತಾತ್ಪರ್ಯ–ಹಿಂದೆ ಶುದ್ಧಬ್ರಹ್ಮವನ್ನು ಒಪ್ಪಿದರೂ ಕೂಡ ಅದಕ್ಕೆ ಮಾನಸಪ್ರತ್ಯಕ್ಷವಿಷಯತ್ವವು ಬರುವುದಿಲ್ಲ ಎಂದು ಹೇಳಿದ್ದಾಗಿದೆ. ಈಗ ಶುದ್ಧ ಬ್ರಹ್ಮಾಂಗೀಕಾರ ಮಾಡುವ ವಿಷಯದಲ್ಲಿ ಯುಕ್ತಿಗಳಿಲ್ಲ. ಮತ್ತು ಶುದ್ಧಬ್ರಹ್ಮಾಂಗೀಕಾರವು ಯುಕ್ತಿವಿರುದ್ಧವೂ ಆಗಿದೆಯೆಂದು ಹೇಳುತ್ತಾರೆ.

ಶುದ್ಧಬ್ರಹ್ಮನಲ್ಲಿ ಜಡಜೀವಭೇದವೂ ಕರ್ತೃತ್ವ ಭೋಕ್ತೃತ್ವಾದಿ ಧರ್ಮಗಳೂ, ಇಲ್ಲ. ಶುದ್ಧಬ್ರಹ್ಮಾತಿರಿಕ್ತವಾದ ಪ್ರಪಂಚವೇ ಇಲ್ಲ. ಏಕತ್ವ ಮುಂತಾದ ಸಂಭಾವಿತವಾದ ಎಲ್ಲಾ ಧರ್ಮಗಳೂ, ಧರ್ಮಿಯಾದ ಶುದ್ಧಬ್ರಹ್ಮವು ಭಾಸಮಾನವಾಗಿದೆಯೆಂದು ಒಪ್ಪಿದರೂ ಈ ಧರ್ಮಗಳೂ ತೋರುವುದಿಲ್ಲ. ಧರ್ಮಿಯು ತೋರುವಾಗ ಅದರ ಧರ್ಮಗಳೂ ತೋರಬೇಕಲ್ಲವೇ! ಆದರೂ ತೋರುವುದಿಲ್ಲ ಎಂದು ಹೇಳುತ್ತೀರಿ. ಆದುದರಿಂದ ಶುದ್ಧಬ್ರಹ್ಮವೆಂಬ ಒಂದು ವಸ್ತುವು ಇದೆಯೆಂಬ ಮತವೇ ಸರಿಯಲ್ಲ. ಹಿಂದೆ ಹೇಳಿದ ಧರ್ಮವೆಲ್ಲವೂ

ಶುದ್ಧಬ್ರಹ್ಮನಿಗಿಂತ ಅಭಿನ್ನವಾದುದು ಎಂದು ಒಪ್ಪಿದರೂ ಈ ಧರ್ಮಗಳ ವಿಷಯದಲ್ಲಿ ಸಂಶಯವೇ ಬರಲಾರದು. ಅದು ಹೇಗೆಂದರೆ,

ಲೋಕದಲ್ಲಿ ಕಪ್ಪೇಚಿಪ್ಪನ್ನು ನೋಡಿ "ಇದಂ ರಜತಂ" ಇದು ಬೆಳ್ಳಿ ಎಂಬ ಭ್ರಮೆಯು ಬರುತ್ತದೆ. ಅಲ್ಲಿ 'ಇದಂತ್ವ' ಎದುರಿಗಿರುವಿಕೆ ಎಂಬ ಸಾಮಾನ್ಯ ರೂಪದಿಂದ ಶುಕ್ತಿಯು (ಕಪ್ಪೇಚಿಪ್ಪು) ತೋರುತ್ತದೆ. ಅದರಲ್ಲಿ ರಜತದ ತಾದಾತ್ಮ್ಯವು. ಅಥವಾ ರಜತತ್ವದ ಸಂಸರ್ಗವು ತೋರುತ್ತದೆ. ಹತ್ತಿರಕ್ಕೆ ಹೋಗಿ ಪರೀಕ್ಷಿಸಿದಾಗ ಇದು ರಜತವಲ್ಲ; ಶುಕ್ತಿಯೇ ಆಗಿದೆ ಎಂದು ಬಾಧಜ್ಞಾನವು ಬರುತ್ತದೆ. ಅಲ್ಲಿ (ಬಾಧಜ್ಞಾನದಲ್ಲಿ) ಶುಕ್ತಿತ್ವ ಎಂಬ ವಿಶೇಷ ಧರ್ಮರೂಪದಿಂದ ಶುಕ್ತಿಯೂ, ಹಿಂದೆ ಅಲ್ಲಿ ಆರೋಪಿತವಾದ ರಜತ ತಾದಾತ್ಮ್ಯಾಕಾರಕ್ಕೆ ವಿರುದ್ಧವಾದ ರಜತಭೇದವೂ ತೋರುತ್ತದೆ. ಸಂಸರ್ಗಾರೋಪಪಕ್ಷದಲ್ಲಿ ಆರೋಪಿತವಾದ ರಜತತ್ವಸಂಸರ್ಗಕ್ಕೆ ವಿರುದ್ಧವಾದ ರಜತತ್ವಾಭಾವವಾಗಲೀ ತೋರುತ್ತದೆ ಎಂಬ ವಿಷಯದಲ್ಲಿ ವಿವಾದವೇ ಇಲ್ಲ. ಹಾಗೆಯೇ ಬ್ರಹ್ಮದಲ್ಲಿಯೇ 'ಅಯಂ ಘಟಃ' ಇದು ಘಟವು ಇತ್ಯಾದಿ ರೂಪವಾದ ಪ್ರಪಂಚಭ್ರಮವು ಇದಂತ್ವವೆಂಬ ಸಾಮಾನ್ಯರೂಪದಿಂದ ಶುದ್ಧಬ್ರಹ್ಮವನ್ನೂ, ಆ ಶುದ್ಧಬ್ರಹ್ಮನಲ್ಲಿ ಘಟಾದಿಗಳ ತಾದಾತ್ಮ್ಯವನ್ನಾಗಲೀ ಘಟತ್ವಾದಿ ಧರ್ಮ ಸಂಸರ್ಗವನ್ನಾಗಲೀ ವಿಷಯೀಕರಿಸುತ್ತದೆಂದು ಹೇಳಬೇಕು. 'ಅಯಂ ನ ಘಟಃ ಕಿಂತು ಶುದ್ಧಂ ಬ್ರಹ್ಮ' ನನಗೆ ಘಟವೆಂದು ತೋರಿದ ಇದು ಘಟವಲ್ಲ; ಶುದ್ಧಬ್ರಹ್ಮವೇ ಆಗಿದೆ. ಇದೇ ಮೊದಲಾದ ಚರಮವೃತ್ತಿ ಜ್ಞಾನದಲ್ಲಿ ಶುದ್ಧತ್ವವೆಂಬ ವಿಶೇಷ ಧರ್ಮಾಕಾರದಿಂದ ಶುದ್ಧಬ್ರಹ್ಮವೂ ಅಲ್ಲಿ ಆರೋಪಿತವಾದ ಘಟಾದಿಪ್ರಪಂಚತಾದಾತ್ಮ್ಯಾಕಾರಕ್ಕೆ ವಿರುದ್ಧವಾದ ಪ್ರಪಂಚಭೇದವಾಗಲೀ, ಅಥವಾ ಆರೋಪಿತವಾದ ಘಟತ್ವಸಂಸರ್ಗಕ್ಕೆ ವಿರುದ್ಧವಾದ ಘಟತ್ವಾದಿಗಳ ಅಭಾವವಾಗಲೀ ತೋರುತ್ತದೆಯೆಂದು ಅವಶ್ಯವಾಗಿ ಒಪ್ಪಬೇಕು. ಪ್ರಪಂಚಬಾಧಕವಾದ ಚರಮವೃತ್ತಿಜ್ಞಾನದಲ್ಲಿಯಾಗಲೀ, ಅನಂತರ ಬರುತ್ತದೆಯೆಂದು ಹೇಳುವ ಶುದ್ಧಬ್ರಹ್ಮ ವಿಷಯಕವಾದ ಜ್ಞಾನದಲ್ಲಿಯಾಗಲೀ ಶುದ್ಧಬ್ರಹ್ಮವು ತೋರುವಂತೆ ಶುದ್ಧಬ್ರಹ್ಮನಲ್ಲಿರುವ ಜಡಭೇದವಾಗಲೀ, ಜೀವಭೇದವಾಗಲೀ ಅವಶ್ಯವಾಗಿ ತೋರಲೇಬೇಕು. ಪರಮಾರ್ಥ ಸ್ವರೂಪವಾದ ಶುದ್ಧಬ್ರಹ್ಮನಲ್ಲಿ ಅಪರಮಾರ್ಥವಾದ ಜಡ ಮತ್ತು ಜೀವರಿಗಿಂತ ಭೇದವಿದೆಯೆಂಬ ವಿಷಯದಲ್ಲಿ ವಿವಾದವಿಲ್ಲವಷ್ಟೆ! ಆ ಭೇದವು ಹಿಂದೆ ಆರೋಪಿತವಾದ ಜಡಾಕಾರ ಅಥವಾ ಜೀವಾಕಾರಕ್ಕೆ ವಿರುದ್ಧವಾಗಿ ಬಾಧಜ್ಞಾನದಲ್ಲಿ ತೋರುವುದರಿಂದ ಸತ್ಯವೇ ಆಗಿದೆ, ಮಿಥ್ಯಾ ಅಲ್ಲ ಎಂದೂ ಅವಶ್ಯವಾಗಿ ಅಂಗೀಕರಿಸಬೇಕು. ಪ್ರಪಂಚನಾಶಕವಾದ ಚರಮವೃತ್ತಿ ಜ್ಞಾನದಲ್ಲಿಯಾಗಲೀ, ಅನಂತರ ಉಂಟಾಗಲಿರುವ ಶುದ್ಧಬ್ರಹ್ಮ ವಿಷಯಕವಾದ ಜ್ಞಾನದಲ್ಲಿಯಾಗಲೀ ಜಡಭೇದ ಜೀವಭೇದಗಳು ತೋರುತ್ತವೆ. ವಿಷಯವಾಗುತ್ತವೆ ಎಂದು ಒಪ್ಪಿದರೆ ಶುದ್ಧಬ್ರಹ್ಮನಂತೆ, ಶುದ್ಧಬ್ರಹ್ಮನಲ್ಲಿರುವ ಜೀವಭೇದ ಜಡಭೇದಗಳಿಗೂ ಸತ್ಯತ್ವವು ಬರಬೇಕಾಗುತ್ತದೆ. ಆದುದರಿಂದ ಅವೂ ಸತ್ಯವಾಗಿರುತ್ತವೆ. ಆಗ ಪಾರಮಾರ್ಥಿಕವಾದ ಎರಡು

ವಸ್ತುಗಳನ್ನು ಒಪ್ಪಿದಂತಾಗಿ ಅದ್ವೈತಹಾನಿಯಾಗುತ್ತದೆ. 'ನಾಯಂ ಘಟಃ ಕಿಂತು ಬ್ರಹ್ಮೈವ' ಎಂಬ ಬಾಧಜ್ಞಾನರೂಪವಾದ ಚರಮವೃತ್ತಿಜ್ಞಾನದಲ್ಲಿ ಜೀವಭೇದ ಜಡಭೇದಗಳು ತೋರುವುದಿಲ್ಲ ಎಂದು ಹೇಳುವುದಾದರೆ ಅದರಂತೆಯೇ ಶುದ್ಧಬ್ರಹ್ಮವೂ ತೋರುವುದಿಲ್ಲವೆಂದು ಹೇಳಬೇಕಾದೀತು. ಹೀಗೆ ಶುದ್ಧಬ್ರಹ್ಮವು ಚರಮವೃತ್ತಿ ಜ್ಞಾನದಲ್ಲಿಯಾಗಲೀ, ಅನಂತರ ಉಂಟಾಗಲಿರುವ ಕೇವಲ ಶುದ್ಧಬ್ರಹ್ಮವಿಷಯಕವಾದ ಜ್ಞಾನದಲ್ಲಿಯಾಗಲೀ ವಿಷಯವಾಗುತ್ತದೆ. ಆದುದರಿಂದ ಬ್ರಹ್ಮವು ಜ್ಞಾತವೇ ಆಗುವುದರಿಂದ ಬ್ರಹ್ಮಮೀಮಾಂಸಾಶಾಸ್ತ್ರಕ್ಕೆ ಪ್ರಯಾಸವು ವ್ಯರ್ಥವೇ ಆಗುತ್ತದೆ.

ಹೀಗೆಯೇ ನಾನು ಕರ್ತಾ 'ಅಹಂ ಕರ್ತಾ' ನಾನು ಭೋಕ್ತಾ 'ಅಹಂ ಭೋಕ್ತಾ' ನಾನು ದ್ವಿತೀಯಸಹಿತನು 'ಅಹಂ ಸದ್ವಿತೀಯಃ' ನಾನು ಅನೇಕನು "ಅಹಂ ಅನೇಕಃ" ಇತ್ಯಾದಿ ರೂಪವಾದ ಭ್ರಮೆಗಳು ಬ್ರಹ್ಮನಲ್ಲಿ ಕರ್ತೃತ್ವಭೋಕ್ತೃತ್ವಾದಿ ಅಧ್ಯಾಸರೂಪಗಳಾಗಿವೆ. ನಾನು ಕರ್ತನಲ್ಲ. 'ನಾಹಂ ಕರ್ತಾ', ನಾನು ಭೋಕ್ತನಲ್ಲ; 'ನಾಹಂ ಭೋಕ್ತಾ', ನಾನು ಅದ್ವಿತೀಯನು; 'ಅಹಂ ಅದ್ವಿತೀಯಃ', ನಾನು ಒಬ್ಬನು; 'ಅಹಮೇಕಃ', ಇತ್ಯಾದಿರೂಪವಾದ ಬ್ರಹ್ಮನಲ್ಲಿ ಕರ್ತೃತ್ವಾದಿಗಳ ಅಭಾವವನ್ನು ವಿಷಯೀಕರಿಸುವ ಬಾಧಜ್ಞಾನವು ಬರುತ್ತದೆಯೆಂದು ಹೇಳಬೇಕು. ಆ ಬಾಧಕಜ್ಞಾನದಲ್ಲಿ ಬ್ರಹ್ಮನಲ್ಲಿ ಕರ್ತೃತ್ವಾಭಾವ, ಭೋಕ್ತೃತ್ವಾಭಾವ, ಅದ್ವಿತೀಯತ್ವ, ಏಕತ್ವ, ಇವುಗಳೆಲ್ಲಾ ತೋರಿದರೆ ದ್ವೈತಹಾನಿಯಾಗುತ್ತದೆ. ಕರ್ತೃತ್ವಾದಿಗಳ ಅಭಾವವು ತೋರುವುದಿಲ್ಲವಾದರೆ ಶುದ್ಧಬ್ರಹ್ಮವೂ ತೋರದೇ ಹೋಗಬೇಕಾದೀತು; ಎಂಬುದಾಗಿ ಹಿಂದೆ ಹೇಳಿದ ದೋಷವೇ ಬರುತ್ತದೆ.

ಶುದ್ಧ ಬ್ರಹ್ಮನಲ್ಲಿರುವ ಜಡಭೇದ, ಜೀವಭೇದ ಮುಂತಾದ ಹಿಂದೆ ಹೇಳಿದ ಧರ್ಮಗಳು ಶುದ್ಧಬ್ರಹ್ಮನಿಗಿಂತ ಭಿನ್ನವಾಗಿಯೇ ಅಥವಾ ಶುದ್ಧಬ್ರಹ್ಮಸ್ವರೂಪವಾಗಿಯೇ? ಅವು (ಭೇದಗಳು) ಶುದ್ಧ ಬ್ರಹ್ಮನಿಗಿಂತ ಭಿನ್ನವಾಗಿದ್ದರೆ ಹಿಂದೆ ಹೇಳಿದ ದೋಷಗಳು ಬರುತ್ತವೆ. ಜಡಭೇದಾದಿಗಳು ಬ್ರಹ್ಮನಿಗಿಂತ ಅಭಿನ್ನವಾದರೆ ಶುದ್ಧಬ್ರಹ್ಮನಂತೆ ಅವುಗಳು ತೋರಿದರೂ, ಅವು ಶುದ್ಧಬ್ರಹ್ಮಾಭಿನ್ನವಾಗಿರುವುದರಿಂದ ದೋಷಪರಿಹಾರ ಮಾಡಿಕೊಳ್ಳಬಹುದು. ಆದರೂ ಕೂಡಾ ಸಂಸಾರಾವಸ್ಥೆಯಲ್ಲಿ 'ಅಹಂ' ಎಂಬ ಅರ್ಥರೂಪನಾಗಿರುವ ಪ್ರತ್ಯಗಾತ್ಮಸ್ವರೂಪನಾದ ಶುದ್ಧಬ್ರಹ್ಮನಿಗೂ ಭಾನವನ್ನು ಅಂಗೀಕರಿಸಿರುವುದರಿಂದ ಶುದ್ಧಬ್ರಹ್ಮವು ತೋರುವಾಗ ಶುದ್ಧಬ್ರಹ್ಮಾಭಿನ್ನವಾದ ಜೀವಭೇದ ಜಡಭೇದಾದಿಗಳಿಗೂ ತೋರಲೇಬೇಕಾಗುತ್ತದೆ. ಶುಕ್ತಿಯನ್ನು ಶುಕ್ತಿತ್ವೇನ ತಿಳಿದಾಗ ಅಲ್ಲಿ ರಜತಭೇದವು ತೋರುತ್ತಿರುವಾಗ 'ನೇದಂ ರಜತಂ ಕಿಂತು ಶುಕ್ತಿರೇವ' ಎಂಬ ಬಾಧಜ್ಞಾನದಲ್ಲಿ ಶುಕ್ತಿಯಲ್ಲಿರುವ ರಜತಭೇದ ವಿಷಯದಲ್ಲಿ ಹೇಗೆ ಸಂದೇಹವಿಲ್ಲವೋ ಹಾಗೆಯೇ ಶುದ್ಧಬ್ರಹ್ಮನನ್ನು ತಿಳಿದಾಗ, ಆ ಶುದ್ಧಬ್ರಹ್ಮನಿಗಿಂತ ಅಭಿನ್ನವಾದ ಜಡಭೇದ ಜೀವಭೇದಾದಿಗಳೂ ತಿಳಿಯಲ್ಪಡುತ್ತವೆ. ಆಗ ಶುದ್ಧಬ್ರಹ್ಮನಲ್ಲಿ ಜಡಭೇದಾದಿಗಳು ಇವೆಯೇ ಇಲ್ಲವೇ ಎಂಬ ಸಂಶಯವು ಬರುವುದಿಲ್ಲ. ಆದುದರಿಂದ ಶುದ್ಧಬ್ರಹ್ಮನಲ್ಲಿರುವ ಆ ಜಡಭೇದಾದಿ ಧರ್ಮಗಳಿಗೆ ಶುದ್ಧಬ್ರಹ್ಮನೊಡನೆ ಅಭೇದವನ್ನು ಹೇಳುವುದು ಉಚಿತವಲ್ಲ. ಆ ಧರ್ಮಗಳಿಗೆ ಬ್ರಹ್ಮನಿಗಿಂತಾ ಭೇದವನ್ನು ಹೇಳಿದರೆ ಹಿಂದೆ ಹೇಳಿದಂತೆ ಚರಮಜ್ಞಾನದಲ್ಲಿ ಅಥವಾ ಅನಂತರದಲ್ಲಿ

ಉಂಟಾಗುವ ಜ್ಞಾನದಲ್ಲಿ ಶುದ್ಧಬ್ರಹ್ಮವು ತೋರುವುದಿಲ್ಲವೆಂದು ಸಿದ್ಧವಾಗುತ್ತದೆ. ಆದುದರಿಂದ ಶುದ್ಧಬ್ರಹ್ಮವು ಮಾನಸ ಸಾಕ್ಷಾತ್ಕಾರಕ್ಕೆ ವಿಷಯವಾಗುತ್ತದೆ ಎಂದು ಪೂರ್ವಪಕ್ಷಿಗಳು ಹೇಳಿದ ವಿಷಯವು ಸರಿಯಲ್ಲ ಎಂಬುದಾಗಿ ಪ್ರತಿವಾದಿಯ ಅಭಿಪ್ರಾಯವು.

ಇಲ್ಲಿ "ಯತ್ರ ನಾಸ್ತಿ ಜಡಜೀವಭೇದನಂ" ಎಂಬ ಪಾಠಾಂತರವಿದೆ. ಆ ಪಾಠಾಂತರ ಪಕ್ಷದಲ್ಲಿ ಹೀಗೆ ಯೋಜನೆಯು– ಯತ್ರ=ಯಾವ ಶುದ್ಧಬ್ರಹ್ಮನಲ್ಲಿ, ಜಡಜೀವಭೇದನಂ=ಜಡಭೇದ ಮತ್ತು ಜೀವಭೇದಗಳು, ನಾಸ್ತಿ=ಇರುವುದಿಲ್ಲ; ಕರ್ತೃತಾದಿವಿರಹಃ=ಕರ್ತೃತ್ವ ಭೋಕ್ತೃತ್ವಾದಿಗಳ ಅಭಾವವು. ಅದ್ವಿತೀಯತಾ=ಅದ್ವಿತೀಯತ್ವವು, ಏಕತಾಪಿ=ಏಕತ್ವವೂ, ಏತೇಽಪಿ=ಇವುಗಳೂ, ಯತ್ರ=ಯಾವ ಶುದ್ಧಬ್ರಹ್ಮನಲ್ಲಿ, ನ ಸಂತಿ=ಇರುವುದಿಲ್ಲವೋ, ಕಿಂತು=ಮತ್ತೇನೆಂದರೆ, ಏತತ್=ಈ ಜಡಭೇದಾದಿ ಎಲ್ಲಾ ಧರ್ಮವೂ, ಆತ್ಮನಃ=ಶುದ್ಧಬ್ರಹ್ಮನ, ದೆಸೆಯಿಂದ (ಶುದ್ಧಬ್ರಹ್ಮನೊಡನೆ) ಅಭಿನ್ನಮಿತಿ ಚೇತ್ =ಅಭಿನ್ನವಾಗಿದೆ ಎಂದು ಅಂಗೀಕರಿಸಿದರೆ, ತತ್=ಜಡಭೇದಾದಿಗಳೊಡನೆ ಅಭಿನ್ನವಾಗಿದೆಯೆಂದು ಹೇಳಲ್ಪಡುವ ಶುದ್ಧಬ್ರಹ್ಮವು, ಅಸಾರಂ=ಶೂನ್ಯ ಸಮಾನವಾಗುತ್ತದೆ. ಅಸಂಶಯಃ=ಈ ವಿಷಯದಲ್ಲಿ ಸಂಶಯವಿಲ್ಲ, ಎಂದು ಆಯೋಜನೆಯು.

ಇಲ್ಲಿಯ ಅಭಿಪ್ರಾಯವು ಹೀಗಿದೆ. ಶೂನ್ಯದಲ್ಲಿ ಜಡಭೇದವಿಲ್ಲ; ಜೀವಭೇದವಿಲ್ಲ; ಕರ್ತೃತಾದಿಗಳ ಅಭಾವವೂ ಇಲ್ಲ; ಅದ್ವಿತೀಯತೆಯೂ ಇಲ್ಲ; ಏಕತ್ವವೂ ಇಲ್ಲ. ಅಖಂಡೈಕರಸವಾದುದರಿಂದ ಭೇದಮೂಲಕವಾದ ಧರ್ಮಧರ್ಮಿಭಾವವು ಬ್ರಹ್ಮನಲ್ಲಿರುವ ವಿಕಲ್ಪನಾಕ್ಷಮಂ=ವಿಕಲ್ಪಗಳಿಗೆ (ಈ ಪಕ್ಷವು) ಎದುರಾಳಿಯಲ್ಲವು. (ಸತ್ಯವೋ ಮಿಥ್ಯೆಯೋ ಎಂದು ವಿಕಲ್ಪ ಮಾಡಿದಾಗ ಈ ಪಕ್ಷವು ನಿಲ್ಲುವುದಿಲ್ಲ.) ತತ್ ಸ್ವರೂಪಂ ಜಗತ್ ಭಾಸತೇ ಇತಿ ಚೇತ್=ಬ್ರಹ್ಮಸ್ವರೂಪವೇ ಜಗದಾಕಾರದಿಂದ ಭಾಸಮಾನವಾಗುತ್ತದೆ ಎಂದು ಅಂಗೀಕರಿಸಿದರೆ, ತದಾಪಿ=ಆಗಲೂ, ಜಗತಿ=ಜಗತ್ತಿನಲ್ಲಿ, ತವ=ನಿನಗೆ, ಭ್ರಮಃ=ಭ್ರಾಂತಿಯು ನೈವ ಯುಜ್ಯತೇ=ಕೂಡುವುದಿಲ್ಲ. (ನಿನಗೆ ಭ್ರಮವು ಕೂಡುವುದಿಲ್ಲ (ಅದು ಬ್ರಹ್ಮಭ್ರಮವಾಗಿದೆಯಷ್ಟೆ!)).

(ಈ ಶ್ಲೋಕವನ್ನು ಇನ್ನೊಂದು ರೀತಿಯಿಂದ ವಿವರಿಸಬಹುದು) ಹಿಂದೆ ಹೇಳಿದ ಅರ್ಥವನ್ನೇ ಪ್ರತಿವಾದಿಯು ಸ್ಪಷ್ಟೀಕರಿಸುತ್ತಾನೆ.)

ಏತತ್=ಶುದ್ಧಬ್ರಹ್ಮನಲ್ಲಿ ಇದೆಯೆಂಬುದಾಗಿ ಹಿಂದೆ ಪ್ರಸಕ್ತವಾದ ಜಡಭೇದಾದಿಗಳು, ಅನ್ಯತ್ =ಶುದ್ಧಬ್ರಹ್ಮನಿಗಿಂತ ಭಿನ್ನವಾಗಿವೆ, ಇತ್ಯಪಿ=ಹೀಗೆ ಹೇಳುವುದೂ ಕೂಡಾ, ನ ಯುಕ್ತಿಮತ್=ಯುಕ್ತಿಯುಕ್ತವಲ್ಲ. ಅದಕ್ಕೆ ಕಾರಣವನ್ನು ತೋರಿಸುತ್ತಾರೆ. ಹಿ=ಯಾವ ಕಾರಣದಿಂದ, ಏತತ್= ಈ ಭೇದಾದಿ ಪದಾರ್ಥವು, ಸತ್=ಸತ್ಯವೇ? ಮೃಷಾವಾ=ಸುಳ್ಳೇ, ಇತಿ=ವಿಕಲ್ಪನಾಕ್ಷಮ್=ವಿಕಲ್ಪಕ್ಕೆ ಈಡಾಗುವುದಿಲ್ಲ. (ವಿಕಲ್ಪ ಮಾಡಿದಾಗ ನಿಲ್ಲುವುದಿಲ್ಲ.) (ಆದುದರಿಂದ ಯುಕ್ತಿಯುಕ್ತವಲ್ಲ). "ಶುದ್ಧಬ್ರಹ್ಮನಲ್ಲಿ ಇದೆಯೆಂದು ಹೇಳಿರುವ ಜಡಭೇದ ಜೀವಭೇದ ಮುಂತಾದುದು ಶುದ್ಧ ಬ್ರಹ್ಮನಿಗಿಂತ ಭಿನ್ನವೇ ಅಥವಾ ಅಭಿನ್ನವೇ? ಶುದ್ಧಬ್ರಹ್ಮನಲ್ಲಿರುವ ಜಡಭೇದಾದಿಗಳು ಶುದ್ಧಬ್ರಹ್ಮನಿಗಿಂತ ಭಿನ್ನವೆಂಬ ಪಕ್ಷದಲ್ಲಿಯೂ ಅದು ಸತ್ಯವೇ ಅಥವಾ

ಅಸತ್ಯವೇ? ಎಂದು ವಿಕಲ್ಪಿಸುತ್ತೇವೆ. ಅದೆಲ್ಲವೂ ಶುದ್ಧಬ್ರಹ್ಮನಿಗಿಂತ ಭಿನ್ನವಾಗಿದ್ದು ಸತ್ಯವಾದರೆ ಅದ್ವೈತಹಾನಿಯು ಬರುತ್ತದೆ. ಸತ್ಯವಾದ ಎರಡು ವಸ್ತುಗಳನ್ನು ಒಪ್ಪಿದರೆ ಅದ್ವೈತಕ್ಕೆ ಭಂಗ ಬರುತ್ತದೆಯಲ್ಲವೇ? ಅದು ಅಸತ್ಯವಾದರೆ ಜಗತ್ತಿನ ಸತ್ಯತ್ವಕ್ಕೆ ಭಾದಕವಾದ ಚರಮವೃತ್ತಿಜ್ಞಾನದಲ್ಲಿ ವಿಷಯವಾಗಲಾರದು. ಅಸತ್ಯವಾದರೂ ಕೂಡಾ ಬಾಧಕ ಜ್ಞಾನದಲ್ಲಿ ವಿಷಯವಾಗುವುದಾದರೆ ಶುದ್ಧಬ್ರಹ್ಮನಿಗೂ ಅಸತ್ಯತ್ವವೂ ಬರಬೇಕಾಗುತ್ತದೆ ಇತ್ಯಾದಿ ದೋಷಗಳು ಉದ್ಭವಿಸುತ್ತವೆ.

ಇನ್ನು ಶುದ್ಧಬ್ರಹ್ಮನಲ್ಲಿರುವ ಜಡಭೇದಾದಿಗಳು ಸತ್ಯ ಮತ್ತು ಬ್ರಹ್ಮಸ್ವರೂಪವೆಂದು ಅಂಗೀಕರಿಸುವುದಾದರೆ ಅದ್ವೈತಹಾನಿ ಮುಂತಾದ ದೋಷಗಳು ಬರುವುದಿಲ್ಲ ಎಂದರೆ ದೋಷವನ್ನು ಹೇಳುತ್ತಾರೆ. ತತ್=ಹಿಂದೆ ಹೇಳಿರುವ ಶುದ್ಧ ಬ್ರಹ್ಮನಲ್ಲಿರುವ ಜಡಭೇದಾದಿ ಧರ್ಮಗಳು, ಸ್ವರೂಪಂ=ಶುದ್ಧಬ್ರಹ್ಮಸ್ವರೂಪವೆಂದು ಅಂಗೀಕರಿಸುತ್ತೇವೆ. ನ ಭಾಸತೆ=ಈಗ ಪ್ರಕಾಶವಾಗುವುದಿಲ್ಲ, ಇತಿ ಚೇತ್=ಹೀಗೆ ಅಂಗೀಕರಿಸುವುದಾದರೆ ತತ್ರ=ಶುದ್ಧ ಬ್ರಹ್ಮನಲ್ಲಿರುವ ಜಡಭೇದಾದಿಗಳ ವಿಷಯದಲ್ಲಿ ತವ=ನಿನಗೆ, ಭ್ರಮಃ=ವಿಪರೀತ ಜ್ಞಾನವು. (ಇದು ಉಪಲಕ್ಷಣ ವಾದುದರಿಂದ ಅಜ್ಞಾನವಾಗಲೀ ಸಂಶಯವಾಗಲೀ) ನೈವ ಯುಜ್ಯತೇ=ಕೂಡುವುದೇ ಇಲ್ಲ.

ಅಥವಾ ತತ್ ಸ್ವರೂಪಂ ಭಾಸತೇ ಇತಿ ಚೇನ್ನ, ಎಂದು ಯೋಜನೆ ಮಾಡಿಕೊಂಡು ಶುದ್ಧಬ್ರಹ್ಮಸ್ವರೂಪವಾದ ಜೀವಭೇದಾದಿಗಳು ಶುದ್ಧಬ್ರಹ್ಮನು ತಿಳಿಯಲ್ಪಟ್ಟಾಗ, ತಿಳಿದು ಬರುತ್ತವೆ. ಭಾಸಮಾನವಾಗುತ್ತವೆ ಎಂದು ಅಂಗೀಕರಿಸುವುದೂ ಯುಕ್ತವಲ್ಲ ಎಂದು ಅರ್ಥ. ಇದಕ್ಕೆ ಯುಕ್ತಿಯನ್ನು ಹಿಂದಿನಂತೆಯೇ ಇಟ್ಟುಕೊಳ್ಳಬೇಕು.

**ತಾತ್ಪರ್ಯ** : ಇಲ್ಲಿ ಅಭಿಪ್ರಾಯವು ಹೀಗಿದೆ : ಶುದ್ಧಬ್ರಹ್ಮನಲ್ಲಿರುವ ಹಿಂದೆ ಹೇಳಿರುವ ಜಡಭೇದಾದಿಗಳೆಲ್ಲವೂ ಸತ್ಯ ಮತ್ತು ಶುದ್ಧ ಬ್ರಹ್ಮ ಸ್ವರೂಪವೆಂದು ಅಂಗೀಕರಿಸುವುದಾದರೆ ಅದು (ಜಡಭೇದಾದಿಗಳು) ಶುದ್ಧಬ್ರಹ್ಮ ಸ್ವರೂಪವಾದುದರಿಂದ ಅದ್ವೈತ ಹಾನಿಯಿಲ್ಲ. ಸತ್ಯವೇ ಆಗಿದ್ದು ಶುದ್ಧ ಬ್ರಹ್ಮ ಸ್ವರೂಪವೇ ಆಗಿರುವುದರಿಂದ ಶುದ್ಧ ಬ್ರಹ್ಮನಿಗೆ ಅಸತ್ಯತ್ವ ಬರಲೀ ಎಂಬ ಆಪಾದನೆಗೂ ಅವಕಾಶವಿಲ್ಲ. ಆದರೂ ಕೂಡಾ ಶುದ್ಧಬ್ರಹ್ಮನಲ್ಲಿರುವ ಜೀವಭೇದಾದಿ ಧರ್ಮ ಸಮುದಾಯವು ಅಹಮರ್ಥಪ್ರತ್ಯಗಾತ್ಮ ಸ್ವರೂಪನಾದ ಶುದ್ಧಬ್ರಹ್ಮನಲ್ಲಿ ಶುದ್ಧಬ್ರಹ್ಮವು ಪ್ರಕಾಶಮಾನವಾಗುವಾಗ ಈಗ ತೋರುತ್ತದೆಯೇ ಇಲ್ಲವೇ? ಪ್ರಕಾಶಮಾನವಾಗುತ್ತದೆ ಎಂದು ಹೇಳುವುದಾದರೆ, ಆ ವಿಷಯದಲ್ಲಿ ಸಂಶಯ, ಅಜ್ಞಾನ, ವಿಪರೀತ ಜ್ಞಾನಗಳಿಗೆ ಅವಕಾಶವಿಲ್ಲ. ಶುದ್ಧಬ್ರಹ್ಮನ ಜೊತೆಗೆ ನಿರ್ವಿಶೇಷಾಭೇದವುಳ್ಳ ಜೀವಭೇದಾದಿ ಧರ್ಮಗಳೂ ಈಗಲೇ ಪ್ರಕಾಶವಾಗಿರುವುದರಿಂದ ಸಂಶಯಾದಿಗಳಿಗೆ ಅವಕಾಶ ಎಲ್ಲಿದೆ? ಆಗಲೀ, ಶುದ್ಧಬ್ರಹ್ಮನಿಗಿಂತ ಅಭಿನ್ನವಾದ ಧರ್ಮಗಳೂ ಪ್ರಕಾಶಮಾನವಾಗುತ್ತದೆ ಎಂದು ಇಷ್ಟಾಪತ್ತಿಯನ್ನು ಹೇಳಿದರೆ, ಏಕತ್ವ, ಅದ್ವಿತೀಯತ್ವ, ಜೀವಭೇದ, ಜಡಭೇದ ಮುಂತಾದ ಧರ್ಮಗಳ ವಿಷಯದಲ್ಲಿ ಸಂಶಯಾದಿಗಳು ಇಲ್ಲದಿರುವಾಗ ಸಂಶಯಾದಿಗಳು ಇವೆಯೆಂದೂ, ಆ ಸಂಶಯಾದಿಗಳ ಪರಿಹಾರಕ್ಕಾಗಿ ಶಾಸ್ತ್ರಗಳನ್ನು ಆರಂಭಿಸಬೇಕೆಂದು ಹೇಳುವುದು ಅಸಂಗತವಾಗುವುದಿಲ್ಲವೇ? ಶಾಸ್ತ್ರ ರಚನೆಯು ವ್ಯರ್ಥವಾಗುವುದಿಲ್ಲವೇ?

ಇನ್ನು ಎಂದೆಂದಿಗೂ ಈಗ ಅದ್ವಿತೀಯತ್ವಾದಿ ಧರ್ಮಗಳು ಭಾಸಮಾನವಾಗುವುದಿಲ್ಲ ಎಂದು ಅಂಗೀಕಾರ ಮಾಡಿದರೂ ಸಂಶಯಾದಿಗಳು ಕೂಡುವುದಿಲ್ಲ. ಸಂಶಯಕ್ಕೆ ಧರ್ಮಿಯಾದ ಪುರೋವೃತ್ತಿ ಪದಾರ್ಥದಲ್ಲಿ ಎಂದಾದರೂ ಒಂದು ಬಾರಿ ತಿಳಿದು ಬಂದಿರುವ ಸ್ಥಾಣುತ್ವ ಪುರುಷತ್ವಾದಿಗಳಿಗೆ ಮಾತ್ರವೇ ವಿಶೇಷ ಧರ್ಮದರ್ಶನ ಇಲ್ಲದಿರುವಾಗ ಬರುವ ಸಂಶಯದಲ್ಲಿ, "ಸ್ಥಾಣುರ್ವಾ ಪುರುಷೋವಾ" ಎಂದು ಸಂಶಯದಲ್ಲಿ ಪ್ರಕಾರತ್ವವು ಕಂಡುಬಂದಿದೆ. ಸಂಶಯಧರ್ಮಿಯಲ್ಲಿ ಎಂದೂ ತಿಳಿದು ಬಂದಿರುವ, ಅಪ್ರಕಾಶಮಾನವಾದ ಧರ್ಮಕ್ಕೆ ಸಂಶಯಪ್ರಕಾರತ್ವವು ಎಂದೂ ಕಂಡಿಲ್ಲ.

ಇನ್ನು ಕೆಲವು ಬಾರಿ ಈ ಧರ್ಮಗಳು ಪ್ರಕಾಶಮಾನವಾಗುತ್ತವೆ. ಮತ್ತೆ ಕೆಲವು ಬಾರಿ ಪ್ರಕಾಶಮಾನವಾಗುವುದೇ ಇಲ್ಲ ಎಂಬುದಾಗಿ ಎರಡು ರೀತಿಗಳನ್ನು ಇಟ್ಟುಕೊಳ್ಳುತ್ತೇವೆ. ಎಂದರೆ ಆಗ ಶುದ್ಧಬ್ರಹ್ಮಕ್ಕೂ ಅದರಲ್ಲಿರುವ ಜಡಭೇದಾದಿ ಧರ್ಮ ಸಮುದಾಯಕ್ಕೂ ನಿರ್ವಿಶೇಷಾಭೇದವು ಕೂಡುವುದಿಲ್ಲ. ನಿರ್ವಿಶೇಷಾಭೇದವು ಇದ್ದಲ್ಲಿ ಕೆಲವು ಬಾರಿ ಪ್ರಕಾಶವಿದೆ. ಕೆಲವು ಬಾರಿ ಪ್ರಕಾಶವಿಲ್ಲ ಎಂದು ಎರಡು ರೀತಿಗಳನ್ನು ಅನುಸರಿಸಲು ಕಾರಣವೇ ಇರುವುದಿಲ್ಲ. ಹೀಗೆ ಧರ್ಮಗಳಿಗೂ ಶುದ್ಧಬ್ರಹ್ಮನಿಗೂ ನಿರ್ವಿಶೇಷಾಭೇದವನ್ನು ಅಂಗೀಕಾರ ಮಾಡಿಯೂ ಅಪ್ರಕಾಶತ್ವವನ್ನು ಅಂಗೀಕರಿಸಿದರೆ ಅಖಂಡಾರ್ಥತ್ವಕ್ಕೆ ಹಾನಿಯು ಬರುತ್ತದೆ.

ಮತ್ತು ಜಡಭೇದಾದಿಗಳಿಗೂ ಶುದ್ಧಬ್ರಹ್ಮನಿಗೂ ನಿರ್ವಿಶೇಷಾಭೇದವನ್ನು ಒಪ್ಪಿದರೆ – **"ಬ್ರಹ್ಮ ಜೀವಭೇದಃ"** ಶುದ್ಧಬ್ರಹ್ಮವು ಭೇದ ಸ್ವರೂಪವಾದುದು. **"ಬ್ರಹ್ಮ ಜಡಭೇದಃ"** ಶುದ್ಧಬ್ರಹ್ಮವು ಜಡಭೇದವೇ ಆಗಿದೆ. **"ಬ್ರಹ್ಮಕರ್ತೃತಾದಿ ವಿರಹಃ"** ಶುದ್ಧಬ್ರಹ್ಮವೇ ಕರ್ತೃತ್ವಭೋಕ್ತೃತ್ವಾದಿ ವಿರಹಸ್ವರೂಪವಾದುದು, **"ಬ್ರಹ್ಮ ಅದ್ವಿತೀಯತಾ"** ಶುದ್ಧಬ್ರಹ್ಮವು ಅದ್ವಿತೀಯತ್ವ ಸ್ವರೂಪವಾದುದು. **"ಬ್ರಹ್ಮ ಏಕತಾ"** ಶುದ್ಧಬ್ರಹ್ಮವು ಏಕತ್ವ ಸ್ವರೂಪವಾದುದು. ಇತ್ಯಾದಿ ರೀತಿಯಿಂದಲೇ ಯಥಾರ್ಥಜ್ಞಾನಾಕಾರವು ಬರಬೇಕಾಗುತ್ತದೆ. ಶುದ್ಧಬ್ರಹ್ಮನ ಜೊತೆಗೇ ನಿರ್ವಿಶೇಷಭಿನ್ನವಾದ ಜೀವಭೇದಾದಿಗಳಿಗೆ ಶುದ್ಧಬ್ರಹ್ಮನ ತಾದಾತ್ಮ್ಯವನ್ನು (ಶುದ್ಧ ಬ್ರಹ್ಮಾಭೇದವನ್ನು) ಬೋಧಿಸಲು ಹೀಗೆಯೇ ವಾಕ್ಯಪ್ರಯೋಗ ಮಾಡಬೇಕಾಗುತ್ತದೆ. ಈ ವಾಕ್ಯದಿಂದ ಉಂಟಾದ ತಾದಾತ್ಮ್ಯಜ್ಞಾನವು ಯಥಾರ್ಥಜ್ಞಾನವೆಂದೂ ಅಂಗೀಕರಿಸಬೇಕಾಗುತ್ತದೆ.

**"ಬ್ರಹ್ಮಜೀವಭಿನ್ನಂ"** ಬ್ರಹ್ಮವು ಜೀವಭೇದವುಳ್ಳದ್ದು. **"ಬ್ರಹ್ಮ ಜಡಭಿನ್ನಂ"** ಬ್ರಹ್ಮವು ಜಡಭೇದವುಳ್ಳದ್ದು. **"ಬ್ರಹ್ಮ ಕರ್ತೃತ್ವಾದಿರಹಿತಂ"** ಬ್ರಹ್ಮವು ಕರ್ತೃತ್ವಾದಿ ಧರ್ಮರಹಿತವಾದುದು. **"ಬ್ರಹ್ಮ ಅದ್ವಿತೀಯಂ"** ಬ್ರಹ್ಮವು ಅದ್ವಿತೀಯತ್ವವುಳ್ಳದ್ದು. **"ಬ್ರಹ್ಮ ಏಕಂ"** ಬ್ರಹ್ಮವು ಏಕತ್ವವುಳ್ಳದ್ದು, ಇದೇ ಮೊದಲಾದ ಜ್ಞಾನವು ಭ್ರಮೆ ಎಂದೇ ಹೇಳಬೇಕಾಗುತ್ತದೆ. ಶುದ್ಧಬ್ರಹ್ಮನಿಗೂ ಜೀವಭೇದಾದಿಗಳಿಗೂ ನಿರ್ವಿಶೇಷಾಭೇದವಿರುವುದರಿಂದ ಹಿಂದೆ ಹೇಳಿದಂತೆ **"ಬ್ರಹ್ಮಜೀವಭಿನ್ನಂ"** ಬ್ರಹ್ಮವು ಜೀವಭಿನ್ನವಾಗಿದೆ. ಇತ್ಯಾದಿಯಾಗಿ ಜೀವಭೇದಾದಿಗಳು ಬ್ರಹ್ಮನಲ್ಲಿ ಇವೆ ಎಂದು ತಿಳಿಸುವ ಶಬ್ದಪ್ರಯೋಗ ಮಾಡುವುದು **"ಘಟವಾನ್ ಘಟಃ" "ಘಟವು ಘಟವುಳ್ಳದ್ದು"** ಎಂದು

ಪ್ರಯೋಗ ಮಾಡಿದಂತಾಗುತ್ತದೆ. ಏಕೆಂದರೆ **"ಘಟವಾನ್ ಘಟಃ"** ಘಟವು ಘಟವುಳ್ಳದ್ದು ಎಂಬ ಜ್ಞಾನವು ಅಯತಾರ್ಥವಾದಂತೆ, (ತನಗಿಂತ ನಿರ್ವಿಶೇಷಾಭಿನ್ನವಾದ) ಶುದ್ಧಬ್ರಹ್ಮವು ಜೀವಭೇದವುಳ್ಳದ್ದು ಎಂಬ ಜ್ಞಾನವೂ ಅಯಥಾರ್ಥವೇ ಆಗಿದೆಯಲ್ಲವೇ?

ಈಗ ಸಂಸಾರಾವಸ್ಥೆಯಲ್ಲಿಯೂ 'ಅಹಂ' ಎಂಬ ಅರ್ಥರೂಪವಾಗಿರುವ ಪ್ರತ್ಯಗಾತ್ಮರೂಪನಾದ ಶುದ್ಧಬ್ರಹ್ಮನು ಪ್ರಕಾಶವಮಾನವಾಗಿರುವಾಗ ಅವನೊಡನೆ ನಿರ್ವಿಶೇಷಾಭೇದವುಳ್ಳ ಜೀವಭೇದಾದಿ ಧರ್ಮಗಳೂ ಭಾಸಮಾನವಾಗುತ್ತವೆ ಎಂದು ಅಂಗೀಕರಿಸಿದರೆ – ಹಿಂದೆ ಹೇಳಿದಂತೆ – **"ಬ್ರಹ್ಮಜೀವಭೇದಃ"** ಶುದ್ಧಬ್ರಹ್ಮವೇ ಜೀವಭೇದವು ಇತ್ಯಾದಿ ರೂಪವಾದ ಯಥಾರ್ಥಜ್ಞಾನವೇ ಇರಬೇಕು. ಎಂದೂ ಕೂಡಾ **"ಬ್ರಹ್ಮಜೀವಭಿನ್ನಂ"** ಶುದ್ಧ ಬ್ರಹ್ಮವು ಜೀವಭೇದವುಳ್ಳದ್ದು ಎಂಬ ಅಯತಾರ್ಥಜ್ಞಾನವು ಇರಬಾರದು. ಹಾಗಾದರೆ ಸಂಸಾರಾವಸ್ಥೆಯಲ್ಲಿ **"ಬ್ರಹ್ಮ ಜೀವಭಿನ್ನಂ"** ಬ್ರಹ್ಮವು ಜೀವಭಿನ್ನವಾಗಿದೆ ಎಂಬ ಭ್ರಮವು ಕೂಡುವುದಿಲ್ಲ. ಬ್ರಹ್ಮವಿಷಯತ್ವವೂ ಕೂಡುವುದಿಲ್ಲ.

ಇನ್ನು ಜೀವಭೇದಾದಿಗಳು ಪ್ರಕಾಶಮಾನವಾಗುವುದಿಲ್ಲ ಎಂದು ಅಂಗೀಕರಿಸಿದರೆ ಆ ಜೀವಭೇದಾದಿ ಧರ್ಮಗಳಿಗೂ ಶುದ್ಧಬ್ರಹ್ಮನಿಗೂ ನಿರ್ವಿಶೇಷಾಭೇದವಿರುವುದರಿಂದ ಶುದ್ಧಬ್ರಹ್ಮವೂ ತೋರದೇ ಹೋಗಬೇಕಾಗುತ್ತದೆ. ನಿರ್ವಿಶೇಷಾಭಿನ್ನವೆಂದರೆ ಯಾವ ರೀತಿಯಿಂದಲೂ ಅಂಶಭೇದವಿಲ್ಲ ಎಂದು ಅರ್ಥವಲ್ಲವೇ? ಶುದ್ಧಬ್ರಹ್ಮವು ಅಖಂಡ ವಸ್ತುವು. ಅದರಲ್ಲಿ ಯಾವ ಭಾಗಭೇದವೂ ಇಲ್ಲ. ಆದುದರಿಂದ ಶುದ್ಧಬ್ರಹ್ಮವು ಪ್ರಕಾಶವಾಗುತ್ತದೆ. ಆ ಶುದ್ಧಬ್ರಹ್ಮನಿಗಿಂತ ನಿರ್ವಿಶೇಷಾಭಿನ್ನವಾದ ಜೀವಭೇದಾದಿಗಳು ತೋರುವುದಿಲ್ಲ ಎಂದು ಅಂಗೀಕರಿಸಲು ಬರುವುದಿಲ್ಲ. ಹಾಗೇ ಜಿಜ್ಞಾಸಾಧರ್ಮಿಯಾದ ಶುದ್ಧಬ್ರಹ್ಮವೆಂಬ ವಸ್ತುವೇ ಇಲ್ಲವೆಂದಾಗುತ್ತದೆ. ಏಕೆಂದರೆ ಅದು ಭಾಸಮಾನವಾಗುವುದಿಲ್ಲ; ಎಂದ ಮೇಲೆ ಅದು ಇಲ್ಲವೆಂದೇ ಅರ್ಥವಲ್ಲವೇ? ಹೀಗೆ ಶುದ್ಧಬ್ರಹ್ಮವು ಅಪ್ರಕಾಶವಾಗಿ, ಅಭಾಸಮಾನವಾಗಿರುವಾಗ ಆ ಶುದ್ಧಬ್ರಹ್ಮವು ಜೀವಭೇದವುಳ್ಳದ್ದೇ ಅಲ್ಲವೇ? "ಶುದ್ಧಬ್ರಹ್ಮ ಜೀವಭಿನ್ನಂ ನ ವಾ?" "ಶುದ್ಧಬ್ರಹ್ಮ ಜಡಭಿನ್ನಂ ನ ವಾ?" ಶುದ್ಧಬ್ರಹ್ಮವು ಜಡಭೇದವುಳ್ಳದ್ದೇ ಅಲ್ಲವೇ? ಇತ್ಯಾದಿ ರೂಪವಾದ ಜೀವಭೇದ, ಜಡಭೇದಾದಿ ಪ್ರಕಾರಕವಾದ ಸಂಶಯವಾಗಲೀ, "ಶುದ್ಧಬ್ರಹ್ಮ ಜೀವಭಿನ್ನಂ" "ಶುದ್ಧಬ್ರಹ್ಮ ಜಡಭಿನ್ನಂ" ಶುದ್ಧಬ್ರಹ್ಮವು ಜೀವಜಡಭಿನ್ನವು ಎಂಬ ಶುದ್ಧಬ್ರಹ್ಮವಿಶೇಷ್ಯಕ ಜೀವಭೇದ ಜಡಭೇದ ಪ್ರಕಾರಕವಾದ ಭ್ರಾಂತಿಯಾಗಲೀ ಕೂಡುವುದಿಲ್ಲವಾದುದರಿಂದ ಸಂಶಯಾದಿಗಳು ಇಲ್ಲದಿರುವುದರಿಂದ ಬ್ರಹ್ಮಜಿಜ್ಞಾಸೆಯೇ ಕೂಡುವುದಿಲ್ಲ.

**ಅವತಾರಿಕೆ :** ಈಗ ಕವಿಗಳು ಆ ಸಂದರ್ಭದಲ್ಲಿ ಶ್ರೀ ರಾಘವೇಂದ್ರ ಗುರುಗಳು ಮಾಡಿದ ಉಪನ್ಯಾಸವನ್ನು ವರ್ಣಿಸುತ್ತಾರೆ.

**ಅತ್ರ ತದ್‌ಭ್ರಮನಿರಾಸನೋತ್ಸುಕಃ ಸಸ್ಮಿತಂ ಸದಯಮಬ್ರವೀದ್ ಗುರುಃ ।**
**ಅಸ್ತಿ ಕಿಂಚಿದಹಮರ್ಥತಃ ಪರಂ ವಿಷ್ಣುನಾಮ ಗುಣಪೂರ್ಣಮದ್ಭುತಮ್ ॥೪೯॥**

**ತಾತ್ಪರ್ಯ** : ಪ್ರಕೃತದಲ್ಲಿ ಮೂರು ಮಂದಿ ವಿದ್ವಾಂಸರು ಶಾಸ್ತ್ರಾರ್ಥದಲ್ಲಿ ಭಾಗವಹಿಸಿದ್ದಾರೆ. ಆದರೆ ಅವರೆಲ್ಲರೂ ಭ್ರಾಂತರು.

ಅದು ಹೇಗೆಂದರೆ ಅದರಲ್ಲಿ ಮೊದಲನೆಯವನು, "ಯತ್ ಜಡಂ ತತ್ ಮೃಷಾ" ಯಾವುದು ಚೇತನಭಿನ್ನವಾದ ಜಡವೋ ಅದು ಅಸತ್ಯ ಎಂದು ಹೇಳುತ್ತಾನೆ. ಸಿದ್ಧಾಂತದಲ್ಲಿ ಎಲ್ಲಾ ಜಡವಸ್ತುವೂ ಸತ್ಯವೇ ಆದುದರಿಂದ "ಜಡವೆಲ್ಲವೂ ಮಿಥ್ಯಾ" ಎಂಬ ಮಾತು ಭ್ರಾಂತಿ ಮೂಲಕವೇ ಸರಿ. "ಜೀವಭಿನ್ನಪರಮೋಽಪಿ ಅಮಾನಕಃ" ಜೀವನಿಗಿಂತಾ ಭಿನ್ನವಾದ ಸರ್ವೋತ್ತಮವಾದ ವಸ್ತುವು ಇದೆಯೆಂಬ ವಿಷಯದಲ್ಲಿ ಪ್ರಮಾಣವಿಲ್ಲವೆಂದು ಹೇಳಿದುದು ಸರಿಯಲ್ಲ. ಜೀವಭಿನ್ನನಾದ ಪರಮಾತ್ಮನು ಇದ್ದಾನೆಂಬ ವಿಷಯದಲ್ಲಿ ಸ್ಮೃತಿ ಶ್ರುತಿ ಮುಂತಾದ ಪ್ರಮಾಣಗಳಿವೆ. ಅವುಗಳಿಂದ ಜೀವಭಿನ್ನನಾದ ಪರಮಾತ್ಮನು ಸಿದ್ಧನಾಗುತ್ತಿರುವಾಗ ಅಂತಹಾ ಪರಮಾತ್ಮನು ಇಲ್ಲವೆಂದು ತಿಳಿಯುವುದು, ತಿಳಿಸುವುದು ಅತ್ಯಂತ ಭ್ರಾಂತಿ ಮೂಲಕವಾದ ವ್ಯಾಪಾರವು. ಆದುದರಿಂದ ಮೊದಲನೆಯ ವಾದಿಯ ಸಿದ್ಧಾಂತ ಪ್ರಕ್ರಿಯೆಯನ್ನು ಆಶ್ರಯಿಸಿ ಅವನು ಪ್ರಾಶ್ನಿಕನೆಂದು ಒಪ್ಪಿಕೊಂಡರೆ ಅವನಿಗೆ ಭ್ರಾಂತತ್ವವು ವಜ್ರಲೇಪವಾಗುತ್ತದೆ. ಹೀಗೆಯೇ ಆ ವಾದಿಯು ಮಾಯಾವಾದಿಗಳ ಪ್ರಕ್ರಿಯೆಯನ್ನು ಅವಲಂಭಿಸಿ ಮಾತನಾಡಿದ ಪ್ರಾಶ್ನಿಕನೆಂದು ಒಪ್ಪಿಕೊಂಡರೂ ಅವನಿಗೆ ಭ್ರಾಂತಿಯಿದೆ ಎಂಬ ವಿಷಯವನ್ನು ಪರಿಹರಿಸಲು ಸಾಧ್ಯವಾಗುವುದಿಲ್ಲ. ಅದು ಹೇಗೆಂದರೆ, ಮಾಯಾವಾದಿಗಳ ಮತದಂತೆ "ಸತ್ಯವಾದ ಬ್ರಹ್ಮನಿಗೆ ಅರ್ಥಕ್ರಿಯಾಕಾರಿತ್ವವಿಲ್ಲ. ಅವರ ಮತದಂತೆ ಮಿಥ್ಯಾಭೂತವಾದ ವಸ್ತುವೇ ಅರ್ಥಕ್ರಿಯಾಕಾರಿಯಾಗಿದೆ. ಆದುದರಿಂದ ಬ್ರಹ್ಮ ಮುಂತಾದ ನಾಮಗಳು ಮಿಥ್ಯಾ ಆದರೂ ಆ ನಾಮಗಳಿಂದ ಬ್ರಹ್ಮಪ್ರತಿಪಾದನವೆಂಬ ಅರ್ಥಕ್ರಿಯೆಯು ಸಂಭವಿಸಬಹುದು. "ಬ್ರಹ್ಮ ಇತ್ಯಾದಿ ನಾಮವು ಜಡವು, ಆದುದರಿಂದ ಮಿಥ್ಯಾ, ಮಿಥ್ಯಾ ಆದುದರಿಂದಲೇ ಬ್ರಹ್ಮವಿಷಯಕವಾದ ಯಥಾರ್ಥಜ್ಞಾನವೆಂಬ ಅರ್ಥಕ್ರಿಯೆಗೆ ಜನಕವಲ್ಲ" ಆದುದರಿಂದ ನಾಮಧೇಯವು ಜಡವಾದುದರಿಂದ ಅಸತ್ಯ ಎಂಬ ಮಾತೂ ಭ್ರಾಂತಿ ಮೂಲಕವೇ ಸರಿ.

ಹೀಗೆಯೇ ಎರಡನೆಯ ವಾದಿಯೂ ಸಿದ್ಧಾಂತಿಯೆಂದು ಒಪ್ಪುವುದಾದರೆ ಸಿದ್ಧಾಂತದಲ್ಲಿ ಬ್ರಹ್ಮನಿಗೆ ಶುದ್ಧ ಅಶುದ್ಧ ವೆಂದು ಎರಡು ಭೇದವಿಲ್ಲದ್ದರಿಂದ ಸಕಲ ಧರ್ಮರಹಿತನಾದ ಬ್ರಹ್ಮನಿಗೆ ಮಾನಸ ಪ್ರತ್ಯಕ್ಷ ವಿಷಯತ್ವವೂ ಕೂಡುವುದಿಲ್ಲವಾದುದರಿಂದ – "ಶುದ್ಧಮಸ್ಯ ವಿಷಯಃ ಸ್ವಮಾನಸಾಂ" ಬ್ರಹ್ಮಜಿಜ್ಞಾಸೆಗೆ ಮಾನಸಪ್ರತ್ಯಕ್ಷ ವಿಷಯವಾದ ಶುದ್ಧ ಬ್ರಹ್ಮವೇ ವಿಷಯವು" ಎಂಬ ಮಾತೂ ಕೊಡುವುದಿಲ್ಲ. ಆ ಮಾತು ಭ್ರಾಂತಿಮೂಲಕವಾಗಿರುತ್ತದೆ. ಮಾಯಾವಾದಿಗಳ ಪ್ರಕ್ರಿಯೆಯನ್ನು ಅನುಸರಿಸಿ ಹಾಗೆ ಹೇಳಿದರೆ, ಹಿಂದೆ ಹೇಳಿದ ರೀತಿಯಿಂದ ಈ ವಾದಿಗೆ ಭ್ರಾಂತತ್ವವು ಕೂಡುವುದಿಲ್ಲ. ಆದರೂ ಬೇರೊಂದು ರೀತಿಯಿಂದ ಭ್ರಾಂತತ್ವವು ಬಂದೇ ಬರುತ್ತದೆ. ಅದು ಹೇಗೆಂದರೆ ಬ್ರಹ್ಮಮೀಮಾಂಸಾಶಾಸ್ತ್ರಕ್ಕೆ ಆರಂಭಣೀಯತ್ವ ಸಮರ್ಥನವನ್ನು ಸೂತ್ರಕಾರರೇ ಮಾಡಬೇಕು. ಆದುದರಿಂದ ಸೂತ್ರಕಾರರು ಬ್ರಹ್ಮಶಬ್ದದಿಂದ

ವಿಷಯವನ್ನು ಅಥಶಬ್ದದಿಂದ ಅಧಿಕಾರವನ್ನು, ಅತಃ ಶಬ್ದದಿಂದ ಪ್ರಯೋಜನವನ್ನು ಹೇಳಿದ್ದಾರೆ. ಈ ಬ್ರಹ್ಮ ಅಥ, ಅತಃ ಎಂಬ ಪದಗಳ ಅರ್ಥವನ್ನು ಬ್ರಹ್ಮಮೀಮಾಂಸಾಶಾಸ್ತ್ರದ ಆರಂಭಣೀಯತ್ವದ ಸಮರ್ಥನೆಗೆ ಉಪಯುಕ್ತವಾಗಿಯೇ ತಿಳಿಯಬೇಕು. ಈ ಸೂತ್ರದ ಮೂಲಭೂತವಾದ ವಿಷಯ ವಾಕ್ಯಾದಿಗಳ ಪರಿಶೀಲನದಿಂದ ಬ್ರಹ್ಮ ಅಥ ಅತಃ ಶಬ್ದಗಳಿಗೆ ಶಾಸ್ತ್ರಾರಂಭ ಸಮರ್ಥನೆಗೆ ಉಪಯುಕ್ತವಾದ ಅರ್ಥವು ತಿಳಿದುಬರುತ್ತದೆ. ಶಾಸ್ತ್ರವು ಅನಾರಂಭಣೀಯವು ಎಂಬ ಪೂರ್ವಪಕ್ಷವನ್ನು ಸವಿಷಯಕತ್ವ ಸಮರ್ಥನದಿಂದ (ಶಾಸ್ತ್ರವು ವಿಷಯದಿಂದ ಕೂಡಿದೆ) ಸಾಧಿಕಾರಕತ್ವ ಸಪ್ರಯೋಜಕತ್ವ ಸಮರ್ಥನದಿಂದ ಪರಿಹರಿಸಬೇಕು. ಈ ದಾರಿಯನ್ನು ಬಿಟ್ಟು ಮಾಯಾವಾದಿಗಳ ಮತಸಿದ್ಧವಾದ ಪ್ರಮೇಯಸಮೂಹವನ್ನು ಬ್ರಹ್ಮಮೀಮಾಂಸಾಶಾಸ್ತ್ರದ ಆರಂಭಣೀಯತ್ವ ಸಮರ್ಥನೆಗೆ ಉಪಯೋಗಿಸಿಕೊಳ್ಳುವವನು ಭ್ರಾಂತನೇ ಸರಿ.

ಈ ರೀತಿಯಾಗಿ ಮೂರನೇ ವಾದಿಯೂ ಎರಡನೆಯ ವಾದಿಯಂತೆಯೇ ಭ್ರಾಂತನೇ ಸರಿ. ಮೂರನೇ ವಾದಿಯು ಮಾಡಿದ ವಿಚಾರವೇನೋ ಸರಿಯಾಗಿಯೇ ಇದೆ. ಸೂತ್ರದಲ್ಲಿರುವ ಪದಗಳಿಂದಲೇ ಬ್ರಹ್ಮಮೀಮಾಂಸಾಶಾಸ್ತ್ರವು ಆರಂಭಣೀಯವಲ್ಲ ಎಂಬ ಸಂದೇಹವನ್ನು ಪರಿಹಾರ ಮಾಡುವುದು ಅತ್ಯಾವಶ್ಯಕ. ಈ ದಾರಿಯನ್ನು ಬಿಟ್ಟು ಬೇರೆ ಮಾರ್ಗವನ್ನು ಅನುಸರಿಸುವುದು ಸೂತ್ರದಲ್ಲಿರುವ ಪದಗಳು ಬ್ರಹ್ಮಜಿಜ್ಞಾಸೆಯ ಅನಾರಂಭಣೀಯತ್ವಶಂಕೆಯನ್ನು ಪರಿಹರಿಸಲು ಸಮರ್ಥವಲ್ಲ ಎಂಬ ಭ್ರಮ ಮೂಲಕವೇ ಅಲ್ಲವೇ!

ಶಾಂತಿವಾಚನ ಪೂರ್ವಕವಾಗಿ ಶ್ರೀಗುರುಸಾರ್ವಭೌಮರು ವಿದ್ವಾಂಸರ ಸಭೆಯಲ್ಲಿ ಭಾಷ್ಯ ಪ್ರವಚನವನ್ನು ಮಾಡಿದರೆಂದು ಶಾಂತಿವಚನಪುರಸ್ಸರಂ ಎಂಬ ನಲವತ್ತನೆಯ ಶ್ಲೋಕದಲ್ಲಿ ಹೇಳಿದ್ದಾರೆ. ಇಂತಹಾ ಸಭೆಯಲ್ಲಿ ಇರುವ ಎಲ್ಲಾ ವಿದ್ವಾಂಸರೂ ಶ್ರೀರಾಘವೇಂದ್ರರ ಶಿಷ್ಯರೆಂದೇ ಊಹಿಸಲು ಅವಕಾಶವಿದೆ. ಪ್ರತಿವಾದಿಗಳು (ಮಾಯಾವಾದಿಗಳು) ಶಾಂತಿ ಪಾಠಪೂರ್ವಕವಾಗಿ ದ್ವೈತಭಾಷ್ಯ ಪ್ರವಚನವನ್ನು ಶ್ರೀಗುರುರಾಜರ ಸನ್ನಿಧಿಯಲ್ಲಿ ಮಾಡುವುದು ಅಸಂಭಾವಿತವಾದ ವಿಷಯವಾಗಿದೆ. ಆದುದರಿಂದ ಶ್ರೀಗುರುರಾಘವೇಂದ್ರರ ಪ್ರವಚನ ಸಭೆಯಲ್ಲಿರುವ ಎಲ್ಲ ಪಂಡಿತರೂ ತತ್ವನಿರ್ಣಯಕ್ಕಾಗಿಯೇ ಆಯಾ ಮತಪ್ರಕ್ರಿಯೆಯನ್ನು ಅನುಸರಿಸಿ ತಮ್ಮ ಸಿದ್ಧಾಂತಕ್ಕೆ ವಿರುದ್ಧವಾಗಿದ್ದರೂ ವಾದದ ಸಲುವಾಗಿ ಆ ಪಕ್ಷವನ್ನು ಅನುಸರಿಸಿ ಅನ್ಯೋನ್ಯವಾಗಿ ಚರ್ಚಿಸಿದ್ದಾರೆ ಎಂದು ತಿಳಿದು ಬರುತ್ತದೆ. ಪ್ರವಚನ ಮಾಡುತ್ತಿದ್ದ ಶ್ರೀ ಗುರುರಾಘವೇಂದ್ರರು ಆ ಪಂಡಿತರುಗಳಿಗೆ ಮಧ್ಯದಲ್ಲಿ ಚರ್ಚೆಗೆ ಅವಕಾಶ ಮಾಡಿಕೊಟ್ಟು ಸ್ವತಃ ತಾವು ಮಧ್ಯಸ್ಥಿಕೆಯನ್ನು ಅವಲಂಬಿಸಿ ಕೊನೆಗೆ ಆ ಪಂಡಿತರುಗಳಲ್ಲಿ ಇರುವ ಭ್ರಮೆಯನ್ನು ಪರಿಹರಿಸಿ, ಸರಿಯಾದ ದಾರಿಯನ್ನು ತೋರಿಸಿ, ವಾದವನ್ನು ಕೊನೆಗೊಳಿಸಿದರು (ವಾದವನ್ನು ಮುಕ್ತಾಯಮಾಡಿದರು) ಎಂದು ತೋರುತ್ತದೆ.

**ತತ್ರ ಕಶ್ಚನ ಸುಧೀರಚೋದಯತ್** (ಸರ್ಗ 9 ಶ್ಲೋಕ 41) ಆ ವಿಷಯದಲ್ಲಿ ಒಬ್ಬ ವಿದ್ವಾಂಸನು ಪ್ರಶ್ನಿಸಿದನು ಎಂಬಲ್ಲಿ ಆಕ್ಷೇಪ ಮಾಡಿದವನು ವಿದ್ವಾಂಸನು ಎಂಬ ಮಾತು

ಕೂಡಾ ಹಿಂದೆ ಹೇಳಿದ ವಿಷಯಕ್ಕೆ ಸಾಕ್ಷಿ (ಪೂರ್ವಕವಾಗಿದೆ) ಯಾಗಿದೆ. ಮತ್ತು 49ನೆಯ ಶ್ಲೋಕದಲ್ಲಿ **"ಈ ವಿದ್ವಾಂಸರುಗಳ ಭ್ರಮೆಯನ್ನು ಹೋಗಲಾಡಿಸಬೇಕೆಂಬ ಇಚ್ಛೆಯುಳ್ಳ ಶ್ರೀಗುರು ರಾಘವೇಂದ್ರರು ದಯಾಪೂರ್ಣರಾಗಿ ಹೇಳಿದರು**" ಎಂಬುದಾಗಿ ಹೇಳಲಾಗಿದೆ. ಈ ವಿದ್ವಾಂಸರುಗಳೆಲ್ಲರೂ ಪ್ರತಿವಾದಿಗಳಾಗಿದ್ದರೆ ಇವರ ಈ ಕಥೆಯು (ವಿಚಾರ ವಿಮರ್ಶೆಯು) ಜಲ್ಪಕಥೆ ಅಥವಾ ವಿತಂಡಕಥೆ ಆಗುತ್ತದೆ. ಆಗ ಪ್ರತಿವಾದಿಗಳನ್ನು ಜಯಿಸಿ ಅವರನ್ನು ನಿರುತ್ತರರನ್ನಾಗಿ ಮಾಡುವುದೇ ಈ ಚರ್ಚೆಯ ಫಲವೆಂದು ಹೇಳಬೇಕಾಗುತ್ತದೆ. ಪ್ರತಿವಾದಿಗಳ ಭ್ರಾಂತಿ ಪರಿಹಾರವು ಫಲವಾಗುವುದಿಲ್ಲ. ಅವರಲ್ಲಿ ಗುರುರಾಜರು ದಯಾಪೂರ್ಣರಾಗಿ ಮಾತನಾಡಿದರು ಎಂದು ಹೇಳುವುದೂ ಕೂಡುವುದಿಲ್ಲ. ಗುರುರಾಜರು ಹೇಳಿದ ಪ್ರತ್ಯುತ್ತರದಲ್ಲಿಯೂ ಅವರು ಹೇಳಿದ ಯುಕ್ತಿಯನ್ನು ಪ್ರತ್ಯೇಕವಾಗಿ ಅನುವಾದಿಸಿ ಖಂಡನೆಯು ಬರಬೇಕಾಗಿತ್ತು. ಇಲ್ಲಿ ಹಾಗಿಲ್ಲ. ಆದುದರಿಂದ ಇಲ್ಲಿ ಹಿಂದೆ ಆಕ್ಷೇಪ ಮಾಡಿದವನು ಮತ್ತು ಅದಕ್ಕೆ ಪ್ರತ್ಯುತ್ತರ ಕೊಟ್ಟು ಖಂಡಿಸಿದವನೂ ನಮ್ಮ ಗೋಷ್ಠಿಗೆ ಸೇರಿದವನೇ ಗುರುರಾಜರ ಶಿಷ್ಯನೆಂದು ಹೇಳಬೇಕು (ನಿರ್ಧರಿಸಬೇಕು). ಆದುದರಿಂದಲೇ ಈ ಮೂವರೂ ಶ್ರೀ ಗುರುರಾಘವೇಂದ್ರರ ಶಿಷ್ಯರೆಂದೇ ಹಿಂದೆ ವ್ಯಾಖ್ಯಾನಿಸಲಾಗಿದೆ.

ಈ ಮೂವರೂ ಯಾವುದೋ ಅಂಶದಲ್ಲಿ ಭ್ರಾಂತರಾಗಿದ್ದಾರೆ. ಅವರುಗಳ ಭ್ರಮೆಯನ್ನು ಪರಿಹರಿಸಲು ಶ್ರೀ ಗುರುರಾಘವೇಂದ್ರರು ಅವರುಗಳ ಅಭಿಪ್ರಾಯವನ್ನು ಖಂಡಿಸುತ್ತಿದ್ದಾರೆ.

ಈ ಹಿಂದೆ ಬ್ರಹ್ಮ ಜಿಜ್ಞಾಸೆಯ ಯುಕ್ತಾಯುಕ್ತತೆಯನ್ನು ಚರ್ಚಿಸಲಾಗಿದೆ. ಶ್ರೀಗುರುರಾಜ ಶಿಷ್ಯರು ಅದರಲ್ಲಿ ಒಂದು ಪಕ್ಷವನ್ನು ಅವಲಂಬಿಸಿ ತತ್ವ ನಿರ್ಣಯಕ್ಕಾಗಿ ತಮ್ಮ ಅಭಿಪ್ರಾಯವನ್ನು ಮಂಡಿಸಿದ್ದಾರೆ. ಆದರೆ ಅವರುಗಳು ಅವಲಂಬಿಸಿರುವ ಮಾರ್ಗವು ಸರಿಯಾಗಿಲ್ಲ. ಅವರು ಒಬ್ಬೊಬ್ಬರೂ ಒಂದೊಂದು ಅಂಶದಲ್ಲಿ ಭ್ರಾಂತರಾಗಿದ್ದಾರೆ. ಅವರುಗಳ ಭ್ರಾಂತಿಯನ್ನು ಪರಿಹಾರ ಮಾಡುವುದಕ್ಕಾಗಿ ಶ್ರೀರಾಘವೇಂದ್ರ ಗುರುಸಾರ್ವಭೌಮರು ಮಂದಹಾಸದ ನಗೆ ಬೀರುತ್ತಾ ದಯಾಪೂರ್ಣರಾಗಿ ಹೇಳುತ್ತಾರೆ. ಜೀವರುಗಳಿಗೆ ಪ್ರತಿಕ್ಷಣದಲ್ಲಿಯೂ "ಅಹಂ" ನಾನು ಎಂಬ ಅನುಭವವು ಬರುತ್ತದೆ. ಈ "ನಾನು" ಎಂಬ ಜೀವನಿಗಿಂತ ಭಿನ್ನವಾಗಿಯೂ ಉತ್ತಮವಾಗಿಯೂ ಇರುವ ಕಲ್ಯಾಣಗುಣಗಳಿಂದ ಪೂರ್ಣವಾದ ಅತ್ಯಾಶ್ಚರ್ಯಕರವಾದ ಲೋಕವಿಲಕ್ಷಣವಾದ ಒಂದು ವಸ್ತುವಿದೆ ಎಂಬುದಾಗಿ ಶ್ರೀ ಗುರುರಾಘವೇಂದ್ರರು ಹೇಳಿದರು.

**ವಿಸ್ತಾರವಾದ ತಾತ್ಪರ್ಯ** : ಶಾಸ್ತ್ರವು ನಿರ್ವಿಷಯವಾಗುತ್ತದೆ ಎಂಬುದಾಗಿ ಹಿಂದೆ ನೀವು ತಿಳಿಸಿದ್ದೀರಿ. ಆ ಶಂಕೆಯು ಯುಕ್ತವಲ್ಲ. ಜಿಜ್ಞಾಸುವಾದ ಜೀವಾತ್ಮನೂ, ಅವನಿಗಿಂತ ಭಿನ್ನನಾದ ಇತರ ಜೀವಾತ್ಮನೂ ವಿಷಯನಾಗದಿದ್ದರೂ ವಿಷ್ಣು ಎಂಬ ಹೆಸರುಳ್ಳ ಪರಮಾತ್ಮನೇ ಶಾಸ್ತ್ರಕ್ಕೆ ವಿಷಯನಾಗುತ್ತಾನೆ. "ಅಹಂ" ಎಂಬ ಸಾಕ್ಷಿ ಅನುಭವದಿಂದ ಸಿದ್ಧನಾದವನು ಜೀವನೇ ಹೊರತು ಈಶ್ವರನಲ್ಲ. ಈಶ್ವರನು ಅಹಂ ಶಬ್ದಾರ್ಥನಾದ ಜೀವನಿಗಿಂತ ಸರ್ವದಾ ಭಿನ್ನನೇ ಆಗಿದ್ದಾನೆ. ನಾನು ಅಜ್ಞನು, ಅಶಕ್ತನು, ಇನ್ನೂ ಅನೇಕ ದೋಷಗಳಿಂದ ಕೂಡಿದವನು ಎಂಬ ಸಾಕ್ಷಿ

ಪ್ರತ್ಯಕ್ಷದಿಂದಲೇ, ಜೀವನು ಅಲ್ಪಗುಣವುಳ್ಳವನು, ಮತ್ತು ದೋಷಯುಕ್ತನೆಂದು ತಿಳಿದು ಬರುತ್ತದೆ. ಪರಮಾತ್ಮನು ಪೂರ್ಣಗುಣನು. ಉಷ್ಣಸ್ಪರ್ಷ (ಬಿಸಿ) ಶೀತಸ್ಪರ್ಷ (ತಂಪು) ಎಂಬ ವಿರುದ್ಧ ಧರ್ಮಗಳಿಂದ ಕೂಡಿರುವ ಬೆಂಕಿ ಮತ್ತು ಹಿಮಗಳು ಪರಸ್ಪರ ಭಿನ್ನವಾಗಿರುತ್ತದೆ. ಆದರೂ ಪೂರ್ಣಗುಣತ್ವ ಅಲ್ಪಗುಣತ್ವ ಎಂಬ ಪರಸ್ಪರ ವಿರುದ್ಧ ಧರ್ಮಗಳಿಂದ ಕೂಡಿರುವ ಪರಮಾತ್ಮ ಮತ್ತು ಜೀವಾತ್ಮರಿಗೂ ಭೇದವಿದೆಯೆಂದು ಅವಶ್ಯವಾಗಿ ಒಪ್ಪಬೇಕು. "ಬರೇ ಭೇದವಲ್ಲ. ಪೂರ್ಣಗುಣತ್ವಾದಿ ಧರ್ಮಗಳಿರುವುದರಿಂದ ಪರಮಾತ್ಮನು ಸರ್ವೋತ್ತಮನೆಂದೂ, ಅಲ್ಪಗುಣತ್ವಾದಿ ಧರ್ಮಗಳು ಇರುವುದರಿಂದ ಜೀವನು ಅತ್ಯಂತ ಅಲ್ಪನೆಂದೂ ಅವಶ್ಯವಾಗಿ ಒಪ್ಪಲೇಬೇಕು. ಲೋಕದಲ್ಲಿ ಸಮಸ್ತ ಗುಣಪೂರ್ಣನಾದ ವಸ್ತುವನ್ನು ನಾವು ಕಂಡಿಲ್ಲವಾದುದರಿಂದ (ನೋಡಿಲ್ಲವಾದುದರಿಂದ) ಪರಮಾತ್ಮನು ಗುಣಪೂರ್ಣನಾದುದರಿಂದ ಸರ್ವೋತ್ತಮನು ಎಂಬುದು ಹೇಗೆ ಕೂಡುತ್ತದೆ. ಇದು ಅಸಂಭಾವ್ಯವಾದ ಮಾತಲ್ಲವೇ? ಎಂಬ ಆಕ್ಷೇಪವನ್ನು ಮಾಡಬಾರದು. ಲೋಕದಲ್ಲಿ ನಮ್ಮ ಊಹೆಗೆ ನಿಲುಕದಿದ್ದರೂ ಅತ್ಯಾಶ್ಚರ್ಯಕರವಾದ ವಸ್ತುಗಳು ಇರುವುದೂ, ಅವುಗಳನ್ನು ಆ ವಸ್ತುಗಳನ್ನು ನೋಡುವ ಶಕ್ತಿ ಇದ್ದವರು ಕಂಡಿರುವುದೂ ಪ್ರಮಾಣ ಸಿದ್ಧವಾಗಿರುವಾಗ, ನಾವು ನೋಡಿಲ್ಲ, ನಮಗೆ ಗೊತ್ತಾಗುವುದಿಲ್ಲ, ಎಂಬ ಒಂದೇ ಅಭಿಪ್ರಾಯದಿಂದ ಇಂಥಹಾ ವಸ್ತುವು ಅಸಂಭಾವಿತವೆಂದು ಹೇಳಬಾರದು, ಆ ವಸ್ತುವನ್ನು ನಿರಾಕರಿಸಲು ಬಾರದು. ಹೀಗೆ ನಾವು ಕಾಣದ, ತಿಳಿಯಲಾರದ ವಸ್ತುಗಳೇ ಇಲ್ಲವೆಂದು ಹೇಳಿದರೆ, ದೇವತೆಗಳು, ಯಕ್ಷರು, ಪಿಶಾಚಗಳು, ಮುಂತಾದವುಗಳೆ ಇಲ್ಲ. ಅವುಗಳಿಗೆ ಅದೃಶ್ಯವಾಗುವಿಕೆ, ನಮಗಿಂತ ಎಷ್ಟೋ ಹೆಚ್ಚು ಪಾಲು ಶಕ್ತಿ ಇರುವಿಕೆ ಇತ್ಯಾದಿಗಳನ್ನೆಲ್ಲಾ ಅಪಲಾಪ ಮಾಡಬೇಕಾದೀತು. ಆದುದರಿಂದ ಪ್ರಮಾಣದಿಂದ ಪೂರ್ಣ –ಗುಣನಾದ ಪರಮಾತ್ಮನು, ಶ್ರೀಮನ್ನಾರಾಯಣ ಎಂಬುದಾಗಿ ಪ್ರಸಿದ್ಧನಾದವನು ಸಿದ್ಧಿಸುತ್ತಾನೆ. ಅವನ ಸ್ವರೂಪ, ಗುಣ, ಮಹಿಮೆ ಮುಂತಾದವುಗಳ ಜ್ಞಾನ ಮುಂತಾದುದು ಸಂಭವಿಸುತ್ತದೆ. ಆದುದರಿಂದ ಶ್ರೀಮನ್ನಾರಾಯಣನೇ ಬ್ರಹ್ಮಮೀಮಾಂಸಾಶಾಸ್ತ್ರಕ್ಕೆ ವಿಷಯನಾಗಿದ್ದಾನೆ. ಅವನ ಅನುಗ್ರಹದಿಂದ ಲಭ್ಯವಾದ ಮುಕ್ತಿಯೇ ಬ್ರಹ್ಮಜಿಜ್ಞಾಸೆಗೆ ಪ್ರಯೋಜನವು. ಮೋಕ್ಷವನ್ನು ಬಯಸುವವನೇ ಅಧಿಕಾರಿಯು. ಯಥಾಯೋಗ್ಯವಾದ ಜ್ಞಾತಜ್ಞೇಯಭಾವಾದಿಗಳೇ ಸಂಬಂಧಗಳು. ಹೀಗೆ ನಾಲ್ಕು ಅನುಬಂಧಗಳು (ಅನುಬಂಧ=ಶಾಸ್ತ್ರಾಭ್ಯಾಸ ಪ್ರವರ್ತಕವಾದ ವಿಷಯಗಳು) ಇರುವುದರಿಂದ ಬ್ರಹ್ಮಮೀಮಾಂಸಾ ಶಾಸ್ತ್ರವನ್ನು ಆರಂಭಿಸುವುದು ಸರಿಯಾಗಿದೆ ಎಂದು ಸಮರ್ಥಿಸಬೇಕು. ಅಪ್ರಾಮಾಣಿಕವಾದ ಪರಂಪರೆಯುನ್ನು (ದೂರದ ಸಂಬಂಧವನ್ನು) ಆಶ್ರಯಿಸಿ ಬ್ರಹ್ಮಮೀಮಾಂಸಾಶಾಸ್ತ್ರವು ಆರಂಭಣೀಯವಲ್ಲವೆಂದು ಪೂರ್ವಪಕ್ಷ ಮಾಡುವುದೂ ಸರಿಯಲ್ಲ. ಪರಂಪರಾಸಂಬಂಧದಿಂದಲೇ ಬ್ರಹ್ಮಮೀಮಾಂಸಾಶಾಸ್ತ್ರವು ಆರಂಭಣೀಯವೆಂದು ಸಿದ್ಧಾಂತ ಮಾಡುವುದೂ ಸರಿಯಲ್ಲ. ಈ ಪರಂಪರಾ ಸಂಬಂಧಾಶ್ರಯದಿಂದ ಪೂರ್ವಪಕ್ಷ ಸಿದ್ಧಾಂತಗಳನ್ನು ಮಾಡುವವರು ಭ್ರಮೆಯೆಂಬ ಹಳ್ಳದಲ್ಲಿ ಬಿದ್ದವರೇ ಸರಿ. ಪರಸ್ಪರ ಸಂಬಂಧವಿಲ್ಲದ ನಿಮ್ಮ ಅನ್ಯೋನ್ಯ ಕೋಲಾಹಲವು ಯುಕ್ತವಲ್ಲ. ಇದು ಅಭಿಪ್ರಾಯವು.

**ಅವತಾರಿಕೆ :** ಶ್ರೀರಾಘವೇಂದ್ರ ಗುರುಸಾರ್ವಭೌಮರು ಇನ್ನೂ ವಿಸ್ತಾರವಾಗಿ ಬ್ರಹ್ಮಮೀಮಾಂಸಾಶಾಸ್ತ್ರದ ಆರಂಭಣೀಯತ್ವವನ್ನು ಸಮರ್ಥಿಸಿದುದನ್ನು ಕವಿಗಳು ವರ್ಣಿಸುತ್ತಾರೆ.

**ಯದ್ವಿಚಾರವಿಷಯೇ ನಿಗದ್ಯತೇ ಬ್ರಹ್ಮನಾಮ ಪರಜೀವಭೇದಕಮ್ ।**
**ಮುಕ್ತಿರೇವ ಫಲಮಸ್ಯ ವೇದನಾತ್ ಪ್ರಕ್ರಮೋಽಸ್ಯ ವಿಷಯಾದಿಮಾಂಸ್ತತಃ ॥೫೦॥**

**ತಾತ್ಪರ್ಯ :** ಬ್ರಹ್ಮ ಎಂದರೇನು? ಅದರ ಸ್ವರೂಪವೇನು? ಅದರ ಹೆಸರೇನು? ಎಂಬ ಜಿಜ್ಞಾಸೆಯು ಬಂದಾಗ ಜಿಜ್ಞಾಸ್ಯವಾದ ವಸ್ತುವಿನಲ್ಲಿರುವ ಬ್ರಹ್ಮ ಎಂಬ ಶಬ್ದವೇ ಪರಮಾತ್ಮನಿಗೂ ಜೀವಾತ್ಮನಿಗೂ ಭೇದವನ್ನು ತಿಳಿಸಿ, ಪರಮಾತ್ಮನೇ ಬ್ರಹ್ಮನೆಂದೂ ಅವನು ಜೀವನಿಗಿಂತ ಭಿನ್ನನಾಗಿರುವುದರಿಂದ ಜಿಜ್ಞಾಸ್ಯನೆಂದು ತಿಳಿಸುತ್ತದೆ. ಜಿಜ್ಞಾಸ್ಯವಾದ ವಸ್ತುವಿನಲ್ಲಿ ಬ್ರಹ್ಮ ಎಂಬ ಪದವನ್ನು ಪ್ರಯೋಗಿಸುವುದರಿಂದಲೇ ಆ ವಸ್ತುವು ಜಿಜ್ಞಾಸ್ಯವಾದ ಜೀವನಿಗಿಂತ ಬೇರೆಯಾಗಿದೆಯೆಂದು ತಿಳಿದುಬರುತ್ತದೆ. "ಅಥ ಕಸ್ಮಾತ್ ಉಚ್ಯತೇ ಬ್ರಹ್ಮೇತಿ, ಬೃಹಂತೋ ಹ್ಯಸ್ಮಿನ್ ಗುಣಾಃ" ಎಂಬ ಶ್ರುತಿಯಲ್ಲಿ ಹೇಳುವಂತೆ "ಈ ವಸ್ತುವನ್ನು ಬ್ರಹ್ಮ ಎಂದು ಏಕೆ ಹೇಳುತ್ತಾರೆ" ಎಂದು ಶ್ರುತಿಯಲ್ಲಿಯೇ ಪ್ರಶ್ನೆ ಮಾಡಿಕೊಂಡು ಆ ವಸ್ತುವಿನಲ್ಲಿ ಪೂರ್ಣವಾದ ಗುಣಗಳಿವೆ. ಈ ವಸ್ತುವು ಅಪರಿಮಿತ ಗುಣಪೂರ್ಣವಾಗಿದೆ. ಆದುದರಿಂದ ಇದನ್ನು ಬ್ರಹ್ಮ ಎಂದು ಹೇಳುತ್ತಾರೆ" ಎಂಬ ವಿವರಣೆಯನ್ನು ಕೊಟ್ಟಿದ್ದಾರೆ. ಗುಣಪರಿಪೂರ್ಣವಾದ ವಸ್ತುವೇ ಬ್ರಹ್ಮವು. ಜೀವನು ಗುಣಪರಿಪೂರ್ಣನಲ್ಲವೆಂದು ಅನುಭವದಿಂದಲೇ ಸಿದ್ಧವಾಗಿದೆ. ಹೀಗಿರುವುದರಿಂದ ಸ್ವಾಭಾವಿಕವಾಗಿಯೇ ಬ್ರಹ್ಮಜಿಜ್ಞಾಸೆಗೆ ವಿಷಯವು ಸಿದ್ಧವಾಯಿತು. ಜೀವಭಿನ್ನವಾದ ಗುಣಪೂರ್ಣವಾದ ಶ್ರೀಮನ್ನಾರಾಯಣನೆಂಬ ಇಂತಹಾ ಪರಬ್ರಹ್ಮ ವಸ್ತುವಿನಿಂದ, ಶ್ರವಣ–ಮನನ–ಧ್ಯಾನವೆಂಬ ವಿಚಾರದಿಂದ, ಮುಕ್ತಿಯೆಂಬ ಫಲ ಸಿಗುತ್ತದೆಯೆಂದು ಅತಃ ಎಂಬ ಪದವು ತಿಳಿಸುತ್ತದೆ. ಆದುದರಿಂದ ಜಿಜ್ಞಾಸೆಗೆ ಫಲವೂ ಇದೆಯೆಂದು ಸಿದ್ಧವಾಯಿತು. ಹೀಗೆ ವಿಷಯ ಪ್ರಯೋಜನಗಳು ಸ್ವಾಭಾವಿಕವಾಗಿಯೇ ಸಿದ್ಧಿಸುವುದರಿಂದ ಇಂತಹಾ ಬ್ರಹ್ಮಪ್ರತಿಪಾದಕವಾದ ವೇದಾಂತಶಾಸ್ತ್ರದ ಆರಂಭವು ವಿಷಯ ಪ್ರಯೋಜನ, ಸಂಬಂಧ ಅಧಿಕಾರಿಗಳೆಂಬ ಅನುಬಂಧ ಚತುಷ್ಟಯವುಳ್ಳದೆಂದು ಸಿದ್ಧಿಸುತ್ತದೆ ಎಂಬುದಾಗಿ ಅಭಿಪ್ರಾಯವು. ಇನ್ನೊಂದು ರೀತಿಯಿಂದ ಈ ಶ್ಲೋಕಕ್ಕೆ ಅವತರಣಿಕಾ, ಅನ್ವಯಾರ್ಥ ಮತ್ತು ತಾತ್ಪರ್ಯವನ್ನೂ ಕೂಲಂಕುಷವಾದ ವಿಷಯ ವಿವೇಚನೆಗಾಗಿ ಕೊಡಲಾಗುತ್ತದೆ.

**ಅವತಾರಿಕೆ :** ಗುಣಪೂರ್ಣನಾದ ವಿಷ್ಣುವು ಈ ಶಾಸ್ತ್ರಕ್ಕೆ ವಿಷಯನೆಂದೂ, ಮುಕ್ತಿಯು ಫಲವೆಂದೂ ಹೇಳಿದಿರಿ. ಆದರೆ ಜ್ಞಾಪಕವಾದ ವಿಷಯವು ಇಲ್ಲಿ ಇಲ್ಲವಾದುದರಿಂದ ಅದು ಸರಿಯಲ್ಲ ಎಂಬ ಸಂದೇಹವನ್ನು ಪರಿಹರಿಸುತ್ತಾರೆ.

**ತಾತ್ಪರ್ಯ :** ಬ್ರಹ್ಮಸೂತ್ರಗಳನ್ನು ರಚಿಸಿದವರು ಶ್ರೀಬಾದರಾಯಣರು. ಅವರು ತಮ್ಮ ಶಾಸ್ತ್ರ ಗ್ರಂಥವನ್ನು ಆರಂಭಿಸುವಾಗ ತಾವು ಬರೆಯುವ ಶಾಸ್ತ್ರಗ್ರಂಥವು ಆರಂಭ ಮಾಡಲು

ಯೋಗ್ಯವಲ್ಲ ಎಂಬ ಶಂಕೆಯು ಬರುವ ಸಂದರ್ಭದಲ್ಲಿ ಆ ಶಂಕೆಯ ಪರಿಹಾರಕ್ಕೆ ಉಪಯುಕ್ತವಾದ ಎಲ್ಲಾ ವಿಷಯಗಳನ್ನೂ ಸ್ವತಃ ತಾವೇ ಹೇಳಬೇಕು. ತಮ್ಮ ಗ್ರಂಥವು ಅರಂಭಿಸಲು ಯೋಗ್ಯವಲ್ಲ ಎಂಬ ಶಂಕೆಯನ್ನು ಪರಿಹರಿಸದಿದ್ದರೆ, ಆ ಗ್ರಂಥವನ್ನು ಓದಲು ಯಾರೂ ಪ್ರವರ್ತಿಸಲಾರರು. ವಿಷಯ, ಪ್ರಯೋಜನ, ಸಂಬಂಧ, ಅಧಿಕಾರಿ ಎಂಬ ನಾಲ್ಕು ಅನುಬಂಧಗಳು ಮಾತ್ರವೇ ಶಾಸ್ತ್ರದ ಆರಂಭ ಯೋಗ್ಯತ್ವಕ್ಕೆ ಪ್ರಯೋಜಕಗಳು. ಆ ವಿಷಯ ಪ್ರಯೋಜನಾಧಿಕಾರಿಗಳನ್ನು ಹೇಳಿದರೆ ಅವುಗಳಿಗೆ ಪರಸ್ಪರ ಸಂಬಂಧವನ್ನು ಶಿಷ್ಯರೇ ಊಹಿಸಿ ತಿಳಿಯಲು ಸಾಧ್ಯವಿರುವುದರಿಂದ ಅದನ್ನು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ. ಈ ನಾಲ್ಕು ಅನುಬಂಧಗಳಲ್ಲಿ ಉಳಿದ ವಿಷಯ, ಪ್ರಯೋಜನ ಅಧಿಕಾರಿಗಳಲ್ಲಿ, ಪ್ರಯೋಜನವನ್ನು ಹೇಳಿದರೆ, ಆ ಪ್ರಯೋಜನವನ್ನು ಪಡೆಯಲು ಬಯಸುವವರು ಅಧಿಕಾರಿಯೆಂದು ತಿಳಿದು ಬರುತ್ತದೆ. ಅದರಲ್ಲೂ ಫಲೇಚ್ಛೆ ಮಾತ್ರವೇ ಅಧಿಕಾರವಲ್ಲ. ಈ ಶಾಸ್ತ್ರದ ಅಧ್ಯಯನದಲ್ಲಿ ಪ್ರವೃತ್ತನಾದವನು ಈ ಶಾಸ್ತ್ರವನ್ನು ಅಧ್ಯಯನ ಮಾಡಲು ಪ್ರಾರಂಭ ಮಾಡಿದಾಗಿನಿಂದ ಫಲವು ಸಿಗುವವರೆಗೆ ಯಾವ – ಕಂಪ (ನಡುಕ–ಸಂದೇಹ–ಮನಸ್ಸಿನ ಬೇಸರ–ಕಿರಿಕಿರಿ) ವೂ ಇಲ್ಲದೇ ಈ ಶಾಸ್ತ್ರದ ಅಭ್ಯಾಸವನ್ನು ಮುಂದುವರೆಸಲು ಇತರ ಅಧಿಕಾರಿಗಳೂ ಬೇಕು. ಆ ಅಧಿಕಾರಿಗಳು ಯಾವುವು ಎಂದು ಮನುಷ್ಯನ ಬುದ್ಧಿಗೆ ಗೋಚರವಾಗಲಾರದು. ಅದರಿಂದಾಗಿ ಪರಮ ವೈದಿಕರಾದ ಬಾದರಾಯಣರೂ ಬ್ರಹ್ಮಜಿಜ್ಞಾಸೆಯನ್ನು ವಿಧಾನಮಾಡುವ (ಮಾಡಬೇಕೆಂದು ಹೇಳುವ) ವೇದರಚನೆಗಳಲ್ಲಿ ಉಕ್ತವಾದ ಶಮದಮಾದಿಗಳೇ ಅಧಿಕಾರಿಗಳೆಂದು ಹೇಳಬೇಕು. ನಮ್ಮ ಬುದ್ಧಿಯಿಂದಲೇ ಅಧಿಕಾರವನ್ನು ಕಲ್ಪಿಸಿಕೊಳ್ಳಬಾರದು. ಎಂದು ಈ ವಿಷಯವನ್ನು ಅಥ ಎಂಬ ಪದದಿಂದ ಸೂಚಿಸಿದ್ದಾರೆ. ಇನ್ನು ಬ್ರಹ್ಮಜಿಜ್ಞಾಸೆಗೆ ಫಲ ಏನೆಂದು ವಿಚಾರ ಮಾಡೋಣ. ಲೌಕಿಕವಾದ ಕೃಷಿ ವ್ಯಾಪಾರ ಮುಂತಾದ ಸಾಧನಗಳಿಂದ ಲಭ್ಯವಾದ ಧಾನ್ಯ ಧನ ಮುಂತಾದ ಐಹಿಕ ಫಲವು ಬ್ರಹ್ಮಜಿಜ್ಞಾಸೆಗೆ ಫಲವಾಗಲಾರದು. ಅಲೌಕಿಕವಾದ ಯಾಗಾದಿ ಸಾಧನದಿಂದ ಲಭ್ಯವಾದ ಸ್ವರ್ಗ ಮುಂತಾದುದೂ ಬ್ರಹ್ಮಜಿಜ್ಞಾಸೆಗೆ ಫಲವಾಗಲಾರದು. ಧಾನ್ಯ ಧನ ಮುಂತಾದವು ಈ ಬ್ರಹ್ಮಜಿಜ್ಞಾಸೆಗೆ ಫಲವಲ್ಲ. ಕೃಷಿಶಾಸ್ತ್ರ, ವಾಣಿಜ್ಯಶಾಸ್ತ್ರ ಮುಂತಾದ ಶಾಸ್ತ್ರಾಂತರ ಸಿದ್ಧವಾದ ಫಲವನ್ನು ಬ್ರಹ್ಮಜಿಜ್ಞಾಸೆಗೂ ಫಲವೆಂದು ಹೇಳಿದರೆ, ಈ ಬ್ರಹ್ಮಮೀಮಾಂಸಾಶಾಸ್ತ್ರಕ್ಕೆ ಪ್ರತ್ಯೇಕ ಫಲವಿಲ್ಲವೆಂದಾಗಿ ಈ ಶಾಸ್ತ್ರವು ವ್ಯರ್ಥವೆಂದೇ ಆಗುತ್ತದೆ. ವಾಸ್ತವವಾಗಿ ವಿಚಾರ ಮಾಡಿದರೆ ಬ್ರಹ್ಮಜಿಜ್ಞಾಸೆಯಿಂದ ಧಾನ್ಯ ಧನ ಮುಂತಾದ ಐಹಿಕ ಫಲಗಳ ಪ್ರಾಪ್ತಿಯೂ ಆಗುವುದಿಲ್ಲ. ಆದುದರಿಂದ ಇತರ ಶಾಸ್ತ್ರಗಳಿಂದ ಅಲಭ್ಯವಾದ ಮುಕ್ತಿಯೇ ಈ ಬ್ರಹ್ಮಮೀಮಾಂಸಾಶಾಸ್ತ್ರದ ಅಭ್ಯಾಸದ ಫಲವೆಂದು ಅತಃ ಎಂಬ ಶಬ್ದದಿಂದ ತಿಳಿದುಬರುತ್ತದೆ. ಹೀಗೆ ಬ್ರಹ್ಮಮೀಮಾಂಸಾಶಾಸ್ತ್ರದ ಆರಂಭಣೀಯತ್ವಕ್ಕೆ ಉಪಯುಕ್ತವಾದ ವಿಷಯಾದಿ ಎಲ್ಲವನ್ನೂ ಬ್ರಹ್ಮಜಿಜ್ಞಾಸಾ ವಿಧಾಯಕವಾದ ವೇದದಲ್ಲಿ ಹೇಳಿದುದನ್ನೇ ಇಟ್ಟುಕೊಳ್ಳಬೇಕು. ನಮ್ಮ ಬುದ್ಧಿಗೆ ತೋಚಿದಂತೆ ಕಲ್ಪಿಸಿಕೊಳ್ಳಬಾರದು.

ಹೀಗೆಯೇ ವಿಚಾರ ಮಾಡಿದಾಗ "ನಾರಾಯಣೋऽಸೌ ಪರಮೋ ವಿಚಿಂತ್ಯಃ ಮುಮುಕ್ಷುಭಿಃ ಕರ್ಮಪಾಶಾದಮುಷ್ಮಾತ್", ಈ ಕರ್ಮಪಾಶದಿಂದ ಬಿಡುಗಡೆ ಹೊಂದಬೇಕೆಂದು ಅಪೇಕ್ಷಿಸುವವರು ಸರ್ವೋತ್ತಮನಾದ ಈ ನಾರಾಯಣನನ್ನೇ ಶ್ರವಣಾದಿ ರೂಪವಾದ ಚಿಂತನೆಯಿಂದ ವಿಷಯೀಕರಿಸಬೇಕು ಇತ್ಯಾದಿಯಾದ ಜಿಜ್ಞಾಸಾವಿಧಾಯಕ ವಾಕ್ಯಗಳಲ್ಲಿ ಹೇಳಿದಂತೆ ಮುಕ್ತಿಯೇ ಫಲ; ನಾರಾಯಣನೇ ವಿಷಯ; ಮುಮುಕ್ಷುವೇ ಅಧಿಕಾರಿ ಎಂದು ಸಿದ್ಧಿಸುತ್ತದೆ.

ನಾರಾಯಣನೆಂಬ ಈ ವಿಷಯವೂ ಕೂಡಾ ಹಿಂದೆ ಹೇಳಿದಂತೆ ವೇದಪ್ರಮಾಣದಿಂದಲೇ ಮುಖ್ಯವಾಗಿ ತಿಳಿದು ಬರಬೇಕು. ವಿಷಯವು ವೇದಾತಿರಿಕ್ತಪ್ರಮಾಣದಿಂದ ತಿಳಿದು ಬರುವುದಾದರೆ ವಿಷಯದ ಜ್ಞಾನವು ಇತರ ಪ್ರಮಾಣಗಳಿಂದಲೇ ತಿಳಿದು ಬರುವುದರಿಂದ ಶ್ರುತಿಗಳ ಅರ್ಥವನ್ನು ನಿರ್ಣಯಿಸುವ ಈ ಶಾಸ್ತ್ರವು ವ್ಯರ್ಥವಾಗುತ್ತದೆ. ಆದುದರಿಂದ ವಿಷಯವು ಹಿಂದೆ ಹೇಳಿದಂತೆ ವೇದೇಕಗಮ್ಯವೆಂದೇ ನಿರ್ಧರಿಸಬೇಕು. ಈ ವಿಷಯವನ್ನು ಬೋಧಿಸುವ ಪದವು ಬ್ರಹ್ಮಮೀಮಾಂಸಾಶಾಸ್ತ್ರದಲ್ಲಿ ಯಾವುದು? "ತದ್ ವಿಜಿಜ್ಞಾಸಸ್ವ ತದ್ ಬ್ರಹ್ಮೇತಿ" ಇತ್ಯಾದಿಯಾಗಿ ಜಿಜ್ಞಾಸೆಯನ್ನು ವಿಧಾನ ಮಾಡುವ ವೇದವಾಕ್ಯದಲ್ಲಿ ಜಿಜ್ಞಾಸ್ಯದಲ್ಲಿ ಪ್ರಯುಕ್ತವಾದ ಬ್ರಹ್ಮಾದಿ ಪದವೇ ಸೂತ್ರದಲ್ಲಿ ವಿಷಯ ಸೂಚಕವಾದ ಪದವೆಂದು ಹೇಳಬೇಕು. ಬೇರೇ ಯಾವುದೋ ಪದವು ವಿಷಯ ಸೂಚಕವೆಂದು ಹೇಳಲು ಸಾಧ್ಯವಿಲ್ಲ. ಹೀಗೆ ಬ್ರಹ್ಮಮೀಮಾಂಸಾಶಾಸ್ತ್ರದ ಆರಂಭದಲ್ಲಿ ಪ್ರಯುಕ್ತವಾದ ಪದವು ಬ್ರಹ್ಮಮೀಮಾಂಸಾಶಾಸ್ತ್ರದ ವಿಷಯಸೂಚಕ ಪದವೆಂದು ಹೇಳದಿದ್ದರೆ, ಕಾಮಶಾಸ್ತ್ರದಲ್ಲಿ ಜಿಜ್ಞಾಸ್ಯಬೋಧಕಪದವು ಬ್ರಹ್ಮಪದವೆಂದು, ಒಬ್ಬ ಭಂಡನು ಹೇಳಿಯಾನು! ಮತ್ತೊಬ್ಬ ಹುಚ್ಚನು ಮರುಮರೀಚಿಕೆಯೇ (ಶೂನ್ಯವೇ!) ಜಿಜ್ಞಾಸಬೋಧಕಪದವೆಂದು ಹೇಳಿಯಾನು! ಹೀಗೆ ಶಾಸ್ತ್ರದಲ್ಲಿ ಬಂದಿರುವ ಪದಗಳ ಗಮನಿಕೆಯನ್ನು ಸೂಕ್ಷ್ಮವಾಗಿ ಪರಾಮರ್ಶಿಸದಿದ್ದರೆ ಶಾಸ್ತ್ರದಲ್ಲಿ ಬಹಳ ಗೊಂದಲವುಂಟಾದೀತು. ಈ ಕಾರಣದಿಂದಲೇ ಬ್ರಹ್ಮಮೀಮಾಂಸಾಶಾಸ್ತ್ರದ ಮೊದಲನೆಯ ಸೂತ್ರದಲ್ಲಿಯೇ ಶ್ರೀವೇದವ್ಯಾಸರು ಓಂ ಮತ್ತು ಬ್ರಹ್ಮ ಎಂಬ ಎರಡು ಪದಗಳನ್ನು ಉಪಯೋಗಿಸಿದ್ದಾರೆ (ಪ್ರಯೋಗಿಸಿರುತ್ತಾರೆ). ಜಿಜ್ಞಾಸಾವಿಧಾಯಕ ವಾಕ್ಯಗಳಲ್ಲಿ ಅಲ್ಲಲ್ಲಿ ಜಿಜ್ಞಾಸ್ಯ ವಸ್ತುವಿನಲ್ಲಿ "ಓಂ" ಶಬ್ದವನ್ನೂ "ಬ್ರಹ್ಮ" ಎಂಬ ಶಬ್ದವನ್ನೂ ಅನಂತ ಎಂಬ ಶಬ್ದವನ್ನೂ, ಉದ್ಗೀಥ ಎಂಬ ಶಬ್ದವನ್ನೂ, ಇನ್ನೂ ಇತರ ಅನೇಕ ಶಬ್ದಗಳನ್ನು ಪ್ರಯೋಗಿಸಿ ಇವು ಜಿಜ್ಞಾಸ್ಯಬೋಧಕವಾಗಿದೆ ಎಂಬುದಾಗಿ ಸೂಚಿಸುತ್ತಾ ಶ್ರೀ ವ್ಯಾಸರು ಸೂಚಕವಾಗಿ ಓಂ ಮತ್ತು ಬ್ರಹ್ಮ ಎಂಬ ಎರಡು ಪದಗಳನ್ನು ಮಾತ್ರ ಇಲ್ಲಿ ಪ್ರಯೋಗಿಸಿದ್ದಾರೆ. "ಓಂ" ಎಂಬ ಒಂದೇ ಪದದಿಂದ ಅಥವಾ "ಬ್ರಹ್ಮ" ಎಂಬ ಒಂದೇ ಪದದಿಂದ ವಿಷಯವನ್ನು ಸೂಚಿಸಲು ಸಾಧ್ಯವಿರುತ್ತಿರುವಾಗ ಸೂತ್ರಕಾರರು ಎರಡು ಪದಗಳನ್ನು ಪ್ರಯೋಗಿಸಿರುವುದು ವ್ಯರ್ಥವಲ್ಲವೇ? ಎಂಬ ಪ್ರಶ್ನೆಗೆ ಇದರಿಂದ ಉತ್ತರ ಸಿಕ್ಕಿದಂತಾಯಿತು. ಓಂ ಮುಂತಾದ ಪದಗಳಿಂದ ಪ್ರತಿಪಾದ್ಯವಾದ ಅರ್ಥದ ಜಿಜ್ಞಾಸೆಯನ್ನು

ಮಾಡಬೇಕು. ಬ್ರಹ್ಮ ಮುಂತಾದ ಪದಗಳಿಂದ ಪ್ರತಿಪಾದ್ಯವಾದ ಅರ್ಥದ ಜಿಜ್ಞಾಸೆಯನ್ನು ಮಾಡಬೇಕು ಎಂಬ ಅಭಿಪ್ರಾಯವನ್ನು ಮನಸ್ಸಿನಲ್ಲೇ ಇಟ್ಟುಕೊಂಡು ಸೂತ್ರಧಾರರು "ಸ್ಥಾಲೀಪುಲಾಕ" ನ್ಯಾಯದಿಂದ ಜಿಜ್ಞಾಸಾಬೋಧಕವಾದ ಎರಡು ಪದಗಳನ್ನು ಮಾತ್ರ ಈ ಸೂತ್ರದಲ್ಲಿ ಪರಿಗ್ರಹಿಸಿದ್ದಾರೆ. ಹೀಗೆ ಜಿಜ್ಞಾಸ್ಯಬೋಧಕವಾದ ಓಂ ಮತ್ತು ಬ್ರಹ್ಮಗಳ ಅರ್ಥವೇನು? ಮತ್ತು ಅನಂತಾ ಉದ್ಗೀಥಾದಿಪದಗಳ ಅರ್ಥವೇನು? ಜಿಜ್ಞಾಸಾಬೋಧಕವಾದ ಆಯಾ ಪದದ ಅರ್ಥವೇನು? ಎಂದು ವಿಚಾರಮಾಡಿದಾಗ ಆಯಾ ಸಂದರ್ಭದಲ್ಲಿ ಆಯಾ ಪ್ರಕರಣಗಳಲ್ಲಿ ಯಾವ ಅರ್ಥವನ್ನು ಆ ಪದಗಳಿಗೆ ಹೇಳಿದ್ದಾರೋ ಅದನ್ನೇ ಇಟ್ಟುಕೊಳ್ಳಬೇಕೇ ಹೊರತು ನಮ್ಮ ಬುದ್ಧಿಯಿಂದ ಆ ಪದಗಳಿಗೆ ಅರ್ಥವನ್ನು ಕಲ್ಪಿಸಬಾರದು. ನಮ್ಮ ಕಪೋಲಕಲ್ಪನೆಯಿಂದ ಶಬ್ದಗಳಿಗೆ ಅರ್ಥವನ್ನು ಹೇಳುವುದಾದರೆ ಆಯುರ್ವೇದ ಶಾಸ್ತ್ರದಲ್ಲಿರುವ "ಕುಮಾರೀ" ಎಂಬ ಶಬ್ದಕ್ಕೆ ಮದುವೆಯಾಗದ ಹುಡುಗಿ ಎಂದು ಅರ್ಥ ಹೇಳಬೇಕಾದೀತು. (ಕುಮಾರೀ ಎಂದರೆ ಆಯುರ್ವೇದದಲ್ಲಿ ಒಂದು ಗಿಡಮೂಲಿಕೆ, ಅದರಿಂದ ಕುಮಾರ್ಯಾಸವ ಎಂಬ ಔಷಧವನ್ನು ತಯಾರುಮಾಡುತ್ತಾರೆ) ಜಿಜ್ಞಾಸ್ಯವಾದ ವಸ್ತುವಿಗೆ ಓಂ ಎಂದು ಹೆಸರು ಹೇಳುವ ಶ್ರುತಿಯೇ, "ಯಸ್ಮಿನ್ ಓತಾಶ್ಚ ಪ್ರೋತಾಶ್ಚ" ಯಾವ ವಸ್ತುವಿನಲ್ಲಿ ಎಲ್ಲಾ ಚೇತನಾಚೇತನ ಪದಾರ್ಥಗಳು (ಗುಣಗಳು) ಓತಪ್ರೋತವಾಗಿವೆಯೋ (ಎಲ್ಲಾ ರೀತಿಯಿಂದಲೂ ಆಧರಿಸಿಕೊಂಡಿವೆಯೋ ಎಲ್ಲ ಗುಣಗಳೂ ಇವೆಯೋ) ಅದೇ ಓಂ ಎಂದು ತಾನೇ ವಿವರಿಸಿ ಹೇಳುತ್ತದೆ. ಹಾಗೆಯೇ ಜಿಜ್ಞಾಸ್ಯ ವಸ್ತುವಿನ ವಾಚಕವಾದ ಬ್ರಹ್ಮ ಶಬ್ದಕ್ಕೆ "ಅಥ ಕಸ್ಮಾದುಚ್ಯತೇ ಬೃಹ್ಮೇತಿ ಬೃಹಂತೋ ಹ್ಯಸ್ಮಿನ್ ಗುಣಾಃ" ಇತ್ಯಾದಿ ಶ್ರುತಿಮೂಲಕವಾಗಿ ಗುಣಪೂರ್ಣತ್ವವು ಓಂ ಮತ್ತು ಬ್ರಹ್ಮ ಶಬ್ದಗಳ ಅರ್ಥ. ಇವೆರಡೂ ಗುಣಪೂರ್ಣ ಎಂಬ ಅರ್ಥವನ್ನು ಹೇಳುತ್ತದೆ ಎಂದು ಸೂಚಿಸುತ್ತದೆ. ಬ್ರಹ್ಮಮೀಮಾಂಸಾಶಾಸ್ತ್ರಕ್ಕಿಂತಲೂ ಮೊದಲು ದೈವೀಮೀಮಾಂಸಾಶಾಸ್ತ್ರವೆಂಬ ಒಂದು ಶಾಸ್ತ್ರವನ್ನು ಅಧ್ಯಯನ ಮಾಡಬೇಕು. ಅದರ ಮೊದಲನೆಯ ಸೂತ್ರ "ಓಂ ಅಥಾತೋ ದೈವೀಮೀಮಾಂಸಾ" ಕೊನೆಯ ಎರಡು ಸೂತ್ರಗಳು ಅನುಕ್ರಮವಾಗಿ ಸವಿಷ್ಣುರಾ ಹಹಿ, ತಂ ಬ್ರಹ್ಮೇತ್ಯಾಚಕ್ಷತೇ ಎಂದಿದೆ. ಈ ಆದ್ಯಂತ ಸೂತ್ರಗಳನ್ನು ಶ್ರೀವೇದವ್ಯಾಸರೇ ರಚಿಸಿದ್ದಾರೆ. ಮಧ್ಯದ ಸೂತ್ರಗಳನ್ನು ಶೇಷ ಮತ್ತು ಪೈಲರು ಶ್ರೀಬಾದರಾಯಣರ ಆಜ್ಞೆಯಿಂದ ಮಾಡಿದ್ದಾರೆ. ಬ್ರಹ್ಮಮೀಮಾಂಸಾಸೂತ್ರದ ಆದಿಯಲ್ಲಿರುವ ಬ್ರಹ್ಮ ಶಬ್ದದ ಅರ್ಥವೇನೆಂದು ಶ್ರೀಬಾದರಾಯಣರು ತಾವೇ ದೈವೀಮೀಮಾಂಸಾಶಾಸ್ತ್ರದ ಕೊನೆಯಲ್ಲಿ ಹೇಳಿರುತ್ತಾರೆ. ಆದುದರಿಂದ ಅವರೇ ಮಾಡಿರುವ ದೈವೀ ಮೀಮಾಂಸಾಶಾಸ್ತ್ರದ ಅವ್ಯವಹಿತೋತ್ತರವರ್ತಿಯಾದ ಬ್ರಹ್ಮಮೀಮಾಂಸಾಶಾಸ್ತ್ರದ ಮೊದಲನೆಯ "ಓಂ ಅಥಾತೋ ಬ್ರಹ್ಮಜಿಜ್ಞಾಸಾ" ಎಂಬ ಸೂತ್ರದಲ್ಲಿರುವ ಬ್ರಹ್ಮಶಬ್ದಕ್ಕೂ, ಜಿಜ್ಞಾಸ್ಯಾವಸ್ತುವಿನಲ್ಲಿರುವ ಓಂ, ಉದ್ಗೀಥಾ ಅನಂತಾದಿ ಶಬ್ದಗಳಿಗೂ ಗುಣಪೂರ್ಣನಾದ ವಿಷ್ಣು ಎಂದೇ ಅರ್ಥ, ಇತರ ದೇವತೆಗಳೆಂದಾಗಲೀ ನಿರ್ಗುಣವಸ್ತು ಎಂದಾಗಲೀ ಅರ್ಥವಲ್ಲ ಎಂದು ಹೇಳಬೇಕು. ಈ ಮೇಲೆ ಹೇಳಿದ ಅಭಿಪ್ರಾಯವು ಶ್ರೀಬಾದರಾಯಣರಿಗೆ ಇದೆಯೆಂದು ಈ ರೀತಿಯ ಪರ್ಯಾಲೋಚನೆ ಮತ್ತು ವಿಮರ್ಶೆಗಳಿಂದ ತಿಳಿದು ಬರುತ್ತದೆ. ವಿಷ್ಣುವು

ಜೀವಾಭಿನ್ನನಾದರೆ ಅವನಿಗೆ ಜಿಜ್ಞಾಸಾವಿಷಯತ್ವ ಕೂಡುವುದಿಲ್ಲ. ಇವನು ಚೇಷ್ಟೆ ಮುಂತಾದ ಲಿಂಗಗಳಿಂದಲೇ ಸಿದ್ಧಿಸುತ್ತಾನೆ. ಇನ್ನೊಬ್ಬನಲ್ಲಿರುವ ಹಿತಪ್ರಾಪ್ತಿಗೆ ಅನುಕೂಲವಾದ ಕ್ರಿಯೆಯಿಂದಲೂ ಅಹಿತಪರಿಹಾರಕವಾದ ಕ್ರಿಯೆಯಿಂದಲೂ (ಈ ಅನುಮಾನದಿಂದ) ಆ ದೇಹದಲ್ಲಿ ಆತ್ಮನಿದ್ದಾನೆಂದು ಸಿದ್ಧಿಸುತ್ತದೆ. ಹೀಗೆ ಅನುಮಿತಿಯನ್ನು ಹೊಂದುವ ಜೀವನು (ನಾನು ನಾನು – ಅಹಂ ಎಂಬ ಸಾಕ್ಷಿರೂಪ ಅನುಭವದಿಂದ ಸಿದ್ಧಿಸುತ್ತದೆ.). ಇಂತಹಾ ಪರಾತ್ಮ, ಸ್ವಾತ್ಮಜೀವನೇ ಬ್ರಹ್ಮಮೀಮಾಂಸಾಶಾಸ್ತ್ರಕ್ಕೆ ವಿಷಯನಾಗುವುದಾದರೆ ಆ ಆತ್ಮವಸ್ತುವಿನಲ್ಲಿ ಸಂಶಯವಿಲ್ಲದಿರುವುದರಿಂದ, ಅವನಿಗೆ ಜಿಜ್ಞಾಸಾವಿಷಯತ್ವ (ವಿಚಾರಯೋಗ್ಯತ್ವ) ಇಲ್ಲದಿರುವುದರಿಂದ ಶಾಸ್ತ್ರವು ವಿಷಯವಿಲ್ಲದೇ ಪ್ರಾರಂಭವಾಗಿದೆ ಎಂದು ಹೇಳಬೇಕಾಗುತ್ತದೆ. ಈ ಶಂಕೆಯ ಪರಿಹಾರಕ್ಕಾಗಿಯೇ ಜಿಜ್ಞಾಸಾವಿಷಯವಸ್ತುವಿನಲ್ಲಿ ಪ್ರಯುಕ್ತವಾದ ಬ್ರಹ್ಮಾದಿ ಶಬ್ದಗಳು ಜಿಜ್ಞಾಸಾವಿಧಾಯಕಶ್ರುತಿಯ ಬಳಿಯಲ್ಲಿಯೇ, ಆ ಪ್ರಕರಣದಲ್ಲಿಯೇ ಪಠಿತವಾದ ಶ್ರುತಿಗಳಿಂದ "ಗುಣಪೂರ್ಣ=ಬ್ರಹ್ಮ ಓಂ" ಎಂದು ವ್ಯಾಖ್ಯಾನಿಸಿದ್ದಾರೆ. ಈ ವಿಷಯವನ್ನು ಬ್ರಹ್ಮಜಿಜ್ಞಾಸಾ ಎಂಬುದಾಗಿ ಬ್ರಹ್ಮನಿಗೆ ಜಿಜ್ಞಾಸಾ ವಿಷಯತ್ವವನ್ನು ಹೇಳುವ ಸೂತ್ರಕಾರರೇ ಸೂಚಿಸಿದ್ದಾರೆ. ಬ್ರಹ್ಮಾದಿ ಶಬ್ದಗಳಿಗೆ "ಗುಣಪೂರ್ಣ" ಎಂಬರ್ಥವನ್ನು ಯಾವ ಪೂರ್ವಾಭಿನಿವೇಶವೂ ಇಲ್ಲದಿರುವ ಎಲ್ಲರೂ ಒಪ್ಪಲೇಬೇಕಾಗುತ್ತದೆ. ಈ "ಗುಣಪೂರ್ಣತ್ವವು" ಅತ್ಯಂತ ಅಣುವಾದ ಅಲ್ಪಶಕ್ತಿ, ಅಸರ್ವಜ್ಞತೆ ಇತ್ಯಾದಿ ಅನಂತ ವಿರುದ್ಧಧರ್ಮಗಳಿಂದ ಕೂಡಿರುವ ಜೀವನಲ್ಲಿ ಅಸಂಭಾವಿತವಾಗಿದೆ. ಆದುದರಿಂದ ಜೀವಭಿನ್ನನಾದ ಸರ್ವೋತ್ತಮನಾದ ವಿಷ್ಣುವೇ ಬ್ರಹ್ಮಾದಿ ಶಬ್ದಾರ್ಥರೂಪನಾದವನು ಎಂದು ಸಾಧಾರಣವಾಗಿ ಸುಸ್ಪಷ್ಟವಾಗಿ ತಿಳಿದುಬರುತ್ತದೆ. ಪರಬ್ರಹ್ಮನಾದ ವಿಷ್ಣುವು ಇತರ ಶಾಸ್ತ್ರಗಳಿಂದ ಸಿದ್ಧನಾಗಿಲ್ಲವಾದುದರಿಂದ ವಿಷ್ಣು ಎಂಬ "ಅಶೇಷ ಗುಣಾಕಾರವಾದ" ವಸ್ತುವನ್ನು ಹೇಳುವ ಬ್ರಹ್ಮಮೀಮಾಂಸಾಶಾಸ್ತ್ರಕ್ಕೆ ಸಪ್ರಯೋಜನತ್ವವೂ, ಸವಿಷಯತ್ವವೂ ಸಿದ್ಧಿಸುತ್ತದೆ. ಶ್ರವಣ, ಮನನ, ನಿಧಿಧ್ಯಾಸನ ರೂಪವಾದ ಜಿಜ್ಞಾಸಾ ಮಾಡುವವನಿಗೆ ಹಿಂದೆ ಹೇಳಿರುವ ಸಕಲಾನಿಷ್ಟನಿವೃತ್ತಿಪೂರ್ವಕ ಇಷ್ಟಪ್ರಾಪ್ತಿರೂಪವಾದ ಮುಕ್ತಿಯು ಸರ್ವೋತ್ತಮನಾದ ವಿಷ್ಣುವಿನ ಅನುಗ್ರಹದಿಂದ ದೊರೆಯುತ್ತದೆ ಎಂದು ಬ್ರಹ್ಮಮೀಮಾಂಸಾಕಾರರಾದ ಶ್ರೀವೇದವ್ಯಾಸರ ಅಭಿಪ್ರಾಯವು.

ಏವಂ ಚ ಸೂತ್ರಕಾರರಾದ ಶ್ರೀವೇದವ್ಯಾಸರೇ ವಿಷಯ, ಪ್ರಯೋಜನ, ಸಂಬಂಧ, ಅಧಿಕಾರಿಗಳೆಂಬ ನಾಲ್ಕು ಅನುಬಂಧಗಳನ್ನು ತಾವೇ ಸೂಚಿಸಿದ್ದಾರೆ. "**ಸೂಚನಾತ್ ಸೂತ್ರಮುಚ್ಯತೇ**" ಎಂಬ ಮಾತಿನಂತೆ ತಿಳಿಸಬೇಕಾದುದನ್ನು ಸೂಚಿಸುವ ಶಬ್ದ ಸಮುದಾಯವೇ ಸೂತ್ರವಾಗಿದೆ. ಒಟ್ಟಿನಲ್ಲಿ ತಾವು ಬರೆದಿರುವ ಶಾಸ್ತ್ರಕ್ಕೆ ಆರಂಭಯೋಗ್ಯತ್ವವನ್ನು ಸೂತ್ರಕಾರರೇ ಸಮರ್ಥಿಸಿದ್ದಾರೆ.

"**ಓಂ ಅಥಾತೋ ಬ್ರಹ್ಮಜಿಜ್ಞಾಸಾ**" ಎಂಬ ಸೂತ್ರದಿಂದ ಸೂತ್ರಕಾರರೇ ಎಲ್ಲವನ್ನೂ ಹೇಳಿರುವಾಗ ನೀವೆಲ್ಲರೂ ಕೋಲಾಹಲ ಮಾಡುತ್ತಿರುವುದು ಏತಕ್ಕಾಗಿ? ಸೂತ್ರವಾದ ಅರ್ಥವನ್ನು ಸರಿಯಾಗಿ ತಿಳಿಯದಿರುವುದರಿಂದ ನೀವು ಕೋಲಾಹಲ ಮಾಡುತ್ತೀರಿ ಎಂದು

ತಿಳಿಯಬೇಕಾಗುತ್ತದೆ. ಸೂತ್ರಾರ್ಥವನ್ನು ಹೇಗೆ ತಿಳಿದುಕೊಳ್ಳಬೇಕು ಎಂಬ ಸೂತ್ರಾರ್ಥಜ್ಞಾನ ಮಾರ್ಗವನ್ನು ಅರಿಯದ, ಭ್ರಮಿಸಿ ಈ ರೀತಿ ನೀವೆಲ್ಲರೂ ಕೋಲಾಹಲ ಮಾಡುತ್ತಿದ್ದೀರಿ ಎಂಬುದು ಶ್ರೀಗುರುರಾಘವೇಂದ್ರರ ಅಭಿಪ್ರಾಯ.

**ಅವತಾರಿಕೆ :** ಶ್ರೀಗುರುಸಾರ್ವಭೌಮರ ಪ್ರವಚನ ಸಮಾಪ್ತಿಯಾಯಿತೆಂದು ಸೂಚಿಸುತ್ತಾ ಆಗ ಮಧ್ಯಾಹ್ನ ಕಾಲವಾಯಿತೆಂದು ಕವಿಗಳು ತಿಳಿಸುತ್ತಾರೆ.

**ಏವಮಾದಿ ಪರಮಾತ್ಮಚಿಂತನೈರಾಸ್ತ ಸಂಯಮಿವರೋಽತಿಹರ್ಷಿತಃ ।**
**ತತ್ರ ಸೋಽನುಭವಲಿಪ್ಸಯಾ ದಿವೋ ಮಧ್ಯಸೀಮನಿ ರವಿರ್ವ್ಯಲಂಬತ ॥೫೧॥**

**ತಾತ್ಪರ್ಯ :** ಯತಿಶ್ರೇಷ್ಠರಾದ ಶ್ರೀರಾಘವೇಂದ್ರ ಗುರುಸಾರ್ವಭೌಮರು ಈ ಹಿಂದೆ ಹೇಳಿರುವಂತಹಾ ಪರಬ್ರಹ್ಮ ವಿಷಯ ವಿಚಾರಗಳಿಂದ ಬಹಳ ಸಂತೋಷಪಟ್ಟರು. ಆಗ ಸೂರ್ಯನೂ ಕೂಡಾ ಈ ಚರ್ಚೆಯಿಂದ ತಾನೂ ಕೂಡಾ ವಿಷಯವನ್ನು ತಿಳಿಯಬೇಕೆಂಬ ಇಚ್ಛೆಯಿಂದ ಆಕಾಶದ ಮಧ್ಯಪ್ರದೇಶದಲ್ಲಿ ಸ್ವಲ್ಪ ವಿಳಂಬ ಮಾಡಿದನು. ಮಧ್ಯಾಹ್ನ ಸಮಯದಲ್ಲಿ ಸೂರ್ಯನು ಸ್ವಲ್ಪ ನಿಧಾನವಾಗಿ ಚಲಿಸುವಂತೆ ಕಾಣಿಸುತ್ತಾನೆ. ಅವನ ಮಂದಗತಿಯು ಪರಬ್ರಹ್ಮ ವಿಚಾರವನ್ನೂ ತಾನೂ ಕೇಳಬೇಕೆಂಬ ಇಚ್ಛೆಯಿಂದ ಉಂಟಾಯಿತೇನೋ ಎಂಬುವ ಹಾಗೆ ತೋರುತ್ತಿತ್ತು. ಅವನ ಮಂದಗತಿಗೆ ಈ ವಿಚಾರದಿಂದ ಜ್ಞಾನ ಪಡೆಯುವ ಇಚ್ಛೆಯು ಕಾರಣ ಎಂಬುದಾಗಿ ಉತ್ಪ್ರೇಕ್ಷಿಸಿರುವುದರಿಂದ ಇಲ್ಲಿ ಉತ್ಪ್ರೇಕ್ಷಾಲಂಕಾರವು.

**ಅವತಾರಿಕೆ :** ಈಗ ಕವಿಗಳು ಕಾಲ ಪ್ರಶಂಸಕನು ಮಧ್ಯಾಹ್ನ ಕಾಲವನ್ನು ವರ್ಣಿಸಿದುದನ್ನು ತಿಳಿಸುತ್ತಾರೆ.

**ಅಸ್ತೇ ಧ್ವಾಂತೇ ಸಮಸ್ತೇ ಪ್ರತಿಭಟಸರಣೀಂ ಗತ್ವರೇ ಪ್ರಾದುರಾಸೀ–**
**ಚ್ಛಾಯಾರೂಪಂ ತದೇತಚ್ಛರಣಮುಪಗತಂ ಪಾದಮೂಲಂ ಜನಾನಾಮ್ ।**
**ಹಂತಾಮಂದಪ್ರತಾಪೈರಪಿ ಮಮ ಕಿರಣೈಃ ಶಕ್ಯತೇ ತನ್ನ ಭೇತ್ತುಂ**
**ಧಿಙ್ಮಾಮಿತ್ಯಾಕುಲೋಽರ್ಕಃ ಪ್ರತಪತಿ**
**ಕಲಯನ್ ವ್ಯೋಮಮಧ್ಯೇ ವಿಲಂಬಮ್ ॥೫೨॥**

**ತಾತ್ಪರ್ಯ :** ಉಷೋದಯ, ಅರುಣೋದಯ, ಸೂರ್ಯೋದಯಗಳಾಗುತ್ತಾ ಬಂದಂತೆ ಕತ್ತಲೆಯೆಲ್ಲವೂ ನಾಶಹೊಂದಿತು. ಕತ್ತಲೆಯು ಅದರ ವಿರೋಧಿಯಾದ ಬೆಳಕಿನ ಜನ್ಮಶತ್ರುವಾಯಿತು. ಕತ್ತಲೆಯು ಎಲ್ಲೆಲ್ಲಿ ಇದ್ದರೂ ಅಲ್ಲಲ್ಲಿ ಸೂರ್ಯನ ಬೆಳಕಿನಿಂದ ನಾಶವಾಯಿತು ಆದರೆ ಕತ್ತಲೆಯು ಒಂದು ಉಪಾಯವನ್ನು ಮಾಡಿತು. ಅದು ನೆರಳಿನ ರೂಪವನ್ನು ಸ್ವೀಕಾರ ಮಾಡಿ ಜನರ ಪಾದಗಳ ಮೂಲವನ್ನೇ ಆಶ್ರಯಿಸಿತು. "ನನ್ನ ಕಿರಣಗಳಿಗೆ ಅಸಾಧಾರಣ

ಪ್ರತಾಪವಿದೆ. ಬೇಕಾದಷ್ಟು ಸಾಮರ್ಥ್ಯವಿದೆ, ಆದರೆ ಈ ನನ್ನ ಕಿರಣಗಳಿಂದಲೂ ಕತ್ತಲೆಯ ಆಟವನ್ನು ನಾಶಮಾಡಲು ಸಾಧ್ಯವಾಗಲಿಲ್ಲ. ಅಯ್ಯೋ, ನನಗೆ ಧಿಕ್ಕಾರವಿರಲಿ" ಎಂದು ಚಿಂತಾಗ್ರಸ್ತನಾದ ಸೂರ್ಯನು ಮನಸ್ಸಿನಲ್ಲಿ ಬೇಸರ ತುಂಬಿ, ತನ್ನನ್ನು ನಿಂದಿಸಿಕೊಳ್ಳುತ್ತಾ ಮೆಲ್ಲ ಮೆಲ್ಲನೆ ಹೋಗುತ್ತಾ ಕತ್ತಲೆಗೆ ಆಶ್ರಯ ಕೊಟ್ಟಿರುವ ಜನರಿಗೆ ತಾಪವನ್ನು ಉಂಟುಮಾಡುತ್ತಿದ್ದಾನೆ. ಮಧ್ಯಾಹ್ನ ತಾಪವು ಹೆಚ್ಚಾಗಿ ಉಂಟಾಗಲು ಸೂರ್ಯನು ನಿಧಾನವಾಗಿ ಹೋಗಲು ತನ್ನ ಕಿರಣಗಳಿಂದ ಕತ್ತಲೆಯನ್ನು ಭೇದಿಸಲು ಸಾಧ್ಯವಾಗದೇ ಹೋಯಿತಲ್ಲಾ ಎಂಬ ಬೇಸರವೇ ಕಾರಣ ಎಂದು ಉತ್ಪ್ರೇಕ್ಷಿಸಿದ್ದಾರೆ. ನೆರಳು ಕಾಲಿನ ಬುಡಕ್ಕೆ ಬಂದಿತು, ಮಧ್ಯಾಹ್ನದ ವೇಳೆಯಾಯಿತು ಎಂಬುದಾಗಿ ಅಭಿಪ್ರಾಯ.

**ಅವತಾರಿಕೆ** : ಮಧ್ಯಾಹ್ನದ ವೇಳೆಯಲ್ಲಿ ಬಿಸಲಿನ ತಾಪವನ್ನು ಸಹಿಸಲಾಗದೇ ಮೀನುಗಳು ಕಮಲನಾಳದ ಬುಡವನ್ನು ಸೇರಿಕೊಂಡ ಕಾರಣವನ್ನು ಕವಿಗಳು ಈಗ ಉತ್ಪ್ರೇಕ್ಷಿಸುತ್ತಿದ್ದಾರೆ.

**ವಕ್ತ್ರಾಂಭೋಜಂ ವಿಧತ್ತೇ ಮಮ ಸುಹೃದಮಿತಿ ಪ್ರಾಪ್ತರೋಷೋ ವಿವಸ್ವಾನ್**
**ಮ್ಲಾನಂ ಮೀನೇಕ್ಷಣಾನಾಂ ನಯನಯುಗಮಯಂ ಕಲ್ಪಯನ್ನುಲ್ಬಣಶ್ರೀಃ ।**
**ತಚ್ಛಾಯಾಧಾರಿಣೋಽಸ್ಮಾನಪಿ ತಪತಿ ಮುಹುಸ್ತಂ ಸಮಾಧೇಹಿ ಪಾಹೀ–**
**ತ್ಯಾರಾದಂಭೋಜಿನೀನಾಂ ಶಕುಲಕುಲಮಯಾದಾಕುಲಂ ಪಾದಮೂಲಮ್ ॥೫೩॥**

**ತಾತ್ಪರ್ಯ** : ಮೀನಿನಂತೆ ಚಂಚಲವಾದ ಮತ್ತು ಸುಂದರವಾದ ಕಣ್ಣುಗಳುಳ್ಳ ಈ ನಾರೀಮಣಿಯರ ಎರಡು ಕಣ್ಣುಗಳು ನನಗೆ ಮಿತ್ರನಾಗಿರುವ (ಸ್ತ್ರೀಯರ) ಮುಖಕಮಲವನ್ನು ಬಾಡಿಸಿಬಿಡುತ್ತದೆ. ಸೋಲಿಸುತ್ತದೆ. "ಮುಖ ಕಮಲಕ್ಕಿಂತಲೂ ನಯನಮೀನಯುಗ್ಮವು ಶ್ರೇಷ್ಠವಾಗಿದೆ ಎಂಬ ಪ್ರಶಂಸೆಯನ್ನು ಎಲ್ಲರೂ ಮಾಡುವಂತೆ ಈ ಕಣ್ಣುಗಳ ಜೋಡಿಯು ಮಾಡುತ್ತಿದೆ. ಆದುದರಿಂದ ನಾರಿಯರ ಈ ನಯನಯುಗ್ಮವನ್ನು ನಾನು ಮ್ಲಾನವನ್ನಾಗಿ (ಬಾಡಿರುವುದನ್ನಾಗಿ) ಮಾಡುತ್ತೇನೆ" ಎಂಬುದಾಗಿ ಸೂರ್ಯನು ತುಂಬಾ ಸಿಟ್ಟಿನಿಂದ ಕಠೋರವಾದ ಕಾಂತಿಯುಳ್ಳವನಾಗಿ ತಾಪವನ್ನು ಉಂಟುಮಾಡುತ್ತಿದ್ದಾನೆ. ಈ ಸೂರ್ಯನು ಸುಂದರಿಯರ ಕಣ್ಣುಗಳ ಹೋಲಿಕೆಯುಳ್ಳ ನಮಗೂ ತುಂಬಾ ಸಂತಾಪವನ್ನು ಉಂಟುಮಾಡುತ್ತಿದ್ದಾನೆ. ಆದುದರಿಂದ ಎಲೈ ಸೂರ್ಯನ ಸ್ನೇಹಿತೆಯಾದ ಕಮಲಿನಿಯೇ! ನೀನು ಸೂರ್ಯನನ್ನು ಸಮಾಧಾನಗೊಳಿಸು. ನಮ್ಮನ್ನು ಕಾಪಾಡು" ಎಂಬುದಾಗಿ ಪ್ರಾರ್ಥಿಸುತ್ತಿವೆಯೋ ಎಂಬಂತೆ ಮೀನುಗಳ ಸಮೂಹವು ಕಮಲಿನಿಗಳ (ತಾವರೆ ಹೂವುಗಳ ರಾಶಿಗಳ) ಬುಡಕ್ಕೆ ಹೋಗಿ, ಅವುಗಳ ಪಾದಕ್ಕೆ ನಮಸ್ಕರಿಸುತ್ತಿವೆಯೋ ಎಂಬಂತೆ ಇದೆ ಎಂಬುದಾಗಿ ಗಮ್ಯವಾದ ಉತ್ಪ್ರೇಕ್ಷೆಯು. ಮಧ್ಯಾಹ್ನದ ಬಿಸಿಲಿನ ತಾಪದಿಂದ ಸ್ತ್ರೀಯರ ಕಣ್ಣುಗಳು ಬಾಡುತ್ತವೆ. ಮೀನುಗಳು ಬಿಸಿಲಿನ ತಾಪದಿಂದ ಬಳಲಿ ತಾವರೆಬಳ್ಳಿಗಳ ಬುಡದ ನೀರಿನೊಳಗಿನ ತಂಪಾದ ನೆರಳಿನಲ್ಲಿ ಸಂಚರಿಸುತ್ತಿವೆ ಎಂದು ಭಾವ.

**ಅವತಾರಿಕೆ :** ಈಗ ಕವಿಗಳು ಶ್ರೀಗುರು ರಾಘವೇಂದ್ರರಿಗೆ ಕಾಲಪ್ರಶಂಸಕನು ಮಧ್ಯಾಹ್ನದ ಸ್ನಾನದ ವೇಳೆಯಾಯಿತೆಂದು ತಿಳಿಸಿದುದನ್ನು ವರ್ಣಿಸುತ್ತಾರೆ.

**ಮಾಧ್ಯಂದಿನಸ್ನಾನಕೃತೇ ಮಹಾಂತಂ ಮುನೀಂದ್ರಮಿತ್ಥಂ ಕಿಲ ಕಾಲಶಂಸೀ ।**
**ಆಗತ್ಯ ಮಧ್ಯಂದಿನಕಾಲಮಸ್ಮೈ ನ್ಯವೇದಯತ್ ಪ್ರಾಪ್ತಮದೃಪ್ತಚೇತಾಃ ॥೫೪॥**

**ತಾತ್ಪರ್ಯ :** ಈ ರೀತಿಯಾಗಿ ಮಧ್ಯಾಹ್ನ ಕಾಲವನ್ನು ವರ್ಣಿಸಿದ ಜೋಯಿಸರು ಶ್ರೀ ರಾಘವೇಂದ್ರತೀರ್ಥ ಗುರುಸಾರ್ವಭೌಮರ ಬಳಿಗೆ ಬಂದು "ಮಧ್ಯಾಹ್ನ ಕಾಲ ಪ್ರಾಪ್ತವಾಗಿದೆ. ತಮ್ಮ ಮಾಧ್ಯಾಹ್ನಿಕ ಸ್ನಾನದ ಸಮಯವು ಪ್ರಾಪ್ತವಾಗಿದೆ" ಎಂಬುದಾಗಿ ಅತ್ಯಂತ ವಿನಯದಿಂದ ಶ್ರೀಗುರುರಾಘವೇಂದ್ರತೀರ್ಥರ ಮುಂದೆ ನಿಂತು ವಿಜ್ಞಾಪನೆ ಮಾಡಿಕೊಂಡನು.

**ಅವತಾರಿಕೆ :** ಶ್ರೀಗುರುರಾಜರು ಮಾಧ್ಯಾಹ್ನಿಕ ಸ್ನಾನಕ್ಕೆ ಸಿದ್ಧರಾದುದನ್ನು ಕವಿಗಳು ವರ್ಣಿಸುತ್ತಾರೆ.

**ವ್ಯಾಖ್ಯಾಯ ಶಿಷ್ಯನಿವಹಾಯ ಚಿರಾಯ**
**ಸೋಽಯಮಾಮ್ನಾಯಮೌಲಿವಚನಾನಿ ಮನೋಹರಾಣಿ ।**
**ಮಾಧ್ಯಾಹ್ನಿಕಾನಿ ವಿವಿಧಾನಿ ವಿಧಾತುಕಾಮಃ ಕರ್ಮಾಣಿ**
**ಮಂದಮುದತಿಷ್ಠದುದಗ್ರಕೀರ್ತಿಃ ॥೫೫॥**

**ತಾತ್ಪರ್ಯ :** ಪವಿತ್ರವಾದ ಶ್ರೇಷ್ಠ ಕೀರ್ತಿಯಿಂದ ವಿರಾಜಮಾನರಾದ ಶ್ರೀರಾಘವೇಂದ್ರ ಗುರುಸಾರ್ವಭೌಮರು ಈ ರೀತಿಯಾಗಿ ಮಧ್ಯಾಹ್ನದವರೆಗೂ ಹೃದಯಂಗಮವಾದ ಉಪನಿಷತ್ವಚನಗಳನ್ನು ಉದಾಹರಿಸುತ್ತಾ ಬ್ರಹ್ಮಸೂತ್ರಭಾಷ್ಯದ ಪ್ರವಚನವನ್ನು ಮಾಡಿದರು. ಅನೇಕ ಮಂದಿ ಶಿಷ್ಯರು ಬಹಳ ಭಕ್ತಿ ಗೌರವ ಹಾಗೂ ಆದರಗಳಿಂದ ಗುರುಗಳ ಭಾಷ್ಯ ಪ್ರವಚನವನ್ನು ಆಲಿಸಿ ಆನಂದಿಸಿದರು. ಈ ಪ್ರವಚನವನ್ನು ಮುಗಿಸಿದ ಮೇಲೆ ಶ್ರೀರಾಘವೇಂದ್ರತೀರ್ಥರು ಮಧ್ಯಾಹ್ನದ ಸಮಯದಲ್ಲಿ ಮಾಡಬೇಕಾದ ಸತ್ಕರ್ಮಾನುಷ್ಠಾನಗಳನ್ನು ಮಾಡಲು ಉದ್ಯುಕ್ತರಾದರು. ಅದಕ್ಕಾಗಿ ಗುರುಗಳು ಮೊದಲು ಮಧ್ಯಾಹ್ನಿಕ ಸ್ನಾನ ಮಾಡಲು ಮೆಲ್ಲನೆ ಎದ್ದರು.

**ಅವತಾರಿಕೆ :** ಶ್ರೀರಾಘವೇಂದ್ರಗುರುಸಾರ್ವಭೌಮರು ಮಾಧ್ಯಾಹ್ನಿಕ ಸ್ನಾನವನ್ನು ಮುಗಿಸಿ ದೇವಪೂಜಾ –ಗೃಹಕ್ಕೆ ದಯಮಾಡಿಸಿದುದನ್ನು ಕವಿಗಳು ವರ್ಣಿಸುತ್ತಾರೆ.

**ನಿಷ್ಕುಟವಿಲಸತ್ಪುಷ್ಕರವತ್ಯಾಂ ಪುಷ್ಕಲಕೀರ್ತಿರ್ಮಸ್ಕರಿಧುರ್ಯಃ ।**
**ಸಾಧು ನಿಮಜ್ಜ್ಯ ಸುಧೀಜನಮಾನ್ಯೋ ಮಾಧವಮಂಗಲಗೇಹಮಯಾಸೀತ್ ॥೫೬॥**

**ತಾತ್ಪರ್ಯ :** ಶ್ರೀರಾಘವೇಂದ್ರ ಗುರುವರ್ಯರು ಸಂಪೂರ್ಣ ಕೀರ್ತಿಯಿಂದ ವಿರಾಜಿತರು.

ತಮ್ಮ ಅಸಾಧಾರಣವಾದ ಜ್ಞಾನ ಭಕ್ತಿ ವೈರಾಗ್ಯಾದಿಗಳಿಂದ ಪಂಡಿತಮಣಿಗಳಿಂದಲೂ ಪಂಡಿತಮಂಡಲಿಯಿಂದಲೂ ಮಾನ್ಯರು. ಸನ್ಯಾಸಿಗಳ ಸಮೂಹಕ್ಕೆ ಕಿರೀಟಮಣಿಯಂತೆ (ಮುಕುಟಪ್ರಾಯರಾಗಿ) ಇರತಕ್ಕಂತಹವರು. ಇಂತಹಾ ಮಹಾನುಭಾವರು ಹಿತ್ತಲಿನ ಹೂತೋಟದಲ್ಲಿರುವ ಪುಷ್ಕರಣಿಯಲ್ಲಿ ಚೆನ್ನಾಗಿ ಅವಗಾಹನ ಸ್ನಾನವನ್ನು ಮಾಡಿದರು. ಅನಂತರ ಮಂಗಳಕರವಾದ ಶ್ರೀಮೂಲರಾಮಚಂದ್ರನ ಪೂಜಾಮಂದಿರವನ್ನು ಪ್ರವೇಶ ಮಾಡಿದರು.

**ಅವತಾರಿಕೆ :** ಶ್ರೀರಾಘವೇಂದ್ರಯತಿಶಿರೋಮಣಿಗಳು ಕಲಶಪೂಜೆಯನ್ನು ಮಾಡಿ ಶ್ರೀಮೂಲರಾಮ ಚಂದ್ರದೇವರಿಗೆ ಷೋಡಶೋಪಚಾರ ಪೂಜೆಯನ್ನು ಮಾಡಿದುದನ್ನು ಕವಿಗಳು ಈಗ ವರ್ಣಿಸುತ್ತಾರೆ. (56–58ನೇ ಶ್ಲೋಕಗಳಿಗೆ ಏಕಾನ್ವಯವಾದುದರಿಂದ ಎರಡೂ ಶ್ಲೋಕಗಳಿಗೆ ವ್ಯಾಖ್ಯಾನವನ್ನು ಒಟ್ಟಿಗೆ ನೀಡಲಾಗಿದೆ.)

**ಡಂಭಾಸೋಢಾ ಕಾಮಮಂಭೋರುಹಾದ್ಯೈರಂಭಃಪೂರ್ಣಂ ಕುಂಭಮಾದೌ ಸಮರ್ಚ್ಯ।**
**ಆವಾಹ್ಯಾಂತರ್ಮಾತೃಕಾದೀನಶೇಷಾನ್ ದೇವಾನ್ ದೇವೈಃ ಪೀಠಗೈಃ ಪಾರ್ಶ್ವಗೈಶ್ಚ ॥೫೭॥**

**ಶಾಲಿಗ್ರಾಮಾನಂಬುಜಾಕ್ಷಸ್ಯ ಮೂರ್ತಿಂ ಮಂತ್ರಾಂಭೋಭಿಃ ಸಂಯಮೀಂದ್ರೋಽಭಿಷಿಚ್ಯ।**
**ನವ್ಯೈಃ ಪುಷ್ಪೈರಾತನಿಷ್ಟಾತಿರಮ್ಯೈ ರತ್ನೈರರ್ಘ್ಯೈರ್ ರಾಮಚಂದ್ರಸ್ಯ ಪೂಜಾಮ್ ॥೫೮॥**

**ತಾತ್ಪರ್ಯ :** ತಾನು ಅತ್ಯಂತ ಅಲ್ಪನೆಂದು ತಿಳಿದಿದ್ದರೂ ತಾನು ಅತ್ಯಂತ ಶ್ರೇಷ್ಠನು, ಮಹಾ ಬುದ್ಧಿವಂತನು ಎಂದು ತನ್ನ ಮಹತ್ವವನ್ನು ಪ್ರದರ್ಶಿಸುವುದು ಡಂಭಾಚಾರವೆನಿಸಿಕೊಳ್ಳುತ್ತದೆ. ಶ್ರೀರಾಘವೇಂದ್ರತೀರ್ಥರು ತಾವು ಸ್ವತಃ ಡಂಭರಹಿತರಾಗಿದ್ದುದೇ ಅಲ್ಲದೇ, ಡಂಭವನ್ನು ಪ್ರದರ್ಶಿಸುವ ಜನರನ್ನು ಮೆಚ್ಚುತ್ತಿರಲಿಲ್ಲ. ಪರಮಾತ್ಮನನ್ನು ಸಂಪೂರ್ಣವಾದ ಸರಳ ಸ್ವಭಾವದಿಂದ ಶರಣುಹೊಂದಿ, ಅವನ ಪೂರ್ಣಾನುಗ್ರಹವನ್ನು ಸಂಪಾದಿಸಿದ್ದ ಸನ್ಯಾಸಿ ಶ್ರೇಷ್ಠರಾದ ಶ್ರೀರಾಘವೇಂದ್ರಗುರುಗಳು ಪೂಜಾಗೃಹಕ್ಕೆ ಹೋಗಿ ಮೊದಲು ಜಲಪೂರ್ಣವಾದ ಕುಂಭವನ್ನು ತಾವರೆ ಮಲ್ಲಿಗೆ ಮುಂತಾದ ಹೂವುಗಳಿಂದ ಬಹಳವಾಗಿ–ಯಥೇಚ್ಛವಾಗಿ ಪೂಜಿಸಿದರು. ಆ ಕಳಶದ ಒಳಗೆ ಅಜ–ಆನಂದ–ಇಂದ್ರ ಮುಂತಾದ ಐವತ್ತೊಂದು ವರ್ಣಾಭಿಮಾನಿ ದೇವತೆಗಳನ್ನೂ, ಕೇಶವಾದಿ ಇಪ್ಪತ್ತನಾಲ್ಕು ಮೂರ್ತಿಗಳನ್ನೂ, ಆತ್ಮಾ, ಅಂತರಾತ್ಮಾ, ಪರಮಾತ್ಮಾ, ಜ್ಞಾನಾತ್ಮಾ ಎಂಬ ನಾಲ್ಕು ಮೂರ್ತಿಗಳನ್ನೂ, ವಾಸುದೇವ–ಸಂಕರ್ಷಣ–ಪ್ರದ್ಯುಮ್ನ–ಅನಿರುದ್ಧ ಎಂಬ ಚತುಮೂರ್ತಿಗಳನ್ನೂ, ವಿಶ್ವ–ತೈಜಸ–ಪ್ರಾಜ್ಞ–ತುರೀಯ ಎಂಬ ನಾಲ್ಕು ಮೂರ್ತಿಗಳನ್ನೂ ಮತ್ಸ್ಯ, ಕೂರ್ಮ, ವರಾಹ, ನಾರಸಿಂಹ, ವಾಮನ, ಪರಶುರಾಮ, ರಾಮ, ವೇದವ್ಯಾಸ, ಶ್ರೀಕೃಷ್ಣ, ದತ್ತಾತ್ರೇಯ, ಬುದ್ಧ, ಕಲ್ಕಿ, ಶಿಂಶುಮಾರ, ಎಂಬ ಸಮಸ್ತವಾದ ಕಲಶಾಭಿಮಾನಿಗಳಾದ 100 ದೇವತೆಗಳನ್ನೂ ಆವಾಹಿಸಿದರು. ಪೀಠಾಭಿಮಾನಿ ದೇವತೆಗಳನ್ನೂ ಆವಾಹಿಸಿದರು. ಪಾರ್ಶ್ವದಲ್ಲಿರುವ ಪರಿವಾರ ದೇವತೆಗಳನ್ನು ಆವಾಹಿಸಿದರು. ಅನಂತರ ಶಾಲಿಗ್ರಾಮಗಳಿಗೂ ಕಮಲದಳ ನಯನನಾದ ಶ್ರೀಮೂಲರಾಮಚಂದ್ರ

ದೇವರಿಗೂ ಮಂತ್ರಗಳನ್ನು ಪಠಿಸುತ್ತಾ ಕಲಶ ಜಲದಿಂದ ಅಭಿಷೇಕಿಸಿದರು (ಪ್ರೋಕ್ಷಿಸಿದರು) ಅಭಿಷೇಕಾನಂತರದಲ್ಲಿ ಹೊಸದಾದ ಸುವಾಸನೆಯುಳ್ಳ ಹೂವುಗಳಿಂದ, ತುಳಸಿಗಳಿಂದಲೂ ದೇವರಿಗೆ ಅರ್ಚನೆ ಮಾಡಿದರು. ಅತ್ಯಂತ ಪ್ರಕಾಶಮಾನವಾದ ಮನೋಹರವಾದ ರತ್ನಾಭರಣಗಳಿಂದ ಮೊದಲು ದೇವರನ್ನು ಅಲಂಕರಿಸಿದರು. ಪರಮಾತ್ಮನನ್ನು ಅರ್ಘ್ಯ, ಪಾದ್ಯ, ಆಚಮನ ಮುಂತಾದ ಹದಿನಾರು ಬಗೆಯ ಉಪಚಾರಗಳಿಂದ ಪೂಜಿಸಿ ಶ್ರೀಮನ್ಮೂಲರಘುಪತಿಯ ಪಾದಸೇವೆಯನ್ನು ಮಾಡಿದರು.

**ಅವತಾರಿಕೆ :** ಪೂಜಾನಂತರದಲ್ಲಿ ಶ್ರೀಗುರುರಾಘವೇಂದ್ರರು ಶಂಖೋದಕವನ್ನು ಶಿರಸ್ಸಿನಲ್ಲಿ ಧರಿಸಿ, ತೀರ್ಥಪ್ರಾಶನ ಮಾಡಿದುದನ್ನು ಕವಿಗಳು ವರ್ಣಿಸುತ್ತಾರೆ.

**ವಾಜಿಮೇಧಯಜಿನಾ ವಿಕಲ್ಪಿತಂ ಶಂಖವಾರಿ ಶಿರಸಾ ಸ ಧಾರಯನ್ ।**
**ರಾಜಸೂಯಯಜಿನಾಪಿ ಸಂಮತಂ ವಿಷ್ಣುಪಾದಸಲಿಲಂ ಪಿಬತ್ಯಸೌ ॥೫೯॥**

**ತಾತ್ಪರ್ಯ :** ಶ್ರೀಹರಿಯ ಪೂಜಾನಂತರದಲ್ಲಿ ಶಂಖೋದಕವನ್ನು ತಲೆಗೆ ಪ್ರೋಕ್ಷಿಸಿಕೊಂಡು ದೇವರಿಗೆ ಅಭಿಷೇಕ ಮಾಡಿದ ಶ್ರೀವಿಷ್ಣುಪಾದೋದಕವನ್ನು ಮೂರು ಬಾರಿ ಪ್ರಾಶನ ಮಾಡಬೇಕು (ಕುಡಿಯಬೇಕು). ಇವುಗಳಲ್ಲಿ ಶಂಖತೀರ್ಥದ ಪ್ರೋಕ್ಷಣವು ಅಶ್ವಮೇಧಯಾಗದ ಅವಭೃತಸ್ನಾನಕ್ಕೆ ಸಮವೆಂದೂ, ಶ್ರೀಹರಿಯ ಪಾದೋದಕರೂಪವಾದ ತೀರ್ಥದ ಪಾನವು ರಾಜಸೂಯಯಾಗದ ಅವಭೃತಸ್ನಾನಕ್ಕಿಂತಲೂ ಮಿಗಿಲಾದುದೆಂದೂ ಶಾಸ್ತ್ರಗಳು ಹೇಳುತ್ತವೆ. ಶ್ರೀರಾಘವೇಂದ್ರಸ್ವಾಮಿಗಳು ಇಂತಹಾ ಶಂಖೋದಕವನ್ನು ಪ್ರೋಕ್ಷಣ ಮಾಡಿಕೊಂಡು ಶ್ರೀಹರಿಯ ಪಾದೋದಕ ತೀರ್ಥವನ್ನು ಪಾನ ಮಾಡಿದರು.

**ಅವತಾರಿಕೆ :** ಈಗ ಕವಿಗಳು ಶ್ರೀವಿಷ್ಣುಪಾದೋದಕ ರೂಪವಾದ ತೀರ್ಥದ ಮಹಿಮೆಯನ್ನು ವರ್ಣಿಸುತ್ತಾರೆ.

**ಸ್ವತಃ ಕವೇರಜಾಪಯೋಽನಘಂ ಹಿ ಕಿಂ ಪುನರ್ಹರೇಃ ।**
**ಪದಂ ಸಮಾಶ್ರಿತಂ ಚತುಃಪುಮರ್ಥದಂ ಭವೇದಿತಿ ॥೬೦॥**

**ತಾತ್ಪರ್ಯ :** ಕಾವೇರೀ ನದಿಯ ನೀರು ಸ್ವತಃ ಪವಿತ್ರವಾಗಿರುತ್ತದೆ. ಶ್ರೀಹರಿಯ ಪಾದಗಳಿಗೆ ಆ ಜಲವನ್ನು ಅಭಿಷೇಕ ಮಾಡಿದಾಗ ಆ ಕಾವೇರಿ ಜಲವು ಧರ್ಮ-ಅರ್ಥ-ಕಾಮ-ಮೋಕ್ಷ ಎಂಬ ನಾಲ್ಕು ಪುರುಷಾರ್ಥಗಳನ್ನು ನೀಡುತ್ತದೆ ಎಂದು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲವಷ್ಟೆ? ಪರಮಾತ್ಮನಿಗೆ ಅಭಿಷೇಕ ಮಾಡಿದ ಕಾವೇರಿ ಜಲದ (ತೀರ್ಥದ) ಪಾನವು ಸಕಲಪುರುಷಾರ್ಥವನ್ನೂ ನೀಡುತ್ತದೆ ಎಂದು ಅಭಿಪ್ರಾಯ. ಇಲ್ಲಿ ಅರ್ಥಾಪತ್ತ್ಯಲಂಕಾರವಿದೆ.

**ಅವತಾರಿಕೆ :** ಈಗ ಕವಿಗಳು ಶ್ರೀಗುರು ರಾಘವೇಂದ್ರಸ್ವಾಮಿಗಳು ತೀರ್ಥಪ್ರಾಶನದ ನಂತರದಲ್ಲಿ ಸಾಯಂಕಾಲದವರೆಗೆ ಏನು ಮಾಡಿದರೆಂದು ವರ್ಣಿಸುತ್ತಾರೆ.

ಪಶ್ಚಾತ್ ಕೃತ್ವಾಹರಿಪದನತಿಂ ಸಂಯಮೀಂದ್ರೋऽಥ ಭುಕ್ತ್ವಾ
ಪುಣ್ಯಂ ಭೈಕ್ಷಂ ತದನು ರಚಯನ್ ತರ್ಕಶಬ್ದಾದಿಶಾಸ್ತ್ರೈಃ ।
ವಿದ್ವದ್ಭೂಪೈರ್ವಿವಿಧನಗರಾತ್ ಪ್ರಾಪ್ತವದ್ಭಿರ್ವಿನೋದಂ
ಧ್ಯಾಯನ್ವಿಷ್ಣುಂ ಸಮಯಮನಯತ್ಸೋऽಯಮಾಸಾಯಮೇವಮ್ ॥೬೧॥

**ತಾತ್ಪರ್ಯ** : ಯತಿಕುಲ ಚಕ್ರವರ್ತಿಗಳಾದ ಶ್ರೀರಾಘವೇಂದ್ರತೀರ್ಥರು ತೀರ್ಥಪ್ರಾಶನ ಮಾಡಿದ ಅನಂತರದಲ್ಲಿ ಶ್ರೀಹರಿಯ ಪಾದಕಮಲಗಳಿಗೆ ನಮಿಸಿದರು. ಅನಂತರ ಯತಿಗಳ ಆಹಾರಕ್ಕಾಗಿ ಸಿದ್ಧಪಡಿಸಿರುವ ಶ್ರೀಹರಿಗೆ ನಿವೇದಿತವಾದ ಭೋಜ್ಯ ವಸ್ತುಗಳ ಸಮೂಹವನ್ನು (ಭಿಕ್ಷೆಯನ್ನು) ಸ್ವೀಕರಿಸಿದರು. ಪವಿತ್ರವಾದ ಯತಿಗಳ ಆಹಾರ ವಸ್ತುವನ್ನು ಭಿಕ್ಷೆ ಎಂದು ಹೇಳುತ್ತಾರೆ. ಶ್ರೀಗುರು ರಾಘವೇಂದ್ರರು ಅಂತಹಾ ಭಿಕ್ಷೆಯನ್ನು ಸ್ವೀಕರಿಸಿದರು. ಅನೇಕ ನಗರಗಳಿಂದ ಬಂದಿದ್ದ ಪ್ರಸಿದ್ಧ ಪಂಡಿತರುಗಳೊಡನೆ ತರ್ಕಶಾಸ್ತ್ರ, ಮೀಮಾಂಸಾಶಾಸ್ತ್ರ ಮುಂತಾದ ಶಾಸ್ತ್ರಗಳಲ್ಲಿ ವಿನೋದದ ಚರ್ಚೆಯನ್ನು ನಡೆಸಿದರು. ಈ ಕಾರ್ಯಗಳನ್ನೆಲ್ಲಾ ಮಾಡುವಾಗ ಗುರು ಶ್ರೀಹರಿಯ ಧ್ಯಾನವನ್ನು ಮಾಡುತ್ತಿದ್ದರು. ಹೀಗೆ ಶ್ರೀಗುರುರಾಜರು ಹಗಲನ್ನು ಕಳೆದರು.

**ಅವತಾರಿಕೆ** : ಸರ್ಗದ ಅಂತ್ಯದಲ್ಲಿ ಕವಿವರ್ಯರಾದ ಶ್ರೀನಾರಾಯಣಾಚಾರ್ಯರು ತಮ್ಮ ಇತಿ ವೃತ್ತವನ್ನು ತಿಳಿಸುತ್ತಾ ಈ ಒಂಭತ್ತನೆಯ ಸರ್ಗವನ್ನು ಮುಗಿಸುತ್ತಾರೆ.

ಶ್ರೀಮತ್ಕಶ್ಯಪವಂಶವಾರ್ಧಿಶಶಿನಃ ಷಡ್ದರ್ಶಿನೀವಲ್ಲಭಃ –
ಶ್ರೀಲಕ್ಷ್ಮೀನರಸಿಂಹವಿತ್ತವಿದುಷಃ ಶ್ರೀವೇಂಕಟಾಂಬಾಮಣೌ ।
ಜಾತೇನಾರ್ಯದಯಾಸುಧಾಮಯಗಿರಾ ನಾರಾಯಣೇನೋದಿತೇ
ಕಾವ್ಯೇ ಚಾರುಣಿ ರಾಘವೇಂದ್ರವಿಜಯೇ ಸರ್ಗೋऽಭವನ್ನಾವಮಃ ॥೬೨॥

**ತಾತ್ಪರ್ಯ** : ಕಶ್ಯಪಮುನಿಗಳ ವಂಶವೆಂಬ ಸಾಗರದಲ್ಲಿ ಚಂದ್ರನಂತಿರುವ ಲಕ್ಷ್ಮೀನರಸಿಂಹಾಚಾರ್ಯರೆಂಬ ಪ್ರಸಿದ್ಧರಾದ ಪಂಡಿತರಿದ್ದರು. ಅವರು ನ್ಯಾಯವೈಶೇಷಿಕ, ಸಾಂಖ್ಯ, ಯೋಗ, ಪೂರ್ವಮೀಮಾಂಸಾ, ಉತ್ತರ ಮೀಮಾಂಸಾ ಎಂಬ ಆರು ದರ್ಶನಗಳಲ್ಲಿಯೂ ಶ್ರೇಷ್ಠ ಪಂಡಿತರಾದುದರಿಂದ ಅವರಿಗೆ ಷಡ್ದರ್ಶಿನೀವಲ್ಲಭ ಎಂಬ ಹೆಸರು. ಅವರ ಧರ್ಮಪತ್ನಿಯಾದ ಶ್ರೀಮತಿ ವೇಂಕಟಾಂಬಾ ಎಂಬುವವರ ಗರ್ಭದಿಂದ ಉತ್ಪನ್ನರಾದ, ಪೂಜ್ಯರಾದ ತಂದೆಯವರ ದಯೆಯಿಂದ ಉಂಟಾದ ಅಮೃತಮಯವಾದ ಮಾತುಗಳುಳ್ಳ ನಾರಾಯಣಾಚಾರ್ಯರೆಂಬ ಕವಿಯಿಂದ ರಚಿತವಾದ ಮನೋಹರವಾದ ಶ್ರೀರಾಘವೇಂದ್ರವಿಜಯ ಎಂಬ ಕಾವ್ಯದಲ್ಲಿ ಒಂಭತ್ತನೆಯ ಸರ್ಗವು ಸಮಾಪ್ತವಾಯಿತು.

# ಒಂಬತ್ತನೆಯ ಸರ್ಗದ ಕಥಾಸಾರ

**ಶ್ರೀರಾಘವೇಂದ್ರಗುರುರಾಜರ ದಿನಚರ್ಯೆ ವರ್ಣನೆ —** ಶ್ರೀರಾಘವೇಂದ್ರ ಗುರುಸಾರ್ವಭೌಮರು ನಿರ್ಮಮರು, ನಿರಹಂಕಾರರು. ಅವರು ತನ್ನನ್ನು ಯಾರೂ ಹೊಗಳಬೇಕೆಂದು ಅಪೇಕ್ಷಿಸುವುದಿಲ್ಲ. ಕೇವಲ ಹರಿ-ವಾಯುಗಳ ಕೃಪೆಯಿಂದ ಅವರಿಗೆ ವೇದಾಂತಸಾಮ್ರಾಜ್ಯ ಚಕ್ರವರ್ತಿ ಪದವಿಯಲ್ಲಿ ಪಟ್ಟಾಭಿಷೇಕವಾಯಿತು. ಶ್ರೀಮೂಲರಾಮಚಂದ್ರದೇವರ ಮತ್ತು ಶ್ರೀಮದಾನಂದತೀರ್ಥಭಗವತ್ಪಾದರ ಪ್ರೇರಣೆಯಿಂದ ಶ್ರೀಸುಧೀಂದ್ರ-ತೀರ್ಥರು ಅವರಿಗೆ ಸನ್ಯಾಸವಿತ್ತರು. ವಿದ್ಯಾಲಕ್ಷ್ಮಿಯು ಅವರು ಸನ್ಯಾಸವನ್ನು ಸ್ವೀಕರಿಸುವಂತೆ ಪ್ರೇರಣೆಯನ್ನು ಮಾಡಿದಳು. ಹೀಗೆ ಅವರು ವೇದಾಂತ ಸಾಮ್ರಾಜ್ಯವನ್ನು ಆಳುತ್ತಿದ್ದಾಗ ಅವರಿಗೆ ಅಪೇಕ್ಷೆ ಇಲ್ಲದಿದ್ದರೂ ಅನೇಕ ಬಿರುದು ಬಾವಲಿಗಳು ಬಂದವು. ಆದರೆ ಅವರು ಅದೆಲ್ಲವನ್ನೂ ತನ್ನ ಹೃದಯದಲ್ಲಿ ಅಂತರ್ಗತನಾದ ಮುಖ್ಯ ಪ್ರಾಣನಲ್ಲಿರುವ ಶ್ರೀಮೂಲರಾಮಚಂದ್ರನ ಬಿರುದು ಬಾವಲಿಗಳಿವು ಎಂದು ಭಾವಿಸಿ ಅವೆಲ್ಲವನ್ನೂ ಅಂಗೀ-ಕರಿಸಿದರು. ಅವರಿಗೆ ರಾಜಯೋಗ್ಯವಾದ ವೈಭವಗಳು, ಛತ್ರಚಾಮರಾದಿ ಚಿಹ್ನೆಗಳೂ ಲಭಿಸಿದವು. ಅವೆಲ್ಲವನ್ನೂ ಗುರ್ವಂತರ್ಗತ ಹರಿಗೆ ಅರ್ಪಿಸಿ ಅವರು ಅನುಭವಿಸಿದರು. ಮಧುಮಥನನಾದ ನಾರಾಯಣನ ಪಾದ ಕಮಲಗಳ ಸೇವಾ ವಿಷಯದಲ್ಲಿ ಅವರು ಯಾವಾಗಲು ಜಾಗರೂಕರಾಗಿಯೇ ಇರುತ್ತಿದ್ದರು. ಸ್ವಲ್ಪವೂ ಆಲಸ್ಯ ಮಾಡುತ್ತಿರಲಿಲ್ಲ. ನಿರಂತರದಲ್ಲಿ ಗ್ರಂಥಾವಲೋಕನ ಪಾಠ ಪ್ರವಚನಗಳನ್ನು ಮಾಡಿ ಜ್ಞಾನಿವರೇಣ್ಯರಾಗಿದ್ದರು. ಅವರು ಪರಮಾತ್ಮನ ಸೇವೆಯನ್ನು ಮಾಡಲು ಬೇರೆ ಯಾರೂ ಅವರನ್ನು ಪ್ರೇರಿಸಬೇಕಾಗಿಲ್ಲ, ಎಚ್ಚರಿಸಬೇಕಾಗಿಲ್ಲ. ಆದರೂ ವಂದಿಮಾಗಧರು ತಮ್ಮ ಕರ್ತವ್ಯವೆಂಬುದಾಗಿ ತಿಳಿದು ಪ್ರಭಾತಕಾಲದಲ್ಲಿ ಹುಲಿಯ ಚರ್ಮದ ಮೇಲೆ ಯೋಗ-ನಿದ್ರೆಯನ್ನು ಮಾಡುತ್ತಿದ್ದ ಶ್ರೀರಾಘವೇಂದ್ರಗುರುಸಾರ್ವಭೌಮರನ್ನು ಕಾವ್ಯ ಭಂಗಿಯಿಂದ ಹಾಡಿ ಹೊಗಳಿ ಎಚ್ಚರಿಸಿದರು.

"ಎಲೈ ಯತಿಶ್ರೇಷ್ಠರಾದ ಶ್ರೀರಾಘವೇಂದ್ರಗುರುಸಾರ್ವಭೌಮರೇ ! ಏಳಿರಿ, ನಿಮಗೂ ಸಮಸ್ತಲೋಕಕ್ಕೂ ಮಂಗಳಕರವಾದ ಕಾರ್ಯಗಳನ್ನು ಮಾಡಿರಿ, ಅರಳಿದ ತಾವರೆ ಹೂವಿನ ಬಣ್ಣದ ದಯಾಪೂರ್ಣವಾದ ಕಡೆಗಣ್ಣಿನ ನೋಟಗಳಿಂದ ಭಕ್ತಜನತೆಯನ್ನು ಅನುಗ್ರಹಿಸಿರಿ. ಈಗ ಪ್ರಭಾತಸಮಯವಾಗಿದೆ. ಈ ಪ್ರಭಾತಕಾಲದ ವೈಭವವು ನೋಡಲು ಅತ್ಯಂತ ಸುಂದರವಾಗಿದೆ. ಬ್ರಾಹ್ಮಣರು ಪಠಿಸುತ್ತಿರುವ ವೇದಗಳ ಧ್ವನಿಗಳು ಎಲ್ಲಾ ದಿಕ್ಕುಗಳಲ್ಲಿಯೂ ಪ್ರತಿಧ್ವನಿಸುತ್ತಿವೆ. ಪೂರ್ವದಿಕ್ಕೆಂಬ ಪತಿವ್ರತೆಯಾದ ವನಿತೆಯು ರಾತ್ರಿಯೆಲ್ಲಾ ಅಂಧಕಾರ ಗೃಹದಲ್ಲಿದ್ದಂತೆ ಇದ್ದಳು. ತಾನು ಎಲ್ಲಿದ್ದೇನೆ ? ಎಲ್ಲಿದ್ದೇನು ಎಂಬುದನ್ನು ತಿಳಿಯದೆ ಹಲುಬುತ್ತಿದ್ದ ಅವಳು ಅಮರಾವತಿಯಲ್ಲಿ ಬೃಹಸ್ಪತ್ಯಾ-ಚಾರ್ಯರು ಮಾಡುವ ವೇದಪಾರಾಯಣ ಧ್ವನಿಯನ್ನು ಕೇಳಿ 'ಅಹಾ ! ನಾನೀಗ ದೇವೇಂದ್ರನ ಅಮರಾವತೀ ನಗರಿಯಲ್ಲಿ ನನ್ನ ಸ್ಥಾನದಲ್ಲಿಯೇ ವಾಸಿಸುತ್ತಿದ್ದೇನೆ'ಎಂದು ತಿಳಿದಾಗ ಅವಳ ಮುಖವು ಆನಂದದಿಂದ ಅರಳುತ್ತದೆ. ಇನ್ನು ಕೆಲವೇ ನಿಮಿಷಗಳಲ್ಲಿ ನಿನ್ನ ಸ್ವಾಮಿಯಾದ ಸೂರ್ಯನೊಡನೆ ನನಗೆ ಸಮಾಗಮವಾಗುತ್ತದೆ" ಎಂದು ಆಲೋಚಿಸಿ ಪೂರ್ವದಿಕ್ಕಿನ ನಗರಿಯೆಂಬ ಕಾಂತೆಯು ಆಕಾಶವನ್ನು ಪ್ರಾತಃಕಾಲದಲ್ಲಿ ಹರಡಿದ ಪಾಂಡುವರ್ಣವೆಂಬ (ಬಿಳಿಯ) ಮೇಲ್ಹೊಟ್ಟಿನಿಂದ ಅಲಂಕರಿಸುತ್ತಿದ್ದಾಳೆ. ಪ್ರಭಾತಕಾಲಸಿಂಹವು ಅಂಧಕಾರವೆಂಬ ಆನೆಯ ಹಿಂಡನ್ನು ತಲೆ ಹೊಡದು ಸೀಳಿಕೊಂಡಾಗ, ಆನೆಗಳ ಕುಂಭಸ್ಥಳದಲ್ಲಿರುವ ಮುತ್ತುಗಳಂತಿರುವ ನಕ್ಷತ್ರಗಳು ಪ್ರಭಾತಕಾಲದ ಕೆಂಪು ಬಣ್ಣವೆಂಬ ರಕ್ತದಿಂದ ಕೂಡಿಕೊಂಡು ಪೂರ್ವ ದಿಕ್ಕಿನಲ್ಲಿ ಶೋಭಿಸುತ್ತಿವೆ. ಆಕಾಶವೆಂಬ ರಾಮನನ್ನು ಸೋಲಿಸಲು

ಇಂದ್ರಜಿತನು ಪ್ರಯೋಗಿಸಿದ ಅಂಧಕಾರದಂತಿರುವ ನಾಗಬಾಣಗಳ ಸಮೂಹವನ್ನು ನಾಶಮಾಡಲು ಉದಯರಾಗವೆಂಬ ಗರುಡನು ಆವಿರ್ಭವಿಸಿದ್ದಾನೆ. ಆಕಾಶವೆಂಬ ಜೇನು ಹುಟ್ಟಿನಲ್ಲಿರುವ ಕತ್ತಲೆಯೆಂಬ ಜೇನುನೊಣಗಳನ್ನು ಓಡಿಸಲು ಪ್ರಭಾತದ ಕೆಂಪು ಬಣ್ಣವೆಂಬ ಅಗ್ನಿಜ್ವಾಲೆಯನ್ನು ಪ್ರಭಾತಸಮಯವು ಉಂಟುಮಾಡಿತು. ಆಕಾಶವೆಂಬ ಅಗಸ್ತ್ಯನು ಅಂಧಕಾರವೆಂಬ ಸಮುದ್ರವನ್ನು ಕುಡಿದು ಬರಿದು ಮಾಡಿದಾಗ ಉಷಃಕಾಲದ ಕೆಂಪು ಬಣ್ಣವೆಂಬ ಪದ್ಮರಾಗರತ್ನಗಳ ಸಮೂಹವು ವಿಜೃಂಭಿಸುತ್ತಿದೆ. ಆಕಾಶವೆಂಬ ಸೀರೆಯು ಅಂಧಕಾರ ಸಂಬಂಧದಿಂದ ಕಪ್ಪಾಗಿದ್ದು ಆ ಆಕಾಶವೆಂಬ ಸೀರೆಯ ಪೂರ್ವದಿಕ್ಕಿನಲ್ಲಿರುವ ಭಾಗವು ಪ್ರಭಾತಕಾಲದ ಕೆಂಪು ಬಣ್ಣವೆಂಬ ಭಂಗಾರದ ಬಣ್ಣದ ಅಂಚಿನಿಂದ ಶೋಭಿಸುತ್ತಿದೆ. ಪ್ರಭಾತಕಾಲವೆಂಬ ಶ್ರೇಷ್ಠನಾದ ಅಂಧಕಾರವೆಂಬ ಎದುರಾಳಿಯಾದ ಜಟ್ಟಿಯನ್ನು ಹೊಡೆಯುವುದಕ್ಕೋಸ್ಕರ ಪ್ರಭಾತಕಾಲದ ಕೆಂಪು ಬಣ್ಣವೆಂಬ ಧೂಳಿಯನ್ನು ಎರಚಿ ಸೂರ್ಯಬಿಂಬವೆಂಬ ಮುಷ್ಟಿಯನ್ನು ಮೇಲಕ್ಕೆತ್ತಿ ಮುಂದುಗಡೆ ತೋರಿಸುತ್ತಾನೆ. ಪೂರ್ವದಿಕ್ಕೆಂಬ ನಾರಿಯನ್ನು ವಿವಾಹವಾಗಲು ಬಯಸುವ ಪ್ರಭಾತಕುಮಾರನೆಂಬ ವರನು ಸೂರ್ಯಬಿಂಬವೆಂಬ ಮಾಂಗಲ್ಯಮಣಿ (ತಾಳಿ)ಯಿಂದ ಕೂಡಿದ ಸಂಜೆಯ ಕೆಂಪು ಬಣ್ಣವೆಂಬ ಮಾಂಗಲ್ಯಸೂತ್ರವನ್ನು ಪೂರ್ವದಿಕ್ಕೆಂಬ ಕನ್ಯೆಯ ಕಂಠದಲ್ಲಿ ಕಟ್ಟುತ್ತಿದ್ದಾನೆ. ಸೂರ್ಯನು ಛಾಯೆಯೆಂಬ ತನ್ನ ಮತ್ತೊಬ್ಬಳು ಪತ್ನಿಯೊಡನೆ (ನೆರಳಿನಿಂದ ಕೂಡಿಕೊಂಡು) ತನ್ನ ಹೆಂಡತಿ, ತನ್ನ ಮತ್ತು ಛಾಯಾಚಿತ್ರಸಮೇತವಾಗಿ ಬರುತ್ತಿರುವಾಗ ಸವತಿಯ ಮೇಲಿನ ಹೊಟ್ಟೆಕಿಚ್ಚಿನಿಂದ ಪ್ರಾಚೀ ದಿಗಂಗನೆಯು ಅರಗಿನ ರಸದಿಂದ ಕೆಂಪಾದ ಕಾಲಿನಿಂದ ಒದ್ದಾಗ ಆ ಕೆಂಪು ಬಣ್ಣವು ಸೂರ್ಯನ ಮೈಗೆ ಅಂಟಿಕೊಂಡು ಸೂರ್ಯನು ಕೆಂಪಾದನೋ ಎಂಬಂತೆ ಕೆಂಪಾಗಿರುವ ಸೂರ್ಯನು ಉದಯಿಸಿದನು. ಹಗಲು ಎಂಬ ಪುರುಷನು ಪ್ರಾತಃಕಾಲದಲ್ಲಿ ಸಮುದ್ರದಲ್ಲಿ ಸ್ನಾನ ಮಾಡಿ ಪೂರ್ವದಿಕ್ಕೆಂಬ ತನ್ನ ಹಣೆಯಲ್ಲಿ ಸೂರ್ಯಮಂಡಲವೆಂಬ ಕೆಂಪಾದ ಹಣೆಯ ಬೊಟ್ಟನ್ನು ಇಟ್ಟುಕೊಂಡನು. ದಿನಲಕ್ಷ್ಮಿಯೆಂಬ ನಟಿಯು ಅಂಧಕಾರವೆಂಬ ಪರದೆಯನ್ನು ಸರಿಸಿ ಹಕ್ಕಿಗಳ ಚಿಲಿಪಿಲಿ ಧ್ವನಿಯೆಂಬ ಕಾಲ್ಗೆಜ್ಜೆಯ ಧ್ವನಿಯಿಂದ ಕೂಡಿದವಳಾಗಿ ಪ್ರಾತಃಕಾಲದ ಪ್ರಭೆಯೆಂಬ ನಾನಾ ಪ್ರಕಾಶದಿಂದ ಕೂಡಿದ ಆಕಾಶವೆಂಬ ರಂಗಸ್ಥಳವನ್ನು ನರ್ತನಕ್ಕಾಗಿ ಪ್ರವೇಶಿಸಿದಳು. ನಮ್ಮ ರಾಜನಾದ ಸೂರ್ಯನ ಅಂಧಕಾರವೆಂಬ ಶತ್ರುರಾಜನನ್ನು ಜಯಿಸಿದನು ಎಂಬ ಸಂತೋಷದಿಂದಲೋ ಎಂಬಂತೆ ಪೂರ್ವದಿಕ್ಕಿನಲ್ಲಿ ನಾನಾ ವಿಧವಾದ ಪಕ್ಷಿಗಳು ತಮ್ಮ ರಾಜನ ಜಯಘೋಷವನ್ನು ಮಾಡುತ್ತಾ ಬಿರುದಾವಲಿಯನ್ನು ಪಠಿಸುತ್ತವೆಯೋ ಎಂಬಂತೆ ಕಾಣಿಸುತ್ತಿದೆ. ವಿಯೋಗಿಗಳ ಹೃದಯವನ್ನು ಅಪಹರಿಸಿ ಅವರಿಗೆ ದುಃಖವನ್ನುಂಟು ಮಾಡುತ್ತಿದ್ದ ಚಂದ್ರನು ರಾಜನಂತಿರುವ ಸೂರ್ಯನ ಸಮಾಗಮದಿಂದ ಕಳ್ಳನು ಓಡಿ ಹೋಗುವಂತೆ ಓಡಿ ಹೋದಾಗ, ಇನ್ನು ಕಳ್ಳನ ಹೆದರಿಕೆ ಇಲ್ಲವೆಂದು ಸಮಾಧಾನಪಟ್ಟ ಪದ್ಮಿನಿಯ (ತಾವರೆಗಳ ರಾಶಿಯು)ಅರಳಿದ ಕಮಲವೆಂಬ ಕಣ್ಣನ್ನು ತೆರೆದು ಸುತ್ತಲೂ ನೋಡಲಾರಂಭಿಸಿದ್ದಾಳೆ. ರಾತ್ರಿ ಅಗಲಿದ ಚಕ್ರವಾಕ ಪಕ್ಷಿಗಳ ಜೋಡಿಯನ್ನು ಸುಂದರವಾದ ನಿರ್ಮಲ ಮಂದಹಾಸದಿಂದ ಕೂಡಿದ ಪದ್ಮಿನಿಯು ಸೇರಿಸುತ್ತಾಳೆ. ದ್ವಿಜರೆಂಬ ಹೆಸರುಳ್ಳ ಬ್ರಾಹ್ಮಣರಿಗೆ ಅಧಿಪತಿಗಳಾದುದರಿಂದ ದ್ವಿಜರಾಜ ಎಂಬ ಹೆಸರಿಗೆ ನ್ಯಾಯವಾಗಿ ಪಾತ್ರರಾದ ನೀವು ನಿದ್ರಿಸುತ್ತಿದ್ದಾಗ ದ್ವಿಜ ಎಂಬ ಹೆಸರಿಗೆ ನಕ್ಷತ್ರಗಳಿಗೆ ಅಧಿಪತಿಯಾದುದರಿಂದ ದ್ವಿಜರಾಜನೆಂಬ ಹೆಸರುಳ್ಳ ಚಂದ್ರನು ನಾನೇ ದ್ವಿಜರಾಜನೆಂದು ಜಂಬ ಕೊಚ್ಚಿಕೊಳ್ಳುತ್ತಾ ರಾತ್ರಿಯಲ್ಲೆಲ್ಲಾ ಸ್ವೇಚ್ಛೆಯಿಂದ ಓಡಾಡಿದನು. ಈಗ ದ್ವಿಜರಾಜರಾದ ನೀವು ಎದ್ದುದನ್ನು ನೋಡಿ ಭಯ ಲಜ್ಜೆಗಳಿಂದ ಎಲ್ಲೋ ಪಲಾಯನ ಮಾಡಿದ್ದಾನೆ. ಇನ್ನೂ ಇಂತಹ ವಂದಿಮಾಗಧರ ಮಧುರವಚನಗಳಿಂದ ಶ್ರೀರಾಘವೇಂದ್ರತೀರ್ಥಗುರುಸಾರ್ವಭೌಮರು ಎಚ್ಚರ ಹೊಂದಿದರು. ವ್ಯಾಘ್ರಚರ್ಮವೆಂಬ ಶಯನದಿಂದ ಮೇಲೆದ್ದು ಕುಳಿತರು.

**ಶ್ರೀ ರಾಘವೇಂದ್ರತೀರ್ಥಗುರುಸಾರ್ವಭೌಮರ ಪ್ರಬೋಧ ಮತ್ತು ನಿತ್ಯಾಹ್ನಿಕಗಳ ವರ್ಣನೆ —** ಶ್ರೀಗುರುವರ್ಯರು ಎದ್ದು ಯೋಗ್ಯ ಯೋಗಾಸನದಲ್ಲಿ ಕುಳಿತಾಗ ಹತ್ತೊಂಭತ್ತು ಮುಖವುಳ್ಳ ವಿಶ್ವನಾಮಕ

ಪರಮಾತ್ಮನು ಗುರುವರ್ಯರು ಬಲಗಣ್ಣಿನಲ್ಲಿ ಜಾಗೃತನಾಗಿ ಜಗದ್ ವ್ಯಾಪಾರವನ್ನು ಮಾಡಿಸಲು ಪ್ರಾರಂಭ ಮಾಡಿದನು. ಶಯನದಿಂದ ಮೇಲೆದ್ದು ಗುರುವರ್ಯರು ಮೊದಲು ಶ್ರೀಹರಿಯನ್ನು ಅನಂತರ ತನಗಿಂತ ಉತ್ತಮರಾದ ಗುರುಗಳನ್ನೂ ಸ್ತುತಿಸಿ ನಮಿಸಿ ಅವರಿಂದ ಆಶೀರ್ವಾದಗಳನ್ನು ಸ್ವೀಕರಿಸಿದರು. ಅವರು ಶಿಷ್ಯರು ಮತ್ತು ಭಕ್ತರು ಸಮರ್ಪಿಸಿದ ವಸ್ತುಗಳನ್ನು ಸ್ವೀಕರಿಸಿದರು. ತುಲಸೀವನವಿದ್ದಲ್ಲಿಗೆ ಹೋಗಿ ಅಲ್ಲಿ ಸನ್ನಿಹಿತಳಾದ ಇಂದಿರೆಯನ್ನೂ, ಮೇನಾದಲ್ಲಿ ಕುಳಿತು ಭಾಗವತದಲ್ಲಿರುವ ಗಜೇಂದ್ರಮೋಕ್ಷಾಧ್ಯಾಯವನ್ನು ಅವರು ನಿಧಾನವಾಗಿ ಪಠಿಸುತ್ತಾ ಇದ್ದರು. ಅವರು ಕಾವೇರಿಯ ಬಳಿಗೆ ಬಂದರು. ಆ ಕಾವೇರಿಯಾದರೋ ತನ್ನ ದಡದಲ್ಲಿರುವ ಮರಳಲ್ಲಿರುವ ಸುಮ(ಹೂವು)ಗಳಿಗೆ ತನ್ನ ಜಲಸ್ಪರ್ಶ ಮಾತ್ರದಿಂದ ಸುಮನಸ್ ಎಂಬ ಹೆಸರನ್ನು ಅನ್ವರ್ಥವನ್ನಾಗಿ ಮಾಡಿ ಒಳ್ಳೆಯ ಮನಸ್ಸುಳ್ಳವರು ಎಂಬ ಅರ್ಥವುಳ್ಳ ಸುಮನಸರನ್ನಾಗಿಯೇ (ದೇವತೆಗಳನ್ನಾಗಿ, ಒಳ್ಳೆಯ ಜ್ಞಾನಿಗಳನ್ನಾಗಿ) ಮಾಡುತ್ತಿದ್ದಳು. ಇತರ ಸುಮಗಳು ಕಾವೇರಿಯ ಜಲಸ್ಪರ್ಶವನ್ನು ಹೊಂದದಿದ್ದರೂ ಈ ಸುಮಗಳ ಜಾತಿಯವುಗಳಾದುದರಿಂದ ಅವುಗಳಿಗೂ ಕಾವೇರಿಯು ಸುಮನಸ್ ಜಾತಿ (ಹೂವಿನಜಾತಿವುಳ್ಳವುಗಳು) ಎಂಬ ಖ್ಯಾತಿಯನ್ನು ಕೊಡುತ್ತಿದ್ದಳು. ಕಾವೇರಿಯ ಅಲೆಗಳು, ಹವಳದ ರಾಶಿಯಂತೆ ಚಿಗುರೆಲೆಯ ಗುಂಪಿನಂತೆ ಶೋಭಿಸುತ್ತಿದ್ದವು. ವಸಂತಕಾಲದಲ್ಲಿ ತನ್ನ ವಿವಾಹ ಸಮಯದಲ್ಲಿ ಆರತಿಗಾಗಿ ಹಚ್ಚಿದ ದೀಪಗಳಂತಿರುವ ತೀರ ವೃಕ್ಷದಲ್ಲಿ ಅರಳಿರುವ ಚಿನ್ನದ ಬಣ್ಣದ ಹೂವುಗಳಿಂದ ಕಾವೇರಿಯು ಪ್ರಕಾಶಿಸುತ್ತಿದ್ದಳು. ತನ್ನ ಜಲರೂಪದಲ್ಲಿರುವ ಸಹ್ಯಪರ್ವತದ ತಾವರೆಗಳ ಮಕರಂದರಸದ ಧಾರೆಯಿಂದ ಮೋಹಿತನಾಗಿ ಕಾವೇರೀಹೃದಯದಲ್ಲಿ ಮಲಗಿರುವ ಶ್ರೀರಂಗನೆಂಬ ಭೃಂಗನ ವಿಹಾರ ಮಂದಿರಳಾದ ಇಂತಹ ಕಾವೇರಿಯನ್ನು ಶ್ರೀಗುರುಸಾರ್ವಭೌಮರು ತಲುಪಿದರು. ಅವರು ಕಾವೇರೀತೀರದಲ್ಲಿ ವಾಹನದಿಂದ ಇಳಿದು ಮೃತ್ತಿಕಾಸಹಿತವಾದ ಜಲದಿಂದ ಎರಡು ಕೈಗಳನ್ನೂ, ಎರಡು ಕಾಲುಗಳನ್ನು ಶುಚಿಗೊಳಿಸಿ ತೊಳೆದರು. ಅನಂತರ ದಂತಶೋಧನ ಮಾಡಿದರು. ಆಚಮನ ಮಾಡಿದರು. ಸಂಕಲ್ಪ ಮಾಡಿದರು. ಶಾಸ್ತ್ರೋಕ್ತರೀತಿಯಿಂದ ಅಷ್ಟಾಕ್ಷರ ಮಂತ್ರ, ದ್ವಾದಶಾಕ್ಷರ ಮಂತ್ರ, ಷಡಕ್ಷರ ಮಂತ್ರಗಳನ್ನು ಪ್ರತ್ಯೇಕವಾಗಿ ಮೂರು ಬಾರಿ ಪಠಿಸಿ ಅವಗಾಹನ ಸ್ನಾನ ಮಾಡಿದರು. ಸ್ನಾನಕಾಲದಲ್ಲಿ ಜಪಿಸಬೇಕಾದ ಮಂತ್ರಗಳನ್ನು ಜಪಿಸಿ ಅಭಿಮಂತ್ರಿತವಾದ ಜಲದಿಂದ ತನ್ನ ಶಿರಸ್ಸನ್ನು ಪ್ರೋಕ್ಷಿಸಿಕೊಂಡರು. ಪುನಃ ಮೃತ್ತಿಕೆ ಹಚ್ಚಿಕೊಂಡು ಶ್ವಾಸಬಂಧನ ಮಾಡಿಕೊಂಡು ಮೂರು ಬಾರಿ ಅಘಮರ್ಷಣ ಸೂಕ್ತವನ್ನು ಜಪಿಸಿ ಸ್ನಾನ ಮಾಡಿದರು. ಓಂಕಾರವನ್ನು ಉಚ್ಚರಿಸುತ್ತಾ ನೀರಿನಿಂದ ಮೇಲೆದ್ದು ತನ್ನಲ್ಲಿ ಸನ್ನಿಹಿತನಾದ ಪರಮಾತ್ಮನನ್ನು ಪುರುಷಸೂಕ್ತದಿಂದ ಅಭಿಷೇಕಿಸಿದರು. ಅನಂತರ ಶಾಲಿಗ್ರಾಮತೀರ್ಥವನ್ನು ಸ್ವೀಕರಿಸಿ ಆ ದೇವತೆಗಳ ಮಂತ್ರಗಳಿಂದ ಆಯಾ ದೇವತೆಗಳಿಗೆ ತರ್ಪಣಕೊಟ್ಟರು. ಕೌಪೀನವನ್ನು ಧರಿಸಿ ಅದರ ಮೇಲೆ ಕಾವಿಯ ಬಟ್ಟೆಯನ್ನುಟ್ಟು, ಮೈಮೇಲೆ ಕಾವಿ ಬಣ್ಣದ ಶಾಟಿಯನ್ನು ಹೊದ್ದು-ಕೊಂಡರು. ಹೀಗೆ ಶ್ರೇಷ್ಠವಾದ ವೈಭವವುಳ್ಳ ಗುರುಗಳು ಅರ್ಘ್ಯಪ್ರದಾನವನ್ನು ಮುಗಿಸಿ ಬಹಳ ಭಕ್ತಿಯಿಂದ ಗಾಯತ್ರಿಯನ್ನು ಜಪಿಸಿದರು. ಅನಂತರ ಮಂತ್ರರತ್ನವಾದ ಪ್ರಣವವನ್ನು ಮೌನದಿಂದ ಜಪಿಸಿದರು. ಅನಂತರ ಅವರು ಕಾವೇರೀ ತೀರದ ಉಪವನಕ್ಕೆ ಬಂದರು. ಅಲ್ಲಿ ಶ್ರೀಮಧ್ವಾಚಾರ್ಯರು ಪೂಜಿಸಿದ ವ್ಯಾಸಮುಷ್ಟಿಯಲ್ಲಿ ಶ್ರೀವೇದವ್ಯಾಸರ ಪೂಜೆಯನ್ನು ಉತ್ಸುಕತೆಯಿಂದಲೂ ಆದರದಿಂದಲೂ ಮಾಡುತ್ತಾ ಇದ್ದ ಗುರುರಾಘವೇಂದ್ರ-ತೀರ್ಥರು ಪುರಾಣವಾಚಕರು ವಾಚನ ಮಾಡುತ್ತಿದ್ದ ಭಾಗವತಾದಿ ಕಥೆಗಳನ್ನು ಕೇಳುತ್ತಾ ಇದ್ದರು. ತಾವರೆಯಂತಹ ಸುಂದರನಯನರಾದ ಶ್ರೀವೇದವ್ಯಾಸರಿಗೆ ನಿರ್ಮಾಲ್ಯ ವಿಸರ್ಜನ ಮಾಡಿ ಪೂಜಾಂಗವಾದ ಅಭಿಷೇಕವನ್ನು ಮಾಡಿದ ಗುರುರಾಜರು, ಅನಂತರ ಶ್ರೀವೇದವ್ಯಾಸರಿಗೆ ಕ್ಷೀರಾಭಿಷೇಕವನ್ನು ಮಾಡಿದರು. ಅನಂತರ ಮಹಾಭಿಷೇಕವನ್ನು ಮಾಡಿದರು. ಹೀಗೆ ಮೂರು ಅಭಿಷೇಕಗಳನ್ನು ಮಾಡಿ ಅನಂತರ ಗಂಧ ಪುಷ್ಪಾದಿಗಳಿಂದ ಅರ್ಚಿಸಿ, ಆಗ ತಾನೇ ತಯಾರಿಸಿದ ಅತ್ಯಂತ ಶ್ರೇಷ್ಠವಾದ ಹೆಸರುಬೇಳೆಯ ಹುಗ್ಗಿಯನ್ನು ತುಪ್ಪದ ಸಹಿತವಾಗಿ ನಿವೇದಿಸಿ

ಶ್ರೀವೇದವ್ಯಾಸದೇವರ ಪೂಜೆಯನ್ನು ಪೂರೈಸಿದರು. ಅಲ್ಲಿದ್ದ ಶ್ರೀಗುರುವರ್ಯರನ್ನು ತಪಸ್ವಿ ಶ್ರೇಷ್ಠರಂತಿರುವ ಪಂಡಿತರು ಹಿಂಬಾಲಿಸುತ್ತಾ ಇದ್ದರು. ಅವರ ಜತೆಗೆ ಬಂದ ಶ್ರೀಗುರುರಾಘವೇಂದ್ರತೀರ್ಥರು ವಿಜಯೀಂದ್ರ-ಸ್ವಾಮಿಗಳ ವೃಂದಾವನ ಸನ್ನಿಧಿಗೆ ಬಂದು ಅವರನ್ನು ಭಕ್ತಿಯಿಂದ ನಮಸ್ಕರಿಸಿದರು. ಅನಂತರ ರತ್ನಖಚಿತವಾದ ಪಾದುಕೆಗಳನ್ನು ಪಾದಗಳಲ್ಲಿ ಧರಿಸಿ ಪಾದಚಾರದಿಂದ ಮಠದ ಕಡೆಗೆ ವಿಜಯ ಮಾಡಿದರು. ಭಕ್ತಜನರು ಶಂಖಾದಿವಾದ್ಯಗಳಿಂದ ದಿಕ್ಕುಗಳನ್ನು ಪ್ರತಿಧ್ವನಿಗೈಯುವಂತೆ ಮಾಡುತ್ತಿರುವಾಗ ಶ್ರೀರಾಘವೇಂದ್ರತೀರ್ಥರು ತಾವು ಒಂದೊಂದು ಹೆಜ್ಜೆ ಇಡುವ ಭೂಮಿಯನ್ನೂ ಪವಿತ್ರಗೊಳಿಸುತ್ತಾ, ದಾರಿಯಲ್ಲಿ ಕುಂಭೇಶ್ವರನಿಗೆ ಅಭಿವಂದಿಸಿ ಶರೀರಧಾರಿಯಾದ ಕಲ್ಪವೃಕ್ಷದಂತೆ ಮಠವನ್ನು ಪ್ರವೇಶಿಸಿದರು.

**ಶ್ರೀಮಠದಲ್ಲಿ ಶ್ರೀರಾಘವೇಂದ್ರತೀರ್ಥಗುರುಸಾರ್ವಭೌಮರು ಮಾಡಿದ ಪ್ರವಚನ** — ಶ್ರೀಗುರು-ರಾಘವೇಂದ್ರತೀರ್ಥರು ಪ್ರತಿದಿನವೂ ಪ್ರಾತಃಕಾಲದ ಆಹ್ನಿಕ ಪೂಜೆ ಆದಮೇಲೆ ಮಠಕ್ಕೆ ದಯಮಾಡಿಸಿ ಶಾಂತಿ-ಪಾಠವನ್ನು ಹೇಳಿ ಬ್ರಹ್ಮಸೂತ್ರಭಾಷ್ಯವನ್ನು ಸಭೆಯಲ್ಲಿ ಪ್ರವಚನದ ಮೂಲಕ ವಿವರಿಸುತ್ತಿದ್ದರು. ಆ ಸಂದರ್ಭಗಳಲ್ಲಿ ಇತರ ದರ್ಶಗಳಲ್ಲಿ ಮತ್ತು ಇತರ ಭಾಷ್ಯಗಳು ಮತ್ತು ಅವುಗಳ ವ್ಯಾಖ್ಯಾನಗಳಲ್ಲಿ ಬರುವ ಕುಯುಕ್ತಿ ಜಾಲಗಳನ್ನು ನಿರಾಕರಿಸುತ್ತಿದ್ದರು.

"ಅನಂತಕಲ್ಯಾಣಗುಣಪರಿಪೂರ್ಣನೂ ಸಮಸ್ತದೋಷದೂರನೂ ಪರಮಮುಖ್ಯವೃತ್ತಿಯಿಂದ ಅಂದರೆ ಮಹಾಯೋಗವಿದ್ವದ್ರೂಢಿ ಮತ್ತು ಮಹಾಯೋಗಗಳಿಂದ (ಮಹಾಯೋಗ ಮತ್ತು ಮಹಾಯೋಗ-ವಿದ್ವದ್ರೂಢಿಗಳಿಂದ) ಬ್ರಹ್ಮಶಬ್ದವಾಚ್ಯನೂ ಆದ ಶ್ರೀಮನ್ನಾರಾಯಣನು ಪ್ರತ್ಯಕ್ಷಾನುಮಾನಗಳಿಂದ ಅಗಮ್ಯನು ಶಾಸ್ತ್ರೈಕಗಮ್ಯನೂ ಆಗಿದ್ದಾನೆ. ಅವನೇ ಮುಮುಕ್ಷುಗಳಿಂದ ಹೊಂದಲು ಯೋಗ್ಯನೂ ಆಗಿದ್ದಾನೆ." ಈ ರೀತಿ ಶ್ರೀಮನ್ಮಧ್ವಾಚಾರ್ಯರು ತಮ್ಮ ಬ್ರಹ್ಮಸೂತ್ರಭಾಷ್ಯದಲ್ಲಿ ಸಮರ್ಥಿಸಿದ್ದಾರೆ ಎಂದು ಶ್ರೀಗುರುರಾಘವೇಂದ್ರತೀರ್ಥರು ಭಾಷ್ಯಾರ್ಥೋಪನ್ಯಾಸವನ್ನು ಮಾಡುತ್ತಿದ್ದರು. ಹೀಗೆ ಅವರು ಒಂದು ಭಾಷ್ಯಾರ್ಥೋಪನ್ಯಾಸ ಮಾಡುತ್ತಿದ್ದಾಗ ಅಲ್ಲಿದ್ದ ಒಬ್ಬ ಪಂಡಿತನು ಈ ರೀತಿ ಪ್ರಶ್ನಿಸಿದರು.

'ಯದ್ವಾಚಾನಭ್ಯುದಿತಂ' (ಯಾವ ಬ್ರಹ್ಮವು ವೇದವಾಕ್ಯದಿಂದಲೂ ಹೇಳಲ್ಪಟ್ಟಿಲ್ಲ) ಇವೇ ಮೊದಲಾದ ಪ್ರಮಾಣಗಳಿಂದ ಪರಬ್ರಹ್ಮನು ನಿತ್ಯವಾಕ್ಯರೂಪವಾದ ವೇದಗಳಿಂದಲೂ ಪ್ರತಿಪಾದ್ಯನಲ್ಲ. ವೇದಕ್ಕೂ ವಿಷಯನಲ್ಲ ಮತ್ತಾವ ಪ್ರಮಾಣಕ್ಕೂ ವಿಷಯನಲ್ಲವೆಂದು ತಿಳಿದು ಬರುತ್ತದೆ. ನಿತ್ಯವಾಗ್ರೂಪವಾದ ವೇದಗಳಿಗೂ ವಿಷಯ-ನಲ್ಲವೆಂದ ಮೇಲೆ ಅನಿತ್ಯ ವಾಕ್ಯಗಳಿಗೆ ಪರಬ್ರಹ್ಮನು ವಿಷಯನಲ್ಲವೆಂದು ಹೇಳಬೇಕಾಗಿಯೇ ಇಲ್ಲವಷ್ಟೆ. ಅದು ಕೈಮುತ್ಯನ್ಯಾಯದಿಂದ ಸಿದ್ಧಿಸುತ್ತದೆ. ಎಲ್ಲಾ ನಾಮಗಳೂ ಬ್ರಹ್ಮಭಿನ್ನವಾಗಿವೆ. ಆದುದರಿಂದ ಜಡರೂಪವಾಗಿದೆ. ಆದುದರಿಂದಲೇ ಬ್ರಹ್ಮವ್ಯತಿರಿಕ್ತವಾದ ಜಡರೂಪವಾದ ಎಲ್ಲಾ ನಾಮಗಳೂ ಮಿಥ್ಯಾ ಆಗಿವೆ. ಮಿಥ್ಯೆಯಾಗಿರುವ ನಾಮಧೇಯಗಳು ಬ್ರಹ್ಮನನ್ನು ಪ್ರತಿಪಾದಿಸಲು ಸರ್ವಥಾ ಸಮರ್ಥವಾಗುವುದಿಲ್ಲ. ಹೀಗೆ ಬ್ರಹ್ಮ ಪ್ರತಿಪಾದಕವಾದ ಯಾವ ಒಂದು ಶಬ್ದವೂ ಸಿಗುವುದಿಲ್ಲವಾದುದರಿಂದ ಬ್ರಹ್ಮವು ಸಮಸ್ತಕಲ್ಯಾಣಗುಣಪರಿಪೂರ್ಣವಾಗಿದೆ. ಆ ಬ್ರಹ್ಮವು ಶ್ರೀಮನ್ನಾರಾಯಣನೇ ಆಗಿದ್ದಾನೆ ಎಂಬ ನಿಮ್ಮ ಮಾತು ನಿರರ್ಥಕ.

ಮತ್ತೂ ಆಕ್ಷೇಪಗಳಿವೆ, ನಿಮ್ಮ ಶಾಸ್ತ್ರಕ್ಕೆ ವಿಷಯವು ಯಾವುದು ? ಎಂದು ವಿಚಾರ ಮಾಡೋಣ. ಹಸ್ತ ಪಾದಾದಿವ್ಯಾಪಾರರೂಪವಾದ ಚೇಷ್ಟೆ, ಉಚ್ಛ್ವಾಸನಿಶ್ವಾಸ ಮುಂತಾದ ಚಿಹ್ನೆಗಳಿಂದ ಇನ್ನೊಬ್ಬನ ದೇಹದಲ್ಲಿ ಆತ್ಮನಿದ್ದಾನೆ ಎಂದು ಅನುಮಾನದಿಂದ ಸಿದ್ಧವಾಗುತ್ತದೆ. ತಾನು (ತನ್ನ ಆತ್ಮನು) ಅಹಂ (ನಾನು) ಎಂಬ ಸ್ವಪ್ರಕಾಶವಾದ ಪ್ರತ್ಯಕ್ಷ ಪ್ರತೀತಿಯಿಂದ ಸಿದ್ಧನಾಗುತ್ತಾನೆ. ಹೀಗೆ ತಾನು ಮತ್ತು ಇತರ ಜೀವರು ಇವರ ವಿಷಯದಲ್ಲಿ

ಸಂಶಯ ಅಥವಾ ಭ್ರಾಂತಿಗಳಿಗೆ ಎಡೆಯೇ ಇಲ್ಲ, ಇನ್ನು ಎಲ್ಲಾ ಜೀವರಿಗಿಂತ ಭಿನ್ನನಾದ ಪರಮಾತ್ಮನನ್ನೇ ಬ್ರಹ್ಮಮೀಮಾಂಸಾ ಶಾಸ್ತ್ರದಲ್ಲಿ ವಿಚಾರ ಮಾಡುತ್ತೇವೆ ಎಂದು ನೀವು ಹೇಳಬಹುದು. ಆದರೆ ಅದೂ ಸರಿಹೊಂದುವುದಿಲ್ಲ. ಏಕೆಂದರೆ ತಾನು ಮತ್ತು ತನ್ನಂತೆಯೇ ಇರತಕ್ಕ ಇತರ ಎಲ್ಲಾ ಜೀವರಿಗಿಂತ ಭಿನ್ನನಾದ ಪರಮಾತ್ಮನನ್ನೇ ಬ್ರಹ್ಮಮೀಮಾಂಸಾ ಶಾಸ್ತ್ರದಲ್ಲಿ ವಿಚಾರ ಮಾಡುತ್ತೇನೆ ಎಂದು ನೀವು ಹೇಳಬಹುದು. ಆದರೆ ಸರಿ-ಹೊಂದುವನೊಬ್ಬನು ಇದ್ದಾನೆ ಎಂಬ ವಿಷಯದಲ್ಲಿ ಪ್ರಮಾಣವೇ ಇಲ್ಲ. ಜೀವಾಭಿನ್ನನಾದ ಪರಮಾತ್ಮನೇ ವಿಷಯ ಎಂದು ಹೇಳಲು ಸಾಧ್ಯವಿಲ್ಲ. ಪರಮಾತ್ಮನು ಜೀವಾಭಿನ್ನನಾದುದರಿಂದ ಜೀವನೇ ಪರಮಾತ್ಮನೆಂದಾಯಿತು. ಜೀವರೂಪನಾದ ಪರಮಾತ್ಮನ ಜ್ಞಾನವು ಜೀವನ ಜ್ಞಾನವು ಬರುವಾಗಲೇ ಬಂದಿರುತ್ತದೆ. ಆದುದರಿಂದ ಜೀವಾಭಿನ್ನಪರಮಾತ್ಮನ ವಿಷಯದಲ್ಲಿಯೂ ಸಂದೇಹ, ವಿಪರೀತ ಜ್ಞಾನ, ಅಜ್ಞಾನಗಳಿಗೆ ಅವಕಾಶವೇ ಇಲ್ಲ. ಆದುದರಿಂದ ವಿಷಯವೇ ಇಲ್ಲದುದರಿಂದ ಈ ಬ್ರಹ್ಮಮೀಮಾಂಸಾಶಾಸ್ತ್ರವು ಆರಂಭಿಸಲೂ ಯೋಗ್ಯವಲ್ಲ.

ಇನ್ನೂ ಆಕ್ಷೇಪವಿದೆ. ಈ ಬ್ರಹ್ಮಮೀಮಾಂಸಾ ಶಾಸ್ತ್ರಕ್ಕೆ ಪ್ರಯೋಜನವೇನು ಎಂದು ವಿಚಾರ ಮಾಡೋಣ. ಸ್ವರ್ಗ, ಮತ್ತಿತರ ಪರಲೋಕಗಳಲ್ಲಿ ಸುಖಪಡುವುದೇ ಈ ಶಾಸ್ತ್ರದ ವಿಚಾರಕ್ಕೆ ಪ್ರಯೋಜನವೆಂದು ಹೇಳಲು ಸಾಧ್ಯವಿಲ್ಲ. ಸ್ವರ್ಗಾದಿ ಪ್ರಯೋಜನಗಳು ಯಾಗ ವ್ರತನಿಯಮಾದಿಗಳಿಂದ ಸಿದ್ಧಿಸುತ್ತವೆ. ಈ ಪ್ರಯೋಜನಗಳಿಗಾಗಿ ಬ್ರಹ್ಮಜಿಜ್ಞಾಸೆಯನ್ನು ಮಾಡಬೇಕಾಗಿಲ್ಲ. ಧಾನ್ಯಪ್ರಾಪ್ತಿ, ಧನಪ್ರಾಪ್ತಿ ಮುಂತಾದ ಐಹಿಕ ಪ್ರಯೋಜನಗಳಿಗಾಗಿಯೂ ಬ್ರಹ್ಮವಿಚಾರ ಮಾಡಬೇಕಾಗಿಲ್ಲ. ಕೃಷಿ ವ್ಯಾಪಾರ ಮುಂತಾದವುಗಳಿಂದ ಧಾನ್ಯ, ಧನ ಮುಂತಾದ ಪ್ರಯೋಜನ-ಗಳು ಸಿದ್ಧಿಸುತ್ತವೆ. ಹೀಗೆ ಆಮುಷ್ಮಿಕವಾದ ಸ್ವರ್ಗಾದಿಗಳೂ ಐಹಿಕವಾದ ಧಾನ್ಯಧನಾದಿಗಳೂ ಈ ಶಾಸ್ತ್ರಕ್ಕೆ ಪ್ರಯೋಜನವಾಗುವುದಿಲ್ಲ. ಈ ಎರಡು ಪ್ರಯೋಜನಗಳಿಗಿಂತ ಬೇರೆಯಾದ ಮುಕ್ತಿ ಎಂಬ ಪ್ರಯೋಜನವು ಈ ಶಾಸ್ತ್ರ ವಿಚಾರದಿಂದ ದೊರಕುತ್ತದೆ ಎಂದೂ ಹೇಳಲು ಸಾಧ್ಯವಿಲ್ಲ. ಬ್ರಹ್ಮವಿಚಾರ ಮಾಡಿದವರಿಗೆ ಯಾರಿಗೂ ಈಗ ಆ ಮುಕ್ತಿ ಎಂಬ ಫಲವು ದೊರಕಿಲ್ಲ. ಈಗ ಈ ಕಾಲದಲ್ಲಿ ಯಾರಿಗೂ ಎಲ್ಲಿಯೂ ಸಿಗದಿರುವ ಮುಕ್ತಿ ಎಂಬ ಫಲವು ಇನ್ನಾವುದೋ ದೇಶದಲ್ಲಿ, ಲೋಕದಲ್ಲಿ ಸಿಗುತ್ತದೆ ಎಂದು ಯಾರಾದರೂ ಊಹಿಸುವುದಕ್ಕಾದರೂ ಸಾಧ್ಯವಿಲ್ಲ. ಹಾಗಾದುದರಿಂದ ಈ ಶಾಸ್ತ್ರಕ್ಕೆ ಪ್ರಯೋಜನವೂ ಇಲ್ಲವೆಂದಾಯಿತು. ಅಂತೂ ಈ ಶಾಸ್ತ್ರವನ್ನು ಆರಂಭಿಸಬೇಕಾಗಿಲ್ಲ. ಈ ಆಕ್ಷೇಪವನ್ನು ಖಂಡಿಸುತ್ತಾ ಮತ್ತೊಬ್ಬನು ಹೇಳಲಾರಂಭಿಸಿದನು.

ಸಗುಣಬ್ರಹ್ಮ ನಿರ್ಗುಣಬ್ರಹ್ಮ ಎಂಬ ಎರಡು ವಿಧವಾದ ಬ್ರಹ್ಮಗಳಲ್ಲಿ ಮಾಯಾ ಶಬಲವಾದ ಸಗುಣ ಬ್ರಹ್ಮವು ಶಾಸ್ತ್ರಕ್ಕೆ ವಿಷಯವಾಗದಿದ್ದರೂ ಮಾನಸ ಪ್ರತ್ಯಕ್ಷಕ್ಕೆ ವಿಷಯವಾದ ಶುದ್ಧಬ್ರಹ್ಮವು ಶಾಸ್ತ್ರಕ್ಕೆ ವಿಷಯವಾಗಲು ಸಾಧ್ಯವಿದೆ. ಶಾಸ್ತ್ರ ವಿಮರ್ಶದಿಂದ ಶುದ್ಧವಾದ ಬ್ರಹ್ಮನ ಜ್ಞಾನವಾದಾಗ ಬಂಧ ನಾಶವಾಗುತ್ತದೆ. ಬಂಧ ನಾಶಕ್ಕಿಂತ ಬೇರೆಯಾದ ಫಲವು ಬ್ರಹ್ಮಜಿಜ್ಞಾಸೆಗೆ ಇಲ್ಲ. ಹೀಗೆ ಬಂಧ ನಾಶವಾದಾಗ ಜೀವನಿಗೆ ಬ್ರಹ್ಮೈಕ್ಯವು ಸ್ವತಸ್ಸಿದ್ಧವಾಗಿರುವುದರಿಂದ ಪ್ರಕಟವಾಗುತ್ತದೆ. ಆಧುದರಿಂದ ವಿಷಯ ಪ್ರಯೋಜನಗಳೆರಡೂ ಇರುವುದರಿಂದ ಈ ಶಾಸ್ತ್ರವನ್ನು ಆರಂಭಿಸ-ಬೇಕೆಂದು ಸಿದ್ಧವಾಗುತ್ತದೆ.

ಈ ಮಾತನ್ನು ಕೇಳಿ ತುಂಬಾ ಸಿಟ್ಟಾದ ಮತ್ತೊಬ್ಬನು ಪುನಃ ಮೇಲಿನ ಮಾತನ್ನು ಖಂಡಿಸಲಾರಂಭಿಸಿದರು.

ಶುದ್ಧಬ್ರಹ್ಮವು ಮಾನಸ ಪ್ರತ್ಯಕ್ಷಕ್ಕೆ ಗೋಚರವಾಗುತ್ತದೆಂದು ಹೇಳಿದಿರಲ್ಲವೇ ! ಅದು ಅತ್ಯಂತ ಅಸಂಗತವಾದ ಮಾತು. ಈ ಅಸಾಂಗತ್ಯವನ್ನು ನಾವು ಸಮರ್ಥಿಸುತ್ತೇವೆ ಕೇಳಿರಿ, ಶುದ್ಧಬ್ರಹ್ಮನಲ್ಲಿ ಇದೆಯೆಂಬುದಾಗಿ ನೀವು ಒಪ್ಪಿರುವ ಅದ್ವಿತೀಯತ್ವ ಮುಂತಾದ ಧರ್ಮಗಳು ಶುದ್ಧಬ್ರಹ್ಮನಿಗಿಂತ ಭಿನ್ನವಾಗಿವೆಯೇ ? ಅಥವಾ ಶುದ್ಧ-ಬ್ರಹ್ಮನಿಗಿಂತ ಅಭಿನ್ನವಾಗಿವೆಯೇ ? (ಶುದ್ಧಬ್ರಹ್ಮಸ್ವರೂಪವಾಗಿಯೇ ಇವೆಯೇ ?) ಅದ್ವಿತೀಯತ್ವ ಮುಂತಾದ

ಧರ್ಮಗಳು ಶುದ್ಧಬ್ರಹ್ಮನಿಗಿಂತ ಬೇರೆಯಾಗಿ ಇವೆ ಎಂಬ ಮೊದಲನೆಯ ಪಕ್ಷವನ್ನು ಅಂಗೀಕರಿಸಿದರೆ ಆಗ ಆ ಧರ್ಮಗಳು ಸತ್ಯವಾಗಿಯೇ ಅಥವಾ ಮಿಥ್ಯಾ (ಸುಳ್ಳಾಗಿವೆ) ಆಗಿವೆಯೇ ? ಎಂದು ಕೇಳುತ್ತೇವೆ. ಶುದ್ಧಬ್ರಹ್ಮನಲ್ಲಿ ಅದ್ವಿತೀಯತ್ವಾದಿ ಧರ್ಮಗಳು ಶುದ್ಧಬ್ರಹ್ಮನಿಗಿಂತ ಭಿನ್ನವಾಗಿ ಸತ್ಯವಾಗಿವೆ ಎನ್ನುವುದಾದರೆ ಬ್ರಹ್ಮವೊಂದೇ ಸತ್ಯ ಉಳಿದುದೆಲ್ಲವೂ ಮಿಥ್ಯಾ (ಬ್ರಹ್ಮಸತ್ಯಂ ಜಗನ್ಮಿಥ್ಯಾ ಜೀವೋ ಬ್ರಹ್ಮೈವ ನಾಪರಃ) ಬ್ರಹ್ಮನ ಹೊರತು ಎರಡನೆಯ ಸತ್ಯಪದಾರ್ಥವೇ ಇಲ್ಲ ಎಂಬ ಅದ್ವೈತ ಸಿದ್ಧಾಂತಕ್ಕೆ ಭಂಗ ಬರುತ್ತದೆ. ಇನ್ನು ಬ್ರಹ್ಮಭಿನ್ನವಾದ ಅದ್ವಿತೀಯತ್ವಾದಿ ಧರ್ಮಗಳು ಮಿಥ್ಯಾ (ಸುಳ್ಳು) ಎನ್ನುವುದಾದರೆ ಬ್ರಹ್ಮವಿಷಯಕವಾದ ಚರಮವಾದ (ನಿರ್ವಿಕಲ್ಪಕ) ವೃತ್ತಿಯಲ್ಲಿ ಗೋಚರವಾಗುವ ಈ ಧರ್ಮಗಳು ಮಿಥ್ಯಾ ಆದರೆ ಅದೇ ವೃತ್ತಿಯಲ್ಲಿ ವಿಷಯವಾದ ಬ್ರಹ್ಮವೂ ಮಿಥ್ಯಾ (ಸುಳ್ಳು) ಎಂದು ಆಗಬೇಕಾದೀತು. ಒಂದೇ ವೃತ್ತಿಯಲ್ಲಿ ಗೋಚರವಾದ ಒಂದು ವಿಷಯವು ಸತ್ಯ ಮತ್ತೊಂದು ವಿಷಯವು ಮಿಥ್ಯಾ ಎಂದು ಹೇಳಲು ಸಾಧ್ಯವಿಲ್ಲವಷ್ಟೇ ! ಇನ್ನು ಅದ್ವಿತೀಯತ್ವಾದಿ ಧರ್ಮಗಳು ಸತ್ಯವಾಗಿವೆ, ಬ್ರಹ್ಮಾಭಿನ್ನವಾಗಿವೆ (ಬ್ರಹ್ಮಸ್ವರೂಪವಾಗಿವೆ) ಎಂಬ ಪಕ್ಷವನ್ನು ಅಂಗೀಕರಿಸುವುದಾದರೆ ಬ್ರಹ್ಮಜ್ಞಾನವು ಬರುವಾಗ ಅದ್ವಿತೀಯತ್ವಾದಿ ಧರ್ಮಗಳ ಜ್ಞಾನವೂ ಬರುವುದು ಎಂದು ಹೇಳಿದರೆ ಬ್ರಹ್ಮವು ತತ್ತ್ವಮಸ್ಯಾದಿ ವಾಕ್ಯಜನ್ಯವಾದ ಅಖಂಡಾರ್ಥ ವಿಷಯಕವಾದ ಜ್ಞಾನಕ್ಕೆ ಗೋಚರವಾಗುತ್ತದೆ ಎಂಬ ಮಾತು ಹೊಂದುವುದಿಲ್ಲ. ಬ್ರಹ್ಮ ಎಂದಕೂಡಲೇ ಅದ್ವಿತೀಯತ್ವಾದಿಧರ್ಮಸ್ವರೂಪವಾದುದು ಬ್ರಹ್ಮ ಎಂದು ಯಾರಿಗಾದರೂ ಮನಸ್ಸಿಗೆ ಹೊಳೆಯುವುದಿಲ್ಲವಷ್ಟೆ. ಬ್ರಹ್ಮ ಎಂದಕೂಡಲೇ ಅದ್ವಿತೀಯತ್ವಾದಿ ಧರ್ಮಗಳೂ ತೋರುತ್ತವೆಯೆಂದೇ ಹೇಳುವುದಾದರೆ ಬ್ರಹ್ಮ ಎಂದ ಕೂಡಲೇ ಬ್ರಹ್ಮವು ಅದ್ವಿತೀಯವಾದುದು ಹೌದೇ ಅಲ್ಲವೇ ! ಇತ್ಯಾದಿ ಸಂಶಯವೇ ಬರುತ್ತಿರಲಿಲ್ಲ. ಕೆಲವರಿಗೆ ಅದ್ವಿತೀಯಾತ್ವಾಭಾವ ಭ್ರಾಂತಿಯು ಕಂಡಿದೆ, ಅದೂ ಬರುತ್ತಿರಲಿಲ್ಲ. ಅದ್ವಿತೀಯತ್ವದ ಅಜ್ಞಾನವೂ ಇರುತ್ತಿರಲಿಲ್ಲ. ಇನ್ನು ಬ್ರಹ್ಮಜ್ಞಾನವು ಬಂದರೂ ಅದ್ವಿತೀಯತ್ವಾದಿ ಧರ್ಮಗಳ ಜ್ಞಾನವು ಬರುವುದಿಲ್ಲ ಎನ್ನುವುದಾದರೆ ಆ ಅದ್ವಿತೀಯತ್ವಾದಿಧರ್ಮಗಳು ಬ್ರಹ್ಮಸ್ವರೂಪವಾಗಲಾರವು. ಸ್ವರೂಪ ಜ್ಞಾನವು ಬರುವಾಗ ತೋರದ ಧರ್ಮಗಳು ಆ ವಸ್ತುವಿನ ಸ್ವರೂಪವಾಗಿರಲು ಸಾಧ್ಯವೇ ? ಎಂದಿಗೂ ಇಲ್ಲ. ಆದುದರಿಂದ ಶುದ್ಧಬ್ರಹ್ಮ ಎಂಬುದು ಇಲ್ಲವೇ ಇಲ್ಲ. ಹಾಗೂ ಶುದ್ಧಬ್ರಹ್ಮವನ್ನು ಪ್ರತಿಪಾದಿಸುವುದರಿಂದ ಶಾಸ್ತ್ರಕ್ಕೆ ಶುದ್ಧಬ್ರಹ್ಮವೆಂಬ ವಿಷಯವು ಒದಗುತ್ತದೆ ಎಂದು ಹೇಳಿದುದೂ ಸರಿಯಲ್ಲ. ಇಂತಹ ಶುದ್ಧಬ್ರಹ್ಮವೇ ಇಲ್ಲವೆಂದಮೇಲೆ ಅದರ ಜ್ಞಾನದಿಂದ ಉಂಟಾದ ಮುಕ್ತಿ ಎಂಬ ಪ್ರಯೋಜನವೂ ಕೂಡುವುದಿಲ್ಲ. ಆದುದರಿಂದ ವಿಷಯ ಪ್ರಯೋಜನಗಳು ಇಲ್ಲದಿರುವುದರಿಂದ ಈ ಶಾಸ್ತ್ರವನ್ನು ಆರಂಭಿಸಬೇಕಾಗಿಯೇ ಇಲ್ಲ.

ಹೀಗೆ ವಾದ ಪ್ರತಿವಾದಗಳನ್ನು ಮಾಡುತ್ತಾ ಪಂಡಿತರು ಚರ್ಚಿಸುತ್ತಾ ಇರುವಾಗ ಶ್ರೀಗುರುಪಾದರು ಮಧ್ಯಸ್ಥತೆಯನ್ನು ವಹಿಸಿ ಈ ರೀತಿ ಹೇಳಿದರು.

ಬ್ರಹ್ಮಮೀಮಾಂಸಾಶಾಸ್ತ್ರವು "ಓಂ ಅಥಾತೋ ಬ್ರಹ್ಮಜಿಜ್ಞಾಸಾ ಓಂ" ಎಂದು ಆರಂಭವಾಗಿ "ಓಂ ಅನಾವೃತ್ತಿಶ್ಶಬ್ದಾತ್ ಅನಾವೃತ್ತಿಶ್ಶಬ್ದಾತ್ ಓಂ" ಎಂದು ಹದಿನಾರು ಪಾದಗಳಲ್ಲಿ ನಾಲ್ಕು ಅಧ್ಯಾಯಗಳಲ್ಲಿ ಮುಗಿಯುತ್ತದೆ. ಈ ಶಾಸ್ತ್ರವನ್ನು ಮಾಡಿದವರು ಶ್ರೀವೇದವ್ಯಾಸರು. ಕೃಷ್ಣದ್ವೈಪಾಯನ, ಬಾದರಾಯಣ, ವೇದವ್ಯಾಸ ಎಂಬ ಹೆಸರುಳ್ಳ ಶ್ರೀಮನ್ನಾರಾಯಣನೇ ಜ್ಞಾನಕಾರ್ಯಕ್ಕಾಗಿ ಅಭಿವ್ಯಕ್ತನಾದವನು. ಇವರು ಪರಮ ಆಪ್ತರೆಂದು ನಾವೆಲ್ಲರೂ ಒಪ್ಪಿಕೊಳ್ಳಲೇಬೇಕು. ಬ್ರಹ್ಮಮೀಮಾಂಸಾಶಾಸ್ತ್ರಕರ್ತರಾದ ಶ್ರೀವೇದವ್ಯಾಸರು ದೈವೀಮೀಮಾಂಸಾ ಎಂಬ ದೇವತಾಮೀಮಾಂಸಾ ಶಾಸ್ತ್ರವನ್ನು ಆರಂಭಿಸಿದ್ದಾರೆ. ಆದರೆ ಆ ಶಾಸ್ತ್ರದ ಆರಂಭ 'ಓಂ ಅಥಾತೋ ದೈವೀಮೀಮಾಂಸಾ' ಎಂಬ ಮೊದಲನೆಯ ಸೂತ್ರವನ್ನೂ, "ಸ ವಿಷ್ಣುರಾಹ ಹಿ. ತಂ ಬ್ರಹ್ಮೇತ್ಯಾಚಕ್ಷತೇ ತಂ" ಎಂಬ ಕೊನೆಯ ಎರಡು

ಸೂತ್ರಗಳನ್ನು ಮಾತ್ರ ಅವರೇ ರಚಿಸಿದ್ದಾರೆ. ಮಧ್ಯದ ಸೂತ್ರಗಳನ್ನು ಅವರ ಆಜ್ಞೆಯಿಂದ ಅವರ ಶಿಷ್ಯರೇ ಆದ ಶೇಷ ಮತ್ತು ಪೈಲ ಎಂಬ ಇಬ್ಬರು ಋಷಿಗಳು ರಚಿಸಿದ್ದಾರೆ. ದೈವೀಮೀಮಾಂಸೆಯ ಕೊನೆಯ ಎರಡು ಸೂತ್ರಗಳಲ್ಲಿ ಶ್ರೀವೇದವ್ಯಾಸರು ವಿಷ್ಣುವನ್ನೇ ಬ್ರಹ್ಮಶಬ್ದವಾಚ್ಯನೆಂದು ಶ್ರುತಿಗಳೂ, ಪೌರುಷೇಯಗ್ರಂಥಗಳೂ, ಆಪ್ತರೂ ಹೇಳು- ತ್ತಾರೆಂದು ಹೇಳಿದ್ದಾರೆ. ದೈವೀಮೀಮಾಂಸೆಯ ಕೊನೆಯ ಈ ಎರಡು ಸೂತ್ರಗಳ ಅನಂತರದ ಸೂತ್ರದಲ್ಲಿಯೇ, ಬ್ರಹ್ಮಮೀಮಾಂಸಾ ಶಾಸ್ತ್ರದ ಮೊದಲನೆಯ ಸೂತ್ರದಲ್ಲಿ ಓಂ ಅಥಾತೋ ಬ್ರಹ್ಮಜಿಜ್ಞಾಸಾ ಓಂ ಎಂದು ಹೇಳಿರುವ ಸೂತ್ರಕರ್ತರಾದ ಶ್ರೀವೇದವ್ಯಾಸಮಹರ್ಷಿಗಳಿಗೆ ಈ ಸೂತ್ರಕ್ಕಿಂತ ಅವ್ಯವಹಿತ ಪೂರ್ವಸೂತ್ರದಲ್ಲಿ ಬ್ರಹ್ಮಶಬ್ದ- ವಾಚ್ಯನೆಂದು ಹೇಳಿರುವ ಶ್ರೀವಿಷ್ಣುವೇ ಶ್ರವಣ, ಮನನ, ಧ್ಯಾನರೂಪವಾದ ವಿಚಾರಕ್ಕೆ ವಿಷಯನೆಂದು ಅಭಿಪ್ರಾಯವಿದೆಯೆಂದು ಸ್ಪಷ್ಟವಾಗಿ ಗೊತ್ತಾಗುತ್ತದೆ. ದೈವೀಮೀಮಾಂಸೆಯ ಕೊನೆಯ ಸೂತ್ರಗಳಲ್ಲಿ ಸ್ಪಷ್ಟವಾಗದಿರುವ ವಿಷಯಗಳನ್ನು ಇಲ್ಲಿ ಸ್ಪಷ್ಟಪಡಿಸುವುದರಿಂದ ಮತ್ತು ದೈವೀಮೀಮಾಂಸೆಯ ವಿಷಯ ಪ್ರಯೋಜನ ಸಂಬಂಧ ಅಧಿಕಾರಿಗಳಿಗಿಂತ ಬೇರೆಯೇ ಆದ ವಿಷಯಾದಿಗಳನ್ನು ಇಲ್ಲಿ ಸೂಚಿಸುವುದರಿಂದ ಈ ಬ್ರಹ್ಮಮೀಮಾಂಸಾಶಾಸ್ತ್ರಕ್ಕೆ ಬೇರೆ ಶಾಸ್ತ್ರದಿಂದ ಗತಾರ್ಥತಾ ಬರುವುದಿಲ್ಲ. ಬ್ರಹ್ಮಶಬ್ದವಾಚ್ಯನೆಂದು ಹಿಂದೆ ಹೇಳಿರುವ ವಿಷ್ಣುವು ಗುಣಪೂರ್ಣನಾಗಿದ್ದಾನೆ. ಗುಣಪೂರ್ಣನಾದುದರಿಂದ ಶ್ರೀವಿಷ್ಣುವಿಗೆ ಬ್ರಹ್ಮ ಎಂದು ಹೆಸರು. ಇತ್ಯಾದಿ ಅನೇಕ ವಿಷಯಗಳನ್ನು ಈ ಸೂತ್ರವು ಹೇಳುತ್ತದೆ. ಈ ಅಭಿಪ್ರಾಯವನ್ನು ವಿಮರ್ಶಿಸಿದಾಗ ತಾನೂ (ಸ್ವಾತ್ಮನೂ) ಪರಜೀವರೂ ಬ್ರಹ್ಮಮೀಮಾಂಸಾಶಾಸ್ತ್ರಕ್ಕೆ ವಿಷಯರಾಗುವುದಿಲ್ಲವೆಂದೂ, ಸ್ವಾತ್ಮಪರಾತ್ಮರಿಗಿಂತ ಭಿನ್ನನಾದ ಸಕಲಗುಣ ಪರಿಪೂರ್ಣನಾದ ಬ್ರಹ್ಮಶಬ್ದವಾಚ್ಯನಾದ ವಿಷ್ಣುವೇ ಇಲ್ಲಿ ವಿಷಯನೆಂದೂ ಶ್ರೀವೇದವ್ಯಾಸರು ಸೂಚನಾತ್ಮಕವಾದ ಈ ಸೂತ್ರದಲ್ಲಿ ಬ್ರಹ್ಮಶಬ್ದಪ್ರಯೋಗದಿಂದ ಸೂಚಿಸಿದ್ದಾರೆ. ಜೀವರಿಗಿಂತ ಭಿನ್ನನಾದ ಪರಮಾತ್ಮನ ವಿಷಯದಲ್ಲಿ ಸಂಶಯ ವಿಪರ್ಯಾಯ ಅಜ್ಞಾನಗಳು ಇರಲು ಸಾಧ್ಯವಿದೆ, ಸಂಶಯಾದಿಗಳು ಸಂಭವಿಸುತ್ತಲೂ ಇವೆ. ಆದುದರಿಂದ ಸಂದೇಹ ವಿಷಯವಾದ, ವಿಪರೀತ ಜ್ಞಾನಕ್ಕೆ ವಿಷಯವಾದ, ಅಥವಾ ಅಜ್ಞಾನಕ್ಕೆ ವಿಷಯವಾದ ಬ್ರಹ್ಮವೇ ಇಲ್ಲಿ ವಿಷಯವಾಗಿದೆ ಎಂದೂ ಶ್ರೀವೇದವ್ಯಾಸರು ಬ್ರಹ್ಮಪದದಿಂದ ಸೂಚಿಸಿದ್ದಾರೆ. ಬ್ರಹ್ಮಮೀಮಾಂಸಾಶಾಸ್ತ್ರದ 'ಓಂ ಅಥಾತೋ ಬ್ರಹ್ಮಜಿಜ್ಞಾಸಾ ಓಂ' ಎಂಬ ಮೊದಲನೆಯ ಸೂತ್ರದ 'ಅಥ' ಎಂಬ ಶಬ್ದದಿಂದ ಈ ಬ್ರಹ್ಮಮೀಮಾಂಸಾ ಶಾಸ್ತ್ರಕ್ಕೆ ಬ್ರಹ್ಮವ್ಯತಿರಿಕ್ತರಾದ ಸಾತ್ವಿಕಜೀವರು ಅಧಿಕಾರಿಗಳೆಂದು ಸೂಚಿಸಿದ್ದಾರೆ. 'ಅತಃ' ಎಂಬ ಎರಡನೆಯ ಶಬ್ದದಿಂದ ಬ್ರಹ್ಮನ ಶ್ರವಣ, ಮನನ ಮತ್ತು ಧ್ಯಾನವೆಂಬ ಜಿಜ್ಞಾಸೆಯಿಂದ ಪರಬ್ರಹ್ಮನಾದ ವಿಷ್ಣುವಿನ ಸಾಕ್ಷಾತ್ಕಾರವಾಗುತ್ತದೆ ಎಂದೂ, ಅದರಿಂದ ಪರಮಾತ್ಮನ ಪ್ರಸಾದವು ಉಂಟಾಗುತ್ತದೆ ಎಂದೂ, ಅದರಿಂದ ಮೋಕ್ಷವೆಂಬ ಪ್ರಯೋಜನವು ಉಂಟಾಗುತ್ತದೆಯೆಂದೂ (ಸಂಗ್ರಹವಾಗಿ ಉಕ್ತವಾಗಿದೆ) ಸೂಚಿಸಿದ್ದಾರೆ. ಈ ಮೋಕ್ಷ ಎಂಬ ಪ್ರಯೋಜನಕ್ಕೂ ಅಧಿ ಕಾರಿಗಳಿಗೂ ಪ್ರಾಪ್ಯ (ಹೊಂದಲ್ಪಡತಕ್ಕಂತಹದ್ದು) ಪ್ರಾಪ್ಯ (ಹೊಂದಲ್ಪಡತಕ್ಕಂತಹವರು) ಭಾವ ಎಂಬ ಸಂಬಂಧ, ಬ್ರಹ್ಮಮೀಮಾಂಸಾಶಾಸ್ತ್ರಕ್ಕೂ ವಿಷಯವಾದ ಬ್ರಹ್ಮನಿಗೂ ಪ್ರತಿಪಾದ್ಯ ಪ್ರತಿಪಾದಕಭಾವ ಸಂಬಂಧ ಮುಂತಾದ ಸಂಬಂಧವನ್ನೂ ನಾವು ಊಹಿಸಿ ತಿಳಿದುಕೊಳ್ಳಬೇಕು. ಇವೆಲ್ಲವನ್ನೂ ಸೂಚಿಸಿತಕ್ಕಂತಹದ್ದು ಬ್ರಹ್ಮಸೂತ್ರವೇ ಆಗಿದೆ. ಹೀಗೆ ವಿಷಯ ಪ್ರಯೋಜನ ಸಂಬಂಧ ಅಧಿಕಾರಿಗಳು ಇರುವುದರಿಂದ ಈ ಶಾಸ್ತ್ರವು ಆರಂಭಣೀಯವೇ ಆಗಿದೆ. ಈ ಶಾಸ್ತ್ರವನ್ನು ಶ್ರೀವೇದವ್ಯಾಸರು ರಚಿಸಿರುವುದೂ ನ್ಯಾಯವಾಗಿದೆ. ಇದು ವ್ಯಾಖ್ಯಾನಿಸಲು ಅಧ್ಯಯನ ಮಾಡಲು ಅರ್ಹವಾಗಿದೆ. ಹೀಗೆ ಸೂತ್ರಕ್ಕೆ ವ್ಯಾಖ್ಯಾನ ಮಾಡಲು ಹೊರಟಿರುವ ಯಾರೇ ಆಗಲಿ ಸೂಚಕವಾದ ಸೂತ್ರದಲ್ಲಿ ಸೂಚಿತವಾದ ವಿಷಯಪ್ರಯೋಜನಾದಿಗಳನ್ನು ಸ್ವೀಕರಿಸಬೇಕು, ಸೂತ್ರದಲ್ಲಿ ಅಸೂಚಿತವಾದ ವಿಷಯವನ್ನು ತಂದು ವಿವಾದ ಮಾಡಬಾರದು. ಸೂತ್ರದಲ್ಲಿ ಅಸೂಚಿತವಾದ ವಿಷಯವನ್ನು ತಂದು ನಿರ್ಣಯ ಮಾಡಲೂಬಾರದು. ಇದು ಸರಳವಾದ ದಾರಿ. ಇದನ್ನು ಬಿಟ್ಟು ವಕ್ರವಾದ ದಾರಿಯನ್ನು ಹಿಡಿದು ಪರಸ್ಪರ ವಿವಾದ ಮಾಡುವ ನೀವೆಲ್ಲರೂ

ಭ್ರಾಂತರೇ ಸರಿ' ಎಂದು ಶ್ರೀಗುರುರಾಘವೇಂದ್ರತೀರ್ಥರು ನ್ಯಾಯಾಧೀಶರಂತೆ ನಿರ್ಣಾಯಕವಾದ ವಚನೋಪನ್ಯಾಸವನ್ನು ಮಾಡಿದಾಗ ಅಲ್ಲಿದ್ದ ಪಂಡಿತರೆಲ್ಲರೂ ಶ್ರೀಗುರುವರ್ಯರ ಮಾತನ್ನು ಶಿರಸಾ ವಹಿಸಿ ಸ್ವೀಕರಿಸಿದರು.

**ಮಧ್ಯಾಹ್ನ ವರ್ಣನೆ —** ಹೀಗೆ ಪ್ರಾತಃಕಾಲ ಪ್ರಾರಂಭವಾದ ಪ್ರವಚನವು ಮಧ್ಯಾಹ್ನದವರೆಗೂ ನಡೆಯಿತು. ಆಗ ಸಮಯವನ್ನು ಸೂಚಿಸುವ ಗುರುಗಳ ಭಕ್ತನಾದ ಸೇವಕನೊಬ್ಬನು ಕಾವ್ಯಸರಣಿಯಿಂದ ಈ ರೀತಿ ವರ್ಣಿಸಲಾರಂಭಿಸಿದನು.

'ಶ್ರೀ ಗುರುವರ್ಯರೇ ! ನಿನ್ನೆ ಸಾಯಂಕಾಲ ಅಂಧಕಾರವು (ಕತ್ತಲೆಯು) ಆಲೋಕವನ್ನು (ಬೆಳಕನ್ನು) ಆಕ್ರಮಿಸಿ ಕೊಂದುಹಾಕಿತು. ಈ ದಿನ ಬೆಳಿಗ್ಗೆ ನಿನ್ನೆಯ ಕಾರ್ಯಕ್ಕೆ ಪ್ರತೀಕಾರವಾಗಿಯೋ ಎಂಬಂತೆ ಆಲೋಕದಿಂದ (ಪ್ರಕಾಶದಿಂದ) ಅಂಧಕಾರವು ಕೊಲ್ಲಲ್ಪಟ್ಟಿದೆ. ಹೀಗೆ ನಿನ್ನೆ ಸಾಯಂಕಾಲ ಆಲೋಕಕ್ಕೆ ಆದ ಗತಿಯು ಈ ದಿನ ಬೆಳಿಗ್ಗೆ ಅಂಧಕಾರಕ್ಕೆ ಆಗಿದೆ. ಹೀಗೆ ನಾಶವಾದ ಅಂಧಕಾರವು ಆಯಾ ವಸ್ತುವಿನ ನೆರಳಿನ ರೂಪದಿಂದ ಪುನಃ ಪ್ರಕಟವಾಗಿ ನನ್ನನ್ನು ಪ್ರಕಾಶವು ಪುನಃ ಹೊಡೆದು ನಾಶ ಮಾಡದಿರುವಂತೆ ಅಭಯ ಕೊಡಿರಿ ಎಂದು ಆಯಾ ವಸ್ತುಗಳ ಪಾದದ ಬುಡವನ್ನು ಗಟ್ಟಿಯಾಗಿ ಹಿಡಿದುಕೊಂಡು ಶರಣಾಗತವಾಗಿದೆ. ಸೂರ್ಯನು ತಾನು ಅಂಧಕಾರವನ್ನೆಲ್ಲಾ ನಾಶ ಮಾಡಿದ್ದರೂ ಛಾಯಾರೂಪದಿಂದ (ನೆರಳಿನ ರೂಪದಿಂದ) ಇರುವ ಅಂಧಕಾರವನ್ನು ನಾಶಮಾಡಲಾರದೆ "ಇಷ್ಟೊಂದು ಪ್ರತಾಪವುಳ್ಳ ಕಿರಣಗಳಿಂದಲೂ ನಾನು ಈ ಅಂಧಕಾರವನ್ನು ಸಂಪೂರ್ಣವಾಗಿ ನಾಶ ಮಾಡಲಾರದೆ ಹೋದೆನಲ್ಲಾ, ಈ ಅಂಧಕಾರವು ಈಗ ನೆರಳಿನ ರೂಪವನ್ನು ತಾಳಿ ಆಯಾ ವಸ್ತುಗಳ ಪಾದಗಳ ತಳದಲ್ಲಿಯೇ ಅಡಗಿದೆ. ಇದನ್ನು ನಾಶಮಾಡಲು ಸಾಧ್ಯವಿಲ್ಲವಲ್ಲಾ, ಛೀ, ನನಗೆ ಧಿಕ್ಕಾರವಿರಲಿ" ಎಂದು ತಾನೇ ಮನಸ್ಸಿನಲ್ಲಿ ಹಲುಬುತ್ತಾ ವ್ಯಾಕುಲನಾಗಿ ಆಕಾಶದ ಮಧ್ಯಕ್ಕೆ ನಡುನೆತ್ತಿಗೆ ಬಂದು ಅಲ್ಲಿ ಸ್ವಲ್ಪ ವಿಲಂಬವನ್ನು ಮಾಡುತ್ತಾ ಪಶ್ಚಿಮದ ಕಡೆಗೆ ಬಹಳ ಮೆಲ್ಲನೆ ವಾಲುತ್ತಾ ಹೋಗುತ್ತಿದ್ದಾನೆ.

ಎಲೈ ಯತಿವರೇಣ್ಯರೇ ! ಸೂರ್ಯೋದಯವಾದ ಕೂಡಲೇ ಕಮಲವು ಅರಳುತ್ತದೆಯಷ್ಟೇ ; ಹಾಗೆಯೇ ಸೂರ್ಯನು ಮುಳುಗಿದ ಕೂಡಲೇ ಕಮಲವು ಸಂಕುಚಿತವಾಗಿ ಮೊಗ್ಗಾಗುತ್ತದೆಯಷ್ಟೇ. ಇದರಿಂದಾಗಿ ತನ್ನ ಅಭ್ಯುದಯ ಸಮಯದಲ್ಲಿ ಅರಳಿ ಸಂತೋಷಪಡುತ್ತಿರುವ, ತನ್ನ ಆಪತ್ತಿನ ಸಮಯದಲ್ಲಿ ಮೊಗ್ಗಾಗಿ (ಸಂಕುಚಿತವಾಗಿ) ವಿಷದಪಡುತ್ತಿರುವ ಕಮಲದಲ್ಲಿಯೂ, ಆ ಕಮಲಗಳ ಕಾಡಿನಂತಿರುವ ಕಮಲಿನಿಯಲ್ಲಿಯೂ ಸೂರ್ಯನಿಗೆ 'ತನ್ನ ಹಿತೈಷಿಣಿಯು ಈ ಪದ್ಮನಿಯು' ಎಂದು ಬಹಳವಾಗಿ ಸ್ನೇಹವು ಹೆಚ್ಚಿತು. ಇಂತಹ ಕಮಲವನ್ನು ನಾರಿಯರು ತಮ್ಮ ಮುಖಾಂಭೋಜವಿದು ಎಂದು ತಮ್ಮ ನೇತ್ರಕಮಲವಿದು ಎಂದು ಭಾವಿಸಿ, ವರ್ಣನೆಯನ್ನು ಕೇಳಿ ಸಂತೋಷಪಟ್ಟರು. 'ನನ್ನ ಪ್ರೀತಿಪಾತ್ರವಾದ ಕಮಲವನ್ನು ಈ ಸುಂದರಿಯರು ತಮ್ಮ ಮುಖವು ಕಮಲ, ತಮ್ಮ ನೇತ್ರವು ಕಮಲ ಎಂದು ಹೇಳಿದುದು ಅಕ್ಷಮ್ಯ ಅಪರಾಧವು, ಆದ್ದರಿಂದ ಇವರನ್ನು ದಂಡಿಸಬೇಕು' ಎಂದು ಸೂರ್ಯನು ನಿಶ್ಚಯಿಸಿದನು. ಆದ್ದರಿಂದ ಈಗ ಅವರ ಮುಖಕಮಲವನ್ನು, ನೇತ್ರನಳಿನಯುಗಳವನ್ನು (ಎರಡು ಕಣ್ಣುಗಳನ್ನೂ ಸೂರ್ಯನು ಬಾಡಿಸುತ್ತಿದ್ದಾನೆ. ಮಧ್ಯಾಹ್ನದ ಅನಂತರ ಸ್ತ್ರೀಯರ ಮುಖ ಕಣ್ಣುಗಳು ಬಾಡಿ-ಹೋಗುತ್ತಿವೆ.) ಆದಿರಲಿ. ಮೀನುಗಳು ಯೋಚಿಸುತ್ತಿವೆ. 'ಈ ಸುಂದರಿಯರ ಕಣ್ಣುಗಳು (ನಮ್ಮಂತಿವೆ.) ಸುಂದರಿಯರ ಮೇಲಿನ ದ್ವೇಷ ಅವರ ಕಣ್ಣುಗಳಂತಿರುವ ನಮ್ಮ ಮೇಲೂ ಸೂರ್ಯನಿಗೆ ದ್ವೇಷವುಂಟಾಗಿದೆ. ಆದ್ದರಿಂದ ಅವನು ನಮ್ಮನ್ನು ಪೀಡಿಸುತ್ತಿದ್ದಾನೆ. ಎಲೈ ಪದ್ಮಿನಿಯೇ ! ನಾವು ನಿರಪರಾಧಿಗಳು. ನಾವು ಸುಂದರಿಯರ ಕಣ್ಣುಗಳಂತಿರುವುದು ನಮ್ಮ ತಪ್ಪೇ ? ನಿನಗೆ ಸೂರ್ಯನು ಮಿತ್ರನು, ಬಹಳ ಬೇಕಾದವನು, ಪದ್ಮಿನೀವಲ್ಲಭನೆಂದೇ ಅವನಿಗೆ ಹೆಸರಿದೆ. ಅವನನ್ನು ಸಮಾಧಾನಪಡಿಸಿ ನಮ್ಮ ಮೇಲೆ ದ್ವೇಷ ಸಾಧಿಸದಂತೆ ಮಾಡು' ಎಂದು

ಪ್ರಾರ್ಥಿಸುತ್ತವೆಯೋ ಎಂಬಂತೆ ಮೀನುಗಳು ಕಮಲಿನಿಯ ಪಾದದ ಬುಡವನ್ನು ಆಶ್ರಯಿಸಿದವು. (ಮಧ್ಯಾಹ್ನ ಬಿಸಿಲಿಗೆ ಮೀನುಗಳು ಕಮಲಗಳ ಬುಡವನ್ನು ಆಶ್ರಯಿಸುತ್ತವೆ.)

**ಮಾಧ್ಯಾಹ್ನಿಕ ವಿಧಿ —** ಹೀಗೆ ಸಮಯವನ್ನು ತಿಳಿಸುವ ಪುರುಷನು ಕಾವ್ಯಶೈಲಿಯಿಂದ ಈಗ ಗುರುಗಳ ಮಾಧ್ಯಾಹ್ನಿಕ ಸ್ನಾನದ ಸಮಯವು ಸಮೀಪಿಸಿದೆ ಎಂದು ಸೂಚಿಸಿದಾಗ ಶ್ರೀಗುರುರಾಘವೇಂದ್ರರು ಮೆಲ್ಲನೆ ಮೇಲೆದ್ದರು. ಸನ್ಯಾಸಿಶ್ರೇಷ್ಠರೂ ಮಹಾಕೀರ್ತಿಶಾಲಿಗಳೂ ವಿದ್ವಜ್ಜನವರೇಣ್ಯರಿಂದಲೂ ಮಾನ್ಯರೂ ಆದ ಗುರುವರೇಣ್ಯರು ಅಲ್ಲಿಂದ ಎದ್ದು ಮಠ ಸಮೀಪದಲ್ಲಿಯೇ ಇರುವ ಪುಷ್ಕರಿಣಿಯಲ್ಲಿ ಸ್ನಾನಮಾಡಿ ಪೂಜಾಗೃಹಕ್ಕೆ ಬಂದರು. ಸರಳತೆಯ ಸಾಕಾರಮೂರ್ತಿಗಳಾದ ಗುರುವರ್ಯರು ಡಾಂಭಿಕತನವನ್ನು ಸ್ವಲ್ಪವೂ ಸಹಿಸುತ್ತಿರಲಿಲ್ಲ. ಅವರು ಪರಮ ಭಕ್ತಿಯಿಂದ ವಿನಮ್ರರಾಗಿ ತಾವು ಪೂಜಿಸುವ ದೇವತಾಪ್ರತಿಮೆಗಳನ್ನೆಲ್ಲಾ ತೆಗೆದು ಇಟ್ಟುಕೊಂಡರು. ಅವರು ಕಲಶಗಳಲ್ಲಿ ಜಲವನ್ನು ತುಂಬಿಸಿದರು. ಕಮಲ ಮೊದಲಾದ ಹೂವುಗಳಿಂದ ಕಲಶಗಳನ್ನು ಪೂಜಿಸಿದರು. ಮಾತೃಕಾ ದೇವತೆಗಳನ್ನೂ, ತತ್ತ್ವಾಭಿಮಾನಿ ದೇವತೆಗಳನ್ನೂ, ಪೀಠದೇವತೆಗಳನ್ನೂ, ಆವರಣ ದೇವತೆಗಳನ್ನೂ ಆವಾಹಿಸಿದರು. ಹೀಗೆ ಕಲಶಪೂಜೆಯನ್ನು ಮುಗಿಸಿದರು. ಅಭಿಮಂತ್ರಿತವಾದ ಕಲಶಗಳ ಜಲದಿಂದ ಶಾಲಗ್ರಾಮಗಳನ್ನೂ ಶ್ರೀಮೂಲರಾಮಚಂದ್ರನ ಮೂರ್ತಿಯನ್ನೂ ಅಭಿಷೇಕಿಸಿ ಬಹಳ ಸುಂದರವಾದ ಹೊಸದಾದ ಹೂವುಗಳಿಂದಲೂ, ರತ್ನಗಳಿಂದಲೂ, ಶ್ರೀರಾಮಚಂದ್ರನಿಗೆ ಅರ್ಘ್ಯ ಆಚಮನ ಮುಂತಾದ ಷೋಡಶೋಪಚಾರ ಪೂಜೆಯನ್ನು ಮಾಡಿದರು. ಪೂಜೆ ಆದ ಮೇಲೆ ಅಶ್ವಮೇಧಯಾಗದ ಪುಣ್ಯವನ್ನು ಕೊಡುವ ಶಂಖೋದಕವನ್ನು ಶಿರಸ್ಸಿನಲ್ಲಿ ಧರಿಸಿ ಪ್ರೋಕ್ಷಿಸಿಕೊಂಡು, ರಾಜಸೂಯಯಾಗದ ಫಲಕ್ಕಿಂತಲೂ ಹೆಚ್ಚು ಫಲವನ್ನು ಕೊಡುವ ವಿಷ್ಣು-ಪಾದೋದಕವನ್ನು ಪಾನ ಮಾಡಿದರು. ಕಾವೇರೀ ಜಲವು ಒಂದೇ ಸ್ವತಃ ಪಾಪಪರಿಹಾರಕವಾಗುತ್ತದೆ. ಆ ಜಲವೇ ಅಭಿಷೇಕ ಮಾಡಿದಾಗ ವಿಷ್ಣುಪಾದಗಳ ಸಂಪರ್ಕವನ್ನು ಹೊಂದಿ ಧರ್ಮಾರ್ಥಕಾಮಮೋಕ್ಷಗಳೆಂಬ ನಾಲ್ಕು ಪುರುಷಾರ್ಥಗಳನ್ನು ಕೊಡಲು ಸಮರ್ಥವಾಗುತ್ತದೆ ಎಂದು ಹೇಳಬೇಕಾಗಿಯೇ ಇಲ್ಲ. ಇಂತಹ ತೀರ್ಥವನ್ನು ಶ್ರೀಗುರುಗಳು ಸ್ವೀಕರಿಸಿದರು. ಹೀಗೆ ತೀರ್ಥಸ್ವೀಕಾರ ಮಾಡಿದ ಮೇಲೆ ಶ್ರೀರಾಘವೇಂದ್ರತೀರ್ಥರು ಶ್ರೀಹರಿಯನ್ನು ನಮಸ್ಕರಿಸಿ ಭಿಕ್ಷೆಗಾಗಿ ಸಜ್ಜುಗೊಳಿಸಿದ ಹರಿಗೆ ನಿವೇದಿತವಾದ ಪವಿತ್ರವಾದ ಅನ್ನವನ್ನು ಸ್ವೀಕರಿಸಿದರು. ಅನಂತರ ಸಾಯಂಕಾಲದವರೆಗೂ ಬೇರೆ ಬೇರೆ ದೇಶಗಳಿಂದ ಬಂದಿರುವ ತುಂಬಾ ಜ್ಞಾನಿಗಳಾದ ಪಂಡಿತರೊಡನೆ ತರ್ಕವ್ಯಾಕರಣಾದಿ ಶಾಸ್ತ್ರಗಳನ್ನು ಚರ್ಚಿಸುತ್ತಾ, ಶಾಸ್ತ್ರಾರ್ಥವಿನೋದವನ್ನು ಮಾಡುತ್ತಾ ಶ್ರೀಹರಿಯನ್ನು ಧ್ಯಾನಿಸುತ್ತಾ ಕಾಲವನ್ನು ಕಳೆದರು.

★ ★ ★

ವಿದ್ವತ್ಕುಲಾವತಂಸ,
ಮಹಾಕವಿ ಶ್ರೀಮನ್ನಾರಾಯಣಾಚಾರ್ಯೇಣ ರಚಿತಂ

# ಶ್ರೀಮದ್ರಾಘವೇಂದ್ರವಿಜಯ ಮಹಾಕಾವ್ಯಂ

## ದಶಮ ಸರ್ಗ

**ಅವತಾರಿಕೆ :** ಈ ಸರ್ಗದಲ್ಲಿ ಕವಿಗಳು ಮೊದಲು ಸಂಧ್ಯಾಕಾಲದಲ್ಲಿ ಚಂದ್ರೋದಯದ ವರ್ಣನೆ ಮಾಡುತ್ತಾರೆ. ಅನಂತರದಲ್ಲಿ ಯತಿ ಸಾರ್ವಭೌಮರಾದ ಶ್ರೀರಾಘವೇಂದ್ರತೀರ್ಥರ ಸ್ನಾನ, ಅರ್ಘ್ಯಪ್ರದಾನ, ಮಂತ್ರಜಪ, ದೇವರಿಗೆ ಮಂಗಳಾರತಿ ಮಾಡುವುದು, ಮಂತ್ರಪುಷ್ಪ ಸಮರ್ಪಣಗಳನ್ನು ವರ್ಣಿಸುತ್ತಾರೆ. ಅದೇ ಸಂದರ್ಭದಲ್ಲಿ ಶ್ರೀರಾಘವೇಂದ್ರ ಗುರುಗಳು ಮಾಡಿದ ದಶಾವತಾರಗಳ ವರ್ಣನೆಯನ್ನೂ ತಿಳಿಸುತ್ತಾರೆ. ತದನಂತರದಲ್ಲಿ ಶ್ರೀಗುರು ರಾಘವೇಂದ್ರರ ಸಭಾ ಪ್ರವೇಶ, ನಂತರ ಶ್ರೀರಾಯರಿಗೆ ಮಂಗಳಾರತಿ, ಛತ್ರ ಚಾಮರ ವಾದ್ಯಾದಿ ಸೇವೆ, ಶ್ರೀಗುರುರಾಜರ ಮುಂದೆ ಕಾವ್ಯ ಸಮಸ್ಯಾಪೂರಣ ಇವುಗಳನ್ನು ವರ್ಣಿಸುತ್ತಾರೆ. ಮೊದಲು ಚಂದ್ರೋದಯದ ವರ್ಣನೆಯಿಂದ ಪ್ರಾರಂಭಿಸುತ್ತಾರೆ.

**ಉತ್ತರಾಮುಖತಯಾ ವಲಮಾನೇ ಸಾಯಮರ್ಯಮರಥೇऽಭಿಸುಮೇರು ।**
**ತನ್ಮುಖೋಲ್ಲಸಿತಸಾರಥಿಭಾಸಾ ಪಾಟಲಾ ಸ್ಫುರತಿ ಪಾಶಭೃದಾಶಾ ॥೧॥**

**ತಾತ್ಪರ್ಯ :** ಸಾಯಂಕಾಲವಾಗುತ್ತಾ ಬಂತು, ಸೂರ್ಯನ ರಥವು ಉತ್ತರಾಭಿಮುಖವಾಗಿ ಅರ್ಧ ವಾಲುತ್ತಾ ಮೇರು ಪರ್ವತದ ಕಡೆ ಹೋಗುತ್ತಿತ್ತು. ಸೂರ್ಯನ ರಥದ ಮುಂಭಾಗದಲ್ಲಿ ಅರುಣನು ಸಾರಥಿಯಾಗಿ ರಥವನ್ನು ನಡೆಸುತ್ತಿದ್ದನು. ಗರುಡನ ಅಣ್ಣನಾದ, ಅರುಣವರ್ಣದ ಅರುಣನ ಕಾಂತಿಯು ಎಲ್ಲೆಡೆ ಹರಡಿತ್ತು. ಈ ಕಾಂತಿಯು ಪಶ್ಚಿಮದಲ್ಲಿ ವಿಶೇಷವಾದ ಶೋಭೆಯನ್ನುಂಟುಮಾಡುತ್ತಿತ್ತು. ಸಂಜೆಗೆಂಪಿನಿಂದ ಪಶ್ಚಿಮದಿಕ್ಕು ಸುಂದರವಾಗಿ ಕಾಣುತ್ತಿತ್ತು.

**ವಿಶೇಷಾಂಶ : ಸರ್ವೇಷಾಮೇವ ವರ್ಷಾನಾಂ ಮೇರುತ್ತುರತಃ ಸ್ಥಿತಃ ।** (ಎಲ್ಲ ವರ್ಷಗಳಿಗೂ ದೇಶಗಳಿಗೂ) ಉತ್ತರದಲ್ಲಿ ಮೇರು ಪರ್ವತವಿದೆ ಎಂಬ ಪ್ರಮಾಣದ ಅನುಸಾರವಾಗಿ ಭಾಗವತಾದಿ ಶಾಸ್ತ್ರಗಳಲ್ಲಿ ಹೇಳಿರುವಂತೆ ಮೇರುವು ಭೂಮಂಡಲದಲ್ಲಿರುವ ಸಕಲ

ದೇಶಗಳಿಗಿಂತಲೂ ಉತ್ತರದಲ್ಲಿದೆ ಎಂದು ಪ್ರಸಿದ್ಧವಾಗಿದೆ. ಸೂರ್ಯಾಸ್ತಮಯ ಸಮಯದಲ್ಲಿ ಮೇರುಪರ್ವತದ ಜನರ ಕಣ್ಣಿಗೆ ಕಾಣುವ ಪ್ರದೇಶಕ್ಕಿಂತ ಬೇರೆಯಾದ ಮೇರುಪರ್ವತದ ಆಚೆಯ ಪ್ರದೇಶವನ್ನು ಕುರಿತು ಸೂರ್ಯನು ಹೋಗುತ್ತಾನೆ ಎಂಬುದೂ ಶಾಸ್ತ್ರ ಸಿದ್ಧವಾಗಿದೆ. ಆದುದರಿಂದ ಮಧ್ಯಾಹ್ನಾನಂತರದಲ್ಲಿ ಎಲ್ಲಾ ದೇಶಗಳಿಗಿಂತಲೂ ಉತ್ತರ ಪ್ರದೇಶದಲ್ಲಿರುವ ಮೇರುವಿನ ಕಡೆಗೆ ಸೂರ್ಯನು ಹೋಗುತ್ತಾನೆ. ಆಗ ಅದು ಉತ್ತರ ದಿಕ್ಕಿಗೆ ಅಭಿಮುಖವಾಗಿರುವ ಗಮನವಾಗಿರುವುದು ಯುಕ್ತವೇ ಆಗಿರುತ್ತದೆ. ಮಧ್ಯಾಹ್ನದ ಅನಂತರದಲ್ಲಿ ಸೂರ್ಯನು ಪಶ್ಚಿಮ ದಿಕ್ಕಿಗೆ ಅಭಿಮುಖವಾಗಿ ಹೋಗುತ್ತಾನೆಂಬುದು ಪ್ರತ್ಯಕ್ಷಾದಿ ಪ್ರಮಾಣದಿಂದ ಸಿದ್ಧವಾಗಿದ್ದರೂ ಶಾಸ್ತ್ರದಿಂದ ಸೂರ್ಯನು ಉತ್ತರದಿಕ್ಕಿನ ಕಡೆಗೆ ಹೋಗುತ್ತಾನೆಂಬುದು ಎಲ್ಲರೂ ಒಪ್ಪತಕ್ಕ ವಿಷಯವಾದುದರಿಂದ ಈ ಶ್ಲೋಕದಲ್ಲಿ ಉತ್ತರಾಭಿಮುಖವಾಗಿ ಸೂರ್ಯನ ಚಲನವಲನವಿದೆಯೆಂದು ಕವಿವರ್ಯರು ಹೇಳಿದುದು ಸರಿಯಾಗಿಯೇ ಇದೆಯೆಂದು ತಿಳಿಯಬೇಕು. ಇಲ್ಲಿ ಕವಿಗಳ ಮಾತಿನಲ್ಲಿ ಸಂದೇಹವನ್ನು ವ್ಯಕ್ತಪಡಿಸಲು ಅವಕಾಶವಿಲ್ಲ.

**ಅವತಾರಿಕೆ :** ಸಾಯಂಕಾಲ ಸೂರ್ಯಾಸ್ತಮಾನಕ್ಕೆ ಮುಂಚಿನ ಕಾಲವು ಹೇಗಿತ್ತು ಎಂಬುದನ್ನು ಕವಿಗಳು ಈಗ ವರ್ಣಿಸುತ್ತಾರೆ.

**ಸಾಯಮಂತಿಕಚರನ್ಮುನಿಪಾಲೀಗೀತಸಾಮನಿನದೇನ ಶತಾಂಗೇ ।**
**ವಿದ್ರುತಾರುಣಮಣೀಜಲಸೇಕಾಲ್ಲೋಹಿತಾಯತಿ ಸರೋರುಹಬಂಧುಃ ॥೨॥**

**ತಾತ್ಪರ್ಯ :** ಸೂರ್ಯನ ರಥದ ಸಮೀಪದಲ್ಲಿ ವಾಲಖಿಲ್ಯರೆಂಬ ಅರವತ್ತುಸಾವಿರ ಋಷಿಗಳು ಸಂಚರಿಸುತ್ತಾ ಇರುತ್ತಾರೆ. ಅವರುಗಳು ಸಾಯಂಕಾಲವಾದ ಕೂಡಲೇ ಸಾಮವೇದದ ಋಕ್ಕುಗಳನ್ನು ಗಾನ ಮಾಡುತ್ತಾ ರತ್ನಸಹಿತವಾದ ಬೊಗಸೆಯ ನೀರಿನಿಂದ ಸೂರ್ಯನಿಗೆ ಅರ್ಘ್ಯವನ್ನು ಕೊಡುತ್ತಾರೆ. ಅವರ ಸಾಮಗಾನ ಮಾಧುರ್ಯದಿಂದ ಅವರ ಕೈಯಲ್ಲಿದ್ದ ರತ್ನಗಳೂ ದ್ರವೀಭೂತವಾಗಿ ನೀರು ಕೆಂಪಾಗುತ್ತದೆ. ಅಂತಹಾ ಕೆಂಪಗಾದ ನೀರನ್ನು ಸೂರ್ಯನ ರಥದ ಮೇಲೂ, ಸೂರ್ಯನ ಮೇಲೂ ಅರ್ಘ್ಯಪ್ರಧಾನ ಮಾಡಿ ಎರಚಿದಾಗ ಸಾಯಂಕಾಲದ ಸೂರ್ಯನು ಕೆಂಪಾಗಿ ಕಾಣಿಸುತ್ತಾನೆ ಎಂದು ತಾತ್ಪರ್ಯ.

ಸೂರ್ಯದೇವನು ಸಾಯಂಸಮಯದಲ್ಲಿ ಸ್ವಾಭಾವಿಕವಾಗಿಯೇ ಕೆಂಪಾಗಿ ಕಾಣಿಸುತ್ತಿದ್ದರೂ, ವಾಲಖಿಲ್ಯ ಋಷಿಗಳ ಸಾಮಗಾನದಿಂದ ಕರಗಿದ ಕೆಂಪು ರತ್ನಗಳ ನೀರಿನ ಅಭಿಷೇಕದಿಂದ ಸೂರ್ಯನು ಕೆಂಪಾಗಿ ಕಾಣಿಸುತ್ತಿದ್ದಾನೆ ಎಂಬುದಾಗಿ ಉತ್ಪ್ರೇಕ್ಷಿಸುವುದರಿಂದ ಇಲ್ಲಿ ಉತ್ಪ್ರೇಕ್ಷಾಲಂಕಾರ! ಇಲ್ಲಿ ಉತ್ಪ್ರೇಕ್ಷಾವ್ಯಂಜಕವಾದ ಇವಶಬ್ದಾದಿಗಳು ಇಲ್ಲದುದರಿಂದ ಗಮ್ಯೋತ್ಪ್ರೇಕ್ಷಾಲಂಕಾರ. (ಗಾನಮಾಧುರ್ಯದಿಂದ ರತ್ನಗಳೂ ಕರಗುತ್ತವೆಯೆಂದು ಸಂಗೀತಶಾಸ್ತ್ರ ಪ್ರಸಿದ್ಧಿಯೂ, ಕವಿಸಮಯವೂ ಇದೆ.)

**ವಿಶೇಷಾಂಶ :** ವಾಲಖಿಲ್ಯರು – ಇವರು ಸ್ವಾಯಂಭುವ ಮನ್ವಂತರದಲ್ಲಿ ಕ್ರತು ಎಂಬ

ಮಹರ್ಷಿಯಿಂದ ಕ್ರಿಯಾದೇವಿಯವರಲ್ಲಿ ಹುಟ್ಟಿದ ಮಹರ್ಷಿಗಳು. ಇವರುಗಳ ಸಂಖ್ಯೆ ಅರವತ್ತುಸಾವಿರ. ಇವರು ರೂಪದಲ್ಲಿ ಬಹಳ ಚಿಕ್ಕವರು. ಒಮ್ಮೆ ಕಶ್ಯಪ ಮುನಿಗಳು ನೆರವೇರಿಸಿದ ಯಜ್ಞದಲ್ಲಿ ಸಹಾಯ ಮಾಡಿ ಇವರುಗಳು ತುಂಬಾ ಆಯಾಸಗೊಂಡಿದ್ದರು. ಆಗ ಇಂದ್ರನು ಇವರುಗಳನ್ನು ಪರಿಹಾಸ ಮಾಡಲಾಗಿ ಕೋಪಗೊಂಡ ವಾಲಖಿಲ್ಯರು ಕಶ್ಯಪಮುನಿಗಳ ಮಗನಾದ ಗರುಡನು ನಿನ್ನ ಗರ್ವವನ್ನು ಮುರಿಯುವನೆಂದು ಶಾಪವಿತ್ತರು. ಮತ್ತು ಗರುಡನ ಉತ್ಪತ್ತಿಗಾಗಿ ತಪಸ್ಸು ಮಾಡಿದರು. ಇವರುಗಳು ಪ್ರತಿನಿತ್ಯವು ಸೂರ್ಯನ ರಥಕ್ಕೆ ಎದುರಾಗಿ ಸಂಚರಿಸುತ್ತಾ, ಸೂರ್ಯನ ರಥದ ಸಂಚಾರಕ್ಕೆ ಪ್ರತಿಬಂಧಕರಾದ ಮಂದೇಹಾರುಣ ಎಂಬ ರಾಕ್ಷಸರ ಸಂಹಾರಕ್ಕಾಗಿ ಉಷಃಕಾಲದಲ್ಲಿಯೇ ಅರ್ಘ್ಯಪ್ರದಾನ ಮಾಡುತ್ತಾರೆ. ಈ ಅರ್ಘ್ಯಜಲವು ವಜ್ರವಾಗಿ ಮಂದೇಹಾರುಣರನ್ನು ಕೊಲ್ಲುತ್ತದೆ ಎಂಬ ಪುರಾಣ ಕಥೆಯಿದೆ.

**ಅವತಾರಿಕೆ :** ಈಗ ಕವಿಗಳು ಸಂಧ್ಯಾಸಮಯದಲ್ಲಿ ಸೂರ್ಯಭಗವಾನನು ಅರುಣವರ್ಣದಿಂದ ವಿರಾಜಿಸುತ್ತಿರುವುದನ್ನು ವರ್ಣಿಸುತ್ತಾರೆ.

**ನಿರ್ಧೂತಾಖಿಲತಮಾ ನಿಜಜನ್ಮಾರಭ್ಯವಿಷ್ಣುಪದಸೇವನಶೀಲಃ ।**
**ಸ್ವಸ್ವರೂಪಮಗಮತ್ ಪರಮಾವಿರ್ಭೂತಮೇಷ ಮಿಹಿರೋऽರುಣಭಾವಮ್ ॥೩॥**

**ತಾತ್ಪರ್ಯ :** ಸೂರ್ಯನು ಉದಯಿಸುತ್ತಿರುವಾಗಲೇ ಕತ್ತಲೆಯನ್ನೆಲ್ಲಾ ಎತ್ತಲೋ ಓಡಿಸಿದನು. ಅವನು ಯಾವಾಗಲೂ ವಿಷ್ಣುಪದವೆಂಬ ಹೆಸರುಳ್ಳ ಆಕಾಶವನ್ನು ಆಶ್ರಯಿಸಿಯೇ ಇರುತ್ತಿದ್ದನು. ಇಂದು ಸೂರ್ಯದೇವನು ತನ್ನ ಸ್ವರೂಪಭೂತವಾದ ಶ್ರೇಷ್ಠವಾದ ಅರುಣವರ್ಣವು ಆವಿರ್ಭವಿಸಿದಾಗ ಚೆನ್ನಾಗಿಯೇ ಪ್ರಕಾಶಿಸಿದನು. ತನ್ನ ಸ್ವರೂಪವಾಗಿರುವ ಸೂರ್ಯತ್ವವನ್ನು ಸಂಧ್ಯಾಸಮಯದಲ್ಲಿ ಹೊಂದಿದನು. (ಹಗಲಿನ ವೇಳೆಯಲ್ಲಿ ಸೂರ್ಯದೇವನ ಅರುಣವರ್ಣ, ಸೂರ್ಯತ್ವಗಳು ಪ್ರಕಾಶವಾಗಲಿಲ್ಲ.)

ಒಬ್ಬ ಬ್ರಹ್ಮಜ್ಞಾನಿಯು ಪರಮಾತ್ಮನ ಸಾಕ್ಷಾತ್ಕಾರವನ್ನು ಪಡೆದು ಅದರ ಸಾಮರ್ಥ್ಯದಿಂದ ತನ್ನ ಅಜ್ಞಾನವನ್ನೆಲ್ಲಾ ಪರಿಹರಿಸಿಕೊಳ್ಳುತ್ತಾನೆ. ತನ್ನ ಜನ್ಮ ಮೊದಲ್ಗೊಂಡು ವಿಷ್ಣುವಿನ ಪಾದವನ್ನು ಸೇವಿಸುವ ಸ್ವಭಾವವುಳ್ಳ ಅವನು ಮುಂದೆ ಯಾವಾಗಲೂ (ಮುಕ್ತಿಯಲ್ಲಿ) ವಿಷ್ಣುಪದವನ್ನು (ಶ್ರೀಹರಿಯ ಪಾದವನ್ನು) ಸೇವಿಸುತ್ತಲೇ ಇರುತ್ತಾನೆ. ಕೊನೆಗೆ ಅವನು ಲಿಂಗದೇಹ ಭಂಗವನ್ನು ಹೊಂದಿ, ಎಲ್ಲಾ ಅನಿಷ್ಟಗಳನ್ನೂ ಕಳೆದುಕೊಂಡು ಸ್ವಸ್ವರೂಪಾನಂದಾವಿರ್ಭಾವರೂಪವಾದ ಮೋಕ್ಷವನ್ನು ಪಡೆಯುತ್ತಾನೆ. ಸೂರ್ಯದೇವನೂ ಇದರಂತೆಯೇ ಇದ್ದಾನೆ ಎಂದು ತಾತ್ಪರ್ಯ. ಈ ಎರಡನೇ ಅರ್ಥವು ಧ್ವನಿಯಿಂದ ತಿಳಿದುಬರುತ್ತದೆ.

**ಅವತಾರಿಕೆ :** ಸೂರ್ಯದೇವನು ಸಂಧ್ಯಾಸಮಯದಲ್ಲಿ ಅಸ್ತಾಚಲವನ್ನು ಸೇರಿದ ಸನ್ನಿವೇಶವನ್ನು ಕವಿಗಳು ವರ್ಣಿಸುತ್ತಾರೆ.

**ರಾಗಿಣಂ ಸ್ವಮವಲೋಕ್ಯ ನಿಕಾಮಂ ರಾಗಿಣಾಂ ಚ**
**ವಿಷಮಾಂ ಗತಿಮೀಕ್ಷ್ಯಃ (ಈಕ್ಷ್ಯ) ।**
**ವಸ್ತುಮಾಪದಪರಾಗಸಮೀಪಂ ಮಂದಮಂದಮರವಿಂದಕುಟುಂಬೀ ॥೪॥**

**ತಾತ್ಪರ್ಯ :** ಸೂರ್ಯದೇವನು ಕಮಲಗಳ ಪೋಷಕನು. ಅವನು ತಾನು ಸ್ವತಃ ಕಮಲಿನಿಯಲ್ಲಿ ರಾಗವುಳ್ಳವನಾಗಿದ್ದು (ಅನುರಾಗವುಳ್ಳವನಾಗಿ ಮತ್ತು ಕೆಂಪುಬಣ್ಣವುಳ್ಳವನಾಗಿ) ಲೋಕದಲ್ಲಿ ವಿಷಯಾನುರಾಗವುಳ್ಳವರಿಗೆ ಆಗುವ ಕಷ್ಟಕರವಾದ ದುರವಸ್ಥೆಯನ್ನು ಆಲೋಚಿಸಿ ತನಗೆ ಅಂತಹ ದುರವಸ್ಥೆಯು ಬರಬಾರದೆಂದು ಅಪರಾಗ ಸಮೀಪಕ್ಕೆ ಹೋಗಲು ಬಯಸಿದನು. (ಅಪರ–ಆಗ– ಅಸ್ತಾಚಲ, ಅಪರಾಗ–ವಿರಕ್ತಪುರುಷ (ಇದರ) ಇವನ ಸಮೀಪಕ್ಕೆ) ಹೋಗಲು ಬಯಸಿ ಅಸ್ತಾಚಲವನ್ನು ಸಮೀಪಿಸಿದನು. ಲೋಕದಲ್ಲಿ ವಿಷಯಾಸಕ್ತನಾದ ಪುರುಷನು ಅನುರಾಗಿಗಳಿಗೆ ವಿಷಮಾವಸ್ಥೆಯು ಉಂಟಾಗುತ್ತದೆಯೆಂದು ತಿಳಿದು ಪಶ್ಚಾತ್ತಾಪದಿಂದ ವಿರಕ್ತರ ಬಳಿಗೆ ಹೇಗೆ ಹೋಗುತ್ತಾನೋ ಅದೇ ರೀತಿಯಲ್ಲಿ ಈ ಸೂರ್ಯದೇವನೂ ಸಹ ತಾನು ರಾಗಿಯಾದುದರಿಂದ (ರಕ್ತವರ್ಣವುಳ್ಳವನೂ, ಪದ್ಮಿನಿಯ ಅನುರಾಗಿಯೂ ಆದುದರಿಂದ) ರಾಗಿಗಳಿಗೆ (ವಿಷಯಾಸಕ್ತರಿಗೆ) ವಿಷಮಗತಿ ಉಂಟಾಗುತ್ತದೆಯೆಂದು ತಿಳಿದು ಅಪರಾಗದ (ಪಶ್ಚಿಮಗಿರಿಯ ಮತ್ತು ರಾಗವಿಲ್ಲದ ಮನುಷ್ಯನ) ಸಮೀಪಕ್ಕೆ ಹೋದನು ಎಂಬುದಾಗಿ ಭಾವ. ಗಮ್ಯೋತ್ಪ್ರೇಕ್ಷಾಲಂಕಾರ ಮತ್ತು ಸಮಾಸೋಕ್ತಿ ಅಲಂಕಾರಗಳು. (ರೂಪಕದಿಂದ ಉಜ್ಜೀವಿತವಾದ ಸಮಾಸೋಕ್ತಿ ಅಲಂಕಾರವು)

**ಅವತಾರಿಕೆ :** ಸೂರ್ಯದೇವನು ಎರಡನೆಯ ಮದುವೆಯಾಗಲು ಕನ್ಯಾರ್ಥಿಯಾಗಿ ಹೋಗುವವನಂತೆ ಕಾಣಿಸುತ್ತಿದ್ದಾನೆ ಎಂಬುದಾಗಿ ಕವಿಗಳು ವರ್ಣಿಸುತ್ತಾರೆ.

**ವಿಪ್ಲವಂ ವ್ರಜತಿ ಕಾಂತಿಕಲತ್ರೇ ಪದ್ಮಿನೀಮಪರವಾರಿಧಿಜಾತಾಮ್ ।**
**ಉದ್ವಿವಕ್ಷುಹೃದಯೋ ಹರಿದಶ್ವೋ ಯಾಚಿತುಂ ತಮಗಮತ್ತಟಿನೀಶಮ್ ॥೫॥**

**ತಾತ್ಪರ್ಯ :** ಲೋಕದಲ್ಲಿ ಒಬ್ಬಳು ಪತ್ನಿಯು ಮೃತಳಾದರೆ ಆ ವಿಧುರರು ಮತ್ತೊಂದು ಮದುವೆಯಾಗಲು ಇಚ್ಛಿಸಿ ಯಾರಾದರೊಬ್ಬ ಕನ್ಯಾಪಿತೃವಿನ ಹತ್ತಿರ ಹೋಗಿ ಕನ್ಯೆಯನ್ನು ಬೇಡುತ್ತಾರೆ. ಅದರಂತೆ ಇಲ್ಲಿ ಸೂರ್ಯನು ತನ್ನ ಕಾಂತಿಯೆಂಬ ಹೆಂಡತಿಯು ನಾಶವಾಗಲಾಗಿ, ಪಶ್ಚಿಮ ಸಮುದ್ರದಲ್ಲಿ ಹುಟ್ಟಿದ ಪದ್ಮಿನಿ ((ಪದ್ಮಸಮೂಹ) (ಪದ್ಮಿನೀ ಜಾತಿಯ ಸ್ತ್ರೀಯನ್ನು ಮದುವೆಯಾಗಲು ಬಯಸಿ ಪದ್ಮಿನಿಯ ತಂದೆಯಾದ ಪಶ್ಚಿಮ ಸಮುದ್ರದ ಬಳಿಗೆ ಕನ್ಯಾಯಾಚನೆಗಾಗಿ ಹೊರಟಿರುವನೋ ಎಂಬಂತಿತ್ತು ಎಂಬುದಾಗಿ ಕವಿಗಳು ಉತ್ಪ್ರೇಕ್ಷಿಸಿದ್ದಾರೆ))

**ಅವತಾರಿಕೆ :** ಸಂಧ್ಯಾಸಮಯದಲ್ಲಿ ಪಕ್ಷಿಗಳು ತಮ್ಮ ಗೂಡುಗಳಿಗೆ ಮರಳುವುದನ್ನು ಕವಿಗಳು ವರ್ಣಿಸುತ್ತಾರೆ.

**ಸಾಂಧ್ಯರಾಗಮಯಪಾವಕದೀಪ್ತಂ ತಂ ಸಮೀಕ್ಷ್ಯ ಶಕುನಾ ಭಯಮೂಢಾಃ ।**
**ಪ್ರಾದ್ರವನ್ ಝಡತಿ ಶಾಬಕವರ್ಗಂ ವೀಕ್ಷಿತುಂ ವಿಹಿತಭೂರಿನಿನಾದಾಃ ॥೬॥**

**ತಾತ್ಪರ್ಯ :** ಸಂಧ್ಯಾಕಾಲವಾಯಿತು. ಎಲ್ಲ ಕಡೆಯಲ್ಲಿಯೂ ಸಂಜೆಯ ಕೆಂಪು ಬಣ್ಣದಿಂದ ಲೋಕವು ಬೆಂಕಿಹತ್ತಿ ಉರಿಯುತ್ತಿರುವಂತೆ ಕಾಣಿಸಿತು. ಆ ಸಮಯದಲ್ಲಿ ಪಕ್ಷಿಗಳು ತಮ್ಮ ಗೂಡಿಗೆ ಬೆಂಕಿ ಹತ್ತಿಕೊಂಡಿರಬಹುದು, ತಮ್ಮ ಮರಿ ಕಂದಮ್ಮಗಳ ಗತಿ ಏನಾಗಿದೆಯೋ ಎಂಬ ಭಯದಿಂದ ವ್ಯಾಕುಲಗೊಂಡು ಚಿಂತೆಯಿಂದ ತಮ್ಮ ಮರಿಪಕ್ಷಿಗಳನ್ನು ನೋಡುವುದಕ್ಕಾಗಿ ವೇಗದಿಂದ ಗೂಡುಗಳ ಕಡೆಗೆ ಹಾರತೊಡಗಿದವು. ಇಲ್ಲಿ ಸಂಧ್ಯಾರಾಗಮಯಪಾವಕದೀಪಂ ಎಂಬಲ್ಲಿ ಸಂಜೆಯ ಕೆಂಪು ಬಣ್ಣವನ್ನೇ ಬೆಂಕಿಯೆಂದು ವರ್ಣನೆ ಮಾಡಿರುವುದರಿಂದ ರೂಪಾಲಂಕಾರ. ಸಾಯಂಕಾಲದಲ್ಲಿ ಪಕ್ಷಿಗಳು ಸ್ವಾಭಾವಿಕವಾಗಿಯೇ ತಮ್ಮ ಗೂಡುಗಳ ಕಡೆಗೆ ವೇಗವಾಗಿ ಹಾರಿಹೋಗುವುದು ಪ್ರಕೃತಿನಿಯಮ ಕಾರ್ಯವಾಗಿದೆ. ಅದನ್ನು ಇಡೀ ವಿಶ್ವಕ್ಕೇ ಬೆಂಕಿಬಿದ್ದಿದೆಯೆಂದೂ, ತಮ್ಮ ಗೂಡುಗಳಲ್ಲಿರುವ ಮರಿಪಕ್ಷಿಗಳಿಗೂ ಅಪಾಯವಾಗಿರಬಹುದೆಂದೂ, ಈ ಭಯದಿಂದ ಪಕ್ಷಿಗಳು ವೇಗವಾಗಿ ತಮ್ಮ ತಮ್ಮ ಗೂಡುಗಳ ಕಡೆಗೆ ಹಾರಿ ಹೋದವು ಎಂಬುದಾಗಿ ವರ್ಣನೆ ಮಾಡಿರುವುದರಿಂದ ಉತ್ಪ್ರೇಕ್ಷಾಲಂಕಾರ. ಉತ್ಪ್ರೇಕ್ಷಾವ್ಯಂಜಕವಾದ ಇವಾದಿ ಶಬ್ದಗಳು ಇಲ್ಲದಿರುವುದರಿಂದ ಗಮ್ಯೋತ್ಪ್ರೇಕ್ಷಾ.

**ಅವತಾರಿಕೆ :** ಈಗ ಕವಿಗಳು ಚಕ್ರವಾಕ ಪಕ್ಷಿಗಳ ಅವಸ್ಥೆಯನ್ನು ತಿಳಿಸುತ್ತಾ ಸೂರ್ಯಾಸ್ತ ಸಮಯವನ್ನು ವರ್ಣಿಸುತ್ತಾರೆ.

**ಪದ್ಮಿನೀ ಪರಿಚಿತಾ ಸತತಂ ನಃ ಸಾ ಬತಾತ್ಮಪತಿನಾ ವಿಯುತೇತಿ ।**
**ಸದ್ಯ ಏವ ವಿಯುತಾನಿ ಬಭೂವುಶ್ಚಕ್ರವಾಕಪತತಾಂ ಮಿಥುನಾನಿ ॥೭॥**

**ತಾತ್ಪರ್ಯ :** ಲೋಕದಲ್ಲಿ ದಂಪತಿಗಳು ತಮಗೆ ಪರಿಚಿತಳಾದ ಪತಿವ್ರತೆಯಾದ ಉತ್ತಮ ಸ್ತ್ರೀಯು ತನ್ನ ಪತಿವಿಯೋಗ ಹೊಂದಿದಾಗ ತಾವೂ ಅವಳ ದುಃಖದಲ್ಲಿ ಸಹಭಾಗಿಗಳಾಗಿ ತಾವು ಪರಸ್ಪರ ಸೇರಿ ಅನುಭವಿಸುವ ಶೃಂಗಾರಮಯ ಜೀವನವನ್ನು ನಿಲ್ಲಿಸುತ್ತಾರೆ. (ಧ್ವನಿತಾರ್ಥ) ಅದರಂತೆ ಚಕ್ರವಾಕ ಪಕ್ಷಿಗಳ ಜೋಡಿಯು ಸೂರ್ಯನು ಮುಳುಗುವವರೆಗೂ ಪರಸ್ಪರ ಸೇರಿ ಆನಂದವಾಗಿದ್ದು, ಸೂರ್ಯನು ಮುಳುಗಿದ ಮೇಲೆ ಬೇರೆಯಾದವು. ತಮಗೆ ಬಹುಕಾಲದಿಂದ ಪರಿಚಿತವಾಗಿದ್ದ ಪದ್ಮಿನಿಯು ತನ್ನ ಪತಿಯಾದ ಸೂರ್ಯನಿಂದ ಬೇರೆಯಾದಳು ಎಂಬ ದುಃಖದಿಂದ ಆ ಚಕ್ರವಾಕ ಮಿಥುನವೂ ಬೇರೆಯಾದವೋ ಎಂಬಂತಿತ್ತು ಎಂಬುದಾಗಿ ಗಮ್ಯೋತ್ಪ್ರೇಕ್ಷಾಲಂಕಾರ.

**ಅವತಾರಿಕೆ :** ಈಗ ಕವಿಗಳು ಚಕ್ರ(ವಾಕ) ಪಕ್ಷಿಗಳು ಬೇರೆಯಾದುದಕ್ಕೆ ಇನ್ನೊಂದು ಕಾರಣವನ್ನು ಉತ್ಪ್ರೇಕ್ಷಿಸುತ್ತಾ ಸಂಧ್ಯಾಸಮಯವನ್ನು ವರ್ಣಿಸುತ್ತಾರೆ.

**ಏಕಚಕ್ರಮವಲಂಬ್ಯ ಶತಾಂಗಂ ಬಾಧತೇ ವಿರಹಿಣೋ ಮಿಹಿರೋಽಸೌ ।**
**ಇತ್ಯವೇತ್ಯ ಮದನಃ ಸ್ವಯಮಾಧಾದೇಕಚಕ್ರಮಯಮಾಶು ಶತಾಂಗಮ್ ॥೮॥**

**ತಾತ್ಪರ್ಯ :** ಈ ಸೂರ್ಯನು ಒಂದು ಚಕ್ರವುಳ್ಳ ರಥವನ್ನೇರಿ ವಿರಹಿಗಳಿಗೆ ಪೀಡೆಯನ್ನು ಉಂಟುಮಾಡುತ್ತಾನೆ. ಸೂರ್ಯನು ಏಕಚಕ್ರವುಳ್ಳ ಶತಾಂಗವನ್ನು (ರಥವನ್ನು) ಏರಿ ಈ ಕಾರ್ಯವನ್ನು ಮಾಡುತ್ತಿದ್ದಾನಲ್ಲವೇ? ನಾನು? (ಮದನನು) ಅವನ ಏಕಚಕ್ರವನ್ನೇ ಶತಾಂಗವನ್ನಾಗಿ ಮಾಡುತ್ತೇನೆ ಎಂದು ಆಲೋಚಿಸಿ ಮನ್ಮಥನು ಏಕಚಕ್ರವನ್ನು (ವಿರಹ) (ನಾನೂ ಒಂದು ಚಕ್ರವುಳ್ಳ ಶತಾಂಗವನ್ನು ಅಂದರೆ ರಥವನ್ನು ಮಾಡುತ್ತೇನೆ ಎಂಬುದಾಗಿ ಆಲೋಚಿಸಿದನು ಎಂದು ಧ್ವನಿ) ಹೊಂದಿದ ಚಕ್ರವಾಕ ಪಕ್ಷಿಯನ್ನು) ಶತಾಂಗವನ್ನಾಗಿ (ನೂರಾರು ಅಂಗವುಳ್ಳದ್ದನ್ನಾಗಿ ಛಿದ್ರಛಿದ್ರವಾಗಿ) ಮಾಡಿದನು. ವಿರಹಿಗಳನ್ನು ಬಾಧಿಸುವ ಕಾರ್ಯವು ನನ್ನದು. ಅದನ್ನು ಸೂರ್ಯನು ಏಕಚಕ್ರ ರಥಾಂಗವನ್ನು (ಒಂದು ಚಕ್ರವುಳ್ಳ ರಥವನ್ನು) ಅವಲಂಬಿಸಿ ಮಾಡಿದರೆ ನಾನು ಅವನ ಏಕಚಕ್ರವನ್ನು (ಒಂದು ಚಕ್ರವನ್ನು; ಒಂದು ಚಕ್ರವಾಕ ಪಕ್ಷಿಯನ್ನು) ಶತಾಂಗವನ್ನಾಗಿ (ರಥವನ್ನಾಗಿ, ಛಿದ್ರಛಿದ್ರವಾಗಿ) ಮಾಡಿ ನನಗಿಂತ ಅವನು ಹೆಚ್ಚು ಕೀರ್ತಿಯನ್ನು ಗಳಿಸದಂತೆ ಮಾಡುತ್ತೇನೆ ಎಂದು ಆಲೋಚಿಸಿ ಮನ್ಮಥನು ಸೂರ್ಯಾಸ್ತಮಯದಿಂದ ವಿಯೋಗ ಹೊಂದಿರುವ ಚಕ್ರವಾಕ ಪಕ್ಷಿಗೆ ಅದರ ಅಂಗಗಳನ್ನು ನೂರಾರು ಚೂರುಗಳನ್ನಾಗಿ ಮಾಡಿದಾಗ ಉಂಟಾಗುವಷ್ಟು ನೋವನ್ನುಂಟುಮಾಡಿದನು ಎಂದು ಭಾವವು (ಧ್ವನಿ).

**ಅವತಾರಿಕೆ :** ಹುಣ್ಣಿಮೆಯ ದಿನದ ಸಾಯಂಕಾಲದ ಚಂದ್ರೋದಯವನ್ನು ಕವಿಗಳು ವರ್ಣಿಸುತ್ತಾರೆ.

**ಅಂಬರಾಭಿಧಹರಿನ್ಮಣಿಪಾತ್ರೇ ಶಂಖವಿಷ್ಣುಪದವಾರಿ ದಧಾನಮ್ ।**
**ಹೇಮಭಾಜನಯುಗಂ ಶಶಿಭಾನ್ವೋರ್ಮಂಡಲದ್ವಯಮಿದಂ ಕಲಯಾಮಃ ॥೯॥**

**ತಾತ್ಪರ್ಯ :** ಹುಣ್ಣಿಮೆಯಂದು ಸಂಜೆ ಪಶ್ಚಿಮ ದಿಕ್ಕಿನಲ್ಲಿ ಸೂರ್ಯನು ಮುಳುಗುತ್ತಿದ್ದಾನೆ. ಪೂರ್ವದಿಕ್ಕಿನಲ್ಲಿ ಚಂದ್ರನು ಉದಯಿಸುತ್ತಿದ್ದಾನೆ. ಆಗ ಸೂರ್ಯಮಂಡಲ ಚಂದ್ರಮಂಡಲಗಳೆರಡೂ ಹೊಂಬಣ್ಣದಿಂದ ಬೆಳಗುತ್ತಾ ಬಂಗಾರದ ಎರಡು ತೀರ್ಥದ ಬಟ್ಟಲುಗಳಂತೆ ಕಾಣಿಸುತ್ತವೆ. ಆಕಾಶವು ಇಂದ್ರನೀಲ ಮಣಿಗಳಿಂದ ರಚಿತವಾದ ತೀರ್ಥದ ಹರಿವಾಣದಂತಿದೆ. ಹೀಗೆ ಆಕಾಶವೆಂಬ ಇಂದ್ರನೀಲಮಣಿಮಯವಾದ ತೀರ್ಥದ ಹರಿವಾಣದಲ್ಲಿ ಒಂದು ಭಾಗದಲ್ಲಿ ಶಂಖತೀರ್ಥವನ್ನು ತುಂಬಿಕೊಂಡಿರುವ ಬಂಗಾರದ ತೀರ್ಥದ ಬಟ್ಟಲಿನಂತೆ (ತೀರ್ಥದ ಪಾತ್ರೆಯಂತೆ) ಚಂದ್ರಮಂಡಲವು ಕಾಣಿಸುತ್ತಿದೆ. ಮತ್ತೊಂದು ಭಾಗದಲ್ಲಿ ಶಾಲಗ್ರಾಮಗಳಿಗೆ ಅಭಿಷೇಕ ಮಾಡಿದ ವಿಷ್ಣುಪಾದೋದಕದಿಂದ ತುಂಬಿದ ತೀರ್ಥದ ಬಟ್ಟಲಿನಂತೆ ಸೂರ್ಯಮಂಡಲವು ಕಾಣಿಸುತ್ತಿದೆ. ಆದುದರಿಂದ "ನಾವು ಸೂರ್ಯ ಚಂದ್ರ ಬಿಂಬಗಳನ್ನು

ಆಕಾಶವೆಂಬ ಇಂದ್ರನೀಲ (ಗರುಡಪಚ್ಚೆ) ಮಣಿಯ ಹರಿವಾಣದಲ್ಲಿ ಶಂಖತೀರ್ಥ ಮತ್ತು ವಿಷ್ಣುಪಾದೋದಕ ತುಂಬಿದ, ಎರಡು ಬಂಗಾರದ ಪಾತ್ರೆಗಳೆಂದು ತಿಳಿಯುತ್ತೇವೆ" ಎಂಬುದಾಗಿ ಕವಿಗಳು ಹೇಳುತ್ತಿದ್ದಾರೆ. (ಉತ್ಪ್ರೇಕ್ಷಾಲಂಕಾರ) (ಸಾಯಂಕಾಲ : ನಿರ್ಮಲವಾದ ಆಕಾಶದಲ್ಲಿ ಪಶ್ಚಿಮದಲ್ಲಿ ಸೂರ್ಯಮಂಡಲ ಪೂರ್ವದಲ್ಲಿ ಚಂದ್ರಮಂಡಲವೂ ಬಂಗಾರದ ಪಾತ್ರೆಯಂತೆ ಶೋಭಿಸುತ್ತಿವೆ.)

**ಅವತಾರಿಕೆ** : ಕವಿಗಳು ಸೂರ್ಯಾಸ್ತಮಯದ ನಂತರದ ಕಾಲವನ್ನು ವರ್ಣಿಸುತ್ತಾರೆ.

**ಪೂರ್ವಭೂಮಿಧರಗಾಧಿಸುತೇನ ಪ್ರೇರಿತಂ ರವಿಮಯಾಬ್ಜಭವಾಸ್ತ್ರಮ್ ।**
**ತದ್ಗ್ರಸತ್ಯಪರಶೈಲವಸಿಷ್ಠೇ ಕೋಪವಹ್ನಿರಿವ ಸಾಂಧ್ಯಮರೀಚಿಃ ॥೧೦॥**

**ತಾತ್ಪರ್ಯ** : ಹಿಂದೆ ವಸಿಷ್ಠ ವಿಶ್ವಾಮಿತ್ರ ಋಷಿಗಳಿಗೆ ಕಾಮಧೇನುವಿನ ನಿಮಿತ್ತದಿಂದ ಕಲಹವುಂಟಾಗಿತ್ತು. ಆಗ ಒಂದು ಬಾರಿ ವಿಶ್ವಾಮಿತ್ರರು ಬ್ರಹ್ಮಾಸ್ತ್ರವನ್ನು ಪ್ರಯೋಗಿಸಿದ್ದರು. ವಸಿಷ್ಠ ಋಷಿಗಳು ಅದನ್ನು ನುಂಗಿದ್ದರು. (ಬ್ರಹ್ಮರಂಧ್ರದಿಂದ ನಿಗ್ರಹಿಸಿದ್ದರು.) ಆಗ ವಿಶ್ವಾಮಿತ್ರ ಋಷಿಗಳು ಕೋಪದ ಬೆಂಕಿಯನ್ನೇ ಕಾರಿದ್ದರು ಎಂದು ಪುರಾಣ ಕಥೆಯಿದೆ. ಪ್ರಕೃತದಲ್ಲಿ ಉದಯಪರ್ವತವೆಂಬ ವಿಶ್ವಾಮಿತ್ರನು ಸೂರ್ಯನೆಂಬ ಬ್ರಹ್ಮಾಸ್ತ್ರವನ್ನು ಪ್ರಯೋಗಿಸಿದನು. ಆದರೆ ಅಸ್ತಮಯ ಪರ್ವತವೆಂಬ ವಸಿಷ್ಠರು ಸೂರ್ಯನೆಂಬ ಆ ಬ್ರಹ್ಮಾಸ್ತ್ರವನ್ನು ನುಂಗಿದಾಗ ವಿಶ್ವಾಮಿತ್ರರ ಕೋಪದ ಬೆಂಕಿಯಂತೆ ಸಾಯಂಕಾಲದ ಕೆಂಪಾದ ಕಿರಣ ಸಮೂಹವು ಶೋಭಿಸುತ್ತಿತ್ತು ಎಂದು ನಾವು ತಿಳಿಯುತ್ತೇವೆ ಎಂಬುದಾಗಿ ಕವಿಗಳು ಹೇಳುತ್ತಿದ್ದಾರೆ. ಪೂರ್ವದಿಕ್ಕಿನಲ್ಲಿ ಕೆಂಪಾದ ಸೂರ್ಯನು ಉದಯಿಸಿದಾಗ ಉದಯಪರ್ವತವೆಂಬ ವಿಶ್ವಾಮಿತ್ರನು ಬ್ರಹ್ಮಾಸ್ತ್ರವನ್ನು ಪ್ರಯೋಗಿಸಿದಂತೆ ಕಾಣುತ್ತಿತ್ತು. ಸಾಯಂಕಾಲದ ಅಸ್ತಪರ್ವತದ ಹತ್ತಿರ ಸೂರ್ಯನು ಮುಳುಗುತ್ತಿರುವಾಗ ಅಸ್ತಪರ್ವತವೆಂಬ ವಸಿಷ್ಠರು ಬ್ರಹ್ಮಾಸ್ತ್ರವನ್ನು ನುಂಗುತ್ತಿರುವಂತೆ ಕಾಣಿಸುತ್ತಿತ್ತು. ಆಗ ಆಕಾಶದಲ್ಲಿ ಹರಡಿದ ಕೆಂಪಾದ ಕಿರಣರಾಶಿಯು, ಅಸ್ತ್ರವು ವಿಫಲವಾದುದನ್ನು ಕಂಡಾಗ ವಿಶ್ವಾಮಿತ್ರನು ಸಿಟ್ಟಿನ ಬೆಂಕಿಯನ್ನು ಎಲ್ಲೆಡೆ ಚೆಲ್ಲಿದಂತೆ ಕಾಣಿಸುತ್ತಿತ್ತು. (ರೂಪಕದಿಂದ ಉಜ್ಜೀವಿಸುವ ಉತ್ಪ್ರೇಕ್ಷಾಲಂಕಾರ).

**ಅವತಾರಿಕೆ** : ರಾತ್ರಿಯ ಸಮಯದಲ್ಲಿ ಚಕ್ರವಾಕ ಪಕ್ಷಿಗಳ ಜೋಡಿಯು ಅಗಲಿ ಬೇರೆಯಾದುದನ್ನು ಚಂದ್ರನಾಮಕ ಹಂಸವು ಕ್ಷೀರನೀರವಿಭಾಗವನ್ನೂ (ಹಾಲು-ನೀರುಗಳನ್ನು ಬೇರ್ಪಡಿಸುವಿಕೆ) ಎಂಬುದಾಗಿ ವರ್ಣಿಸುತ್ತಾರೆ.

**ಅವತಾರಿಕೆ** : ಕಮಲಗಳು ಸಂಜೆಯ ವೇಳೆ ಮೊಗ್ಗಾಗಿರುವುದನ್ನು ಕವಿಗಳು ವರ್ಣಿಸುತ್ತಾರೆ.

**ಅಂಬುಜೇಷ್ವರಯುತೇಷು ವಿಯೋಕ್ತುಂ ಸಾಯಶಾಣಕಷಣೇನ ಸುತೀಕ್ಷ್ಣಮ್ ।**
**ಕಿಂ ಚಕಾರ ನಿಜಕಂಜಕಲಂಬಂ ತಾದೃಗೇವ ಯದಭೂನ್ಮುಕುಲಂ ತತ್ ॥೧೧॥**

**ತಾತ್ಪರ್ಯ : ಅರವಿಂದಮಶೋಕಂ ಚ ಚೂತಂ ಚ ನವಮಲ್ಲಿಕಾ ।**
**ನೀಲೋತ್ಪಲಂ ಚ ಪಂಚೈತೇ ಪಂಚಬಾಣಸ್ಯ ಸಾಯಕಾಃ ॥ (ಅಮರ)**

ಎಂಬ ವಚನದಂತೆ ಕಮಲವು ಮನ್ಮಥನ ಒಂದು ಪುಷ್ಪಶರ (ಹೂಬಾಣ). ಹಗಲಿನಲ್ಲಿ ಅದು ಅರಳಿರುವಾಗ ಬಾಣದಲ್ಲಿ ಉದ್ಧವಾದ ಸಿಬರು ಎದ್ದಂತೆ ಕಾಣುವ ಅರೆಕಾಲುಗಳಂತಿರುವ ದಳಗಳಿಂದ ಕೂಡಿತ್ತು. ತನ್ನ ಕಮಲ ಬಾಣದ ಅರೆಕಾಲುಗಳನ್ನೆಲ್ಲಾ ಉಜ್ಜಿ ತೆಗೆದು ಕಮಲವೆಂಬ ಬಾಣವನ್ನು ಮಾಡುವುದಕ್ಕಾಗಿ ಮನ್ಮಥನು ಸಾಯಂಕಾಲವೆಂಬ ಸಾಣೆಯ ಚಕ್ರದಲ್ಲಿ ತನ್ನ ತಾವರೆಯೆಂಬ ಬಾಣವನ್ನು ಸಾಣೆ ಹಿಡಿದು ಅದನ್ನು ಸಾಯಂಕಾಲ ವಿರಹಿಗಳ ಮೇಲೆ ಪ್ರಯೋಗಿಸಲು ಹರಿತವನ್ನಾಗಿ ಮಾಡಿದನೋ ಎಂಬಂತೆ ತಾವರೆಯು ಕಾಣಿಸುತ್ತಿತ್ತು. ಏಕೆಂದರೆ ಸಾಯಂಕಾಲ ಸೂರ್ಯಾಸ್ತವಾದ ಮೇಲೆ ತಾವರೆಯ ಮೊಗ್ಗು, ಅರೆಕಾಲುಗಳನ್ನು ಸಾಣೆಯಲ್ಲಿ ಉಜ್ಜಿ ತೆಗೆದಂತೆ ಕಾಣಿಸುತ್ತಿತ್ತು. ಸಾಯಂಕಾಲ ಕಮಲವು ಮೊಗ್ಗಾಯಿತು (ಸಂಕುಚಿತವಾಯಿತು). ತನಗೆ ಕಮಲವೆಂಬ ಬಾಣವು ಬೇಕಾದುದರಿಂದ ಮನ್ಮಥನು ಅದನ್ನು ಸಾಣೆ ಹಿಡಿದು ಅರೆಕಾಲುಗಳನ್ನು ತೆಗೆದು ಹರಿತವಾದ ಬಾಣವನ್ನಾಗಿ ಮಾಡಿದನೋ ಎಂಬಂತೆ ತಾವರೆಯ ಮೊಗ್ಗು ಕಾಣಿಸುತ್ತಿತ್ತು ಎಂಬುದಾಗಿ ಕವಿಗಳು ಉತ್ಪ್ರೇಕ್ಷಿಸಿದ್ದಾರೆ.

**ಅವತಾರಿಕೆ :** ಸಾಯಂಕಾಲ ತಾವರೆಯ ಸಮೂಹಗಳ ಮೇಲೆ ಕತ್ತಲೆಯ ಆಕ್ರಮಣವನ್ನು ಕವಿಗಳು ಚಮತ್ಕಾರದಿಂದ ವರ್ಣಿಸುತ್ತಾರೆ.

**ವೀಕ್ಷ್ಯ ಪದ್ಮವಿಪಿನೇಷು ಪುರಾ ಯತ್ ಕೇಸರಿಶ್ರಿಯಮದುದ್ರುವದಾರಾತ್ ।**
**ತಾಂ ವಿಲೋಕ್ಯ ಶಿಥಿಲಾಂ ಪುನರಾಗಾತ್ ತತ್ ತಥೈವ ತಿಮಿರದ್ವಿಪವೃಂದಮ್ ॥೧೨॥**

**ತಾತ್ಪರ್ಯ :** ಅಂಧಕಾರವು ಕಪ್ಪಾಗಿರುವುದರಿಂದ ಆನೆಗಳ ಸಮೂಹದಂತೆ ಕಾಣಿಸುತ್ತದೆ. ಅಂಧಕಾರವೆಂಬ ಆನೆಗಳ ಹಿಂಡು ಹಗಲಿನಲ್ಲಿ ತಾವರೆ ಹೂವುಗಳ ರಾಶಿಯಲ್ಲಿ ಕೇಸರಿ ಕಾಂತಿಯನ್ನು (ಕೇಸರವುಳ್ಳ ಸಿಂಹಗಳ ಕಾಂತಿಯನ್ನು) ನೋಡಿ (ಹೆದರಿ) ದೂರಕ್ಕೆ ಹೊರಟುಹೋಯಿತು. (ಕಮಲದಲ್ಲಿ ಕೇಸರವಿರುವುದರಿಂದ ಅವುಗಳೂ ಕೇಸರಿ ಎಂದು ಎನಿಸಿಕೊಳ್ಳುತ್ತವೆ. ಸಿಂಹಗಳಿಗೂ ಕೇಸರಿ ಎಂದು ಹೆಸರು. ಶ್ಲೇಷದಿಂದ ಕಮಲಗಳ ಕೇಸರಿಶ್ರೀಯು ಗಜಗಳಿಗೆ ಕೇಸರಿ (ಸಿಂಹ) ಶ್ರೀಯಂತೆ ಭಯವನ್ನು ಉಂಟುಮಾಡುತ್ತದೆ. ಹೀಗೆ ಅಂಧಕಾರ ಗಜಗಳಿಗೆ ಈ ಕೇಸರಿಶ್ರೀಯು (ಕೇಸರವುಳ್ಳ ಪದ್ಮಗಳ ಕಾಂತಿಯು ಕೇಸರವುಳ್ಳ ಸಿಂಹಗಳ ಕಾಂತಿಯು) ಭಯವನ್ನು ಉಂಟುಮಾಡಿತು. ಆಗ ಅವುಗಳು ದೂರಕ್ಕೆ ಓಡಿಹೋದವು. ಆದರೆ ಸಾಯಂಕಾಲವಾಗುತ್ತಲೇ ಕಮಲಗಳ ಕೇಸರ ಶ್ರೀಯು ಪುನಃ ನಷ್ಟವಾದ ಕೂಡಲೇ (ಕೇಸರವುಳ್ಳ ಪದ್ಮಗಳು ಮೊಗ್ಗಾಗಿ ಕಾಂತಿಯು ಕಡಿಮೆಯಾದಾಗ), ಆ ಅಂಧಕಾರ ಗಜ ಸಮೂಹವು ಮರಳಿ ಕಮಲಗಳನ್ನು ಸೇರಿಕೊಂಡಿತು. ಸಿಂಹವು ಮುದಿಯಾಗಿ ಅದರ ಶಕ್ತಿಯು ಕಡಿಮೆಯಾದಾಗ ಓಡಿಹೋಗಿದ್ದ ಆನೆಗಳು ಹಿಂತಿರುಗುತ್ತವೆ. ಕಮಲಶ್ರೀಯು ಹ್ರಾಸ ಹೊಂದಿದಾಗ (ಕಮಲಗಳು ಮೊಗ್ಗಾದಾಗ) ಪುನಃ ಅಂಧಕಾರ ಸಮೂಹವು ಹಿಂದಿರುಗಿತು. ತಾವರೆಗಳು

ಬೆಳಿಗ್ಗೆ ಅರಳಿದ್ದಾಗ ಅವುಗಳಲ್ಲಿ ಕೇಸರಶ್ರೀಯನ್ನು ನೋಡಿ (ಸಿಂಹದ ಕಾಂತಿ, ಕೇಸರವುಳ್ಳ ಹೂವಿನ ಕಾಂತಿ ಇವುಗಳನ್ನು ನೋಡಿ) ಆನೆಗಳು ಕೇಸರಿಯಿಂದ ಹೆದರುವಂತೆ ಈ ಕೇಸರಿಯಿಂದಲೂ (ಕಮಲ ಕೇಸರವುಳ್ಳ ಕಮಲಗಳಿಂದಲೂ) ಅಂಧಕಾರವೆಂಬ ಗಜಬೃಂದವು ಹೆದರಿ ದೂರಕ್ಕೆ ಓಡಿಹೋಯಿತು. ಸೂರ್ಯೋದಯವಾದಾಗ ಕತ್ತಲೆಯು ಹೊರಟುಹೋಯಿತು. ಸಾಯಂಕಾಲ ಕಮಲಗಳು ಮೊಗ್ಗಾದಾಗ, ಇವುಗಳಲ್ಲಿ ಇನ್ನು ಕೇಸರಶ್ರೀ ಇಲ್ಲ ಎಂದು ಭಾವಿಸಿ ಕತ್ತಲೆಯೆಂಬ ಆನೆಗಳ ಗುಂಪು ಸೂರ್ಯಾಸ್ತಮಯವಾದ ಕೂಡಲೇ ಲೋಕವನ್ನು ವ್ಯಾಪಿಸಿಕೊಂಡಿತು. (ಶ್ಲೇಷ ಉತ್ಪ್ರೇಕ್ಷಾ).

**ಅವತಾರಿಕೆ :** ಈಗ ಕವಿಗಳು ಕಾಲಪುರುಷನನ್ನು ಶಾಲಿಗ್ರಾಮಾದಿಗಳನ್ನು ಪೂಜೆ ಮಾಡುವ ಯತಿಗಳ ರೂಪಕ್ಕೆ ಹೋಲಿಸುತ್ತಾ ವರ್ಣಿಸುತ್ತಾರೆ.

**ಅರ್ಚಯನ್ ಮಧುಕರಚ್ಛಲಶಾಲಿಗ್ರಾಮಮೇಷ ಸಮಯಾಭಿಧಯೋಗೀ ।**
**ಸಾಯಮಂಬುಜಸಮುದ್ಗಮಮಧ್ಯೇ ಸನ್ನಿಧಾಯ ವಿದಧೇऽಸ್ಯ ಚ ಮುದ್ರಾಮ್ ॥೧೩॥**

**ತಾತ್ಪರ್ಯ :** "ಕಾಲಪುರುಷನೆಂಬ ಸನ್ನ್ಯಾಸಿಯು ದುಂಬಿಗಳೆಂಬ ನೆಪದಿಂದ ಶಾಲಿಗ್ರಾಮಗಳನ್ನು ಹಗಲಿನಲ್ಲಿ ಪೂಜಿಸಿ ಸಂಜೆಯ ವೇಳೆ ಕಮಲಗಳೆಂಬ ಸಂಪುಟಗಳ ಮಧ್ಯದಲ್ಲಿ ಆ ದುಂಬಿಗಳೆಂಬ ಶಾಲಿಗ್ರಾಮಗಳನ್ನು ಇಟ್ಟು, ಕಮಲಗಳು ಸಂಜೆಯ ವೇಳೆ ಮೊಗ್ಗಾದಾಗ, ಆ ಸಂಪುಟಗಳಿಗೆ ಬೀಗ ಹಾಕಿದಂತೆ ಕಾಣಿಸುತ್ತಿತ್ತು." ಯತಿಗಳು ಸಾಲಿಗ್ರಾಮಗಳನ್ನು ಪೂಜಿಸಿ ಅನಂತರದಲ್ಲಿ ಅವುಗಳನ್ನು ಸಂಪುಟದಲ್ಲಿ ಇಟ್ಟು, ದೇವರ ಪೆಟ್ಟಿಗೆಗೆ ಬೀಗ ಹಾಕುವಂತೆ ಕಾಲಪುರುಷನೆಂಬ ಯತಿಯು ದುಂಬಿಗಳೆಂಬ ಶಾಲಿಗ್ರಾಮಗಳನ್ನು ಪೂಜಿಸಿ ಕಮಲಸಂಪುಟದ ಮಧ್ಯದಲ್ಲಿಟ್ಟು ಬೀಗ ಹಾಕಿದನು. ಸಾಯಂಕಾಲ ಕಮಲಗಳ ಮಧ್ಯದಲ್ಲಿ ಸಂಚರಿಸುವ ದುಂಬಿಗಳು ಕಮಲಗಳು ಮೊಗ್ಗಾದಾಗ, ಅವುಗಳ ಮಧ್ಯದಲ್ಲಿ ಸಿಕ್ಕಿಬೀಳುತ್ತವೆ. ಈ ವಿಷಯವನ್ನು ಕವಿಗಳು ಈ ರೀತಿಯಾಗಿ ವಿಶ್ಲೇಷಿಸಿದ್ದಾರೆ. (ಅಪಹ್ನುತಿ, ರೂಪಾಲಂಕಾರಗಳು).

**ಅವತಾರಿಕೆ :** ಈಗ ಕವಿಗಳು ತಾವರೆಯ ರಾಶಿಯು ಸಂಜೆಯ ವೇಳೆ ಮೊಗ್ಗಾಗುವುದನ್ನು ವರ್ಣಿಸುತ್ತಾರೆ.

**ಪದ್ಮಿನೀ ಪತಿಶುಚಾ ಭ್ರಮರಾಲೀಕಂಕಣಂ ನಿರಸಿತುಂ ಕೃತಚೇತಾಃ ।**
**ಅಬ್ಜಪಾಣಿಮನಿಲೇನ ವಿಲೋಲಂ ಹಂತ ಹಂತ ಸಮಕೋಚಯದಾಶು ॥೧೪॥**

**ತಾತ್ಪರ್ಯ :** ನಾಯಕನಾದ ಸೂರ್ಯನು ದೇಶಾಂತರಕ್ಕೆ ಹೋದಾಗ ಕಮಲಿನಿಯು ವಿರಹ ದುಃಖದಿಂದ ತಪ್ತಳಾದಳು. ನಾಯಕನ ಅಗಲುವಿಕೆಯಿಂದ ನಾಯಿಕೆಯು ದುಃಖಿತಳಾಗುವಂತೆ ಕಮಲಿನಿಯೂ ದುಃಖಿತಳಾಗಿ, ದುಂಬಿಗಳ ಸಾಲು ಎಂಬ ಬಳೆಗಳನ್ನು ಕಡಿಮೆ ಮಾಡಲು ಬಯಸಿ, ಬಳೆಗಳನ್ನು ತೆಗೆದು ಹಾಕಲು ನಿಶ್ಚಯಿಸಿದಳು. ಆ ವೇಳೆಯಲ್ಲಿ ಬಳೆಯನ್ನು ತೆಗೆಯುವಾಗ ಕೈ ಅಲ್ಲಾಡುವಂತೆ ಕಮಲಿನಿಯ ತಾವರೆಯೆಂಬ ಕೈಗಳು ಕಂಪಿಸಿತು.

ಬಳೆಗಳನ್ನು ತೆಗೆಯಲು ಕೈಗಳನ್ನು ಮೊಗ್ಗಾಗಿ ಮಾಡುವಂತೆ ಕಮಲಿನಿಯು ತನ್ನ ಕಮಲವೆಂಬ ಕೈಗಳನ್ನು ಸಂಕೋಚಗೊಳಿಸಿತು. ಪತಿಯ ವಿರಹ ಸಮಯದಲ್ಲಿ ಅಲಂಕಾರಗಳನ್ನು, ಅದರಲ್ಲಿಯೂ ಬಳೆಗಳನ್ನು ತೆಗೆದುಹಾಕಲು ಪ್ರಯತ್ನಿಸುವ ಈ ದೃಶ್ಯವು ಬಹಳ ದುಃಖವನ್ನು ಉಂಟುಮಾಡುತ್ತಿತ್ತು. ಆಹಾ, ಅಯ್ಯೋ ಅಯ್ಯೋ ಎಂದು ಕವಿಗಳು ಸಾಯಂಕಾಲ ಕಮಲಿನಿಯ ಸಂಕೋಚಾವಸ್ಥೆಯನ್ನು ವರ್ಣಿಸುತ್ತಾರೆ. ಹೆಂಗಸರು ಬಳೆಯನ್ನು ಕೈಯಿಂದ ಜಾರಿಸಲು ಹೇಗೆ ತಮ್ಮ ಕೈಗಳನ್ನು ಸಂಕುಚಿತಗೊಳಿಸುತ್ತಾರೋ ಅದೇ ರೀತಿಯಲ್ಲಿ ಕಮಲಿನಿಯು ತನ್ನ ಕಮಲ ಹಸ್ತವನ್ನು ಸಂಜೆಯ ವೇಳೆ ಸಂಕುಚಿತಗೊಳಿಸಿ(ತು)ದಳು. ಎಂಬುದಾಗಿ ಭಾವ.

**ಅವತಾರಿಕೆ :** ಕವಿಗಳು ಸೂರ್ಯಾಸ್ತಮಯವಾದ ನಂತರದಲ್ಲಿ ನಕ್ಷತ್ರಗಳ ಉದಯವನ್ನು ವರ್ಣನೆ ಮಾಡುತ್ತಾರೆ.

**ರಶ್ಮಿಜಾಲಮಧಿಕಂ ಭುವನಾಬ್ಧೇಃ ಕಾಲಧೀವರವರಃ ಪರಿಕೃಷ್ಯ ।**
**ಪಂಕಶೈವಲಲುಠಜ್ಝಷಸಂಘಂ ಧ್ವಾಂತತಾರನಿಭತೋ ಗಗನೇऽಧಾತ್ ॥೧೫॥**

**ತಾತ್ಪರ್ಯ :** ಕಾಲಪುರುಷನೆಂಬ ಶ್ರೇಷ್ಠನಾದ ಬೆಸ್ತರವನು ಜಗತ್ತೆಂಬ ಸಮುದ್ರದಲ್ಲಿ ಮೀನು ಹಿಡಿಯಲು ಬಯಸಿದನು. ಅವನು ಸೂರ್ಯಕಿರಣಗಳ ಜಾಲವನ್ನೇ ಜಾಲ(ಬಲೆ)ವನ್ನಾಗಿ ಮಾಡಿಕೊಂಡು ಕೆಸರಿನಲ್ಲಿ ಒದ್ದಾಡುತ್ತಿರುವ ಮೀನುಗಳ ಸಮೂಹವನ್ನು ರಾತ್ರಿಯಲ್ಲಿ ಆಗಸದಲ್ಲಿ ಹೊಳೆಯುವ ನಕ್ಷತ್ರಗಳ ವ್ಯಾಜದಿಂದ ಆಕಾಶದಲ್ಲಿಟ್ಟನು. ಆಕಾಶದಲ್ಲಿ ಸಂಜೆಯ ವೇಳೆ ಕಾಣಿಸುವುವುಗಳು ನಕ್ಷತ್ರಗಳಲ್ಲ, ಕಾಲಪುರುಷನೆಂಬ ಬೆಸ್ತನು ಹಿಡಿದ ಮೀನುಗಳು ಎಂಬುದಾಗಿ ಅಭಿಪ್ರಾಯ.

**ಅವತಾರಿಕೆ :** ಸಂಜೆಯಲ್ಲಿ ಕತ್ತಲು ಹರಡಿ, ನಕ್ಷತ್ರಗಳು ಗೋಚರಿಸುವುದನ್ನು ಕವಿಗಳು ನರ್ತನದ ಪೂರ್ವಸಿದ್ಧತೆ ಎಂಬುದಾಗಿ ವರ್ಣಿಸುತ್ತಾರೆ.

**ಚಂದ್ರದೀಧಿತಿನಟೀಂ ದಿವಸಾಂತಃ ಸಾದರಂ ನಟಯಿತುಂ ಭುವನಾಂತಃ ।**
**ಸಂವಿಕೀರ್ಯ ಕಿಮು ತಾರಸುಮೌಘಂ ಧ್ವಾಂತನೀಲಯವನೀಂ ಪುರತೋऽಧಾತ್ ॥೧೬॥**

**ತಾತ್ಪರ್ಯ :** ಯಾರಾದರೊಬ್ಬಳು ನರ್ತಕಿಯಿಂದ ನರ್ತನ ಮಾಡಿಸುವಾಗ, ಮೊದಲು ನರ್ತನದ ವ್ಯವಸ್ಥಾಪಕನು ರಂಗಸ್ಥಳದ ಮುಂದೆ ಬಂದು ದೇವತಾ ಪ್ರಾರ್ಥನೆ ಮಾಡಿ, ಬೊಗಸೆಯಲ್ಲಿರುವ ಹೂವುಗಳನ್ನು ರಂಗಸ್ಥಳದ ಮುಂದೆ ಎರಚುತ್ತಾನೆ (ಹರಡುತ್ತಾನೆ). ಇದನ್ನು ರಂಗಪೂಜೆ ರಂಗಸ್ಥಳದ ಪೂಜೆ ಎನ್ನುತ್ತಾರೆ. ಅನಂತರ ಕಪ್ಪಾದ ಪರದೆಯನ್ನು ಮುಚ್ಚುತ್ತಾರೆ. ಈ ಪರದೆಯನ್ನು ಸರಿಸಿ ನಟಿಯು ಮುಂದೆ ಬರುತ್ತಾಳೆ. ಆಗ ಹಿಂಬದಿಯಿಂದ ಪರದೆಯನ್ನು ಮೇಲಕ್ಕೆ ಎತ್ತುತ್ತಾರೆ. ಪ್ರಕೃತದಲ್ಲಿ ಸಾಯಂಕಾಲ ಕತ್ತಲಾದಾಗ ರಂಗಸ್ಥಳದ ಕಪ್ಪಾದ ಪರದೆಯನ್ನು ಇಳಿಬಿಟ್ಟಂತೆ ಆಯಿತು. ಅನಂತರ ನಕ್ಷತ್ರಗಳು ಕಾಣಿಸಿಕೊಂಡಾಗ ಬಿಳಿಯಾದ ಮಲ್ಲಿಗೆ ಮುಂತಾದ

ಹೂವುಗಳನ್ನು ಚೆಲ್ಲಿದಂತೆ ಆಯಿತು. ಅನಂತರ ಚಂದ್ರೋದಯವಾಗಿ ಬೆಳದಿಂಗಳೆಂಬ ನಟಿಯು ನರ್ತನ ಮಾಡಲಾರಂಭಿಸಿದಳು ಎಂಬ ಅಭಿಪ್ರಾಯವನ್ನಿಟ್ಟುಕೊಂಡು ವರ್ಣಿಸಿದ್ದಾರೆ. ಸಂಜೆಯೆಂಬ ನಾಟ್ಯ ವ್ಯವಸ್ಥಾಪಕನು ಜಗತ್ತೆಂಬ ರಂಗಸ್ಥಳದ ಮಧ್ಯದಲ್ಲಿ ಬೆಳದಿಂಗಳೆಂಬ ನರ್ತಕಿಯನ್ನು ಚೆನ್ನಾಗಿ ಕುಣಿಸಿ, ಜನರನ್ನು ಸಂತೋಷಪಡಿಸಲು ಉದ್ದೇಶಿಸಿದನು. ಅವನು ನಕ್ಷತ್ರಗಳೆಂಬ ಹೂವಿನ ರಾಶಿಯನ್ನು ಮುಂದುಗಡೆ ಚೆಲ್ಲಿ ಕತ್ತಲೆಯೆಂಬ ನೀಲವಾದ ಪರದೆಯನ್ನು ಮುಂದುಗಡೆ ಹಾಕಿರುವನೋ ಎಂಬಂತೆ ಸಾಯಂಕಾಲದ ಸನ್ನಿವೇಶವು ಕಾಣಿಸುತ್ತಿತ್ತು ಎಂಬುದಾಗಿ ಕವಿಗಳು ಉತ್ಪ್ರೇಕ್ಷಿಸಿದ್ದಾರೆ.

**ಅವತಾರಿಕೆ :** ಪ್ರದೋಷ ಕಾಲದಲ್ಲಿ ಜನರುಗಳು ದೀಪಗಳನ್ನು ಹಿಡಿದು ಓಡಾಡುವುದನ್ನು ಕವಿಗಳು ವರ್ಣಿಸುತ್ತಾರೆ.

**ವರ್ಷುಕೇ ಸತಿ ತಮಿಸ್ರಜಲೌಘಂ ವ್ಯೋಮನಾಮನಿ ಘನಾಘನಸಂಘೇ ।**
**ದೀಪಿಕಾಸ್ತತ ಇತೋ ವಲಮಾನಾಃ ತತ್ರಗೋಪನಿಕರಾ ಇವ ರೇಜುಃ ॥೧೭॥**

**ತಾತ್ಪರ್ಯ :** ಮಳೆಗಾಲದಲ್ಲಿ ಮೋಡಗಳಿಂದ ಧಾರಾಕಾರವಾಗಿ ಮಳೆ ಸುರಿದಾಗ ಇಂದ್ರಗೋಪ ಎಂಬ ಒಂದು ಜಾತಿಯ ಕೆಂಪಾದ ಹುಳಗಳು ಹುಲ್ಲಿನ ಮೈದಾನದಲ್ಲಿ ಸರಸರನೆ ಅತ್ತಿಂದಿತ್ತ ಚಲಿಸುತ್ತಿರುತ್ತವೆ. ಪ್ರಕೃತದಲ್ಲಿ ನೀಲಿಬಣ್ಣದ್ದಾಗಿರುವುದರಿಂದ ಆಕಾಶವೆಂಬ ಮಳೆ ಸುರಿಸುವ ಮೋಡವು ಗುಂಪು ಗುಂಪಾಗಿ ಬಂದು ನೀರಿನ ರಾಶಿಯನ್ನು ಧಾರಾಕಾರವಾಗಿ ಸುರಿಸುತ್ತಿರುವಾಗ, ಜನರು ದೀಪಗಳನ್ನು ಹಿಡಿದು ಓಡಾಡುತ್ತಿರುವಾಗ, ಮನೆಗಳಲ್ಲಿ ಹಚ್ಚಿರುವ ದೀಪಗಳು ಗಾಳಿಗೆ ಚಲಿಸುತ್ತಿರುವಾಗ, ಆ ದೀಪಗಳು ಇಂದ್ರಗೋಪ ಕೀಟಗಳಂತೆ ಕಾಣಿಸುತ್ತಿದ್ದವು. ಆಕಾಶವು ಮೋಡದ ರಾಶಿಯಂತಿದೆ, ಕತ್ತಲೆಯು ನೀರಿನ ರಾಶಿಯಂತಿದೆ, ಉರಿಯುತ್ತಿರುವ ಚಿಕ್ಕ ಚಿಕ್ಕ ದೀಪಗಳು ಇಂದ್ರಗೋಪ ಹುಳದಂತೆ ಇವೆ ಎಂಬುದಾಗಿ ಭಾವ.

**ಅವತಾರಿಕೆ :** ಕವಿಗಳು ರಾತ್ರಿಯ ವೇಳೆಯಲ್ಲಿ ಮಿಣುಕುತ್ತಿರುವ ದೀಪಗಳನ್ನು ಬೆಂಕಿಯ ಕಿಡಿಗಳು ಎಂದು ವರ್ಣಿಸುತ್ತಾರೆ.

**ದಗ್ಧತಾಮುಪಗತೇಷು ಮನೋಭೂವಹ್ನಿನಾಽಯುಗಪದೇಷು ನಿಕಾಮಮ್ ।**
**ಭಂಜಿತೇ ಸತಿ ಹಿ ಶಾರ್ವರಧೂಮೇ ರೇಜುರಗ್ನಿಕಣಿಕಾ ಇವ ದೀಪಾಃ ॥೧೮॥**

**ತಾತ್ಪರ್ಯ :** ಮನ್ಮಥನೆಂಬ ಬೆಂಕಿಯು ವಿರಹಿಗಳ ಸ್ಥಾನಗಳನ್ನೆಲ್ಲಾ ಚೆನ್ನಾಗಿ ಸುಟ್ಟುಹಾಕಿತು. ಕತ್ತಲೆಯೆಂಬ ಹೊಗೆಯು ನಾಶವಾಯಿತು. ಆಗ ಉರಿಯುತ್ತಿದ್ದ ದೀಪಗಳು ಬೆಂಕಿಯ ಕಿಡಿಗಳಂತೆ ಶೋಭಿಸಿದವು ಎಂಬುದಾಗಿ ತಾತ್ಪರ್ಯ.

**ಅವತಾರಿಕೆ :** ಈಗ ಕವಿಗಳು ಇನ್ನೊಂದು ರೀತಿಯಿಂದ ರಾತ್ರಿಯ ದೀಪಗಳನ್ನು ವರ್ಣಿಸುತ್ತಾರೆ.

**ಭಾನುಕಾರ್ತಯುಗಧರ್ಮವಿಲೋಪಾಜ್ಜೃಂಭಿತೇ ಜಗತಿ ಶಾರ್ವರಪಾಪೇ ।**
**ಅಸ್ಫುರಂಸ್ತತ ಇತಃ ಕಿಲ ದೀಪಾ ರಕ್ಷಿತಾ ಇವ ತಪೋಽಂಕುರರೇಖಾಃ ॥೧೯॥**

**ತಾತ್ಪರ್ಯ :** ಕೃತಯುಗದಲ್ಲಿ ಧರ್ಮದ ನಾಲ್ಕು ಪಾದಗಳು ಸುಸ್ಥಿತಿಯಲ್ಲಿರುತ್ತವೆ. ತ್ರೇತಾಯುಗದಲ್ಲಿ ಮೂರು ಪಾದಗಳು, ದ್ವಾಪರಯುಗದಲ್ಲಿ ಧರ್ಮದ ಎರಡು ಪಾದಗಳಿರುತ್ತವೆ. ಕಲಿಯುಗದಲ್ಲಿ ಧರ್ಮವು ಒಂದೇ ಪಾದದಲ್ಲಿರುತ್ತದೆ. ಈ ಪಾದವೂ ಕೂಡಾ ಕಲಿಯುಗದಲ್ಲಿ ಪಾಪದ ಅಭಿವೃದ್ಧಿಯಿಂದ ಮರೆಯಾಗುತ್ತದೆ. ಎಲ್ಲೋ ಮೂಲೆ ಮೂಲೆಗಳಲ್ಲಿ ಧರ್ಮದ ಅಲ್ಪ ಸ್ವಲ್ಪ ಅಂಶವು ಉಳಿದಿರುತ್ತದೆ. ಇದು ವಸ್ತು ಸ್ಥಿತಿಯು. ಪ್ರಕೃತದಲ್ಲಿ ಸೂರ್ಯನೇ ಕೃತಯುಗದ ಧರ್ಮವು, ಅವನು ಕಣ್ಮರೆಯಾದನು. ಆಗ ಅಂಧಕಾರವೆಂಬ ಪಾಪವು, ಕಲಿಯುಗದಲ್ಲಿ ಪಾಪವು ವಿಜೃಂಭಿಸುವಂತೆ ವಿಜೃಂಭಿಸಿತು. ಆಗ ಅಲ್ಲಲ್ಲಿ ಹಚ್ಚಿಟ್ಟ ದೀಪಗಳು ಕೃತಯುಗಕ್ಕಾಗಿ ರಕ್ಷಿಸಲ್ಪಟ್ಟಿರುವ ವರ್ಣಾಶ್ರಮ ಧರ್ಮಗಳ ಮೊಳಕೆಯ ರೇಖುಗಳಂತೆ (ಸಾಲುಗಳಂತೆ) ಅಲ್ಲಲ್ಲಿ ಸುತ್ತಮುತ್ತಲೂ ಮಿನುಗುತ್ತಿದ್ದವು. ಕಗ್ಗತ್ತಿಲಿನಲ್ಲಿ ಹಚ್ಚಿಟ್ಟ ದೀಪಗಳು ಕೃತಯುಗದಲ್ಲಿ ಪುನಃ ಧರ್ಮಪ್ರವರ್ತನ ಮಾಡಲು ಕಾಪಾಡಿದ ಧರ್ಮದ ಮೊಳಕೆಗಳಂತೆ ತೋರುತ್ತಿದ್ದವು ಎಂದು ತಾತ್ಪರ್ಯ.

**ಅವತಾರಿಕೆ :** ಸಾಯಂಕಾಲದಲ್ಲಿ ಉರಿಯುತ್ತಿರುವ ದೀಪಗಳು ಮುಂದೆ ಬರಲಿರುವ ದೊಡ್ಡ ದೀಪದ ಸೂಚನೆಯಂತೆ ಇದ್ದವು ಎಂಬುದಾಗಿ ಕವಿಗಳು ವರ್ಣಿಸುತ್ತಾರೆ.

**ಕಾಲನಾಮನಿಜನಾಟಕಮಧ್ಯೇ ದೀಪಿಕಾವಲಿನಿಭೇನ ವಿಧಾತ್ರಾ ।**
**ಉದ್ಯದಿಂದುಮಯದೀಪವರಸ್ಯ ಪ್ರಾಗತಾನಿ ಕಿಮು ಸೂಚನಭಂಗೀ ॥೨೦॥**

**ತಾತ್ಪರ್ಯ :** ನಾಟಕದಲ್ಲಿ ಸೂತ್ರಧಾರನು ಮುಂದೆ ಬರುವ ಪಾತ್ರವನ್ನು ಮೊದಲೇ ಸೂಚಿಸುತ್ತಾನೆ. ನಾಟಕದಲ್ಲಿ ಸೂಚಿಸಬೇಕಾದ ಅರ್ಥದ ಸೂಚನೆಯನ್ನು ಮುದ್ರಾ, ಮುದ್ರಾಲಂಕಾರ ಎಂಬುದಾಗಿಯೂ ಹೇಳುತ್ತಾರೆ. ಇಲ್ಲಿ ಹುಣ್ಣಿಮೆಯ ದಿನದಲ್ಲಿಯೂ ಹುಣ್ಣಿಮೆಯ ನಂತರದ ಪಾಡ್ಯ ಬಿದಿಗೆ ಮುಂತಾದ ದಿನಗಳಲ್ಲಿಯೂ, ದೀಪಗಳನ್ನು ಹಚ್ಚಿದ ಮೇಲೆಯೇ ಚಂದ್ರನು ಉದಯಿಸುತ್ತಾನೆ. ಉಳಿದ ದಿವಸಗಳಲ್ಲಿಯೂ ಸಾಯಂಕಾಲ ದೀಪಗಳನ್ನು ಹಚ್ಚಿದ ಮೇಲೆಯೇ ಚಂದ್ರನ ಕಡೆಗೆ ದೃಷ್ಟಿಯು ಹೋಗುತ್ತದೆ. ಇದರಿಂದ ಬ್ರಹ್ಮನು ಕಾಲಪುರುಷನ ಪರಿವರ್ತನೆಯೆಂಬ ನಾಟಕವನ್ನು ಆಡಿಸುವಾಗ ಮಧ್ಯದಲ್ಲಿ ದೀಪಗಳನ್ನು ಹಚ್ಚಿಸಿ ಇಡುವುದು ಎಂಬ ನೆಪದಿಂದ ಮುಂದೆ ಉದಯಿಸಲಿರುವ ಚಂದ್ರನೆಂಬ ದೊಡ್ಡ ದೀಪದ ಸೂಚನಾ ಪ್ರಕಾರವನ್ನು ಈ ರೀತಿಯಾಗಿ ಮಾಡುತ್ತಿರುವನೋ ಎಂಬಂತೆ ಇತ್ತು. ಸಾಯಂಕಾಲ ಹಚ್ಚಿದ ಚಿಕ್ಕ ಚಿಕ್ಕ ದೀಪಗಳು ದೊಡ್ಡ ದೀಪವಾದ ಚಂದ್ರನ ಆಗಮನದ ಸೂಚನೆಯ ಚಿಹ್ನೆಯಂತೆ ಕಾಣಿಸುತ್ತವೆ. ಚಿಕ್ಕ ಪಾತ್ರಗಳು ಬಂದು ದೊಡ್ಡ ಪಾತ್ರಗಳ ಆಗಮನವನ್ನು ಸೂಚಿಸುವಂತೆ ಬ್ರಹ್ಮನು ತನ್ನ ಕಾಲಪುರುಷ

ಚರಿತವೆಂಬ ನಾಟಕದಲ್ಲಿ ಈ ರೀತಿಯಾಗಿ ಪಾತ್ರಗಳ ಪ್ರವೇಶದ ಸೂಚನೆಯನ್ನು ಮಾಡುತ್ತಿರುವನೋ ಎಂಬಂತ್ತಿತ್ತು ಎಂದು ಕವಿಗಳು ಉತ್ಪ್ರೇಕ್ಷಿಸಿದ್ದಾರೆ.

**ಅವತಾರಿಕೆ :** ಕವಿಗಳು ಈಗ ಬೆಳದಿಂಗಳನ್ನು ವರ್ಣಿಸುತ್ತಾರೆ.

**ಚಂದ್ರಿಕಾಽಪಿ ಯದಿ ಸಂಘಟಿತಾ ಸ್ಯಾತ್ ಧ್ವಾಂತದೀಪತತಿಸಂಗತಿಕಾಲೇ ।**
**ಕಿಂ ತ್ರಿವೇಣಿಕಥಯಾಽಸ್ತಿ ಕವೀನಾಂ ಸ್ವಲ್ಪತೋಽಪಿ ಜಹತಾಂ ಪುನರುಕ್ತಿಮ್ ॥೨೧॥**

**ತಾತ್ಪರ್ಯ :** ಗಂಗೆಯು ಧವಳವರ್ಣದವಳು; ಸರಸ್ವತಿಯು ಕೆಂಪಾಗಿರುತ್ತಾಳೆ; ಯಮುನೆಯು ಕಪ್ಪು ಬಣ್ಣದವಳು. ಈ ಗಂಗಾ ಯಮುನಾ ಸರಸ್ವತಿಯರು ಸೇರುವ ಸ್ಥಳವನ್ನು ತ್ರಿವೇಣೀ ಎಂದು ಕರೆಯುತ್ತಾರೆ. ಕತ್ತಲೆಯ ಕಪ್ಪು, ದೀಪಗಳ ಜ್ವಾಲೆಯ ಸಾಲು ಕೆಂಪು, ಬೆಳದಿಂಗಳು ಬಿಳಿ, ಇವುಗಳೆಲ್ಲವೂ ಸೇರಿದಾಗ ಒಂದು ಬಾರಿ ತ್ರಿವೇಣೀ ಸಂಗಮವಾಗುತ್ತದೆ. ಪುನಃ ಗಂಗಾ ಯಮುನಾ ಸರಸ್ವತಿಯರ ಸಂಗಮವು ತ್ರಿವೇಣಿಯಾಗುತ್ತದೆ ಎಂದು ಹೇಳಿದರೆ ಪುನರುಕ್ತಿಯಾಗುತ್ತದೆ. ಆದುದರಿಂದ ಅದನ್ನು ಬಿಟ್ಟು ಕತ್ತಲು, ದೀಪ, ಬೆಳದಿಂಗಳಿನ ಸಂಬಂಧದಿಂದ ತ್ರಿವೇಣಿಯಾಗುತ್ತದೆ ಎಂದರೆ ಲಾಘವವು ಬರುತ್ತದೆ. ಪುನರುಕ್ತಿದೋಷದ ಪರಿಹಾರವಾಗುತ್ತದೆ. ಆದ್ದರಿಂದ ಸ್ವಲ್ಪ ಅಂಶವು ಪುನರುಕ್ತಿಯಾದರೂ ದೋಷ ಎಂದು ಹೇಳುವ ಕವಿಗಳು ದೂರದಲ್ಲಿ ಎಲ್ಲೋ ಒಂದು ಕಡೆ ಸೇರುವ ಮೂರು ನದಿಗಳ ಸಂಗಮವನ್ನು ತ್ರಿವೇಣೀ ಎಂದು ವರ್ಣಿಸುವ ಅವಶ್ಯಕತೆ ಏನಿದೆ? ನಾವು ಹೇಳಿದ ಈ ತ್ರಿವೇಣಿಯನ್ನು ವರ್ಣಿಸಿದರೆ ಸಾಲದೇ ಎಂಬುದು ಕವಿವರ್ಯರ ಅಭಿಪ್ರಾಯ.

**ಅವತಾರಿಕೆ :** ಈಗ ಕವಿಗಳು ನಕ್ಷತ್ರಗಳನ್ನು ಕತ್ತಲೆಯ ತುಣುಕುಗಳನ್ನೂ ವರ್ಣಿಸುತ್ತಾರೆ.

**ವ್ಯೋಮಗುಗ್ಗುಲತರೋರ್ಧ್ವಲಾ ನಿರ್ಯಾಸಪಂಕ್ತಿರಿವ ತಾರಕರಾಜಿಃ ।**
**ಶಾರ್ವರೇಭಕಷಣಾಲ್ಲುಲಿತಾಃ ಕಿಂ ತತ್ಕಣಾ ಭುವಿ ತಮೋಮಣಿದಂಭಾತ್ ॥೨೨॥**

**ತಾತ್ಪರ್ಯ :** ಆಕಾಶವೇ ಒಂದು ಗುಗ್ಗುಳದ ಮರ. ಆಕಾಶದಲ್ಲಿ ಹರಡಿರುವ ನಕ್ಷತ್ರಗಳ ಸಾಲು ಗುಗ್ಗುಳ ಮರದ ಬೆಳ್ಳಗಿನ ರಸ ಸುರಿದ ದಾರಿಯಂತೆ, ಗುರುತಿನಂತೆ ಕಾಣಿಸುತ್ತಿತ್ತು. ಕಗ್ಗತ್ತಲೆಯೆಂಬ ಆನೆಯು ತನ್ನ ಮೈಯನ್ನು ಆಕಾಶವೆಂಬ ಗುಗ್ಗುಳದ ಮರಕ್ಕೆ ತಿಕ್ಕಿದಾಗ ಬಿದ್ದ ಮರದ ಚಕ್ಕೆಗಳು, ಕತ್ತಲೆಯ ಚೂರುಗಳ ನೆಪದಲ್ಲಿ, ಕತ್ತಲೆಯ ಮಣಿಗಳ ರೂಪದಲ್ಲಿ ನೆಲದ ಮೇಲೆ ಅಲ್ಲಲ್ಲಿ ಹರಡಿಕೊಂಡಿವೆಯೇನು? ನಕ್ಷತ್ರಗಳು ಆಕಾಶವೆಂಬ ಗುಗ್ಗುಳು ಮರದ ರಸ ಸುರಿದು ಅಲ್ಲಲ್ಲಿ ಗಟ್ಟಿಯಾಗಿ ನಿಂತಿರುವ ಗುರುತುಗಳಂತೆ ಕಾಣಿಸುತ್ತಿದ್ದವು. ಅಲ್ಲಲ್ಲಿ ಹರಡಿರುವ ಕತ್ತಲೆಯ ಚೂರುಗಳು, ಕತ್ತಲೆ ಎಂಬ ಆನೆಯು ತಿಕ್ಕಿದಾಗ ಬಿದ್ದ ಆಕಾಶದ ಚೂರುಗಳು ಎಂಬಂತೆ ಕಾಣಿಸುತ್ತಿವೆ ಎಂಬ ಉತ್ಪ್ರೇಕ್ಷೆಯು.

**ಅವತಾರಿಕೆ :** ಈಗ ಕವಿಗಳು ಚಂದ್ರೋದಯವನ್ನು ವರ್ಣಿಸುತ್ತಾರೆ.

**ಶರ್ವರೀಶಶರದಾ ಪರಿಮೃಷ್ಟಃ ಶಾರ್ವರವ್ರಜಘನಾಘನಸಂಘಃ ।**
**ದೃಶ್ಯತೇ ಸ್ಮ ಶನಕೈರ್ಧವಲಶ್ರೀಶ್ಚಂದ್ರಿಕಾಲಹರಿಕಾಮಪದಿಶ್ಯ ॥೨೩॥**

**ತಾತ್ಪರ್ಯ :** ಶರತ್ಕಾಲದ ಮೋಡಗಳು ಬೆಳ್ಳಗಿರುತ್ತವೆ. ಇಲ್ಲಿ ಚಂದ್ರನೆಂಬ ಶರತ್ಕಾಲದಿಂದ ವ್ಯಾಪ್ತವಾದ ಅಂಧಕಾರವೆಂಬ ಮೇಘಸಂಘವು ಬೆಳದಿಂಗಳಿನ ನೆಪದಿಂದ ಬೆಳ್ಳಗೆ ಕಾಣಿಸುತ್ತಿದೆ ಎಂದು ವರ್ಣಿಸಿದ್ದಾರೆ. "ಚಂದ್ರನೆಂಬ ಶರತ್ಕಾಲದಿಂದ ವ್ಯಾಪ್ತನಾದ ಅಂಧಕಾರವೆಂಬ ಮೋಡಗಳ ಸಮೂಹವು ಬೆಳದಿಂಗಳಿನ ಪರಂಪರೆಯನ್ನು ನೆಪ ಮಾಡಿಕೊಂಡು ಮೆಲ್ಲನೆ ಬಿಳಿಯ ಕಾಂತಿಯಿಂದ ಕೂಡಿದ್ದಾಗಿ ಕಾಣಿಸುತ್ತಿದೆ." ರಾತ್ರಿ ಬೆಳದಿಂಗಳಿನಿಂದ ವ್ಯಾಪ್ತವಾದ ಕತ್ತಲೆಯು ಶರತ್ಕಾಲದ ಮೋಡದಂತೆ ಬೆಳ್ಳಗೆ ಕಾಣಿಸುತ್ತಿದೆ. ಇದು ಬೆಳದಿಂಗಳಲ್ಲ; ಕತ್ತಲೆಯೆಂಬ ಕಪ್ಪಾದ ಮೋಡಗಳ ಸಮೂಹವು ಚಂದ್ರನೆಂಬ ಶರತ್ಕಾಲದಿಂದ ವ್ಯಾಪ್ತವಾಗಿ ಬೆಳ್ಳಗೆ ಕಾಣಿಸುತ್ತಿದೆ ಎಂಬುದಾಗಿ ಕವಿಗಳು ವರ್ಣಿಸಿದ್ದಾರೆ. (ಅಪಹ್ನವಾಲಂಕಾರ).

**ಅವತಾರಿಕೆ :** ಸಂಧ್ಯಾ ಸಮಯದಲ್ಲಿ ಕೆಂಪಾಗಿ ಕಾಣಿಸುವ ಪಶ್ಚಿಮದ ಆಕಾಶವು ವಿರಹಿಗಳನ್ನು ನುಂಗಲು ತೆರೆದ ಬಾಯಿಯಿಂದ ಹೊರಚಾಚಿದ ನಾಲಿಗೆಯೆಂದು ಕವಿಗಳು ಈಗ ವರ್ಣಿಸುತ್ತಾರೆ.

**ಕಾಲಕಾಲವದನೇನ ತಮಿಸ್ರೈಃ ಶ್ಮಶ್ರುಲೇನ ಶರದುನ್ನತತಾರೈಃ ।**
**ಅಂಬರೇಣ ವಿಯುಜಾಂ ಗ್ರಸನಾರ್ಥಂ ಸಾಂಧ್ಯರಾಗರಸನಾ ಪ್ರಸೃತಾ ನು ॥೨೪॥**

**ತಾತ್ಪರ್ಯ :** ಶರತ್ಕಾಲದ ಶ್ರೇಷ್ಠ ನಕ್ಷತ್ರಗಳು ಆಕಾಶ ಪುರುಷನ ಮೀಸೆಯಂತಿವೆ. ಇಂತಹಾ ಆಕಾಶವು ಕತ್ತಲೆಗಳಿಂದ ಕಪ್ಪಾದ ಯಮನ ಮುಖದಂತಿರುವ ತನ್ನ ಮುಖದಿಂದ ವಿರಹಿಗಳನ್ನು ನುಂಗಿ ನಾಶಮಾಡಲು ಬಾಯಿ ತೆರೆದು ಸಂಜೆಯ ಕೆಂಪು ಬಣ್ಣವೆಂಬ ತನ್ನ ನಾಲಿಗೆಯನ್ನು ಮುಂದಕ್ಕೆ ಚಾಚಿದೆಯೋ ಎಂಬಂತೆ ಸಾಯಂಕಾಲದ ಸನ್ನಿವೇಶವು ಕಾಣಿಸುತ್ತಿತ್ತು. (ಉತ್ಪ್ರೇಕ್ಷೆ) ಯಾವನಾದರೊಬ್ಬ ಕಪ್ಪು ಮುಖದ ರಾಕ್ಷಸನು ಬಿಳಿ ಮೀಸೆಯನ್ನು ಧರಿಸಿ ವಿರಹಿಗಳಾದ ನಾಯಿಕೆ, ನಾಯಕರಲ್ಲಿ ಒಬ್ಬರನ್ನು ಎದುರಿಸಿ ಅವರನ್ನು ನುಂಗಲು ಬಾಯಿ ತೆರೆದು ಕೆಂಪಾದ ನಾಲಿಗೆಯನ್ನು ಚಾಚಿದಂತೆ ಸಂಜೆಯ ಸಮಯದ ವಾತಾವರಣವು ಕಾಣಿಸುತ್ತಿತ್ತು ಎಂದು ತಾತ್ಪರ್ಯ.

**ಅವತಾರಿಕೆ :** ಸಂಜೆಯ ಸಮಯದಲ್ಲಿ ಕಪ್ಪಾದ ಆಕಾಶದಲ್ಲಿ ಮಿಂಚು ಹುಳುಗಳು ಮಿನುಗುವುದನ್ನು ಕವಿಗಳು ವರ್ಣಿಸುತ್ತಾರೆ.

**ವಿಪ್ರಯುಕ್ತಸುದೃಶಾಂ ವಿಲಯಾರ್ಥಂ ಧ್ವಾಂತಕಲ್ಪಜಲಧಾವಭಿವೃದ್ಧೇ ।**
**ಬಿಂಬನಶ್ರಿಯಮವಾಪುರುಡೂನಾಂ ಜ್ಯೋತಿರಿಂಗಣಗಣಸ್ಫುರಣಾನಿ ॥೨೫॥**

**ತಾತ್ಪರ್ಯ :** ರಾತ್ರಿಯಾದಾಗ ವಿರಹಿಗಳಾದ ಸುಂದರಿಯರು ಬಹಳ ದುಃಖಿಸುತ್ತಾರೆ.

ಅವರುಗಳಿಗೆ ರಾತ್ರಿಯ ಕಗ್ಗತ್ತಲೆಯು ವಿರಹವನ್ನು ಉಂಟುಮಾಡುತ್ತದೆ. ಅವರಿಗೆ ಈ ವಿರಹದಿಂದಾಗಿ ಪ್ರಾಣನಾಶವನ್ನು ಉಂಟುಮಾಡುವುದಕ್ಕೋ ಎಂಬಂತೆ ಸಂಜೆಯ ಕಗ್ಗತ್ತಲೆಯು ಪ್ರಳಯಕಾಲದ ಸಮುದ್ರದಂತೆ ಹೆಚ್ಚುತ್ತಲಿರುತ್ತದೆ. ಆ ಕತ್ತಲೆಯೆಂಬ ಸಮುದ್ರವು ನಕ್ಷತ್ರಮಂಡಲದವರೆವಿಗೂ ವ್ಯಾಪಿಸಿರುತ್ತದೆ. ಆ ಸಮಯದಲ್ಲಿ ಮಿಂಚು ಹುಳುಗಳೂ ಗುಂಪು ಗುಂಪಾಗಿ ಅಲ್ಲಲ್ಲಿ ಮಿಂಚುತ್ತಲಿದ್ದವು. ಅವುಗಳ ಮಿನುಗುವಿಕೆ ಕತ್ತಲೆಯೆಂಬ ಸಮುದ್ರದಲ್ಲಿ ಮುಳುಗಿಹೋದ ನಕ್ಷತಗಳ ಪ್ರತಿಫಲನದ ಶೋಭೆಯನ್ನು ಹೊಂದಿತ್ತು. ಕತ್ತಲೆಯಲ್ಲಿ ಮುಳುಗಿಹೋದ ನಕ್ಷತ್ರಗಳ ಪ್ರತಿಫಲನದಂತೆ ಮಿಂಚು ಹುಳುಗಳು ಕಾಣಿಸುತ್ತಿದ್ದವು ಎಂಬುದಾಗಿ ಉತ್ಪ್ರೇಕ್ಷೆಯನ್ನು ಮಾಡಲಾಗಿದೆ. (ನಿದರ್ಶನಾಲಂಕಾರ) (ಗಮ್ಯೋತ್ಪ್ರೇಕ್ಷಾ ಉತ್ಪ್ರೇಕ್ಷಾ ಧ್ವನಿ.)

**ಅವತಾರಿಕೆ :** ಈಗ ಕವಿಗಳು ಉದಯಿಸುತ್ತಿರುವ ಚಂದ್ರಬಿಂಬವನ್ನು ವರ್ಣಿಸುತ್ತಾರೆ.

**ಮಾರಕಾರುರಕೃತಾಧಿತಮಿಸ್ರಂ ಗೋಲಮಬ್ಧಿನಲಿನೀವಿರಹಾಗ್ನೇಃ ।**
**ಊರ್ಮಿಭಸ್ತ್ರಪವನೈರತಿತಪ್ತಂ ಶೀತರಶ್ಮ್ಯುದಯರಾಗಮಿಷೇಣ ॥೨೬॥**

**ತಾತ್ಪರ್ಯ :** ಸಂಜೆ ಸೂರ್ಯಾಸ್ತಮಯವಾದ ಕೂಡಲೇ, ಕತ್ತಲೆಯು ದಟ್ಟವಾಗಿ ಹರಡಿತು. ಆ ಕತ್ತಲೆಯಲ್ಲಿ ಮನ್ಮಥನೆಂಬ ಕಮ್ಮಾರನು ಒಂದು ಕಬ್ಬಿಣದ ಗುಂಡನ್ನು, ಸಮುದ್ರದ ಪದ್ಮಿನಿಯ ವಿರಹಾಗ್ನಿಯು ಚೆನ್ನಾಗಿ ಉರಿಯುವುದಕ್ಕಾಗಿ ಸಮುದ್ರದ ಅಲೆಗಳೆಂಬ ತಿದಿಗಳಿಂದ ಚೆನ್ನಾಗಿ ಗಾಳಿ ಬೀಸಿದನು. ವಿರಹಾಗ್ನಿಯನ್ನು ಪ್ರಜ್ವಲನಗೊಳಿಸಿದನು. ಅದರಲ್ಲಿ ಚೆನ್ನಾಗಿ ಕಾದ ಕಬ್ಬಿಣದ ಗುಂಡು ಈಗ ಕೆಂಪಗೆ ಕಾದ ಕಬ್ಬಿಣದ ಗುಂಡಿನಂತಿರುವ ಚಂದ್ರನ ಉದಯರಾಗದ ನೆಪದಿಂದ ಮೇಲಕ್ಕೆ ಬರುತ್ತಿದೆಯೋ ಎಂಬಂತೆ ಕಾಣಿಸುತ್ತಿದೆ. ಉದಯದ ಕೆಂಬಣ್ಣವನ್ನು ಸೂಸುತ್ತಾ ಮೇಲಕ್ಕೆ ಬರುತ್ತಿರುವ ಇದು ಚಂದ್ರಬಿಂಬವಲ್ಲ ; ಮನ್ಮಥನೆಂಬ ಕುಂಬಾರನು ವಿರಹಿಗಳನ್ನು ಬೆದರಿಸಲು ಕಾಸಿರುವ ಕಬ್ಬಿಣದ ಗುಂಡು ಎಂದು ಕವಿಗಳು ವರ್ಣಿಸಿದ್ದಾರೆ. (ಅಪಹ್ನವಾಲಂಕಾರದಿಂದ ಉಜ್ಜೀವಿತವಾದ ಉತ್ಪ್ರೇಕ್ಷಾಲಂಕಾರ).

**ಅವತಾರಿಕೆ :** ಈಗ ಕವಿಗಳು ಉದಯಿಸಿ ಸ್ವಲ್ಪ ಮೇಲಕ್ಕೆ ಬರುತ್ತಿರುವ ಚಂದ್ರಬಿಂಬವನ್ನು ವರ್ಣಿಸುತ್ತಾರೆ.

**ನಿರ್ಯತೋ ಭುವಿ ನಿಲಿಂಪತಟಿನ್ಯಾಃ ಕೌಮುದೀಮಿಷಪಯಃಪ್ರಕರಸ್ಯ ।**
**ಮೌಕ್ತಿಕಭ್ರಮ ಇವ ಪ್ರಚಕಾಶೇ ಪೂರ್ವಶೈಲಶಿಖರೇ ಶಶಿಬಿಂಬಮ್ ॥೨೭॥**

**ತಾತ್ಪರ್ಯ :** ಆಕಾಶಗಂಗೆಯಿಂದ ಬೆಳದಿಂಗಳೆಂಬ ಜಲಪ್ರವಾಹವು (ಹಾಲಿನ ಪ್ರವಾಹವು) ಭೂಮಿಯ ಮೇಲೆ ಸುರಿಯಲಾರಂಭಿಸಿತು. ಈ ಪ್ರವಾಹದ ಮುತ್ತುಗಳಿಂದ ಕೂಡಿದ ಸುಳಿಯಂತೆ ಪೂರ್ವಾಚಲದಲ್ಲಿ ಮೇಲಕ್ಕೆ ಬರುತ್ತಿರುವ ಚಂದ್ರಬಿಂಬವು ಪ್ರಕಾಶಿಸಿತು. ಇದು ಚಂದ್ರಬಿಂಬವಲ್ಲ ; ಆಕಾಶಗಂಗೆಯ ಪ್ರವಾಹದ ಸುಳಿ ಎಂದು ತೋರುತ್ತಿತ್ತು ಎಂದು ಅಭಿಪ್ರಾಯ. (ಅಪಹ್ನುತಿ

ಅಲಂಕಾರದಿಂದ ಉಜ್ಜೀವಿತವಾದ ಉತ್ಪ್ರೇಕ್ಷಾಲಂಕಾರ.)

**ಅವತಾರಿಕೆ :** ಮೊಳಕೆಗಳಿಗೆ ನೀರು ಹಾಯಿಸಲು ಇಬ್ಬರು ಮನುಷ್ಯರು ಹಿಡಿದಿರುವ ನೀರಿನ ಬುಟ್ಟಿಯಂತೆ ಚಂದ್ರಬಿಂಬವು ಇದೆಯೆಂದು ಕವಿಗಳು ಚಂದ್ರಬಿಂಬವನ್ನು ವರ್ಣಿಸುತ್ತಾರೆ.

**ಪೂರ್ವಸಿಂಧುಸಲಿಲೇನ ನಿಷೇಕ್ತುಂ ತಾರಕಾಂಕುರತತಿಂ ತತರಶ್ಮಿ ।**
**ಇಂದುಬಿಂಬಪಿಟಕಂ ಕಿಮು ದಧ್ರೇ ದಕ್ಷಿಣೋತ್ತರಹರಿತ್ ಪರಿಣೇಭ್ಯಾಮ್ ॥೨೮॥**

**ತಾತ್ಪರ್ಯ :** ಭತ್ತ, ತರಕಾರಿ ಮುಂತಾದವುಗಳ ಮೊಳಕೆಗಳಿಗೆ, ನೀರು ಚುಮುಕಿಸಲು ರೈತರು ಕೆಲವು ಕಡೆ ಒಂದು ವಿಚಿತ್ರವಾದ ಕ್ರಮವನ್ನು ಕೈಗೊಳ್ಳುತ್ತಾರೆ. ಒಂದು ಜಲಾಶಯ ಅಥವಾ ನದಿಯ ಉತ್ತರ ದಕ್ಷಿಣ ಭಾಗದ ದಡದಲ್ಲಿ ಇಬ್ಬರು ಮನುಷ್ಯರು ನಿಂತು ಒಂದು ನೀರು ಬುಟ್ಟಿಗೆ ಎರಡು ಕಡೆಯಲ್ಲಿ ಹಗ್ಗ ಕಟ್ಟಿ ಅದರ ಒಂದೊಂದು ತುದಿಯನ್ನು ಒಬ್ಬೊಬ್ಬರು ಹಿಡಿದು ಬುಟ್ಟಿಯನ್ನು ನೀರಿನಲ್ಲಿ ಕೈಚಳಕದಿಂದ ಮುಳುಗಿಸಿ ನೀರನ್ನು ಅದರಲ್ಲಿ ತುಂಬಿ ಮೊಳಕೆಯ ಮಡಿಗಳಿಗೆ ಹಾಯಿಸುತ್ತಾರೆ. ಈ ಬುಟ್ಟಿಯನ್ನು ಬಿದಿರು ದಬ್ಬೆಗಳು ಅಥವಾ ಬಳ್ಳಿಗಳಿಂದ ಮಾಡಿರುತ್ತಾರೆ. ಪ್ರಕೃತದಲ್ಲಿ ದಕ್ಷಿಣ ಮತ್ತು ಉತ್ತರ ದಿಕ್ಕಿನ ಅಧಿಪತಿಗಳಾದ ಇಬ್ಬರು ದೇವತೆಗಳಿಂದ ನಕ್ಷತ್ರಗಳೆಂಬ ಮೊಳಕೆಗಳಿಗೆ ನೀರು ಹಾಯಿಸಲು ಕಿರಣ ಗಳೆಂಬ ಹಗ್ಗಗಳಿಗೆ ಕಟ್ಟಿದ. ಉತ್ತರ ದಕ್ಷಿಣ ದಿಕ್ಕುಗಳ ಕಡೆಗೆ ಹರಡಿದ ಕಿರಣಗಳೆಂಬ ಹಗ್ಗಗಳಿಂದ ಹಿಡಿದು ಆಧರಿಸಿ ಚಾಲನೆ ಮಾಡುತ್ತಿರುವ ಬಿದಿರಿನ ನೀರಿನ ಬುಟ್ಟಿಯೋ ಎಂಬಂತೆ ಚಂದ್ರ ಮಂಡಲವು ಕಾಣಿಸುತ್ತಿದೆ ಎಂಬುದಾಗಿ ಕವಿಗಳು ಉತ್ಪ್ರೇಕ್ಷಿಸಿದ್ದಾರೆ. ತೋಟ ಮುಂತಾದ ಕಡೆ ಮೊಳಕೆಗಳಿಗೆ ನೀರುಣಿಸಲು ಹಿಡಿದಿರುವ ಸೇಕಪಾತ್ರದಂತೆ (ನೀರಿನ ಪಾತ್ರೆಯಂತೆ) ನಕ್ಷತ್ರವೆಂಬ ಅಂಕುರಗಳಿಗೆ ನೀರು ಹಾಯಿಸಲು ಚಂದ್ರಮಂಡಲವೆಂಬ ನೀರು ಬುಟ್ಟಿಯು ದಕ್ಷಿಣ ಮತ್ತು ಉತ್ತರ ದಿಕ್ಪಾಲಕರುಗಳಿಂದ ಎತ್ತಿ ಹಿಡಿಯಲ್ಪಟ್ಟಂತೆ ಉದಯಿಸುತ್ತಿರುವ ಚಂದ್ರ ಮಂಡಲವು ಕಾಣಿಸಿತು ಎಂದು ತಾತ್ಪರ್ಯ.

**ಅವತಾರಿಕೆ :** ಕವಿಗಳು ಚಂದ್ರೋದಯವನ್ನು ನರ್ತಕಿಯ ನರ್ತನದ ಪ್ರಾರಂಭ ಎಂಬುದಾಗಿ ವರ್ಣಿಸುತ್ತಾರೆ.

**ಉತ್‌ಕ್ಷಿಪಂತ್ಯುದಯರಕ್ತಿಮಮೌಲಿಪ್ರಾವೃತಿಂ ಹರಿದಿಶಾ ಹರಿಣಾಕ್ಷೀ ।**
**ಮಂದಮಿಂದುವದನಂ ಕಿಮುದಂಚತ್ಯಾದೃತಾ ನಟಿತುಮಂಬರರಂಗೇ ॥೨೯॥**

**ತಾತ್ಪರ್ಯ :** ಚಂದ್ರೋದಯದ ಕೆಂಪು ಮರೆಯಾಯಿತು. ಚಂದ್ರೋದಯವಾಯಿತು. ಪೂರ್ವದಿಗಂಗನೆಯ ಆಕಾಶವೆಂಬ ರಂಗಸ್ಥಳದಲ್ಲಿ ನಾಟ್ಯವಾಡಲು ಬಂದು, ತನ್ನ ತಲೆಯ ಕೆಂಪಾದ ಪರದೆಯನ್ನು ಸರಿಸಿ, ದೂರ ಎಸೆದು ಮೆಲ್ಲನೆ ತನ್ನ ಚಂದ್ರಮುಖವನ್ನು ಪ್ರೇಕ್ಷಕರುಗಳಿಗೆ ತೋರುತ್ತಿದ್ದಾಳೋ ಎಂಬ ರೀತಿಯಲ್ಲಿ ಆ ಸನ್ನಿವೇಶವು ಕಾಣಿಸುತ್ತಿತ್ತು ಎಂಬುದಾಗಿ ವರ್ಣಿಸಿದ್ದಾರೆ.

**ಅವತಾರಿಕೆ :** ಚಂದ್ರಮಂಡಲವು ಅಭಿಚಾರ ಹೋಮಕ್ಕಾಗಿ ಮನ್ಮಥನು ತನ್ನ ಕೈಗೆ ತೆಗೆದುಕೊಂಡಿರುವ ಬೆಣ್ಣೆಯ ಮುದ್ದೆಯಂತೆ ಇರುವುದಾಗಿ ಕವಿಗಳು ವರ್ಣಿಸುತ್ತಾರೆ.

**ಪಾಂಥಸಂಹೃತಿಕೃತೇ ಕೃತಚೇತಾ ಯಷ್ಟುಮಾದಿತ ಹವಿರ್ನವನೀತಮ್ ।**
**ದ್ರೌತಮೇಷ ವಿಷಮೇಷುರುದನ್ವನ್ ಮೌಲಿಲೋಲವಿಧುಬಿಂಬನಿಭೇನ ॥೩೦॥**

**ತಾತ್ಪರ್ಯ :** ಅಭಿಚಾರ ಯಾಗ (ಹೋಮ) ಮಾಡುವವರು ಅಗ್ನಿಯಲ್ಲಿ ಬೆಣ್ಣೆಯನ್ನು ಹೋಮಿಸುತ್ತಾರೆ. ಪ್ರಕೃತದಲ್ಲಿ ಮನ್ಮಥನು, ವಿರಹಿಗಳಾದ ನಾಯಕರಿಗೆ ಮರಣ ಸಮಾನವಾದ ದುಃಖವನ್ನು ಉಂಟುಮಾಡಲು ಒಂದು ಅಭಿಚಾರಯಾಗವನ್ನು ಮಾಡಬೇಕೆಂದು ನಿರ್ಧರಿಸಿದನು. ಮನ್ಮಥನು ಉದಯಕಾಲದಲ್ಲಿ ಸಮುದ್ರದ ಮೇಲ್ಭಾಗದಲ್ಲಿ ಚಂಚಲವಾಗಿ ಓಲಾಡುತ್ತಿರುವ ಚಂದ್ರಬಿಂಬದ ನೆಪದಿಂದ ಸ್ವಲ್ಪ ಕರಗಿದ ಬೆಣ್ಣೆಯನ್ನು, ಕೈಯಲ್ಲಿ ತಗೆದುಕೊಂಡನೋ ಎಂಬಂತೆ ಕಾಣಿಸುತ್ತಿತ್ತು ಎಂಬುದಾಗಿ ಕವಿಗಳು ಉತ್ಪ್ರೇಕ್ಷಿಸಿದ್ದಾರೆ. ಚಂದ್ರನು ಉದಯಿಸಿದನು; ವಿರಹಿಗಳಿಗೆ ಭಾವೋದ್ರೇಕ ಉಂಟಾಯಿತು ಎಂದು ಧ್ವನಿ.

**ಚಕ್ರವಾಕಮಿಥುನಚ್ಛಲನೀರಕ್ಷೀರನೀರಯೋರಕೃತ ಹಂತ ವಿಭಾಗಮ್ ।**
**ವ್ಯೋಮನಾಮಸರಸೀಕೃತಕೇಲಿಃ ಸಾಯಮೇಷ ಸಿತರಶ್ಮಿಮರಾಲಃ ॥೩೧॥**

**ತಾತ್ಪರ್ಯ :** ನೀಲವರ್ಣದ ಆಕಾಶವೇ ಒಂದು ದೊಡ್ಡ ಕಮಲ ಸರೋವರವು. ಆಕಾಶದಲ್ಲಿ ಸಂಚರಿಸುವ ಚಂದ್ರನು ಆಕಾಶಕಮಲಸರೋವರದಲ್ಲಿ ಸಂಚರಿಸುವ ಹಂಸವು. ಪ್ರಸಿದ್ಧವಾದ ಹಂಸವು ಹಾಲು ಮತ್ತು ನೀರನ್ನು ಬೆರಸಿ ಇಟ್ಟಾಗ ಬೆರತ ನೀರು ಹಾಲುಗಳನ್ನು ಬೇರ್ಪಡಿಸುತ್ತದೆ. ಹಂಸವು ಹಾಲನ್ನು ಮಾತ್ರ ಕುಡಿದು ನೀರನ್ನು ಬಿಟ್ಟು ಬಿಡುತ್ತದೆ. ಪ್ರಕೃತದಲ್ಲಿ ಹಗಲಿನ ಹೊತ್ತಿನಲ್ಲಿ ಹಾಲು ನೀರುಗಳಂತೆ ಬೆರೆತು ಅನ್ಯೋನ್ಯವಾಗಿದ್ದ ಚಕ್ರವಾಕಗಳ ಜೋಡಿಯೆಂಬ ಹಾಲು ನೀರನ್ನು, ಸಾಯಂಕಾಲದಲ್ಲಿ ಚಂದ್ರನು ತನ್ನ ಉದಯವಾದ ಕೂಡಲೇ ಬೇರ್ಪಡಿಸಿದನು. ಆದರೆ ಈ ಬೇರ್ಪಡಿಸುವಿಕೆಯು ಬಹಳ ದುಃಖದಾಯಕವಾಯಿತು. ಅಯ್ಯೋ! ಎಂದು ಕವಿಗಳು ಚಕ್ರವಾಕ ಮಿಥುನದ ವಿರಹವನ್ನು ಕುರಿತು ಶೋಕಿಸಿದ್ದಾರೆ. ಸಂಜೆಯ ವೇಳೆಯಲ್ಲಿ ಚಕ್ರವಾಕ ಮಿಥುನವು ವಿಯೋಗ ಹೊಂದಿತು ಎಂಬುದಾಗಿ ಭಾವ.

**ಅವತಾರಿಕೆ :** ಕವಿಗಳು ಚಂದ್ರನು ಯಾಗದಲ್ಲಿ ಸಂಸ್ಕರಿಸುವ 'ವಪಾ' ಎಂಬ ಪಶುವಿನ ಅವಯವ ವಿಶೇಷದಂತೆ ಇರುವನು ಎಂದು ವರ್ಣಿಸುತ್ತಾರೆ.

**ಪೂರ್ವಭೂಮಿಧರವೇದಿಗತೋದ್ಯದ್ರಾಗವಹ್ನ್ಯುಪರಿ ರಶ್ಮಿಘೃತಾಕ್ತಾಮ್ ।**
**ಸಂಪಚನ್ ವಿಧುವಪಾಂ ಸಮಯೋಽಧಾದ್ಯೋಜಿತಾಂಬರವಪಾಶ್ರಪಣೀಕಾಮ್ ॥೩೨॥**

**ತಾತ್ಪರ್ಯ :** ಯಜ್ಞದಲ್ಲಿ ಪಶುವನ್ನು ವಧಿಸಿದ ನಂತರ ಅದರ ಹೃದಯವನ್ನು ಕತ್ತರಿಸಿ ವಪಾ ಎಂಬ ಹೃದಯದ ಒಳಭಾಗದಲ್ಲಿರುವ ಮಾಂಸಖಂಡವನ್ನು ತೆಗೆದು ಅದಕ್ಕೆ ತುಪ್ಪವನ್ನು

ಸುರಿದು ಬೆಂಕಿಯಲ್ಲಿ ಕಾಯಿಸಿ ಶ್ರಪಣೀ ಎಂಬ ಮುಳ್ಳುಗಳ ಸಮುದಾಯದಂತಿರುವ ಸಾಧನದ ಮೇಲೆ ಇಟ್ಟು ಸೂರ್ಯನಿಗೆ ಎದುರಾಗಿ ತೆಗೆದುಕೊಂಡು ಹೋಗುತ್ತಾರೆ. ಅದೇ ರೀತಿಯಲ್ಲಿ ಪ್ರಸ್ತುತ ಸಾಯಂಕಾಲ ಎಂಬ ಯಾಗಕರ್ತನು ಪೂರ್ವಾದ್ರಿ ಎಂಬ ಯಜ್ಞವೇದಿಯಲ್ಲಿ ಸಂಜೆ ಸೂರ್ಯಾಸ್ತವಾದಾಗ ಇತ್ತ ಚಂದ್ರೋದಯದ ಕೆಂಪು ಬಣ್ಣವು ಉದಯಿಸಿದಾಗ ಆ ಕೆಂಪು ಬಣ್ಣವೆಂಬ ಯಜ್ಞದ ಬೆಂಕಿಯ ಮೇಲೆ ಕಿರಣಗಳೆಂಬ ತುಪ್ಪವನ್ನು ಸುರಿದು ಆರ್ದ್ರವಾಗಿರುವ ಚಂದ್ರಮಂಡಲವೆಂಬ ವಪೆಯನ್ನು ಚೆನ್ನಾಗಿ ಪಾಕ ಮಾಡಿದನು. ಅನಂತರ ವಪಾಪಾಕ ಸಾಧನವಾದ ಮುಳ್ಳಿನ ರಾಶಿಯಂತಿರುವ ಆಕಾಶದಲ್ಲಿ ಆ ವಿಧುವಪೆಯನ್ನು ಇಟ್ಟಿತು (ಇಟ್ಟನು) ಎಂಬುದಾಗಿ ಕವಿಗಳು ರೂಪಕಮೂಲಕವಾದ ಉತ್ಪ್ರೇಕ್ಷೆಯಿಂದ ವರ್ಣಿಸಿದ್ದಾರೆ.

**ಅವತಾರಿಕೆ :** ಚಂದ್ರನು ಉದಯಿಸಿದ ಕೂಡಲೇ ಪ್ರಪಂಚವು ಬೆಳಗುತ್ತಿರುವುದನ್ನು ಕವಿಗಳು ವರ್ಣಿಸುತ್ತಾರೆ.

**ಅಂಧಕಾರನಿಭಕಲ್ಪವಿರಾಮೇ ವಿಪ್ಲುತಂ ಜಗದಿದಂ ವಿಧುವೇಧಾಃ ।**
**ಕಿಂ ಸಸರ್ಜ ತದಿದಂ ಯದಮುಷ್ಮಿನ್ ಉದ್ಯತೇ ಸತಿ ಪರಂ ವಿಲಲಾಸ ॥೩೩॥**

**ತಾತ್ಪರ್ಯ :** ರಾತ್ರಿಯ ಘೋರವಾದ ಅಂಧಕಾರವು ಪ್ರಳಯಕಾಲದಂತೆ ಈ ಪ್ರಪಂಚವನ್ನು ನಾಶಗೊಳಿಸಿತು. ಅಂಧಕಾರದಲ್ಲಿ ಜಗತ್ತೆಲ್ಲವೂ ನಾಶವಾದಂತೆ ಕಂಡಿತು. ಪ್ರಲಯ ಕಾಲದಲ್ಲಿ ಪುನಃ ಸೃಷ್ಟಿಮಾಡುವ ರೀತಿಯಲ್ಲಿ ಚಂದ್ರನಾಮಕ ಚತುರ್ಮುಖ ಬ್ರಹ್ಮನು ಈ ಪ್ರಪಂಚವನ್ನು ಮತ್ತೆ ಸೃಷ್ಟಿಮಾಡಿದಂತೆ ಆಯಿತು. ಏಕೆಂದರೆ ಚಂದ್ರನು ಉದಯಿಸಿದ ಕೂಡಲೇ ಕತ್ತಲೆಯಲ್ಲಿ ಕಣ್ಮರೆಯಾಗಿ ನಾಶವಾಯಿತೋ ಎಂಬಂತಿದ್ದ ಪ್ರಪಂಚವು ಮತ್ತೆ ಸೃಷ್ಟಿ ಆದಂತೆ ವಿರಾಜಿಸಿತು. ಕತ್ತಲೆಯಲ್ಲಿ ಕಾಣದ ಈ ಲೋಕವು ಚಂದ್ರನು ಉದಯಿಸಿದ ತಕ್ಷಣದಲ್ಲಿ ಶೋಭಿಸುವುದನ್ನು ಕಂಡು ಕವಿಗಳು ಚಂದ್ರನೆಂಬ ಬ್ರಹ್ಮನು ಈ ವಿನಷ್ಟವಾದ ಲೋಕವನ್ನು ಪುನಃ ಸೃಷ್ಟಿ ಮಾಡಿದಂತೆ ಕಂಡಿತು ಎಂಬುದಾಗಿ ಉತ್ಪ್ರೇಕ್ಷಿಸಿದ್ದಾರೆ.

**ಅವತಾರಿಕೆ :** ಕವಿಗಳು ಸಂಧ್ಯಾ ಸಮಯದಲ್ಲಿ ಉದಯಿಸುತ್ತಿರುವ ಚಂದ್ರನನ್ನು ಶೇಷದೇವನಿಗೆ ಹೋಲಿಸಿ ಉತ್ಪ್ರೇಕ್ಷಿಸುತ್ತಾರೆ.

**ಸಂಯಮೀಂದ್ರವಿವಿಧೋಕ್ತಿವಿಲಾಸಂ ಶ್ರೋತುಮುತ್ಸುಕಮನಾ ದಿವಸಾಂತೇ ।**
**ಉನ್ಮಮಜ್ಜ ಜಲಧೇರ್ವಿಧುದಂಭಾದ್ದರ್ಶಯನ್ ಫಣಗಣಾನ್ ಫಣಿರಾಜಃ ॥೩೪॥**

**ತಾತ್ಪರ್ಯ :** ಸಂಜೆಗೆಂಪು ಮತ್ತು ಹೊಂಬಣ್ಣದ ಕಿರಣಗಳನ್ನು ಹರಡುತ್ತಾ ಚಂದ್ರನು ಉದಯಿಸುತ್ತಿರುವಾಗ ಪಾತಾಳದಿಂದ ಹೊರಟ ಶೇಷದೇವನು ಸಮುದ್ರ ಮಧ್ಯದಿಂದ ಮೇಲಕ್ಕೆ ಬರುತ್ತಿರುವಂತೆ ಕಾಣಿಸುತ್ತಿತ್ತು. ಈ ಸನ್ನಿವೇಶವನ್ನು ಕಲ್ಪಿಸಿಕೊಂಡು ಕವಿವರ್ಯರು ವರ್ಣಿಸುತ್ತಿದ್ದಾರೆ. ಜ್ಞಾನಿಗಳೂ ಯತಿಶ್ರೇಷ್ಠರೂ ಆದ ಶ್ರೀರಾಘವೇಂದ್ರ ಗುರುಸಾರ್ವಭೌಮರ

ಮಾತಿನ ವೈಖರಿಯನ್ನು ಕೇಳುವುದರಲ್ಲಿ ಉತ್ಕಂಠತೆಯುಳ್ಳ ಶೇಷದೇವನು ಸಂಜೆ ಚಂದ್ರನೆಂಬ ನೆಪದಿಂದ ತನ್ನ ಹೆಡೆಗಳನ್ನು (ಕಿರಣಗಳ ರೂಪದಿಂದ) ಚಾಚಿ (ಹರಡಿ) ತೋರಿಸುತ್ತಾ ಸಮುದ್ರ ಮಧ್ಯದಿಂದ ಮೇಲಕ್ಕೆದ್ದು ಬರುತ್ತಿರುವನೋ ಎಂಬಂತೆ ಕಾಣಿಸುತ್ತಿತ್ತು (ಉತ್ಪ್ರೇಕ್ಷಾ). (ಸಾಯಂಕಾಲ ಮೇಲಕ್ಕೆ ಬಂದನು ಎಂಬುದಾಗಿ ಹೇಳಿರುವುದರಿಂದ ರಾತ್ರಿಕಾಲದಲ್ಲಿಯೇ ಸರ್ಪಗಳಿಗೆ ಸಂಚಾರ ಎಂಬುದಾಗಿ ಧ್ವನಿತವಾಗಿದೆ.)

**ಅವತಾರಿಕೆ :** ಸಂಧ್ಯಾ ಕಾಲದಲ್ಲಿ ಸೂರ್ಯಾಸ್ತಮಾನ – ಚಂದ್ರೋದಯಗಳು ಏಕಕಾಲದಲ್ಲಿ ಪರಸ್ಪರ ಅಭಿಮುಖವಾಗಿ ಆಗುತ್ತಿರುವಾಗ, ಆ ಎರಡು ಬಿಂಬಗಳಲ್ಲಿ ವ್ಯತ್ಯಾಸವನ್ನು ಹೇಗೆ ಕಂಡುಹಿಡಿಯಬೇಕು ಎಂಬುದನ್ನು ಕವಿಗಳು ಹೇಳುತ್ತಿದ್ದಾರೆ.

**ರಕ್ತಯೋರಭಿಮುಖಂ ಸ್ಥಿತಿಭಾಜೋಃ ಪದ್ಮಿನೀಕುಮಿದಿನೀಪರಿಣೇತ್ರೋಃ ।**
**ಕಃ ಕರೋತು ಬತ ಬಿಂಬವಿವೇಕಂ ನಾಪರತ್ರ ಯದಿ ಲಕ್ಷ್ಮವಿಲಾಸಃ ॥೩೫॥**

**ತಾತ್ಪರ್ಯ :** ಸಂಧ್ಯಾಸಮಯದಲ್ಲಿ ಪೂರ್ವದಿಕ್ಕಿನಲ್ಲಿ ಉದಯದ ಕೆಂಪು ಬಣ್ಣದಿಂದ ಕೂಡಿ ಹೊಂಬಣ್ಣದ ಚಂದ್ರಮಂಡಲವು ಉದಯಿಸುತ್ತಾ ಇರುತ್ತದೆ. ಪಶ್ಚಿಮದಿಕ್ಕಿನಲ್ಲಿ ಅಸ್ತಮಯದ ಕೆಂಪು ಮತ್ತು ಸುವರ್ಣವರ್ಣದಿಂದ ಕೂಡಿದ ಸೂರ್ಯಮಂಡಲವು ಇರುತ್ತದೆ. ಈ ಬಿಂಬಗಳೆರಡೂ ಒಂದಕ್ಕೊಂದು ಅಭಿಮುಖವಾಗಿ ಸ್ವಲ್ಪಹೊತ್ತು ಇರುತ್ತದೆ. ಆಗ ಇದು ಚಂದ್ರಬಿಂಬ – ಇದು ಸೂರ್ಯಬಿಂಬ ಎಂಬ ವ್ಯತ್ಯಾಸವನ್ನು ತಿಳಿಯಲು ಕಷ್ಟವಾಗುತ್ತದೆ. ಸೂರ್ಯ ಚಂದ್ರರಿಬ್ಬರಲ್ಲಿ ಯಾರು ಉದಯಿಸುತ್ತಾರೆ. ಯಾರು ಅಸ್ತಮಯ ಹೊಂದುತ್ತಾರೆ ಎಂದು ಹೇಳಲೂ ಕಷ್ಟವಾಗುತ್ತದೆ. ಆದರೆ ಇವೆರಡು ಬಿಂಬಗಳಲ್ಲಿ ಒಂದರಲ್ಲಿ ಕಳಂಕದ ವಿಲಾಸವನ್ನು ಕಂಡು, ಕಪ್ಪಾದ ಗುರುತು ಚಂದ್ರನ ಅಸಾಧಾರಣ ಧರ್ಮವಾದುದರಿಂದ. ಈ ಕಪ್ಪಾದ ಕಲಂಕ ಲಕ್ಷಣದಿಂದ ಇದು ಚಂದ್ರಬಿಂಬವು, ಈ ಗುರುತು ಇಲ್ಲದಿರುವ ಮತ್ತೊಂದು ಸೂರ್ಯಬಿಂಬವು ಎಂಬ ವಿವೇಚನೆಯನ್ನು ಮಾಡಿಕೊಳ್ಳಬಹುದು. ಈ ಲಕ್ಷಣ ವ್ಯತ್ಯಾಸವನ್ನು ತಿಳಿಯದಿದ್ದರೆ ಸೂರ್ಯಮಂಡಲವು ಯಾವುದು ಚಂದ್ರಮಂಡಲವು ಯಾವುದು ಎಂದು ತಿಳಿಯಲು ಯಾರೊಬ್ಬರಿಗೂ ಸಾಧ್ಯವಾಗುವುದಿಲ್ಲ ಎಂಬುದಾಗಿ ತಾತ್ಪರ್ಯ. (ಸಾಯಂಕಾಲೇ ಪೂರ್ವದಿಶಿ ಚಂದ್ರಮಂಡಲಂ ಪ್ರತೀಚ್ಯಾಂ ರವಿಮಂಡಲಂ ವರ್ತತೆ, ಉಭಯೋರಪಿ ರಕ್ತವರ್ಣತ್ವಾತ್ ವಿಶೇಷಾಭಾವೇನ ಸೂರ್ಯಮಂಡಲಮಿದಂ ಚಂದ್ರಮಂಡಲಮಿದಂ ಇತಿ ಕೇನಾಪಿ ನ ಜ್ಞಾಯತೇ ಇತಿ ಭಾವಃ ಎಂದು ಸಂಸ್ಕೃತಭಾಷೆಯಲ್ಲಿ ವ್ಯಾಖ್ಯಾನಕಾರರು ತಾತ್ಪರ್ಯವನ್ನು ಬರೆದಿರುತ್ತಾರೆ.)

**ಅವತಾರಿಕೆ :** ಪೂರ್ವಶೈಲದಲ್ಲಿ ಉದಯಿಸುತ್ತಿರುವ ಚಂದ್ರಬಿಂಬವು ಒಂದು ತೀರ್ಥವೆಂದೂ ಅದನ್ನು ಹೊಂದಿದವರಿಗೆ ಪುಣ್ಯವು ಉಂಟಾಯಿತೆಂದೂ ಕವಿಗಳು ವರ್ಣಿಸುತ್ತಾರೆ.

**ಪೂರ್ವಶೈಲವೃಷಭಾಚಲದೃಶ್ಯಂ ದೇವತೀರ್ಥಮಧಿಗಮ್ಯ ಸುಧಾಂಶುಮ್ ।**

**ಹೃಷ್ಯತೋಽಸ್ಯ ಭುವನಸ್ಯ ನಮೋಘಂ ಚಂದ್ರಿಕಾऽऽತ್ಮಸುಕೃತತ್ವಮಯಾಸೀತ್ ॥೩೬॥**

**ತಾತ್ಪರ್ಯ :** ಪುಣ್ಯಕ್ಷೇತ್ರಕ್ಕೆ ಹೋಗಿ ಪರಮಾತ್ಮನ ಸೇವೆ ಮಾಡಿದವರಿಗೆ ಯಾವ ರೀತಿಯಲ್ಲಿ ಪುಣ್ಯ ಪ್ರಾಪ್ತಿ ಆಗುತ್ತದೆಯೋ ಅದೇ ರೀತಿಯಲ್ಲಿ ಚಂದ್ರನು ಉದಯಿಸುವ ಪೂರ್ವಶೈಲವೆಂಬ ವೃಷಭಾದ್ರಿಯಲ್ಲಿ ನಿರ್ಜರ ರೂಪದಿಂದ ಕಾಣಲು ಸಾಧ್ಯವಾದ ತೀರ್ಥದಂತಿರುವ ಅಮೃತಮಯ ಕಿರಣಗಳುಳ್ಳ ಚಂದ್ರನೆಂಬ ದೇವತೀರ್ಥವನ್ನು ಹೊಂದಿದ ಲೋಕವು ಸಂತೋಷಪಟ್ಟಿತು. ಆ ತೀರ್ಥ ಸೇವನೆಯ ಫಲವಾಗಿ ಲೋಕಕ್ಕೆಲ್ಲಾ ಬೆಳದಿಂಗಳೆಂಬ ಪುಣ್ಯಪ್ರಾಪ್ತಿಯಾಯಿತು. (ತಮಿಳುನಾಡಿನಲ್ಲಿ ವೃಷಭಾಚಲ ಎಂಬ ಪುಣ್ಯಕ್ಷೇತ್ರವಿದೆ. ಅದನ್ನು ಅಳಗರ್ ಕೋಯಿಲ್ ಎಂಬುದಾಗಿ ಕರೆಯುತ್ತಾರೆ. ಅಲ್ಲಿರುವ ಪರಮಾತ್ಮನ ನೂಪುರ (ಕಾಲ್ಗಡಗ) ದಿಂದ ನೂಪುರಗಂಗಾ ಎಂಬ ಹೆಸರಿನ ನದಿಯು ಉತ್ಪನ್ನವಾಯಿತು. ಅದು ಬೆಟ್ಟದಿಂದ ತೊರೆಯ ರೂಪದಲ್ಲಿ ಹರಿದು ಬರುತ್ತದೆ. ವೃಷಭಾಚಲವನ್ನೇರಿ ನೂಪುರಗಂಗಾ ನದಿಯಲ್ಲಿ ಸ್ನಾನ ಮಾಡಿದವರಿಗೆ ಪುಣ್ಯಪ್ರಾಪ್ತಿ ಆಗುವಂತೆ ಉದಯಪರ್ವತವೆಂಬ ವೃಷಭಾಚಲದಲ್ಲಿ ಇರುವ ಅಮೃತಕಿರಣನೆಂಬ ನೂಪುರಗಂಗಾ ತೀರ್ಥವನ್ನು ಪಡೆದು ಸ್ನಾನ ಮಾಡುವವರಿಗೆ ಕಣ್ಣಿಗೆ ಕಾಣಿಸುವ ಪುಣ್ಯದಂತಿರುವ ಬೆಳದಿಂಗಳು ಎಂಬ ಪುಣ್ಯವು ಪ್ರಾಪ್ತಿಯಾಯಿತು ಎಂದು ಭಾವ.

**ಅವತಾರಿಕೆ :** ಈ ರೀತಿಯಾಗಿ ಸಂಧ್ಯಾಕಾಲದಲ್ಲಿ ಚಂದ್ರೋದಯ ಆಗುತ್ತಿರುವಾಗ ಯತಿಸಾರ್ವಭೌಮರಾದ ಶ್ರೀರಾಘವೇಂದ್ರತೀರ್ಥರು ಸಾಯಂಕಾಲದ ಸ್ನಾನ ಪೂಜಾದಿಗಳಿಗೆ ಸಿದ್ಧರಾಗಿ ದಯಮಾಡಿಸಿದುದನ್ನು ಕವಿಗಳು ತಿಳಿಸುತ್ತಾರೆ.

**ವಿಷ್ಟಪೇ ವಿಧುರುಚಾ ವಿದಧಾನೇ ಕ್ಷೀರಸಾಗರನಿಮಜ್ಜನಕೇಲಿಮ್ ।**
**ಪಾಠಕರ್ಮ ಸ ಸಮಾಪ್ಯ ಸರಸ್ಯಾಂ ಮಂಕ್ತುಮಂತ ಉದಯುಂಕ್ತ ಯತೀಂದ್ರಃ ॥೩೭॥**

**ತಾತ್ಪರ್ಯ :** ಶುಭ್ರವಾದ ಚಂದ್ರಕಿರಣಗಳ ಪ್ರಕಾಶದಲ್ಲಿ ಬೆಳದಿಂಗಳಿನಲ್ಲಿ ಮುಳುಗಿದ ಪ್ರಪಂಚವು ಕ್ಷೀರಸಮುದ್ರದಲ್ಲಿ ಆಟವಾಡುತ್ತಿರುವ ರೀತಿಯಲ್ಲಿ ಕಾಣಿಸುತ್ತಿತ್ತು. ಅಷ್ಟರಲ್ಲಿ ಯತಿಕುಲತಿಲಕರಾದ ಶ್ರೀ ರಾಘವೇಂದ್ರ ಗುರುಸಾರ್ವಭೌಮರು ಪ್ರವಚನ ಕಾರ್ಯಕ್ರಮವನ್ನು ಸಮಾಪ್ತಿಗೊಳಿಸಿ ಶ್ರೀಮಠದ ಹಿಂಭಾಗದ ಪುಷ್ಕರಣಿಯಲ್ಲಿ ರಾತ್ರಿಯ ಅವಗಾಹನ ಸ್ನಾನಕ್ಕಾಗಿ ಎದ್ದರು.

**ಅವತಾರಿಕೆ :** ಕವಿಗಳು ಈಗ ಶ್ರೀ ಗುರುರಾಘವೇಂದ್ರರು ಸ್ನಾನವನ್ನು ಮುಗಿಸಿ, ಆಹ್ನೀಕವನ್ನು ಮುಗಿಸಿ, ಶ್ರೀಮನ್ಮೂಲರಾಮದೇವರ ಪೂಜೆ ಮಾಡಲು ಉಪಕ್ರಮಿಸಿದುದನ್ನು ವರ್ಣಿಸುತ್ತಾರೆ.

**ಸ್ನಾನಕರ್ಮ ವಿರಚಯ್ಯ ವಸಾನೋ ವಾಸಸೀ ತ್ರಿಪದಯಾ ಸವಿತಾರಮ್ ।**
**ವಂದತೇ ಸ್ಮ ತದನು ತ್ರಿದಶೇಶಂ ವಿಷ್ಣುಮೈಹತ ಸಮರ್ಹಿತುಮರ್ಹಮ್ ॥೩೮॥**

**ತಾತ್ಪರ್ಯ :** ಶ್ರೀರಾಘವೇಂದ್ರಯತಿಗಳು ಸ್ನಾನವನ್ನು ಮುಗಿಸಿದರು. ತದನಂತರ ಎರಡು ಕಾವಿಯ ವಸ್ತ್ರಗಳನ್ನು ಧರಿಸಿ ಅರ್ಘ್ಯಪ್ರಧಾನ ಮಾಡಿ, ಗಾಯತ್ರೀ ಜಪವನ್ನು ಮಾಡಿದರು. ಪ್ರಣವ ಮತ್ತು ಗಾಯತ್ರೀ ಜಪಾನಂತರದಲ್ಲಿ ಎಲ್ಲ ದೇವತೆಗಳಿಗೂ ಪೂಜ್ಯನಾದ ಸಮಸ್ತ ದೇವತಾ ಸಾರ್ವಭೌಮನಾದ ಶ್ರೀಮನ್ನಾರಾಯಣಾಭಿನ್ನನಾದ ಶ್ರೀಮನ್ಮೂಲರಾಮಚಂದ್ರದೇವರನ್ನು ಪೂಜಿಸಲು ಬಯಸಿ ಪೂಜಿಸಲಾರಂಭಿಸಿದರು.

**ಅವತಾರಿಕೆ :** ಈಗ ಕವಿವರ್ಯರು ಶ್ರೀರಾಘವೇಂದ್ರ ಗುರುಸಾರ್ವಭೌಮರು ಮಾಡಿದ ಶ್ರೀಮನ್ಮೂಲ ರಾಮಚಂದ್ರದೇವರ ಪೂಜಾ ವೈಭವವನ್ನು ವರ್ಣಿಸುತ್ತಾರೆ.

**ಅರ್ಪಯನ್ ಭಗವತೇ ಸುಮಮಾಲ್ಯಂ ಪ್ರೀಣಯನ್ಪಯಸಾ ಚ ಫಲೇನ ।**
**ಹೇಮಪಾತ್ರವಿಲಸದ್ಘನಸಾರಾರಾರ್ತಿಕೇನ ಕಲಯಂಸ್ತಮಹೃಷ್ಯತ್ ॥೩೯॥**

**ತಾತ್ಪರ್ಯ :** ಮುನಿಶ್ರೇಷ್ಠರಾದ ಶ್ರೀರಾಘವೇಂದ್ರತೀರ್ಥರು ಸಮಗ್ರ ಷಡ್ಗುಣೈಶ್ವರ್ಯ ಸಂಪನ್ನನಾದ ಶ್ರೀಮನ್ಮೂಲರಾಮಚಂದ್ರ ದೇವರಿಗೆ ಹೂವಿನ ಮಾಲೆಗಳನ್ನು ಅರ್ಪಿಸಿದರು. ಅನಂತರ ಹಾಲು ಹಣ್ಣುಗಳನ್ನು ನೈವೇದ್ಯ ಮಾಡಿದರು ತದನಂತರದಲ್ಲಿ ಬಂಗಾರದ ತಟ್ಟೆಯಲ್ಲಿ ಕರ್ಪೂರದ ಆರತಿಯನ್ನು ಬೆಳಗಿ ಆ ಬೆಳಕಿನಲ್ಲಿ ಶ್ರೀಮನ್ಮೂಲರಾಮಚಂದ್ರದೇವರ ಸುಂದರ ವದನಾರವಿಂಧಚಂದ್ರನನ್ನು ನೋಡಿ ಆನಂಧಭರಿತರಾದರು.

**ಅವತಾರಿಕೆ :** ಮಂಗಳ ನೀರಾಜನದ ನಂತರದಲ್ಲಿ ಶ್ರೀರಾಘವೇಂದ್ರತೀರ್ಥರು ಮಂತ್ರಪುಷ್ಪವನ್ನು ಎರಡು ಕೈಗಳಲ್ಲಿ ತಲೆಯ ಮೇಲೆ ಹಿಡಿದುಕೊಂಡು ಶ್ರೀಮನ್ಮೂಲರಾಮಚಂದ್ರ ಮೂರ್ತಿಯನ್ನು ಸ್ತೋತ್ರ ಮಾಡಲು ಪ್ರಾರಂಭಿಸಿದರು ಎಂಬುದಾಗಿ ಕವಿಗಳು ವರ್ಣಿಸುತ್ತಾರೆ.

**ಮಂತ್ರಪುಷ್ಪಮಧಿಮೌಲಿ ದಧಾನೋ ಯಂತ್ರಿತಾನ್ಯವಿಷಯೋ ರಘುನೇತುಃ ।**
**ಸಾದರಂ ದರನಿಮೀಲಿತನೇತ್ರಃ ಸ್ತೋತುಮಾರಭತ ಸಂಯಮಿಧುರ್ಯಃ ॥೪೦॥**

**ತಾತ್ಪರ್ಯ :** ನಂತರದಲ್ಲಿ ಸನ್ಯಾಸಿ ಶ್ರೇಷ್ಠರಾದ ಶ್ರೀರಾಘವೇಂದ್ರಯತಿಗಳು ಮಂತ್ರ ಸಹಿತವಾದ ಪುಷ್ಪಾಂಜಲಿಯನ್ನು ತಮ್ಮ ತಲೆಯ ಮೇಲೆ ಧರಿಸಿದರು. ಹೊರಗಿನ ವಸ್ತುಗಳಿಗೆ ಸಂಬಂಧಿಸಿದ ಎಲ್ಲ ವಿಷಯಗಳನ್ನೂ ಬಿಟ್ಟರು (ಮರೆತರು). ಕಣ್ಣುಗಳನ್ನು ಸ್ವಲ್ಪವಾಗಿ ಮುಚ್ಚಿ ತಮ್ಮ ಹೃದಯಾಕಾಶದಲ್ಲಿ ಶ್ರೀಮನ್ಮೂಲರಾಮಚಂದ್ರ ದೇವರನ್ನು ಧ್ಯಾನಿಸುತ್ತಾ ಭಕ್ತಿಪರವಶರಾಗಿ ಈ ರೀತಿಯಾಗಿ ಸ್ತೋತ್ರ ಮಾಡಲಾರಂಭಿಸಿದರು.

**ಅವತಾರಿಕೆ :** ಶ್ರೀರಾಘವೇಂದ್ರ ಗುರುಸಾರ್ವಭೌಮರು ಮೊದಲು ಮತ್ಸ್ಯಾವತಾರವನ್ನು ಧ್ಯಾನಿಸಿ ವರ್ಣಿಸುತ್ತಾರೆ.

**ವೇದಸಿದ್ಧಮಣುತೋಽಪ್ಯಣುಭಾವಂ ಮೋದದಾಯಿ ಮಹತೋಽಪಿ ಮಹತ್ವಮ್ ।**
**ಬಿಭ್ರತಂ ಪ್ರಥಯಿತುಂ ಮನವೇ ತ್ವಾಂ ಮೀನತಾಂ ಶರಣಯಾಮಿ ಭವಂತಮ್ ॥೪೧॥**

**ತಾತ್ಪರ್ಯ :** ಸ್ವಾಯಂಭುವ, ಸ್ವಾರೋಚಿಷ, ಉತ್ತಮ, ತಾಪಸ, ರೈವತ, ಚಾಕ್ಷುಷ ಎಂಬ ಆರು ಮನುಗಳ ಮನ್ವಂತರಗಳು ಮುಗಿದಿವೆ. ಈಗ ಏಳನೆಯ ವೈವಸ್ವತ ಮನ್ವಂತರ ನಡೆಯುತ್ತಿದೆ. ಈ ಹಿಂದೆ ಮುಗಿದ ಆರನೆಯ ಚಾಕ್ಷುಷ ಮನ್ವಂತರದ ಕೊನೆಯಲ್ಲಿ ಸತ್ಯವ್ರತನೆಂಬ ಚಕ್ರವರ್ತಿ ಇದ್ದನು. ಅವನು ಒಂದು ದಿನ ಕೃತಮಾಲಾ ಎಂಬ ನದಿಯಲ್ಲಿ ಸ್ನಾನ ಮಾಡಿ ಬೊಗಸೆಯಲ್ಲಿ ನೀರನ್ನು ತುಂಬಿಕೊಂಡು ಅರ್ಘ್ಯವನ್ನು ಕೊಡುತ್ತಿದ್ದನು. ಆಗ ಅವನ ಬೊಗಸೆಯ ಜಲದಲ್ಲಿ ಒಂದು ಚಿಕ್ಕ ಮೀನು ಕಾಣಿಸಿತು. ಆ ಮೀನಿನ ಮರಿಯು ಅತ್ಯಂತ ಅಣುವಾಗಿದ್ದು ಅನಂತರ ಒಂದೆರಡು ದಿನಗಳಲ್ಲಿ ಲಕ್ಷ ಯೋಜನ ವಿಸ್ತೀರ್ಣವಾದ ಮಹತೋ ಮಹತ್ತರವಾದ ಮಹಾ ಮತ್ಸ್ಯವಾಯಿತು. ಈ ರೀತಿಯಾದ ಮೀನಿನ ರೂಪದಿಂದ ಆ ರಾಜನನ್ನು ಪರವಶನನ್ನಾಗಿ ಮಾಡಿ ಅವನಿಗೆ ತನ್ನ ಸ್ವರೂಪವನ್ನು ವಿವರಿಸಿ ಉಪದೇಶ ಮಾಡಿ ಆತನಿಗೆ ಮುಂದಿನ ಜನ್ಮದಲ್ಲಿ ವೈವಸ್ವತ ಮನುವಿನ ಪದವಿಯನ್ನೂ ಮೋಕ್ಷವನ್ನೂ ಭಗವಂತನು ಕರುಣಿಸಿದನು. ಈ ಕಥೆಯು ಭಾಗವತದಲ್ಲಿ ಪ್ರಸಿದ್ಧವಾಗಿದೆ. ಇದೇ ಮತ್ಸ್ಯಾವತಾರವು! ಶ್ರೀಗುರು ರಾಘವೇಂದ್ರರು ಇಂತಹಾ ಮೀನಿನ ರೂಪಿಯಾದ ಹರಿಪರಮಾತ್ಮನನ್ನು ಸ್ತೋತ್ರ ಮಾಡಿದ್ದಾರೆ.

**ಅಣೋರಣೀಯಾನ್ ಮಹತೋ ಮಹೀಯಾನ್** ಎಂಬುದಾಗಿ ವೇದದಲ್ಲಿ ಶ್ರೀಹರಿಪರಮಾತ್ಮನನ್ನು ಅಣುವುಗಿಂತಲೂ ಅಣು, ಮಹತ್ತಿಗಿಂತಲೂ ಮಹತ್ ಎಂಬುದಾಗಿ ವರ್ಣಿಸಿದ್ದಾರೆ. ಸಾತ್ವಿಕ ಭಕ್ತ ಜನರಿಗೆ ಶ್ರೀಹರಿ ಪರಮಾತ್ಮನ ಅನನ್ಯ ಸಾಧಾರಣವಾದ ಮಹಿಮೆಯು ಅತ್ಯಂತ ಆನಂದಪ್ರದವಾಗಿದೆ. ತನ್ನ ಈ ಮಹಿಮೆಯನ್ನು ವೈವಸ್ವತ ಮನುವಿಗೆ ತೋರಿಸಲು ಮತ್ಸ್ಯಾವತಾರವನ್ನು ತಾಳಿದ ಶ್ರೀಮನ್ಮೂಲರಾಮಚಂದ್ರ ಪ್ರಭುವೇ! ಪರಬ್ರಹ್ಮನೇ!! ಅಘಟಿತ ಘಟನಾಪಟುವಾದ ನಿನ್ನ ಪಾದಗಳನ್ನು ನಾನು ಮೊರೆಹೊಕ್ಕಿದ್ದೇನೆ ಎಂಬುದಾಗಿ ಶ್ರೀಗುರುರಾಜರು ಪ್ರಾರ್ಥಿಸುತ್ತಿದ್ದಾರೆ.

**ಅವತಾರಿಕೆ :** ಕವಿಗಳು ಮತ್ಸ್ಯಾವತಾರವನ್ನು ಮತ್ತೂ ವರ್ಣಿಸುತ್ತಾರೆ.

**ವೇದವಿಪ್ಲುತಿಕೃತಂ ವಿಧಿಜಾಡ್ಯಂ ಹಂತ! ಹಂತುಮದಧಾಜ್ಜಲಜನ್ಮ ।**
**ಮೀನಭಾವನಭರೇಣ ತತೋ ಮೇ ವಿಸ್ತೃಣೀಹಿ ವಿಮಲಂ ಪ್ರತಿಬೋಧಮ್ ॥೪೨॥**

**ತಾತ್ಪರ್ಯ :** ಮತ್ತೊಂದು ಬಾರಿ ಪ್ರಳಯ ಕಾಲದಲ್ಲಿ ನಿದ್ರಿಸುತ್ತಿದ್ದ ಬ್ರಹ್ಮನ ಮುಖದಿಂದ ಹೊರಬಿದ್ದ ವೇದಗಳನ್ನು ಹಯಗ್ರೀವ ಎಂಬ ಅಸುರನು ಅಪಹರಿಸಿದನು. ವೇದಗಳನ್ನು ಕಾಣದೇ ಬ್ರಹ್ಮನಿಗೆ ಸೃಷ್ಟಿ ಕಾರ್ಯವನ್ನು ಹೇಗೆ ಮಾಡುವುದೆಂದು ತಿಳಿಯಲಿಲ್ಲ. ಅವನಿಗೆ ಅದೊಂದು ರೀತಿಯ ವಿಚಿತ್ರವಾದ ಅಜ್ಞಾನವು ಅಂಕುರಿಸಿತು. ಆಗ ನೀನು (ಶ್ರೀಹರಿ ಪರಮಾತ್ಮನು)

ಮತ್ತೊಮ್ಮೆ ಮತ್ಸ್ಯಾವತಾರವನ್ನು ಮಾಡಿ ಹಯಗ್ರೀವ ಅಸುರನನ್ನು ಸಂಹರಿಸಿ ವೇದಗಳನ್ನು ಉದ್ಧರಿಸಿ ಬ್ರಹ್ಮದೇವರ ಅಜ್ಞಾನವನ್ನು ಹೋಗಲಾಡಿಸಿದನು. ಅಂತಹಾ ನೀನು (ಶ್ರೀಹರಿಪರಮಾತ್ಮನು) ನನ್ನ ಜ್ಞಾನವನ್ನು ವಿಸ್ತರಿಸು, ಎಂದು ಶ್ರೀರಾಘವೇಂದ್ರಸ್ವಾಮಿಗಳು ದೇವರನ್ನು ಪ್ರಾರ್ಥಿಸುತ್ತಿದ್ದಾರೆ.

**ಅವತಾರಿಕೆ :** ಈಗ ಶ್ರೀರಾಘವೇಂದ್ರ ಗುರುಗಳು ಶ್ರೀಹರಿಪರಮಾತ್ಮನ ಕೂರ್ಮಾವತಾರವನ್ನು ಪ್ರಾರ್ಥಿಸಿದುದನ್ನು ಕವಿಗಳು ವರ್ಣಿಸುತ್ತಾರೆ.

**ಆತ್ಮನೈವ ಕಮಠೇನ ವಿತನ್ವನ್ ಮಂದರೇಣ ಚ ಭವಾನರಣೀ ದ್ವೇ ।**
**ಮಂಥತೋಽಕೃತ ಹಲಾಹಲವಹ್ನಿಂ ಹೋತುಮಿಂದ್ರರಿಪುವೃಂದಹವೀಂಷಿ ॥೪೩॥**

**ತಾತ್ಪರ್ಯ :** ಎಲೈ ಕೂರ್ಮಾವತಾರನಾದ ಪ್ರಭುವೇ! ದೇವತೆಗಳೂ ದೈತ್ಯರೂ ಸೇರಿ ಮಂದರ ಪರ್ವತವನ್ನು ಕಡಗೋಲನ್ನಾಗಿ ಮಾಡಿಕೊಂಡು ಕ್ಷೀರಸಮುದ್ರವನ್ನು ಕಡೆಯುತ್ತಿದ್ದಾಗ ಆ ಪರ್ವತವು ನೀರಿನಲ್ಲಿ ಮುಳುಗಲಾರಂಭಿಸಿತು. ಮಹಾಮಹಿಮನಾದ ನೀನು ಆ ಪರ್ವತವನ್ನು ಮೇಲಕ್ಕೆ ಎತ್ತಲು ಅದ್ಭುತವಾದ ಕೂರ್ಮರೂಪವನ್ನು ತಾಳಿದೆ. ಆಗ ನೀನು ಪರ್ವತವನ್ನು ನಿನ್ನ ಬೆನ್ನಿನ ಮೇಲೆ ಹೊತ್ತುಕೊಂಡು ಕೆಳಗಿನ ಅರಣಿ (ಬೆಂಕಿಯನ್ನು ಕಡೆಯುವ ಬನ್ನಿ ಮರದ ಪಾತ್ರೆ) ಯಂತೆ ಆದೆ. ಮಂದರ ಪರ್ವತವು ಮೇಲಿನ ಅರಣಿಯಾಯಿತು. ಈ ಎರಡೂ ಘರ್ಷಣೆಯಿಂದ ನೀನು ದೈತ್ಯರೆಂಬ ಹವಿಸ್ಸುಗಳನ್ನು ಹೋಮಿಸಲು ಹಲಾಹಲವೆಂಬ ವಿಷಾಗ್ನಿಯನ್ನು ಉತ್ಪಾದಿಸಿದೆ.

ದರವೆಂಬ ಕಡಗೋಲಿನಿಂದ ಸಮುದ್ರವನ್ನು ಮಥನಮಾಡಿ ಅಮೃತವನ್ನು ಉತ್ಪಾದಿಸಲು ದೇವತೆಗಳೂ ದೈತ್ಯರುಗಳು ಪ್ರಯತ್ನ ಮಾಡುತ್ತಿದ್ದರು. ಆಗ ನೀನು ನಿನ್ನ ಬೆನ್ನು ಮತ್ತು ಮಂದರ ಪರ್ವತದ ತಳ ಇವೆರಡರ ಘರ್ಷಣೆಯಿಂದ ದೈತ್ಯರುಗಳ ವಿನಾಶಕ್ಕೋಸ್ಕರ ಹಲಾಹಲ ವಿಷಾಗ್ನಿಯನ್ನು ಉಂಟುಮಾಡಿದೆಯಷ್ಟೇ! ನಿನ್ನ ಈ ವ್ಯಾಪಾರವು ಅದ್ಭುತವಾಗಿದೆ! ಈ ರೀತಿಯಾಗಿ ಆಶ್ಚರ್ಯಕರವಾದ ವ್ಯಾಪಾರವುಳ್ಳ, ನಿನ್ನ ಭಕ್ತರಿಗೆ ಉನ್ನತಿಯನ್ನೂ, ದೈತ್ಯರಿಗೆ ಅವನತಿಯನ್ನೂ ಕೊಡುವ ನಿನಗೆ (ನಿನ್ನನ್ನು) ನಾನು ಶರಣು ಹೊಂದುತ್ತೇನೆ ಎಂದು ಗುರುರಾಜರು ಕೂರ್ಮಾವತಾರರೂಪಿ ಶ್ರೀಹರಿಪರಮಾತ್ಮನನ್ನು ಸ್ತುತಿಸಿ ಪ್ರಾರ್ಥಿಸುತ್ತಿದ್ದಾರೆ.

**ಅವತಾರಿಕೆ :** ಈಗ ಶ್ರೀರಾಘವೇಂದ್ರರು ಶ್ರೀಹರಿಪರಮಾತ್ಮನ ವರಹಾವತಾರವನ್ನು ಸ್ತೋತ್ರ ಮಾಡಿದುದನ್ನು ಕವಿಗಳು ವರ್ಣಿಸುತ್ತಾರೆ.

**ಆದಿಸೂಕರ ಧರೋದ್ಧರಣಂ ತೇ ಸಿಂಧುಬಂಧುಜಠರಾತ್ ಶ್ರುತಿಗೀತಮ್ ।**
**ಮಾದೃಶಾಂ ಭವಪಯೋಧಿಗತಾನಾಂ ರಕ್ಷಣೇ ಪರಿಚಯಂ ತದವೈಮಃ ॥೪೪॥**

**ತಾತ್ಪರ್ಯ :** ಎಲೈ ಆದಿ ವರಾಹಮೂರ್ತಿಯಾದ ಶ್ರೀಮೂಲರಾಮನೇ! ನೀನು ಸಮುದ್ರ

ಮಧ್ಯದಿಂದ ಭೂದೇವಿಯನ್ನು ಮೇಲಕ್ಕೆತ್ತಿದೆ. ಈ ನಿನ್ನ ಅದ್ಭುತವಾದ ವ್ಯಾಪಾರವು ವೇದ ಮತ್ತು ಪುರಾಣಗಳಲ್ಲಿ ಪ್ರಶಂಸಿತವಾಗಿದೆ. ಭೂದೇವಿಯ ಈ ರಕ್ಷಣೆಯು, ಸಂಸಾರ ಸಾಗರದಲ್ಲಿ ಸಿಲುಕಿ ನಿನ್ನನ್ನೇ ಮೊರೆ ಹೊಕ್ಕಿರುವ ನನ್ನಂತಹವರ ರಕ್ಷಣೆಗಾಗಿ ನೀನು ಮಾಡಿದ ಮೊದಲ ಅಭ್ಯಾಸವು! ಈತನ ರಕ್ಷಣೆಯನ್ನು ಯಾವ ರೀತಿಯಲ್ಲಿ ಮಾಡಬೇಕು ಎಂಬುದಾಗಿ ಮೊದಲು ಮಾಡಿದ ಪರಿಶೀಲನೆಯು ಎಂದು ತಿಳಿಯುತ್ತೇನೆ. (ಉತ್ಪ್ರೇಕ್ಷಾ)

**ಅವತಾರಿಕೆ :** ಗುರು ರಾಘವೇಂದ್ರರು ವರಾಹಾವತಾರವನ್ನು ಪುನಃ ಸ್ತೋತ್ರ ಮಾಡಿದುದನ್ನು ಕವಿಗಳು ವರ್ಣಿಸುತ್ತಾರೆ.

**ಪೂರ್ಣಚಂದ್ರಗತಲಕ್ಷಣರೇಖಾ ಲಕ್ಷಿತಾ ಯದಿ ತದೈಕಕಲಾಯಾಮ್ ।**
**ಸಂಶ್ರಿತೇಂದುಮಣಿದಂಷ್ಟ್ರಧರಂ ಸ್ಯಾತ್ ಸೋಪಮಾ ಭವತಿ ಸೂಕರರೂಪ! ॥೪೫॥**

**ತಾತ್ಪರ್ಯ :** ಷೋಡಶಕಲಾ ಪರಿಪೂರ್ಣನಾದ ಚಂದ್ರನ ಮಧ್ಯದಲ್ಲಿ ಎದ್ದು ಕಾಣುವ ಕಲಂಕ ರೇಖೆಯನ್ನು ಪ್ರತ್ಯೇಕಿಸಿ ಅದರ ಮೇಲ್ಭಾಗದಲ್ಲಿ ಚಂದ್ರನ ಧವಲವಾದ ಒಂದು ಕಲೆಯನ್ನಿಟ್ಟರೆ ಅದು ಹೇಗೆ ಶೋಭಿಸುತ್ತದೆಯೋ ಅದರಂತೆ ಭೂದೇವಿಯನ್ನು ಮೇಲಕ್ಕೆತ್ತಿ ಉದ್ಧಾರ ಮಾಡುವ ಕಾಲದಲ್ಲಿ, ಅಮಾವಾಸ್ಯೆಯಲ್ಲಿ ತೋರುವ ಒಂದು ಕಲೆಯಂತಿರುವ ನಿನ್ನ ಕೋರೆಕೊಂಬಿನಲ್ಲಿ ಪೂರ್ಣಚಂದ್ರನಲ್ಲಿರುವ ಕಲಂಕರೇಖೆಯಂತಿರುವ ಭೂದೇವಿಯು ಶೋಭಿಸುತ್ತಾಳೆ. ಹೀಗೆ ಅಭೂತೋಪಮವಾದ ನಿನ್ನನ್ನು ಶರಣು ಹೊಂದಿದ್ದೇನೆ. ಪೂರ್ಣಚಂದ್ರನಲ್ಲಿರುವ ಕಲಂಕರೇಖೆಯಲ್ಲಿ ಹದಿನಾರು ಕಲೆಗಳ ಮಧ್ಯದಲ್ಲಿ ಒಂದು ಕಲೆಯು ಶೋಭಿಸಿದರೆ ಆಗ ಕಪ್ಪಾದ ನೀಲವರಾಹನ ದೇಹದಲ್ಲಿ ಶುಭ್ರವಾದ ಕೋರೆಹಲ್ಲು ಶೋಭಿಸುವುದನ್ನು ಊಹಿಸಿಕೊಳ್ಳಬಹುದು. ಅಥವಾ ಶುಭ್ರವಾದ ಚಂದ್ರನ ಒಂದು ಕಲೆಯ ಮೇಲ್ಭಾಗದಲ್ಲಿ ಕಪ್ಪಾದ ಕಲೆಯು ಶೋಭಿಸುತ್ತಿದ್ದರೆ ಹೇಗೋ ಹಾಗೆ ಶುಭ್ರವಾದ ನಿನ್ನ ಕೋರೆಹಲ್ಲಿನಲ್ಲಿ ಪೂರ್ಣಚಂದ್ರನ ಕಲಂಕ ರೇಖೆಯಂತೆ ಎತ್ತಲ್ಪಟ್ಟ ಭೂದೇವಿಯು ಶೋಭಿಸುತ್ತಾಳೆ ಎಂಬುದಾಗಿ ತಾತ್ಪರ್ಯ.

**ಅವತಾರಿಕೆ :** ಶ್ರೀರಾಘವೇಂದ್ರಸ್ವಾಮಿಗಳು ಶ್ರೀಹರಿಪರಮಾತ್ಮನ ಅತಿ ಅದ್ಭುತವಾದ ಶ್ರೀನರಸಿಂಹಾವತಾರವನ್ನು ಭಕ್ತಿಯಿಂದ ಭಜಿಸಿ ಪೂಜಿಸಿದುದನ್ನು ಕವಿಗಳು ವರ್ಣಿಸುತ್ತಾರೆ.

**ತಾವಕಂ ನರಹರೇಽತಿವಿರುದ್ಧಂ ವೇಷಧಾರಣಮಿದಂ ತನುತೇ ನಃ ।**
**ಅತ್ಯಸಂಘಟಿತಕರ್ಮ ಚ ಕೃತ್ವಾ ಪಾಲಯೇ ಪ್ರಣತಮಿತ್ಯುಪದೇಶಮ್ ॥೪೬॥**

**ತಾತ್ಪರ್ಯ :** ಎಲೈ ಶ್ರೀನರಸಿಂಹದೇವನೇ! ಪಾಲಕನು ಶಾಂತರೂಪನಾಗಿಯೂ, ಸಂಹಾರಕನು ಘೋರರೂಪನಾಗಿಯೂ ಇರುವುದು ಲೋಕಪ್ರಸಿದ್ಧವಾಗಿದೆ. ಇದಕ್ಕೆ ವ್ಯತಿರಿಕ್ತವಾಗಿ

ಪಾಲಕನಿಗೆ ಘೋರರೂಪವೂ, ಸಂಹಾರಕನಿಗೆ ಶಾಂತರೂಪವೂ ಅತಿವಿರುದ್ಧವಾಗಿದೆ. ಹಿರಣ್ಯಕಶಿಪುವನ್ನು ಸಂಹಾರ ಮಾಡಿದೆ ಎಂಬುದು ಯುಕ್ತವೇ; ಆದರೆ ಅದೇ ಘೋರ ರೂಪದಿಂದ ಪ್ರಹ್ಲಾದನನ್ನೂ ಕಾಪಾಡಿದೆ. ಈ ರೀತಿಯಾಗಿ ನಿನ್ನ ಸಂಹಾರಕ ರೂಪವೇ ಪಾಲಕ ರೂಪವಾದದ್ದು ಅತ್ಯಂತ ವಿರುದ್ಧವು. ಇದೇ ರೀತಿಯಲ್ಲಿ ನಿನ್ನ ಆಕೃತಿಯೂ ಅತ್ಯಂತ ವಿರುದ್ಧವು. ಹೀಗೆ ಸಿಂಹವ್ಯಾಪಾರ ಮತ್ತು ನರಪ್ರಕಾರಗಳಿಂದ ಅತ್ಯಂತ ವಿರುದ್ಧವಾದ ರೂಪವನ್ನು ಸ್ವೀಕರಿಸಿ, ಇತರ ಯಾರಿಂದಲೂ ಸರ್ವಥಾ ಮಾಡಲು ಅಸಾಧ್ಯವಾದ ಕಾರ್ಯವನ್ನು ಮಾಡಿ, "ನನ್ನನ್ನು ಮೊರೆಹೊಕ್ಕ ಭಕ್ತರುಗಳ ಎಲ್ಲ ಪಾಪಗಳನ್ನೂ ಹೋಗಲಾಡಿಸಿ ಅವರನ್ನು ಸರ್ವದಾ ಕಾಪಾಡುತ್ತೇನೆ" ಎಂಬುದಾಗಿ ಭಕ್ತರುಗಳಿಗೆ ಉಪದೇಶ ಮಾಡುತ್ತೀಯೆ ಎಂದು ತಿಳಿಯುತ್ತೇನೆ.

**ಅವತಾರಿಕೆ :** ಗುರು ರಾಘವೇಂದ್ರರು ಮತ್ತೊಮ್ಮೆ ನರಸಿಂಹ ದೇವರನ್ನೇ ಸ್ತೋತ್ರ ಮಾಡಿದುದನ್ನು ಕವಿಗಳು ವರ್ಣಿಸುತ್ತಾರೆ.

**ದಾರಿತೋದರಹಿರಣ್ಯಕಶತ್ರೋರಾಂತ್ರಮಾಲ್ಯಕಲಿತಂ ತವ ರೂಪಮ್ ।**
**ನಾರಸಿಂಹ ಕಲಯೇಽನನುಭೂತಂ ಶಾರದಂ ಜಲಧರಂ ಸಹಶಂಪಮ್ ॥೪೭॥**

**ತಾತ್ಪರ್ಯ :** ಎಲೈ ಶ್ರೀನರಸಿಂಹರೂಪಿ ಪ್ರಭುವೇ! ನೀನು ಹಿರಣ್ಯಕಶಿಪುವಿನ ಹೊಟ್ಟೆಯನ್ನು ಸೀಳಿ ಅವನ ಕರುಳಿನ ಮಾಲೆಯನ್ನು ಕಂಠದಲ್ಲಿ ಧರಿಸಿದೆ. ಆಗ ನಿನ್ನ ರೂಪವು ಶರತ್ಕಾಲದ ಮೋಡದಲ್ಲಿ ಮಿಂಚು ಮಿಂಚಿದಂತೆ ಅಭೂತ ಪೂರ್ವವಾಗಿ ವಿರಾಜಿಸಿತು ಎಂಬುದಾಗಿ ನಾನು ತಿಳಿಯುತ್ತೇನೆ. ಈ ರೀತಿಯಾಗಿ ಶ್ರೀರಾಘವೇಂದ್ರಗುರು ಸಾರ್ವಭೌಮರು ಶ್ರೀನರಸಿಂಹದೇವರನ್ನು ವರ್ಣಿಸುತ್ತಾರೆ.

ಶ್ರೀನೃಸಿಂಹದೇವರ ಮೈಬಣ್ಣವು ಬಿಳಿಯಾಗಿದೆ. ಅವರು ತನ್ನ (ಭಕ್ತನ) ಶತ್ರುವಾದ ಹಿರಣ್ಯಕಶಿಪುವನ್ನು ಸಂಹರಿಸಿ ಅವನ ಎದೆಯನ್ನು ಸೀಳಿ ಅವನ ಕರುಳಿನ ಮಾಲೆಯನ್ನು ಕಂಠದಲ್ಲಿ ಧರಿಸಿದಾಗ ಮಿಂಚಿನಿಂದ ಕೂಡಿದ ಶರತ್ಕಾಲದ ಮೋಡದಂತೆ ಶೋಭಿಸುತ್ತಾರೆ ಎಂದು ಅಭೂತೋಪಮಾ. ಶರತ್ಕಾಲದ ಮೋಡವು ಬಿಳಿಯಾಗಿದ್ದರೂ ಆಗ ಅದರಲ್ಲಿ ಮಿಂಚು ಇರುವುದಿಲ್ಲ. ಒಂದು ವೇಳೆ ಬಿಳಿಯ ಶರತ್ಕಾಲದ ಮೋಡದಲ್ಲಿ ಮಿಂಚು ಉಂಟಾದಲ್ಲಿ ಅದರ ಸಾದೃಶ್ಯವು ಶ್ರೀನರಸಿಂಹನಲ್ಲಿ ಉಂಟಾಗುತ್ತದೆ. ಎಂದು ಹೇಳಿರುವುದರಿಂದ ಇಲ್ಲಿ ಅಭೂತೋಪಮಾಲಂಕಾರವಿದೆ ಎಂದು ತಿಳಿಯಬೇಕು.

**ಅವತಾರಿಕೆ :** ಈಗ ಕವಿಗಳು ಶ್ರೀರಾಘವೇಂದ್ರಸ್ವಾಮಿಗಳು ಶ್ರೀಹರಿಪರಮಾತ್ಮನ ವಾಮನ ಅವತಾರವನ್ನು ಸ್ಮರಿಸಿ ಪ್ರಾರ್ಥಿಸಿದುದನ್ನು ವರ್ಣಿಸುತ್ತಾರೆ.

**ಜಾನತಾಂ ನಿಜಮನಃಪರಮಾಣೌ ಮಾತುಮೇವ ಬಲಿನಿಗ್ರಹದಂಭಾತ್ ।**
**ವಾಮನಂ ಯದಭವತ್ತವ ರೂಪಂ ತತ್ಸುಖೇನ ಭಗವನ್ ಹೃದಿ ಕುರ್ಮಃ ॥೪೮॥**

**ತಾತ್ಪರ್ಯ :** ಚಿಕ್ಕ ವಸ್ತುವಿನ ಒಳಗೆ ದೊಡ್ಡ ವಸ್ತುವನ್ನು ಸೇರಿಸಿ ಇಟ್ಟುಕೊಳ್ಳುವುದು ಬಹಳ ಕಷ್ಟ. ಚಿಕ್ಕ ಪದಾರ್ಥದಲ್ಲಿ ಅದಕ್ಕಿಂತಲೂ ಚಿಕ್ಕದಾದ ಮತ್ತೊಂದು ಪದಾರ್ಥವನ್ನು ಸೇರಿಸಿ ತೂರಿಸಿ ಇಡಬಹುದು. ಮನಸ್ಸು ಪರಮಾಣು ರೂಪವಾದುದು. ಭಗವಂತನಾದರೋ ಅಣುವಿಗಿಂತಲೂ ಅಣುತರನಾದವನು. **'ಅಣೋರಣೀಯಾನ್'** ಎಂಬುದಾಗಿ ವೇದವು ಅವನನ್ನು ಸ್ತುತಿಸುತ್ತದೆ. ಜ್ಞಾನಿಗಳು ತಮ್ಮ ಪರಮಾಣು ಪರಿಮಾಣದ ಮನಸ್ಸಿನಲ್ಲಿ ಮತ್ತಷ್ಟು ಪರಮಾಣುತರನಾದ ಶ್ರೀಹರಿಪರಮಾತ್ಮನನ್ನು ಧರಿಸಲು ಸುಲಭವಾಗುತ್ತದೆ. ಈ ಕಾರಣದಿಂದಲೇ ಭಗವಂತನು ಬಲಿ ಚಕ್ರವರ್ತಿಯನ್ನು ನಿಗ್ರಹಿಸುವ ಸಲುವಾಗಿ ವಾಮನನಾಗಿ ಅವತರಿಸಿದನು ಎಂಬುದಾಗಿ ವರ್ಣಿಸುತ್ತಾರೆ.

ಎಲೈ ಸಮಗ್ರ ಐಶ್ವರ್ಯಾದಿ ಷಡ್ಗುಣಪರಿಪೂರ್ಣನಾದ ಶ್ರೀವಾಮನರೂಪಿಯಾದ ಶ್ರೀಹರಿಪರಮಾತ್ಮನೇ! ಜ್ಞಾನಿಗಳು ತಮ್ಮ ಪರಮಾಣು ಪರಿಮಾಣದ ಮನಸ್ಸಿನಲ್ಲಿ ಧ್ಯಾನಿಸಿ ಇರಿಸಿಕೊಳ್ಳಲು ಅನುಕೂಲವಾಗಲೆಂದು ನೀನು ಬಲಿಚಕ್ರವರ್ತಿಯನ್ನು ನಿಗ್ರಹಿಸುವ ಸಲುವಾಗಿ ಚಿಕ್ಕದಾದ ಶ್ರೀವಾಮನರೂಪವನ್ನು ಧರಿಸಿದೆ. ನಿನ್ನ ತ್ರಿವಿಕ್ರಮ ಅವತಾರವನ್ನು ಪರಮಾಣುರೂಪವಾದ ಮನಸ್ಸಿನಲ್ಲಿ ಹೇಗೆ ಇರಿಸಿಕೊಳ್ಳಲು ಸಾಧ್ಯವಾಗುತ್ತದೆ? ನಿನ್ನ ಪ್ರಿಯ ಭಕ್ತರುಗಳ ಸೌಲಭ್ಯಕ್ಕಾಗಿಯೇ ಈ ವಾಮನರೂಪವನ್ನು ಧಾರಣ ಮಾಡಿದ ಶ್ರೀವಾಮನರೂಪಿ ಶ್ರೀಹರಿಪರಮಾತ್ಮನೇ! ನಿನ್ನ ಈ ರೂಪವನ್ನು ನಾವು ಸುಖವಾಗಿ ಮನಸ್ಸಿನಲ್ಲಿ ಧರಿಸಿ ಧ್ಯಾನಿಸಿ ಕೃತಾರ್ಥರಾಗುತ್ತೇವೆ ಎಂಬುದಾಗಿ ಶ್ರೀಗುರುರಾಜರು ಶ್ರೀವಾಮನಾಭಿನ್ನನಾದ ಉಪಾಸ್ಯಮೂರ್ತಿ ಶ್ರೀಮನ್ಮೂಲರಾಮಚಂದ್ರನನ್ನು ಸ್ತುತಿಸಿದ್ದಾರೆ.

**ಅವತಾರಿಕೆ :** ಶ್ರೀರಾಘವೇಂದ್ರಸ್ವಾಮಿಗಳು ಶ್ರೀಹರಿಪರಮಾತ್ಮನು ಶ್ರೀಪರಶುರಾಮದೇವರಾಗಿ ಅವತರಿಸಿ ಕ್ಷತ್ರಿಯ ನಿಗ್ರಹ ಮಾಡಿದುದನ್ನು ಸ್ಮರಿಸಿ ಪೂಜಿಸಿದುದನ್ನು ಕವಿಗಳು ವರ್ಣಿಸುತ್ತಾರೆ.

**ಚಂದ್ರಮಾ ಇವ ಭೂಪೋ ರಚಯನ್ನಕ್ಷತ್ರಯೋಗಮಪಿ ಯತ್ತ್ವಮಲಾಸೀಃ ।**
**ತೇನ ಶಾತ್ರವಯಶೋಽಂಬುಜರಾಜೀಮುದ್ರಣಂ ತವ ಕೃತಿಂ ಬಹು ಮನ್ಯೇ ॥೪೯॥**

**ತಾತ್ಪರ್ಯ :** ಶ್ರೀಹರಿಪರಮಾತ್ಮನು ಶ್ರೀಪರಶುರಾಮಾವತಾರವನ್ನು ಮಾಡಿ ಇಪ್ಪತ್ತೊಂದು ಬಾರಿ ಭೂಮಂಡಲವನ್ನು ಸಂಚರಿಸಿ ದುರುಳ ಕ್ಷತ್ರಿಯರನ್ನು ನಿಗ್ರಹಿಸಿದ್ದಾನೆ. ಈ ಅದ್ಭುತ ಕಾರ್ಯವನ್ನು ಶ್ರೀಗುರುರಾಜರು ವರ್ಣಿಸಿ ವಂದಿಸುತ್ತಾರೆ.

ನಕ್ಷತ್ರಗಳಿಗೆ ಒಡೆಯನಾದ ಚಂದ್ರನು ಉದಯಿಸಿ ಭೂಮಂಡಲಕ್ಕೆ ನಕ್ಷತ್ರಗಳಿಂದ ಸಂಬಂಧವನ್ನು ಏರ್ಪಡಿಸಿ ಶೋಭೆಯನ್ನು ಉಂಟುಮಾಡುತ್ತಾನೆ. ಎಲೈ ಪರಶುರಾಮ ರೂಪಿಯಾದ ಶ್ರೀಹರಿಪರಮಾತ್ಮನೇ! ನೀನು ಚಂದ್ರನಂತೆ ಅವತರಿಸಿ ದ್ರೋಹಿಯಾದ ಕಾರ್ತವೀರ್ಯಾರ್ಜುನನನ್ನು ಮತ್ತು ಇನ್ನಿತರ ದುರುಳ ಕ್ಷತ್ರಿಯರನ್ನು ಇಪ್ಪತ್ತೊಂದು ಬಾರಿ

ಭೂ ಸಂಚಾರ ಮಾಡಿ ಭೂಮಿಗೆ ನ–ಕ್ಷತ್ರಯೋಗ–ಕ್ಷತ್ರಿಯ ಸಂಬಂಧವಿಲ್ಲದಂತೆ ಮಾಡಿದೆ. (ಅಕ್ಷತ್ರಯೋಗ = ಕ್ಷತ್ರಿಯರ ಸಂಬಂಧವಿಲ್ಲದಂತೆ ಮಾಡಿದೆ). (ಆಕ್ಷತ್ರಯೋಗ = ಕ್ಷತ್ರಿಯರ ಅಭಾವದ ಸಂಬಂಧವನ್ನು ಉಂಟುಮಾಡಿದೆ) ನಿನ್ನ ಈ ಪರಶುರಾಮಾವತಾರದ ವಿಲಾಸದಿಂದ ಕ್ಷತ್ರಿಯರ ಕೀರ್ತಿಕಮಲಗಳ ಸಮೂಹವನ್ನೆಲ್ಲಾ ಸಂಕೋಚಗೊಳಿಸಿ ಮೊಗ್ಗಾಗಿ ಮಾಡಿದೆ. ಕ್ಷತ್ರಿಯರ ಕೀರ್ತಿಯೆಲ್ಲವೂ ನಿನ್ನಿಂದಾಗಿ ಮರೆಯಾಯಿತು. ಕ್ಷತ್ರಿಯರ ಕೀರ್ತಿಕಮಲ ಸಂಕೋಚವು ನಕ್ಷತ್ರೇಶನಾದ (ಕ್ಷತ್ರಿಯಾಭಾವಕ್ಕೆ ಸಮರ್ಥನಾದ) ನಿನಗೆ ಯುಕ್ತವೇ ಆಗಿದೆ. ನಿನ್ನ ಇಂತಹಾ ಅದ್ಭುತ ವ್ಯಾಪಾರವನ್ನು ನಾನು ಬಹುಮಾನಿಸುತ್ತೇನೆ! ಭಕ್ತಿಯಿಂದ ಪೂಜಿಸುತ್ತೇನೆ!! ಈ ರೀತಿಯಾಗಿ ಶ್ರೀಗುರುಸಾರ್ವಭೌಮರು ಶ್ರೀಪರಶುರಾಮದೇವರನ್ನು ವಂದಿಸಿ ಪ್ರಾರ್ಥಿಸುತ್ತಿದ್ದಾರೆ.

**ಅವತಾರಿಕೆ :** ಈಗ ಶ್ರೀಗುರುರಾಘವೇಂದ್ರರು ಶ್ರೀರಾಮಾವತಾರವನ್ನು ವಂದಿಸಿ ಪೂಜಿಸಿದುದನ್ನು ಕವಿಗಳು ವರ್ಣಿಸುತ್ತಾರೆ.

**ತಾರಣೇ ದುರಿತನೀರನಿಧೇರ್ನಃ ಸೇತುಭಾವಮಚಿರೇಣ ಯಿಯಾಸೋಃ ।**
**ಭಾಸತೇ ತವ ವಿಭೋ! ಕರುಣಾಯಾಃ ಪೂರ್ವರಂಗ ಇವ ದಕ್ಷಿಣಸೇತುಃ ॥೫೦॥**

**ತಾತ್ಪರ್ಯ :** ಎಲೈ ಪರಮ ಸಮರ್ಥನಾದ ಶ್ರೀಮನ್ಮೂಲರಾಮಚಂದ್ರಸ್ವಾಮಿಯೇ! ನಮ್ಮನ್ನು ಪಾಪಸಮುದ್ರ –ದಿಂದ ಉದ್ಧರಿಸಲು ಸೇತುವಿನಂತೆ ನಿನ್ನ ಕರುಣೆಯು ಸಹಾಯಕವಾಗುತ್ತದೆ. ಈ ಪ್ರಮೇಯದ ಪೂರ್ವಭಾಗವೋ ಎಂಬಂತೆ ನೀನು ದಕ್ಷಿಣ ಸಮುದ್ರದಲ್ಲಿ ಕಟ್ಟಿದ ಸೇತುವು ಶೋಭಿಸುತ್ತಿದೆ. ನಿನ್ನ ಕರುಣೆಯು ಭಕ್ತರ ದುರಿತಗಳನ್ನು ದೂರೀಕರಿಸಿ ಕಾಪಾಡುತ್ತದೆ ಎಂಬ ವಿಷಯದಲ್ಲಿ ನೀನು ದಕ್ಷಿಣ ಸಮುದ್ರದಲ್ಲಿ ಕಟ್ಟಿದ ಸೇತುವೆ ದೃಷ್ಟಾಂತವು ಎಂಬುದಾಗಿ ಅಭಿಪ್ರಾಯ.

**ಅವತಾರಿಕೆ :** ಕವಿಗಳು ಮುಂದಿನ ಮೂರು ಶ್ಲೋಕಗಳಿಂದ ಶ್ರೀಕೃಷ್ಣಾವತಾರವನ್ನು ಸ್ತೋತ್ರ ಮಾಡುತ್ತಾರೆ. ಮೊದಲು ಯಶೋದೆಯು ಶ್ರೀಕೃಷ್ಣನನ್ನು ಹಗ್ಗದಲ್ಲಿ ಕಟ್ಟಿಹಾಕಿದ ಪ್ರಸಂಗವನ್ನು, ಅದರ ರಹಸ್ಯವನ್ನು ಸೂಚಿಸುತ್ತಾ ಶ್ರೀಕೃಷ್ಣನು ದಾಮೋದರನಾದುದನ್ನು ವರ್ಣಿಸುತ್ತಾರೆ.

**ಬಂಧನಾಯ ಕೃತಮಾತ್ಮಜನನ್ಯಾಸ್ತಾದೃಶಂ ಚ ಗುಣಮಂಗ್ಯಕರೋರ್ಯತ್ ।**
**ತೇನ ನಿರ್ಗುಣಮತಾನಿ ನಿರಸ್ಯನ್ ದರ್ಶಯಸ್ಯಪಿ ನಿಜಾಂ ಗುಣವತ್ತಾಮ್ ॥೫೧॥**

**ತಾತ್ಪರ್ಯ :** ಶ್ರೀಮೂಲರಾಮಾಭಿನ್ನ ಕೃಷ್ಣ! ನಿನ್ನ ತಾಯಿಯಾದ ಯಶೋದೆಯು ನಿನ್ನನ್ನು ಕಟ್ಟಲು ಹಸು ಕರುಗಳನ್ನು ಕಟ್ಟುವ ಸಾಧಾರಣ ಗುಣ (ಹಗ್ಗ)ವನ್ನು ತಂದು ನಿನ್ನನ್ನು ಬಂಧಿಸಿದಳು. ಆ ಗುಣವನ್ನೂ ನೀನು ಅಂಗೀಕರಿಸಿದೆ. ಇದರಿಂದ ಬ್ರಹ್ಮವು ನಿರ್ಗುಣ ನಿರ್ಧರ್ಮಕ ಎಂಬ ಮತವನ್ನು ನಿರಾಕರಿಸಿ ನಿನ್ನ ಸ್ವರೂಪವು ಅನಂತ ಕಲ್ಯಾಣಗುಣ ಪರಿಪೂರ್ಣವಾದುದು. ಅನಂತ ಕಲ್ಯಾಣಗುಣಾತ್ಮಕವಾದುದು ಎಂಬುದಾಗಿ ಭಕ್ತರಿಗೆ ನೀನು ತೋರಿಸುತ್ತಿದ್ದೀಯೆ.

ಕೃಷ್ಣ! ನೀನು ಸದ್ಗುಣಗಣಾರ್ಣನು ಎಂದು ವೇದಶಾಸ್ತ್ರಗಳು ಘೋಷಿಸುತ್ತಿವೆ. ಈ ವಿಷಯಕ್ಕೆ ನಿದರ್ಶನ ಏನು? ಎಂಬ ಸಂಶಯವು ನಿನ್ನ ಭಕ್ತರುಗಳಿಗೆ ಬಂದಿತು. ಆಗ ನೀನು "ನೋಡಿರಿ ಯಶೋದೆಯಿಂದ ಕಟ್ಟಲ್ಪಟ್ಟಿದ್ದರೂ ನಾನು ಕಟ್ಟಲ್ಪಡಲಿಲ್ಲ! ನಾನು ಬದ್ಧನಾದರೂ ಅಬದ್ಧನು ಶುದ್ಧನು. ಆದರೂ ಕೂಡಾ ಯಶೋದೆಯು ತಂದ ಬಂಧನದ ಗುಣದ (ಹಗ್ಗದ) ಸ್ವೀಕಾರದಿಂದ ಪರಬ್ರಹ್ಮನಾದ ನಾನು ಗುಣಪರಿಪೂರ್ಣನು ಎಂಬ ವಿಷಯದಲ್ಲಿ ದೃಷ್ಟಾಂತವನ್ನು ತೋರಿಸಿದೆ. ತಾನು ಸಗುಣತೆಯನ್ನು (ಗುಣದಿಂದ–ಹಗ್ಗದಿಂದ, ಕೂಡಿರುವಿಕೆಯಿಂದ, ಸಗುಣ–ಕಲ್ಯಾಣ ಗುಣದಿಂದಲೂ ಕೂಡಿದವನು ಎಂದು) ತೋರಿಸಿ ನಿರ್ಗುಣವಾದಿಗಳ ಮತವನ್ನು ನಿರಾಕರಿಸಿದೆ" ಎಂದು ತಾತ್ಪರ್ಯ.

**ಅವತಾರಿಕೆ :** ಈಗ ಕವಿಗಳು ಶ್ರೀಕೃಷ್ಣ ಪರಮಾತ್ಮನು ಅರ್ಜುನನಿಗೆ ಸಾರಥಿಯಾದ ಸಂದರ್ಭವನ್ನು ಶ್ರೀರಾಘವೇಂದ್ರಗುರುಗಳು ಸ್ತೋತ್ರ ಮಾಡಿದುದನ್ನು ಚಮತ್ಕಾರವಾಗಿ ವರ್ಣಿಸುತ್ತಾರೆ.

**ಸರ್ವದೇವರಥಚೇಷ್ಟನಮಂಗೀಕುರ್ವತಸ್ತವ ಸದೈವ ಜಗತ್ಯಾಮ್ ।**
**ಅರ್ಜುನೈಕರಥಸಾರಥಿಭಾವೋ ವಿಸ್ಮಯಾಯ ವಿದುಷಾಂ ನ ಕಥಂಚಿತ್ ॥೫೨॥**

**ತಾತ್ಪರ್ಯ : "ಏಷ ವೈ ದೇವರಥಃ"** ಎಲ್ಲಾ ಪ್ರಾಣಿಗಳ ದೇಹಗಳೂ ಕ್ರೀಡಾದಿಗುಣವಿಶಿಷ್ಟನಾದ ಶ್ರೀಹರಿಯ ರಥಗಳು ಎಂಬುದಾಗಿ ಶ್ರುತಿಗಳು ಹೇಳುತ್ತಿವೆ. ಎಲೈ ಶ್ರೀಕೃಷ್ಣನೇ! ಎಲ್ಲಾ ಪ್ರಾಣಿಗಳ ದೇಹಗಳೂ ನಿನ್ನ ರಥಗಳೇ ಆಗಿರುವುದರಿಂದ ಆ ರಥಗಳಲ್ಲಿ ನಿಂತು ಅವುಗಳನ್ನು ನಡೆಸುವ ಉತ್ತರದಾಯಿತ್ವವನ್ನು (ಹೊಣೆಯನ್ನು) ನೀನು ಹೊತ್ತಿದ್ದೀಯೆ! ಸರ್ವರಥಗಳ ಸಾರಥೀಭಾವದ ಜವಾಬ್ದಾರಿಯನ್ನು ಹೊತ್ತಿರುವ ನೀನು ಒಬ್ಬ ಅರ್ಜುನನ ಸಾಂಗ್ರಾಮಿಕ ರಥದಲ್ಲಿ ಕುಳಿತು ಅದನ್ನು ನಡೆಸಿರುವುದು ಅದೇನು ಆಶ್ಚರ್ಯಕರವು! ಸರ್ವರಥಚೇಷ್ಟಕನಾದ ನಿನಗೆ ಅರ್ಜುನನ ಒಂದೇ ಒಂದು ರಥವನ್ನು ನಡೆಸಿರುವುದು ಜ್ಞಾನಿಗಳ ದೃಷ್ಟಿಯಿಂದ ಆಶ್ಚರ್ಯಕರ ಚರಿತೆಯೇನಲ್ಲ ಅಲ್ಲವೇ? (ಕಾಕುಸ್ವರದಿಂದ ಆಶ್ಚರ್ಯಕರವಾದ ಚರಿತ್ರೆಯೇ ಆಗಿದೆ) ನೀನು ಅರ್ಜುನನ ಸಾರಥಿಯಷ್ಟೇ ಅಲ್ಲ. ಎಲ್ಲಾ ಅರ್ಜುನರಾದ (ಧವಲೋಽರ್ಜುನಃ). ಶುದ್ಧಜೀವರ ದೇವರಥದ ಸಾರಥಿಯಾಗಿ ಅವರನ್ನು ನಡೆಸುತ್ತೀಯೆ. ಸಮಸ್ತ ಜೀವರ ದೇಹರಥದ ಸಾರಥಿಯೂ ಆಗಿದ್ದೀಯೆ. ಇಂತಹಾ ಮಹಾಮಹಿಮನು ನೀನು ಎಂದು ಗೂಡಾರ್ಥಗರ್ಭಿತವಾದ ಮಾತಿನಿಂದ ಶ್ರೀಗುರುರಾಜರು ಸ್ತುತಿಸಿದ್ದಾರೆ.

**ಅವತಾರಿಕೆ :** ಶ್ರೀಕೃಷ್ಣ ಪರಮಾತ್ಮನು ಕುಚೇಲನಿಗೆ ಮಾಡಿದ ಅನುಗ್ರಹವನ್ನು ಶ್ರೀಗುರುಸಾರ್ವಭೌಮರು ಸ್ತೋತ್ರ ಮಾಡಿದುದನ್ನು ಕವಿಗಳು ಚಮತ್ಕಾರವಾಗಿ ವರ್ಣಿಸುತ್ತಾರೆ.

**ತ್ವಂ ಕುಚೇಲಮುನಿಮೀಶ ಕುಚೇಲಾದ್ಯಾರ್ಪಣೇನ ಕೃತವಾನಕುಚೇಲಮ್ ।**
**ಸೋಽಭವತ್ತದಪಿ ಚಾರುಕುಚೇಲಾಲಂಕೃತಸ್ತದಿದಮದ್ಭುತಮಾಸೀತ್ ॥೫೩॥**

**ತಾತ್ಪರ್ಯ** : ಹಿಂದೆ ಶ್ರೀಕೃಷ್ಣನ ಸಹಪಾಟಿಯಾದ ಕುಚೇಲನೆಂಬ ಒಬ್ಬ ಬಡ ಬ್ರಾಹ್ಮಣನಿದ್ದನು. ಅವನು ತನ್ನ ಪತ್ನಿಯ ಒತ್ತಾಯದಿಂದ ಶ್ರೀಕೃಷ್ಣನನ್ನು ನೋಡಲು ದ್ವಾರಕೆಗೆ ಹೊರಟು ಶ್ರೀಕೃಷ್ಣನಿಗೆ ಕೊಡಲು ಒಂದು ಹಿಡಿ ಅವಲಕ್ಕಿಯನ್ನು ಹರಕು ಬಟ್ಟೆಯಲ್ಲಿ ಕಟ್ಟಿಕೊಂಡು ತಂದಿದ್ದನು. ಶ್ರೀಕೃಷ್ಣನು ಕುಚೇಲನು ಕೊಟ್ಟ ಅವಲಕ್ಕಿಯನ್ನು ಸ್ವೀಕರಿಸಿ ಅವನಿಗೆ ವಸ್ತ್ರಾಲಂಕಾರಾದಿಗಳನ್ನು, ಉತ್ತಮವಾದ ಗೃಹಕ್ಷೇತ್ರಾದಿಗಳನ್ನೂ ಅನುಗ್ರಹಿಸಿದನು. ಈ ವಿಷಯವನ್ನು ಇಲ್ಲಿ ಚಮತ್ಕಾರವಾಗಿ ವರ್ಣಿಸಿದ್ದಾರೆ.

ಎಲೈ ಶ್ರೀಕೃಷ್ಣನೇ, ನೀನು ಕುಚೇಲನು ಚಿಂದಿ ಹರಕಲು ಬಟ್ಟೆಯಲ್ಲಿ ಕಟ್ಟಿ ತಂದಿದ್ದ ಅವಲಕ್ಕಿಯನ್ನು ಸ್ವೀಕರಿಸಿ ಕುಚೇಲನಿಗೆ ಹೊಸದಾದ ಉತ್ತಮ ವಸ್ತ್ರಗಳನ್ನು ಕೊಟ್ಟು ಅವನನ್ನು ಅಕುಚೇಲನನ್ನಾಗಿ ಮಾಡಿದೆ. ಅಂದರೆ ಹರಕಲು ಚಿಂದಿ ಪಂಚೆ ಇಲ್ಲದಂತೆ ಆದ. ಆ ಅಕುಚೇಲನಾದ ಕುಚೇಲನು ಮನೋಹರವಾದ ಎರಡು ಕುಚೇಲಗಳಿಂದ (ಹರಕು ಬಟ್ಟೆಗಳಿಂದ) ಅಲಂಕೃತನಾಗಿದ್ದನು ಎಂಬುದು ಅತ್ಯಂತ ಆಶ್ಚರ್ಯಕರವಾದ ಸಂಗತಿಯಾಯಿತು ಎಂಬ ವಿರೋಧವು ಕಂಡು ಬರುತ್ತದೆ. ಅಕುಚೇಲನು ಕುಚೇಲಾಲಂಕೃತನಾದುದು ಹೇಗೆ? ಈ ವಿರೋಧ ಪರಿಹಾರವನ್ನು ಮಾಡಬೇಕು. ಅದಕ್ಕಾಗಿ ಕುಚೇಲಾಲಂಕೃತನೆಂದರೆ ಕು-ಭೂಮಿಯು, ಚೇಲ-ವಸ್ತ್ರವೂ ಇವುಗಳಿಂದ ಅಲಂಕೃತನಾದವನು ಎಂಬುದಾಗಿ ವಿರೋಧವನ್ನು ಪರಿಹರಿಸಿಕೊಳ್ಳಬೇಕು. ಕುವಸ್ತ್ರಾಪಹಾರ ಮಾಡಿದರೂ ಕೂಡ ಕುವಸ್ತ್ರಾಲಂಕೃತನೆಂದು ವಿರೋಧ. ಶ್ರೀಕೃಷ್ಣಾನುಗ್ರಹದಿಂದ ಕುಚೇಲನು ಮನೋಹರವಾದ ವಸ್ತ್ರ ಆಭರಣ ಗೃಹ ಭೂಮಿ ಧನಧಾನ್ಯ ಸಂಪನ್ನನಾದನು ಎಂಬುದಾಗಿ ವಿರೋಧ ಪರಿಹಾರವು. ಕು-ಭೂಮಿ, ಗೋತ್ರಾ ಕುಃ ಪೃಥಿವೀ-ಅಮರ. ಚೇಲ-ಬಟ್ಟೆ. ವಸ್ತ್ರಮಾಚ್ಛಾದನಂ ವಾಸಶ್ಚೇಲಂ ವಸನ ಮಂಶುಕಂ –ಅಮರ. ಹರಕಲು ಚಿಂದಿ ಬಟ್ಟೆಯಲ್ಲಿ ಕಟ್ಟಿದ ಅವಲಕ್ಕಿಯನ್ನು ಸಮರ್ಪಿಸಿದ್ದರಿಂದ ಸಂತುಷ್ಟನಾದ ಶ್ರೀಕೃಷ್ಣನು ಮೊದಲು ಕುಚೇಲನಿಗೆ ಒಳ್ಳೆಯ ಬಟ್ಟೆಬರೆಗಳನ್ನು ಅನಂತರ ಎಲ್ಲಾ ಸಂಪತ್ತುಗಳನ್ನೂ ಕೊಟ್ಟನು ಎಂದು ತಾತ್ಪರ್ಯ. ಇಲ್ಲಿ ವಿರೋಧಾಭಾಸಾಲಂಕಾರ. ಆಭಾಸ್ವತೇ ವಿರೋಧಸ್ಯವಿರೋಧಾಭಾಸ ಇಷ್ಯತೇ ಎಂದು ವಿರೋಧಾಭಾಸಾಲಂಕಾರದ ಲಕ್ಷಣವು.

**ಅವತಾರಿಕೆ** : ಶ್ರೀಮೂಲರಾಮಚಂದ್ರನ ಪ್ರಾರ್ಥನೆಯನ್ನು ಮಾಡುತ್ತಾ ಶ್ರೀರಾಘವೇಂದ್ರ ಗುರುಸಾರ್ವಭೌಮರು ಭಗವಂತನ ಸ್ತೋತ್ರಮಂಜರಿಯನ್ನು (ಶ್ರೀಹರಿಪರಮಾತ್ಮನ ದಶ ಅವತಾರಗಳ ವರ್ಣನಾರೂಪವಾದ ಸ್ತೋತ್ರವನ್ನು ಮುಗಿಸುತ್ತಾರೆ.)

**ಏವಮಾದಿವಿವಿಧೈರವತಾರೈಃ ಪಾಲಿತಾಖಿಲಜನೌಘ! ಮಮಾಘಮ್ ।**
**ಸನ್ನಿರಸ್ಯ ಕಮಲಾಸ್ಯ ನಮಸ್ಯಾಂ ಸ್ವೀಕುರುಷ್ವ ರಘುವಂಶವತಂಸ ॥೨೪॥**

**ತಾತ್ಪರ್ಯ** : ಈ ರೀತಿಯಾಗಿ ಹಿಂದೆ ಮತ್ಸ್ಯ ಕೂರ್ಮಾದಿ ಅನಂತ ಅವತಾರಗಳಿಂದ ಸಮಸ್ತ ಸಜ್ಜನ ಸಮೂಹವನ್ನು ಕಾಪಾಡಿರುವ ತಾವರೆಯಂತಹ ಸುಂದರವಾದ ಮುಖವನ್ನುಳ್ಳ

ರಘುವಂಶ ಶ್ರೇಷ್ಠನಾದ ಶ್ರೀಮನ್ಮೂಲರಾಮಚಂದ್ರ ಪ್ರಭುವೇ! ನೀನು ನನ್ನ ತಾಪವನ್ನು ಪರಿಹರಿಸು, ನನ್ನ ಅನಂತಾನಂತ ನಮಸ್ಕಾರಗಳನ್ನು ಸ್ವೀಕರಿಸು ಎಂದು ಶ್ರೀರಾಘವೇಂದ್ರ ಗುರುಸಾರ್ವಭೌಮರು ಶ್ರೀಮನ್ಮೂಲರಾಮಚಂದ್ರ ದೇವರನ್ನು ಪ್ರಾರ್ಥಿಸುತ್ತಾ ಸ್ತೋತ್ರವನ್ನು ಮುಗಿಸುತ್ತಾರೆ.

**ಅವತಾರಿಕೆ :** ಈಗ ಕವಿಗಳು ಶ್ರೀರಾಘವೇಂದ್ರ ಗುರುಗಳು ಸಭಾ ಭವನಕ್ಕೆ ತೆರಳಿದುದನ್ನು ವರ್ಣಿಸುತ್ತಾರೆ.

**ಇತ್ಯುದೀರ್ಯ ವಿನತೋಽಪಿ ನಯೇನ ಪ್ರಾರ್ಥಿತಸ್ತದನು ಸಂಸದಮಾಗಾತ್ ।**
**ಸತ್‌ಪಥಂ ವಿಶದಯನ್ ಸಮುದೀತಃ ಪೂರ್ವಶೈಲಮಿವ ಕೈರವಬಂಧುಃ ॥೫೫॥**

**ತಾತ್ಪರ್ಯ :** ಹಿಂದೆ ಹೇಳಿದ ರೀತಿಯಿಂದ ಶ್ರೀರಾಘವೇಂದ್ರತೀರ್ಥರು ಶ್ರೀಹರಿಪರಮಾತ್ಮನನ್ನು ಸ್ತೋತ್ರ ಮಾಡಿದರು. ಶ್ರೀಹರಿಪರಮಾತ್ಮನನ್ನು ನಮಿಸಿದರು. ಅನಂತರ ಸೇವಕ ವರ್ಗದವರಿಂದ ಪ್ರಾರ್ಥಿಸಲ್ಪಟ್ಟವರಾಗಿ ಸಭಾಗೃಹವನ್ನು ಕುರಿತು ದಯಮಾಡಿಸಿದರು. ಚಂದ್ರನು ದೇವತೆಗಳ ಮತ್ತು ನಕ್ಷತ್ರಗಳ ಮಾರ್ಗವಾದ ಆಕಾಶವನ್ನು ಪ್ರಕಾಶಗೊಳಿಸುತ್ತಾ, ಉದಯಪರ್ವತವನ್ನು ಏರಿ ಬರುತ್ತಾನೆ. ಅವನ ಉದಯದಿಂದ ನೈದಿಲೇ ಹೂವುಗಳು ಆನಂದಿಸುತ್ತವೆ. ಅರಳುತ್ತವೆ. ಅದರಂತೆಯೇ ಶ್ರೀರಾಘವೇಂದ್ರ ಗುರುಸಾರ್ವಭೌಮಚಂದ್ರರು ಸಜ್ಜನರ ದಾರಿಯನ್ನು ಪ್ರಕಾಶಗೊಳಿಸುತ್ತಾ ತಮ್ಮ ಅಭ್ಯುದಯದಿಂದ ಸಜ್ಜನ ವಿದ್ವಜ್ಜನರೆಂಬ ಕುಮುದಗಳನ್ನು ಆಹ್ಲಾದಗೊಳಿಸುತ್ತಾ ಸಭಾಮಂಟಪವೆಂಬ ಉದಯಶೈಲವನ್ನು ಸೇರಿದರು ಎಂದು ತಾತ್ಪರ್ಯ.

**ಅವತಾರಿಕೆ :** ಈಗ ಕವಿಗಳು ಶ್ರೀಗುರುಸಾರ್ವಭೌಮರು ಸಭಾಭವನಕ್ಕೆ ದಯಮಾಡಿಸಿದ ವಿಷಯವನ್ನು ತಿಳಿಸಿದ ನಂತರದಲ್ಲಿ ಗುರುಗಳು ಪ್ರವೇಶಿಸಿದ ಸಭಾಗೃಹವನ್ನು ವರ್ಣಿಸುತ್ತಾರೆ.

**ಪ್ರಾಂಶುಯನ್ಮಣಿಗವಾಕ್ಷವಿನಿರ್ಯದ್ದ್ಯೋಸರಿಜ್ಜಲವಶಾತ್ ಸಮುಪೇತ್ಯ ।**
**ಅಕ್ಷಮಾ ಇವ ಲುಠಂತಿ ಯತೀಂದುಚ್ಛತ್ರಚಾಮರಮಿಷೇಣ ಮರಾಲಾಃ ॥೫೬॥**

**ತಾತ್ಪರ್ಯ :** ಶ್ರೀರಾಘವೇಂದ್ರತೀರ್ಥರು ಪ್ರವೇಶ ಮಾಡಿದ ಸಭಾಗೃಹವು ದಿವ್ಯವಾಗಿತ್ತು. ದಿವ್ಯ ಮಹಿಮೆಗಳಿಂದ ಸಂಪನ್ನವಾಗಿತ್ತು. ಎತ್ತರವಾದ ಆ ಸಭಾಗೃಹದಲ್ಲಿ ಗೋಡೆಗಳಲ್ಲಿ ಬಹಳ ಎತ್ತರದಲ್ಲಿ ಗವಾಕ್ಷಿಗಳನ್ನಿಟ್ಟಿದ್ದರು. ರತ್ನಖಚಿತವಾದ, ಚಂದ್ರಕಾಂತಶಿಲಾ ರಚಿತವಾದ ಆ ಗವಾಕ್ಷಿಗಳ ಮೂಲಕ ಆಕಾಶಗಂಗೆಯ ನೀರಿನ ಪ್ರವಾಹವು ಭೂಲೋಕದ ಕಡೆಗೆ ನುಗ್ಗುತ್ತಿರುವಾಗ ಆಕಾಶಗಂಗೆಯಲ್ಲಿ ಈಜುತ್ತಿದ್ದ ಧವಳ ಹಂಸಗಳು ಪ್ರವಾಹ ವೇಗದಿಂದ ಭೂಮಿಗೆ ಬಂದವು. ಇಲ್ಲಿಂದ ಪುನಃ ಹಿಂತಿರುಗಿ ಹೋಗಲು ಅಸಮರ್ಥವಾಗಿ, ಇಲ್ಲಿಯೇ ಶ್ರೀರಾಘವೇಂದ್ರತೀರ್ಥರ ಶ್ವೇತಚ್ಛತ್ರಗಳು ಮತ್ತು ಚಾಮರಗಳ ನೆಪದಿಂದ, ಕುಂಟುತ್ತಾ ಹೊರಳಾಡುತ್ತಾ ಇವೆ.

**ಅವತಾರಿಕೆ :** ಈಗ ಕವಿಗಳು ಶ್ರೀರಾಘವೇಂದ್ರ ಗುರುಸಾರ್ವಭೌಮರು ಕುಳಿತಿರುವ ಆಸನವನ್ನು ವರ್ಣಿಸುತ್ತಾರೆ.

**ವ್ಯೋಮಲಂಘನಮದೇನ (ಸಮುದ್ಯನ್) ತದೂರ್ಧ್ವಂ**
**ಯನ್ನಿರುದ್ಧಗತಯೋ ದಿವಿ ತಾರಾಃ ।**
**ತತ್ಪ್ರಭುಂ ಶರಣಯಂತಿ ಯತೀಂದುಂ ಮೌಕ್ತಿಕಾಸನಗಮೌಕ್ತಿಕದಂಭಾತ್ ॥೫೭॥**

**ತಾತ್ಪರ್ಯ :** ನಕ್ಷತ್ರಗಳು ಭೂಮಿಯಿಂದ ಮೇಲೆ ಆಕಾಶದಲ್ಲಿ ಸೇರಿಕೊಂಡು ಅಲ್ಲಿಯೂ ಮೇಲೆ ಮೇಲೆ ಹೋಗಲು ಬಯಸಿದವು. ಸ್ವರ್ಗವನ್ನು ಏರಲು ಬಯಸಿದವು. ಅದಕ್ಕಾಗಿ ಪ್ರಯತ್ನವನ್ನೂ ಮಾಡುತ್ತಿದ್ದವು. ಆದರೆ ಯೋಗಿಗಳು ಆ ನಕ್ಷತ್ರಗಳನ್ನು ತಡೆದು, ನೀವು ಎಷ್ಟು ಮೇಲಕ್ಕೆ ಹೋಗುತ್ತೀರೋ ನಾವು ಅದಕ್ಕಿಂತಲೂ ಮೇಲೆ ಹೋಗುತ್ತೇವೆ. ನೀವು ನಮ್ಮ ಜೊತೆಗೆ ಸ್ಪರ್ಧೆಗೆ ಬರಬೇಡಿರಿ ಎಂದು ಹೇಳಿ ಅವುಗಳನ್ನು ತಡೆದು ಅವುಗಳಿಗಿಂತಲೂ ಮೇಲೆ ಹೋದರು. ನಕ್ಷತ್ರಗಳಿಗೆ ಮೇಲೆ ಹೋಗಲು ಅವಕಾಶವಿಲ್ಲದಂತೆ ಯೋಗಿಗಳೇ ನಕ್ಷತ್ರಮಂಡಲದ ಮೇಲೆ ಹೋಗುತ್ತಿದ್ದರು. ಆಗ ನಕ್ಷತ್ರಗಳು ಯೋಗಿಗಳಿಗೆ ಪ್ರಭುವಾದ ಶ್ರೀರಾಘವೇಂದ್ರ ಗುರುಸಾರ್ವಭೌಮರನ್ನು ಮೊರೆ ಹೊಂದಿ ಯೋಗಿಗಳು ತಮ್ಮನ್ನು ತಡೆಯದಂತೆ ಅವರುಗಳಿಗೆ ತಿಳಿಸಿರಿ ಎಂದು ವಿಜ್ಞಾಪಿಸಿಕೊಳ್ಳಲು ಬಯಸಿದವು. ಅದಕ್ಕಾಗಿ ಅವುಗಳು ಶ್ರೀರಾಘವೇಂದ್ರತೀರ್ಥರ ಮುತ್ತಿನ ಆಸನದ ಮುತ್ತುಗಳಾಗಿ ಬಂದು ಆ ನೆಪದಿಂದ ರೂಪಾಂತರದಿಂದ ಶ್ರೀಗುರುರಾಜರನ್ನು ಶರಣು ಬಂದಿವೆಯೋ ಎಂಬಂತೆ ತೋರುತ್ತಿದೆ ಎಂದು ಗಮ್ಯೋತ್ಪ್ರೇಕ್ಷಾ. ಶ್ರೀ ಗುರುಸಾರ್ವಭೌಮರ ಸಿಂಹಾಸನದ ಮುತ್ತಿನ ಆಸನವು ನಕ್ಷತ್ರಗಳಂತೆ ಬೆಳಗುತ್ತಿರುವ ಮುತ್ತುಗಳಿಂದ ಅಲಂಕೃತವಾಗಿದೆ. ಈ ಮುತ್ತುಗಳನ್ನು ನೋಡಿದರೆ ಇವುಗಳು ನಕ್ಷತ್ರಗಳೇ ಇರಬೇಕು ಎಂಬ ಭ್ರಾಂತಿ ಬರುತ್ತದೆ. ಆಗ ವಿವೇಕಿಗಳು ಶ್ರೀರಾಘವೇಂದ್ರತೀರ್ಥರ ಮಹಿಮೆಯನ್ನು ಮನಸ್ಸಿಗೆ ತಂದುಕೊಂಡು ಈ ರೀತಿಯಾಗಿ ಆಲೋಚಿಸುತ್ತಾರೆ. ನಕ್ಷತ್ರಗಳು ಆಕಾಶವನ್ನು ಅತಿಕ್ರಮಿಸಿ ಮೇಲೆ ಮೇಲೆ ಸ್ವರ್ಗದ ಸಮೀಪ ಹೋಗಲು ಬಯಸಿದಾಗ ಭೂಮಿಯಿಂದ ಮೇಲಿರುವ ಯೋಗಿಗಳಿಂದ ಅವುಗಳ ಊರ್ಧ್ವಮುಖ ಗಮನಕ್ಕೆ ಅಡ್ಡಿ ಬಂದಿತು. ಒಂದೇ ದಾರಿಯಲ್ಲಿ ಬಹಳ ಜನರುಗಳು ನಡೆದಾಡುತ್ತಿದ್ದರೆ ನಮ್ಮ ನಡಿಗೆಗೆ ತಡೆಯುಂಟಾಗುವಂತೆ, ತಮ್ಮ ಚಲನೆಗೆ ತಡೆಯುಂಟಾದಾಗ, ಆ ನಕ್ಷತ್ರಗಳು ಯೋಗಿಗಳಿಗೆ ಪ್ರಭುಗಳಾದ ಶ್ರೀರಾಘವೇಂದ್ರತೀರ್ಥರನ್ನು ಮೊರೆ ಹೋಗಿ, ಅವರಿಗೆ ಯೋಗಿಗಳು ತಮ್ಮ ದಾರಿಗೆ ಅಡ್ಡ ಬರದಂತೆ ಆದೇಶಿಸಿರಿ ಎಂಬುದಾಗಿ ವಿನಂತಿಸಿಕೊಳ್ಳಲು ಶ್ರೀರಾಘವೇಂದ್ರ ಗುರುಸಾರ್ವಭೌಮರ ಸಿಂಹಾಸನದ ಮುತ್ತುಗಳನ್ನು ನೆಪಮಾಡಿಕೊಂಡು ಗುರುಗಳಿಗೆ ಶರಣು ಬಂದಂತೆ ಕಾಣಿಸುತ್ತದೆ ಎಂಬುದಾಗಿ ತಾತ್ಪರ್ಯ. (ಶ್ರೀಗುರುರಾಜರ ಸಿಂಹಾಸನದ ಮುತ್ತುಗಳು ನಕ್ಷತ್ರಗಳಂತೆ ಇದ್ದವು.)

**ವಿಶೇಷಾಂಶ :** ಮೂಲಶ್ಲೋಕದಲ್ಲಿ ಸಮುದ್ಯನ್ ಎಂಬ ಪಾಠವಿದೆ. ಅದು ಸರಿಹೊಂದುವುದಿಲ್ಲ. ಅದಕ್ಕಾಗಿ ತದೂರ್ಧ್ವಂ ಎಂದು ಪಾಠ ವ್ಯತ್ಯಾಸವನ್ನು ಮಾಡಿ ಗಂತುಂ ಯತಮಾನಾಃ ಅಭೂವನ್ ಎಂದು ಅಧ್ಯಾಹಾರ ಮಾಡಿದೆ. ಆದರೆ ವ್ಯೋಮಲಂಘನಮದೇ ಸಮುದಾಯನ್ ಎಂಬ ಪಾಠವನ್ನು ಇಟ್ಟುಕೊಂಡಾಗ ಆಕಾಶದಲ್ಲಿ ಹೋಗುವಾಗ, ಮದವು ಉಂಟಾದಾಗ, ನಕ್ಷತ್ರಗಳು ಮೇಲಕ್ಕೆ ಹೋಗಲು ಪ್ರಯತ್ನಪಟ್ಟವು ಎಂದು ಅರ್ಥವನ್ನು ಮಾಡಬಹುದು. ಸಮ್ + ಉತ್ + ಅಯನ್, ಸಮ್ ಉತ್ ಎಂಬ ಎರಡು ಉಪಸರ್ಗಪೂರ್ವಕವಾದ ಇಣ್ ಗತೌ ಎಂಬ ಧಾತುವಿನ ಲಙ್ ಪ್ರಥಮಪುರುಷ ಬಹುವಚನ – ಐತ್ ಐತಾಂ ಅಯನ್ ಇತ್ಯಾದಿ ರೂಪಗಳು.

**ಅವತಾರಿಕೆ :** ಈಗ ಕವಿಗಳು ಶ್ರೀ ಗುರು ರಾಘವೇಂದ್ರಸ್ವಾಮಿಗಳ ಮಹಿಮೆಗಳನ್ನು ವರ್ಣನೆ ಮಾಡುತ್ತಾರೆ.

**ನಾದ್ಭುತಂ ಶ್ರಿತವತಾಂ ಸತತಂ ಯತ್ ಸ್ತಂಭದುರ್ಗುಣಲಯೋ ಭವಿತೇತಿ ।**
**ಸಂನಿಯಚ್ಛತಿ ನಿಗೃಹ್ಯ ಸಮಸ್ತಂ ಸ್ತಂಭಮಪ್ಯತಿಮಹಾಂತಮಸೌ ಯತ್ ॥೩೮॥**

**ತಾತ್ಪರ್ಯ :** ಶ್ರೀರಾಘವೇಂದ್ರಸ್ವಾಮಿಗಳು ಬಹಳ ತೊಂದರೆಗಳಿದ್ದರೂ ಎಲ್ಲ ವಿಧವಾದ ಸ್ತಂಭದೋಷಗಳನ್ನು (ಜಾಡ್ಯಗಳನ್ನು) ಶ್ರೀಹರಿಪರಮಾತ್ಮನ ಪರಮಾನುಗ್ರಹದಿಂದ ಪ್ರಾಪ್ತವಾದ ತಮ್ಮ ಯೋಗಶಕ್ತಿಯಿಂದ ನಿಗ್ರಹಿಸುತ್ತಾರೆ. ಹೀಗಿರುವಾಗ ತಮ್ಮನ್ನು ಆಶ್ರಯಿಸಿದವರ ಪ್ರತಿಬಂಧರೂಪವಾದ ಸ್ತಂಭವನ್ನು ಅವರು ಲಯಗೊಳಿಸುತ್ತಾರೆ ಎಂಬುದು ಆಶ್ಚರ್ಯಕರವೇನಲ್ಲ! ಯೋಗಿವರ್ಯರೂ, ಯೋಗಿಗಳಿಗೆ ಪ್ರಭುಗಳೂ ಆದ ಶ್ರೀರಾಘವೇಂದ್ರ ಗುರುಸಾರ್ವಭೌಮರು ಎಲ್ಲಾ ವಿಧವಾದ ಪ್ರತಿಬಂಧಗಳನ್ನು ಪರಿಹರಿಸುತ್ತಾರೆ. ಆದುದರಿಂದ ಹಿಂದಿನ ಶ್ಲೋಕದಲ್ಲಿ ಹೇಳಿರುವ ರೀತಿಯಲ್ಲಿ ತಮ್ಮ ಗಮನ ಪ್ರತಿಬಂಧ ಪರಿಹಾರಕ್ಕಾಗಿ ಮುತ್ತಿನ ಆಸನದ ಮುತ್ತಿನ ರೂಪದಲ್ಲಿ ಬಂದು ನೆಲೆಸಿರುವ ತಾರೆಗಳ (ನಕ್ಷತ್ರಗಳ) ಪ್ರತಿಬಂಧ ಪರಿಹಾರವನ್ನು ಮಾಡುತ್ತಾರೆ ಎಂದು ಹೇಳಬೇಕಾಗಿಯೇ ಇಲ್ಲವಷ್ಟೇ! ಅದು ಕೈಮುತ್ಯನ್ಯಾಯದಿಂದ ಸಿದ್ಧವಾಗುತ್ತದೆ. ಶ್ರೀರಾಘವೇಂದ್ರಸ್ವಾಮಿಗಳು ಶರಣಾಗತರಾದವರ ಎಲ್ಲ ಪ್ರತಿಬಂಧಗಳನ್ನೂ ಪರಿಹರಿಸಿ ಕಾಪಾಡುತ್ತಾರೆಂಬುದಾಗಿ ತಾತ್ಪರ್ಯ.

**ವಿಶೇಷವಿಚಾರ :** ಈ ಶ್ಲೋಕದಲ್ಲಿ ನಾದ್ಭುತಂ ಶ್ರೀತವತಾಂ ಸತತಂ ಯತ್ ಸ್ತಂಭದುರ್ಗುಣಲಯೋಭವಿತೇತಿ ಎಂಬಲ್ಲಿಯೂ ಶ್ಲೋಕದ ಉತ್ತರಾರ್ಧದ ಕೊನೆಯಲ್ಲಿಯೂ ಯತ್ ಎಂಬುದಾಗಿ ಎರಡು ಬಾರಿ ಯತ್ ಎಂಬ ಪದವಿದೆ. ಒಂದನ್ನು ತತ್ ಎಂದು ಬದಲಾಯಿಸಿ ಅರ್ಥವನ್ನು ಹೇಳಲಾಗಿದೆ. ಅಥವಾ ಇರುವ ಹಾಗೆಯೇ ಇಟ್ಟುಕೊಂಡು, ಶ್ರೀಗುರುರಾಜರನ್ನು ಆಶ್ರಯಿಸಿದವರ ಯಸ್ತಂಭದುರ್ಗುಣಲಯಃ–ಯಾವ ಸ್ತಂಭವೆಂಬ ದೋಷದ ನಾಶವು ಆಗುವುದೆಂಬುದು ಆಶ್ಚರ್ಯಕರವಲ್ಲ; ಏಕೆಂದರೆ, ಯತ್ = ಯಾವ ಕಾರಣದಿಂದ,

ಸಃ ಸಮಸ್ತಂ ಅತಿಮಹಾಂತಂ ಅಪಿ ಸ್ತಂಭಂ = ಸಂಪೂರ್ಣವಾದ ಅತಿ ಮಹತ್ತಾದ ಸ್ತಂಭವನ್ನೂ ನಿಗ್ರಹಿಸುತ್ತಾರೆ. ನಿಯಮಿಸುತ್ತಾರೆ ಎಂಬುದಾಗಿಯೂ ಅರ್ಥವನ್ನು ಹೇಳಬಹುದು.

**ಅವತಾರಿಕೆ :** ಶ್ರೀಗುರು ರಾಘವೇಂದ್ರರು ಕುಳಿತಿರುವ ಮಣಿಮಯ ಮಂಟಪದ ವೈಭವವನ್ನು ಕವಿಗಳು ಈಗ ವರ್ಣಿಸುತ್ತಾರೆ.

**ಸಂಚರನ್ ಕ್ವಚನ ಯತ್ರ ದಿದೃಕ್ಷುಶ್ಚಂದ್ರಕಾಂತಿಮಣಿಮಂಟಪತೋಽಧಃ ।**
**ಆದೃತಃ ಶಶಿರುಚಾ ಬತ ಸಿದ್ಧಃ ಪರ್ಯಹಾಸ್ಯತ ಪರತ್ರ ಗತೇನ ॥೫೯॥**

**ತಾತ್ಪರ್ಯ : ದ್ವೌ ಸಿದ್ಧಪುರುಷೌ ಸುರಲೋಕಾತ್ ಶ್ರೀರಾಘವೇಂದ್ರಯತಿವರಂ ದ್ರಷ್ಟುಮಾಗತೌ** – ಇಬ್ಬರು ಸಿದ್ಧಪುರುಷರು ದೇವಲೋಕದಿಂದ ಶ್ರೀರಾಘವೇಂದ್ರ ಯತಿರಾಜರನ್ನು ನೋಡಲು ಬಂದರು.

**ತಯೋರೇಕಃ ಆದರೇಣ ಚಂದ್ರಕಾಂತಮಣಿನಿರ್ಮಿತಮಂಟಪಂ ದಿದೃಕ್ಷುಃ ಅಧೋಭಾಗೇ ಆಗತಃ** = ಅವರಲ್ಲಿ ಒಬ್ಬನು ಅಕ್ಕರೆಯಿಂದ, ಚಂದ್ರಕಾಂತ ಮಣಿಯಿಂದ ನಿರ್ಮಿತವಾದ ಮಂಟಪವನ್ನು ನೋಡುವ ಇಚ್ಛೆಯುಳ್ಳವನಾಗಿ ಕೆಳಭಾಗಕ್ಕೆ ಬಂದನು.

**ಅನ್ಯಶ್ಚ ಉಪರ್ಯಾಗತವಾನ್** – ಮತ್ತೊಬ್ಬನು ಮೇಲ್ಭಾಗಕ್ಕೆ ಬಂದನು.

**ಉಭಾವಪಿ ಚಂದ್ರಕಾಂತಮಣಿಕಾಂತ್ಯಾ ಚಂದ್ರಸದೃಶೌ** = ಅವರಿಬ್ಬರೂ ಕೂಡಾ ಚಂದ್ರಕಾಂತಮಣಿ ಕಾಂತಿಯಿಂದ ಚಂದ್ರನಂತೆ ಕಾಣಿಸುತ್ತಿದ್ದರು.

**ತಥಾಪಿ ಪರಿಗತೇನ ಸಿದ್ಧೇನ ಅಯಮಧೋಗತೇನ ನ ಧವಲಃ** = ಆದರೂ ಕೂಡಾ ಕೆಳಭಾಗದಲ್ಲಿರುವ ಈ ಸಿದ್ಧನು ಬೆಳ್ಳಗಿಲ್ಲ ; ಏಕೆಂದರೆ ಚಂದ್ರಕಾಂತಮಣಿಯ ಮಂಟಪವು ಕೆಳಭಾಗದಲ್ಲಿ ಇಲ್ಲ.

**(ಚಂದ್ರಕಾಂಮಣೀರ್ಮಂಟಪಸ್ಯ ಅಧೋಭಾಗೇ ಅಭಾವಾತ್ । ಅತಃ ಚಂದ್ರಕಾಂತಮಣಿಮಂಟಪಸ್ಯ ಅಧೋಭಾಗೇ ಸ್ಥಿತಿರಯುಕ್ತಾ** = ಆದುದರಿಂದ ಚಂದ್ರಕಾಂತಮಣಿಯ ಮಂಟಪದ ಕೆಳಗಡೆ ಇರುವುದು ಸರಿಯಲ್ಲ.

**ಅಹಂ ತು ಚಂದ್ರಕಾಂತಪ್ರಭಯಾ ಚಂದ್ರಸದೃಶಃ ಚಂದ್ರವತ್ ಉಪರಿಭಾಗೇ ತಿಷ್ಠಾಮಿ, ಇತಿ ಉಪರಿಸ್ಥಿತಃ ಅಧೋಭಾಗಸ್ಥಿತಂ ಸಿದ್ಧಪುರುಷಂ ಪರಿಹಸಿತವಾನ್ ಇತಿ ಭಾವಃ** = ನಾನಾದರೋ ಚಂದ್ರಕಾಂತಮಣಿಯ ಪ್ರಭೆಯಿಂದ ಚಂದ್ರನಂತೆ ಕಾಣುತ್ತಾ, ಕಂಗೊಳಿಸುತ್ತಾ ಚಂದ್ರನಂತೆ ಮೇಲ್ಭಾಗದಲ್ಲಿ ಇರುತ್ತೇನೆ ಎಂದು ಮೇಲ್ಭಾಗದಲ್ಲಿದ್ದ ಸಿದ್ಧಪುರುಷನು ಕೆಳಭಾಗದಲ್ಲಿದ್ದ ಸಿದ್ಧಪುರುಷನನ್ನು ಪರಿಹಾಸ ಮಾಡಿದನು ಎಂದು ಭಾವವು.

**ಚಂದ್ರಕಾಂತಮಣಿಮಂಟಪಸ್ಯ ತಾದೃಶಂ ಧಾವಲ್ಯಮಿತಿ ಫಲಿತೋರ್ಥಃ** = ಚಂದ್ರಕಾಂತಮಣಿಯ ಮಂಟಪವು ಅಷ್ಟೊಂದು ಬಿಳಿಯಾಗಿತ್ತು ಎಂದು ಫಲಿತಾರ್ಥವು.

(ಇದು ವ್ಯಾಖ್ಯಾನಕಾರರು ಕೊಟ್ಟಿರುವ ಸಂಸ್ಕೃತ ಭಾಷೆಯಲ್ಲಿರುವ ತಾತ್ಪರ್ಯಾರ್ಥವು)

**ಅವತಾರಿಕೆ :** ಇಬ್ಬರು ಸಿದ್ಧಪುರುಷರು ದೇವಲೋಕದಿಂದ ಶ್ರೀರಾಘವೇಂದ್ರತೀರ್ಥರನ್ನು ನೋಡಲು ಭೂಲೋಕಕ್ಕೆ ಬಂದರು. ಅವರಿಬ್ಬರೂ ಶ್ರೀರಾಘವೇಂದ್ರತೀರ್ಥಗುರುಗಳು ವಿರಾಜಿಸುತ್ತಿದ್ದ ಚಂದ್ರಕಾಂತಮಣಿ ಮಯವಾದ ಮಂಟಪದ ಹತ್ತಿರ ಬಂದರು. ಅವರಿಬ್ಬರಲ್ಲಿ ಒಬ್ಬರು ಬಹಳ ಪ್ರೀತಿಯಿಂದ ಆ ಮಂಟಪದ ಕೆಳಭಾಗ ಒಳಭಾಗಗಳನ್ನು ನೋಡಲು ಕೆಳಗಿಳಿದು ಬಂದರು. ಮತ್ತೊಬ್ಬರು ಮೇಲ್ಭಾಗದಲ್ಲಿದ್ದರು. ಇಬ್ಬರು ಸಿದ್ಧಪುರುಷರು ಚಂದ್ರಕಾಂತಮಣಿಕಾಂತಿಯಿಂದ ಚಂದ್ರನ ಹಾಗೆ ಬೆಳಗುತ್ತಿದ್ದರು. ಅವರಿಬ್ಬರೂ ಸ್ವತಃ ಚಂದ್ರನಂತೆಯೇ ಇದ್ದರು. ಆದರೂ ಮೇಲ್ಭಾಗದಲ್ಲಿದ್ದ ಸಿದ್ಧಪುರುಷನು ಕೆಳಭಾಗಕ್ಕೆ ಹೋದ ಸಿದ್ಧಪುರುಷನನ್ನು ನೋಡದಿರುವುದರಿಂದ ಕೆಳಗಿಳಿದು ಹೋದ ತನ್ನ ಜೊತೆಗಾರನಾದ ಸಿದ್ಧಪುರುಷನು ಬೆಳ್ಳಗಿಲ್ಲ ; ನನ್ನ ಮೇಲೆ ಚಂದ್ರಕಾಂತಮಣಿಯ ಪ್ರಕಾಶವು ಬಿದ್ದ ನಾನು ಚಂದ್ರನಂತೆ ಬೆಳಗುತ್ತಿದ್ದೇನೆ. ಈ ಮಂಟಪದ ಕೆಳಗೆ ಚಂದ್ರಕಾಂತಮಣಿಯು ಇಲ್ಲ; ಆದುದರಿಂದ ಅವನು ನನ್ನಂತೆ ಕಾಣಿಸಲು ಸಾಧ್ಯವಿಲ್ಲ. ಆದುದರಿಂದಲೇ ಕೆಳಗಡೆ ಹೋಗಿ ಚಂದ್ರಕಾಂತಮಣಿ ಮಂಟಪವನ್ನು ನೋಡಲು ಪ್ರಯತ್ನಿಸುವುದು ವ್ಯರ್ಥ. ನಾನಾದರೋ ಚಂದ್ರಕಾಂತಮಣಿಗಳ ಪ್ರಭೆಯಿಂದ ಮೇಲ್ಭಾಗದಲ್ಲಿ ಪ್ರಕಾಶಿಸುತ್ತಾ ಇರುತ್ತೇನೆ. ನನ್ನ ಸ್ನೇಹಿತ ಆ ರಹಸ್ಯವನ್ನು ತಿಳಿಯದೇ ಪೆದ್ದನಾದನು. ಚಂದ್ರನಂತೆ ಪ್ರಕಾಶಿಸುವ ಈ ಸಂದರ್ಭವನ್ನು ಕಳೆದುಕೊಂಡನು ಎಂಬುದಾಗಿ ಚಿಂತಿಸಿ ಮೇಲ್ಭಾಗದಲ್ಲಿದ್ದ ಸಿದ್ಧನು ಕೆಳಭಾಗದಲ್ಲಿದ್ದ ಸಿದ್ಧನನ್ನು ಪರಿಹಾಸ ಮಾಡಿದನು. ವಾಸ್ತವವಾಗಿ ಆ ಮಂಟಪದ ಕೆಳಭಾಗವೂ ಚಂದ್ರಕಾಂತಮಣಿಮಯವಾದುದರಿಂದ ಕೆಳಗಿರುವ ಸಿದ್ಧನೂ ಚಂದ್ರನಂತೆ ಪ್ರಕಾಶಿಸುತ್ತಿದ್ದನು. ಈ ವಿಚಾರವು ಮೇಲ್ಭಾಗದಲ್ಲಿದ್ದ ಸಿದ್ಧನಿಗೆ ತಿಳಿದಿರಲಿಲ್ಲ. ಹೀಗೆ ಮೇಲಿರುವ ಸಿದ್ಧನೇ ಪೆದ್ದನಾದನು. ಈ ರೀತಿಯ ವೈಚಿತ್ರದಿಂದ ಕೂಡಿದ ಚಂದ್ರಕಾಂತ ಮಣಿಮಂಟಪದಲ್ಲಿ ಶ್ರೀಗುರುಸಾರ್ವಭೌಮರು ಆಸೀನರಾಗಿದ್ದರು ಎಂಬುದಾಗಿ ತಾತ್ಪರ್ಯ.

**ಅವತಾರಿಕೆ :** ಮೇಘ ಮಂಡಲದಿಂದ ವಿಚಿತ್ರ ರೀತಿಯಿಂದ ಕೆಳಗೆ ಬಿದ್ದ ಸಿದ್ಧರು ಶ್ರೀಗುರುಸಾರ್ವಭೌಮರ ದಿವ್ಯವಾದ ಆಸ್ಥಾನಮಂಟಪವನ್ನು ನೋಡಿ ಆಶ್ಚರ್ಯ ಹೊಂದಿದುದನ್ನು ಕವಿಗಳು ಈಗ ವರ್ಣಿಸುತ್ತಾರೆ.

**ಸಂಚರಚ್ಛಿಖಿಮುಖೋರಗಪೀತಸ್ವಾಶ್ರಯಾನಿಲಲಯಾತ್ ಸಘನೇಷು ।**
**ಸಂಪತತ್ಸು ಪತಿತಾ ಭುವಿ ಸಿದ್ಧಾ ವಿಸ್ಮಯಂ ದಧತಿ ಹಂತ ಯದಂತಃ ॥೬೦॥**

**ತಾತ್ಪರ್ಯ :** ಶ್ರೀರಾಘವೇಂದ್ರ ಗುರುಸಾರ್ವಭೌಮರು ಆಸೀನರಾಗಿರುವ ಚಂದ್ರಕಾಂತಿ ಮಣಿಮಯವಾದ ಮಂಟಪದ ಮೇಲ್ಭಾಗದಲ್ಲಿ ಆಕಾಶದಲ್ಲಿ ನವಿಲುಗಳು ಹಾರಾಡುತ್ತಾ ಇರುತ್ತವೆ.

ಅವುಗಳು ತಮ್ಮ ಆಹಾರವಾದ ಹಾವುಗಳನ್ನು ಬಾಯಿಯಲ್ಲಿ ಕಚ್ಚಿಕೊಂಡು ಆಕಾಶದಲ್ಲಿ ಮೇಘಮಂಡಲದ ಬಳಿ ಹಾರಾಡುತ್ತ ಇರುತ್ತವೆ. ಆ ನವಿಲುಗಳ ಬಾಯಿಯಲ್ಲಿರುವ ಹಾವುಗಳು ಆಗಲೂ ಕೂಡಾ ಮೇಘಗಳಿಗೆ ಆಧಾರವಾಗಿರುವ ವಾಯುವನ್ನು ಕುಡಿಯುತ್ತವೆ. ಹಾವುಗಳಿಗೆ ಗಾಳಿಯು ಆಹಾರವಾಗಿರುವುದರಿಂದ ಅವುಗಳು ನವಿಲುಗಳ ಬಾಯಿಯಲ್ಲಿರುವುದರಿಂದ ಮರಣಾವಸ್ಥೆಯಲ್ಲಿಯೂ ತಮ್ಮ ಆಹಾರವಾದ ವಾಯುವು ನಾಶವಾದಾಗ ಆ ಮೋಡಗಳು ಆಕಾಶದಿಂದ ಭೂಮಿಯ ಮೇಲೆ ಬೀಳುತ್ತವೆ. ಆ ಮೋಡಗಳ ಆಧಾರದಿಂದ ಆಕಾಶದಲ್ಲಿ ಸಂಚರಿಸುತ್ತಿರುವ ಸಿದ್ಧರೂ ಮೋಡಗಳು ಬಿದ್ದಾಗ ತಾವೂ ಭೂಮಿಯ ಮೇಲೆ ಬೀಳುತ್ತಾರೆ. ಆಗ ಅವರುಗಳು ಚಂದ್ರಕಾಂತ ಮಣಿಮಂಟಪದ ಒಳಭಾಗಕ್ಕೆ ಬಂದು ಅದರ ಸೌಂದರ್ಯವನ್ನು ನೋಡಿ ಆಶ್ಚರ್ಯಚಕಿತರಾಗುತ್ತಾರೆ. ಆಹಾ! ಶ್ರೀಗುರುಸಾರ್ವಭೌಮರು ಆಸೀನರಾಗಿರುವ ಈ ಚಂದ್ರಕಾಂತ ಮಣಿಮಂಟಪವು ಎಷ್ಟು ಸುಂದರವಾಗಿದೆ ಎಂಬುದಾಗಿ ಮನಃಪೂರ್ವಕವಾಗಿ ಹೊಗಳುತ್ತಾ ಇರುತ್ತಾರೆ. (ಇಲ್ಲಿ ವ್ಯಾಖ್ಯಾನಕಾರರು ಬರೆದಿರುವ ತಾತ್ಪರ್ಯಬೋಧಕವಾದ ಸಂಸ್ಕೃತ ವಾಕ್ಯಗಳನ್ನು ಕೊಟ್ಟು ಅವುಗಳ ಅನುವಾದವನ್ನೂ ನೀಡಿರುತ್ತೇವೆ).

೧) **ಮೇಘಾಃ ವಾಯುಮಂಡಲೇ ವಾಯ್ವಾಧಾರತಯಾ ಸಂಚರಂತಿ** – ಮೋಡಗಳು ವಾಯುಮಂಡಲದಲ್ಲಿ ವಾಯುವಿನ ಆಧಾರದಿಂದಲೇ ಸಂಚರಿಸುತ್ತವೆ.

೨) **ಸ್ವಾಶ್ರಯಭೂತವಾಯೂನಾಂ ಸರ್ಪೈಃ ಪೀತತ್ವಾತ್ ಸ್ವಾಶ್ರಯಸ್ಯ ನಷ್ಟತ್ವಾತ್ ಅಧಃ ಪತಂತಿ ಮೇಘಾಃ** – ತಮಗೆ ಆಧಾರವಾಗಿರುವ ಗಾಳಿಯನ್ನು ಸರ್ಪಗಳು ಸೇವಿಸಿದಾಗ, ಆಶ್ರಯವಾದ ಗಾಳಿಯು ನಾಶವಾದಾಗ ಮೋಡಗಳು ಕೆಳಗೆ ಬೀಳುತ್ತವೆ. ಆಗ ಗಾಳಿಯಲ್ಲಿ ತೇಲುತ್ತಿರುವ ಮೋಡಗಳ ಆಧಾರದಿಂದ ಸಂಚರಿಸುವ ಆ ಸಿದ್ಧರೂ ಕೆಳಗೆ ಬೀಳುತ್ತಾರೆ.

೩) **ತೇ ಚಂದ್ರಕಾಂತಮಣಿಮಂಟಪಸ್ಯ ಅಂತಃ ವಿಚಿತ್ರ ಕೌಶಲಂ ದೃಷ್ಟ್ವಾ ದೇವಲೋಕೇऽಪಿ ಏತಾದೃಶ ಕೌಶಲಂ ನಾಸ್ತೀತಿ ಆಶ್ಚರ್ಯವಂತಃ ಬಭೂವುಃ ಇತಿ ಭಾವಃ** – ಆ ಸಿದ್ಧರು ಚಂದ್ರಕಾಂತಮಣಿಮಂಟಪದ ಒಳಗೆ ಆಶ್ಚರ್ಯಕರವಾದ ಕಲಾಕೌಶಲವನ್ನು ನೋಡಿ ದೇವಲೋಕದಲ್ಲಿಯೂ ಇಂತಹಾ ಕೌಶಲವು ಇಲ್ಲವೆಂದು ತಿಳಿದು ಆಶ್ಚರ್ಯಚಕಿತರಾದರು ಎಂದು ಭಾವವು. (ಇಲ್ಲಿ ಅದ್ಭುತ ರಸವಿದೆ. ಅತಿಶಯೋಕ್ತಿ ಅಲಂಕಾರ).

**ಅವತಾರಿಕೆ :** ಆಗ ಕವಿಗಳು ಪ್ರಕಾಶಿಸುವ ಚಂದ್ರನನ್ನು ಅದ್ಭುತವಾದ ರೀತಿಯಲ್ಲಿ ವರ್ಣಿಸುತ್ತಾರೆ.

**ನ ತ್ಯಜಂತಿ ಮಿಹಿರಂ ಖಲು ಯಾತ್ರಾಂ (ತವ ಯಾತ್ರಾಂ)**
**ಗಾರಚರ್ವಣಚಣಾ ಹಿ ಚಕೋರಾಃ ।**
**ಪಕ್ಷಿಭಾಷಣಕೃತೇ ಯದಿ ನಾನಾ ವಾಲಖಿಲ್ಯನಿಗಮಾಧ್ಯಯನಾನಿ ॥೭೧॥**

**ತಾತ್ಪರ್ಯ :** ಚಕೋರ ಪಕ್ಷಿಗಳು ಎರಡು ವಿಧವಾಗಿವೆ. ಬೆಂಕಿಯನ್ನು ನುಂಗುವ ಚಕೋರ

ಪಕ್ಷಿಗಳು ಕೆಲವು ಇವೆ. ಕೆಲವು ಚಕೋರ ಪಕ್ಷಿಗಳು ಬೆಳದಿಂಗಳನ್ನು ಕುಡಿಯುತ್ತವೆ. ಬೆಂಕಿಯನ್ನು ನುಂಗುವ ಚಕೋರ ಪಕ್ಷಿಗಳು ಸೂರ್ಯನನ್ನು ಅಗಲುವುದಿಲ್ಲ. ಬೆಳದಿಂಗಳನ್ನು ಕುಡಿಯುವ ಚಕೋರ ಪಕ್ಷಿಗಳು ಚಂದ್ರನನ್ನು ಬಿಟ್ಟು ಅಗಲುವುದಿಲ್ಲ. ಪ್ರಕೃತದಲ್ಲಿ ರಾತ್ರಿಯಲ್ಲಿಯೂ ಚಂದ್ರನು ಸೂರ್ಯನಂತೆ ಪ್ರಕಾಶಮಾನವಾಗಿರುತ್ತಾನೆ. ಆದುದರಿಂದ ನಿದ್ರಿಸಿದ ಪಕ್ಷಿಗಳು ಈಗ ಸೂರ್ಯೋದಯವಾಯಿತು ಎಂಬ ಭ್ರಾಂತಿಯಿಂದ ಹಗಲಿನಂತೆ ಚಿಲಿಪಿಲಿಗುಟ್ಟುತ್ತಾ ಮಾತನಾಡುತ್ತಿರುತ್ತವೆ. ಸೂರ್ಯನು ಉದಯಿಸುವುದಕ್ಕಿಂತಲೂ ಮೊದಲು ಅವನ ಮುಂದೆ ಅರವತ್ತು ಸಾವಿರ ಮಂದಿ ಹೆಬ್ಬೆಟ್ಟಿನ ಗಾತ್ರದ ವಾಲಖಿಲ್ಯರು ಸೂರ್ಯನನ್ನು ವೇದವಾಕ್ಯಗಳಿಂದ ನಾನಾ ರೀತಿಯಿಂದ ಸ್ತೋತ್ರ ಮಾಡುತ್ತಾರೆ. ಪ್ರಕೃತದಲ್ಲಿ ಚಂದ್ರನೇ ಸೂರ್ಯನಂತೆ ಪ್ರಕಾಶಿಸುತ್ತಿರುವುದರಿಂದ ಎಚ್ಚೆತ್ತ ಚಕೋರ ಪಕ್ಷಿಗಳ ಕೂಗು ವಾಲಖಿಲ್ಯರು ಮಾಡುವ ವೇದವಾಚನದ ಸ್ತೋತ್ರಗಳು ಎಂದು ನಾನು ತಿಳಿಯುತ್ತೇನೆ ಎಂಬುದಾಗಿ ಭಾವವು. (ಉತ್ಪ್ರೇಕ್ಷಾಲಂಕಾರ)

ರಾತ್ರಿಯ ವೇಳೆಯಲ್ಲಿ ಸೂರ್ಯನಂತೆ ಪ್ರಕಾಶಿಸುವ ಚಂದ್ರನನ್ನು ಕಂಡು ಪಕ್ಷಿ ಭಾಷಣದ ಸದ್ದಿನಿಂದ ಗದ್ದಲ ಮಾಡುವ ಪಕ್ಷಿಗಳ ಕೂಗು ವಾಲಖಿಲ್ಯ ಋಷಿಗಳ ವೇದವಚನ ಸ್ತೋತ್ರ ರೂಪವೆಂದು ನಾನು ತಿಳಿಯುತ್ತೇನೆ ಎಂದು ಕವಿಗಳು ಉತ್ಪ್ರೇಕ್ಷಿಸುತ್ತಾರೆ.

**ಚಂದ್ರೋದಯಕಾಲೇ ಚಕೋರೈಃ ನಾನಾಪ್ರಕಾರಭಾಷಣೇ ಕೃತೇ ಸತಿ ತದಾ ವಾಲಖಿಲ್ಯ ನಿಗಮಾಧ್ಯಯನಾನಿ ಜನಾಃ ಜಾನಂತಿ ಇತಿ ಭಾವಃ** – ಚಂದ್ರೋದಯ ಸಮಯದಲ್ಲಿ ಚಕೋರಗಳು ನಾನಾ ರೀತಿಯಿಂದ ಮಾತನಾಡುತ್ತಿದ್ದಾಗ ಇವು ವಾಲಖಿಲ್ಯರ ವೇದಾಧ್ಯಯನದ ಸ್ತೋತ್ರರೂಪವಾದ ಮಾತುಗಳೆಂದು ಜನರು ತಿಳಿಯುತ್ತಾರೆ. ಈ ರೀತಿಯಾಗಿ ವ್ಯಾಖ್ಯಾನಕಾರರು ತಾತ್ಪರ್ಯವನ್ನು ಬರೆದಿರುತ್ತಾರೆ.

ಮೇಲಿನ ಶ್ಲೋಕದಲ್ಲಿ ಈ ರೀತಿಯಾದ ಪಾಠಾಂತರವಿದೆ.

**"ನ ತ್ಯಜಂತಿ ಮಿಹಿರಂ ತವ ಯಾತ್ರಾಂಗಾರಚರ್ವಣಚಣಾ ಹಿ ಚಕೋರಾಃ ।**
**ಪಕ್ಷಿಭಾಷಣಕೃತೇ ಯದಿ ನಾನಾ ವಾಲಖಿಲ್ಯನಿಗಮಾಧ್ಯಯನಾನಿ" ॥**

ಶ್ಲೋಕದ ಮೊದಲ ಮತ್ತು ಎರಡನೆಯ ಪಾದವನ್ನು **"ನ ತ್ಯಜಂತಿ ಮಿಹಿರಂ ಯಾತ್ರಾಂಗಾರ–ಚರ್ವಣಚಣಾ ಹಿ ಚಕೋರಾಃ"** ಎಂದು ತಿದ್ದಿ ಅರ್ಥವನ್ನು ಬರೆಯಲಾಗಿದೆ. ಯಥಾಶ್ರುತ ಪಾಠದಲ್ಲಿ ವ್ಯಾಖ್ಯಾನದ ವಾಕ್ಯಗಳಿಂದ ಅರ್ಥವು ಸ್ಫುಟವಾಗಿ ತಿಳಿದು ಬರುವುದಿಲ್ಲ.

ಓದುಗರ ಅವಗಾಹನೆಗಾಗಿ ವ್ಯಾಖ್ಯಾನದ ಯಥಾಶ್ರುತವಾದ ವಾಕ್ಯಗಳನ್ನು ಕೆಳಗೆ ಕೊಟ್ಟಿರುತ್ತದೆ.

೧) ನ ತ್ಯಜಂತಿ ಇತಿ – ಅಂಗಾರಚರ್ವಣಚಣಾಃ = ಅಂಗಾರಭಕ್ಷಣದಕ್ಷಾಃ ।

೨) ಚಕೋರಾಃ = ಚಕೋರಪಕ್ಷಿಣಃ ।

೩) ಜ್ಯೋತ್ಸ್ನಾಂ ನ ತ್ಯಜಂತಿ = ನ ಜಹತಿ ।

೪) ಹಿ ಪ್ರಸಿದ್ಧಿಂ ।

೫) ತವ ಹಿಮಾಂಶೋಃ ಯಾತ್ರಾಂ ನ ತ್ಯಜಂತಿ ।

೬) ಪಕ್ಷಿಭಾಷಣಕೃತೇ = ಚಕೋರಪಕ್ಷಿಭಾಷಣಕೃತೇ ।

೭) ಯದಿ ಚಂದ್ರೋದಯಕಾಲೇ ತದಾ ವಾಲಖಿಲ್ಯಾಃ ಷಷ್ಟಿಸಹಸ್ರಸಂಖ್ಯಾಕಾಃ ಅಂಗುಷ್ಠಮಾತ್ರಾ ವಾಲಖಿಲ್ಯಋಷಯಃ ತೇಷಾಂ ನಾನಾವಿಧಾನಿ ನಾನಾಪ್ರಕಾರಾಣಿ ವೇದಾಧ್ಯಯನಾನಿ । ಜನಾಃ ಜಾನಂತಿ ಇತಿ ಶೇಷಃ ।

೮) ಚಂದ್ರೋದಯಕಾಲೇ ಚಕೋರೈಃ ನಾನಾಪ್ರಕಾರಭಾಷಣೇ ಕೃತೇ ಸತಿ ತದಾ ವಾಲಖಿಲ್ಯನಿಗಮಾಧ್ಯಾಯನಾನಿ ಜನಾ ಜನಾಂತೀತಿ ಭಾವಃ ।

೧) ಅಂಗಾರಚರ್ವಣಚಣಾಃ ಎಂದರೆ ಬೆಂಕಿಯ ಕೆಂಡವನ್ನು ತಿನ್ನುವುದರಲ್ಲಿ ಸಮರ್ಥವಾದ ಎಂದು ಅರ್ಥ.

೨) ಚಕೋರಾಃ ಎಂದರೆ ಚಕೋರ ಪಕ್ಷಿಗಳು.

೩) ಜ್ಯೋತ್ಸ್ನಾ ನ ತ್ಯಜಂತಿ – ಬೆಳದಿಂಗಳನ್ನು ಬಿಡುವುದಿಲ್ಲ

೪) ಹಿ ಎಂದರೆ ಪ್ರಸಿದ್ಧವು

೫) ಚಂದ್ರನಾದ ನಿನ್ನ ಯಾತ್ರೆಯನ್ನು ಬಿಡುವುದಿಲ್ಲ.

೬) ಪಕ್ಷಿಭಾಷಣಕೃತೇ ಎಂದರೆ ಚಕೋರ ಪಕ್ಷಿಗಳ ಭಾಷಣಕ್ಕೋಸ್ಕರ

೭) ಒಂದು ವೇಳೆ ಚಂದ್ರೋದಯ ಕಾಲವಾಗಿದ್ದರೆ ಆಗ ವಾಲಖಿಲ್ಯರು ಅರವತ್ತು ಸಾವಿರ ಸಂಖ್ಯೆಯಿಂದ ಕೂಡಿದವರು. ಹೆಬ್ಬೆಟ್ಟಿನ ಗಾತ್ರದವರು. ಅವರ ನಾನಾ ಪ್ರಕಾರದ ವೇದಾಧ್ಯಯನಗಳನ್ನು ಜನರು ತಿಳಿಯುತ್ತಾರೆ.

೮) ಚಂದ್ರೋದಯ ಕಾಲದಲ್ಲಿ ಚಕೋರ ಪಕ್ಷಿಗಳು ನಾನಾ ರೀತಿಯ ಭಾಷಣಗಳನ್ನು ಮಾಡಿದಾಗ ವಾಲಖಿಲ್ಯರ ವೇದಾಧ್ಯಯನಗಳನ್ನು ಜನರು ತಿಳಿಯುತ್ತಾರೆ ಎಂದು ಭಾವ.

ಇಷ್ಟು ವಾಕ್ಯಗಳಿಂದ ಶ್ಲೋಕ ತಾತ್ಪರ್ಯವು ವಿಶದವಾಗದಿರುವುದರಿಂದ ಈ ಶ್ಲೋಕದ ತಾತ್ಪರ್ಯವನ್ನು ಆರಂಭದಲ್ಲಿ ನೀಡಿರುವುವಂತೆ ಅರ್ಥೈಸಬೇಕು.

**ಅವತಾರಿಕೆ :** ಹಿಂದೆ ವರ್ಣಿಸಿದ ಚಂದ್ರಕಾಂತ ಮಣಿಮಯವಾದ ಸಭಾಮಂಟಪದಲ್ಲಿ ಪರಮಾತ್ಮನ ಪ್ರತಿರೂಪರಾದ ಶ್ರೀರಾಘವೇಂದ್ರತೀರ್ಥ ಗುರುಸಾರ್ವಭೌಮರು ಶೋಭಿಸುತ್ತಿದ್ದರು ಎಂಬುದಾಗಿ ಕವಿಗಳು ವರ್ಣಿಸುತ್ತಾರೆ.

**ತತ್ರ ಚಂದ್ರಮಣಿಕುಟ್ಟಿಮಸಿಂಧೌ ಮೌಕ್ತಿಕಾಸನಮಯೇ ಭುಜಗೇಂದ್ರೇ ।**
**ರಾಜತೇ ರಘುಪುರಂದರನಾಮಾ ಪಾಟಲಾಂಬರಧರಃ ಪರಮಾತ್ಮಾ ॥೬೨॥**

**ತಾತ್ಪರ್ಯ :** ಹಿಂದೆ ವರ್ಣಿತವಾದ ಅನಿರ್ವಚನೀಯವಾದ ಚಂದ್ರಕಾಂತ ಮಣಿಮಯವಾದ ಪ್ರದೇಶವು ಕ್ಷೀರಸಮುದ್ರದಂತೆ ವಿರಾಜಿಸುತ್ತಿತ್ತು. ಅಲ್ಲಿ ಹಾಸಿರುವ ಮುತ್ತಿನ ಸಿಂಹಾಸನವೆಂಬ ಶೇಷನ ಮೇಲೆ ಕಾವಿ ಬಣ್ಣದ ವಸ್ತ್ರವನ್ನು ಧರಿಸಿರುವ ಶ್ರೀರಾಘವೇಂದ್ರ ಗುರುಸಾರ್ವಭೌಮರೆಂಬ ಪರಮಾತ್ಮನು ವಿರಾಜಿಸುತ್ತಿದ್ದನು.

ಚಂದ್ರಕಾಂತ ಮಣಿಮಯವಾದ ಪ್ರದೇಶವೇ ಕ್ಷೀರಸಮುದ್ರವು; ಅಲ್ಲಿ ಹಾಸಿರುವ ಮುತ್ತಿನ ಸಿಂಹಾಸನವೇ ಶೇಷನು, ಅಲ್ಲಿ ಪರಮಾತ್ಮನು ರಕ್ತವಸ್ತ್ರಧಾರಿಯಾಗಿ ಶ್ರೀರಾಘವೇಂದ್ರರೆಂಬ ಹೆಸರಿನಿಂದ ವಿರಾಜಿಸುತ್ತಿದ್ದಾನೆ ಎಂಬುದಾಗಿ ಉಪಮ (ವಿಷಯ) ಉಪಮೇಯ (ವಿಷಯ) ಇವುಗಳಿಗೆ ಅಭೇದವನ್ನು ಹೇಳಿದ್ದಾರೆ. ಆದುದರಿಂದ ಇಲ್ಲಿ **ವಿಷಯ್ಯಭೇದತಾದ್ರೂಪ್ಯರಂಜನಂ ವಿಷಯಸ್ಯ ಯತ್ । ರೂಪಕಂ ।** ಎಂಬ ಲಕ್ಷಣದಿಂದ ಕೂಡಿದ ರೂಪಕಾಲಂಕಾರವು. ಇಲ್ಲಿ ವಿಷಯ ಶ್ರೀರಾಘವೇಂದ್ರರು! ಇಲ್ಲಿ ವಿಷಯಿ ಶ್ರೀಮನ್ನಾರಾಯಣ!! ಇವರುಗಳಿಗೆ ಅಭೇದವನ್ನು ಅಲಂಕಾರಶಾಸ್ತ್ರದ ದೃಷ್ಟಿಯಿಂದ ವರ್ಣಿಸುವುದೂ ಕೂಡಾ ಆಧ್ಯಾತ್ಮಶಾಸ್ತ್ರ ದೃಷ್ಟಿಯಿಂದ ವಿರುದ್ಧ. ಈ ರೀತಿಯಾಗಿ ಈಶನ ಅಭೇದವನ್ನು ದಾಸನಿಗೆ ಹೇಳಬಾರದು ಎಂಬ ಆಕ್ಷೇಪವು ಯಾರಿಗಾದರೂ ಮನಸ್ಸಿನಲ್ಲಿ ಮೂಡಬಹುದು. ಆದರೆ ಅಲಂಕಾರಶಾಸ್ತ್ರದಲ್ಲಿ ಎಲ್ಲಿ ಅಭೇದವನ್ನು ವರ್ಣಿಸುತ್ತಾರೋ ಅಲ್ಲಿ ಭೇದವೂ ಸ್ಫುಟವಾಗಿ ತೋರಿಬರುತ್ತದೆ. ಕೇವಲ ಆನಂದಕ್ಕಾಗಿ ಕೆಲವು ಸಾಮ್ಯಗಳಿಂದ ಅಭೇದವನ್ನು ಔಪಚಾರಿಕವಾಗಿ ವರ್ಣಿಸುತ್ತಾರೆ ಎಂಬುದಾಗಿ ತಿಳಿಯಬೇಕು.

ಇಲ್ಲಿ ಪಾಟಲಾಂಬರಧರಃ ಎಂದು ಹೇಳಿರುತ್ತಾರೆ. ಪರಮಾತ್ಮನು ಪೀತಾಂಬರಧಾರಿಯಾಗಿದ್ದಾನೆ. ಆದುದರಿಂದ ಭಕ್ತರಾದ ಶ್ರೀರಾಘವೇಂದ್ರರಿಗೂ ಸ್ವಾಮಿಯಾದ ಶ್ರೀಹರಿಪರಮಾತ್ಮನಿಗೂ ಭೇದವು ಸ್ಪಷ್ಟವಾಗಿ ತೋರುತ್ತದೆ. ರಘುಪುರಂದರನಾಮ; ಪರಮಾತ್ಮ ಎಂಬಲ್ಲಿ ಪರಶ್ಚ ಮಾ ಚ ಪರಮೇಃ ಪರಮೇ ಆತ್ಮನಿ (ಹೃದಯೇ ಮನಸಿ) ಯಸ್ಯ ಸಃ ಪರಮಾತ್ಮ ಎಂಬ ವಿಗ್ರಹವನ್ನು ಮಾಡಿದಾಗ ಸರ್ವೋತ್ತಮನಾದ ಶ್ರೀಹರಿಪರಮಾತ್ಮನನ್ನೂ, ಅಸ್ವತಂತ್ರ ಕೋಟಿಯಲ್ಲಿ ಸರ್ವೋತ್ತಮಳಾದ ಶ್ರೀಲಕ್ಷ್ಮೀದೇವಿಯನ್ನೂ, ತಮ್ಮ ಹೃದಯದಲ್ಲಿ ಯಾವಾಗಲೂ (ಸರ್ವದಾ) ಧ್ಯಾನಿಸುತ್ತಿರುವವರು ಎಂಬ ಅರ್ಥವೂ ಸ್ಪಷ್ಟವಾಗಿ ತೋರುತ್ತಿರುವುದರಿಂದ ಪರಮಾತ್ಮನಿಗೂ ಗುರುಗಳಿಗೂ ಸ್ಪಷ್ಟವಾಗಿ ಭೇದವು ತೋರುತ್ತಿದೆ. ಆದುದರಿಂದ ಆಧ್ಯಾತ್ಮಶಾಸ್ತ್ರಕ್ಕೆ ವಿರೋಧ ಬಂದಿದೆ ಎಂಬ ಶಂಕೆಗೆ ಅವಕಾಶವಿಲ್ಲ. ಶ್ರೀರಾಘವೇಂದ್ರರ ರೂಪದಿಂದ ಶ್ರೀರಾಘವೇಂದ್ರರೆಂಬ ಪ್ರತಿಮೆಯಲ್ಲಿ (ಪ್ರತಿಬಿಂಬದಲ್ಲಿ) ಭಾರತೀರಮಣ ಮುಖ್ಯಪ್ರಾಣನ ಮೂಲಕ ಶ್ರೀಹರಿಪರಮಾತ್ಮನು ಬಿಂಬವಾಗಿ ಶೋಭಿಸುತ್ತಿದ್ದಾನೆ ಎಂಬ ವರ್ಣನೆಯು ಯಾವ ರೀತಿಯಿಂದಲೂ ಭೇದಸಿದ್ಧಾಂತಕ್ಕೆ ವಿರೋಧಿಯಾಗುವುದಿಲ್ಲ.

ಪರಮಾತ್ಮನ ವಿಶೇಷವಾದ ಸನ್ನಿಧಾನ ಅನುಗ್ರಹಗಳಿಂದ ಪರಮಾತ್ಮನ ಭಕ್ತರೂ ಪರಮಾತ್ಮನಂತೆ ಶೋಭಿಸುತ್ತಾರೆ ಎಂದು ಭಕ್ತರಿಗೆ ಮುಕ್ತಿಯಲ್ಲಿ ಬರುವ ಸಾರೂಪ್ಯವನ್ನು ಇಲ್ಲಿ ವರ್ಣಿಸಿರುವುದು ಸಮಯಕ್ಕೆ ಉಚಿತವಾಗಿದೆ. ಸಿದ್ಧಾಂತಕ್ಕೆ ಅನುಗುಣವಾಗಿಯೂ ಇದೆ.

**ಅವತಾರಿಕೆ :** ಈಗ ಕವಿಗಳು ಆ ಸಭಾಭವನದಲ್ಲಿ ನೆರದಿದ್ದ ವಿದ್ವಾಂಸರು ಮತ್ತು ಕವಿಗಳು ಶ್ರೀಗುರುರಾಘವೇಂದ್ರರನ್ನು ವರ್ಣಿಸಿ ಸೇವಿಸಿದ ಕ್ರಮವನ್ನು ವರ್ಣಿಸುತ್ತಾರೆ.

**ಕೇಚನ ಪ್ರತಿಪುರಂದರಮೇನಂ ಪರ್ಯುಪಾಸತ ಬುಧಾ ನಿಗಮಾಂತ್ಯೈಃ ।**
**ಕುರ್ವತೇಽತ್ರ ಪದಪೂರ್ವಸಮಸ್ಯಾಪೂರಣಂ ಚ ಕವಯಃ ಪುರತೋಽಸ್ಯ ॥೬೩॥**

**ತಾತ್ಪರ್ಯ :** ಶ್ರೀರಾಘವೇಂದ್ರ ಗುರುಸಾರ್ವಭೌಮರು ಅಲಂಕರಿಸಿದ ಆ ದಿವ್ಯ ಸಭೆಯಲ್ಲಿ ದೇವತೆಗಳೂ ರೂಪಾಂತರದಿಂದ ಬಂದು ಉಪನಿಷತ್ತು, ಬ್ರಹ್ಮಸೂತ್ರಗಳು ಮುಂತಾದ ವೇದಾರ್ಥ ನಿರ್ಣಾಯಕವಾದ ಗ್ರಂಥಗಳ ವಿಚಾರವನ್ನು ಮಾಡುತ್ತಾ, ಶ್ರೀಗುರುರಾಜರನ್ನು ಸೇವಿಸಿದರು. ಅನೇಕ ಮಂದಿ ವಿದ್ವಾಂಸರೂ ಪ್ರತ್ಯಕ್ಷರಾಗಿ ಭಾಗವಹಿಸಿ ವೇದ ಶಾಸ್ತ್ರಾರ್ಥ ವಿನೋದಗಳಿಂದ ಶ್ರೀಗುರುವರೇಣ್ಯರನ್ನು ಸೇವಿಸಿದರು. ಶ್ಲೋಕದ ಮೂರು ಪಾದಗಳನ್ನು ಕೊಟ್ಟಾಗ ಉಳಿದ ಒಂದು ಪಾದವನ್ನು ಪೂರ್ಣಮಾಡುವುದು. ಒಂದೇ ಪಾದವನ್ನು ಕೊಟ್ಟಾಗ ಮಿಕ್ಕ ಮೂರು ಪಾದಗಳನ್ನು ಪೂರ್ತಿಮಾಡುವುದು, ಮೂರು ಪಾದಗಳು ಮತ್ತು ನಾಲ್ಕನೆಯ ಪಾದದ ಅರ್ಧವನ್ನು ಕೊಟ್ಟಾಗ ಉಳಿದ ಅರ್ಧಪಾದವನ್ನು ಸೇರಿಸಿ ಶ್ಲೋಕವನ್ನು ಪೂರ್ತಿಮಾಡುವುದು. ಸಂಕೇತ ರೂಪವಾದ ಬಿಂದುಗಳನ್ನು ಮಾತ್ರವೇ ಕೊಟ್ಟಾಗ ಅಕ್ಷರಗಳನ್ನು ತುಂಬಿಸಿ ಒಳ್ಳೆಯ ಅರ್ಥ ಬರುವಂತೆ ಶ್ಲೋಕವನ್ನು ಪೂರ್ತಿ ಮಾಡುವುದು. ಗುಪ್ತವಾದ ಕ್ರಿಯಾಪದವನ್ನು ಕಂಡುಹಿಡಿಯುವುದು. ಶ್ಲೋಕದಲ್ಲಿ ಸರಿಯಾದ ಕ್ರಿಯಾಪದವನ್ನು ಸೇರಿಸುವುದು. ಸಮಸ್ಯೆಗಳನ್ನು ಕೊಟ್ಟಾಗ ಅದನ್ನು ಸರಿಯಾಗಿ ಪೂರ್ತಿಮಾಡುವುದು ಇವೇ ಮೊದಲಾದ ಅನೇಕ ಕವಿತಾ ವಿನೋದಗಳಿವೆ. ಇವುಗಳನ್ನು ಉದಾಹರಿಸುತ್ತಾ, ಕೆಲವು ಕವಿವರೇಣ್ಯರುಗಳು ತಮ್ಮ ಕವಿತಾ ಕೌಶಲವನ್ನು ಪ್ರದರ್ಶಿಸಿ ಶ್ರೀರಾಘವೇಂದ್ರಸ್ವಾಮಿಗಳನ್ನು ಸೇವಿಸಿದರು.

**ವಿಶೇಷಾಂಶ :**

(೧) **ವಿರಾಟನಗರೇ ರಾಜನ್ ಕೀಚಕಾದುಪಕೀಚಕಮ್ । "ಅತ್ರ ಕ್ರಿಯಾಪದಂ ಗುಪ್ತಂ, ಯೋ ಜಾನಾತಿ ಸ ಪಂಡಿತಃ ॥** "ರಾಜನೇ, ವಿರಾಟನಗರದಲ್ಲಿ ಧ್ವನಿಗೈಯುತ್ತಿರುವ ಬಿದಿರಿನಿಂದ ಬಿದಿರಿಗೆ ಎಂಬ ಈ ವಾಕ್ಯದಲ್ಲಿ ಕ್ರಿಯಾಪದವು ಗುಪ್ತವಾಗಿದೆ. ಅದನ್ನು ಯಾರು ತಿಳಿಯುತ್ತಾರೋ ಅವರು ಪಂಡಿತರು. ಇದು ಗುಪ್ತ ಕ್ರಿಯಾಪದವುಳ್ಳ ಶ್ಲೋಕವು. ಇಲ್ಲಿ ವಿಃ ಆಟಃ ಎಂದು ಪದಚ್ಛೇದ ಮಾಡಿದರೆ ವಿಃ ಪಕ್ಷಿಯು ಆಟ ಓಡಾಡಿತು ಎಂದು

ಅರ್ಥವಾಗುತ್ತದೆ. ಕ್ರಿಯಾಪದವು ಇಲ್ಲವಾದಾಗ ಅರ್ಥವು ಪೂರ್ತಿಯಾಗುವುದಿಲ್ಲ. ನಗರದಲ್ಲಿ ಧ್ವನಿಗೈಯುತ್ತಿರುವ ಬಿದಿರಿನಿಂದ ಬಿದಿರಿಗೆ ಪಕ್ಷಿಯು ಓಡಾಡಿತು ಎಂಬುದಾಗಿ ಅರ್ಥ – ಇದು ಕ್ರಿಯಾಗುಪ್ತ.

(೨) **ದಾಮೋದರಕರಾಘಾತವಿಹ್ವಲೀಕೃತಚೇತಸಾ । ದೃಷ್ಟಂ ಚಾಣೂರಮಲ್ಲೇನ ಶತಚಂದ್ರಂ ನಭಸ್ಥಲಮ್ ॥** ಶ್ರೀಕೃಷ್ಣನ ಹೊಡೆತಗಳಿಂದ ವ್ಯಾಕುಲನಾದ ಚಾಣೂರನೆಂಬ ಮಲ್ಲನಿಗೆ ಆಕಾಶದಲ್ಲಿ ನೂರಾರು ಚಂದ್ರರುಗಳು ಇದ್ದಂತೆ ಕಾಣಿಸಿತು. ಈ ಅರ್ಥ ಬರುವಂತೆ ಶ್ಲೋಕ ಮಾಡಿದರೆ ಸಮಸ್ಯೆಯು ಪೂರ್ತಿಯಾಗುತ್ತದೆ. ಈ ರೀತಿಯ ಕಾವ್ಯಶಾಸ್ತ್ರ ವಿನೋದಗಳಿಂದ ಕಾವ್ಯ ಶಾಸ್ತ್ರಜ್ಞರು ಸಮಯವನ್ನು ಕಳೆಯುತ್ತಾರೆ.

**ಅವತಾರಿಕೆ :** ಹಿಂದಿನ ಶ್ಲೋಕದಲ್ಲಿ ಸೂಚಿಸಿರುವ ಸಮಸ್ಯೆಯ ಪರಿಹಾರವನ್ನು ಕವಿಗಳು ಈ ಶ್ಲೋಕದಲ್ಲಿ ತಿಳಿಸುತ್ತಾರೆ.

**ಶ್ರಿಯಃ ಪತಿಃ ಶ್ರೀಮತಿ ಶಾಸಿತುಂ ಜಗನ್ನಿಪೀಯ ಯಸ್ಯ ಕ್ಷಿತಿರಕ್ಷಣಃ ಕಲಾಃ ।**
**ಶ್ರಿಯಃ ಕುರೂಣಾಮಧಿಪಸ್ಯ ಪಾಲಿನೀಃ ಶ್ರೀಯಃ ಸ ದತ್ತಾಮಿಹ ತೇ ಪುರೇ ಸ್ಥಿತಃ ॥೬೪॥**

**ತಾತ್ಪರ್ಯ :** ಶ್ರೀಹರಿಪರಮಾತ್ಮನು ಸಕಲ ಲೋಕಗಳನ್ನು ರಕ್ಷಿಸುವುದಕ್ಕಾಗಿ, ಅನಂತಕೋಟಿ ಜೀವರಾಶಿಗಳನ್ನು ಆಯಾ ಜೀವರಾಶಿಗಳ ವ್ಯಾಪಾರಗಳಲ್ಲಿ ಪ್ರೇರಿಸಲು ಶ್ರೀಕೃಷ್ಣ ಪರಮಾತ್ಮನಾಗಿ ಅವತರಿಸಿದನು. ಕುರುರಾಜನಾದ ದುರ್ಯೋಧನನು ಪಾಂಡವರ ಸಂಪತ್ತನ್ನು ಅಪಹರಿಸಿ ಅಹಂಕಾರದಿಂದ ಮೆರೆಯುತ್ತಿದ್ದಾಗ, ಅವನನ್ನು ಭೀಮಸೇನನ ಮೂಲಕ ಸಂಹಾರ ಮಾಡಿಸಿ, ದುರ್ಯೋಧನನ ಸಕಲ ಸಂಪತ್ತನ್ನೂ ಸೂರೆಗೈದು, ಅವುಗಳಲ್ಲಿ ಯೋಗ್ಯವಾದ ಸಂಪತ್ತನ್ನು ಪಾಂಡವರ ಅಧೀನವನ್ನಾಗಿ ಮಾಡಿದನು. ಈ ರೀತಿಯಾಗಿ ಭೂಮಂಡಲದಲ್ಲಿ ಶ್ರೀಹರಿಪರಮಾತ್ಮನು ಮತ್ಸ್ಯ, ಕೂರ್ಮ, ರಾಮ, ಕೃಷ್ಣ ಮುಂತಾದ ರೂಪಗಳಿಂದ ಸಂಪೂರ್ಣಾಂಶದಿಂದ ಅವತರಿಸಿದ್ದಾನೆ. ಅವತರಿಸುವನು! ಬಲರಾಮ, ಪೃಥು, ಸನತ್ಕುಮಾರ ಮುಂತಾದ ಆವೇಶಾಂಶಗಳಿಂದಲೂ ಅವತರಿಸಿ ಜಗತ್ತನ್ನು ಕಾಪಾಡುತ್ತಾನೆ. ಇಂತಹಾ ಅನಂತಾವತಾರಾಭಿನ್ನನಾದ, ಶ್ರೀಹರಿಪರಮಾತ್ಮನು ಶ್ರೀರಾಘವೇಂದ್ರತೀರ್ಥರೆಂಬ ಮಂಗಳಕರವಾದ ಹೆಸರಿನಿಂದ ವಿಖ್ಯಾತವಾದ ನಿಮ್ಮ ಶ್ರೀಮಠದಲ್ಲಿ ಲಕ್ಷ್ಮೀದೇವಿಗಿಂತ ಅತ್ಯಂತಾಭಿನ್ನಳಾದ, ನಿತ್ಯಾವಿಯೋಗಿನಿಯಾದ, ಸೀತಾದೇವಿಯು ಸಮೇತನಾಗಿ ಶ್ರೀಮನ್ಮೂಲರಾಮಚಂದ್ರನೆಂಬ ಚತುರ್ಮುಖ ಬ್ರಹ್ಮಕರಾರ್ಚಿತನಾದ, ಹಂಸನಾಮಕ ಪರಮಾತ್ಮನ ಸತ್ಪರಂಪರೆಯಿಂದ ಪ್ರಾಪ್ತವಾದ ಮೂರ್ತಿಯಲ್ಲಿ ಸನ್ನಿಹಿತನಾಗಿದ್ದಾನೆ. ಅರ್ಚಾಮೂರ್ತಿಯಲ್ಲಿ ಸನ್ನಿಹಿತನಾದ ಆ ಶ್ರೀಮನ್ಮೂಲರಾಮಚಂದ್ರದೇವನು ನಿಮ್ಮ ಪೂಜೆ, ಧ್ಯಾನ, ಪ್ರಾರ್ಥನೆಗಳಿಂದ ಪ್ರಸನ್ನನಾಗಿ, ಗುರುಪ್ರಾಣ–ಹರಿಭಕ್ತರಾದ ನಮಗೆ ಐಹಿಕ ಮತ್ತು ಆಮುಷ್ಮಿಕ ಸಂಪತ್ತುಗಳನ್ನು ಕೊಡಲಿ ಎಂಬುದಾಗಿ ಈ ಶ್ರೀರಾಘವೇಂದ್ರವಿಜಯ ಮಹಾಕಾವ್ಯದ ಕರ್ತೃಗಳಾದ

ಶ್ರೀನಾರಾಯಣಾಚಾರ್ಯರು ಕೊನೆಯಲ್ಲಿಯೂ ಆಶೀರ್ವಾದ (ಪ್ರಾರ್ಥನಾ) ರೂಪವಾದ ಮಂಗಳದಿಂದ ಕಾವ್ಯವನ್ನು ಸಮಾಪ್ತಿಗೊಳಿಸಿದ್ದಾರೆ.

**ವಿಶೇಷಾಂಶ :** ಸುಪ್ರಸಿದ್ಧವಾದ ನಾಲ್ಕು ಮಹಾಕಾವ್ಯಗಳಲ್ಲಿರುವ ಮಂಗಳಕರವಾದ ಪ್ರಥಮ ಶ್ಲೋಕಗಳ ಮೊದಲನೆಯ ಪಾದಗಳನ್ನು ಸೇರಿಸಿ ಒಂದು ಶ್ಲೋಕವನ್ನು ರಚಿಸಿರಿ ಎಂದು ಶ್ರೀರಾಘವೇಂದ್ರಸ್ವಾಮಿಗಳವರು ಆಜ್ಞಾಪಿಸಿದಾಗ ಕುಶಲಮತಿಗಳಾದ, ಕವಿಕುಲತಿಲಕರಾದ ಗ್ರಂಥಕರ್ತೃಗಳಾದ ಶ್ರೀನಾರಾಯಣಾಚಾರ್ಯರು ಮಾಡಿರುವ ಸಮಸ್ಯಾಪೂರಣವಿದು. ಈ ಶ್ಲೋಕವನ್ನು ಅವರು ತಮ್ಮಿಂದ ರಚಿತವಾದ ಶ್ರೀರಾಘವೇಂದ್ರವಿಜಯ ಮಹಾಕಾವ್ಯದಲ್ಲಿಯೇ ಸೇರಿಸಿದ್ದಾರೆ ಎಂದು ಐತಿಹ್ಯವಿದೆ.

ಈ ಶ್ಲೋಕದ ಮೊದಲ ಪಾದವು ಮಾಘಕವಿ ರಚಿತವಾದ ಶಿಶುಪಾಲವಧ ಮಹಾಕಾವ್ಯದ ಮಂಗಳಶ್ಲೋಕದ ಪ್ರಥಮ ಪಾದವಾಗಿದೆ.

(೧) **ಶ್ರಿಯಃ ಪತಿಃ ಶ್ರೀಮತಿ ಶಾಸಿತುಂ ಜಗತ್,**

(೨) **ನಿಪೀಯ ಮಸ್ಯ ಕ್ಷಿತಿರಕ್ಷಿಣಃ ಕಲಾಃ** ಎಂಬ ಎರಡನೆಯ ಪಾದವು ಶ್ರೀಹರ್ಷಕವಿಯಿಂದ ರಚಿತವಾದ ನೈಷಧಚರಿತಂ (ನೈಷಧ) ಎಂಬ ಮಹಾಕಾವ್ಯ ಮಂಗಳಶ್ಲೋಕದ ಮೊದಲನೆಯ ಚರಣವು.

(೩) **ಶ್ರಿಯಃ ಕುರೂಣಾಮಧಿಪಸ್ಯ ಪಾಲಿನೀಃ** ಎಂಬ ಮೂರನೆಯ ಪಾದವು ಭಾರವಿ ಮಹಾಕವಿ ವಿರಚಿತವಾದ ಕಿರಾತಾರ್ಜುನೀಯಂ ಮಹಾಕಾವ್ಯದ ಮಂಗಳಶ್ಲೋಕದ ಪ್ರಥಮ ಚರಣವು.

(೪) **ಶ್ರೀಯಃ ಸ ದತ್ತಾಮಿಹ ತೇ ಪುರೇ ಸ್ಥಿತಃ** ಎಂಬ ನಾಲ್ಕನೆಯ ಚರಣವು ಇನ್ನೊಂದು ಮಹಾಕಾವ್ಯದ ಮಂಗಳ ಪದ್ಯದ ಮೊದಲನೆಯ ಚರಣವಾಗಿರಬಹುದು. (ಕಾವ್ಯವು ಯಾವುದೆಂಬುದಾಗಿ ತಿಳಿದು ಬಂದಿಲ್ಲ).

ಈ ರೀತಿಯಾಗಿ ಬೇರೆ ಬೇರೆ ಮಹಾಕಾವ್ಯಗಳ ಪಾದಗಳನ್ನು ಸೇರಿಸಿ ಅರ್ಥವನ್ನು ಹೊಂದಿಸಿ ಹೇಳುವುದು ಸಾಮಾನ್ಯರಿಂದ ಸಾಧ್ಯವಾಗುವ ವಿಷಯವಲ್ಲ. ಈ ಮಹಾಕಾವ್ಯ ಕರ್ತೃಗಳಾದ ಶ್ರೀನಾರಾಯಣಾಚಾರ್ಯರು ಶ್ರೀರಾಘವೇಂದ್ರ ಗುರುಸಾರ್ವಭೌಮರ ದಯೆಯಿಂದ ಈ ರೀತಿಯ ಸಮಸ್ಯಾಪೂರ್ತಿಯನ್ನು ಮಾಡಿರುತ್ತಾರೆ. (ಮೇಲಿನ ಕಾವ್ಯಪಾದಗಳ ಕೆಲವು ಶಬ್ದಗಳು ವ್ಯತ್ಯಾಸವಾಗಿವೆ. ಪಾಠಾಂತರದಲ್ಲಿ ಆ ಶಬ್ದಗಳು ಆ ರೀತಿಯಾಗಿ ಇರಬಹುದೆಂದು ತೋರುತ್ತದೆ)

**ಅವತಾರಿಕೆ :** ಶ್ರೀರಾಘವೇಂದ್ರವಿಜಯ ಮಹಾಕಾವ್ಯದ ಕರ್ತೃಗಳಾದ ಶ್ರೀನಾರಾಯಣಾಚಾರ್ಯರು ತಮ್ಮಿಂದ ರಚಿತವಾದ ಮಹಾಕಾವ್ಯವನ್ನು ಸಮಾಪ್ತಿಗೊಳಿಸುತ್ತಾ ಅಂತಿಮ ಮಂಗಳವನ್ನು ಹೇಳುತ್ತಿದ್ದಾರೆ.

**ಸಂತಂ ಶ್ರೀರಮಣಪ್ರಿಯಂ ಯತಿವರಂ ವ್ಯಾಸಸ್ಯ ಭಾವೇ ಭೃಶಂ**
**ದುರ್ವಾರಾಮಿತಮಾಯಿಭಿಕ್ಷುತಿಮಿರೇ ಪರ್ವಸ್ಥಚಂದ್ರಂ ಭುವಿ ।**
**ಸತ್‌ಸಂಘಸ್ತುತಮಿಷ್ಟದಕ್ಷಿತಿರುಹಂ ವಂದಾರುವಿಪ್ರಶ್ರಿಯಂ**
**ತಂ ನತ್ವಾ ಸಕಲೋ ದುರೂಹಸುದೃಶಂ ಸಂಯಾತಿ ವಿದ್ಯಾದಿಕಮ್ ॥೬೫॥**

**ತಾತ್ಪರ್ಯ :** ಯತಿಕುಲತಿಲಕರಾದ ಶ್ರೀರಾಘವೇಂದ್ರ ಗುರುಸಾರ್ವಭೌಮರು ಸಕಲ ಸಜ್ಜನರ ವಾಙ್ಮನಸ ದೇವತೆಯಾದ, ಸಂಪದಭಿಮಾನಿಯಾದ ಶ್ರೀಲಕ್ಷ್ಮೀದೇವಿಯವರ ರಮಣನ ಅತಿಶಯವಾದ ಪ್ರೀತಿಗೆ ಪಾತ್ರರು. ಸರ್ವಕಾಲದಲ್ಲೂ ಶ್ರೀವೇದವ್ಯಾಸರ ಧ್ಯಾನವನ್ನು ಮಾಡುತ್ತಾ, ಅವರಿಗೆ ಅಭಿಮತವಾದ ಗೀತಾ–ಉಪನಿಷತ್ತು–ಬ್ರಹ್ಮಸೂತ್ರಗಳ ಅರ್ಥವನ್ನು ತಮ್ಮ ಶಿಷ್ಯರುಗಳಿಗೆ ಉಪದೇಶಿಸುತ್ತಾ, ಲೋಕೋಪಕಾರಿಗಳಾದ ಗ್ರಂಥರತ್ನಗಳನ್ನು ರಚಿಸುತ್ತಾ ಇರುತ್ತಾರೆ. ಇಂದು ಭೂಲೋಕದಲ್ಲಿರುವ ಯತಿವರೇಣ್ಯರುಗಳಲ್ಲಿ ಇವರು ಶ್ರೇಷ್ಠರು. ಭೂಲೋಕದಲ್ಲಿ ಜಯಿಸಲು ಸಾಧ್ಯವಿಲ್ಲದ ಅಸಂಖ್ಯಾಕರಾದ ಮಾಯಾವಾದಿ ಸನ್ಯಾಸಿಗಳೆಂಬ ಕತ್ತಲೆಯನ್ನು ನಿವಾರಿಸುವ ವಿಷಯದಲ್ಲಿ ಹುಣ್ಣಿಮೆಯ ಚಂದ್ರನಂತಿರುವ ಇವರನ್ನು ಸಜ್ಜನ ಸಮೂಹವು ಹೃದಯಪೂರ್ವಕವಾಗಿ ಸ್ತೋತ್ರಮಾಡುತ್ತಾರೆ. ಶ್ರೀರಾಘವೇಂದ್ರ ಸ್ವಾಮಿಗಳು ಭಜಿಸುವವರಿಗೆ ಕಲ್ಪವೃಕ್ಷ ಸಮಾನರಾಗಿದ್ದಾರೆ. (ಭಜತಾಂ ಕಲ್ಪವೃಕ್ಷಾಯ) ನಿರಂತರವಾಗಿ ತಲೆಬಾಗಿ ನಮಸ್ಕರಿಸಿ ಸ್ತುತಿಸುವ ಭೂಸುರರಿಗೆ (ಬ್ರಾಹ್ಮಣರಿಗೆ) ವಿಶಿಷ್ಟವಾದ ಐಶ್ವರ್ಯವನ್ನು ಗುರುಗಳು ನೀಡುತ್ತಾರೆ. ಅವರಿಗೆ ಬಾಗಿದ, ಅವರನ್ನು ಸ್ತೋತ್ರ ಮಾಡುವ ಜನರೆಲ್ಲರೂ ಊಹಿಸಲೂ ಸಾಧ್ಯವಿಲ್ಲದ, ವರ್ಣಿಸಲೂ ಸಾಧ್ಯವಾಗದ ಉತ್ತಮವಾದ ಆಧ್ಯಾತ್ಮಿಕ ಜ್ಞಾನವನ್ನು ಪಡೆಯುತ್ತಾರೆ. ಶ್ರೇಷ್ಠವಾದ ವಿದ್ಯೆ, ಸಂಪತ್ತು, ಸಂಗೀತ, ಶಿಲ್ಪಾದಿಜ್ಞಾನ, ಸಂತಾನ ಮುಂತಾದ ಸಕಲ ಇಷ್ಟಾರ್ಥಗಳೂ ಸಿದ್ಧಿಸುತ್ತವೆ.

**ಶ್ರೀರಾಘವೇಂದ್ರಸ್ವಾಮಿನಃ ಸೇವಯಾ ಜನಾನಾಂ ಸಂಪದ್‌ಜ್ಞಾನವಿದ್ಯಾದಿ–ಸರ್ವಾಭೀಷ್ಟಸಿದ್ಧಿರ್ಭವತೀತಿ ಭಾವಃ** ಶ್ರೀರಾಘವೇಂದ್ರಸ್ವಾಮಿಗಳ ಸೇವೆಯಿಂದ ಜನರಿಗೆ ಸಂಪತ್ತು ಜ್ಞಾನ ವಿದ್ಯೆ ಮುಂತಾದ ಸರ್ವಾಭೀಷ್ಟಗಳೂ ಸಿದ್ಧಿಸುತ್ತವೆ. ಈ ಮಾತನ್ನು ಶ್ರೀರಾಘವೇಂದ್ರವಿಜಯ ವ್ಯಾಖ್ಯಾನಕಾರರಾದ ನ್ಯಾಯಾಲಯ ರಾಘವೇಂದ್ರಾಚಾರ್ಯರು ತಮ್ಮ ಗುರುಪಾದಸೇವಾ ಎಂಬ ವ್ಯಾಖ್ಯಾನದ ಕೊನೆಯಲ್ಲಿ ಬರೆದಿರುತ್ತಾರೆ.

**ಅವತಾರಿಕೆ :** ಶ್ರೀರಾಘವೇಂದ್ರ ವಿಜಯ ಮಹಾಕಾವ್ಯದ ಪ್ರತಿಯೊಂದು ಸರ್ಗದ ಕೊನೆಯಲ್ಲಿ ಕವಿ ಕಾವ್ಯ ನಾಮ ಮತ್ತು ಕಾವ್ಯಾಂಕಗಳನ್ನು ಸೂಚಿಸುವ ಶ್ರೀಮತ್ಕಶ್ಯಪವಂಶವಾರ್ಧಿಶಶಿನಃ ಎಂಬ ಶ್ಲೋಕವು ಇದೆ. ಈ ಶ್ಲೋಕವನ್ನು ಕೊನೆಯಲ್ಲಿ ಬರೆದು ಮತ್ತೊಂದು ತಾತ್ಪರ್ಯವನ್ನು ಮಾತ್ರ ನೀಡುತ್ತಿದ್ದೇವೆ.

**ಶ್ರೀಮತ್ಕಶ್ಯಪವಂಶವಾರ್ಧಿಶಶಿನಃ ಷಡ್ದರ್ಶಿನೀವಲ್ಲಭ–**
**ಶ್ರೀಲಕ್ಷ್ಮೀನರಸಿಂಹವಿತ್ತವಿದುಷಃ ಶ್ರೀವೇಂಕಟಾಂಬಾಮಣೌ ।**
**ಜಾತೇನಾರ್ಯದಯಸುಧಾಮಯಗಿರಾ ನಾರಾಯಣೇನೋದಿತೇ**
**ಕಾವ್ಯೇ ಚಾರುಣಿ ರಾಘವೇಂದ್ರವಿಜಯೇ ಸರ್ಗೋಽಂತಿಮೋಽಭೂದಿಹ ॥೬೬॥**

**ತಾತ್ಪರ್ಯ** : ಕಶ್ಯಪ ಗೋತ್ರವೆಂಬ ಮಹಾಸಾಗರದಲ್ಲಿ ಚಂದ್ರನಂತೆ ಉದಯಿಸಿದ ಲಕ್ಷ್ಮೀನರಸಿಂಹಾ–ಚಾರ್ಯರೆಂಬ ಪಂಡಿತವರೇಣ್ಯರಿದ್ದಾರೆ. ಅವರು ಷಡ್‌ದರ್ಶನಗಳಲ್ಲಿಯೂ ಅಪಾರವಾದ ಪಾಂಡಿತ್ಯವನ್ನು ಗಳಿಸಿ "ಷಡ್ದರ್ಶಿನೀವಲ್ಲಭ" ಎಂಬ ಬಿರುದುನಾಮದಿಂದ ಅಲಂಕೃತರಾಗಿದ್ದಾರೆ! ಅವರ ಧರ್ಮಪತ್ನಿಯವರು ಶ್ರೀಮತಿ ವೇಂಕಟಾಂಬಾ ಎಂಬ ಸ್ತ್ರೀರತ್ನ!! ಈ ದಂಪತಿಗಳಲ್ಲಿ ಹುಟ್ಟಿದವನೇ ನಾರಾಯಣ. ನಾರಾಯಣಾಚಾರ್ಯರೆಂಬ ಪಂಡಿತನು!!! ಹಿರಿಯರ ದಯೆಯಿಂದ ಅಮೃತಪ್ರಾಯವಾದ ಮಾತುಗಳುಳ್ಳ ಈ ನಾರಾಯಣನಿಂದ ಹೇಳಲ್ಪಟ್ಟು ರಚಿತವಾದ ಈ ಮನೋಹರವಾದ ಶ್ರೀರಾಘವೇಂದ್ರವಿಜಯವೆಂಬ ಮಹಾಕಾವ್ಯದಲ್ಲಿ ಇಲ್ಲಿಗೆ ಅಂತಿಮವಾದ ಹತ್ತನೆಯ ಸರ್ಗವು ಸಮಾಪ್ತವಾಯಿತು.

**ಇಲ್ಲಿಗೆ ಶ್ರೀನಾರಾಯಣಾಚಾರ್ಯರಿಂದ ರಚಿತವಾದ**
**ಶ್ರೀರಾಘವೇಂದ್ರವಿಜಯ ಮಹಾಕಾವ್ಯದ ಹತ್ತನೆಯ ಸರ್ಗದ**
**ಕನ್ನಡ ಭಾಷಾನುವಾದವು ಸಮಾಪ್ತವಾಯಿತು.**

# ಹತ್ತನೆಯ ಸರ್ಗದ ಕಥಾಸಾರ

**ಸಂಧ್ಯಾಕಾಲಕ್ಕಿಂತ ಪೂರ್ವಕಾಲದ ವರ್ಣನೆ** — ಸಾಯಂಕಾಲವಾಗುವುದಕ್ಕಿಂತ ಸ್ವಲ್ಪ ಮುಂಚಿತವಾಗಿಯೇ ಸೂರ್ಯನ ರಥವು ಮೇರುವಿಗೆ ಅಭಿಮುಖವಾಗಿ ತಿರುಗಿತು. ಮೇರುವಿಗೆ ಅಭಿಮುಖವಾಗಿ ರಥವನ್ನು ನಡೆಸುತ್ತಿದ್ದ ಸಾರಥಿಯಾದ ಅರುಣನ ಅರುಣವರ್ಣದಿಂದ ವರುಣನ ಪಶ್ಚಿಮದಿಕ್ಕು ಅರುಣ ವರ್ಣದಿಂದ ರಂಜಿಸಿತು. ಸೂರ್ಯನ ರಥದ ಮುಂದೆ ಅರವತ್ತು ಸಾವಿರ ಸಂಖ್ಯೆಯ ವಾಲಿಖಿಲ್ಯರೆಂಬ ಋಷಿಗಳು ಸಾಮಗಾನ ಮಾಡುತ್ತಾ, ಸಂಧ್ಯೋಪಾಸನೆ ಮಾಡುತ್ತಾ ಹಿಂದು ಹಿಂದಾಗಿ ಹೋಗುತ್ತಿರುತ್ತಾರೆ. ಅವರ ಸಾಮಗಾನದಿಂದ ಪಶ್ಚಿಮದಿಕ್ಕಿನಲ್ಲಿರುವ ಸಮುದ್ರದ ಅರುಣಮಣಿಗಳು ಕರಗುತ್ತವೆ. ಅಂತಹ ನೀರನ್ನು ಅರ್ಘ್ಯರೂಪದಿಂದ ಬೊಗಸೆಯಿಂದ ಎತ್ತಿ ಎತ್ತಿ ಚೆಲ್ಲುತ್ತಿರುವುದರಿಂದಲೋ ಎಂಬಂತೆ ಪಶ್ಚಿಮದಿಕ್ಕು ಕೆಂಪಾಗಿದೆ. ಸೂರ್ಯನೂ ಕೆಂಪಾಗಿದ್ದಾನೆ. ಸೂರ್ಯನು ಹುಟ್ಟಿದಾರಭ್ಯ ವಿಷ್ಣುಪದದಲ್ಲಿ (ಆಕಾಶದಲ್ಲಿ) ಆಸಕ್ತನಾಗಿದ್ದನು. ತಮಸ್ಸನ್ನು (ಕತ್ತಲೆಯನ್ನು, ಮತ್ತು ಅಜ್ಞಾನವನ್ನು) ಕಳೆದಿದ್ದನು. ಅವನು ಮಾಡಿದ ಈ ಸಾಧನಾನುಷ್ಠಾನದಿಂದ ಅವನಿಗೆ ಅವನ ಸ್ವರೂಪವೇ ಆಗಿರುವ ಅರುಣಭಾವವು (ಸೂರ್ಯತ್ವ ಅರುಣ ಬಣ್ಣದಿಂದ ಕೂಡಿರುವಿಕೆಯು) ಮೋಕ್ಷದಲ್ಲಿ ಜೀವರಿಗೆ ಸ್ವಸ್ವರೂಪಾವಿರ್ಭಾವವಾಗುವಂತೆ, ಅಭಿವ್ಯಕ್ತವಾಯಿತು. ಸಂಜೆ ಸೂರ್ಯನೂ ಅರುಣನಾದನು (ಕೆಂಪಾದನು) ಲೋಕದಲ್ಲಿ ಅನುರಾಗಿಗಳಿಗೆ ಈ ರೀತಿಯ ವಿಷಮಾವಸ್ಥೆಯುಂಟಾಗುತ್ತದೆ. ತಾನೂ ರಾಗಿಯಾದುದರಿಂದ (ಅನುರಾಗ ಉಳ್ಳವನು ಮತ್ತು ಅರುಣ-ವರ್ಣವುಳ್ಳವನಾದುದರಿಂದ) ಈ ವಿಷಮಾವಸ್ಥೆಯುಂಟಾಯಿತೆಂದು ತಿಳಿದಿರುವ ಸೂರ್ಯನಿಗೆ ಅಪರಾಗ (ವೈರಾಗ್ಯಕೆಂಪುಬಣ್ಣದ ಹೋಗಲಾಡಿಸುವಿಕೆ) ಉಂಟುಮಾಡುವುದಕ್ಕಾಗಿ ಅವನನ್ನು ಮೆಲ್ಲಮೆಲ್ಲನೆ ಪಶ್ಚಿಮದ ಕಡೆಗೆ ಸಂಧ್ಯಾಕಾಲವು ನಡೆಸುತ್ತಿತ್ತು. ಕಾಂತಿಯೆಂಬ ತನ್ನ ಪತ್ನಿಯು ಕಣ್ಮರೆಯಾದಾಗ (ಸತ್ತುಹೋದಾಗ) ಪಶ್ಚಿಮಸಮುದ್ರ-ಕನ್ಯೆಯಾದ ಪದ್ಮನಿಯನ್ನು ಮದುವೆಯಾಗಲು ಕನ್ಯಾಪ್ರಾರ್ಥನೆಗೋಸ್ಕರ ಸೂರ್ಯನು ಪಶ್ಚಿಮ ಸಮುದ್ರಾ-ಭಿಮುಖವಾಗಿ ಹೋಗುತ್ತಾನೋ ಎಂಬಂತಿತ್ತು. ಸಂಜೆಯ ಕೆಂಬಣ್ಣವನ್ನು ಬೆಂಕಿಯೆಂದು ತಿಳಿದು ತಮ್ಮ ಗೂಡುಗಳಿಗೆ ಬೆಂಕಿ ಬಿದ್ದಿರಬಹುದೆಂದು ಹೆದರಿ ಪಕ್ಷಿಗಳು ತಮ್ಮ ಗೂಡುಗಳಲ್ಲಿರುವ ಮರಿಗಳನ್ನು ನೋಡಲು ವೇಗದಿಂದ ಧಾವಿಸಿ ಹಾರಿಹೋಗುವಂತೆ ಕಾಣಿಸುತ್ತಿತ್ತು. ಪ್ರಾತಃ ಕಾಲದಿಂದ ಸೂರ್ಯನಿರುವವರೆಗೂ ಜೊತೆಯಾಗಿದ್ದ ಚಕ್ರವಾಕ ಪಕ್ಷಿಗಳ ಜೋಡಿಗಳಿಗೆ ಸಂಜೆಯಾದಾಗ ವಿಯೋಗ ಉಂಟಾಯಿತು. ಇಂತಹ ಸಂಜೆಯ ಸಮೀಪದ ಸಮಯವು ವಿಜೃಂಭಿಸಿತು.

**ಸೂರ್ಯನು ಮುಳುಗಿದನು** — ಕಾಲಪುರುಷನು ಆಕಾಶವೆಂಬ ಇಂದ್ರನೀಲರತ್ನದ ಪಾತ್ರೆಯಲ್ಲಿ ಸೂರ್ಯ ಮಂಡಲ ಚಂದ್ರಮಂಡಲವೆಂಬ ಎರಡು ಭಂಗಾರದ ತೀರ್ಥದ ಪಾತ್ರೆಗಳನ್ನು ಇಟ್ಟುಕೊಂಡು ಒಂದರಲ್ಲಿ ಶಂಖೋದಕವನ್ನು ಮತ್ತೊಂದರಲ್ಲಿ ವಿಷ್ಣುಪಾದೋದಕವನ್ನು ಇಟ್ಟುಕೊಂಡು ಬರುವಂತೆ ಕಾಣಿಸುತ್ತಿತ್ತು. ಸಾಯಂಕಾಲ ಪೂರ್ವದಿಕ್ಕಿನಲ್ಲಿ ಚಂದ್ರೋದಯ, ಪಶ್ಚಿಮದಲ್ಲಿ ಸೂರ್ಯಾಸ್ತಮಯವಾಗುವಾಗ ಸೂರ್ಯಚಂದ್ರ-ರಿಬ್ಬರು ತೀರ್ಥದ ಎರಡು ಪಾತ್ರೆಗಳಲ್ಲಿಯೂ ಆಕಾಶವು ತೀರ್ಥಪಾತ್ರೆಗಳನ್ನುಟ್ಟಿರುವ ಇಂದ್ರನೀಲಮಣಿಯ ಪಾತ್ರೆ-ಯಂತೆಯೂ (ಹರಿವಾಣದಂತೆ) ಕಾಣಿಸುತ್ತಿತ್ತು. ಸಂಧ್ಯಾಕಾಲ ಪುರುಷನು ತೀರ್ಥದ ಹರಿವಾಣ ಹಿಡಿದ ಮನುಷ್ಯ-ನಂತೆ ಕಾಣಿಸುತ್ತಿತ್ತು. ಇಂತಹ ಕಾಲಪುರುಷನು ತೀರ್ಥದ ಪಾತ್ರೆಯನ್ನು ಪುರುಷನು ತೀರ್ಥ ಕೊಟ್ಟಮೇಲೆ ಮರೆ-ಯಾಗಿ ದೇವರ ಕೋಣೆಯಲ್ಲಿಡುವಂತೆ, ಸೂರ್ಯನನ್ನು ಮರೆಮಾಡಿದನು (ನುಂಗಿದನು). ಈ ರೀತಿ ಸಂಧ್ಯಾಕಾಲ ಪುರುಷನು ವಿಜೃಂಭಿಸಿದನು.

**ಸೂರ್ಯನ ಅಸ್ತಮಯಾನಂತರದ ಕಾಲವು ಹೇಗಿತ್ತು** — ಪೂರ್ವಪರ್ವತ (ಉದಯಪರ್ವತ)ವೆಂಬ ವಿಶ್ವಾಮಿತ್ರನು ಸೂರ್ಯಬಿಂಬವೆಂಬ ಬ್ರಹ್ಮಾಸ್ತ್ರವನ್ನು ಪ್ರಯೋಗಿಸಿದನು. ಅಸ್ತಾಚಲವೆಂಬ ವಸಿಷ್ಠನು ಸೂರ್ಯ-ಬಿಂಬ ಬ್ರಹ್ಮಾಸ್ತ್ರವನ್ನು ತನ್ನ ಬ್ರಹ್ಮತೇಜೋಬಲದಿಂದ ನುಂಗಿ ನಿಷ್ಫಲವಾಗಿ ಮಾಡಿದಾಗ ಉದಯಗಿರಿ ಎಂಬ ವಿಶ್ವಾ-ಮಿತ್ರನು ತನ್ನ ಕೋಪಾಗ್ನಿಯನ್ನು ಉಗುಳುತ್ತಾನೋ ಎಂಬಂತೆ ಸಾಯಂಕಾಲದ ಸೂರ್ಯಕಿರಣಗಳು (ಮಾತು) ಕೆಂಪಾಗಿ ಕಾಣಿಸುತ್ತಿದ್ದವು. ಪೂಜೆ ಮಾಡಿದ ಮೇಲೆ ಶಾಲಿಗ್ರಾಮವನ್ನು ಸಂಪುಟದೊಳಗಿಡುವಂತೆ ಕಾಲಪುರುಷನು ದುಂಬಿಗಳೆಂಬ ಶಾಲಿಗ್ರಾಮವನ್ನು ಕಮಲಗಳ ಮೊಗ್ಗುಗಳೆಂಬ ಸಂಪುಟದೊಳಗಿಟ್ಟನು. ಹೀಗೆ ಸಂಜೆಯಾದಾಗ ಮೈಮರೆತು ಮಕರಂದ ಹೀರುತ್ತಿದ್ದ ದುಂಬಿಗಳನ್ನು ತಮ್ಮೊಳಗೇ ಇಟ್ಟುಕೊಂಡು ಕಮಲಗಳ ಮೊಗ್ಗಾದವು. ಸ್ವಲ್ಪವೇ ಕಾಣಿಸುತ್ತಿದ್ದ ಕತ್ತಲೆ, ಒಂದೆರಡೇ ಕಾಣಿಸುತ್ತಿದ್ದ ನಕ್ಷತ್ರಗಳು ಸೂರ್ಯಾಸ್ತದ ನಂತರ ವಿಸ್ತಾರ ಹೊಂದಿದವು. ಕತ್ತಲೆ ದಟ್ಟವಾಯಿತು, ನಕ್ಷತ್ರಗಳು ಬಹಳವಾಗಿ ಕಂಡು ಬಂದವು. ಆಗಲೇ ಚಂದ್ರನ ಕಿರಣಪಾಳಿಗಳು ನರ್ತಕಿಯರಂತೆ ಕುಣಿಕುಣಿಯುತ್ತಾ ಬಂದವು. ದೂರದೂರದ ಮನೆಗಳಲ್ಲಿ ಇಂದ್ರಗೋಪ ಹುಳಗಳಂತೆ ಕೆಂಪಾದ ಎಣ್ಣೆಯ ದೀಪಗಳು ಮಿನುಗಲಾರಂಭಿಸಿದವು. ಕೆಲವರು ಅಂತಹ ದೀಪಗಳನ್ನು ಹಿಡಿದು ಇತ್ತ ಅತ್ತ ಓಡಾಡುತ್ತಿದ್ದರು. ಕಪ್ಪಾದ ಕತ್ತಲೆಯೆಂಬ ಯಮುನೆ, ಬೆಳಗಿನ ಬೆಳದಿಂಗಳೆಂಬ ಗಂಗೆ, ಇವುಗಳ ಮಧ್ಯದಲ್ಲಿ ಕಣ್ಣಿಗೆ ಕಂಡೂ ಕಾಣಿಸದಂತಿರುವ ಗುಪ್ತಗಾಮಿನಿಯಾದ ಸರಸ್ವತಿಯಂತೆ ಮನೆಗಳಲ್ಲಿ ಉರಿಯುವ, ಅಲ್ಲಲ್ಲಿ ಓಡಾಡುವ ದೀಪಗಳೆಂಬ ಸರಸ್ವತೀನದಿ ಈ ಮೂರರ ತ್ರೀವೇಣೀ ಸಂಗಮವುಂಟಾಯಿತು. ಇಂತಹ ವೈಭವ ಸಂಭ್ರಮ ಆಡಂಬರಗಳನ್ನು ಪ್ರದರ್ಶಿಸುವ ಪ್ರದೋಷಕಾಲವು ವಿಜೃಂಭಿಸಿತು.

**ಚಂದ್ರೋದಯ ಹೇಗಿತ್ತು ?** — ಅಂಬರವು (ಆಕಾಶವು) ಒಂದು ರಂಗಸ್ಥಳ. ಅಲ್ಲಿ ಪೂರ್ವದಿಗಂಗನೆಯು ನರ್ತಿಸಲು ಹೊರಟು ಪರದೆಯ ಮರೆಯಿಂದ ತನ್ನ ಕಾಂತಿಪೂರ್ಣವಾದ ಮುಖವನ್ನು ಮಾತ್ರ ತೋರಿಸುತ್ತಾಳೋ ಎಂಬಂತೆ ಚಂದ್ರಬಿಂಬವು ಇಣಕಿತು. ಬೀಜ ಬಿತ್ತಿದ ಮೇಲೆ ಮೊಳಕೆಯೊಡೆದಾಗ, ಹೊಲದ ಹತ್ತಿರದಲ್ಲಿರುವ ಕೆರೆ ಮುಂತಾದ ಜಲಧಾರದಿಂದ ಇಬ್ಬರು ಗಂಡಸರು ಎರಡೂ ಕಡೆ ಹಗ್ಗ ಕಟ್ಟಿದ ಬುಟ್ಟಿಯಂತಹ ಸೇಚನ ಪಾತ್ರದಿಂದ ಆ ಮೊಳಕೆಗಳಿಗೆ ನೀರು ಹಾಯಿಸುತ್ತಾರೆ. ಇಲ್ಲಿ ಗಗನದ ತಾರಕೆಗಳೆಂಬ ಮೊಳಕೆಗಳಿಗೆ ನೀರುಣಿಸಲು ಉತ್ತರ ದಕ್ಷಿಣದಿಕ್ಕುಗಳ ಅಧಿಪತಿಗಳೆಂಬ ಇಬ್ಬರು ಪುರುಷರು, ಪೂರ್ವಸಮುದ್ರದ ನೀರನ್ನು ತುಂಬಿ ಹಾಯಿಸಲು ಮೇಲೆತ್ತಿದ ನೀರುಬುಟ್ಟಿಯಂತೆ ಚಂದ್ರನು ಕಾಣಿಸುತ್ತಿದ್ದನು. ತಮಗೆ ಆಗದವರನ್ನು ನಾಶಪಡಿಸಲು ರಾತ್ರಿ ನಿರ್ಜನ-ಪ್ರದೇಶದಲ್ಲಿ ಮಾರಣ ಹೋಮವನ್ನು ಏರ್ಪಡಿಸಿ ಅಗ್ನಿಯಲ್ಲಿ ಬೆಣ್ಣೆಯಂತೆ ಬಿಳಿದಾದ ತುಪ್ಪವನ್ನು ಹೋಮಿಸಲು ಕೈಯಲ್ಲಿ ಎತ್ತಿ ಹಿಡಿದಿರುತ್ತಾರೆ. ಅದರಂತೆ ದೂರಪ್ರವಾಸಕ್ಕೆ ಹೋಗಿದ್ದು ಹಿಂತಿರುಗಲಾರದ ತರುಣರನ್ನು ಮಾರಣಹೋಮ ಮಾಡಿ ಸಾಯಿಸುವುದಕ್ಕೆ ಮನ್ಮಥನು ಮೇಲೆತ್ತಿ ಹಿಡಿದಿರುವ ಬೆಣ್ಣೆಯ ಮುದ್ದೆಯಂತೆ ಚಂದ್ರನು ಕಂಡನು, ಚಂದ್ರೋದಯವನ್ನು ಕಂಡು ನಲ್ಲೆಯರು ಬಳಿಯಲ್ಲಿ ಇಲ್ಲದಿರುವ ತರುಣಕಾಮಿಗಳಿಗೆ ಮರಣ-ಸಮಾನವಾದ ಯಾತನೆಯುಂಟಾಯಿತು. ಹಂಸವು ನೀರು ಹಾಲುಗಳನ್ನು ಬೇರ್ಪಡಿಸುವಂತೆ ಚಂದ್ರನೆಂಬ ಹಂಸನು ಚಕ್ರವಾಕಗಳ ಜೋಡಿಗಳೆಂಬ ಹಾಲು ನೀರನ್ನು ಬೇರ್ಪಡಿಸಿದನು. ಇಂತು ರಾತ್ರಿಯಾಗಲಾಗಿ ಚಂದ್ರನಿಂದಾಗಿ ಚಕ್ರವಕ್ಕಿಗಳು ಬೇರೆಯಾದವು. ಯಾಗದಲ್ಲಿ ಅಗ್ನಿಯಲ್ಲಿ ಆಡು ಮುಂತಾದ ಪ್ರಾಣಿಗಳ ಕೆಂಪಾದ ವಪೆಯನ್ನು ಹೋಮಿಸುತ್ತಾರೆ. ಪೂರ್ವಪರ್ವತವೆಂಬ ಅಗ್ನಿಕುಂಡದಲ್ಲಿ ಕಾಣಿಸುತ್ತಿರುವ ಉದಯದ ಕೆಂಪುಬಣ್ಣವೆಂಬ ಅಗ್ನಿ-ಶಿಖೆಯಲ್ಲಿ ಚಂದ್ರಬಿಂಬವೆಂಬ ವಪೆಯನ್ನು ಕಾಲಪುರುಷನೆಂಬ ಋತ್ವಿಜನು ಹೋಮಿಸುತ್ತಾನೋ ಎಂಬಂತೆ ಕಾಣಿಸುತ್ತಿತ್ತು. ವಿಲಾಸಿಗಳು, ಸರಸಪುರುಷರು ಶಾಸ್ತ್ರಸಮ್ಮತವಾದ ಮಾತುಗಳನ್ನು ಕೇಳಲು ಎದ್ದು ಬರುತ್ತಾರೆ. ಅದರಂತೆ ಚಂದ್ರನೆಂಬ ವಿಲಾಸಿಯಾದ ಶೇಷನು ಶ್ರೀರಾಘವೇಂದ್ರತೀರ್ಥ ಗುರುಸಾರ್ವಭೌಮರ ನಾನಾವಿಧವಾದ

ಮಾತುಗಳ ಚಮತ್ಕಾರವನ್ನು ಸವಿಯಬೇಕೆಂದು, ಅವರ ವಿಲಾಸೋಕ್ತಿಗಳನ್ನು ಕೇಳಬೇಕೆಂದೂ ಮೇಲಕ್ಕೆದ್ದು ಬರುವಂತೆ ಕಾಣಿಸುತ್ತಿತ್ತು. ಶೇಷನಿಗೂ ಮಿಗಿಲಾದ ವಾಗ್ವಿಲಾಸವು ಶ್ರೀಗುರುಸಾರ್ವಭೌಮರಲ್ಲಿತ್ತು. ಈರೀತಿ ನಾನಾ ಭಾವೋದಯಗಳನ್ನು ಹೃದಯದಲ್ಲಿ ಉಂಟು ಮಾಡುವ ಚಂದ್ರೋದಯವಾಯಿತು.

**ಶ್ರೀಗುರುರಾಜರ ಸಾಯಂಕಾಲದ ಆಹ್ನಿಕವು ಹೇಗೆ ನಡೆಯಿತು? —** ಹಾಲಿನಂತಹ ಬೆಳದಿಂಗಳಿನ ಕಾಂತಿಯಿಂದ ಚಂದ್ರನು ಭೂಮಂಡಲಕ್ಕೆಲ್ಲಾ ಕ್ಷೀರಾಭಿಷೇಕ ಮಾಡಿದಂತಿತ್ತು. ಅದಕ್ಕೆ ಮೊದಲೇ ಶ್ರೀಗುರುರಾಜರು ಪಾಠವನ್ನು ಮುಗಿಸಿದ್ದರು. ರಾತ್ರಿ ಪೂಜೆಗಾಗಿ ಸ್ನಾನ ಮಾಡಲು ಉದ್ಯುಕ್ತರಾಗಿದ್ದರು. ಮಧ್ಯಾಹ್ನದಂತೆಯೇ ಮಠದ ಹಿಂಭಾಗದ ತಟಾಕದಲ್ಲಿ ಸ್ನಾನ ಮಾಡಿ ಮಡಿಯಾದ ಕಾಷಾಯ ವಸ್ತ್ರಗಳೆರಡನ್ನು ಧರಿಸಿದ ಶ್ರೀಗುರುವರ್ಯರು ಉತ್ತಮ ಪೀಠದಲ್ಲಿ ಯುಕ್ತವಾದ ಆಸನವನ್ನು ಧರಿಸಿ, ಮಂತ್ರಗಳ ರಾಜನಾದ ಗಾಯತ್ರೀಮಂತ್ರದ 'ತ್ರಿಪದಾ ಗಾಯತ್ರೀ' ಎಂದು ಹೇಳಿರುವಂತೆ ಮೂರು ಪಾದಗಳನ್ನು ಉಚ್ಚರಿಸಿ ಅರ್ಥವನ್ನು ಮನಸ್ಸಿನಲ್ಲಿ ಧ್ಯಾನಿಸಿ ಗಾಯತ್ರಿಯ ಅರ್ಥರೂಪನಾದ ಶ್ರೀಮನ್ಮಹಾವಿಷ್ಣುವನ್ನು ಸೂರ್ಯಾಂತರ್ಗತನನ್ನಾಗಿ ಧ್ಯಾನಿಸಿ ವಂದಿಸಿದರು. ಅನಂತರ ಶ್ರೀಮನ್ನಾರಾಯಣನ ಪೂಜೆಯನ್ನು ಮಾಡಲು ಎದ್ದರು. ಶ್ರೀಮೂಲರಾಮಚಂದ್ರದೇವರಿಗೆ ಹೂವುಗಳಿಂದ ಅರ್ಚನೆಯನ್ನು ಬಹಳ ಭಕ್ತಿಯಿಂದ ಮಾಡಿದರು. ಅನಂತರ ಕ್ಷೀರಸಾಗರಶಯನನಾದ, ಭಕ್ತೇಷ್ಟಫಲದಾತೃವಾದ ಭಗವಂತನಿಗೆ ಕ್ಷೀರ ಮತ್ತು ಫಲಗಳನ್ನು ನಿವೇದಿಸಿದರು. ಆಮೇಲೆ ಭಂಗಾರದ ಹರಿವಾಣದಲ್ಲಿ ಕರ್ಪೂರದ ಆರತಿಯನ್ನು ಮಾಡಿ ಭಗವಂತನ ಮುಖಚಂದ್ರನನ್ನು ನೋಡಿ ಆನಂದಿತರಾದರು. ಅನಂತರ ಎಲ್ಲಾ ಇಂದ್ರಿಯಗಳನ್ನು ಅಂತರ್ಮುಖಿಗಳನ್ನಾಗಿ ಮಾಡಿ ಮನಸ್ಸಿನಲ್ಲಿ ಬೇರೆ ಯಾವ ವಿಷಯಗಳೂ ಸುಳಿಯದಂತೆ ಮಾಡಿ ಅರೆಬಿರಿದ ತಾವರೆಯ ಮೊಗ್ಗುಗಳಂತೆ ಕಣ್ಣುಗಳನ್ನು ಅರ್ಧ ಮುಚ್ಚಿಕೊಂಡು ಎರಡು ಕೈಗಳನ್ನು ಬೊಗಸೆಯಂತೆ ಮಾಡಿ ಅದರಲ್ಲಿ ಮಂತ್ರಪುಷ್ಪಗಳನ್ನು ಹಿಡಿದುಕೊಂಡು ತಲೆಯ ಮೇಲೆ ಅಂಜಲಿಬದ್ಧರಾಗಿ ಮೌನಿವರ್ಯರಾದ ಶ್ರೀರಾಘವೇಂದ್ರ ಗುರುರಾಜರು ಭಗವಂತನ ಸ್ತೋತ್ರವನ್ನು ಪ್ರಾರಂಭಿಸಿದರು.

"ಭಗವಂತನೇ ! ಮೀನರೂಪಧಾರಿಯೇ ! ವೇದಗಳು ನಿನ್ನನ್ನು 'ಅಣೋರಣೀಯಾನ್ ಮಹತೋ ಮಹೀಯಾನ್' ಅತಿ ಚಿಕ್ಕವಸ್ತುವಿಗಿಂತಲೂ ಚಿಕ್ಕವನೆಂದೂ, ಅತಿ ದೊಡ್ಡ ವಸ್ತುವಿಗಿಂಲೂ ದೊಡ್ಡವನೆಂದೂ ಹೊಗಳುತ್ತಿವೆ. ವೇದಗಳ ಈ ಅಭಿಪ್ರಾಯವನ್ನು ಸ್ಪಷ್ಟಪಡಿಸುವುದಕ್ಕಾಗಿಯೇ ನೀನು ಚಾಕ್ಷುಷಮನ್ವಂತರದ ಕೊನೆ-ಯಲ್ಲಿ ಕೃತಮಾಲಾನದಿಯಲ್ಲಿ ಆಹ್ನಿಕ ಮಾಡುತ್ತಿರುವ ಸತ್ಯವ್ರತನೆಂಬ ರಾಜನ ಅರ್ಘ್ಯದ ಜಲಪೂರ್ಣವಾದ ಅಂಜಲಿಯಲ್ಲಿ ಚಿಕ್ಕ ಮೀನಿನರೂಪದಿಂದ ಅಣೋರಣೀಯನಾಗಿ ಪ್ರಕಟನಾದೆ. ಅನಂತರ ಕ್ರಮವಾಗಿ ಬೆಳೆಯುತ್ತಾ ಎರಡು ಮೂರು ದಿನಗಳಲ್ಲಿ ಒಂದು ಲಕ್ಷ ಯೋಜನ ವಿಸ್ತಾರವಾದ ಶರೀರವುಳ್ಳ ಮಹತೋಮಹೀಯ ರೂಪವನ್ನು ಧರಿಸಿದೆ. ಹೀಗೆ ಆಶ್ಚರ್ಯಕರವಾದ ಮೀನಿನ ರೂಪದಿಂದ ರಾಜನನ್ನು ಬೆರಗುಗೊಳಿಸಿದೆ. ಅವನಿಗೆ ನಿನ್ನ ನಿಜ ಸ್ವರೂಪವನ್ನು ಉಪದೇಶಿಸಿದೆ. ಮುಂದಿನ ಜನ್ಮಗಳಲ್ಲಿ ವೈವಸ್ವತಮನುಪದವಿಯನ್ನೂ, ಅನಂತರ ಮೋಕ್ಷವನ್ನು ಕೊಡುವೆನೆಂದು ವರಗಳನ್ನು ಕೊಟ್ಟು ಅವನಿಗೆ ದೊಡ್ಡ ಅನುಗ್ರಹವನ್ನು ಮಾಡಿದೆ. ಅಣುವಿಗಿಂತಲೂ ಅಣುತರ-ವಾಗಿರುವಿಕೆ, ಮಹತ್ತಿಗಿಂತಲೂ ಮಹತ್ತರವಾಗಿರುವಿಕೆಯು ಲೋಕದಲ್ಲಿ ವಿರುದ್ಧವಾದರೂ ನೀನು ಅಘಟಿತಘಟನೆ-ಯಲ್ಲಿ ಪಟುವಾದ ನಿನ್ನ ಅಚಿಂತ್ಯಾದ್ಭುತಶಕ್ತಿಯಿಂದ ನಿನ್ನಲ್ಲಿ ಅಣುಮಹದ್ಭಾವವನ್ನು ಹೊಂದಿಸಿಕೊಂಡು ಯೋಗ್ಯರಾದ ಭಕ್ತರಿಗೆ ಅದರ ಲೇಶವನ್ನು ಅನುಭವಕ್ಕೆ ತಂದುಕೊಟ್ಟಿರುತ್ತಿಯೆ ! ಅಂತಹ ನಿನ್ನನ್ನು ನಾನು ಶರಣು ಹೊಂದುತ್ತೇನೆ.

ಹೀಗೆ ಮತ್ತೊಂದು ಬಾರಿ ಬ್ರಹ್ಮದೇವರ ಹಗಲಿನ ಕೊನೆಯಲ್ಲಿ ಕಲ್ಪವಿರಾಮ ಕಾಲದಲ್ಲಿ, ನಿದ್ದೆಗೈಯ್ಯುತ್ತಿದ್ದ ಬ್ರಹ್ಮದೇವರ ಮುಖಗಳಿಂದ ಪ್ರಕಟವಾದ ವೇದಗಳನ್ನು ಹಯಗ್ರೀವಾಸುರನು ಅಪಹರಿಸಿದನು. ವೇದಗಳನ್ನು ಕಾಣದೆ ಬ್ರಹ್ಮದೇವರಿಗೆ ಸೃಷ್ಟಿಯನ್ನು ಹೇಗೆ ಮಾಡಬೇಕೆಂದೇ ತೋಚಲಿಲ್ಲ. ಬ್ರಹ್ಮದೇವರು ನಿನ್ನನ್ನು ಪ್ರಾರ್ಥಿಸಿದರು.

ಆಗ ಅವನು ಸೃಷ್ಟಿಯನ್ನು ಹೇಗೆ ಮಾಡಬೇಕೆಂದು ತಿಳಿಸಲು-ಅವನ ಅಜ್ಞಾನವನ್ನು ಹೋಗಲಾಡಿಸಿದಾಗ ನೀನು ಮೀನಿನ ರೂಪವನ್ನು ಧರಿಸಿ ಹಯಗ್ರೀವಾಸುರನನ್ನು ಕೊಂದು ತಿರುಗಿ ವೇದವನ್ನು ಬ್ರಹ್ಮದೇವರಿಗೆ ಉಪದೇಶಿಸಿದೆ. ಸ್ವಾಮಿಯೇ ! ವೈವಸ್ವತಮನುವಿಗೆ ಸಂಪೂರ್ಣ ಶಾಸ್ತ್ರಸಮೂಹವನ್ನು ಉಪದೇಶಿಸಿದ ಬ್ರಹ್ಮದೇವರಿಗೆ ವೇದ-ಪ್ರದನಾದ, ವೇದಾರ್ಥೋಪದೇಶಕನಾದ ಹರಿಯೇ ! ನನಗೂ ಒಳ್ಳೆಯ ಜ್ಞಾನವನ್ನು ಕರುಣಿಸು.

ಕೂರ್ಮಾವತಾರ ಧರಿಸಿದ ನನ್ನ ದೇವನೇ ! ದೇವತೆಗಳೂ ಅಸುರರೂ ಸೇರಿ ಅಮೃತಕ್ಕಾಗಿ ಸಮುದ್ರವನ್ನು ಕಡೆಯುತ್ತಿರುವಾಗ ಕಡಗೋಲಾಗಿದ್ದ ಮಂದರಪರ್ವತವು ಸಮುದ್ರದಲ್ಲಿ ಮುಳುಗಲು ಆರಂಭವಾಯಿತು. ಆ ಪರ್ವತವನ್ನು ಮೇಲೆತ್ತಲು ನೀನು ಆಮೆಯ ರೂಪವನ್ನು ಎತ್ತಿದೆ. ಇದೇ ನಿನ್ನ ಕೂರ್ಮಾವತಾರ. ಕೆಳಗೆ ಕಠಿನವಾದ ಬೆನ್ನಿನ ನೀನು, ಒಂದು ಬನ್ನಿಯ ಕಟ್ಟಿಗೆಯಂತೆ ಇದ್ದು ಮೇಲೆ ಮತ್ತೊಂದು ಬನ್ನಿಯ ಮರದ ಕಟ್ಟಿಗೆಯಂತೆ ಇರುವ ಮಂದರವು ಇದ್ದು ಬನ್ನಿಮರದ ಎರಡು ಕಟ್ಟಿಗೆಗಳನ್ನು ಮಥಿಸುವಾಗ ಅಗ್ನಿಯು ಹುಟ್ಟುವಂತೆ ನಿನ್ನ ಬೆನ್ನು ಮತ್ತು ಮಂದರವೆಂಬ ಅರಣಿಗಳ ಮಥನದಿಂದ ದೈತ್ಯರೆಂಬ ಹವಿಸ್ಸುಗಳನ್ನು ಹೋಮಿಸಲು ಹಾಲಾಹಲವಿಷವೆಂಬ ಬೆಂಕಿಯನ್ನು ನೀನು ಉಂಟು ಮಾಡಿದೆ. ಏನು ವಿಚಿತ್ರವು ! ಮಂದರವೆಂಬ ಕಡಗೋಲಿನಿಂದ ಸಮುದ್ರವನ್ನು ಕಡೆದು ಅಮೃತವನ್ನು ಪಡೆಯಬೇಕೆಂದು ದೇವತೆಗಳೂ ದೈತ್ಯರೂ ಪ್ರಯತ್ನಿಸುತ್ತಿರುವಾಗ ನೀನು ನಿನ್ನ ಬೆನ್ನು ಮಂದರದ ಬುಡಗಳ ಮಥನದಿಂದ, ಅವೆರಡರ ಸಂಘರ್ಷದಿಂದ ದೈತ್ಯರ ವಿನಾಶಕ್ಕಾಗಿ ವಿಷವೆಂಬ ಅಗ್ನಿಯನ್ನು ಹಾಲಾಹಲ ವಿಷ ಉತ್ಪಾದಿಸಿದೆಯಲ್ಲವೇ ? ನಿನ್ನ ವ್ಯಾಪಾರವು ಅತ್ಯಾಶ್ಚರ್ಯಕರವಾಗಿದೆ. ಹೀಗೆ ಆಶ್ಚರ್ಯಕರವಾದ ವ್ಯಾಪಾರವನ್ನು ಮಾಡುವ ತನ್ನ ಭಕ್ತರಾದ ದೇವತೆಗಳನ್ನು ಮೇಲೆತ್ತುವ, ವಿರೋಧಿಗಳಾದ ದೈತ್ಯರನ್ನು ಕೆಳಕ್ಕೆ ತಳ್ಳುವ ನಿನಗೆ ಅನಂತ ನಮಸ್ಕಾರಗಳು. ನಿನ್ನನ್ನೇ ನಾನು ಮೊರೆಹೊಕ್ಕಿದ್ದೇನೆ.

ಎಲೈ ಆದಿವರಾಹಸ್ವಾಮಿಯೇ ! ನೀನು, ಸಮುದ್ರದಲ್ಲಿ ಮುಳುಗಿಹೋಗಿದ್ದ ಭೂದೇವಿಯನ್ನು ಮೇಲಕ್ಕೆತ್ತಿದೆ. ನನ್ನಂತಹವರು ಸಂಸಾರ ಸಮುದ್ರದಲ್ಲಿ ಮುಳುಗಿ ಹೋಗಿರುತ್ತಾರೆ. ಅಂತಹವರ ಉದ್ಧಾರ ಮಾಡಲು ಅಭ್ಯಾಸ ಮಾಡುವುದಕ್ಕಾಗಿ ನೀನು ಅನೇಕ ಬಾರಿ ಭೂದೇವಿಯನ್ನು ಮೇಲಕ್ಕೆತ್ತಿದೆ ಎಂದು ತೋರುತ್ತಿದೆ. ಭಾರವಾದ ಭೂದೇವಿಯನ್ನು ಮೇಲಕ್ಕೆತ್ತಿ ಅಭ್ಯಾಸವಾಗಿರುವ ನೀನು ಪಾಪಭಾರದಿಂದ ಸಂಸಾರಸಮುದ್ರದಲ್ಲಿ ಮುಳುಗಿ ಹೋದವರನ್ನು ಮೇಲಕ್ಕೆತ್ತುವವನಾಗು, ಉದ್ಧಾರ ಮಾಡು. ಅಮಾವಾಸ್ಯೆಯ ಚಂದ್ರನ ಒಂದು ಕಲೆಯ ಮೇಲೆ ಹುಣ್ಣಿಮೆ ಚಂದ್ರನ ಕಳಂಕದ ಕಪ್ಪಾದ ಒಂದು ರೇಖೆಯು ಆಧರಿಸಿ ನಿಂತಿದ್ದರೆ ಹೇಗೆ ಶೋಭಿಸುತ್ತದೆಯೋ ಅದರಂತೆ ಭೂಮಿಯನ್ನು ಮೇಲಕ್ಕೆತ್ತುವಾಗ ಅಮಾವಾಸ್ಯೆ ಚಂದ್ರನ ಒಂದು ಕಲೆಯಂತಿರುವ ನಿನ್ನ ಕೋರೆಹಲ್ಲಿನ ಮೇಲಿರುವ ಹುಣ್ಣಿಮೆ ಚಂದ್ರನ ಕಲಂಕರೇಖೆಯಂತೆ ಭೂಮಿಯು ಶೋಭಿಸುತ್ತಿದೆ. ಇದೊಂದು ಅಭೂತೋಪಮೆಯು. ಕಪ್ಪಾದ ಭೂಮಿಯನ್ನು ಉದ್ಧರಿಸುವ ಬಿಳಿಯ ಕೋರೆದಾಡಿಯ ನೀಲವರಾಹನಾದ ನಿನ್ನನ್ನು ಹೋಲಿಸಲು ಬೇರೆ ಯಾವ ವಸ್ತುವೂ ಸಿಗುವುದಿಲ್ಲ.

ಹೇ ಭಗವನ್ ನರಸಿಂಹ ! ಲೋಕದಲ್ಲಿ ಪಾಲಕನು ಶಾಂತರೂಪದಿಂದ ಇರುತ್ತಾನೆ. ಸಂಹಾರಕನು ಭಯಂಕರ ರೂಪದಿಂದ ಇರುತ್ತಾನೆ. ಈ ವಿಷಯ ಪ್ರಸಿದ್ಧವಾಗಿದೆ. ಪಾಲಕನಿಗೆ ಘೋರರೂಪವೂ ಸಂಹಾರಕನಿಗೆ ಶಾಂತ ರೂಪವೂ ಅತಿವಿರುದ್ಧವಾಗಿದೆ. ನೀನು ಭಯಂಕರವಾದ ಸಿಂಹರೂಪದಿಂದ ಹಿರಣ್ಯಕಶಿಪುವನ್ನು ಸಂಹರಿಸಿದುದು ಯುಕ್ತವೇ ಆಗಿದೆ. ಆದರೇ ಅದೇ ಭಯಂಕರ ರೂಪದಿಂದ ಪ್ರಹ್ಲಾದನನ್ನು ರಕ್ಷಿಸಿದೆ. ಸಂಹಾರಕವಾದ ನಿನ್ನ ಭಯಂಕರ ರೂಪವು ರಕ್ಷಣೆ ಮಾಡಿದುದು ಅತ್ಯಾಶ್ಚರ್ಯಕರ, ಅತಿವಿರುದ್ಧ. ಹಾಗೆ ನರನಿಗೆ ಸಿಂಹರೂಪ, ಸಿಂಹಕ್ಕೆ ನರರೂಪವೂ ಅತಿವಿರುದ್ಧವಾಗಿದೆ. ನೀನು ನರನೂ ಅಹುದು. ಸಿಂಹವೂ ಆಗಿರುವೆ. ಹಾಗೂ ನಿನ್ನ ಆಕೃತಿಯೂ ಅತಿವಿರುದ್ಧವಾದುದು. ಹೀಗೆ ಅತಿವಿರುದ್ಧವಾದ ರೂಪವನ್ನು ಸ್ವೀಕರಿಸಿ ಅತಿವಿರುದ್ಧವಾದ ಕರ್ಮವನ್ನು ಮಾಡುವ

ನೀನು 'ಲೋಕದಲ್ಲಿ ಸರ್ವಥಾ ನಡೆಯಲು, ಘಟಿಸಲು ಸಾಧ್ಯವಿಲ್ಲದಿರುವ ಕಾರ್ಯವನ್ನು ನಾನು ಮಾಡುತ್ತೇನೆ. ನನ್ನನ್ನು ಶರಣು ಹೊಂದಿದವನ ಪಾಪವನ್ನು ಹೋಗಲಾಡಿಸಿ ಉದ್ಧಾರ ಮಾಡಲು ಬೇರಾರಿಗೂ ಸರ್ವಥಾ ಸಾಧ್ಯ-ವಿಲ್ಲದಿದ್ದರೂ ನಾನು ಆ ಕಾರ್ಯವನ್ನು ಮಾಡುತ್ತೇನೆ. ನಾನು ಅಘಟನೀಯವಾದ ಅನಂತಘಟನೆಗಳನ್ನು ನಡೆಸ-ಬಲ್ಲೆ' ಎಂಬುದಕ್ಕೆ ಇದೊಂದು ಚಿಕ್ಕ ಉದಾಹರಣೆ ಎಂದು ಭಕ್ತರಾದ ನಮ್ಮೆಲ್ಲರಿಗೂ ತಿಳಿಸುತ್ತಿದ್ದೀ ಎಂದು ನಾನು ಭಾವಿಸಿದ್ದೇನೆ. ಅಹೋ ನರಸಿಂಹ ! ಶರತ್ಕಾಲದ ಮೋಡವು ಶುಭ್ರವಾದ ನಿನ್ನ ದೇಹದಲ್ಲಿ ಹಿರಣ್ಯಕಶಿಪುವಿನ ಹೊಟ್ಟೆಯನ್ನು ಸೀಳಿಸಿ ಧರಿಸಿರುವ ಕರುಳಿನ ಮಾಲೆಗಳು ಶರತ್ಕಾಲದ ಬಿಳಿಯ ಮೋಡಗಳ ಮೇಲೆ ಮಿಂಚುಗಳ ಗೊಂಚಲಿನಂತೆ ಶೋಭಿಸುತ್ತಿವೆ. ವಾಸ್ತವವಾಗಿ ಶರತ್ಕಾಲದ ಮೋಡಗಳು ನೀರಿಲ್ಲದಿರುವುದರಿಂದ ಎಂದೂ ಮಿಂಚನ್ನು ಹೊಂದಿರುವುದಿಲ್ಲ. ಆದರೂ ಶರತ್ಕಾಲದ ಮೋಡವು ಅಚಂಚಲವಾದ ಮಿಂಚುಗಳ ಗೋಚಲುಗಳಿಂದ ಕೂಡಿದ್ದರೆ ಹೇಗೆ ಇರುತ್ತದೆಯೋ ಅದರಂತೆ ನೀನು ಇದ್ದೀಯೆ ಎಂದು ಒಂದು ಅಭೂತೋಪಮೆಯಿಂದ ನಿನ್ನನ್ನು ಸ್ತೋತ್ರ ಮಾಡುತ್ತಿದ್ದೇನೆ. ಹೀಗೆ ಅಘಟಿತಾಕೃತಿ, ಅಘಟಿತವಾದ ವ್ಯಾಪಾರ, ಅಘಟಿತೋಪಮಗಳಿಂದ ನೀನು 'ಅಘಟಿತ ಘಟನಾಪಟಿಷ್ಠಃ' ಅಸಂಭವನೀಯವಾದ ಕಾರ್ಯಗಳನ್ನು ಸಾಧಿಸುವುದರಲ್ಲಿ ಅತ್ಯಂತ ಸಮರ್ಥತಮನು, ಎಂದು ನಾನು ತಿಳಿಯುತ್ತೇನೆ. ನನ್ನನ್ನು ಉದ್ಧಾರ ಮಾಡಿ 'ಅಘಟಿತಘಟನಾಪಟುತಮ'ನೆಂಬ ಬಿರುದಿನ ಅನ್ವರ್ಥತೆಯನ್ನು ಮತ್ತೊಮ್ಮೆ ಪ್ರಕಟಿಸು.

ಸ್ವಾಮಿಯೇ ! ವಾಮನ ವೇಷದ ಶ್ರೀಹರಿಯೇ ! ಕುದುರೆಯ ಬಾಲದ ತುದಿಯ ಒಂದು ಕೂದಲನ್ನು (ತುದಿಯ ಭಾಗವನ್ನು) ಹತ್ತು ಸಾವಿರ ಭಾಗ ಮಾಡಿದರೆ ಅದರ ಒಂದು ಭಾಗದಷ್ಟು ಸೂಕ್ಷ್ಮರೂಪವುಳ್ಳವನು ಜೀವನು ಎಂದು ಶ್ರುತಿಯು ಹೇಳುತ್ತದೆ. ಇಂತಹ ಜೀವನ ಸ್ವರೂಪದ ಹೃದಯವು ಅದಕ್ಕಿಂತಲೂ ಅಣುವಲ್ಲವೇ ! ಸೂಕ್ಷ್ಮವಾಗಿರುವ ಈ ಜೀವನ ಹೃದಯಕಮಲದಲ್ಲಿ ಅಖಂಡಬ್ರಹ್ಮಾಂಡಕೋಟಿಯ ಹೊರಗೂ ಒಳಗೂ ವ್ಯಾಪ್ತನಾದ ನಿನ್ನನ್ನು ಸ್ಥಾಪಿಸುವುದು, ಧ್ಯಾನ ಮಾಡುವುದು, ಇವೆಲ್ಲಾ ಅಸಾಧ್ಯ ಕಾರ್ಯಗಳೆಂದು ಭಕ್ತರು ಸಂದೇಹ ಪಡಬೇಕಾಗಿಲ್ಲ. ಬ್ರಹ್ಮಾಂಡ ಶರೀರನಾದ ನಾನು ಅತಿಸೂಕ್ಷ್ಮರೂಪನಾಗಿಯೂ ಇರಬಲ್ಲೆ ಎಂದು ತಿಳಿಸಲು ನೀನು ಬಲಿಯಬಂಧನ ಕಾರ್ಯದ ನೆಪ ಮಾಡಿಕೊಂಡು ಪುಟ್ಟವಾಮನ ಬ್ರಹ್ಮಚಾರಿಯ ರೂಪವನ್ನು ತಳೆದು 'ವಾಮನ'-ನೆಂದೇ ಪ್ರಸಿದ್ಧನಾದೆ. ಅಂತಹ ನಿನ್ನ ಸೂಕ್ಷ್ಮವಾದ ರೂಪವನ್ನು ಸೂಕ್ಷ್ಮವಾದ ನಮ್ಮ ಹೃದಯದಲ್ಲಿ ಇಟ್ಟುಕೊಂಡು ನಾವು ಧ್ಯಾನ ಮಾಡಲು ಸಾಧ್ಯ. ಆ ಧ್ಯಾನ ಕಾರ್ಯವನ್ನು ಎಲ್ಲೈ ವಾಮನರೂಪಿಯಾದ ಶ್ರೀಹರಿಯೇ ನೀನೇ ನಡೆಸಿಕೊಡು. ಕ್ಷತ್ರಿಯರ ಗುಂಪನ್ನು ಅನೇಕ ಬಾರಿ ತರಿದ ಪರಶುರಾಮನೇ ! ಚಂದ್ರನು ನಕ್ಷತ್ರಗಳ ಜೊತೆಗಿದ್ದು ಅವುಗಳಿಗಿಂತ ಚೆನ್ನಾಗಿ ಪ್ರಕಾಶಿಸುತ್ತಾ ಇರುತ್ತಾನೆ, ಹಾಗೆಯೇ ನೀನು ನಕ್ಷತ್ರಯೋಗದಿಂದ ಕ್ಷತ್ರಿಯರ ಅಭಾವ (ನಾಶ) ಸಂಬಂಧದಿಂದ ಪ್ರಕಾಶಿಸುತ್ತೀಯ. ಹೀಗೆ ಆ ನಕ್ಷತ್ರಯೋಗವುಳ್ಳ ಚಂದ್ರನಂತೆ ಈ ನಕ್ಷತ್ರಯೋಗವುಳ್ಳ ಮತ್ತೊಬ್ಬ ಚಂದ್ರನೇ ನೀನು. ಚಂದ್ರನು ಕಮಲಗಳ ತೆರೆದ ಬಾಯನ್ನು ಮುಚ್ಚುವಂತೆ, ಅರಳಿಬಂದ ಕಮಲಗಳನ್ನು ಮೊಗ್ಗಾಗಿ ಮಾಡುವಂತೆ, ನೀನು ಕಮಲಗಳಂತೆ ಅರಳಿದ ಶತ್ರುಗಳ ಕೀರ್ತಿ ಪುಂಡರೀಕಗಳನ್ನು (ಕೀರ್ತಿಯೆಂಬ ಬಿಳಿಯ ಕಮಲಗಳನ್ನು ಬಗ್ಗಿಸಿದೆ) ಮೊಗ್ಗಾಗಿ ಮಾಡಿದೆ. ಪರಶುರಾಮದೇವ ! ನಿನ್ನಿಂದಾಗಿ ಕ್ಷತ್ರಿಯರ ಕೀರ್ತಿ-ಯೆಲ್ಲವೂ ಸಂಕುಚಿತವಾಯಿತು, ಮರೆಯಾಯಿತು. ಚಂದ್ರನಿರುವಾಗ ಕಮಲಗಳು ಬಗ್ಗಿ ಮೊಗ್ಗಾಗುವುದು ಸ್ವಾಭಾವಿಕವಷ್ಟೇ ! ನೀನು ನಕ್ಷತ್ರಯೋಗದ ಚಂದ್ರಮನಂತಿರುವುದರಿಂದ ನಿನ್ನ ಈ ಕೀರ್ತಿಕಮಲಿನಿಯನ್ನು ಸಂಕುಚಿತಗೊಳಿಸುವ ವ್ಯಾಪಾರವು ಯುಕ್ತವೇ ಆಗಿದೆ.

ಭೋ ಶ್ರೀಮೂಲರಾಮಚಂದ್ರ ! ಶ್ರೀ ಹರಿಯೇ ! ನಮ್ಮ ಪಾಪವೆಂಬ ಸಮುದ್ರವನ್ನು ದಾಟಲು ನಿನ್ನ ಕೃಪೆಯು ಸೇತುವಿನಂತಿದೆ. 'ನಾನು ಸಮುದ್ರಕ್ಕೆ ಸೇತುವನ್ನು ಕಟ್ಟಿ ದುರಿತರಾಶಿರೂಪವಾದ ರಾಕ್ಷಸರನ್ನು ತರಿದಂತೆ ನಿಮ್ಮ ಪಾಪ-

ಸಮುದ್ರಕ್ಕೆ ನನ್ನ ಕೃಪೆಯೆಂಬ ಸೇತುವನ್ನು ಕಟ್ಟಿ ನಿಮ್ಮನ್ನು ದಾಟಿಸಿ ನಿಮ್ಮ ಪಾಪಗಳನ್ನೆಲ್ಲಾ ನಾಶ ಮಾಡುವೆನು' ಎಂದು ಸೂಚಿಸಲು ನೀನು ರಾಮಾವತಾರದಲ್ಲಿ ಸಮುದ್ರಕ್ಕೆ ಸೇತುವನ್ನು ಕಟ್ಟಿಸಿದೆಯೆಂದು ನಾನು ತಿಳಿಯುತ್ತೇನೆ. ಕೃಪಾ ಸಮುದ್ರನೇ ! ನನ್ನನ್ನು ಉದ್ಧರಿಸು.

ಸ್ವಾಮಿಯೇ ! ಶ್ರೀ ಕೃಷ್ಣ ಭಗವಂತ ! ನಿನ್ನ ತಾಯಿಯಾದ ಯಶೋದೆಯು ನಿನ್ನನ್ನು ಕಟ್ಟಬೇಕೆಂದು ಗುಣ (ಹಗ್ಗ) ಎಂಬ ಹೆಸರಿನಿಂದಲೂ ಹೇಳಲ್ಪಡುವ ಒಂದು ಅತಿ ಅಲ್ಪವಾದ ಹಗ್ಗವನ್ನು ಕೈಗೆತ್ತಿಕೊಂಡಳು ಸ್ವೀಕರಿಸಿದಳು. ಹಾಗೆ ತನ್ನನ್ನು ಗುಣದಿಂದ (ಹಗ್ಗದಿಂದ) ಕಟ್ಟಲು ತಂದೆ ತಾಯಿಯ ಕೈಯ ಹಗ್ಗವನ್ನು (ಗುಣವನ್ನು) ಸ್ವೀಕರಿಸಿದ ಈ ಅತ್ಯಲ್ಪವಾದ ಗುಣವನ್ನು (ಹಗ್ಗವನ್ನು) (ಯಶೋದೆಯ ಪ್ರೇಮಗುಣವನ್ನು) ಸ್ವೀಕರಿಸಿದ ನಾನು ಮಹಾ-ಗುಣಗಳನ್ನು (ದೊಡ್ಡ ಹಗ್ಗಗಳನ್ನು, ಉತ್ಕೃಷ್ಟ ಗುಣಗಳನ್ನು) ಎಂದೂ ಬಿಡುವುದಿಲ್ಲ, ಆದ್ದರಿಂದ ನಾನು ಸಗುಣನೇ ಹೊರತು ನಿರ್ಗುಣನಲ್ಲ ಎಂದು ಸೂಚಿಸುತ್ತಾ ನೀನು ನಿರ್ಗುಣ ಮತವನ್ನು ನಿರಾಕರಿಸಿದೆ. ಎಲೈ ಶ್ರೀ ಕೃಷ್ಣನೇ ! ಎಲ್ಲಾ ಜೀವರ ದೇಹಗಳೂ ಶ್ರೀಮನ್ನಾರಾಯಣನ ವಿಹಾರದ ರಥಗಳು ಎಂದು 'ಏಷ ವೈ ದೇವರಥಃ (ಈ ಮಾನವರ (ಎಲ್ಲಾ ಜೀವರ) ದೇಹವು ಕ್ರೀಡಾದಿ ಗುಣವಿಶಿಷ್ಟನಾದ ಶ್ರೀಹರಿಯ ರಥವು) ಎಂದು ವೇದವು ಹೇಳುತ್ತದೆ. ಆದುದರಿಂದ ಅನಂತ ಜೀವಕೋಟಿಯ ದೇಹಗಳು ಲೀಲಾವಿಲಾಸಿಯಾದ ನಿನ್ನ ರಥಗಳಾದವು. ಅವುಗಳ ಮುಂಭಾಗದಲ್ಲಿ ನಿಂತು ಜೀವರ ಎಲ್ಲಾ ವ್ಯಾಪಾರಗಳನ್ನು ಸಾರಥಿಯ ರೂಪದಿಂದ ನೀನೇ ನಿರ್ವಹಿಸುತ್ತೀ. ಹೀಗೆ ಸರ್ವಚೇತನ ಸಾರಥಿಯಾದ ನೀನು ಅರ್ಜುನನ ರಥದ ಮುಂಭಾಗದಲ್ಲಿ ಕುಳಿತು ಅವನಿಗೆ ಸಾರಥಿಯಾದೆ. ಅನಂತ ಚೇತನರ (ದೇಹರಥ) ಸಾರಥಿಯಾದ ನೀನು ಪಾರ್ಥನೊಬ್ಬನ ಒಂದು ರಥದ ಸಾರಥಿಯಾದೆಯೆಂಬುದು ಜ್ಞಾನಿಗಳಿಗೆ ಆಶ್ಚರ್ಯಕರವಲ್ಲ.

ಎಲೈ ಭಕ್ತಪರಾಧೀನನಾದ ಶ್ರೀಕೃಷ್ಣ ! ನಿನಗೊಬ್ಬ ಸ್ನೇಹಿತನಿದ್ದನು. ಅವನ ಹೆಸರು ಕುಚೇಲ. ಹರಕಲು ಬಟ್ಟೆ-ಗಳನ್ನು ಉಡುತ್ತಿದ್ದುದರಿಂದ ಅವನಿಗೆ ಆ ಹೆಸರು ಬಂದಿತು. ಆ ಕುಚೇಲನ ನಿಜವಾದ ಹೆಸರು ಸುಧಾಮ. ದರಿದ್ರ-ನಾದ ಅವನು ನಿನ್ನನ್ನು ಯಾಚಿಸಲು ಬಂದಾಗ ಸ್ನೇಹಿತನಿಗೆ ಕೊಡಲು ಒಂದಿಷ್ಟು ಅವಲಕ್ಕಿಯನ್ನು ಬೇಡಿ ತಂದಿದ್ದನು. ಅದನ್ನು ಹರಕು ಪಂಚೆಯಲ್ಲಿ ಅದೆಷ್ಟೋ ಗಂಟು ಹಾಕಿ ಕಟ್ಟಿ ತಂದಿದ್ದನು. ಅವನು ತಂದ ಅವಲಕ್ಕಿಯನ್ನು ಗಂಟಿನಿಂದ ನೀನೇ ಬಿಚ್ಚಿ ಒಂದು ಮುಷ್ಟಿಯಷ್ಟು ಅವಲಕ್ಕಿಯನ್ನು ನಿನ್ನ ಬಾಯಿಗೆ ಹಾಕಿಕೊಂಡು ನೈವೇದ್ಯ ಮಾಡಿಕೊಂಡೆ. ಮುಷ್ಟಿ ಅವಲಕ್ಕಿಯಿಂದ ತುಷ್ಟನಾದ ನೀನು ಕುಚೇಲನಿಗೆ ಇಷ್ಟಪ್ರದನಾದೆ. ಅವನಿಗೆ ಒಳ್ಳೆಯ ಚೇಲವನ್ನು (ಬಟ್ಟೆಯನ್ನು) ಅನುಗ್ರಹಿಸಿ ಅವನನ್ನು ಅಕುಚೇಲನನ್ನಾಗಿ (ಹರಕಲು ಚಿಂದಿ ಬಟ್ಟೆ ಇಲ್ಲದವನನ್ನಾಗಿ) ಮಾಡಿದೆ. ಹೀಗೆ ಕುಚೇಲನನ್ನು ತತ್ಕಾಲದಲ್ಲಿ (ದ್ವಾರಕೆಯಲ್ಲಿದ್ದಾಗ) ಅಕುಚೇಲನನ್ನಾಗಿ ಮಾಡಿ ಪುನಃ ಅವನು ಮನೆಗೆ ಹಿಂದಿರುಗುವಾಗ (ಕೊಟ್ಟ-ದ್ದನ್ನೆಲ್ಲಾ ಹಿಂದಿರುಗಿಸಿಕೊಂಡು) ಅವನನ್ನು ಕುಚೇಲನನ್ನೇ ಮಾಡಿದೆ. ಕು = ಭೂಮಿ, ಚೇಲ = ಬಟ್ಟೆ ಇವನ್ನೆಲ್ಲಾ ಕೊಟ್ಟು ಎಲ್ಲಾ ಸಂಪತ್ತನ್ನೂ ಕೊಟ್ಟು ಅವನನ್ನು ಪುನಃ ಕುಚೇಲನನ್ನಾಗಿಯೇ ಮಾಡಿದೆ. ಮಹಡಿಯ ಮನೆ, ಸುಂದರ ವಸ್ತ್ರಾಭರಣಗಳು ಇತ್ಯಾದಿ ಎಲ್ಲಾ ಸಂಪತ್ತನ್ನೂ ಕೊಟ್ಟು ಕುಚೇಲನನ್ನು ಕು-ಚೇಲ-ಅಲಂಕೃತನನ್ನಾಗಿ ಮಾಡಿ (ಭೂಮಿ, ಮನೆ, ವಸ್ತ್ರಾಭರಣಾದಿ ಸಂಪನ್ನನನ್ನಾಗಿ ಮಾಡಿ) ಸುದಾಮನನ್ನು (ಹಸಿವಾಗದಂತೆ ಒಂದು ಒಳ್ಳೆಯ ದಾರವನ್ನು ಸೊಂಟಕ್ಕೆ ಕಟ್ಟಿಕೊಂಡವನನ್ನು) ಸುಧಾಮನನ್ನಾಗಿ (ಒಳ್ಳೆಯ ಮನೆಯುಳ್ಳವನನ್ನಾಗಿ) ಮಾಡಿದೆ. ಹೀಗೆ ಕುಚೇಲನನ್ನು ಅಕುಚೇಲನನ್ನಾಗಿ ಮಾಡಿದರೂ ಪುನಃ ಅವನು ಕುಚೇಲಾಲಂಕೃತನಾಗಿಯೇ ಇದ್ದನು, ಎಂಬುದು ವಿರುದ್ಧವಾದರೂ ಆ ಅದ್ಭುತವನ್ನು ಸಂಘಟಿಸಿ ನೀನು "ಕರ್ತುಂ ಅಕರ್ತುಂ ಅನ್ಯಥಾಕರ್ತುಂ" ಸಮರ್ಥನೆಂದೂ, ಅಘಟಿತಘಟನಾ-ಪಟುವೆಂದೂ ಭಕ್ತರಿಗೆ ತೋರಿಸಿದೆ. ಅಹೋ ಆಶ್ಚರ್ಯ. ನಿನ್ನ ಭಕ್ತಪರಾಧೀನತೆಯು ಅದೆಷ್ಟು ವಿಸ್ಮಯಕರವಾಗಿದೆ ! ಹೀಗೆ ಕುಚೇಲನಿಗೆ ಅಖಿಲ ಸಂಪತ್ ಪ್ರದನಾದ ನೀನು ನಮ್ಮನ್ನು ರಕ್ಷಿಸು.

ಸ್ವಾಮೀ ! ಕಮಲದಂತಹ ಮುಖವುಳ್ಳ ರಘುವಂಶ ಭೂಷಾಮಣಿಯಾದ ಶ್ರೀಮೂಲರಾಮನೇ ! ಹಿಂದೆ ಹೇಳಿದ ಮತ್ಸ್ಯಕೂರ್ಮಾದಿ ಅನಂತ ಅವತಾರಗಳಿಂದ ಅನಂತಕೋಟಿಚೇತನ ರಾಶಿಯನ್ನು ಪಾಲಿಸಿದ ನೀನು ನಿನ್ನ ಪಾಪವನ್ನು ದೂರಕ್ಕೆ ತಳ್ಳಿ ನನ್ನ ಈ ನಮಸ್ಕಾರವನ್ನು ಸ್ವೀಕರಿಸು."

ಇಂತು ಭಗವಂತನನ್ನು ಸ್ತುತಿಸಿ ಶ್ರೀರಾಘವೇಂದ್ರತೀರ್ಥರು ಪುಷ್ಪಾಂಜಲಿಯನ್ನು ಶ್ರೀಹರಿಯ ಪಾದಕಮಲ ಕುಸುಮಗಳಿಗೆ ಸಮರ್ಪಿಸಿದರು. ಶ್ರೀಮೂಲರಾಮನನ್ನು ಭಕ್ತಿಶ್ರದ್ಧಾದ್ಯತಿಶಯದಿಂದ ಸಾಷ್ಟಾಂಗವಾಗಿ ನಮಸ್ಕರಿಸಿದರು. ಅಷ್ಟರಲ್ಲಿ ಶಿಷ್ಯರು ಬಂದು ವಿನೀತರಾಗಿ ಸಭಾಗೃಹಕ್ಕೆ ದಯ ಮಾಡಿಸಬೇಕೆಂದು ಪ್ರಾರ್ಥಿಸಿದರು. ಆಗ ಚಂದ್ರನು ಪೂರ್ವಾಚಲವನ್ನು ಅಲಂಕರಿಸುವಂತೆ ಶ್ರೀಗುರುರಾಜರು ಸಭಾಂಗಣವನ್ನು ಅಲಂಕರಿಸಿದರು. ಆ ಸಭೆಯು ರತ್ನಮಯವಾಗಿತ್ತು. ಅಲ್ಲಿದ್ದ ರತ್ನಖಚಿತವಾದ ವೇದಿಕೆಯು ಕ್ಷೀರಸಮುದ್ರದ ಹಾಗೆ ವಿರಾಜಿಸುತ್ತಿತ್ತು. ಆ ಜಗಲಿಯಲ್ಲಿ ಧವಲವರ್ಣದ ಮುತ್ತಿನ ಆಸನವು ಆದಿಶೇಷನಂತೆ ಹೊಳೆಯುತ್ತಿತ್ತು. ಆ ಮುತ್ತಿನ ಆಸನದ ಮೇಲೆ ಕಾಷಾಯ ರಕ್ತವಸ್ತ್ರಧಾರಿಗಳಾದ ಶ್ರೀರಾಘವೇಂದ್ರಗುರುಸಾರ್ವಭೌಮರು ಪರನಾದ ಹರಿಯನ್ನು ಮಾ ಎಂಬ ಲಕ್ಷ್ಮಿಯನ್ನು ಆತ್ಮನಲ್ಲಿ (ತನ್ನಲ್ಲಿ ಹೃದಯದಲ್ಲಿ) ಧರಿಸಿದವರಾಗಿ ಪರಮಾತ್ಮ ಎಂಬ ಹೆಸರಿಗೆ ಪಾತ್ರರಾಗಿ ಪ್ರಕಾಶಿಸುತ್ತಿದ್ದರು. (ಪರ = ಸರ್ವೋತ್ತಮನಾದ ಶ್ರೀಹರಿಯೂ, ಮಾ = ಲಕ್ಷ್ಮಿಯೂ, ಯಾರ ಆತ್ಮನಲ್ಲಿ = ಹೃದಯ ದೇಹದಲ್ಲಿ ಇದ್ದಾರೋ ಅವರು ಪರಮಾತ್ಮಾ ಎಂಬ ಹೆಸರಿಗೆ ಅರ್ಹರು.) ಹಾಲಿನ ಕಡಲಿನಲ್ಲಿ ಬಿಳಿಯ ಶೇಷನ ಮೇಲೆ ಪೀತಾಂಬರಧಾರಿಯಾದ ಶ್ರೀಮನ್ನಾರಾಯಣ ಪರಮಾತ್ಮನು ಶೋಭಿಸುವಂತೆ ಶ್ರೀರಾಘವೇಂದ್ರತೀರ್ಥರು ಶೋಭಿಸುತ್ತಿದ್ದರು. ಆಗ ಕೆಲವು ಮಂದಿ ಪಂಡಿತರು ವೇದಾಂತ ವಿಷಯದ ಚರ್ಚೆ ಮಾಡುತ್ತಾ ಶ್ರೀರಾಘವೇಂದ್ರಗುರುಸಾರ್ವಭೌಮರನ್ನು ಸಂತೋಷಪಡಿಸಿದರು. ಮತ್ತೆ ಕೆಲವರು ಸಮಸ್ಯಾಪೂರ್ಣ ಮುಂತಾದ ಚಮತ್ಕಾರಗಳಿಂದ ಅವರನ್ನು ಸಂತೋಷಪಡಿಸಿದರು. ಆಗ ಶ್ರೀರಾಘವೇಂದ್ರಗುರುಸಾರ್ವಭೌಮರು ಪ್ರಸಿದ್ಧವಾದ ನಾಲ್ಕು ಮಹಾಕಾವ್ಯಗಳ ಮಂಗಳ ಶ್ಲೋಕಗಳ ಮೊದಲನೆಯ ಪಾದವನ್ನು ಜೋಡಿಸಿ ಒಂದು ಶ್ಲೋಕವನ್ನು ರಚಿಸಿರಿ ಎಂದು ಪಂಡಿತರನ್ನು ಕೇಳಿದರು. ಆದರೆ ಆಗ ಯಾರಿಗೂ ಉತ್ತರ ಕೊಡಲು ಸಾಧ್ಯವಾಗಲಿಲ್ಲ. ಆಗ ಶ್ರೀ ರಾಘವೇಂದ್ರತೀರ್ಥಗುರುಸಾರ್ವಭೌಮರ, ಅಕ್ಕನ ಮಕ್ಕಳಾದ (ಸೋದರ ಅಳಿಯಂದಿರಾದ) ಇದೆ ಶ್ರೀರಾಘವೇಂದ್ರವಿಜಯ ಮಾಹಾಕಾವ್ಯದ ಕರ್ತೃಗಳಾದ ನಾರಾಯಣಾಚಾರ್ಯರು –

1. ಶ್ರಿಯಃ ಪತಿಃ ಶ್ರೀಮತಿ ಶಾಸಿತುಂ ಜಗತ್ (ಶಿಶುಪಾಲವಧ (ಮಾಘ) ಮಹಾಕಾವ್ಯದ ಮಂಗಳಪದ್ಯದ ಪ್ರಥಮಚರಣ.)
2. ನಿಪೀಯ ಯಸ್ಯ ಕ್ಷಿತಿರಕ್ಷಿಣಃ ಕಲಾಃ (ನೈಷಧ ಮಹಾಕಾವ್ಯದ ಮಂಗಳಪದ್ಯದ ಮೊದಲನೆಯ ಪಾದ.)
3. ಶ್ರಿಯಃ ಕುರೂಣಾಮಧಿಪಸ್ಯ ಪಾಲನೀಃ (ಕಿರಾತಾರ್ಜುನೀಯ ಮಹಾಕಾವ್ಯದ ಮಂಗಳಪದ್ಯದ ಮೊದಲನೆಯ ಪಾದ.)
4. ಶ್ರಿಯಃ ಸದಸ್ತಾಮಿಹ ತೇ ಪುರೇ ಸ್ಥಿತಃ (ಇನ್ನೊಂದು ಮಹಾಕಾವ್ಯದ ಮಂಗಳಪದ್ಯದ ಪ್ರಥಮ ಪಾದ.)

ಎಂಬುದಾಗಿ ನಾಲ್ಕು ಮಹಾಕಾವ್ಯಗಳ ಮಂಗಳ ಪದ್ಯದ ಪ್ರಥಮ ಪಾದಗಳನ್ನು ಸೇರಿಸಿ ಒಂದು ಪದ್ಯವನ್ನು ರಚಿಸಿ ಒಂದು ವಿಚಿತ್ರವಾದ ಸಮಸ್ಯಾಪೂರ್ಣವನ್ನು ಮಾಡಿದರು. ಅವರು ಗುರುಗಳ ವಿಶೇಷವಾದ ಅನುಗ್ರಹಕ್ಕೆ ಪಾತ್ರರೂ ಆದರು. ಹೀಗೆ ಶ್ರೀಗುರುಸಾರ್ವಭೌಮರು ಪ್ರತಿದಿನವೂ ಭಗವಂತನ ಆರಾಧನೆ ಮತ್ತು ಪ್ರವಚನಗಳಿಂದ ಕಾಲವನ್ನು ಸಾರ್ಥಕಗೊಳಿಸುತ್ತಿದ್ದರು. ಗುರುವರ್ಯರು ವಾಯುಸುತ ಪ್ರಿಯನಾದ ಲಕ್ಷ್ಮೀರಮಣನಿಗೆ ಅತ್ಯಂತ ಪ್ರಿಯರು. ಶ್ರೀವೇದವ್ಯಾಸರಿಗೆ ಮತ್ತು ಅವರ ಶಿಷ್ಯೋತ್ತಮರಾದ ಶ್ರೀಮದಾನಂದತೀರ್ಥಭಗವತ್ಪಾದರಿಗೆ

ಸಮ್ಮತವಾದ ಅರ್ಥವನ್ನು ಶ್ರುತಿಪುರಾಣಾದಿಗಳನ್ನು ಪಠಿಸುತ್ತಾ ಶಿಷ್ಯರಿಗೆ ಬೋಧಿಸುತ್ತಿದ್ದರು. ಅನೇಕ ಟಿಪ್ಪಣಿ, ಟೀಕಾ, ಸ್ವತಂತ್ರ ಗ್ರಂಥಗಳನ್ನು ರಚಿಸುತ್ತಿದ್ದರು. ಅವರು ಬಹಳ ಪ್ರಬಲರಾದ ಅನೇಕ ಮಾಯಾವಾದಿ ಸಂನ್ಯಾಸಿಗಳು ಒಡ್ಡುತ್ತಿದ್ದ ಪ್ರಶ್ನಜಾಲವೆಂಬ ಕರಾಳ ರಾತ್ರಿಗೆ ಹುಣ್ಣಿಮೆಯ ಚಂದ್ರನಂತಿದ್ದರು. ಸಜ್ಜನರ ಸಮೂಹಗಳು ಅವರನ್ನು ನಿರಂತರವಾಗಿ ಸ್ತೋತ್ರ ಮಾಡುತ್ತಿದ್ದವು. ಭಜಿಸಿದವರು ಬಯಸಿದ ಇಷ್ಟಾರ್ಥಗಳನ್ನು ನೆರವೇರಿಸುವುದರಲ್ಲಿ ಅವರು ಇಂದ್ರನ ನಂದನ ವನದ ಕಲ್ಪವೃಕ್ಷದಂತಿದ್ದರು. ನಮಿಸಿದ ಪಂಡಿತರಿಗೆ ಬೇಕಾದಷ್ಟು ಸಂಪತ್ತುಗಳನ್ನು ಕೊಡುತ್ತಿದ್ದರು. ಇಂತಹ ಶ್ರೀರಾಘವೇಂದ್ರತೀರ್ಥರನ್ನು ನಿತ್ಯ ನಮಿಸಿದರೆ ಅವರ ಅನುಗ್ರಹದಿಂದ ವಿದ್ಯಾದಿ ಸಮಸ್ತ ಸಂಪತ್ತು, ಊಹೆಗೂ ನಿಲುಕಲಾರದ ಉತ್ತಮವಾದ ಆಧ್ಯಾತ್ಮಿಕ ಜ್ಞಾನವೂ ಅವರ ಭಕ್ತರಿಗೆ ಉಂಟಾಗುತ್ತವೆ.



ಶ್ರೀ ಸುಯಮೀ ರಾಘವೇಂದ್ರ ಸಂಶೋಧನ ಕೇಂದ್ರ

## ಸಾಮ್ರಾಟ್ ಪೋಷಕರು

## ಪರಮಪೂಜ್ಯ ಶ್ರೀ ಶ್ರೀ ಸುಬುಧೇಂದ್ರತೀರ್ಥ ಶ್ರೀಪಾದಂಗಳವರು

ಪೀಠಾಧಿಪತಿಗಳು, ಜಗದ್ಗುರು ಶ್ರೀಮನ್ಮಧ್ವಾಚಾರ್ಯರ ಮೂಲ ಮಹಾಸಂಸ್ಥಾನ,
ಶ್ರೀರಾಘವೇಂದ್ರಸ್ವಾಮಿಗಳವರ ಮಠ, ಮಂತ್ರಾಲಯ



*Published by:*
**Raja. G. Sudheendracharya**
Sanchalak: Sri. Suyami Raghavendra Research Center